ಕರ್ನಾಟಕ ಸರ್ಕಾರ

# ಭಾರತೀಯ ದರ್ಶನ

(ಸಂಸ್ಕೃತ ವಿದ್ವತ್ ಉತ್ತಮ ತರಗತಿಗಳಿಗೆ)







ಕರ್ನಾಟಕ ಸರ್ಕಾರ

(ಡಿ.ಎಸ್.ಈ.ಆರ್.ಟಿ. ಪಠ್ಯಪುಸ್ತಕ ವಿಭಾಗ)



# ಭಾರತೀಯ ದರ್ಶನ

[ಸಂಸ್ಕೃತ ವಿದ್ವತ್ ಉತ್ತಮ ತರಗತಿಗಳಿಗೆ]



ಮುದ್ರಣ, ಲೇಖನಸಾಮಗ್ರಿ ಮತ್ತು ಪ್ರಕಟಣೆಗಳ
ನಿರ್ದೇಶನಾಲಯ (ಪಠ್ಯಪುಸ್ತಕಗಳು) ಬೆಂಗಳೂರು.

# ಭಾರತೀಯ ದರ್ಶನ

ರಚನೆ :

## ಅಧ್ಯಕ್ಷರು

೧. ಡಾ॥ ಕೆ. ಕೃಷ್ಣಮೂರ್ತಿ

## ಸದಸ್ಯರು

೨. ಶ್ರೀ ಹೆಚ್. ಕೆ. ಸಿದ್ಧಗಂಗಯ್ಯ

೩. ಪ್ರೊ॥ ಎನ್. ರಂಗನಾಥಶರ್ಮ

೪. ಪ್ರೊ॥ ಎಸ್. ವಿ. ಭೀಮಭಟ್ಟ

೫. ಪ್ರೊ॥ ಸಿ. ಜಿ. ಪುರುಷೋತ್ತಮ

೬. ಶ್ರೀ ಜಿ. ಚೆನ್ನವೀರಸ್ವಾಮಿ

೭. ಡಾ॥ ಎನ್. ಎಸ್. ಅನಂತರಂಗಾಚಾರ್

೮. ಡಾ॥ ಎಚ್. ಪಿ. ಮಲ್ಲೇದೇವರು

೯. ಪ್ರೊ॥ ಎಂ. ಜಿ. ನಂಜುಂಡಾರಾಧ್ಯ

ಈ ಪಠ್ಯಪುಸ್ತಕವನ್ನು ರಚಿಸಲು ನೆರವಾದವರೆಲ್ಲರಿಗೂ ಇಲಾಖೆ ಋಣಿಯಾಗಿದೆ.

ಜೆ. ಎಂ. ಟಿ. ರಾಜನ್

ನಿರ್ದೇಶಕರು, ಡಿ. ಎಸ್. ಇ. ಆರ್. ಟಿ.

# ಅನುಕ್ರಮಣಿಕೆ

## ವೇದಾಂತ



---

# ಪೀಠಿಕೆ

## ೧. ವೇದ-ಉಪನಿಷತ್ತುಗಳು

ವೇದಾಂತ ವಿಚಾರದ ಬೀಜಗಳು ಋಗ್ವೇದ ಸಂಹಿತೆಯಷ್ಟು ಪ್ರಾಚೀನಕಾಲದಲ್ಲಿಯೇ ಕಾಣಬರುತ್ತವೆ. "ಏಕಂ ಸದ್ ವಿಪ್ರಾ ಬಹುಧಾ ವದನ್ತಿ" (೧. ೧೬೪.೪೬), 'ಪುರುಷ ಏವೇದಂ ಸರ್ವಂ ಯದ್ ಭೂತಂ ಯಚ್ಚ ಭವ್ಯಮ್" (೧೦.೯೦), "ವಿಷ್ಣೋರ್ಯತ್ ಪರಮಂ ಪದಮ್" (೧. ೨೨. ೨೦) ಇತ್ಯಾದಿ ವೇದವಾಕ್ಯಗಳು 'ಸದ್', 'ಪುರುಷ', 'ವಿಷ್ಣು' ಮುಂತಾದ ಶಬ್ದಗಳಿಂದ ಪರಬ್ರಹ್ಮನನ್ನೇ ನಿರ್ದೇಶಿಸುವುದು ಸ್ಪಷ್ಟವಿದೆ. ಆದರೂ ಬ್ರಹ್ಮ ವಿಚಾರವು ಸ್ಫುಟವಾಗಿ ವ್ಯಕ್ತತರವಾಗುವುದು 'ಆರಣ್ಯಕ'ಗಳ ಭಾಗಗಳು ಹಾಗೂ ಉಪನಿಷತ್ತುಗಳಲ್ಲಿಯೇ ಎನ್ನಬಹುದು. "ತಮೇವ ವಿದ್ವಾನ್ ನ ಬಿಭಾಯ ಮೃತ್ಯೋರಾತ್ಮಾನಂ ಧೀರ ಮಜರಂ ಯುವಾನಮ್" ಎಂಬಂತಹ ಅಥರ್ವವೇದ ಮಂತ್ರಗಳೂ (೧೦. ೮. ೪೪), "ತಮೇವ ವಿದಿತ್ವಾತಿಮೃತ್ಯುಮೇತಿ ನಾನ್ಯಃ ಪಂಥಾ ವಿದ್ಯತೇಽಯನಾಯ" ಇತ್ಯಾದಿ ಯಜುರ್ವೇದ ಮಂತ್ರಗಳೂ ಇರುವುದರಿಂದ ವೇದಾಂತಕ್ಕೆಲ್ಲ ವೇದವೇ ಮೂಲವೆಂಬ ವಿಷಯದಲ್ಲಿ ಸಂಶಯವುಳಿಯಲಾರದು.

ಉಪನಿಷತ್ತುಗಳ ಸಂಖ್ಯೆ ೧೦೮ ಎಂದು ಹೇಳಲಾಗಿದ್ದರೂ (೧. ೧೧. ೧೪), ಕ್ರಿ. ಶ. ೧೬೫೬ ರಲ್ಲಿ ಮೊಗಲ್ ರಾಜಕುಮಾರ ದಾರಾಷಿಕೊ ೫೦ ಉಪನಿಷತ್ತುಗಳನ್ನು ಪರ್ಷಿಯನ್ ಭಾಷೆಗೆ ಅನುವಾದಿಸಿದ್ದರೂ, ಇಂದಿನ ವಿದ್ವಾಂಸರು ಶಂಕರಾಚಾರ್ಯರ ಭಾಷ್ಯಗಳಿರುವ ದಶೋಪನಿಷತ್ತುಗಳನ್ನು-ಈಶ, ಕೇನ, ಕಠ, ಪ್ರಶ್ನ, ಮುಂಡಕ, ಮಾಂಡೂಕ್ಯ, ತೈತ್ತಿರೀಯ, ಐತರೇಯ, ಛಾಂದೋಗ್ಯ ಮತ್ತು ಬೃಹದಾರಣ್ಯಕ-ಪ್ರಾಚೀನ ಹಾಗು ಪ್ರಾಮಾಣಿಕಗಳೆಂದು ತಿಳಿಯುತ್ತಾರೆ. ಇವುಗಳೆಲ್ಲ ಅಪೌರುಷೇಯವೆನ್ನುವುದು ಸಂಪ್ರದಾಯ. ಅವುಗಳಲ್ಲಿ ಮುಂದಿನ ಶಾಸ್ತ್ರೀಯ ತರ್ಕಸರಣಿಯ ವಿಷಯಪ್ರತಿಪಾದನೆ ಕಡಿಮೆ; ಆಧ್ಯಾತ್ಮಿಕ ಅನುಭವದ ಉದ್ಗಾರಗಳಂತಿರುವ ವಚನಗಳೇ ಹೆಚ್ಚು. ಆದರೂ ಇವು ವೇದಮಂತ್ರಗಳಲ್ಲಡಗಿದ್ದ ಬ್ರಹ್ಮ-ಆತ್ಮ ಸಾಕ್ಷಾತ್ಕಾರ ವಿಚಾರಗಳನ್ನು ವಿಶೇಷವಾಗಿ ಕೈಗೆತ್ತಿಕೊಂಡು ಕಾವ್ಯಮಯವಾಗಿ ಬಣ್ಣಿಸಿವೆ. ಕರ್ಮಕಾಂಡದಲ್ಲಿ ಆಸಕ್ತಿಯಷ್ಟೇ ಸಾಲದು: ಅವರ ನಿಷ್ಠೆಯಷ್ಟರಿಂದಲೇ, ಮೋಕ್ಷ ಲಭಿಸದು; ಜ್ಞಾನ ಮಾರ್ಗವೇ ಮೋಕ್ಷಸಾಧಕ ಎಂದು ಹೀಗೇ ಹೇಳುತ್ತವೆ; ಯಜ್ಞಪ್ರಕ್ರಿಯೆಗಳಿಗೆಲ್ಲ ಸಾಂಕೇತಿಕಾರ್ಥವನ್ನು ಹೇಳುತ್ತವೆ. ಭಾರತೀಯ ಶಾಸ್ತ್ರಗಳ ಇತಿಹಾಸದಲ್ಲಿ ಉಪನಿಷತ್ತುಗಳಿಗೆ ಅಗ್ರಸ್ಥಾನ

ಮೀಸಲಾಗಿದೆ. ಅಲ್ಲಿಯ ಆತ್ಮವಿಚಾರವೇ ಮುಂದಿನ ಶಾಸ್ತ್ರಚರ್ಚೆಗಳಿಗೆಲ್ಲ ಮೂಲ. "ಯದಾಪ್ನೋತಿಯದಾದತ್ತೇ ಯಚ್ಚಾತ್ತಿ ವಿಷಯಾನಿಹ । ಯಚ್ಚಾಸ್ಯ ಸಂತತೋ ಭಾವಃ ತಸ್ಮಾದಾತ್ಮೇತಿ ಕೀರ್ತ್ಯತೇ–(ಕಠ, ೨.೧.೧ರ ಶಾಂಕರಭಾಷ್ಯದಲ್ಲಿ ಉದಾಹೃತ) ಎಂದಂತೆ "ಆತ್ಮ" ವಿವೇಚನೆ ಉಪನಿಷತ್ತುಗಳ ಸಾರವಾಗಿದೆ. ಎಲ್ಲ ವೇದಾಂತದರ್ಶನಗಳಿಗೂ ಉಪನಿಷತ್ತುಗಳ ಮಹಾವಾಕ್ಯಗಳೇ ಮೂಲಾಧಾರಗಳು. "ತತ್ತ್ವಮಸಿ" "ಸರ್ವಂ ಖಲ್ವಿದಂ ಬ್ರಹ್ಮ" ಮೊದಲಾದವು ಅದ್ವೈತದರ್ಶನದ ಮಹಾವಾಕ್ಯಗಳಾದಂತೆ "ದ್ವಾ ಸುಪರ್ಣಾ ಸಯುಜಾ ಸಖಾಯಾ ಸಮಾನಂ ವೃಕ್ಷಂ ಪರಿಷಸ್ವಜಾತೇ" ಮೊದಲಾದವು ದ್ವೈತದರ್ಶನಕ್ಕೆ ಮೂಲ ಶ್ರುತಿಗಳು. ಅಲ್ಲಿಯೇ, 'ನಿಷ್ಪ್ರಪಂಚ', 'ನಿರ್ಗುಣ', 'ನಿರ್ವಿಶೇಷ', 'ಅನಿರ್ವಚನೀಯ', ಬ್ರಹ್ಮ ವಿಚಾರವೂ, 'ಸಪ್ರಪಂಚ', 'ಸಗುಣ' ಮತ್ತು 'ಸವಿಶೇಷ' ಬ್ರಹ್ಮವಿಚಾರವೂ ಬರುತ್ತವೆ. ಮೊದಲನೆಯದು 'ಪರಬ್ರಹ್ಮ' ವಾದರೆ ಎರಡನೆಯದು 'ಅಪರಬ್ರಹ್ಮ'. ಇವೆರಡಕ್ಕೂ ಅದ್ವೈತ ಅಥವಾ ಅಭೇದ ಶಂಕರಾಚಾರ್ಯರಿಗೆ ಅಭಿಮತ; ಪಾರಮಾರ್ಥಿಕ ಬ್ರಹ್ಮ ಏಕೈಕ. ಈಶ್ವರ ಜೀವ, ಜಗತ್ತು–ಎಲ್ಲ ಅದರ ತೋರಿಕೆಗಳು ಮಾತ್ರ ಎನ್ನುವುದು ಅವರ ವಿಚಾರಮಾರ್ಗ. ಇದಕ್ಕೆ ಬ್ರಹ್ಮ ವಿವರ್ತವಾದವೆಂದು ಹೆಸರು. ಆದರೆ ಭರ್ತೃಪ್ರಪಂಚಾದಿಗಳು ಬ್ರಹ್ಮಪರಿಣಾಮವಾದಿಗಳು. ಬ್ರಹ್ಮನೇ ಜೀವಜಗತ್ತುಗಳಾಗಿ ಪರಿಣಮಿಸುವನೆಂದೂ, ಅವು ತೋರಿಕೆಗಳಲ್ಲವೆಂದೂ ಅವರ ವಿವರಣೆ. ಉಪನಿಷತ್ ಪ್ರಸ್ಥಾನ ಮಿಕ್ಕೆರಡು ಪ್ರಸ್ಥಾನಗಳಾದ 'ಗೀತೆ' ಹಾಗು 'ಬ್ರಹ್ಮಸೂತ್ರ' ಗಳಿಗೂ ಉಪಜೀವ್ಯ ಸ್ಥಾನದಲ್ಲಿದೆಯೆಂಬುದು ಗಮನಾರ್ಹ.

ಮಾಯಾವಾದವು ಬೌದ್ಧದರ್ಶನಗಳಿಂದ ಶಂಕರಾಚಾರ್ಯರ ಅದ್ವೈತದಲ್ಲಿ ತಲೆಹಾಕಿದೆ ಯೆಂದು ಭಾವಿಸುವ ವಿದ್ವಾಂಸರುಂಟು. ಅದು ಸರಿಯಲ್ಲವೆಂದು ಪ್ರೊ. ಆರ್. ಡಿ. ರಾನಡೆ ಮುಂತಾದವರು ವಿವರಿಸಿದ್ದಾರೆ. "ಹಿರಣ್ಮಯೇನ ಪಾತ್ರೇಣ ಸತ್ಯಸ್ಯಾಪಿಹಿತಂ ಮುಖಮ್ ।" (ಈಶ ೧೫), "ಅವಿದ್ಯಾಯಾಮಂತರೇ ವರ್ತಮಾನಾಃ—(ಕಠ, ೧, ೨, ೪–೫)," "ಏತದ್ಯೋ ವೇದ ನಿಹಿತಂ ಗುಹಾಯಾಂ ಸೋಽವಿದ್ಯಾಗ್ರಂಥಿಂ ವಿಕಿರತೀಹ ಸೋಮ್ಯ" (ಮುಂಡಕ ೨. ೧–೧೦), "ನಾನಾ ತು ವಿದ್ಯಾ ಚಾವಿದ್ಯಾ ಚ" (ಛಾಂದೋಗ್ಯ ೧.೧–೧೦), "ತೇಷಾಮಸೌ ವಿರಜೋ ಬ್ರಹ್ಮಲೋಕೋ ನ ಯೇಷು ಜಿಹ್ಮಮನೃತಂ ನ ಮಾಯಾ ಚೇತಿ" (ಪ್ರಶ್ನ ೧. ೧. ೧೬), "ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಮ್" ಛಾಂದೋಗ್ಯ ೪. ೧–೪) ಮುಂತಾದ ಉಪನಿಷದ್ವಾಕ್ಯಗಳಲ್ಲಿಯೇ ಉತ್ತರಕಾಲೀನ ಮಾಯಾ ವಾದದ ಮೂಲರೂಪವಿದೆಯೆಂಬುದು ಅವರ ಅಭಿಪ್ರಾಯ. ಹೀಗೆ ಮುಂದಿನ ಸಾಂಖ್ಯ-ಯೋಗ, ನ್ಯಾಯ–ವೇದಾಂತ ಮುಂತಾದ ಆಸ್ತಿಕ ದರ್ಶನಗಳಂತೆ, ಬೌದ್ಧ ಜೈನ ಇತ್ಯಾದಿನಾಸ್ತಿಕ ದರ್ಶನಗಳ ಕೆಲವು ಮೂಲಪ್ರಕ್ರಿಯೆಗಳಿಗೂ ಉಪನಿಷತ್ತುಗಳೇ ಉಗಮವೆನಿಸಿವೆ.

## ೨. 'ಆಸ್ತಿಕ' ಮತ್ತು 'ನಾಸ್ತಿಕ' ದರ್ಶನಗಳು

ದೇವರನ್ನು ನಂಬುವವರೇ ಆಸ್ತಿಕರು, ನಂಬದವರು ನಾಸ್ತಿಕರು ಎಂಬುದು ಲೌಕಿಕರ

ಸಾಮಾನ್ಯ ಅಭಿಪ್ರಾಯ. ಆದರೆ ದರ್ಶನಗಳ ವಿಭಾಗದಲ್ಲಿ ಈ ಅಭಿಪ್ರಾಯ ಪ್ರಯೋಜಕವಲ್ಲ. ನ್ಯಾಯ–ವೈಶೇಷಿಕ, ಸಾಂಖ್ಯ–ಯೋಗ, ಪೂರ್ವಮೀಮಾಂಸಾ–ಉತ್ತರಮೀಮಾಂಸಾ ಅಥವಾ ವೇದಾಂತಗಳೇ ಪ್ರಸಿದ್ಧವಾದ ಆಸ್ತಿಕಷಡ್ದರ್ಶನಗಳು. ಇವುಗಳಲ್ಲಿ ಸಾಂಖ್ಯ ಮತ್ತು ಪೂರ್ವ ಮೀಮಾಂಸಾದರ್ಶನಗಳಲ್ಲಿ ದೇವರಿಗೆ ಸ್ಥಾನವಿಲ್ಲ. ಆ ಆರು ದರ್ಶನಗಳೂ ವೇದಗಳ ಪ್ರಾಮಾಣ್ಯವನ್ನು ಅಂಗೀಕರಿಸುವ ಕಾರಣದಿಂದ ಮಾತ್ರ 'ಆಸ್ತಿಕ'ವೆನಿಸುತ್ತವೆ. ನೈರಾತ್ಮ್ಯವನ್ನು ಹೇಳುವ ಬೌದ್ಧದರ್ಶನ, ಹಾಗು ಆತ್ಮವನ್ನಂಗೀಕರಿಸಿದರೂ ಕೂಡ ಜೈನದರ್ಶನ, ಲೋಕಾಯತಿಕವೂ ದೇಹಾತ್ಮವಾದಿಯೂ ಆದ ಚಾರ್ವಾಕದರ್ಶನ–ಈಮೂರೂ ವೇದಪ್ರಾಮಾಣ್ಯವನ್ನು ಒಪ್ಪದ ಕಾರಣ 'ನಾಸ್ತಿಕ' ದರ್ಶನಗಳೆನಿಸಿವೆ. ಇವುಗಳಲ್ಲಿ ಕೂಡ–ಕೇವಲ ಪ್ರಜ್ಞಾವಾದಿಯಾದ, ಪುಣ್ಯ-ಪಾಪ, ಪರಲೋಕ, ಧರ್ಮ–ಅಧರ್ಮ, ಬಂಧ–ಮೋಕ್ಷ, ದೇವರು–ಆತ್ಮ-ಯಾವುದೂ ಇಲ್ಲವೆನ್ನುವ, ಪ್ರತ್ಯಕ್ಷವೊಂದನ್ನಷ್ಟೇ ಪ್ರಮಾಣವೆಂದು ಘೋಷಿಸುವ ಚಾರ್ವಾಕದರ್ಶನ ಎಲ್ಲಕ್ಕಿಂತ ಕೆಳದರ್ಜೆಯದೆಂದು ಭಾರತೀಯದಾರ್ಶನಿಕರೆಲ್ಲರೂ ಏಕಕಂಠದಿಂದ ಒಪ್ಪುತ್ತಾರೆ.

ಬೃಹಸ್ಪತಿಯೇ ಜನರನ್ನು ಮೋಸಗೊಳಿಸಲು ಮನಸ್ಸಿಗೆ ಹಿತವಾಗುವ ಚಾರ್ವಾಕಮತವನ್ನು ಉಪದೇಶಿಸಿದನೆಂದು ಪ್ರತೀತಿಯಿದೆ ಬೌದ್ಧಜೈನ ವೈದಿಕದಾರ್ಶನಿಕರು ಇವರ ಮತಗಳನ್ನು ಖಂಡನೆಗಾಗಿ ಅಲ್ಲಲ್ಲಿ ಎತ್ತಿಕೊಂಡಿದ್ದಾರೆ. ಆದರೆ ಅವರ ಮೂಲಗ್ರಂಥಗಳೊಂದೂ ಈಗ ದೊರೆಯುವುದಿಲ್ಲ. ರಾಮಾಯಣ (೨.೧೦೦, ೩೮), ಮಹಾಭಾರತ (ಶಾಂತಿಪರ್ವ, ೧೪೧೪, ೧೪೩೦–೪೨ ; ಮನುಸ್ಮೃತಿ (೩.೧೫೦, ೧೬೧) ಮುಂತಾದೆಡೆಗಳಲ್ಲಿ ಅವರ ಪ್ರಾಪಂಚಿಕ ಭೋಗವಾದದ ಪ್ರಸ್ತಾಪ ಬರುತ್ತದೆ. "ಪೃಥಿವ್ಯಪ್ತೇಜೋವಾಯುರಿತಿ ತತ್ತ್ವಾನಿ", ತತ್ಸಮುದಾಯೇ ಶರೀರೇಂದ್ರಿಯವಿಷಯಸಂಜ್ಞಾ", "ಕಿಣ್ವಾದಿಭ್ಯೋ ಮದಶಕ್ತಿವದ್ವಿಜ್ಞಾನಮ್" ಚೈತನ್ಯವಿಶಿಷ್ಟಃ ಕಾಯಃ ಪುರುಷ," "ಕಾಮ ಏವೈಕಃ ಪುರುಷಾರ್ಥಃ", "ಮರಣ ಮೇವಾಪವರ್ಗಃ" ಇವು ಚಾರ್ವಾಕಗ್ರಂಥಗಳಿಂದ ಉದಾಹೃತವಾದ ಕೆಲವು ಸೂತ್ರಗಳು. ಅವರು ಅನುಮಾನವನ್ನು ಕೂಡ ಪ್ರಮಾಣವಲ್ಲವೆಂದು ಹೀಗೆ ಖಂಡಿಸಿದ್ದಾರೆ :—

ವಿಶೇಷೇಽನುಗಮಾಭಾವಾತ್ ಸಾಮಾನ್ಯೇ ಸಿದ್ಧಸಾಧನೇ ।
ಅನುಮಾಭಂಗಪಂಕೇಽಸ್ಮಿನ್ ನಿಮಗ್ನಾ ವಾದಿದನ್ತಿನಃ ॥

ಅನುಮಾನದಿಂದ ವಿಶೇಷ ಸಿದ್ಧಿಸುವುದೆಂದರೆ ವ್ಯಾಪ್ತಿತಪ್ಪುತ್ತದೆ. ಸಾಮಾನ್ಯ ಸಿದ್ಧಿಸುವುದೆಂದರೆ ಸಿದ್ಧಸಾಧನ. ಹೀಗೆ ವಾದಿಗಜಗಳನ್ನೆಲ್ಲ ಬೀಳಿಸುವ ಗುಂಡಿಯೇ ಅನುಮಾನವೆಂದು ಅವರ ಆಕ್ಷೇಪ

ಕಾಲಾನುಕ್ರಮದಲ್ಲಿ ಚಾರ್ವಾಕರ ದರ್ಶನದ ಬಳಿಕ ಜೈನ ಅಥವಾ ಆರ್ಹತದರ್ಶನದ ಸ್ಥಾನ ಬರುತ್ತದೆ. ಅವರ ವಿಚಾರಸರಣಿಯಲ್ಲಿ ಸಕಲ ಪ್ರಾಪಂಚಿಕ ಜ್ಞಾನವೂ ಸಾಪೇಕ್ಷ ಹಾಗು ಆಂಶಿಕ ; ಒಂದೂ ಪರಿಪೂರ್ಣವಲ್ಲ. ನಮ್ಮ ಲೌಕಿಕ ಅನುಭವವೇನಿದ್ದರೂ ಅದಕ್ಕೆ "ಸ್ಯಾತ್" (ಒಂದು ರೀತಿಯಿಂದ ಹೀಗಿರಬಹುದು) ಎಂದು ಸೇರಿಸಿಕೊಂಡು ಹೇಳಿದಾಗ ಮಾತ್ರ ಸರಿಯೆನಿಸುತ್ತದೆ. "ಸ್ಯಾತ್ಕಾರಃ ಸತ್ಯಲಾಂಛನಃ" (ಆಪ್ತಮೀಮಾಂಸಾ ೧೦.೧,೨) ಎಂದು ಅವರ ಘೋಷಣೆ. ಅದು ಕ್ರಮಭಾವಿಯಾದ ಜ್ಞಾನರೂಪಗಳನ್ನೊಳಗೊಳ್ಳುತ್ತದೆ. ಇದನ್ನೇ ಅವರ 'ನಯ'ಗಳು ವಿವರಿಸುತ್ತವೆ—"ಕ್ರಮಭಾವಿ ಚ ಯಜ್ಜ್ಞಾನಂ ಸ್ಯಾದ್ವಾದನಯಂ ಸಂಸ್ಕೃತಮ್" ಬೌದ್ಧರೂ ವೇದಾಂತಿಗಳೂ ಜೈನದರ್ಶನದ ಬಾಹ್ಯರೂಪವನ್ನೇ ದೊಡ್ಡದು ಮಾಡಿ, 'ಸ್ಯಾದಸ್ತಿ' 'ಸ್ಯಾನ್ನಾಸ್ತಿ' ಮುಂತಾಗಿ ಒಂದೇ ವಿಷಯದಲ್ಲಿ ವಿರುದ್ಧನಾನಾ ಅಂಶಗಳನ್ನು ಆರೋಪಿಸುವುದು ವದತೋವ್ಯಾಘಾತವೆಂದು ದೂಷಿಸಿದ್ದಾರೆ. ಆದರೆ ಏಕಕಾಲದಲ್ಲಿ ಏಕವಸ್ತುವಿನಲ್ಲಿ ತಮಃ—ಪ್ರಕಾಶಗಳಂತಹ ವಿರುದ್ಧ ಧರ್ಮಗಳುಂಟೆಂದು ಜೈನದರ್ಶನ ಹೇಳುವುದೇ ಇಲ್ಲ. ಸ್ವರೂಪ—ದ್ರವ್ಯ ಕ್ಷೇತ್ರ—ಕಾಲ—ಭಾವಗಳಿಂದ ಸತ್ತ್ವವೂ ಪರರೂಪ—ದ್ರವ್ಯ—ಕ್ಷೇತ್ರ—ಕಾಲ ಭಾವಗಳಿಂದ ಅಸತ್ವವೂ ವಸ್ತುಗಳಲ್ಲಿ ಗೋಚರವೆಂದಷ್ಟೇ ಅವರ ಅಭಿಪ್ರಾಯ. ಎಲ್ಲ ವಚನಗಳೂ ಆಶಿಂಕಸತ್ಯಗಳೇ. ಆದರೆ ಪರಮಾರ್ಥ ಇವನ್ನೆಲ್ಲ ಮೀರಿ ಕೇವಲ ಅವಧಿಜ್ಞಾನಗೋಚರವಾದದು. ಎಲ್ಲ ಸತ್ಯವೂ ಆಪೇಕ್ಷಿಕ, ಆಂಶಿಕವೆಂದರೆ ಸ್ಯಾದ್ವಾದದ ಸತ್ಯವೂ ಆಶಿಂಕವೆಂಬ ಪ್ರಸಂಗ ತಪ್ಪದು. ಸಪ್ತಭಂಗೀ ಯುಗಳ ಮೊದಲ ಕೆಲವು ಸತ್, ಅಸತ್. ಸದಸತ್, ನ ಸದಸತ್, ಎಂಬ ಬೌದ್ಧರ 'ಚತುಷ್ಕೋಟಿ'ಗಳಿಗೂ ಮುಂದಿನ 'ಅವಕ್ತವ್ಯ'ವು ವೇದಾಂತಿಗಳ 'ಅನಿರ್ವಚನೀಯ'ಕ್ಕೂ ಸಂವಾದಿಯಾಗಿವೆ. ಆದರೆ ವ್ಯವಹಾರ—ಪರಮಾರ್ಥಗಳಿಗೆ ಬೌದ್ಧರೂ ವೇದಾಂತಿಗಳೂ ಕಲ್ಪಿಸುವ ಭೇದವನ್ನು ಜೈನರು ಕಲ್ಪಿಸದೆ ಹೋಗುವುದೇ ಅವರ ದಾರ್ಶನಿಕ ದೃಷ್ಟಿಗೆ ಕುಂದನ್ನು ತರುತ್ತದೆ, ವ್ಯವಹಾರದ ನಯವನ್ನೇ ಪರಮಾರ್ಥಕ್ಕೂ ಅನ್ವಯಿಸತೊಡಗುತ್ತದೆ. ಆದ್ದರಿಂದಲೇ ಕಡೆಕಡೆಗೆ ಬಂದ ಸಿದ್ಧಸೇನ ಮುಂತಾದ ಜೈನ ದಾರ್ಶನಿಕರು ಕೂಡ ವ್ಯಾವಹಾರಿಕ ನಯಗಳಿಗೆಲ್ಲ ಪಾರಮಾರ್ಥಿಕದಿಂದಲೇ ವಿಶ್ರಾಂತಿಯನ್ನು ಕಲ್ಪಿಸುತ್ತಾರೆ—

"ಉದಧಾವಿವ ಸರ್ವಸಿಂಧವಃ ಸಮುದೀರ್ಣಾಸ್ತ್ವಯಿ ನಾಥ ದೃಷ್ಟಯಃ
ನ ಚ ತಾಸು ಭವಾನ್ ಪ್ರದೃಶ್ಯತೇ ಪ್ರವಿಭಕ್ತಾಸು ಸರಿತ್ಸ್ವಿವೋದಧಿಃ ॥"

ಅರ್ಹದ್ದರ್ಶನ ಪರಿಪೂರ್ಣವೆಂಬ ಈ ಮಾತು ಮಿಕ್ಕ ದಾರ್ಶನಿಕರಿಗೂ ಸ್ವೀಕಾರ್ಯವೇ ಎನಿಸಬಹುದು. ವ್ಯಾವಹಾರಿಕ ಜ್ಞಾನ ಸಾಪೇಕ್ಷವೆಂಬುದನ್ನು ಬೌದ್ಧರಾಗಲೀ, ವೇದಾಂತಿಗಳಾಗಲೀ ನಿರಾಕರಿಸರು. 'ವ್ಯವಹಾರಮನಾಶ್ರಿತ್ಯ ಪರಮಾರ್ಥೋ ನ ದೇಶ್ಯತೇ' ಎಂಬುದು ಬೌದ್ಧರಿಗೂ ಸಮ್ಮತವೇ. ಆತ್ಮನ ರತ್ನತ್ರಯಗಳಾದ ಸಮ್ಯಗ್ಜ್ಞಾನ, ಸಮ್ಯಗ್ದರ್ಶನ, ಸಮ್ಯಕ್ಚಾರಿತ್ರಗಳ ವಿಶೇಷ ವಿವರಣೆ ಜೈನಧರ್ಮದ ಮುಖ್ಯಕೊಡುಗೆಗಳಲ್ಲಿ ಒಂದಾಗಿದೆ, ಜಿನರ ಜೀವನವನ್ನು

ನೀತಿಪಥದಲ್ಲಿ ಸಾಗಿಸಲು, ಕರ್ಮ-ಧರ್ಮ, ಪುಣ್ಯ-ಪಾಪಗಳ ಸ್ವರೂಪವನ್ನು ಬಿಂಬಿಸಲು ಆ ದರ್ಶನ ಶ್ರಮಿಸಿದಂದನ್ನು ನೋಡುತ್ತೇವೆ. ಪ್ರವೃತ್ತಿಮಾರ್ಗಕ್ಕಿಂತ ನಿವೃತ್ತಿಮಾರ್ಗದತ್ತ ಬಹುಜನರನ್ನಾಕರ್ಷಿಸಲು ಶ್ರಮಣಧರ್ಮವು ಸಮರ್ಥವಾಯಿತು. ಈ ದ್ವಿಮುಖ ಆಕರ್ಷಣೆಯೇ ಮುಂದೆ ವೇದಾಂತಪ್ರಸ್ಥಾನಗಳಲ್ಲಿಯೂ ಪ್ರತಿಬಿಂಬಿಸುವುದನ್ನು ಕಾಣುತ್ತೇವೆ.

ಮುಂದಿನ ಜೈನ ಸ್ತೋತ್ರಸಾಹಿತ್ಯ ಕೂಡ ವೈದಿಕ ಪರಂಪರೆಯ ಸ್ತೋತ್ರಗಳ ಅನೇಕಾಂಶಗಳನ್ನು ಒಳಗೊಳ್ಳುವುದನ್ನು ನೋಡಬಹುದು. ಉದಾಹರಣೆಗೆ ಬಾಣ-ಮಯೂರರ ಸಮಕಾಲೀನನೆಂದು ಐತಿಹ್ಯಗಳಿರುವ ಮಾನತುಂಗಕವಿಯ ಭಕ್ತಾಮರಸ್ತೋತ್ರದ ಒಂದು ಪದ್ಯವನ್ನು ನೋಡಿ :-

ತ್ವಾಮಾಮನನ್ತಿ ಮುನಯಃ ಪರಮಂ ಪುಮಾಂಸ-
ಮಾದಿತ್ಯವರ್ಣ ಮಮಲಂ ತಮಸಃ ಪರಸ್ತಾತ್ ।
ತ್ವಾಮೇವ ಸಮ್ಯಗುಪಲಭ್ಯ ಜಯನ್ತಿ ಮೃತ್ಯುಂ
ನಾನ್ಯಃ ಶಿವಃ ಶಿವಪದಸ್ಯ ಮುನೀಂದ್ರಪಂಥಾಃ ॥ (ಪದ್ಯ, ೨೩)

ಇಲ್ಲಿ ವೈದಿಕ ' ಪುರುಷ ' ನ ಸ್ವರೂಪಕ್ಕೂ ಜೈನತೀರ್ಥಂಕರನ ಸ್ವರೂಪಕ್ಕೂ ಭಗವದ್ಗೀತೆಯ ವಾಕ್ಸರಣಿಯಲ್ಲಿ ಅಭೇದ ಕಲ್ಪಿತವಾಗಿದೆ. ಹೀಗೆ ಮೇಲ್ನೋಟಕ್ಕೆ ಎಷ್ಟೊಂದು ವ್ಯತ್ಯಾಸಗಳಿದ್ದರೂ ಆಸ್ತಿಕ-ನಾಸ್ತಿಕ ದರ್ಶನಗಳಲ್ಲಿ ಕೂಡ ಮೂಲಭೂತವಾದ ಕೆಲವೊಂದು ಸಾಮ್ಯಗಳಿವೆ. ಅದೇ ಭಾರತೀಯ ಸಂಸ್ಕೃತಿಯ ತಿರುಳು.

ಜೈನರ ಅನೇಕಾಂತವಾದದಂತೆ ಔಪನಿಷದ ಆತ್ಮವಾದಕ್ಕೆ ಪ್ರತಿಕಕ್ಷಿಯಾಗಿ ಬೆಳೆದು ನಿಂತ ಮತ್ತೊಂದು ಗಮನಾರ್ಹ ಪಕ್ಷವೇ ಬೌದ್ಧರ ನೈರಾತ್ಮ್ಯವಾದ. ಇದರ ಶಾಸ್ತ್ರೀಯ ವಿಕಾಸ ಕ್ರಮದಲ್ಲಿ ' ವೈಭಾಷಿಕ ' ' ಸೌತ್ರಾಂತಿಕ ', ' ಮಾಧ್ಯಮಿಕ ', ' ಯೋಗಾಚಾರ ' ಎಂಬ ಶಾಖೆಗಳು ಉತ್ತರಕಾಲೀನವಾದುದರಿಂದ ಮುಂದೆ ವಿವರಿಸಲಾಗುತ್ತದೆ. ಆದರೆ ನೈರಾತ್ಮ್ಯವಾದದ ಮೂಲ ಪ್ರಕ್ರಿಯೆಗಳಾದ ' ಸರ್ವಕ್ಷಣಿಕತ್ವ ', 'ಅನಿತ್ಯತ್ವ ' ಮುಂತಾದವುಗಳ ಮೂಲರೂಪಗಳು ಜೈನ ಧರ್ಮದ ಜತೆಜತೆಗೇ ವಿಕಸಿತಗೊಳ್ಳತೊಡಗಿದ್ದವಷ್ಟೇ ಅಲ್ಲ ; ಬೌದ್ಧ ಧರ್ಮದ ಅಂಗಗಳಾದ ಅನೇಕ ಮತೀಯ ಅಂಶಗಳು ' ತ್ರಿಪಿಟಕ ' ಗಳಲ್ಲಿ ಸಮಾವೇಶಹೊಂದಿದ್ದವು. ನಿಸ್ಸಾರವಾದ ಪ್ರಪಂಚದ ವಿಷಯದಲ್ಲಿ ವೈರಾಗ್ಯ ತಾಳಿ ನಿರ್ವಾಣಕ್ಕಾಗಿ ಹಂಬಲಿಸಲು ಭಗವಾನ್ ಬುದ್ಧನ ಉಪದೇಶವೇ ತಾರಕವೆಂಬ ಭಾವನೆ ಅನೇಕರಲ್ಲಿ ಮೂಡಲಾರಂಭಿಸಿತ್ತು. ಈ ತ್ರಿಪಿಟಕಗಳಲ್ಲಿಯೇ ಔಪನಿಷದ ಬ್ರಹ್ಮವಾದದ ನಿರಾಕರಣೆಯಂತೆ ಪ್ರಾಚೀನವಾದ ಕಾಪಿಲ ಸಾಂಖ್ಯ ದರ್ಶನದ ನಿರಾಕರಣೆಯೂ ಇರುವುದು ಗಮನಾರ್ಹ.

ನಮಗೆ ಈಗ ಉಪಲಬ್ಧವಿರುವ ಈಶ್ವರಕೃಷ್ಣನ 'ಸಾಂಖ್ಯಕಾರಿಕೆ' ಕ್ರಿ. ಶ. ೪ ನೆಯ ಶತಮಾನದಷ್ಟಾದರೂ ಅರ್ವಾಚೀನ. ಆದರೆ ಶ್ವೇತಾಶ್ವತರ ಉಪನಿಷತ್ತು, ಭಗವದ್ಗೀತೆ, 'ಬುದ್ಧಚರಿತೆ', ಮತ್ತು ಕೆಲವೊಂದು ಬ್ರಹ್ಮಸೂತ್ರಗಳಲ್ಲಿ ಬರುವ (೧. ೧-೫-೧. ೪-೨೮ ೨. ೨-೧-೨. ೨-೧೦ ಮತ್ತು ೨. ೧-೧-೨.೧-೧೦) ದರ್ಶನವನ್ನು ಸಾಂಖ್ಯದರ್ಶನ ಕಾರಿಕೆಗಳಿಗಿಂತ ಪೂರ್ವದ ಕಾಲದಲ್ಲಿದ್ದ ಕಾಪಿಲದರ್ಶನವೆಂದು ವಿದ್ವಾಂಸರು ಊಹಿಸುತ್ತಾರೆ. ಇದರ ಗ್ರಂಥಗಳೊಂದೂ ಇಂದು ಉಪಲಬ್ಧವಿಲ್ಲ. ಏಕೆಂದರೆ ಈಗ ಕಪಿಲನದೆಂದು ವಿಜ್ಞಾನಭಿಕ್ಷುವಿನ ಭಾಷ್ಯದೊಡನೆ ಪ್ರಸಿದ್ಧಿಗೆ ಬಂದಿರುವ ಸೂತ್ರಗ್ರಂಥ ಕ್ರಿ.ಶ. ಹದಿನಾಲ್ಕನೆಯ ಶತಮಾನಕ್ಕೂ ಈಚಿನದಿರಬಹುದೆಂದು ಸಾಮಾನ್ಯವಾಗಿ ಭಾವಿಸಲಾಗುತ್ತದೆ. ಮೊದಲು 'ಸಾಂಖ್ಯ'ವೆಂಬರೂ ಜ್ಞಾನವೆಂಬ ಮೂಲಾರ್ಥವಿದ್ದಂತೆ ಕಾಣುತ್ತದೆ. ಅದನ್ನೂ ಔಪನಿಷದವೆಂದೇ ಕಪಿಲನ ಅನುಯಾಯಿಗಳು ತಿಳಿಯುತ್ತಿದ್ದರು. ಆ ಪ್ರಾಚೀನ ಸಾಂಖ್ಯದಲ್ಲಿ 'ಪ್ರಧಾನ' ಅಥವಾ 'ಅವ್ಯಕ್ತ'ವು 'ಪುರುಷ'ನ ದಿವ್ಯಶಕ್ತಿ. ಸತ್ತ್ವ, ರಜಸ್, ತಮಸ್ ಎಂಬ ತ್ರಿಗುಣಗಳ ಸಾಮ್ಯಾವಸ್ಥೆಯೇ ಅದರ ಸ್ವರೂಪ. ಪುರುಷನ ಸಾನ್ನಿಧ್ಯದಿಂದ ಸಾಮ್ಯಾವಸ್ಥೆ ಹೋಗಿ ಮಹತ್, ಅಹಂಕಾರ ಮುಂತಾಗಿ ಪರಿಣಾಮಗಳ ಮೂಲಕ ಜಗತ್ತಿನ ಉದಯವಾಗುತ್ತದೆ.

ಈ ತತ್ತ್ವವೇ ಮುಂದಿನ ಇತಿಹಾಸ-ಪುರಾಣಗಳಲ್ಲೆಲ್ಲಾ ಅನೇಕ ಬಗೆಯ ಭಗವತ್ಸೃಷ್ಟಿವಾದಗಳಿಗೆ ಮೂಲವಾದಂತೆ ತೋರಿಬರುತ್ತದೆ. ಹಿಂದೂಧರ್ಮದ ಅಡಿಗಲ್ಲಿನಂತಿರುವ ತ್ರಿಮೂರ್ತಿಗಳ ಕಲ್ಪನೆಗೆ ಇದೇ ಮೂಲ. ಬ್ರಹ್ಮ-ವಿಷ್ಣು-ಮಹೇಶ್ವರರು ಸೃಷ್ಟಿ-ಸ್ಥಿತಿ-ಸಂಹಾರ ಕಾರಣರೆಂದೂ, ಇವರಿಗೆ ಅಧ್ಯಕ್ಷನಾಗಿ ಪರಮೇಶ್ವರ ಇಲ್ಲವೆ ಆದಿನಾರಾಯಣನು ಇರುವನೆಂದೂ, ಅಥವಾ ಮಹಾಸರಸ್ವತಿ-ಮಹಾಲಕ್ಷ್ಮಿ-ಮಹಾಕಾಳಿ ಎಂಬ ದೇವಿಯರು ಸೃಷ್ಟಿ-ಸ್ಥಿತಿ-ಸಂಹಾರಗಳಿಗೆ ಕ್ರಮವಾಗಿ ಕಾರಣರೆಂದೂ, ಇವರಿಗೆಲ್ಲ ನಿಯಾಮಕಳಾಗಿ ಮಹಾಮಾಯೆ ಅಥವಾ ಆದಿಶಕ್ತಿಯಿರುವಳೆಂದೂ ವಿವರಿಸುವ ಪ್ರಕ್ರಿಯೆಗಳಿಗೆಲ್ಲ ಗುಣತ್ರಯಾತ್ಮಕವಾದ ಪ್ರಧಾನಾಧ್ಯಕ್ಷ ಸಾಂಖ್ಯಪುರುಷನ ವಿಚಾರವೇ ಪ್ರೇರಕವೆಂದು ಊಹಿಸಲಾಗಿದೆ. ಇದನ್ನೇ ಬಾಣಭಟ್ಟನು—

ರಜೋಜುಷೇ ಜನ್ಮನಿ ಸತ್ತ್ವವೃತ್ತಯೇ ಸ್ಥಿತೌ ಪ್ರಜಾನಾಂ ಪ್ರಲಯೇ ತಮಃಸ್ಪೃಶೇ ।
ಅಜಾಯ ಸರ್ಗಸ್ಥಿತಿನಾಶಹೇತವೇ ತ್ರಯೀಮಯಾಯ ತ್ರಿಗುಣಾತ್ಮನೇ ನಮಃ ॥

ಎಂದು ಸುಂದರವಾಗಿ ಸಂಗ್ರಹಿಸಿ ಹೇಳಿದ್ದಾನೆ. ಶ್ವೇತಾಶ್ವತರ ಉಪನಿಷತ್ತಿನಿಂದ ಮುಂದಿನ ಎಲ್ಲ ಉಪನಿಷತ್ತುಗಳೂ ಈ ಕಲ್ಪನೆಯಿಂದ ಪ್ರಭಾವಿತವಾಗಿವೆ. ಭಗವದ್ಗೀತೆಯಲ್ಲೂ ಇದರ ಪ್ರಭಾವ ಗೋಚರವಾಗುತ್ತದೆ. ಪಾಂಚರಾತ್ರ, ಶೈವ, ಮುಂತಾದ ಉತ್ತರಕಾಲೀನ

ದರ್ಶನಗಳಿಗೂ ಈ ಕಲ್ಪನೆಯೇ ಪ್ರಬಲ ಆಧಾರವೆನ್ನಬಹುದು. ಆದರೆ ದಾರ್ಶನಿಕ ವಿಚಾರಗಳ ಸಮೀಕ್ಷೆಯಲ್ಲಿ ಸೃಷ್ಟಿಪ್ರಕ್ರಿಯೆಗೆ ಹೆಚ್ಚಿನ ಸ್ಥಾನವಿಲ್ಲ.

ಹೀಗೆಯೇ 'ಯೋಗ'ವೆಂಬ ಶಬ್ದವೂ ಪಾತಂಜಲ-ಯೋಗದರ್ಶನದ ಉದಯಕ್ಕೆ ಎಷ್ಟೋ ಮುಂಚೆಯಿಂದಲೇ ವಿಶಾಲಾರ್ಥದಲ್ಲಿ ಪ್ರಯುಕ್ತವಾಗುತ್ತಿದ್ದುದನ್ನು ಭಗವದ್ಗೀತೆಯಲ್ಲಿಯೇ ಕಾಣಬಹುದು. ಗೀತೆಯ ಅಧ್ಯಾಯಗಳಿಗೆಲ್ಲ 'ಯೋಗ'ವೆಂಬ ಹೆಸರಿದೆ, ಒಂದು ವಿಷಯದ ವಿವರಣೆಯೆಂಬ ಸ್ಥೂಲಾರ್ಥದಲ್ಲಿ, ಜ್ಞಾನ-ಭಕ್ತಿ-ಕರ್ಮಗಳನ್ನು 'ಯೋಗ'ವೆಂದಾಗ ಮೋಕ್ಷೋಪಾಯವೆಂಬರ್ಥ ವಿವಕ್ಷಿತ. ನಿಷ್ಕಾಮ ಕರ್ಮನಿಷ್ಠೆಯೆಂಬುದು 'ಕರ್ಮಯೋಗ' ವೆಂದಾಗ ಬರುವ ವಿಶಿಷ್ಟಾರ್ಥ, 'ಯೋಗಕ್ಷೇಮ'ವೆನ್ನುವಾಗ 'ಅಪ್ರಾಪ್ತಸ್ಯಪ್ರಾಪಣಂ' ಎದು ಅಭಿಪ್ರಾಯ. 'ಯೋಗೇಶ್ವರ', 'ಯೋಗಮಾಯಾ' ಎನ್ನುವಾಗ ಭಗವಂತನ ದಿವ್ಯಮಹಿಮೆ ಯೆಂದಭಿಪ್ರಾಯ ಹೀಗೆ ಔಪನಿಷದ ಅಥವಾ ವೇದಾಂತದರ್ಶನದ ವಿಕಾಸದಲ್ಲಿ ಪ್ರಾಚೀನ ಸಾಂಖ್ಯ-ಯೋಗ ವಿಚಾರಧಾರೆಗಳಿಗೂ ಮಹತ್ತ್ವದ ಸ್ಥಾನವಿದೆ.

## ಭಗವದ್ಗೀತೆ

ಉಪನಿಷತ್ತಿನ ಆತ್ಮವಿಚಾರ, ಸಾಂಖ್ಯರ ಜ್ಞಾನ ಹಾಗೂ ಸೃಷ್ಟಿಸ್ವರೂಪ, ಉಪಾಸನೆಗಳ ವಿವರಣೆ, ಭಗವದ್ವಿಚಾರ ಇವೆಲ್ಲವುಗಳನ್ನೂ ಒಳಗೊಂಡ ಜನಪ್ರಿಯ ಕೈಪಿಡಿಯೇ ಭಗವದ್ಗೀತೆ. ವೇದಾಧಿಕಾರವಿಲ್ಲದವರಿಗೆ ಕೂಡ ವೇದಾಂತದ ಹಾಗು ಧರ್ಮದ ಸಾರವನ್ನು ಸುಲಭವಾಗಿ ಅರುಹುವ ವಿವಕ್ಷೆ ಗೀತೆಯದು. ಆಧುನಿಕ ಪಾಶ್ಚಾತ್ಯ ವಿದ್ವಾಂಸರಲ್ಲಿ ಕೆಲವರು ಮಹಾಭಾರತದಲ್ಲಿ ಗೀತೆಯೇ ಒಂದು ಪ್ರಕ್ಷಿಪ್ತಭಾಗವೆಂದೋ ಇಲ್ಲವೆ ಗೀತೆಯಲ್ಲಿಯೇ ಸಾಂಖ್ಯ-ಯೋಗ, ವೇದಾಂತ, ಭಾಗವತ ಧರ್ಮಗಳ ಬೇರೆ ಬೇರೆ ಪದರಗಳು ಬೇರೆ ಬೇರೆ ಕಾಲಗಳಲ್ಲಿ ಬರೆದು ಸೇರಿಸಿದವೆಂದೋ ಪ್ರತಿಪಾದಿಸಿದ್ದಾರೆ, ಆದರೂ ಭಾರತೀಯರು ಆಚಾರ್ಯತ್ರಯರ ಕಾಲದಿಂದ ಬಂದ ಪರಂಪರೆಯನ್ನನುಸರಿಸಿ ಅದು ಮಹಾಭಾರತದ ಮೂಲದಲ್ಲಿ ಎಂದಿನಿಂದಲೂ ವ್ಯಾಸರಚಿತವಾಗಿರುವ ಪ್ರಮಾಣಗ್ರಂಥವೆಂದೇ ಭಾವಿಸುತ್ತ ಬಂದಿದ್ದಾರೆ. ಭಗವದ್ಗೀತೆಗೆ "ಪ್ರಸ್ಥಾನ-ತ್ರಯ"ದಲ್ಲಿ ಎರಡನೆಯದೆಂಬ ಮಹತ್ತ್ವವನ್ನು ಕೊಡುವ ವಾಡಿಕೆಯಿದೆ.

ಗೀತೆಯಲ್ಲಿ ಪರಮಜ್ಞಾನ, ಪರಿಶುದ್ಧಭಕ್ತಿ, ನಿಷ್ಕಾಮಕರ್ಮ ಈ ಮೂರಕ್ಕೂ ಮೋಕ್ಷಸಾಧಕತ್ವ ವಿಷಯದಲ್ಲಿ ಪ್ರಾಶಸ್ತ್ಯ ದೊರೆತಿದೆ. ಆಧುನಿಕ ಕಾಲದಲ್ಲಿ ಲೋಕಮಾನ್ಯ ಟಿಳಕ, ಮದನಮೋಹನಮಾಳವೀಯ, ಮಹಾತ್ಮಾಗಾಂಧೀ, ಶ್ರೀ ಅರೋಬಿಂದೊ ಮುಂತಾದವರೂ ಗೀತೆಯ ಮಹಿಮೆಯನ್ನು ಮುಕ್ತಕಂಠದಿಂದ ಹೊಗಳಿ ತಮ್ಮ ವ್ಯಾಖ್ಯೆಗಳನ್ನು ರಚಿಸಿದ್ದಾರೆ. ಅದರ ಕಾವ್ಯಗುಣ, ಆಧ್ಯಾತ್ಮಿಕ ಆಕರ್ಷಣೆಗಳಿಂದ ಪ್ರಭಾವಿತರಾಗದವರೇ ಇಲ್ಲ. ಆದ್ದರಿಂದಲೇ ಜಗತ್ತಿನ ಎಲ್ಲ ಭಾಷೆಗಳಿಗೂ ಗೀತೆಯನ್ನು ಅನುವಾದ ಮಾಡಲಾಗಿದೆ. "ನಾಸತೋ

ವಿದ್ಯತೇ ಭಾವಃ. ನಾಭಾವೋ ವಿದ್ಯತೇ ಸತಃ" (೨.೧೬) ಎಂಬ ಮೂಲಪ್ರಮೇಯವನ್ನಾಧರಿಸಿ, 'ನ ಹಿ ಜ್ಞಾನೇನ ಸದೃಶಂ' (೪.೩೮). 'ಜ್ಞಾನೀ ತ್ವಾತ್ಮೈವ ಮೇ ಮತಮ್' (೭.೧೮) ಮುಂತಾದವುಗಳ ವಿವಕ್ಷಾನುಸಾರ ಗೀತೆಗೆ ಮೊದಲ ಭಾಷ್ಯಕಾರರಾದ ಶಂಕರಾಚಾರ್ಯರು ಜ್ಞಾನಯೋಗವೇ ಮೋಕ್ಷೋಪಾಯವೆಂದೂ ತಾತ್ತ್ವಿಕವಾಗಿ ನಿರ್ಣಯಿಸುತ್ತಾರೆ. ಭಕ್ತಿ-ಕರ್ಮಗಳು ಸತ್ತ್ವಶುದ್ಧಿಗೆ ಕಾರಕಗಳಾಗಿ ಜ್ಞಾನೋದಯಕ್ಕೆ ಸಹಕಾರಿಗಳೆನ್ನುತ್ತಾರೆ. ಭಕ್ತಿಯೋಗ ಕರ್ಮಯೋಗಗಳೂ ಮೋಕ್ಷವನ್ನು ಸಾಕ್ಷಾತ್ತಾಗಿ ನೀಡಬಲ್ಲವೆಂದು ಕೆಲವರು ಆಧುನಿಕರೂ ಆಚಾರ್ಯರೂ ಹೇಳುತ್ತಾರೆ. ಇದಕ್ಕೆ ಅವರವರ ಪರಮ ತತ್ತ್ವಪ್ರಕ್ರಿಯೆಯಲ್ಲಿ ವ್ಯತ್ಯಾಸವಿರುವುದೇ ಕಾರಣ. ಬ್ರಹ್ಮ, ಆತ್ಮ, ಜಗತ್ತು, ಮೋಕ್ಷ ಇವುಗಳ ಸ್ವರೂಪವು ಭಿನ್ನಾಭಿಪ್ರಾಯ ವಿವರಣಭೇದಗಳಿಂದ ಬರುವ ಕಾರಣ ಭಿನ್ನ ವ್ಯಾಖ್ಯಾನಗಳಿಗೆ ಅವಕಾಶ ಉಂಟಾಗುತ್ತದೆ. ಆದರೆ ಆಧ್ಯಾತ್ಮಿಕ ಸಿದ್ಧಿಯೊಂದು ಪ್ರಾಪಂಚಿಕ ಸುಖಕ್ಕಿಂತ ಹೆಚ್ಚಿನದಿರುವುದೆಂಬಲ್ಲಿ ಭಿನ್ನಾಭಿಪ್ರಾಯವಿಲ್ಲ.

## ಬೌದ್ಧ ದರ್ಶನ

ವೇದಾಂತದ ಮೂರನೆಯ ಪ್ರಸ್ಥಾನವಾದ ಬ್ರಹ್ಮಸೂತ್ರ-ಪ್ರಸ್ಥಾನದ ಉದಯಕ್ಕೆ ಪೂರ್ವದಲ್ಲಿಯೇ ಬೌದ್ಧ ದರ್ಶನ ಕೂಡ ನ್ಯಾಯ-ವೈಶೇಷಿಕ, ಪಂಚರಾತ್ರ, ಸಾಂಖ್ಯ-ಯೋಗ ಇತ್ಯಾದಿ ದರ್ಶನಗಳಂತೆ ಅಸ್ತಿತ್ವದಲ್ಲಿದ್ದುದು ಗೋಚರವಾಗುತ್ತದೆ. ಮುಂದೆ ಗೌಡಪಾದ, ಭರ್ತೃಹರಿ, ಶಂಕರಾಚಾರ್ಯ ಮುಂತಾದವರ ಅದ್ವೈತ ತತ್ತ್ವಪ್ರತಿಪಾದನೆಗೆ ಹಿನ್ನೆಲೆಯಲ್ಲಿ ಬೌದ್ಧರ ಶೂನ್ಯವಾದ ವಿಜ್ಞಾನವಾದಗಳೂ ಎದ್ದು ಕಾಣುವಂತೆ ಇವೆ. ಅಷ್ಟೇ ಅಲ್ಲ ; ಪ್ರಾಚೀನ ನ್ಯಾಯದರ್ಶನದ ವಿಕಾಸ ಕೂಡ ಬೌದ್ಧರ ವಾದ-ಪ್ರತಿವಾದಗಳೊಂದಿಗೆ ಹಾಸು ಹೊಕ್ಕಾಗಿ ಬೆಸೆದುಕೊಂಡಿದೆ. ಅತ್ತ ಕರ್ಮಕಾಂಡದ ಮಹತ್ತ್ವವನ್ನು ಸಾಧಿಸಹೊರಟ ಪೂರ್ವ ಮೀಮಾಂಸಾ ದರ್ಶನಕ್ಕಂತೂ ಬೌದ್ಧರ ದರ್ಶನವು ನೇರವಾದ ಪ್ರತಿದ್ವಂದ್ವಿಯಾಗಿದೆ. ಹೀಗೆ ಭಾರತೀಯ ಶಾಸ್ತ್ರಧಾರೆಗಳ ಉದ್ಗಮ-ವಿಕಾಸಗಳಲ್ಲಿ ಬೌದ್ಧ ದಾರ್ಶನಿಕರ ಪ್ರಭಾವ ಅವಿಸ್ಮರಣೀಯವಾದುದು. ಬೌದ್ಧ ಮೂಲ ಗ್ರಂಥಗಳು ಭಾರತದಲ್ಲಿ ಲುಪ್ತಪ್ರಾಯವಾಗಿದ್ದು ಈ ಶತಮಾನದಲ್ಲಷ್ಟೇ ವಿದೇಶಿಯ ವಿದ್ವಾಂಸರ ಸಂಶೋಧನೆಗಳಿಂದಾಗಿ ಕೆಲಮಟ್ಟಿಗೆ ದೊರೆಯುವಂತಾಗಿವೆ.

ಭಗವಾನ್ ಬುದ್ಧನ (ಕ್ರಿ. ಪೂ. ೬ನೆಯ ಶತಮಾನ) ಅನಂತರ ಬೌದ್ಧರಲ್ಲಿ ಅನೇಕವಾಗಿ ನೂರಾರು ಶಾಖೆಗಳು ಹುಟ್ಟಿಕೊಂಡವು. ಅವುಗಳಲ್ಲಿ ಮುಖ್ಯವಾಗಿ ಹೀನಯಾನ, ಮಹಾಯಾನ ಎಂಬ ಎರಡು ಪಂಥಗಳನ್ನು ಉಲ್ಲೇಖಿಸಬಹುದು. ದಾರ್ಶನಿಕ ದೃಷ್ಟಿಯಿಂದ ಮೊದಲನೆಯವರಲ್ಲಿ 'ವೈಭಾಷಿಕ' 'ಸೌತ್ರಾಂತಿಕ' ಎಂಬೆರಡು ಪಕ್ಷಗಳೂ, ಮಹಾಯಾನ ಪಂಥದಲ್ಲಿ 'ಶೂನ್ಯವಾದ,' 'ವಿಜ್ಞಾನವಾದ' ಎಂಬೆರಡು ಪಕ್ಷಗಳೂ ತಲೆದೋರಿ (?) ಗಮನಾರ್ಹ, ಬಾಹ್ಯಾರ್ಥವು

ಪ್ರತ್ಯಕ್ಷಗಮ್ಯವೆಂದು ವೈಭಾಷಿಕರು ಹೇಳಿದರೆ, ಅನುಮಾನಗಮ್ಯವೆಂಬುದು ಸೌತ್ರಾಂತಿಕರವಾದ, "ವೈಭಾಷಿಕಸ್ಯ ಬಾಹ್ಯಾರ್ಥಃ ಪ್ರತ್ಯಕ್ಷಃ, ಸೌತ್ರಾಂತಿಕಸ್ಯ ಜ್ಞಾನಗತಾಕಾರವೈಚಿತ್ರ್ಯೇಣ ಅನುಮೇಯಃ" (ಕಲ್ಪತರು, ಪು. ೨೮೬). ಇಬ್ಬರಿಗೂ "ಸರ್ವಾಸ್ತಿವಾದಿ"ಗಳೆಂಬ ನಾಮಾಂತರ ವುಂಟು. ಏಕೆಂದರೆ "ಸರ್ವಂ ಕ್ಷಣಿಕಂ" ಎಂದರೂ ಪದಾರ್ಥಗಳು ಉತ್ಪತ್ತಿ, ಸ್ಥಿತಿ, ನಾಶಗಳೆಂಬ ಮೂರು ಕ್ಷಣಗಳಷ್ಟು ಕಾಲ ಸತ್ತಾಗಿರುವುವೆಂದು ಇವರ ಭಾವನೆ. ಆತ್ಮವೆಂಬುದಿಲ್ಲ. ಇತರರು ಆತ್ಮವೆನ್ನುವ 'ಪುದ್ಗಲವೂ' ಹೀಗೆ ಮಾತ್ರ ಸತ್ತಾದುದು; ಇದರಲ್ಲಿ ಇರುವುದೆಲ್ಲ ಐದು 'ಸ್ಕಂಧ' ಅಥವಾ ಗುಂಪು ಇಲ್ಲವೆ ಸಂಘಾತ ಅಥವಾ ಸಂತಾನಗಳು :- (೧) ರೂಪ, (೨) ವೇದನಾ, (೩) ಸಂಜ್ಞಾ ಅಥವಾ ನಾಮ (೪) ಸಂಸ್ಕಾರ ಮತ್ತು (೫) ವಿಜ್ಞಾನ. ಜನ್ಮಾಂತರವಿರುವುದೂ ಸ್ಕಂಧಗಳಿಗೇ ಹೊರತು 'ಆತ್ಮ'ನಿಗಲ್ಲ, 'ಕರ್ಮ' ವೆಂಬುದು ದೈವವಶವಲ್ಲದ ಒಂದು ಸ್ವತಂತ್ರ ಹಾಗೂ ನಿರಪೇಕ್ಷನಿಯಮ. ಅದು ನಿರಂತರಸಾಗಲು 'ಆತ್ಮ'ನ ಅಗತ್ಯವಿಲ್ಲ. ಮೋಕ್ಷದಲ್ಲಿ ಆನಂದಾದಿಗಳೊಂದೂ ಇಲ್ಲ. ಅದು ನಿಜವಾಗಿ ದುಃಖನಿರೋಧ ಅಥವಾ 'ನಿರ್ವಾಣ'ವಷ್ಟೇ. ಈ ಎಲ್ಲ ಮುಖ್ಯಾಂಶಗಳೂ ಇವೆರಡೂ ಪಕ್ಷಗಳಿಗೆ ಸಮಾನವಾಗಿವೆ. ನಾಮ-ಜಾತ್ಯಾದಿಗಳ ಅನುಭವವನ್ನೆಲ್ಲ 'ಕಲ್ಪನಾ' ಎನ್ನುವ ಸೌತ್ರಾಂತಿಕರಲ್ಲಿ ವಿಜ್ಞಾನವಾದದ ಉಗಮವಿದೆಯೆನ್ನ ಬಹುದು.

ವಸುಬಂಧುವಿನ (ಕ್ರಿ.ಶ. ೪೨೦-೫೦೦) 'ಅಭಿಧರ್ಮಕೋಶ' ದಿಙ್ನಾಗನ (ಕ್ರಿ. ಶ. ೪೮೦) 'ಪ್ರಮಾಣಸಮುಚ್ಚಯ' ಮುಂತಾದವು ಉತ್ತರಕಾಲೀನ ಬೌದ್ಧಗ್ರಂಥಗಳು. ದಿಙ್ನಾಗನು ನ್ಯಾಯದರ್ಶನದ ವಾತ್ಸ್ಯಾಯನ ಭಾಷ್ಯವನ್ನು ಖಂಡಿಸಿದ್ದಾನೆ.

ಮಹಾಯಾನ ಪಂಥದಲ್ಲಿ ಶೂನ್ಯವಾದ ಮತ್ತು ವಿಜ್ಞಾನವಾದಗಳು ಪ್ರಮುಖ ದರ್ಶನಗಳು. ಅಶ್ವಘೋಷನ ಕೃತಿಗಳಲ್ಲಿ (ಕ್ರಿ. ಶ. ೧೦೦) ಹಾಗೂ ಅದಕ್ಕೂ ಮುಂಚೆ ಇದ್ದಿರಬಹುದಾದ 'ಮಹಾಯಾನಸೂತ್ರ'ಗಳಲ್ಲಿ ಈ ವಾದದ ಛಾಯೆಗಳಿವೆ. ಆದರೂ ಶೂನ್ಯವಾದವನ್ನು ಪ್ರತಿಷ್ಠಾಪಿಸಿ ಪ್ರತಿಪಾದಿಸಿದ ಕೀರ್ತಿ ನಾಗಾರ್ಜುನನದು (ಕ್ರಿ. ಶ. ೧೦೦). ಈತನ "ಮಾಧ್ಯಮಿಕ ಕಾರಿಕಾ" ಎಂಬ ಗ್ರಂಥಕ್ಕೆ ಅವನ ಶಿಷ್ಯ ಆರ್ಯದೇವ, ಮುಂದೆ ಕುಮಾರಜೀವ (ಕಿ. ಶ. ೩೮೩) ಮತ್ತು ಚಂದ್ರಕೀರ್ತಿ (ಕ್ರಿ. ಶ. ೫೫೦) ಇವರು ಬರೆದ ವ್ಯಾಖ್ಯಾನಗಳು ದೊರೆತಿವೆ.

'ಶೂನ್ಯ'ವೆಂದರೆ ಈ ದರ್ಶನದಲ್ಲಿ 'ಏನೂ ಇಲ್ಲದ್ದು' ಎಂಬ ಸಾಮಾನ್ಯವಾದ ಅರ್ಥವಲ್ಲ. ಅದಕ್ಕೆ ವಿಶಿಷ್ಟವಾದ ದಾರ್ಶನಿಕ ತಾತ್ಪರ್ಯವಿದೆ. ವದತೋವ್ಯಾಹತವೆನಿಸುವ 'ಅಲೀಕ'ವೇ ಶೂನ್ಯವಾದಿಯ 'ಶೂನ್ಯ'ವೆಂದು ಖಂಡಿಸಿರುವ ಆಚಾರ್ಯರುಗಳು ಶೂನ್ಯವಾದದ ತಿರುಳನ್ನು ತಪ್ಪಾಗಿ ಪ್ರತಿಪಾದಿಸಿದ್ದಾರೆಂಬುದು ಆಧುನಿಕ ತತ್ತ್ವಶಾಸ್ತ್ರಕಾರರ ಅಭಿಮತ. ನಿಜವಾಗಿ ಮುಂದಿನ ಅದ್ವೈತವೇದಾಂತಿಗಳು ಹೇಳುವ 'ಅನಿರ್ವಚನೀಯ'ವೇ ಮಾಧ್ಯಮಿಕರ 'ಶೂನ್ಯ' ವೆಂದು ಅವರ ಹೇಳಿಕೆ. ಸತ್-ಅಸತ್-ಸದಸತ್-ನ ಸದಸತ್, ಎಂಬ 'ಚತುಷ್ಕೋಟಿ'ಗಳಿಂದ ವಿನಿರ್ಮುಕ್ತವಾದುದಷ್ಟೇ ಅವರ 'ಶೂನ್ಯ' ಅದನ್ನವರು 'ಅವಾಚ್ಯ' ಅಥವಾ 'ಅನಭಿಲಾಪ್ಯ'

ವೆಂದೂ ಕರೆದಿದ್ದಾರೆ. ಅದು 'ವ್ಯವಹಾರ' ಹಾಗು 'ಪರಮಾರ್ಥ'ಗಳೆರಡನ್ನೂ ವಿವರಿಸಬಲ್ಲದು ಹೇಗೆಂದರೆ ವ್ಯಾವಹಾರಿಕ ಜಗತ್ತು ಸತ್ ಎಂದಾಗಲಿ ಅಸತ್ ಎಂದಾಗಲಿ ನಿರ್ವಾಚ್ಯವಲ್ಲವಾದ್ದರಿಂದ 'ಶೂನ್ಯ' ಪರಮಾರ್ಥವು ಬುದ್ಧ್ಯತೀತವಾದ್ದರಿಂದ ಶೂನ್ಯ, ಅನಿರ್ವಾಚ್ಯ. ಆದರೆ ಮಿಥ್ಯಾ ಭೂತವಾದ ಪ್ರಪಂಚ 'ಸ್ವಭಾವಶೂನ್ಯ'; ಪರಮಾರ್ಥ 'ಪ್ರಪಂಚಶೂನ್ಯ' ಅಥವಾ ಭೇದಶೂನ್ಯ. ಹೀಗೆ ಶೂನ್ಯವನ್ನು ಉಭಯಾರ್ಥದಲ್ಲಿ ಬಳಸಲಾಗಿದೆ, 'ಪ್ರತೀತ್ಯ-ಸಮುತ್ಪನ್ನ'ಗಳು ಎಂದರೆ ಸಾಪೇಕ್ಷ ಉತ್ಪತ್ತಿಯನ್ನುಳ್ಳವು (ಅವಿದ್ಯಾ-ಕಾಮ-ಕರ್ಮ ಇತ್ಯಾದಿ) ಪರಮಾರ್ಥತಃ ಅನುತ್ಪನ್ನವೇ ಆದ್ದರಿಂದ ಶೂನ್ಯ, ನಿಃಸ್ವಭಾವ ಅಥವಾ ಅನಾತ್ಮ. ಆದರೆ ಅವು ಅಲೀಕವಲ್ಲ; ಪರಮಾರ್ಥದ ತೋರಿಕೆಗಳೇ. ಆ ಅದ್ವಯ ಪರಮಾರ್ಥ ತತ್ವ ನಿಷ್ಪ್ರಪಂಚವಾದುದು: ಆದರೆ ಅಲೀಕವಲ್ಲ. ಬುದ್ಧಿಯು ಎಲ್ಲ ಭೇದಗಳನ್ನು ಪರಿಹರಿಸುವ ಸಾಮರ್ಥ್ಯ ಆ ಪರಮಾರ್ಥಕ್ಕಿದೆ; ಆ ಅನುಭವವೇ ನಿರ್ವಾಣ.

ಎಲ್ಲ ಧರ್ಮಗಳೂ ನಾಮ-ರೂಪಗಳು; ಎಲ್ಲ ನಾಮ-ರೂಪಗಳೂ ಮಾಯೆ ('ನಾಮ ರೂಪಮೇವ ಮಾಯಾ, ನಾಮೈವ ನಾಮರೂಪಮ್'-ಶತಸಾಹಸ್ರಿಕಾ) ಎಂಬುದು ಅವರ ಸಿದ್ಧಾಂತದ ಇನ್ನೊಂದು ಮುಗ್ಗಲು. ಆದ್ದರಿಂದಲೇ ಅವರಿಗೆ ಮಾಯಾವಾದಿಗಳೆಂದೂ ಹೆಸರು. ಸಕಲ ವಸ್ತುಗಳೂ, ಧರ್ಮಗಳೂ, ಕಾರ್ಯ-ಕಾರಣಗಳೂ, ನೀತಿ-ಅನೀತಿಗಳೂ, ಸತ್ಯ-ಅಸತ್ಯ ಗಳೂ, ಕಡೆಗೆ ನಿರ್ವಾಣ ಕೂಡ ಎಲ್ಲವು ಈ ಪಾರಮಾರ್ಥಿಕ ದಾರ್ಶನಿಕ ದೃಷ್ಟಿಗೆ ಮಿಥ್ಯೆ ಅಥವಾ ಮಾಯೆಯೆಂದೇ ಎನಿಸುವವು :—

ಅನಿರೋಧಂ ಅನುತ್ಪಾದಂ ಅನುಚ್ಛೇದಂ ಅಶಾಶ್ವತಂ<br>
ಅನೇಕಾರ್ಥಂ ಅನಾನಾರ್ಥಂ ಅನಾಗಮಂ ಅನಿರ್ಗಮಂ ।<br>
ಯಃ ಪ್ರತೀತ್ಯಾಸಮುತ್ಪಾದಂ ಪ್ರಪಂಚೋಪಶಮಂ ಶಿವಂ ।<br>
ದೇಶಯಾಮಾಸ ಸಂಬುದ್ಧಃ ತಂ ವಂದೇ ವದತಾಂ ವರಂ ॥

ಎಂಬುದು ಮಾಧ್ಯಮಿಕಕಾರಿಕೆಯ ಆರಂಭವಾಕ್ಯ.

ಸ್ವತಃ ಇಲ್ಲವೆ ಪರತಃ ಅಥವಾ ಉಭಯತಃ, ಅಥವಾ ಅಹೇತುಕವಾಗಿ ಉತ್ಪತ್ತಿಯೆಂಬುದೇ ಅಶಕ್ಯವೆಂಬುದು ಮಾಧ್ಯಮಿಕರ 'ಅಜಾತಿವಾದ' :—

ನ ಸ್ವತೋ ನಾಪಿ ಪರತಃ ನ ದ್ವಾಭ್ಯಾಂ ನಾಪ್ಯಹೇತುತಃ ।<br>
ಉತ್ಪನ್ನಾ ಜಾತು ವಿದ್ಯಂತೇ ಭಾವಾಃ ಕ್ವಚನ ಕೇಚನ ॥ (ಮಾಧ್ಯಮಿಕಕಾರಿಕಾ ೧)

ಇದು ಎಷ್ಟರಮಟ್ಟಿಗೆ ಗೌಡಪಾದರ ಅಜಾತಿವಾದಕ್ಕೆ ಸಮೀಪವಾಗಿದೆಯೆಂಬುದು ಪರಿಶೀಲನಾರ್ಹ.

ಎಲ್ಲವನ್ನೂ ಸ್ವಪ್ನ, ಭ್ರಮೆ, ಮರೀಚಿಕೆ, ಗಗನಕುಸುಮ, ಗಂಧರ್ವನಗರ, ವಂಧ್ಯಾಪುತ್ರ ನಂತೆ ಶೂನ್ಯವೆಂದು ಖಂಡನತರ್ಕವನ್ನು ಮುಂದೊಡ್ಡುವುದು ಶೂನ್ಯವಾದದ ವೈಶಿಷ್ಟ್ಯ. ಅವರ ಪರಮಾರ್ಥ ಬುದ್ಧನ ಉತ್ತಮ-ಅಗ್ರ-ಬೋಧಿಯಲ್ಲಿ ಪರ್ಯವಸನ್ನವಾಗುವುದು. ಈ ಬೋಧಿಯಲ್ಲಿ ಧರ್ಮ-ನೈರಾತ್ಮ್ಯ, ಪುದ್ಗಲನೈರಾತ್ಮ್ಯ, ಕ್ಲೇಶಾವರಣನಾಶ, ಜ್ಞೇಯಾವರಣ ಭಂಗಗಳು ಸಿದ್ಧಿಸುವುವು. ಅದನ್ನು ಮಾತಿನಿಂದ ಹೇಳಬರುವುದಿಲ್ಲ, "ಅವಚನಂ ಬುದ್ಧ ವಚನಮ್ ".

ಸತ್ಯವು ಎರಡು ವಿಧ-ಸಂವೃತಿ ಸತ್ಯ, ಪರಮಾರ್ಥಸತ್ಯ ಎಂಬ ವಿವೇಚನೆಯೂ ಇಲ್ಲಿ ಬರುತ್ತದೆ.

ದ್ವೆ ಸತ್ಯೇ ಸಮುಪಾಶ್ರಿತ್ಯ ಬುದ್ಧಾನಾಂ ಧರ್ಮದೇಶನಾ ।
ಲೋಕ ಸಂವೃತಿಸತ್ಯಂ ಚ ಸತ್ಯಂ ಚ ಪರಮಾರ್ಥತಃ ॥ (ಮಾ.ಕಾ. ೨೪-೮)

ಮಾಧ್ಯಮಿಕರೇ ದಿಙ್ನಾಗ ಮುಂತಾದ ಸೌತ್ರಾಂತಿಕರನ್ನು ಖಂಡಿಸಿಯೂ ಇದ್ದಾರೆ, ಪ್ರಮಾಣ ವಿಚಾರದಿಂದ ಪರಮಾರ್ಥ ಸಿದ್ಧಿಯಾಗದು, ಎಂದು.

ಯೋಗಾಚಾರ ವಿಜ್ಞಾನವಾದವು ಮಹಾಯಾನ ಪಂಥದ ಮತ್ತೊಂದು ಪ್ರಬಲಶಾಖೆ. ಬಾಹ್ಯಾರ್ಥಗಳೆಲ್ಲ ಪ್ರತ್ಯಕ್ಷ ಮಾಡಿಕೊಳ್ಳುತ್ತಿರುವ ಜ್ಞಾತೃವಿನ ಮನಸ್ಸಿನಲ್ಲಿ ಮಾತ್ರ ಇರತಕ್ಕವು, ವಸ್ತುಸತ್ಯಗಳಲ್ಲ ಎಂದು ಇದರ ಸಾರಾಂಶ. ಅಸಂಗ, ವಸುಬಂಧುಗಳ ಗ್ರಂಥಗಳಲ್ಲಿಯೂ 'ಲಂಕಾವತಾರಸೂತ್ರ' ವೆಂಬ ಗ್ರಂಥದಲ್ಲಿಯೂ ಇದರ ವಿಸ್ತಾರ ಕಾಣುತ್ತದೆ. ಚಿತ್ತ ಮಾತ್ರವೇ ಸತ್ಯವೆಂದು ಲಂಕಾವತಾರಸೂತ್ರ ಹೇಳುತ್ತದೆ. ಜ್ಞಾತೃ-ಜ್ಞೇಯ ವಿಭಾಗಕ್ಕೂ ಮುಂಚೆ ಇರುವ 'ಆಲಯವಿಜ್ಞಾನ' ಸಾರ್ವತ್ರಿಕವಾದುದೆಂದು ಅವರ ಕಲ್ಪನೆ. ಅದು ಬುದ್ಧನ ಪ್ರಜ್ಞಾಗೋಚರವಷ್ಟೇ. ದಿಙ್ನಾಗ, ಧರ್ಮಕೀರ್ತಿ (ಕ್ರಿ.ಶ. ೬೫೦), ಶಾಂತರಕ್ಷಿತ ಮತ್ತು ಕಮಲಶೀಲ(ಕ್ರಿ.ಶ.೮೦೦)ಈ ವಾದದ ಮುಖ್ಯ ಪುರಸ್ಕರ್ತರು ಮತ್ತು ಪ್ರಚಾರಕರು. ಇವರಿಗೆಲ್ಲ ವಿಜ್ಞಾನವಾದಿಗಳೆಂದು ಹೆಸರು. ಚಕ್ಷುರಾದಿ ಇಂದ್ರಿಯ ಜ್ಞಾನಗಳೆಲ್ಲ ನಿಜವಾಗಿ ವಿಜ್ಞಾನಗಳೇ ಎಂದು ಇವರ ವಾದ. ಶುದ್ಧ ವಿಜ್ಞಾನವೇ ಇವರ ದರ್ಶನದಲ್ಲಿ ಪರಮಾರ್ಥ :—

" ಮತಂ ಚ ಚಿತ್ತಂ ಪ್ರಕೃತಿಪ್ರಭಾಸ್ವರಂ ಸದಾ ಸದಾಗಂತುಕದೋಷದೂಷಿತಮ್
(ಮಹಾಯಾನ ಸೂತ್ರಾಲಂಕಾರ ೧೩, ೧೯).

ಮೋಕ್ಷವೆಂದರೆ ಭ್ರಮನಿರಸನ ಮಾತ್ರ-

"ತತಶ್ಚ ಮೋಕ್ಷೋ ಭವಮಾತ್ರಸಂಕ್ಷಯಃ" (ಅಲ್ಲಿಯೇ ೬–೨),

ಬ್ರಹ್ಮಶಬ್ದವನ್ನು ಕೂಡ ಅನುಷಂಗಿಕವಾಗಿ ಅವರು ಬಳಸುವುದುಂಟು:— ಬೋಧಿಸತ್ವನು "ಬ್ರಾಹ್ಮೈರ್ವಿಹಾರೈರ್ವಿಹರತ್ಯುದಾರೈಃ" (ಅಲ್ಲಿಯೇ ೭. ೩).

ಇದು ಸಂಕುಚಿತ ಆತ್ಮದ ದೃಷ್ಟಿಯಲ್ಲ; ಮಹಾತ್ಮದ ದೃಷ್ಟಿಯೆನ್ನಲಾಗಿದೆ :—

ವಿಹಾಯ ಯೋऽನರ್ಥಮಯಾತ್ಮದೃಷ್ಟಿಂ ಮಹಾತ್ಮದೃಷ್ಟಿಂ ಶ್ರಯತೇ

ಮಹಾರ್ಥಾಮ್" (೧೪. ೩೭)

ಇದನ್ನೇ ಅವರು 'ಆಲಯವಿಜ್ಞಾನ', 'ಅಭೂತಪರಿಕಲ್ಪ' 'ತಥಾಗತಗರ್ಭ', 'ವಿಜ್ಞಪ್ತಿ ಮಾತ್ರ' 'ಚಿತ್ತ ಮಾತ್ರ' ಎಂಬ ಶಬ್ದಾಂತರಗಳಿಂದಲೂ ವ್ಯವಹರಿಸುತ್ತಾರೆ.

ಇವರ ಶಬ್ದಗಳಿಗೆ ಪ್ರತಿಯಾಗಿ ಅದ್ವೈತ ವೇದಾಂತದ ಪ್ರಕ್ರಿಯೆಗಳನ್ನು ಬಳಸಿದರೆ ಸಾಮ್ಯ ಎದ್ದು ಕಾಣುತ್ತದೆ :—

ವಿಜ್ಞಪ್ತಿಮಾತ್ರ-ಬ್ರಹ್ಮ ಅಥವಾ ಆತ್ಮ
ಆಲಯವಿಜ್ಞಾನ-ಈಶ್ವರ
(ಕ್ಲಿಷ್ಟ) ಮನೋವಿಜ್ಞಾನ-ಜೀವ
ವಿಷಯವಿಜ್ಞಪ್ತಿ-ಜಗತ್
ಪರಿಣಾಮ-ವಿವರ್ತ.

ಗೌಡಪಾದ-ಶಂಕರಾಚಾರ್ಯರುಗಳಿಂದ ಪರಿಸ್ಫುಟವಾಗುವ ಅದ್ವೈತ ದರ್ಶನದಲ್ಲಿ ಕೆಲವೊಂದು ಸಾಮ್ಯಾಂಶಗಳು ಸಿದ್ಧಾಂತ ಮಂಡನೆಯಲ್ಲಿ ಮಾತ್ರವಲ್ಲ, ಪರಮತಖಂಡನೆಗಳಲ್ಲಿಯೂ ಕಾಣಬರುವುದೆಂಬ ಇಂದಿನ ವಿದ್ವಾಂಸರ ಅಭಿಪ್ರಾಯವನ್ನು ಸೂಚಿಸಲು ಈ ಸ್ಥೂಲ ವಿವರಗಳನ್ನು ಒದಗಿಸಲಾಗಿದೆ. ಆದರೆ ಬೌದ್ಧರಲ್ಲಿ ಕಾಣಸಿಗದ ಔಪನಿಷದ ಪ್ರಕ್ರಿಯೆಗಳು ಅದ್ವೈತದಲ್ಲಿ ಇರುವುದನ್ನು ಯಾರೂ ಅಲ್ಲಗಳೆಯುವಂತಿಲ್ಲ. ಆದ್ದರಿಂದ ಅದ್ವೈತವಾದವನ್ನು ಕೇವಲ ಮಾಯಾವಾದವೆಂದಾಗಲಿ ಪ್ರಚ್ಛನ್ನಬೌದ್ಧವಾದವೆಂದಾಗಲಿ ಕುಂದಿಡುವುದು ತಪ್ಪಾಗುತ್ತದೆ. ಶಂಕರಾಚಾರ್ಯರು ದಿಙ್ನಾಗ–ಧರ್ಮಕೀರ್ತಿಗಳ 'ಯದಂತರ್ಜ್ಞೇಯರೂಪಂ ಬಹಿರ್ವದವಭಾಸತೇ' ಎಂಬ ವಿಜ್ಞಾನವಾದವನ್ನು "ಬಾಧಂ ಬ್ರವೀಷಿ, ನಿರಂಕುಶತ್ವಾತ್ತೇ ತುಂಡಸ್ಯ" ಎಂದು ಖಂಡತುಂಡಾಗಿ ಖಂಡಿಸಿರುವುದನ್ನು ಮರೆಯುವಂತಿಲ್ಲ. ಶೂನ್ಯವಾದ ವಿಜ್ಞಾನವಾದಗಳಲ್ಲಿ ಪರಮಾರ್ಥ ಸತ್ತ್ವವೊಂದು ಉಂಟೆನ್ನುವುದೂ ಆಧುನಿಕರ ವಿವರಣೆಯೇ ಆಗಿದೆ.

ದಿಙ್ನಾಗ-ಧರ್ಮಕೀರ್ತಿಗಳು ಸೌತ್ರಾಂತಿಕರಿದ್ದಂತೆ ವಿಜ್ಞಾನವಾದಿಗಳೂ ಆಗಿದ್ದರು.

ಇವರು ವಿಜ್ಞಾನವಾದದ ಸಮರ್ಥನೆಗಾಗಿ ಹೊಸದಾದ ಒಂದು ತರ್ಕಶಾಸ್ತ್ರವನ್ನೇ ಸಿದ್ಧಪಡಿಸಿದರು. ದರ್ಶನ ಪ್ರಧಾನವಾಗಿದ್ದ ಬೌದ್ಧಸಾಹಿತ್ಯ ಇವರ ಕೈಯಲ್ಲಿ ತರ್ಕಪ್ರಧಾನವಾಯಿತು. ಇವರು ಪರಮಾರ್ಥವಿಜ್ಞಪ್ತಿಗೂ ಕ್ಷಣಿಕತ್ವವನ್ನೇ ಹೇಳುವುದರಿಂದ ಇವರಿಗೆ ಸ್ವತಂತ್ರವಿಜ್ಞಾನವಾದಿಗಳೆಂದೂ ಹೆಸರಿಸುತ್ತಾರೆ. ಮೊದಲು ದಿಙ್ನಾಗನು ವಾತ್ಸ್ಯಾಯನ ಭಾಷ್ಯವನ್ನು ಖಂಡಿಸಿದ್ದನಷ್ಟೆ. ಅದನ್ನು 'ಅಪೋಹವಾದ' ಅಥವಾ "ಅನ್ಯಾಪೋಹವೇ ಪದದ ಅರ್ಥ" ಎಂಬುದೂ ಇವರ ವಿಶಿಷ್ಟ ಸಮಾಲೋಚನೆ. ನ್ಯಾಯದೃಷ್ಟಿಯಿಂದ ಮತ್ತೆ ನಿರಾಕರಣ ಮಾಡುವ ಕಾರ್ಯ ನ್ಯಾಯವಾರ್ತಿಕಕಾರನಾದ ಉದ್ಯೋತಕರನ ಪಾಲಿಗೆ ಬಂದಿತು. ಅದರಲ್ಲಿಯೂ ದೋಷಗಳನ್ನು ಧರ್ಮಕೀರ್ತಿ ತನ್ನ ಪ್ರಮಾಣವಾರ್ತಿಕವೆಂಬ ಗ್ರಂಥದಲ್ಲಿ ಉದ್ಘಾಟಿಸಿದ್ದರಿಂದ, ಅದನ್ನು ಮತ್ತೆ ನಿರಾಕರಿಸುವ ಕಾರ್ಯ ವಾಚಸ್ಪತಿಮಿಶ್ರರ ಪಾಲಿಗೆ ಬಂದಿತು. ಅದನ್ನವರು ವಾರ್ತಿಕತಾತ್ಪರ್ಯಟೀಕೆಯಲ್ಲಿ ಸ್ಪಷ್ಟವಾಗಿ ಉಲ್ಲೇಖಿಸಿದ್ದಾರೆ. ಉದ್ಯೋತಕರನ ಮಾತುಗಳು ಬೌದ್ಧದೂಷಣೆಯ ಕೆಸರಿನಲ್ಲಿ ಸಿಕ್ಕಿಕೊಂಡ ಹಸುಗಳಂತಾಗಿದ್ದುವೆಂದೂ, ಅವನ್ನು ಮೇಲೆತ್ತಲು ತಾನು ಹೊರಟಿರುವೆನೆಂದೂ ವಾಚಸ್ಪತಿಮಿಶ್ರರು ಹೇಳಿಕೊಂಡಿದ್ದಾರೆ.

ಹಾಗೆಯೇ ವೈದಿಕರ ದರ್ಶನವಾದ ಪೂರ್ವಮೀಮಾಂಸಾ ಕ್ಷೇತ್ರದಲ್ಲೂ ಈ ಬೌದ್ಧರ ಖಂಡನೆಗಳನ್ನು ಪರಿಹರಿಸುವ ಮಹಾಕಾರ್ಯಕ್ಕಾಗಿಯೇ ಕುಮಾರಿಲಭಟ್ಟರು 'ಶ್ಲೋಕವಾರ್ತಿಕ' ವನ್ನು ರಚಿಸಿರುವುದು ಗಮನಾರ್ಹವಾದ ಸಂಗತಿ. ಇವಕ್ಕೂ ಪ್ರತ್ಯುತ್ತರವನ್ನು ವಿವರವಾಗಿ ಕಮಲಶೀಲ-ಶಾಂತರಕ್ಷಿತರು "ತತ್ತ್ವ-ಸಂಗ್ರಹ" ದಲ್ಲಿ ಕೊಡಲು ಯತ್ನಿಸಿದರೂ ಆಸ್ತಿಕರ, ಅದರಲ್ಲೂ ಶಂಕರಾಚಾರ್ಯರೇ ಮೊದಲಾದ ವೇದಾಂತಿಗಳ ಮಹಾ ಪ್ರಭಾವದಿಂದಾಗಿ ಈ ಬೌದ್ಧ ಗ್ರಂಥಕಾರರು ಭಾರತವನ್ನೇ ಬಿಟ್ಟು ಟಿಬೆಟಿನಲ್ಲಿ ಆಶ್ರಯ ಪಡೆಯಬೇಕಾಯಿತು. ಮುಂದಿನ ಶತಮಾನಗಳಲ್ಲಿ ಭಾರತದಲ್ಲಿ ಹೇಳ ಹೆಸರಿಲ್ಲದಂತೆ ಬೌದ್ಧಧರ್ಮವೂ ಲುಪ್ತಪ್ರಾಯವಾಯಿತು. ಆದರೂ ಅದರ ಉನ್ನತ ವೈಚಾರಿಕ ದರ್ಶನವು ಅದ್ವೈತವೇದಾಂತದಲ್ಲಿಯೇ ಗ್ರಾಹ್ಯಾಂಶಗಳಲ್ಲಿ ಅಂತರ್ಲೀನವಾಯಿತೆಂಬುದನ್ನೂ ದರ್ಶನಗಳ ಇತಿಹಾಸಕಾರನು ಮರೆಯುವಂತಿಲ್ಲ "ಕಾರ್ಯಕಾರಣಭೂತಾಶ್ಚ ತತ್ರಾವಿದ್ಯಾದಯೋ ಮತಾಃ । ಬಂಧಸ್ತದ್ವತ್ಸಮಾದಿಷ್ಟಾ ಮುಕ್ತಿರ್ನಿರ್ಮಲತಾ ಧಿಯಃ ॥" ಎಂಬ "ತತ್ತ್ವಸಂಗ್ರಹ" ದ ಮಾತು ಔಪನಿಷದ ಬ್ರಹ್ಮವಾದವಲ್ಲದಿದ್ದರೂ ಮುಂದಿನ ಅದ್ವೈತವಾದಕ್ಕೆ ಅತ್ಯಂತ ಸಮೀಪವರ್ತಿಯಾಗಿಲ್ಲವೆ ?

## ಭಾರತೀಯ ದರ್ಶನಗ್ರಂಥಗಳ ವಿಕಾಸಕ್ರಮ

ಭಾರತೀಯ ದರ್ಶನಗ್ರಂಥಗಳ ವಿಕಾಸ ಸಾಮಾನ್ಯವಾಗಿ ಮೂರು ನಾಲ್ಕು ನಿರ್ದಿಷ್ಟ ಮಾರ್ಗಗಳಲ್ಲಿ ಸಾಗಿದೆ. ಋಷಿಯೊಬ್ಬನು ತನ್ನ 'ದರ್ಶನ' ವನ್ನು ಎಂದರೆ ಪರಮಾರ್ಥದ

ಅನುಭವವನ್ನು ಮಂತ್ರರೂಪವಾಗಿ ಅಭಿವ್ಯಕ್ತ ಮಾಡುತ್ತಾನೆ. ಅದು ಮೊದಲನೆಯ ಆವಿರ್ಭಾವದ ಅವಸ್ಥೆ ; ಬಳಿಕ ಋಷಿಸಮಾನನಾದ ಇನ್ನೊಬ್ಬನು ಅದನ್ನು ವ್ಯವಸ್ಥಿತವಾಗಿ ಗದ್ಯದ 'ಸೂತ್ರ' ಗಳಾಗಿ ಇಲ್ಲವೆ ಪದ್ಯದ 'ಕಾರಿಕೆ' ಗಳಾಗಿ ವಿಂಗಡಿಸಿ ಗ್ರಂಥಬದ್ಧವಾಗಿಸುತ್ತಾನೆ. ಇದು ಎರಡನೆಯ ಮಜಲು ; ಈಗ ಒಂದು ದರ್ಶನ ಉದಿಸಿದಂತಾಗುತ್ತದೆ. ಮುಂದೆ ಕೂಲಂಕಷವಾಗಿ ಇವುಗಳ ವಿವರಣೆ, ವಿಸ್ತರಣೆಗಳು 'ವೃತ್ತಿ' ಅಥವಾ 'ವಾರ್ತಿಕ' ಗಳಲ್ಲಿ ನಡೆಯುತ್ತದೆ. ಅದಕ್ಕೂ ಮುಂದೆ ಮೇಲ್ಕಂಡವುಗಳ ಜೊತೆಗೆ ಪರಿಷ್ಕರಣೆ, ಸಂವರ್ಧನೆ, ಪರಮತ ನಿರಾಕರಣೆ ಮುಂತಾದುವನ್ನು ಪೂರ್ವಪಕ್ಷ-ಸಿದ್ಧಾಂತ ಶೈಲಿಯಲ್ಲಿ ವಿಸ್ತಾರವಾಗಿ ಒಳಗೊಳ್ಳುವ ಸರ್ವಾಂಶಗ್ರಾಹಿಗಳಾದ ಭಾಷ್ಯಗಳು ಬರುತ್ತವೆ. ಭಾಷ್ಯದ ಮೇಲೆ ಟೀಕೆಗಳೂ ಟಿಪ್ಪಣಿಗಳೂ ವ್ಯಾಖ್ಯಾನಗಳೂ ಭಿನ್ನ ಕಾಲಗಳಲ್ಲಿ ರಚಿತವಾಗುತ್ತ ಹೊಸ ಹೊಸ ಅಂಶಗಳನ್ನು ಸಂಗ್ರಹಿಸಿಕೊಡುತ್ತವೆ. ಹೀಗೆ ಒಂದೊಂದು ರೀತಿಯ ಗ್ರಂಥಗಳಲ್ಲಿಯೂ ಅನೇಕ ಶತಮಾನಗಳ ವಿಚಾರಧಾರೆಗಳು ಸಮಾವೇಶವಾಗಿರುತ್ತವೆ ಎಂದರೆ ಆಶ್ಚರ್ಯವೇನೂ ಇಲ್ಲ. ಇಪ್ಪತ್ತನೆಯ ಶತಮಾನದಲ್ಲಿಯೂ ಹೊಸ ಟೀಕೆಗಳು ರಚಿತವಾಗುತ್ತಿರುವುದನ್ನು ಕಾಣುತ್ತೇವೆ. ಹೀಗೆ ಹಳೆಯದರ ಚೌಕಟ್ಟಿನಲ್ಲಿ ಕಾಲಾಂತರದ ನೂತನ ವಿಚಾರಗಳನ್ನೂ ಸಮಾವೇಶಗೊಳಿಸುವ ಚಿಂತನಶೈಲಿ ಭಾರತೀಯ ದರ್ಶನಗಳ ವೈಶಿಷ್ಟ್ಯವಾಗಿದೆ.

ಒಂದು ದರ್ಶನಕ್ಕೆ ಮಿಕ್ಕೆಲ್ಲ ದರ್ಶನಗಳೂ ಪೂರ್ವಪಕ್ಷಗಳೆನಿಸುತ್ತವೆ. ಆದರೆ ಮಿಕ್ಕ ದರ್ಶನಗಳು ನಿಸ್ಸಾರವೆಂದು ತಿರಸ್ಕಾರಯೋಗ್ಯವಾಗುವುವೆಂದರ್ಥವಲ್ಲ, ಸಾಂಖ್ಯದರ್ಶನಕ್ಕೆ ವೇದಾಂತದರ್ಶನ ಪೂರ್ವಪಕ್ಷವಾಗುತ್ತದೆ. ಆದ್ದರಿಂದ ವೇದಾಂತದ ವಿಚಾರಕ್ಕೆ ಬೆಲೆ ಕಡಿಮೆಯಾಗದು. ಸಾಂಖ್ಯರ ದೃಷ್ಟಿಕೋನದಿಂದ ನೋಡಿದಾಗ ವೇದಾಂತ ಎಲ್ಲಿ ಬೇರೆ ವಿಚಾರವನು ಒಳಗೊಂಡಿದೆಯೆಂದಷ್ಟೇ ಅದರಿಂದ ಸಿದ್ಧವಾಗುತ್ತದೆ. ಹಾಗೆಯೇ ಪರಮತನಿರಾಕರಣೆಯ ಪ್ರಸಂಗ ಕೇವಲ ಸಿದ್ಧಾಂತದ ಸ್ಪಷ್ಟ ಹಾಗು ನಿರ್ವಿಕಾರ ಪ್ರತಿಪಾದನೆಗೆ ಅಂಗವೇ ಹೊರತು ನಿಂದೆ ಇಲ್ಲವೆ ದೂಷಣೆಗೆಂದು ದರ್ಶನಗಳ ಜಗತ್ತಿನಲ್ಲಿ ಭಾವಿಸುವಂತಿಲ್ಲ. ಹೀಗೆ ಪರಸ್ಪರ ಖಂಡನಮಂಡನೆಗಳು ವ್ಯಕ್ತಿಗತ ದ್ವೇಷಾಸೂಯೆಗಳಿಗೆ ಆಸ್ಪದವೀಯದೆ ಅವ್ಯಾಹತವಾಗಿ ಶತಮಾನಗಳ ಕಾಲ ಸಾಗಿದುದರ ಪರಿಣಾಮವಾಗಿಯೇ ಎಲ್ಲಾ ಶಾಸ್ತ್ರಗಳೂ ಸಮೃದ್ಧವಾಗಿ ಬೆಳೆದಿವೆ, ಬೆಳೆಯುತ್ತಿವೆ. ವಾದಗಳಲ್ಲಿ ಜಯ–ಪರಾಜಯಗಳನ್ನು ನಿರ್ಣಯಿಸುವ "ನಿಗ್ರಹಸ್ಥಾನ" ಮುಂತಾದುವನ್ನೂ ದುರ್ವಾದಗಳ ಪರಿಗಳಾದ ವಿತಂಡಾ, ಛಲ, ಜಾತಿ, ಹೇತ್ವಾಭಾಸ ಮುಂತಾದುವನ್ನೂ ನ್ಯಾಯಶಾಸ್ತ್ರ ಸಮರ್ಥವಾಗಿ ತಿಳಿಸಿ ಹೇಳುತ್ತದೆ. ಎಲ್ಲ ವಾದಿಗಳೂ ಹೀಗೆ ನ್ಯಾಯಶಾಸ್ತ್ರದಲ್ಲಿ ನಿರ್ಣೀತವಾದ ವಾದಸರಣಿಯನ್ನೇ ಅನುಸರಿಸುವುದು ಭಾರತೀಯ ದಾರ್ಶನಿಕರ ಇನ್ನೊಂದು ವೈಶಿಷ್ಟ್ಯವೆನ್ನಬಹುದು.

## ದರ್ಶನಗಳ ಕಾಲವಿಚಾರ

ಸಂಶೋಧಕ–ವಿದ್ವಾಂಸರ ಪ್ರಯತ್ನಗಳು ನಿರಂತರ ನಡೆದಿದ್ದರೂ ದರ್ಶನಗಳ ಕಾಲ

ವಿಚಾರಣೆನ್ನೂ ಬಹುಮಟ್ಟಿಗೆ ಊಹಾಪೋಹದ ಸ್ವರೂಪದಲ್ಲಿಯೇ ಇದೆ. ಕೆಲವೊಂದು ಸೂತ್ರಗಳು ಬ್ರಹ್ಮಸೂತ್ರ, ನ್ಯಾಯಸೂತ್ರ, ಯೋಗಸೂತ್ರ–ಏಕಕಾಲರಚಿತವಲ್ಲ; ಭಿನ್ನಕಾಲರಚಿತ ಸಾಮಗ್ರಿಗಳಿಂದ ತುಂಬಿರತಕ್ಕವು ಎಂಬ ವಾದವೂ ಒಂದು ಪ್ರಚಲಿತವಾಗಿದೆ[1]', ಅದು ನಿಜವಾದರೆ ಒಂದು ಕಾಲದ ನಿರ್ಣಯವೆಂಬುದೇ ಅಸಂಭವ.

ಸೂತ್ರಕಾರರುಗಳ ಬಗೆಗೆ ದೊರೆಯುವ ಐತಿಹ್ಯಗಳು ಕೂಡ ಪೌರಾಣಿಕವ್ಯಕ್ತಿಗಳಿಗೆ ಅನ್ವಯಿಸುವಂತಹ ವಿಷಯಗಳಿಂದ ತುಂಬಿರುತ್ತವೆ ಉದಾ :—ಕಪಿಲಋಷಿ. ಸಾಮಾನ್ಯವಾಗಿ ವ್ಯಾಕರಣ ಮಹಾಭಾಷ್ಯಕಾರ ಪತಂಜಲಿ ಬೇರೆ, ಯೋಗಸೂತ್ರಕಾರ ಪತಂಜಲಿ ಬೇರೆ ಎನ್ನುವುದು ಆಧುನಿಕ ವಿದ್ವಾಂಸರ, ಅಭಿಮತ. 'ಕಣಾದ' 'ಅಕ್ಷಪಾದ' ಇವು ಕಲ್ಪಿತನಾಮಗಳಂತೆ ಭಾಸವಾಗು ತ್ತವೆ. 'ಗೌತಮ', ಬಾದರಾಯಣ' ಇವು ವ್ಯಕ್ತಿನಾಮಗಳಲ್ಲ ; ಗೋತ್ರನಾಮಗಳು. ಜೈಮಿನಿಯ ಬಗೆಗಂತೂ ನಮಗೆ ತಿಳಿದಿರುವುದು ಅತ್ಯಲ್ಪ, ಬೌದ್ಧರಲ್ಲಿ ಕೂಡ 'ನಾಗಾರ್ಜುನ' ಎಂಬ ಹೆಸರಿನವರು ಅನೇಕರು, ಬರುತ್ತಾರೆ. ಜೈನರಲ್ಲಿ ಸಮಂತ ಭದ್ರಾದಿಗಳ ಕಾಲ ಇನ್ನೂ ನಿರ್ದಿಷ್ಟವಾಗಿ ನಿರ್ಣೀತವಾಗಬೇಕಾಗಿದೆ.

ಆದ್ದರಿಂದ ಪ್ರತ್ಯೇಕವಾಗಿ ಸೂತ್ರಕಾರರ ಕಾಲನಿರ್ಣಯ ಇಂದಿನ ವಿದ್ವತ್ತೆಯ ಪರಿಸ್ಥಿತಿ ಯಲ್ಲಿ ಅಶಕ್ಯಪ್ರಾಯವೆಂದರೂ ಸ್ಥೂಲವಾಗಿ ಅವುಗಳ ಉದಯದ ಮೇಲಿನ ಹಾಗೂ ಕೆಳಗಿನ ಮಿತಿಗಳನ್ನು ಕಲ್ಪಿಸಬಹುದು ; ಸ್ವಲ್ಪಮಟ್ಟಿಗೆ ಆಂತರ ಪ್ರಮಾಣಗಳ ಮೇಲಿಂದ ಪೌರ್ವಾ ಪರ್ಯವನ್ನೂ ನಿರ್ದೇಶಿಸಬಹುದು.

ಬುದ್ಧನ ಸಂಭಾಷಣೆಗಳ ಸಂಗ್ರಹಗಳಲ್ಲಿ (ಕ್ರಿ. ಪೂ. ೫ನೆಯ ಶತಮಾನ)—ಬ್ರಹ್ಮಜಾಲ ಸುತ್ತ, ಸಾಮನ್ನಫಲಸುತ್ತ ಇತ್ಯಾದಿ—ಆರು 'ತೀರ್ಥಿಕರ'ರ ಉಲ್ಲೇಖಗಳಿವೆ. ಹಾಗೆಯೇ ಪ್ರಾಚೀನ ಜೈನ ಧರ್ಮಗ್ರಂಥಗಳಾದ 'ಸೂತ್ರಕೃತಾಂಗ', 'ಭಗವತೀಸೂತ್ರ' ಗಳಲ್ಲಿಯೂ ಇದೇ ತೀರ್ಥಕರರ ಉಲ್ಲೇಖವಿದೆ—ಚಾರ್ವಾಕ (ಅಜಿತ ಕೇಶಕಂಬಲ), ಸಾಂಖ್ಯ (ಪೂರಣಕಸ್ಸಪ), ವೈಶೇಷಿಕ (ಪಕುಧ ಕಚ್ಚಾಯನ), ಜೈನ (ನಿಗ್ಗಂಥ ನಾಟಪುತ್ತ) ಆಜೀವಕ (ಮಕ್ಖಲಿ

---

೧ ನೋಡಿ—(a) Belvalkar-The Multiple Authorship of the Vadante Sutras, The Indian Philosophical Review ; II. ೨, ಪು. ೧೪೧-೧೫೪; ಮತ್ತು ಅವರದೇ Basu Mallick Lectures, IV.

(b) Vidyabhushan, History of Indian Logic, ಪು. ೪೯–೬೦

(c) Dasgupta, A History of Indian Philosophy. ೧, ಪು, ೨೩೦

ಗೋಸಾಲ) ಮತ್ತು ಪಾಷಂಡಿ (ಸಂಜಯ ಬೇಳತ್ಥಿಪುತ್ತ). ಇದರ ಮೇಲಿಂದ ಸಾಂಖ್ಯ-ವೈಶೇಷಿಕಾದಿ ಶಾಸ್ತ್ರಗಳ ವಿಚಾರಸರಣಿ ಆಗಲೇ ಆ ವೇಳಗೆ ಆರಂಭವಾಗಿದ್ದಿರಬೇಕೆಂದಾಯಿತು. ಇದು ಕಾಲದ ಮೇಲ್ಮಿತಿ.

ಬ್ರಹ್ಮಸೂತ್ರ, ನ್ಯಾಯಸೂತ್ರ ಇತ್ಯಾದಿಗಳಲ್ಲಿ ಬರುವ ಬೌದ್ಧ ವಾದಗಳ ಉಲ್ಲೇಖ ಕೆಳಗಿನ ಕಾಲ ಮಿತಿಯನ್ನೊದಗಿಸುತ್ತದೆ. ಹೀಗೆ ಎಲ್ಲ ದರ್ಶನಗಳೂ ಸುಮಾರು ಕ್ರಿಸ್ತಪೂರ್ವ ೨ ನೆಯ ಶತಮಾನದಿಂದ ಕ್ರಿಸ್ತಶಕ ೩ ನೆಯ ಶತಮಾನದ ಅವಧಿಯಲ್ಲಿ ಹೆಚ್ಚುಕಡಿಮೆ ಅವುಗಳ ಇಂದಿನ ಸ್ವರೂಪವನ್ನು ಪಡೆದಿರಬೇಕೆಂದು ಊಹಿಸಲಾಗಿದೆ.

ಈ ವಿಷಯದಲ್ಲಿ ವಿಶೇಷಾಧ್ಯಯನ ನಡೆಸಿರುವ ಯಾಕೊಬಿಯ ಅಭಿಪ್ರಾಯ ಹೀಗಿದೆ : "ನ್ಯಾಯದರ್ಶನ ಮತ್ತು ಬ್ರಹ್ಮಸೂತ್ರಗಳು ಕ್ರಿ. ಶ. ೨೦೦ ರಿಂದ ೪೫೦ ರ ಅವಧಿಯಲ್ಲಿ ರಚಿತವಾಗಿವೆ. ಅದೇ ಅವಧಿಯಲ್ಲೇ ಪ್ರಾಚೀನ ದಾರ್ಶನಿಕರಾದ ವಾತ್ಸ್ಯಾಯನ, ಉಪವರ್ಷ. ವಾರ್ತಿಕಕಾರ ಬೋಧಾಯನ ಮತ್ತು ಬಹುಶಃ ಶಬರಸ್ವಾಮಿಗಳು ಬರುತ್ತಾರೆ. ವೈಶೇಷಿಕ ಮತ್ತು ಮೀಮಾಂಸಾ-ಸೂತ್ರಗಳು ಏಕಕಾಲಿಕ ; ಹಾಗೂ ನ್ಯಾಯಸೂತ್ರ ಮತ್ತು ಬ್ರಹ್ಮಸೂತ್ರಗಳಿಗಿಂತ ಸ್ವಲ್ಪ ಹಿಂದಿನವು. ಯೋಗಸೂತ್ರವು ಕ್ರಿ. ಶ. ೪೫೦ ಕ್ಕಿಂತ ಅರ್ವಾಚೀನ ಮತ್ತು ಸಾಂಖ್ಯಸೂತ್ರವು ಇನ್ನೂ ತುಂಬ ಆಧುನಿಕ". ನ್ಯಾಯಸೂತ್ರ ಹಾಗೂ ಬ್ರಹ್ಮಸೂತ್ರಗಳಲ್ಲಿ ಬೌದ್ಧರ ಶೂನ್ಯವಾದದ ಉಲ್ಲೇಖವಿದ್ದು, ಆದರೆ ವಿಜ್ಞಾನವಾದದ ಉಲ್ಲೇಖವಿಲ್ಲ ಎಂಬ ಆಧಾರದ ಮೇಲೆ ಯಾಕೊಬಿಯ ಈ ಕಾಲನಿರ್ಣಯ ನಿಂತಿದೆ. ಆ ಕಾರಣದಿಂದ ಅವು ನಾಗಾರ್ಜುನನಿಗಿಂತ (ಕ್ರಿ. ಶ. ೧೦೦-೧೫೦) ಈಚಿನವು ; ಅಸಂಗನಿಗಿಂತ (ಕ್ರಿ. ಶ, ೩೫೦) ಹಿಂದಿನವು ಎಂದು ಅವನ ತೀರ್ಮಾನ, ಆದರೆ ನಾಗಾರ್ಜುನನ ಕಾಲವೂ ಸಂಶಯಾತೀತವಾಗಿಲ್ಲ.[3] ' ಮತ್ತು ನಾಗಾರ್ಜುನನಿಗಿಂತ ಪೂರ್ವದಲ್ಲಿಯೂ ಶೂನ್ಯವಾದದ ಬೀಜಗಳಿದ್ದವು. ಅಲ್ಲದೆ ನಾಗಾರ್ಜುನನೇ ' ವಿಗ್ರಹವ್ಯಾವರ್ತನೀ ' ಎಂಬ ಗ್ರಂಥದಲ್ಲಿ ನ್ಯಾಯಯುಕ್ತಿಗಳನ್ನು ಉಲ್ಲೇಖಿಸಿದ್ದಾನೆ (೧, ೧-೬ ಮತ್ತು ೨೦). ಹಾಗೆಯೇ ವಿಜ್ಞಾನವಾದವೂ ಬ್ರಹ್ಮಸೂತ್ರಗಳಲ್ಲಿ ಪರಾಮೃಷ್ಟವಾಗಿದೆಯೆಂದು ಭಾಷ್ಯಕಾರರು ತಿಳಿಯುತ್ತಾರೆ. ೨.೨.೨೭-೨೯ರಲ್ಲಿ ಎಂದು ರಾಮಾನುಜರು ತಿಳಿದರೆ ೨. ೨, ೨೮-೩೧ರಲ್ಲಿ ಎಂದು ಶಂಕರರು ತಿಳಿಯುತ್ತಾರೆ.

---

೨ Journal of the American Oriental Society, xxxi, ಪು. ೨೯ — "The Dates of the philosophical sutras of the Brahmans."

೩ 'ನಾಗಾರ್ಜುನನು ೨ನೆಯ ಶತಮಾನದ ಉತ್ತರಾರ್ಧದಲ್ಲಿದ್ದನೆನ್ನುವುದು ಒಂದು ಊಹೆ ಮಾತ್ರ' —Winternitz, History of Indian Literature, ೨. ಪು. ೩೪೨

ಹೀಗೆ ಪರಸ್ಪರ ಉಲ್ಲೇಖಿಗಳಿರುವ ನಾನಾ ದರ್ಶನಶಾಸ್ತ್ರಗಳೂ ಹೆಚ್ಚು ಕಡಿಮೆ ಒಂದೇ ಕಾಲದಲ್ಲಿ ವಿಕಾಸಗೊಳ್ಳುತ್ತ ಹೋದವೆಂದು ಭಾವಿಸುವುದೇ ಹೆಚ್ಚು ಸಮಂಜಸವೆನಿಸುತ್ತದೆ. ಇತ್ತೀಚಿನ ವಿದ್ವಾಂಸರು ವಾತ್ಸ್ಯಾಯನಭಾಷ್ಯವನ್ನು ಕ್ರಿ. ಶ. ೪೫೦–೫೦೦ರ ಮತ್ತು ಪ್ರಶಸ್ತಪಾದಭಾಷ್ಯವನ್ನು ಕ್ರಿ.ಶ. ೫೦೦ ರಿಂದ ೬೦೦ರ ಅವಧಿಯಲ್ಲಿ ತಂದಿದ್ದಾರೆ[4].

ಈಗ ದರ್ಶನಗಳ ಪೌರ್ವಾಪರ್ಯವನ್ನೂ ಹೀಗೆ ನಿರ್ದೇಶಿಸಬಹುದು. ಎಲ್ಲಕ್ಕಿಂತ ಪ್ರಾಚೀನ ದರ್ಶನ ಸಾಂಖ್ಯವೆಂಬುದನ್ನು ಸಕಲರೂ ಒಪ್ಪುತ್ತಾರೆ. ಇದೇ ಇತಿಹಾಸಯುಗದಲ್ಲೂ ಬುದ್ಧಪೂರ್ವಿಕಯುಗದಲ್ಲೂ ಪ್ರಬಲವಾಗಿದ್ದಿತು; ಅದು ಸೇಶ್ವರವೂ ಇದ್ದಿತು. ಬೌದ್ಧ ದರ್ಶನಗಳನ್ನೂ ಸೇರಿಸಿಮಿಕ್ಕೆಲ್ಲ ದರ್ಶನಗಳೂ ಸಾಂಖ್ಯವನ್ನು ಉಲ್ಲೇಖಿಸಿವೆ; ಆದರೆ ಪ್ರಾಚೀನ ಸೇಶ್ವರ ಸಾಂಖ್ಯ ಮತ್ತಾವ ದರ್ಶನವನ್ನೂ ಉಲ್ಲೇಖಿಸಿಲ್ಲ. ಸಾಂಖ್ಯದ ಬಳಿಕ ವೈಶೇಷಿಕದ ಪ್ರಾಚೀನ ಹೆಚ್ಚಿನದೆನ್ನಬೇಕು. ಅದರಲ್ಲಿ ಕೂಡ ಬೌದ್ಧರ ವಾದಗಳ ಪ್ರಸ್ತಾವವಿಲ್ಲ. ಅದರ ಅನುಮಾನ ಪ್ರಕ್ರಿಯೆ ನ್ಯಾಯದ ಅನುಮಾನಪ್ರಕ್ರಿಯೆಯಷ್ಟು ವಿಕಸಿತವಾಗಿಲ್ಲ; ಅದರ ಭಾಷೆ ಹಾಗೂ ಪರಿಭಾಷೆಗಳೂ ಪ್ರಾಚೀನತೆಯನ್ನೇ ನಿರ್ದೇಶಿಸುತ್ತವೆ. ಮುಂದೆ ಕ್ರಮವಾಗಿ ನ್ಯಾಯ ದರ್ಶನ, ಬ್ರಹ್ಮಸೂತ್ರಗಳು ಬರುತ್ತವೆ. ಯೋಗಸೂತ್ರವೇ ಎಲ್ಲಕ್ಕಿಂತ ಕಡೆಯದು.

## ಭಾರತೀಯ ದರ್ಶನಗಳಲ್ಲಿರುವ ಸಮಾನಾಂಶಗಳು

(೧) ಜಗತ್ತಿನ ಸತ್ಯತ್ವ :—ಚಾರ್ವಾಕ, ಬೌದ್ಧ ಸರ್ವಾಸ್ತಿವಾದ, ಜೈನ, ನ್ಯಾಯ-ವೈಶೇಷಿಕ ಸಾಂಖ್ಯಯೋಗ ಎಲ್ಲರೂ ಪಾರಮಾರ್ಥಿಕ ಸತ್ಯತ್ವವನ್ನು ಹೇಳಿದರೆ, ವಿಜ್ಞಾನವಾದ, ಶೂನ್ಯವಾದ, ಅದ್ವೈತ ವೇದಾಂತಗಳು ಜಗತ್ತಿನ ವ್ಯಾವಹಾರಿಕ ಸತ್ಯತ್ವವನ್ನು ಹೇಳುತ್ತವೆ. ಪರಮಾರ್ಥ ಚಿಂತನಾರಹಿತರಾದವರಿಗೆ ಸಾಮಾನ್ಯವಾಗಿ ಯಾರೂ ಇದನ್ನು ಅಲ್ಲಗಳೆಯುವುದಿಲ್ಲವೆನ್ನುವುದು ಜೀವನ ನಡೆಸಲು ಸಾಕಾಗುತ್ತದೆ.

(೨) ಜಗತ್ತು ಕಾಲ–ದೇಶ ಹಾಗೂ ಕಾರ್ಯಕಾರಣಭಾವದಿಂದ ನಿಯತವಾದುದು. ಪ್ರತಿಯೊಂದು ವಸ್ತುವಿಗೂ ಉತ್ಪತ್ತಿ-ವಿನಾಶಗಳುಂಟು. ಕಾರ್ಯಕಾರಣಭಾವದಲ್ಲಿ ನೂತನೋತ್ಪತ್ತಿಯನ್ನು ಹೇಳುವ ಆರಂಭವಾದವಿರಬಹುದು; ಇಲ್ಲವೆ ಕಾರಣದಲ್ಲೇ ಕಾರ್ಯವು ಸತ್ತಾಗಿರುವುದೆಂಬ ಸತ್ಕಾರ್ಯವಾದ ಇಲ್ಲವೆ ಪರಿಣಾಮವಾದವಿರಬಹುದು ; ಅಥವಾ ಕಾರಣದ ವಿವರ್ತಕಾರ್ಯವೆಂಬ ವಿವರ್ತವಾದವಿರಬಹುದು. ಏನಿದ್ದರೂ ವಸ್ತುಗಳು ಕಾರ್ಯಕಾರಣ ಸಂಬಂಧದಿಂದ ನಿಯತವಾಗಿರುವ ಅಂಶ ಎಲ್ಲ ದರ್ಶನಗಳಿಗೂ ಸಮಾನ.

---

೪. G.R.F. Oberhammer ; Potter Eneyclopaedia of Indian Philosophies, vol. II. Delhi, 1977. p. 9. ಮತ್ತು E Frauwallner ; Potter Bibliography of Indian Philosophies, I Delhi, 1970, No. 1049.

(೩) ಆತ್ಮನ ಅಸ್ತಿತ್ವ ; ಚಾರ್ವಾಕರು ಚೈತನ್ಯಯುಕ್ತ ಶರೀರವನ್ನೇ ಆತ್ಮವೆನ್ನುತ್ತಾರೆ; ಬೌದ್ಧರು ಕ್ಷಣಿಕ ಆತ್ಮ (ಪುಗ್ಗಲ)ವನ್ನು ಒಪ್ಪುತ್ತಾರೆ, ಇಲ್ಲವೆ ಕ್ಷಣಿಕ ವಿಜ್ಞಾನಗಳ ಸಂತಾನವನ್ನು ಆತ್ಮವೆನ್ನುತ್ತಾರೆ. ಜ್ಞಾನ, ಇಚ್ಛೆ, ಕ್ರಿಯೆಗಳಿಗೆ ಆಶ್ರಯವಾದ ಆತ್ಮನನ್ನು ಜೈನರೂ ಒಪ್ಪುತ್ತಾರೆ. ಮಿಕ್ಕ ಆಸ್ತಿಕದರ್ಶನಗಳೆಲ್ಲ ನಿತ್ಯವಸ್ತುವಾದ ಆಧ್ಯಾತ್ಮಿಕ ಅನುಭವ ವೇದ್ಯನಾದ ಆತ್ಮನನ್ನು ಸ್ವೀಕರಿಸುತ್ತವೆ. ಬುದ್ಧಿ-ಸುಖ-ದುಃಖ-ಇಚ್ಛಾದ್ವೇಷಾದಿ ಗುಣಗಳಿಂದ ಸಮನ್ವಿತವಾದ ನಿತ್ಯದ್ರವ್ಯ ನ್ಯಾಯ-ವೈಶೇಷಿಕರ ಆತ್ಮ. ಜ್ಞಾನ ಆಗಂತುಕವೇ ಹೊರತು ಆತ್ಮನಿಗೆ ನೈಸರ್ಗಿಕವಲ್ಲ. ಪೂರ್ವಮೀಮಾಂಸಕರದೂ ಅದೇ ಅಭಿಪ್ರಾಯ. ಸ್ವಪ್ನಸುಷುಪ್ತಿಗಳಲ್ಲಿ ಆತ್ಮನಿಗೆ ಜ್ಞಾನವಿರುವುದಿಲ್ಲ. ಆದರೆ ಸಾಂಖ್ಯ-ಯೋಗದಲ್ಲಿ ಆತ್ಮ ಸ್ವಯಂಪ್ರಕಾಶ ಚೈತನ್ಯಸ್ವರೂಪ ; ಜ್ಞಾನ ಆತ್ಮನ ಸ್ವಭಾವವೇ ವಿನಾ ಆಗಂತುಕಗುಣವಲ್ಲ. ಇಚ್ಛೆ-ಕ್ರಿಯೆಗಳು ಬುದ್ಧಿಗುಣಗಳು, ಪುರುಷಗುಣಗಳಲ್ಲ. ಪ್ರಕೃತಿಯ ಗುಣಗಳಿಗೆ ಕೇವಲ ಸಾಕ್ಷಿಯಾಗಿರತಕ್ಕವನು ಸಾಂಖ್ಯಪುರುಷ. ಈ ಎಲ್ಲ ದರ್ಶನಗಳು ಆತ್ಮಬಹುತ್ವವನ್ನು ಕೂಡ ಅಂಗೀಕರಿಸುತ್ತವೆ. ಆದರೆ ಸಚ್ಚಿದಾನಂದಸ್ವರೂಪವಾದ ಒಂದೇ ಆತ್ಮವನ್ನು ಅದ್ವೈತ ವೇದಾಂತ ಹೇಳುತ್ತದೆ; ಅವಿದ್ಯೋಪಹಿತವಾದ ಅದ್ವಯಾತ್ಮನೇ ಜೀವನೆನಿಸಿ ಬಹುತ್ವಭ್ರಮೆ ಬರುತ್ತದೆಂದು ಆ ದರ್ಶನದ ಅಭಿಪ್ರಾಯ. ಜೀವನಿಗೆ ವ್ಯಾವಹಾರಿಕ ಸತ್ಯತ್ವಮಾತ್ರ. ಜೀವನಿಗೆ ಪಾರಮಾರ್ಥಿಕ ಸತ್ಯತ್ವವನ್ನೂ ಹೇಳಿ ಬ್ರಹ್ಮನ ಅಂಶವೇ ಎನ್ನುವುದು ವಿಶಿಷ್ಟಾದ್ವೈತ. ಸ್ವತಂತ್ರನಾದ ಬ್ರಹ್ಮನಿಗೆ ಅಧೀನವಾಗಿರುವ ಜೀವರೇ ಆತ್ಮರೆನ್ನುವುದು ದ್ವೈತ.

ಸಾಂಖ್ಯ, ಮೀಮಾಂಸಾ ದರ್ಶನಗಳು ನಿರೀಶ್ವರವಾದರೂ ಜೀವನ ಬಂಧಮೋಕ್ಷಗಳನ್ನು ಒಪ್ಪುತ್ತವೆ. ಜೈನದರ್ಶನವೂ ನಿರೀಶ್ವರವೇ ; ಆದರೆ ನಿತ್ಯ ಆತ್ಮರ ಬಂಧಮೋಕ್ಷಗಳನ್ನು ಅದೂ ಸ್ವೀಕರಿಸುತ್ತದೆ. ಹೀಗೆ ಭಾರತೀಯ ದರ್ಶನಗಳಲ್ಲಿ ಈಶ್ವರವಾದಕ್ಕಿಂತ (Theism) ಆತ್ಮವಾದಕ್ಕೆ (Absolutism) ಹೆಚ್ಚಿನ ಪ್ರಾಶಸ್ತ್ಯವಿದೆ.

## ೪. ಕರ್ಮ-ನಿಯಮ

ಚಾರ್ವಾಕರನ್ನು ಬಿಟ್ಟು ಎಲ್ಲಾ ದಾರ್ಶನಿಕರೂ ಕರ್ಮನಿಯಮವನ್ನು ಒಪ್ಪುತ್ತಾರೆ. ನಾವು ಬಿತ್ತಿದ್ದನ್ನೇ ನಾವು ಬೆಳೆಯುತ್ತೇವೆ. ಸತ್ಕಾರ್ಯದಿಂದ ಸತ್ಫಲ, ದುಷ್ಕಾರ್ಯದಿಂದ ದುಷ್ಫಲ ತಪ್ಪಿದ್ದಲ್ಲ. ವಿಹಿತಾಚರಣೆಯಿಂದ ಪುಣ್ಯ, ನಿಷಿದ್ಧ ಆಚರಣೆಯಿಂದ ಪಾಪ, ಪುಣ್ಯದಿಂದ ಸುಖಪ್ರಾಪ್ತಿ, ಪಾಪದಿಂದ ದುಃಖಲಬ್ಧಿ. ಪಾಪಪುಣ್ಯಗಳು ಕಣ್ಣಿಗೆ ಕಾಣದ 'ಅದೃಷ್ಟ'; ಆದರೂ ಇಹಜನ್ಮದಲ್ಲಿ ಇಲ್ಲವೆ ಜನ್ಮಾಂತರದಲ್ಲಿ ಅವು ಫಲಿಸಿಯೇ ತೀರುತ್ತವೆ. 'ಕೃತಪ್ರಣಾಶ'ಕ್ಕಾಗಲಿ 'ಅಕೃತಾಭ್ಯಾಗಾಮ'ಕ್ಕಾಗಲಿ ಅವಕಾಶವೇ ಇಲ್ಲ. ಈಶ್ವರನಿರಪೇಕ್ಷವಾದ ಕರ್ಮವಾದವು ಬೌದ್ಧ, ಜೈನ, ಸಾಂಖ್ಯ, ಮೀಮಾಂಸಕರದು. ಈಶ್ವರನಿಯತ ಕರ್ಮವಾದವು ಮಿಕ್ಕವರದು, ಇವರ ಪ್ರಕಾರ ಪ್ರಾರಬ್ಧ, ಸಂಚಿತ, ಆಗಾಮಿ ಎಂದು, ಕರ್ಮ ತ್ರಿವಿಧ,

### ೫. ಜನ್ಮಾಂತರ ಪ್ರಾಪ್ತಿ

ಇದು ಕರ್ಮ-ನಿಯಮದ ಇನ್ನೊಂದು ಅವಿಭಾಜ್ಯ ಪರಿಣಾಮ. ಹುಟ್ಟಿ-ಸತ್ತು-ಪುನಃ ಹುಟ್ಟಲೇ ಬೇಕಾಗುವುದು ಕರ್ಮಫಲ. ಇದೇ ಸಂಸಾರ. ಬೌದ್ಧರು ಆತ್ಮನ ಬದಲು ವಿಜ್ಞಾನಸಂತಾನಗಳಿಗೆ ಸಂಸ್ಕೃತಿಯನ್ನೊಪ್ಪುತ್ತಾರೆ. ಚಾರ್ವಕರು ಮಾತ್ರ ಇದನ್ನು ಒಪ್ಪುವುದಿಲ್ಲ.

### ೬. ಸಂಸಾರ

ಜನ್ಮ-ಜನ್ಮಾಂತರಗಳ ವಿಷಚಕ್ರವೇ ಸಂಸಾರ. ಹುಟ್ಟುಸಾವುಗಳ ಅನಾದಿ ಸಂತಾನವೇ ಅದು. ಈ ಕಾಲ-ದೇಶ-ನಿಯುತವಾದ ಜಗತ್ತಿನಲ್ಲಿ ಬಂಧನವೆಂದರೂ ಅದೇ. ಅದರ ಕಾರಣ ಅವಿದ್ಯಾ ಅಥವಾ ಮಿಥ್ಯಾಜ್ಞಾನ. ಸಾಂಖ್ಯರು ಅದನ್ನು ಪುರುಷ-ಪ್ರಕೃತಿಗಳ 'ಅವಿವೇಕ' ವೆಂದರೆ, ನಿತ್ಯವಾದ ಆತ್ಮ ತಾನು ಅನಿತ್ಯವಾದ ದೇಹಾದಿಗಳೇ ಎಂದು ಭ್ರಮಿಸುವುದರಿಂದ ಎಂದು ಮಿಕ್ಕ ದರ್ಶನಗಳು ಹೇಳುತ್ತವೆ. ರಾಗದ್ವೇಷದುಃಖಾದಿಗಳೆಲ್ಲ ಅವಿದ್ಯಾಮೂಲವೆಂಬುದು ನ್ಯಾಯಕ್ಕೂ ಸಮ್ಮತ ; ಬೌದ್ಧರಿಗೂ ಸಮ್ಮತ.

### ೭. ಮೋಕ್ಷ

ಸಂಸಾರವು ದುಃಖವೆಂದು ನಿರಾಶಾವಾದವನ್ನು ಪುರಸ್ಕರಿಸಿದಂತೆ ಹೊರನೋಟಕ್ಕೆ ಕಂಡರೂ, ಅದರಿಂದ ಬಿಡುಗಡೆಯಿದೆಯೆನ್ನುವ ಆತ್ಯಂತಿಕ ಆಶಾವಾದವೇ ಭಾರತೀಯ ದಾರ್ಶನಿಕರ ಹೃದಯ ; ಇದರ ವಿವರಣೆಯ ಸೂಕ್ಷ್ಮಾಂಶಗಳಲ್ಲಿ ಭಿನ್ನತೆಯಿದ್ದರೂ ಮನುಷ್ಯನಿಗೆ ಸಂಸಾರದಿಂದ ಮೋಕ್ಷವಿದೆಯೆಂಬುದನ್ನು ಎಲ್ಲ ದಾರ್ಶನಿಕರೂ ಒಪ್ಪುತ್ತಾರೆ.

### ೮. ಮೋಕ್ಷಸಾಧನಗಳು

ಸಮ್ಯಕ್ಜ್ಞಾನ ಮೋಕ್ಷಸಾಧನವೆಂಬುದು ಪ್ರಾಯಿಕವಾಗಿ ಎಲ್ಲ ದರ್ಶನಗಳಿಗೂ ಸಮ್ಮತವಾಗಿದೆ. ಚಿತ್ತಶುದ್ಧಿಗಾಗಿ ಕರ್ಮನಿಷ್ಠೆ, ಭಕ್ತಿ, ಪ್ರಪತ್ತಿ, ಯೋಗಸಾಧನೆ, ಮುಂತಾದುವನ್ನೂ ಒಪ್ಪುತ್ತಾರೆ. ಮೋಕ್ಷವೇ ಪರಮಪುರುಷಾರ್ಥವಾದರೂ, ಲೌಕಿಕ ಅರ್ಥ, ಧರ್ಮ, ಕಾಮಗಳನ್ನೂ ದಾರ್ಶನಿಕರೂ ಮಾನ್ಯಮಾಡುತ್ತಾರೆ.

### ೯. ಪ್ರಮಾಣಗಳು

ಎಲ್ಲ ದರ್ಶನಗಳಲ್ಲಿಯೂ ಪ್ರಾಮಾಣ್ಯವಿಚಾರ ಶಾಸ್ತ್ರೀಯವಾಗಿ ವ್ಯವಸ್ಥೆಗೊಳ್ಳುತ್ತದೆ. ಚಾರ್ವಾಕರು ಪ್ರತ್ಯಕ್ಷವೊಂದನ್ನು ಪ್ರಮಾಣವೆಂದರೆ ಬೌದ್ಧರೂ ವೈಶೇಷಿಕರೂ ಅದರ ಜತೆಗೆ ಅನುಮಾನವನ್ನೂ ಹೇಳಿ ಎರಡು ಪ್ರಮಾಣಗಳನ್ನೊಪ್ಪುತ್ತಾರೆ. ಮೂರನೆಯದಾದ ಶಬ್ದ ಪ್ರಮಾಣವನ್ನು ಸಾಂಖ್ಯರೂ, ನಾಲ್ಕನೆಯದಾಗಿ ಉಪಮಾನವನ್ನು ನೈಯಾಯಿಕರೂ ಐದನೆಯದಾಗಿ 'ಅರ್ಥಾಪತ್ತಿ' ಯನ್ನು ಪ್ರಭಾಕರರೂ, ಕುಮಾರಿಲಭಟ್ಟ ಹಾಗೂ ಅದ್ವೈತ ವೇದಾಂತಿಗಳು ಆರನೆಯದಾಗಿ ಅನುಪಲಬ್ಧಿಯನ್ನೂ ಪ್ರಮಾಣವೆಂದು ಸ್ವೀಕರಿಸುತ್ತಾರೆ. ಎಲ್ಲರೂ ಪ್ರಮಾಣಗಳ ಸ್ವರೂಪ, ವಿಷಯ, ಲಕ್ಷಣಗಳನ್ನು ಚರ್ಚಿಸುತ್ತಾರೆ.

ದಾರ್ಶನಿಕರ ಮತಭೇದಗಳ ವಿವರಣೆ ಬುದ್ಧಿವೈಶದ್ಯಕ್ಕಾಗಿ ಹೆಚ್ಚಿನ ಪ್ರಮಾಣದಲ್ಲಿ ಬಂದರೂ, ಮೂಲವಿಚಾರಗಳಲ್ಲಿರುವ ಸಾಮ್ಯವನ್ನು ಮರೆಯಬಾರದು.

## ದರ್ಶನಗಳು ಮತ್ತು ಇತರ ಶಾಸ್ತ್ರಗಳು

### ೧. ಧರ್ಮಶಾಸ್ತ್ರ

'ಮನುಸ್ಮೃತಿ' ಮುಂತಾದ ಧರ್ಮ-ಶಾಸ್ತ್ರಗ್ರಂಥಗಳಲ್ಲಿಯೂ ಪ್ರಾಚೀನ-ಸಾಂಖ್ಯ ಹಾಗೂ ಔಪನಿಷದ ದರ್ಶನಗಳ ಪ್ರಭಾವವನ್ನು ನೋಡಬಹುದು. ಮಹಾಭಾರತ-ಪುರಾಣ ಗಳಂತೆ ಮನುಸ್ಮೃತಿಯೂ ಸೇಶ್ವರಸಾಂಖ್ಯವನ್ನೇ ಹೆಚ್ಚಾಗಿ ಪ್ರತಿಪಾದಿಸುತ್ತದೆ. ಅವನು ಹೇಳುವ ಸೃಷ್ಟಿಪ್ರಕ್ರಿಯೆ ಋಗ್ವೇದ ಪುರುಷಸೂಕ್ತದ ಪ್ರತಿಬಿಂಬವಾಗಿದೆ. ಮೋಕ್ಷಕ್ಕೆ ಉಪ ಯೋಗಿಯಾದ 'ಧರ್ಮ'ದ ವಿವೇಚನೆಯೇ ಮನುವಿನ ಗುರಿಯೆಂದರೂ ಸಲ್ಲುತ್ತದೆ. "ಸರ್ವಂ ಪರವಶಂ ದುಃಖಂ ಸರ್ವಮಾತ್ಮವಶಂ ಸುಖಮ್ (೪. ೧೬೦)" ಎಂಬ ಮಾತು 'ಆತ್ಮ' ಜ್ಞಾನದ ಪ್ರಶಂಸೆಯೇ. ನೀತಿಸಂಹಿತೆಗೆಲ್ಲ ಆತ್ಮೈಕತ್ವವೇ ಮೂಲ ಕಾರಣವೆಂಬುದನ್ನು ಅಲ್ಲಿ ನೋಡು ತ್ತೇವೆ. ಸರ್ವವೂ 'ಆತ್ಮ'ವೇ. ಆದುದರಿಂದಲೇ 'ಸರ್ವಸ್ಯ ಹಿತಪ್ರೇಪ್ಸುಃ ಸುಖಮತ್ಯಂತ ಮಶ್ನುತೇ' (೫. ೪೬) ಎಂಬುದು ಸಾರ್ಥಕವೆನಿಸುತ್ತದೆ. ಇದನ್ನೇ ಇನ್ನೂ ಸ್ಪಷ್ಟವಾಗಿ ಘೋಷಿಸುವ ಮನುವಚನಗಳಿವು :

೧. ಸರ್ವಭೂತೇಷು ಚಾತ್ಮಾನಂ ಸರ್ವಭೂತಾನಿ ಚಾತ್ಮನಿ ।
ಸಮಂ ಪಶ್ಯನ್ನಾತ್ಮಯಾಜೀ ಸ್ವಾರಾಜ್ಯಮಧಿಗಚ್ಛತಿ ॥ (೧೨. ೯೧)

೨. ವಿದ್ಯಯಾಮೃತಮಶ್ನುತೇ (೧೨. ೧೦೪ ; ಹೋಲಿಸಿ ಈಶ ಉಪನಿಷತ್ ೨)

೩. ಸಮ್ಯಗ್ದರ್ಶನಸಂಪನ್ನಃ ಕರ್ಮಭಿರ್ನ ನಿಬಧ್ಯತೇ ।
ದರ್ಶನೇನ ವಿಹೀನಸ್ತು ಸಂಸಾರಂ ಪ್ರತಿಪದ್ಯತೇ ॥
(೬. ೭೪ ; ಹೋಲಿಸಿ-ಮುಂಡಕ ಉಪನಿಷತ್ ೩. ೧-೫)

ಭಗವದ್ಗೀತೆಯಲ್ಲಿಯೂ ಇದೇ ಬಗೆಯ ಅಭಿಪ್ರಾಯಗಳಿರುವುದು ಸುವಿದಿತ.

### ೨. ಅಲಂಕಾರಶಾಸ್ತ್ರ

ಅಲಂಕಾರ ಶಾಸ್ತ್ರದಲ್ಲೆಲ್ಲ ಮೂರ್ಧನ್ಯವಾದುದು ರಸಪ್ರಕ್ರಿಯೆ. ಇದಕ್ಕೂ ತೈತ್ತಿರೀಯ ಉಪನಿಷತ್ತಿನಲ್ಲಿ ಬರುವ "ರಸೋ ವೈ ಸಃ ರಸಂ ಹ್ಯೇವಾಯಂ ಲಬ್ಧ್ವಾನಂದೀ ಭವತಿ ೨.೭-೧) ಎಂಬ ವಾಕ್ಯಕ್ಕೂ ಸಮನ್ವಯವನ್ನು ಜಗನ್ನಾಥಪಂಡಿತನೇ ಮೊದಲಾದ ಅಲಂಕಾರಿಕರೇ ಸೂಚಿಸಿದ್ದಾರೆ. ಕಾವ್ಯರಸವು ಬ್ರಹ್ಮಾಸ್ವಾದಸಹೋದರವೆನ್ನುವವರು ಸಾಂಖ್ಯರ ಸತ್ವಗುಣದ ಉದ್ರೇಕದಿಂದ ತಾತ್ಕಾಲಿಕವಾಗಿ ವಿಗಲಿತವೇದ್ಯಾಂತರವಾದ, ಸ್ವಪ್ರಕಾಶಾನಂದಚಿನ್ಮ ವಾದ ರಸಾನುಭವವು ಒದಗುವುದೆಂದು ವ್ಯಾಖ್ಯಾನಿಸುವರು. ನಿಜವಾಗಿ ದುಷ್ಯಂತಾದಿಗಳಿಗೆ ಮಾತ್ರ ವಿಭಾವಾದಿಗಳಾದ ಶಕುಂತಲಾದಿಗಳಲ್ಲಿ ಸಾಮಾಜಿಕರಿಗೆ ತನ್ಮಯೀಭವನ ಇಲ್ಲವೆ ಸಾಧಾರಣೀಕರಣ ಹೇಗೆ ಸಾಧ್ಯವೆಂದು ವಿವರಿಸುವ 'ನವ್ಯ' ಆಲಂಕಾರಿಕರು ಅದನ್ನು ಭಾವ ನಾಖ್ಯ ದೋಷವೆಂದೇ ವಿವರಿಸುವಾಗ ಅದ್ವೈತದರ್ಶನದ ಪೂರ್ಣಪ್ರಭಾವ ಎದ್ದು ಕಾಣುತ್ತದೆ.

ಹಾಗೆಯೇ ಪ್ರಾಚೀನಾಲಂಕಾರಿಕರು ಗುಣಗಳ, ದೋಷಗಳ, ಸಂಖ್ಯೆ ೧೦ ಎನ್ನುವಾಗ ಇಲ್ಲವೆ ನವೀನಾಲಂಕಾರಿಕರು ಗುಣಗಳು ೩ ಎನ್ನುವಾಗ, ರೀತಿಗಳು ೩ ಎನ್ನುವಾಗ ದೋಷ ಅನೌಚಿತ್ಯವೊಂದೇ ಎನ್ನುವಾಗ, ಅದರ ಹಿನ್ನಲೆಯಲ್ಲಿ ಸಾಂಖ್ಯರ ದಶೇಂದ್ರಿಯಗಳ, ತ್ರಿಗುಣಗಳ, ಪ್ರಕೃತಿಯ ಐಕ್ಯದ ಸೂಚ್ಯಪ್ರಭಾವವಿದ್ದಿರಬಹುದು. ಸುಸ್ಪಷ್ಟವಾಗಿ ಪರಮಪುರುಷಾರ್ಥವಾದ ಮೋಕ್ಷದ ಕಲ್ಪನೆಗೆ ಅನುಗುಣವಾಗಿರಬೇಕೆಂಬ ಒಂದೇ ಕಾರಣದಿಂದ ಅಲಂಕಾರ ಶಾಸ್ತ್ರಕಾರರು ೯ ನೆಯದಾಗಿ ಅಳವಡಿಸಿಕೊಂಡಿರುವ ಶಾಂತರಸ ವೇದಾಂತದ ಪ್ರಭಾವಕ್ಕೆ ಎಲ್ಲಕ್ಕೂ ಹೆಚ್ಚಿನ ಉದಾಹರಣೆಯಾಗಿದೆ. ಇದನ್ನು ಆನಂದವರ್ಧನನು ಕಂಠೋಕ್ತವಾಗಿಯೇ ಒಪ್ಪಿದ್ದಾನೆ. ಅಭಿನವಗುಪ್ತನು ವಿಸ್ತಾರವಾಗಿ ವಿವರಿಸಿದ್ದಾನೆ.

## ಭಾರತೀಯ ಜ್ಯೋತಿಷ್ಯಶಾಸ್ತ್ರ : ಇದು ಗ್ರೀಕರಿಂದ ಪ್ರಭಾವಿತವೆ ?

ನಮ್ಮ ಪ್ರಾಚೀನ ನಾಟಕಗಳು, ಕಾವ್ಯಗಳು, ಶಾಸ್ತ್ರಗಳು, ವೈದ್ಯ ಎಲ್ಲವೂ ಗ್ರೀಕ್ ಪ್ರಭಾವದಿಂದಲೇ ಹುಟ್ಟಿದುವೆಂಬ ವಾದವನ್ನು ಹತ್ತೊಂಬತ್ತನೆಯ ಶತಮಾನದ ಜರ್ಮನ್ ವಿದ್ವಾಂಸರು ವಿಶೇಷವಾಗಿ ಮುಂದೆ ಮಾಡಿದರು. ಇದರಿಂದ ಭಾರತೀಯ ಸಂಸ್ಕೃತಿಯ ಹಿರಿಮೆ ಕ್ಷೀಣಿಸುವುದೆಂದು ಅವರು ಭಾವಿಸಿದ್ದರೊ ಏನೋ ! ಆದರೆ ಮುಂದಿನ ಸಂಶೋಧಕರ ವಿವೇಚನೆಗಳಿಂದಾಗಿ ಈ ಗ್ರೀಕ್ ಪ್ರಭಾವವೊಂದು ಸುಳ್ಳಿನ ಕಂತೆಯೆಂದು ತೀರ್ಮಾನಿಸಲಾಗಿದೆ. ಹಾಗಿದ್ದರೂ ಜ್ಯೋತಿಷ್ಯಶಾಸ್ತ್ರದಲ್ಲಿ ಮಾತ್ರ ಸುಸ್ಪಷ್ಟವಾಗಿ ಗ್ರೀಕ್ ಶಬ್ದಗಳೇ ಸಂಸ್ಕೃತ ರೂಪಿನಲ್ಲಿ ಬೇಕಾದಹಾಗೆ ಬರುವುದನ್ನು ಗಮನಿಸಿ, ವರಾಹಮಿಹಿರನ ಬೃಹತ್ಸಂಹಿತೆಯಲ್ಲಿ ಸ್ಪಷ್ಟವಾಗಿಯೇ–

"ಮ್ಲೇಚ್ಛಾಹಿ ಯವನಾಸ್ತೇಷು ಸಮ್ಯಕ್ ಶಾಸ್ತ್ರಮಿದಂ ಸ್ಥಿತಮ್ ।
ಋಷಿವತ್ತೇಪಿ ಪೂಜ್ಯನ್ತೇ ಕಿಂ ಪುನರ್ದೈವವಿದ್ ದ್ವಿಜಃ ॥ (೨.೧೫)

ಎಂಬ ಗರ್ಗವಚನವನ್ನು ಉಲ್ಲೇಖಿಸಿರುವುದನ್ನು ಪ್ರಮಾಣಿಸಿ ಗ್ರೀಕ್ ಪ್ರಭಾವವನ್ನು ಈ ಒಂದು ಶಾಸ್ತ್ರವಿಷಯದಲ್ಲಾದರೂ ಸ್ವೀಕರಿಸಲೇಬೇಕಾಗುವುದೆಂಬ ಎ. ವೆಬರ್ ಅವರ ವಾದವು ಕೂಡ * ಅತ್ಯಂತ ನಿಸ್ಸಾರವಾಗಿದೆಯೆಂದು ಈಚಿನ ಸಂಶೋಧಕರಿಂದ ವ್ಯಕ್ತಪಟ್ಟಿದೆ. ಇವರಲ್ಲಿ ಮುಖ್ಯರಾದವರು ಡಿ. ಡಿ. ಮೆಹ್ತಾ[1].

---

* Albrecht weber, the History of Indian Literature, P. 253 f.

೧. Positive science in the Vedas, New Delhi, 1974 (Arnold Heinemann),

ಶಂ. ಬಾ. ದೀಕ್ಷಿತ[2], ಮತ್ತು ಮಹಾಮಹೋಪಾಧ್ಯಾಯ ಪಿ. ವಿ. ಕಾಣೆ[3] ಅವರು.

ಭಾರತೀಯ ಜ್ಯೋತಿಷ್ಯದಲ್ಲಿ ಉಕ್ತವಾಗುವ ಗ್ರೀಕ್ ಮೂಲದ ಕೆಲವು ಹೆಸರುಗಳಿವು– ಕ್ರಿಯ, ತಾವುರಿ, ಜಿತುಮ, ಕುಲೀರ, ಲೇಯ, ಪಾಥೋನ, ಜೂಕ, ಕೌಪ್ಪ, ತೌಕ್ಷಿಕ, ಆಕೋಕೇರ, ಹೃದ್ರೋಗ, ಇತ್ಥಮ್ (ಇವು ದ್ವಾದಶರಾಶಿಗಳ ಪರ್ಯಾಯಶಬ್ದಗಳು); ರಿಪ್ಫ, ದ್ಯೂನ, ಕೇಂದ್ರ, ಪಣಫರ, ಆಪೋಕ್ಲಿಮ, ಹಿಬುಕ, ಜಾಮಿತ್ರ, ತ್ರಿಕೋಣ, ಮೇಷೂರಣ, ವೇಶಿ(ಇವು ಲಗ್ನದಿಂದ ನಿರ್ದಿಷ್ಟ ಸ್ಥಾನದ ರಾಶಿಗಳ ಪರ್ಯಾಯಗಳು; ರಿಪ್ಫ ಎಂದರೆ ೧೨ನೆಯದು.; ಜಾಮಿತ್ರ ಎಂದರೆ ೭ನೆಯದು, ಹಿಬುಕ ಎಂದರೆ ೪ನೆಯದು ಇತ್ಯಾದಿ); ಹೇಲಿ (=ಸೂರ್ಯ), ಹೇಮ್ನ(=ಚಂದ್ರ), ಆರ(=ಮಂಗಲ), ಕೋಣ(=ಶನಿ) ಆಶ್ಫುಜಿತ್ (=ಶುಕ್ರ), ಲಿಪ್ತಾ (=ಕಲಾ), ಈ ೩೪ ಹೆಸರುಗಳಲ್ಲಿ ಸಂಸ್ಕೃತಮೂಲದ ಪರ್ಯಾಯವಿಲ್ಲದ ಶಬ್ದವೊಂದೂ ಇಲ್ಲವೆಂಬುದು ಗಮನಾರ್ಹ. ಆದ್ದರಿಂದ ಯಾರೋ ಮುಂದಿನವರು ಗ್ರೀಕ್ ಮೂಲದ ಶಬ್ದಗಳನ್ನು ಸಮಾನಾರ್ಥಕವಾಗಿ ಬಳಸಿದರೆ ಚೋದ್ಯವೇನೆಂದು, ದೀಕ್ಷಿತರವಾದ.

ಆದರೆ ಪರ್ಯಾಯಶಬ್ದಗಳೇ ಇಲ್ಲದ ಹೋರಾ, ದ್ರೇಷ್ಕಾಣ ಸುನಫಾ ಅನಫಾ, ಕೇಮದ್ರುಮ ದುರಧರ (ಮುಂತಾದ ಕಾಲ ಇಲ್ಲವೆ ಯೋಗಸಂಜ್ಞೆಗಳು) ಇವು ಇಲ್ಲದ್ದಿದರೂ ಭಾರತೀಯ ಫಲಜ್ಯೋತಿಷ್ಯಕ್ಕೆ ಚ್ಯುತಿಯಿಲ್ಲವೆಂಬುದನ್ನು ಅವರು ತೋರಿಸಿದ್ದಾರೆ. ನೂರಾರು ಸ್ವತಂತ್ರ ಯೋಗಗಳ ನಡುವೆ ಕಾಲಾಂತರದಲ್ಲಿ ಗ್ರೀಕ್ ಜನರ ನಾಲ್ಕಾರನ್ನು ಸೇರಿಸಿರಬಹುದೆಂದು ಅವರ ಊಹೆ.

ಗ್ರಹಗಳ ವಿಚಾರವಾಗಿ ಗ್ರೀಕ್ ಗಣಿತಜ್ಞ ಟೋಲಿಮಿ ತನ್ನ ಟೆಟ್ರಾಬಿಬ್ಲಾಸ್ ಗ್ರಂಥದಲ್ಲಿ ಬರೆದಿರುವುದೆಲ್ಲ ಅರಿಸ್ಟಾಟಲನ ಸಂಗಡಿಗರ ಮೂಲಕ ಬಂದ ಭಾರತೀಯರ ವಿಜ್ಞಾನವೇ ಎಂಬುದನ್ನು ಮೆಹ್ತಾ ಸಿದ್ಧಮಾಡಿದ್ದಾರೆ. ಆದ್ದರಿಂದ ಶಂ. ಬಾ. ದೀಕ್ಷಿತರು ಗರ್ಗವಚನಕ್ಕೆ ಬೇರೆ ತಾತ್ಪರ್ಯ ಕಲ್ಪಿಸುತ್ತಾರೆ. 'ಈ ಜ್ಯೋತಿಷ್ಯ ಶಾಸ್ತ್ರವನ್ನು ಅವರು ಕಲಿತಿರುವರೆಂಬ ಒಂದೇ ಕಾರಣದಿಂದ ಮ್ಲೇಚ್ಛರಾದರೂ ಯವನರಿಗೆ ಮನ್ನಣೆಯಿದೆ, ಎಂದ ಮೇಲೆ ಇದನ್ನು ಕಲಿತ ದ್ವಿಜನ ವಿಚಾರವಾಗಿ ಇನ್ನೇನು ಹೇಳಬೇಕು ?, ಎಂಬುದಾಗಿ ಈ ತಾತ್ಪರ್ಯ ಸಾಧುವಾಗಿಯೂ ಕಾಣಿಸುತ್ತದೆ.

ನಮ್ಮ ವೇದಾಂಗ ಜ್ಯೋತಿಷ, ಶುಲ್ಬಸೂತ್ರಗಳ ಕಾಲದಿಂದ ಖಗೋಲ ಹಾಗೂ ಗಣಿತ ವಿಜ್ಞಾನಗಳು ಅನ್ಯಪ್ರಭಾವವಿಲ್ಲದೆ ಭಾರತದಲ್ಲಿ ವೃದ್ಧಿಂಗತವಾದುದು ಮಾತ್ರವಲ್ಲ ವಿಶ್ವದ ಜ್ಞಾನಭಂಡಾರಕ್ಕೂ ಅಮೋಘ ಕೊಡುಗೆಗಳನ್ನು ಅದು ಇತ್ತಿದೆಯೆಂಬುದನ್ನು ವಿಲ್ ಡ್ಯೂರಾಂಟ್[4] ಮುಂತಾದ ವಿಶ್ವವಿಖ್ಯಾತ ಆಧುನಿಕ ಚರಿತ್ರಕಾರರೂ ಒಪ್ಪಿದ್ದಾರೆ,

---

೨. ಭಾರತೀಯ ಜ್ಯೋತಿಷ್ಯ ಶಾಸ್ತ್ರ(ಮರಾಠಿ), (ಹಿಂದೀ ಅನುವಾದ,1959). ಪು ೬೭೮–೬೮೦

೩, History of Dharmasatra ,Vol. V.

೪. Will Durant: Our Oriental Heritage, New York 1954, P. 56 f.

ಇಂದು ಅರಾಬಿಕ್ ಅಂಕಿಗಳೆಂದು ರೂಢವಾಗಿರುವ ಅಂಕಿಗಳು ಮತ್ತು ದಶಾಂಶಪದ್ಧತಿ ಅರೇಬಿಯನರ ಮೂಲಕ ಯೂರೋಪಿಗೆ ತಲುಪಿದ ಭಾರತೀಯ ಕೊಡುಗೆಗಳಾಗಿವೆ. ಇವು ಅಶೋಕನ ಶಿಲಾಶಾಸನಗಳಲ್ಲಿ (ಕ್ರಿ. ಪೂ. ೨೫೬) ದೊರೆತಿವೆ. ಭಾರತದಲ್ಲಿ ಅಷ್ಟು ಪ್ರಾಚೀನವಿವೆ. ಗ್ರೀಕರ ಮೇಧಾವಿಗಳಾದ ಆರ್ಕಿಮಿಡೀಸ್, ಅಪೋಲೋನಿಯಸ್ಸರಿಗೂ ಹೊಳೆಯದ ಏಕಸ್ಥಾನ, ದಶಸ್ಥಾನ, ಶತಸ್ಥಾನಗಳ ಎಣಿಕೆಯ ಪದ್ಧತಿ ಭಾರತೀಯರಿಗೆ ಮೊದಲಿನಿಂದಲೂ ಗೊತ್ತಿದ್ದಿತು. ಚೀಣ, ಬಾಗದಾದ್‌ಗಳಿಗೆಲ್ಲ ಇದು ವಲಸೆ ಹೋಯಿತು. ಹೀಗೆಯೇ ಸೊನ್ನೆಗೆ ಬೆಲೆ ಕೊಡುವ ಪದ್ಧತಿಯಾದರೂ ಅಚ್ಚಭಾರತೀಯ ಮೂಲದ್ದಾಗಿ ವಿಶ್ವದ ವಿಜ್ಞಾನದ ಮುನ್ನಡೆಗೆ ಅಡಿಗಲ್ಲಾಗಿದೆ.

ಹಿಂದೂ ಗಣಿತಜ್ಞರಲ್ಲಿ ಶ್ರೇಷ್ಠನಾದ ಆರ್ಯಭಟನು ವಿಶ್ವದಲ್ಲೇ ಪ್ರಪ್ರಥಮವಾಗಿ ವರ್ಗ ಸಮೀಕರಣ, ಸೈನ್, ಅನಿರ್ದಿಷ್ಟ ಎರಡನೆ ಘಾತದ ಸಮೀಕರಣಗಳು, IIಯ ಬೆಲೆ; ಭೂಮಿ ಮತ್ತು ಅದರ ದೈನಂದಿನ ಹಾಗೂ ಸಾಂವತ್ಸರಿಕಚಲನೆಯ ಗತಿಗಳನ್ನು ಕರಾರುವಾಕ್ಕಾಗಿ ವಿವರಿಸಿದ್ದಾನೆ; ನಕ್ಷತ್ರಗಳು ಚಲಿಸುವುದಿಲ್ಲವೆಂದಿದ್ದಾನೆ.

ಆರ್ಯಭಟನ ಬಳಿಕ ಬಂದ ಬ್ರಹ್ಮಗುಪ್ತನು ಪಂಚಾಂಗನಿರ್ಮಿತಿಯನ್ನು ಪರಿಷ್ಕರಿಸಿದ್ದಾನೆ. ಚಂದ್ರನ ವ್ಯಾಸವನ್ನು ಸರಿಯಾಗಿ ಗೊತ್ತುಮಾಡಿದ್ದಾನೆ, ಸೂರ್ಯಚಂದ್ರರ ಗ್ರಹಣಗಳ ಕಾಲ, ಧ್ರುವಗಳ ಅಂತರ, ಮುಖ್ಯ ನಕ್ಷತ್ರರಾಶಿಗಳ ಸ್ಥಾನ ಹಾಗೂ ಗತಿಗಳನ್ನು ನಿರ್ಣಯಿಸಿದ್ದಾನೆ. ಸಿದ್ಧಾಂತಗಳಲ್ಲಿ ಭೂಮಿಯ ಆಕರ್ಷಣಶಕ್ತಿಯನ್ನು ಹೆಸರಿಸಲಾಗಿದೆ.

ಭಾಸ್ಕರನು ಮೂಲಸಂಜ್ಞೆ (radical sign) ಮತ್ತು ಬೀಜಗಣಿತದ ಸಂಕೇತಗಳನ್ನು ಕಂಡುಹಿಡಿದಿದ್ದಾನೆ. ಋಣರಾಶಿಯ (negative quantity) ಆವಶ್ಯಕತೆಯನ್ನು ಮನಗಂಡವರಲ್ಲಿ ಅವನೇ ಮೊದಲಿಗ. ಕ್ರಮಯೋಜನೆ ಮತ್ತು ವಿಕಲ್ಪಗಳ (permutation and combination) ಲೆಕ್ಕವನ್ನವನು ಎತ್ತಿ ಹೇಳಿದ್ದಾನೆ; ನಿಯಮಗಳನ್ನು ಬರೆದಿದ್ದಾನೆ. ಎರಡರ ವರ್ಗಮೂಲವನ್ನು ಹೇಳಿರುವುದಲ್ಲದೆ ಅನಿರ್ದಿಷ್ಟ ಎರಡನೆ ಘಾತದ ಸಮೀಕರಣವನ್ನು ಬಿಡಿಸಿದ್ದಾನೆ. (Indeterminate equations of second degree). ಇವು ಅವನಾದಮೇಲೆ ಒಂದು ಸಹಸ್ರವರ್ಷದ ಬಳಿಕ ಯೂರೋಪಿಯನರಿಗೆ ಅರಿವಾಯಿತು.

ರೇಖಾಗಣಿತದಲ್ಲಿಯೂ ಶುಲ್ಬಸೂತ್ರಕಾರರೇ ಕ್ರಿಸ್ತಪೂರ್ವದಲ್ಲಿಯೇ ಪೈಥಗೋರಿಯನ್ ಪ್ರಮೇಯವನ್ನು ಅರಿತಿದ್ದರು. ಆರ್ಯಭಟನು ತ್ರಾಪಿಜ್ಯ (trapezium), ತ್ರಿಕೋಣ (triangle), ವರ್ತುಲ (circle)ಗಳ ಕ್ಷೇತ್ರಫಲದ ಸೂತ್ರಗಳನ್ನು ಕಂಡುಹಿಡಿದನು.

ಹೀಗೆ ಗಣಿತಶಾಸ್ತ್ರದ ಎಲ್ಲ ಅಂಗಗಳಲ್ಲಿಯೂ ಪ್ರಾಚೀನ ಭಾರತೀಯರ ಜ್ಞಾನ ವಿಶ್ವಕ್ಕೇ ಅಚ್ಚರಿಯನ್ನುಂಟುಮಾಡುವಷ್ಟು ಆಳವೂ ವಿಶಾಲವೂ ಸ್ವೋಪಜ್ಞವೂ ಆಗಿದ್ದಿತು.

## ಉಪಸಂಹಾರ

ಹೀಗೆ ಶಾಖೆಗಳಿಂದ ಪ್ರಭಾವಿತವಾಗಿ, ಅನುಸ್ಯೂತವಾಗಿ, ನಿರಂತರಧಾರೆಯಾಗಿ ಹರಿದಿರುವ ಭಾರತೀಯ ಶಾಸ್ತ್ರಗಂಗೆಕಾಲಕಾಲಕ್ಕೆ ಅನೇಕ ಉಪನದಿಗಳನ್ನು ಕೂಡಿದ್ದರೂ ಒಟ್ಟಿನ ಮೇಲೆ ಮಾನವನ ಜನ್ಮಸಾರ್ಥಕ್ಯವನ್ನು ಏಕೈಕ ಲಕ್ಷ್ಯವನ್ನಾಗಿಟ್ಟುಕೊಂಡು ಮೋಕ್ಷಸಾಗರ ಗಾಮಿನಿಯಾಗಿ ಪ್ರವಹಿಸಿದೆ. ಪಶುಸಮಾನವಾದ ಆಹಾರ–ನಿದ್ರಾ–ಭಯ–ಸಾಧನೆಯನ್ನೇ ಮಾನವನ ಮಹಾಸಾಧನೆಯೆನ್ನದೆ, ಪಶುಗಳಿಂದ ಅವನನ್ನು ಪ್ರತ್ಯೇಕಿಸುವ ವಿಚಾರಶಕ್ತಿಯನ್ನು ವಿಶ್ವದ ಮತ್ತಾವ ಪ್ರದೇಶದಲ್ಲಿಯೂ ನಾವು ಕಾಣಲಾಗದ ಗೌರೀಶಂಕರ ಶಿಖರದಷ್ಟು ಉನ್ನತಿಗೆ ಏರಿಸಿದ್ದಾರೆ. ಆಚಾರ, ಸತ್ಸಂಪ್ರದಾಯ, ಧರ್ಮಗಳ ಸೌಧವನ್ನು ಶಾಶ್ವತವಾಗಿ ನಿಲ್ಲುವಂತಹ ಆಧ್ಯಾತ್ಮಿಕ ಅಡಿಪಾಯದ ಮೇಲೆ ನಿಲ್ಲಿಸಿದ್ದಾರೆ. ಈ ಬಹುಮುಖ ವಿಚಾರಕಿರಣಗಳ ದೀಪ್ತಿಯಿಂದ ಮನುಷ್ಯನ ಮನಸ್ಸು ನಿರ್ಮಲವಾಗುತ್ತದೆ. ಮೋಕ್ಷವು ಕೈಗೆಟುಕುವಂತಾಗುತ್ತದೆ. ಜ್ಞಾನಿಗೆ ಬಾಹ್ಯ ಆಚಾರದ ಆಡಂಬರವೂ ಅನಗತ್ಯವೆನಿಸುವ ಸ್ಥಿತಿಯೊದಗಿದರೆ ಆಚ್ಚರಿಯಿಲ್ಲ. ಭಗವದ್ಗೀತೆಯ ವ್ಯಾಖ್ಯಾನವನ್ನು ಬರೆದಿರುವ ಕಾಶ್ಮೀರಕ ಆನಂದವರ್ಧನನು ತನ್ನ ಗುರುವರರು ಕಾವ್ಯರೂಪದಿಂದ ಗೀತಾಶಾಸ್ತ್ರಮಹಿಮೆಯನ್ನು ವರ್ಣಿಸಿರುವರೆಂದು ಉದ್ಧರಿಸುವ ಈ ಪದ್ಯ ಪ್ರಸ್ತುತಗ್ರಂಥದ ಪೀಠಿಕೆಗೆ ಸಮುಚಿತವಾದ ಉಪಸಂಹಾರವಾಗಬಲ್ಲದು :

ಸಮ್ಯಗ್ದರ್ಶನಭೂಮಿಕಾಸು ಸಮಧೀರ್ವಿಧ್ವಸ್ತವಾದಗ್ರಹಃ ।
ಪ್ರಾಕ್ಕರ್ಮಾರ್ಜಿತದೇಶಜಾತಿವಿಭವೈಃ ಕುರ್ವನ್ ಸರೂಪಾಃ ಸ್ಥಿತೀಃ।
ದ್ವಂದ್ವಾನೀಹ ಹಠಾಗತಾನಿ ಶಮಯನ್ ಪ್ರತ್ಯಾಹೃತೇಶ್ಚೇತಸೋ
ಜೀವನ್ಮುಕ್ತಿಮಹೋ ಗೃಹೇಽಪಿ ನಿವಸನ್ ಕಶ್ಚಿದ್ವಿಪಶ್ಚಿಚ್ಛ್ರಯೇತ್॥*

ನಾನಾ ದರ್ಶನಗಳ ಭೂಮಿಕೆಗಳಲ್ಲಿ ಸಮಚಿತ್ತನಾಗಿ ವಿಹರಿಸುತ್ತ, ವಾದದ ಆಗ್ರಹವನ್ನು ತೊರೆದು, ಪೂರ್ವಕರ್ಮಸಂಸಾರ ಬಂದ ದೇಶ, ಜಾತಿ ವಿಭವಗಳಿಗನುಗುಣವಾಗಿ ಬಾಳುತ್ತ ಇದ್ದಕ್ಕಿದ್ದಂತೆ ಮೇಲ್ವಾಯ್ದು ಬರುವ ದ್ವಂದ್ವಗಳನ್ನೆಲ್ಲ ಉಪಶಮನಗೊಳಿಸಿಕೊಂಡು ಮನಸ್ಸನ್ನು ಶಾಂತಗೊಳಿಸಿಕೊಳ್ಳುವ ಜ್ಞಾನಿಯು ಮನೆಯಲ್ಲಿಯೇ ಇದ್ದುಕೊಂಡಿರುತ್ತಿದ್ದರೂ ಜೀವನ್ಮುಕ್ತಿಯನ್ನು ಗಳಿಸಬಹುದು.

* S. K. Belvalkar ಅವರಿಂದ ಸಂಪಾದಿತ ಆವೃತ್ತಿ, ಪೂನಾ, ೧೯೪೧, ಪು.೨೬೪.

# ಅಲಂಕಾರ

ಯಾವುದೇ ಶಾಸ್ತ್ರಗ್ರಂಥದ ಉದಯಕ್ಕೆ ಸಾಕಷ್ಟು ಹಿನ್ನೆಲೆ ಇರುತ್ತದೆ. ಹಲವು ಶತಮಾನಗಳ ವಿಚಾರಸರಣಿಯು ಸ್ಫೂರ್ತಿಯನ್ನು ನೀಡಿರುತ್ತದೆ. ಪ್ರಚಾರದಲ್ಲಿದ್ದ ಶಾಸ್ತ್ರಾಂಶಗಳನ್ನು ಕಲೆಹಾಕಿ, ಲಕ್ಷ್ಯಗಳನ್ನು ಪರಿಶೀಲಿಸಿ ಶಾಸ್ತ್ರಾನುಗುಣವಾದ ರೂಪವನ್ನು ಕೊಡುವುದು ಸಹಜವೂ, ಯುಕ್ತಿಪೂರ್ವಕವೂ, ಆಗಿರುತ್ತದೆ. ಅಲಂಕಾರಶಾಸ್ತ್ರದ ಹಲವು ಅಂಶಗಳು ಋಗ್ವೇದದಕಾಲದಿಂದಲೂ ಬಳಕೆಯಲ್ಲಿದ್ದುದು ಕಂಡು ಬರುತ್ತದೆ. ಕಾವ್ಯವು ಹೊಸದಲ್ಲ. ಛಂದೋಬದ್ಧವಾಗಿದ್ದು, ಅನೇಕ ಕಡೆ ಸುಂದರವಾದ ವರ್ಣನೆ ಮತ್ತು ಸಂವಾದಗಳನ್ನುಳ್ಳ ಋಗ್ವೇದವು ಸ್ವತಃ ಒಂದು ಕಾವ್ಯವಾಗಿಯೇ ಇದೆ. ಪ್ರಾಚೀನ ಕಾಲದಿಂದ ಗದ್ಯಪದ್ಯಗಳೆರಡನ್ನೂ ಕಾವ್ಯವೆಂದು ಕರೆಯುತ್ತಿದ್ದರು. ವಿಶಿಷ್ಟರೂಪ, ಸಮುಚಿತ ವಿಷಯ ಮತ್ತು ರಚನಾಕೌಶಲಗಳನ್ನುಳ್ಳ ಯಾವುದೇ ಕೃತಿಯನ್ನು ಸಾಮಾನ್ಯವಾಗಿ ಕಾವ್ಯವೆಂದು ಗುರುತಿಸಬಹುದು. ಋಗ್ವೇದಕ್ಕೂ ಈ ಲಕ್ಷಣವಿದೆ. 'ಕಾವ್ಯ' ಶಬ್ದವು ಋಗ್ವೇದದಲ್ಲಿ ಹಲವು ಕಡೆ ಬಂದಿದೆ— 'ಆದೇವಾನಾಮಭವಃ ಕೇತುರಗ್ನೇ ಮಂದ್ರೋ ವಿಶ್ವಾನಿ ಕಾವ್ಯಾನಿ ವಿದ್ವಾನ್' ೩—೧. ೧೭; 'ಅಗ್ನಿರ್ವಿಶ್ವಾನಿ ಕಾವ್ಯಾನಿ ವಿದ್ವಾನ್' ೩—೧, ೧೮; 'ಮಧುಚ್ಛಂದೋ ಭನತಿ ರೇಭ ಇಷ್ಟೌ' ೪—೨, ೩; 'ಉದು ತ್ಯೇ ಮಧುಮತ್ತಮಾ ಗಿರಃ ಸ್ತೋಮಾಸ ಈರತೇ' ೮—೩, ೧೫. ಈ ವಾಕ್ಯಗಳು ಕಾವ್ಯ, ಛಂದಸ್ಸು ಮತ್ತು ಮಾತುಗಳ ಮಾಧುರ್ಯವನ್ನು ಉಲ್ಲೇಖಿಸುತ್ತವೆ. 'ಗಾಥಾ (ಹಾಡುಗಬ್ಬ)' ಶಬ್ದವೂ ಋಗ್ವೇದದಲ್ಲಿ ಅನೇಕ ಸಾರಿ ಬಂದಿದೆ–'ಗಾಥಯಾಪು ರಾಣ್ಯಾ ಪುನಾನಮಭ್ಯನೂಷತ' ೮—೬. ೪೩. ಅರಂಕೃತಿ (ಅಲಂಕೃತಿ) ಮತ್ತು ಚಿತ್ರ (ಚಿತ್ರ ಕಾವ್ಯ) ಶಬ್ದಗಳೂ ಋಗ್ವೇದದಲ್ಲಿ ದೊರೆಯುತ್ತವೆ–'ಕಾ ತೇ ಅಸ್ತ್ಯರಂಕೃತಿ ಸೂಕ್ತೈಃ ಕದಾ ನೂನಂ ತೇ ಮಘವನ್ ದಾಶೇಮ' ೭—೨೫೩; 'ಅಮೂರಾ ವಿಶ್ವಾವೃಷಣಾವಿಮಾ ವಾಂ ನ ಯಾಸು ಚಿತ್ರಂದದೃಶೇ ನ ಯಕ್ಷಂ' ೭—೬೨. ೫. ಋಗ್ವೇದದಿಂದ ಆಗಿನ ಕಾಲದ ಜನರಿಗೆ ಗೀತ, ನರ್ತನ, ಮತ್ತು ವಾದ್ಯಗಳ ಪರಿಚಯವಿದ್ದಿತೆಂದು ತಿಳಿದು ಬರುತ್ತದೆ. ಈ ಕಾವ್ಯ ಸಾಮಗ್ರಿಗಳಿಂದ ಮುಂದಿನ ಕವಿಗಳು ಉಪಕೃತರಾಗಿದ್ದಾರೆ ; ಪದ್ಯ, ನಾಟಕಾದಿಗಳನ್ನು ರಚಿಸಿದ್ದಾರೆ.

ಋಗ್ವೇದದಲ್ಲಿರುವ ಉಷಸ್ಸಿನ ವರ್ಣನೆಯು ಸುಂದರ ಕಾವ್ಯವಾಗಿದೆ. ಈವೇದದ ಅನೇಕ ಮಂತ್ರಗಳಲ್ಲಿ ಶಬ್ದಾಲಂಕಾರ ಮತ್ತು ಅರ್ಥಾಲಂಕಾರಗಳಿವೆ:–'ಅಭ್ರಾತೇವ ಪುಂಸ ಏತಿ ಪ್ರತೀಚೀ

ಗರ್ತಾರುಗಿವ ಸನಯೇ ಧನಾನಾಮ್' ಜಾಯೇವ ಪತ್ಯಉಶತೀ ಸಂವಾಸಾ ಉಷಾ ಹಸ್ರೇವನಿ ರಿಣೀತೇ ಅಪ್ಸಃ ' ೧-೧೨೪.೭ ಈ ಮಂತ್ರದಲ್ಲಿ ನಾಲ್ಕು ಉಪಮಾಲಂಕಾರಗಳಿವೆ. 'ದ್ವಾಸು ಪರ್ಣಾ ಸಯುಜಾ ಸಖಾಯಾ ಸಮಾನಂ ವೃಕ್ಷಂ ಪರಿಷಸ್ವಜಾತೇ । ತಯೋರೇಕಃ ಪಿಪ್ಪಲಂ ಸ್ವಾದ್ವತ್ತ್ಯನಶ್ನನ್ನನ್ಯೋ ಅಭಿಚಾಕಶೀತಿ ॥ ೧—೧೬೪. ೨೦—ಇದರಲ್ಲಿ ಅತಿಶಯೋಕ್ತಿಯನ್ನು ಗುರುತಿಸಬಹುದು. 'ದ್ವಾದಶಾರಂ ನ ಹಿ ತಜ್ಜರಾಯ ವರ್ವರ್ತಿ ಚಕ್ರಂ ಪರಿ ದ್ಯಾಮೃತಸ್ಯ, ೧—೧೬೪.೧೧—ಇದರ ಅಲಂಕಾರವನ್ನು ವ್ಯತಿರೇಕವೆಂದು ಹೇಳಬಹುದು. 'ಸ್ವಸುಂರ್ಜಾರಃ ಶೃಣೋತು ನಃ'—೫೫. ೫ ಮತ್ತು 'ಯತ್ರಾ ಸಂಪರ್ಣಾ ಅಮೃತಸ್ಯ...'೧—೧೬೪. ೧೨- ಈ ಮಾತುಗಳಿಗೆ ನಿರುಕ್ತವು ಎರಡೆರಡು ಅರ್ಥಗಳನ್ನು ವಿವರಿಸಿರುವುದರಿಂದ ವೇದಋಷಿಗಳಿಗೆ ಶ್ಲೇಷೆಯ ಪರಿಚಯವೂ ಇದ್ದಿತೆಂದು ತೋರುತ್ತದೆ.'ಸೋ ಅಪಾಂ ನಪಾದನಭಿಮ್ಲಾ ವರ್ಣೋಽ ನ್ಯಸ್ಯೇವೇಹ ತನ್ವಾ ವಿವೇಷ' ೨—೩೫. ೧೩—ಇಲ್ಲಿರುವ ಉತ್ಪ್ರೇಕ್ಷೆಯು ರಮ್ಯವಾಗಿದೆ. 'ರಕ್ಷಾಣೋ ಅಗ್ನೇ ತವ ರಕ್ಷಣೇಭೀ ರಾರಕ್ಷಣಃ' ೪—೩ ೧೪; 'ಅಜ್ವಾಗೋಜಾ ಋತಜ್ಞಾ ಅದ್ರಿಜಾ ಋತಮ್' ೪—೪೦. ೫; 'ದಧದ್ರ್ಯಚಾ ಸನಿಂಯಂತೇ ದದನ್ಮೇಧಾಮೃತಾಯತೇ' ೫—೨೭. ೪—ಈ ವಾಕ್ಯಗಳಲ್ಲಿ ಅನುಪ್ರಾಸಾದಿ ಶಬ್ದಾಲಂಕಾರಗಳನ್ನು ಗಮನಿಸಬಹುದು 'ಸಕ್ತುಮಿವ ತೀತಉನಾ ಪುನಂತೋ ಯತ್ರ ಧೀರಾ ಮನಸಾ ವಾಚಮಕ್ರತ ।ಅತ್ರಾ ಸಖಾಯಃ ಸಖ್ಯಾನಿ ಜಾನತೇ ಭದ್ರೈಷಾಂ ಲಕ್ಷ್ಮೀರ್ನಿಹಿತಾಧಿವಾಚಿ॥ ' ೧೦—೭೧. ೨—ಈ ಮಂತ್ರವು ಸಾಮಾನ್ಯ ಮಾತಿಗೂ ಕಾವ್ಯಮಯ ಮಾತಿಗೂ ಇರುವ ಅಂತರವನ್ನು ಸ್ಪಷ್ಟಪಡಿಸುತ್ತದೆ. ಬ್ರಹ್ಮವಿದ್ಯೆಯನ್ನು ಪ್ರತಿಪಾದಿಸುವ ಉಪನಿಷತ್ತುಗಳಲ್ಲಿಯೂ ಅಲಂಕಾರಗಳನ್ನು ಕಾಣುತ್ತೇವೆ. 'ಆತ್ಮಾನಂ ರಥಿನಂ ವಿದ್ಧಿ ಶರೀರಂ ರಥಮೇವ ತು' ಕಠೋಪನಿಷತ್—ಈ ಮಂತ್ರದಲ್ಲಿ ರೂಪ ಕಾಲಂಕಾರವಿದೆ. 'ಇಂದ್ರಿಯೇಭ್ಯಃ ಪರಾ ಹ್ಯರ್ಥಾ ಅರ್ಥೇಭ್ಯಶ್ಚ ಪರಂ ಮನಃ'—ಇದರಲ್ಲಿ ಸಾರಾಲಂಕಾರವಿದೆ. ಬ್ರಾಹ್ಮಣಗಳಲ್ಲಿ ಕವಿಗಳಿಗೆ ವಸ್ತುವನ್ನೊದಗಿಸಿರುವ ಉಪಾಖ್ಯಾನಗಳಿವೆ. ಹೀಗೆ ವೇದಾದಿಗಳಲ್ಲಿ ಅಲಂಕಾರಶಾಸ್ತ್ರದ ಬೀಜರೂಪವನ್ನು ಗುರುತಿಸಬಹುದಾದರೂ ಆಗ ಅಲಂಕಾರಶಾಸ್ತ್ರವೇ ರೂಪಗೊಂಡಿದ್ದಿತೆಂದು ಹೇಳಲು ಸಾಧ್ಯವಾಗುವುದಿಲ್ಲ. ಮಹಾಭಾರತ ದಲ್ಲಿಯೂ ಸಾಕಷ್ಟು ಕಾವ್ಯಧರ್ಮವಿದೆ. ರಾಮಾಯಣವು ಆದಿಕಾವ್ಯವೆಂದು ಪ್ರಸಿದ್ಧವಾಗಿದೆ. ಈ ಕಾವ್ಯಧರ್ಮವನ್ನು ಪರಿಶೀಲಿಸಿ ಮುಂದಿನವರು ಕಾವ್ಯ ಮೀಮಾಂಸೆಯನ್ನು ರಚಿಸಿರಬೇಕು.

ನಿಘಂಟುವಿನಲ್ಲಿ (೩—೧೩) ಋಗ್ವೇದದಿಂದ 'ಇದಮಿವ'. 'ಇದಂ ಯಥಾ' 'ತದ್ವತ್' ಮುಂತಾದ ಹನ್ನೆರಡು ವಾಕ್ಯಖಂಡಗಳನ್ನು ಸಂಗ್ರಹಿಸಿ ಅವುಗಳನ್ನು ಉಪಮಾ' ಎಂದು ಕರೆಯಲಾಗಿದೆ. ಯಾಸ್ಕನು ನಿರುಕ್ತದಲ್ಲಿ ಈ ಭಾಗವನ್ನು 'ವಾಖ್ಯಾನಿಸುತ್ತಾ ತನಗಿಂತ ಹಿಂದಿನವನಾದ 'ಗಾರ್ಗ್ಯ'ನ ಉಪಮಾಲಕ್ಷಣವನ್ನು ಉದ್ಧರಿಸಿದ್ದಾನೆ. 'ಲುಪ್ತೋಪಮಾನ್ಯ ರ್ಥೋಪಮಾನಿತ್ಯಾಚಕ್ಷತೇ' (೩—೧೮) ಎಂಬ ಮಾತು ನಿರುಕ್ತದಲ್ಲಿದೆ. ಪೂರ್ಣೋಪ ಮಾಲಂಕಾರದಲ್ಲಿ ಉಪಮಾನ, ಉಪಮೇಯ, ಸಾಮಾನ್ಯಧರ್ಮ, ಸಾದೃಶ್ಯವಾಚಕಗಳೆಂಬ ನಾಲ್ಕು ಅಂಶಗಳಿವೆ. ಈ ಪಾರಿಭಾಷಿಕ ಶಬ್ದಗಳು ಪಾಣಿನಿಗಿಂತ ಹಿಂದಿನಿಂದಲೂ ಬಳಕೆ

ಯಲ್ಲಿದ್ದವು. ಇವುಗಳನ್ನು ಪಾಣಿನಿಯ ಸೂತ್ರಗಳಲ್ಲಿಯೂ ಕಾಣುತ್ತೇವೆ— 'ಉಪಮಾನಾನಿ ಸಾಮಾನ್ಯವಚನೈಃ' 'ಉಪಮಿತಂ ವ್ಯಾಘ್ರಾದಿಭಿಃ ಸಾಮಾನ್ಯಾಪ್ರಯೋಗೇ', 'ಉಪಮಾನಾದಾಚಾರೇ', 'ತೇನ ತುಲ್ಯಂ ಕ್ರಿಯಾ ಚೇದ್ವತಿಃ' ಇತ್ಯಾದಿ ವೇದಾಂತಸೂತ್ರಗಳಲ್ಲಿ ಉಪಮಾ ಮತ್ತು ರೂಪಕಗಳೆಂಬ ಎರಡು ಅಲಂಕಾರಗಳನ್ನು ಹೆಸರಿಸಲಾಗಿದೆ[1]

ಲೂಡರ್ಸ್ ಅವರು ಬ್ರಾಹ್ಮೀಲಿಪಿಯ ಒಂದು ಮಥುರಾ ಶಾಸನದಲ್ಲಿ 'ಭುಜಂಗ ವಿಜೃಂಭಿತ' ವೆಂಬ ಛಂದಸ್ಸಿದೆಯೆಂದೂ, ಕ್ರಿ.ಪೂ ಒಂದನೆಯ ಶತಮಾನಕ್ಕೂ ಹಿಂದೆಯೇ ಪದ್ಯ ಕಾವ್ಯ ರಚನೆಯು ಪ್ರಾರಂಭವಾಗಿರಬೇಕೆಂದೂ ಅಭಿಪ್ರಾಯ ಪಡುತ್ತಾರೆ. ಜುನಾಗಡದಲ್ಲಿರುವ 'ರುದ್ರದಾಮನ್' ನ ಶಾಸನ (ಕ್ರಿ.ಶ. ೧೫೦) ದಲ್ಲಿ 'ಸ್ಫುಟಲಘುಮಧುರ-ಚಿತ್ರಕಾಂತಶಬ್ದಸಮಯೋದಾರಾಲಂಕೃತ ಗದ್ಯ ಪದ್ಯ' ಎಂಬ ಮಾತಿದೆ. ಈ ಮಾತು ಕ್ರಿ.ಶ. ಎರಡನೆಯ ಶತಕ ಮತ್ತು ಅದಕ್ಕೆ ಹಿಂದೆಯೇ ಇದ್ದ ಗದ್ಯಪದ್ಯಗಳೆಂಬ ಕಾವ್ಯ ವಿಧಗಳನ್ನೂ, ಸ್ಫುಟ (ಪ್ರಸಾದ), ಮಧುರ (ಮಾಧುರ್ಯ). ಕಾಂತ (ಕಾಂತಿ), ಉದಾರ (ಉದಾರತಾಗಳೆಂಬ) ಕಾವ್ಯಗುಣಗಳನ್ನೂ, ಗದ್ಯಪದ್ಯಗಳು ಅಲಂಕಾರಗಳಿಂದ ಕೂಡಿರುವುದನ್ನೂ ತಿಳಿಸುತ್ತದೆ. ಈ ವಾಕ್ಯದಲ್ಲಿ ಮುಂದಿನ ಲಾಕ್ಷಣಿಕರು ಹೇಳುವ ದೀರ್ಘಸಮಾಸಗಳ ಓಜೋಗುಣವಿದೆ. ಶಾಸನಕಾರನು ತನ್ನ ಕಾಲದಲ್ಲಿ ಪ್ರಚಾರದಲ್ಲಿದ್ದ ಕಾವ್ಯಲಕ್ಷಣಗಳನ್ನನುಸರಿಸಿ ಈ ಶಾಸನವನ್ನು ಬರೆದಿರುವಂತೆ ತೋರುತ್ತದೆ. ಚಂಪಾಶಿಲಾಶಾಸನ (ಕ್ರಿ.ಶ. ಎರಡು ಅಥವಾ ಮೂರನೆಯ ಶತಮಾನ) ದಲ್ಲಿ 'ವಸಂತ ತಿಲಕಾ' ವೃತ್ತವಿದೆ. ಆದ್ದರಿಂದ ಕ್ರಿ.ಶ. ೪ನೆಯ ಶತಮಾನಕ್ಕೂ ಹಿಂದೆಯೇ ಕಾವ್ಯಮೀಮಾಂಸೆಯು ಸಾಕಷ್ಟು ಬೆಳೆದಿರಬೇಕು. ಪತಂಜಲಿ (ಕ್ರಿ.ಪೂ. ೧೫೦) ಗಿಂತ ಹಿಂದಿನಿಂದಲೂ ಆಖ್ಯಾಯಿಕಾ ರೂಪವಾದ ಪ್ರಬಂಧಗಳಿದ್ದವು ರಸ, ದಶರೂಪಕಗಳು, ಅಲಂಕಾರ, ಗುಣಾದಿಗಳನ್ನು ನಿರೂಪಿಸುವ ಭರತನ ನಾಟ್ಯಶಾಸ್ತ್ರವೂ ಕ್ರಿ.ಶ ಮೂರನೆಯ ಶತಮಾನಕ್ಕಿಂತ ಈಚಿನದಲ್ಲ. ಕ್ರಿ.ಶ. ೬ನೆಯ ಶತಮಾನದ ವೇಳೆಗೆ ಅಲಂಕಾರಗಳು ಮತ್ತು ಅವುಗಳ ಲಕ್ಷಣಗಳು ಪ್ರತಿಪಾದಿತವಾಗಿರುವುದನ್ನು ಕಾಣುತ್ತೇವೆ.

ಭಾಮಹ, ವಾಮನ, ರುದ್ರಟರು ತಮ್ಮ ಲಕ್ಷಣಗ್ರಂಥಗಳನ್ನು 'ಕಾವ್ಯಾಲಂಕಾರ' ವೆಂದು ಕರೆದಿದ್ದಾರೆ. ಅಲಂಕಾರಗಳ ನಿರೂಪಣೆಯೇ ಪ್ರಧಾನವಾಗಿರುವುದರಿಂದ ಕಾವ್ಯ ಸ್ವರೂಪಾದಿಗಳನ್ನು ತಿಳಿಸುವ ಶಾಸ್ತ್ರವನ್ನು ಅಲಂಕಾರ ಶಾಸ್ತ್ರವೆಂದು ಕರೆಯುತ್ತಾರೆ. 'ಶಬ್ದಾರ್ಥಯುಗಲ'ವು ಕಾವ್ಯ. ಶಬ್ದಾರ್ಥಗಳ 'ಸೌಂದರ್ಯದಿಂದಾಗಿ ಕಾವ್ಯವು ಗ್ರಾಹ್ಯವಾಗುತ್ತದೆ. ವಾಮನನು ಈ ವಿಚಾರವನ್ನು ಸ್ಪಷ್ಟಪಡಿಸಿದ್ದಾನೆ— 'ಕಾವ್ಯಂ ಗ್ರಾಹ್ಯಂ ಅಲಂಕಾರಾತ್'; ಸೌಂದರ್ಯಮಲಂಕಾರಃ ಈ ಸೂತ್ರಗಳ ವೃತ್ತಿ —'ಅಲಂಕೃತಿರಲಂಕಾರಃ । ಕರಣವ್ಯುತ್ಪತ್ತ್ಯಾ ಪುನರಲಂಕಾರ

---

1 'ಅತ ಏವ ಚೋಪಮಾ ಸೂರ್ಯಕಾದಿವತ್', 'ಆನುಮಾನಿಕಮಪ್ಯೇಕೇಷಾಂ ಶರೀರ ರೂಪಕ ವಿನ್ಯಸ್ತಗೃಹೀತೇರ್ದರ್ಶಯತಿ ಚ'

ಶಬ್ದೋಯಮುಪವಾದಿಷು ವರ್ತತೇ ।, ಕಾಮಧೇನು ವ್ಯಾಖ್ಯಾನವು ಇದನ್ನು ಹೀಗೆ ವಿವರಿಸುತ್ತದೆ — 'ಯೋsಯಮಲಂಕಾರಃ ಕಾವ್ಯಗ್ರಹಣಹೇತುತ್ವೇನ ಉಪನ್ಯಸ್ಯತೇ ತದ್ವ್ಯುತ್ಪಾದಕತ್ವಾಚ್ಛಾಸ್ತ್ರಮಪಿ ಅಲಂಕಾರನಾಮ್ನಾ ವ್ಯಪದಿಶ್ಯತ ಇತಿ ಶಾಸ್ತ್ರಸ್ಯಾಲಂಕಾರತ್ವೇನ ಪ್ರಸಿದ್ಧಿಃ ಪ್ರತಿಷ್ಠಿತಾ ಸ್ಯಾದಿತಿ ಸೂಚಯಿತುಮಯಂ ವಿನ್ಯಾಸಃ ಕೃತಃ, ಕಾವ್ಯಂ ಗ್ರಾಹ್ಯಂ 'ಅಲಂಕಾರಾದಿತಿ'. ಅಲಂಕಾರ' ವೆಂಬ ಹೆಸರನ್ನು ಪಡೆಯದ ಅಲಂಕಾರಗ್ರಂಥಗಳಲ್ಲಿಯೂ ಹೆಚ್ಚು ಭಾಗವನ್ನು ಅಲಂಕಾರಗಳೇ ವ್ಯಾಪಿಸಿವೆ. ದಂಡಿಯ ಕಾವ್ಯಾದರ್ಶದ ಮುಕ್ಕಾಲುಭಾಗವು ಅಲಂಕಾರಗಳಿಗೇ ಮೀಸಲಾಗಿದೆ. ಅಲಂಕಾರ ಶಾಸ್ತ್ರವನ್ನು ಕಾವ್ಯಶಾಸ್ತ್ರ, ಕಾವ್ಯಮೀಮಾಂಸಾ ಮತ್ತು ಸಾಹಿತ್ಯಶಾಸ್ತ್ರವೆಂದು ವ್ಯವಹರಿಸುವುದುಂಟು ಶಬ್ದಾರ್ಥಗಳ ಸಹಭಾವದಿಂದ ಸಾಹಿತ್ಯ ಶಬ್ದವು ಬಂದಿರಬೇಕು.

ಸಾಮಾನ್ಯವಾಗಿ ಕಾವ್ಯಸ್ವರೂಪವನ್ನು ತಿಳಿಸುವ ಅಲಂಕಾರಗ್ರಂಥವು ಮೊದಲು ಕಾವ್ಯ ಪ್ರಯೋಜನವನ್ನು ಪರಿಶೀಲಿಸುತ್ತದೆ. ತರುವಾಯ ಕಾವ್ಯಹೇತು ಮತ್ತು ಕಾವ್ಯ ಸ್ವರೂಪಗಳು ಬರುತ್ತವೆ. ಕಾವ್ಯವು ಶಬ್ದಾರ್ಥಯುಗಲವಾದ್ದರಿಂದ ಅದರಲ್ಲಿ ಶಬ್ದವಿಧ, ಅರ್ಥವಿಧ. ಅಭಿಧಾದಿ ಶಬ್ದವ್ಯಾಪಾರ, ಕಾವ್ಯದ ಆತ್ಮ, ಕಾವ್ಯವಿಧಗಳು ಪ್ರತಿಪಾದಿತವಾಗುತ್ತವೆ. ಗುಣ, ರೀತಿ, ದೋಷ ಗಳನ್ನು ವಿವರಿಸಲಾಗುತ್ತದೆ. ಶಬ್ದಾಲಂಕಾರ ಮತ್ತು ಅರ್ಥಾಲಂಕಾರಗಳ ವಿವರಣೆಯು ಬರುತ್ತದೆ. ಕೆಲವು ಅಲಂಕಾರ ಗ್ರಂಥಗಳಲ್ಲಿ ಕಾವ್ಯಸಮಯವೂ ಬಂದಿದೆ. ಒಂದೆರಡು ಲಕ್ಷಣಗ್ರಂಥ ಗಳಲ್ಲಿ ನಾಟಕಗಳ ವಿಚಾರವೂ ವಿವರವಾಗಿ ಬಂದಿದೆ. ಛಂದಸ್ಸು ಕಾವ್ಯಮೀಮಾಂಸೆಯ ಒಂದು ಪ್ರಧಾನಾಂಶವಾದರೂ ತಾನು ಪ್ರತ್ಯೇಕ ಶಾಖೆಯಾಗಿಯೇ ಬೆಳೆದಿದೆ. ಹೀಗೆಯೇ ಸಂಗೀತಾಭಿನಯ ಶಾಸ್ತ್ರಗಳೂ ಪ್ರತ್ಯೇಕವಾಗಿಯೇ ಬೆಳೆದಿವೆ. ಅಲಂಕಾರಗ್ರಂಥಗಳಲ್ಲಿ ಕಾವ್ಯಲಕ್ಷಣ, ಕಾವ್ಯದ ಆತ್ಮ, ರಸಪ್ರತೀತಿ ಮತ್ತು ಗುಣಗಳ ವಿಷಯವಾಗಿ ಬಹಳ ವಿಚಾರ ಬೆಳೆದಿದೆ, ಸುಮಾರಾಗಿ ಮೇಲೆ ಪಟ್ಟಿ ಮಾಡಿರುವ ಎಲ್ಲ ಕಾವ್ಯಾಂಶಗಳು ಎಲ್ಲ ಅಲಂಕಾರ ಗ್ರಂಥಗಳಲ್ಲಿಯೂ ಇಲ್ಲ. ಸಾಹಿತ್ಯದರ್ಪಣ, ಪ್ರತಾಪರುದ್ರಯಶೋಭೂಷಣಗಳಲ್ಲಿ ದಶರೂಪಕಗಳ ವಿಚಾರವೂ ಬಂದಿದೆ. ಕಾವ್ಯಾದರ್ಶ, ಕಾವ್ಯಾಲಂಕಾರಸೂತ್ರ, ಕಾವ್ಯಾಲಂಕಾರ, ಕಾವ್ಯಪ್ರಕಾಶ ಮುಂತಾದ ಪ್ರಸಿದ್ಧ ಅಲಂಕಾರಗ್ರಂಥಗಳಲ್ಲಿ ರೂಪಕವಿಚಾರವಿಲ್ಲ. ನಾಟ್ಯಶಾಸ್ತ್ರ, ದಶರೂಪಕಗಳಲ್ಲಿ ರೂಪಕ ಮತ್ತು ರಸಗಳ ವಿಚಾರವಿದೆ. ಅಲಂಕಾರಸಾರಸಂಗ್ರಹ, ಅಲಂಕಾರಸರ್ವಸ್ವ ಕುವಲಯಾನಂದ ಮುಂತಾದ ಕೃತಿಗಳು ಕೇವಲ ಅಲಂಕಾರವನ್ನು ಪ್ರತಿಪಾದಿಸುತ್ತವೆ. ಧ್ವನ್ಯಾಲೋಕ, ವಕ್ರೋಕ್ತಿಜೀವಿತ, ವ್ಯಕ್ತಿವಿವೇಕಗಳು ಧ್ವನಿ ಮುಂತಾದ ವಿಶೇಷ ಸಿದ್ಧಾಂತಗಳನ್ನು ನಿರೂಪಿಸುತ್ತವೆ. ಅಭಿಧಾವೃತ್ತಿ ಮಾತೃಕಾ, ವೃತ್ತಿವಾರ್ತಿಕ, ಶಬ್ದವ್ಯಾಪಾರ ವಿಚಾರ ಗ್ರಂಥಗಳಲ್ಲಿ ಅಭಿಧಾ ಮುಂತಾದ ಶಬ್ದಶಕ್ತಿ ಗಳ ವಿಚಾರವಿದೆ, ಶೃಂಗಾರತಿಲಕ, ರಸತರಂಗಿಣಿಗಳು ಕೇವಲ ರಸಸಿದ್ಧಾಂತವನ್ನು ಹೊಂದಿವೆ. ರಸಮಂಜರಿಯು ನಾಯಿಕಾವಿಧಗಳನ್ನು ವಿವರಿಸುತ್ತದೆ.

ಆನಂದವು ಕಾವ್ಯದ ಮುಖ್ಯ ಪ್ರಯೋಜನವೆಂಬ ವಿಷಯವಾಗಿ ಆಲಂಕಾರಿಕರಲ್ಲಿ ಏಕಾಭಿಪ್ರಾಯವಿದೆ—'ಕ್ರೀಡನೀಯಕಮಿಚ್ಛಾಮೋ ದೃಶ್ಯಂ ಶ್ರವ್ಯಂ ಚ ಯದ್ಭವೇತ್' (ನಾಟ್ಯ

ಶಾಸ್ತ್ರ); 'ಕಾವ್ಯಂ ಯಂಶಸೇಽರ್ಥಕೃತೇ ವ್ಯವಹಾರವಿದೇ ಶಿವೇತರಕ್ಷತಯೇ! ಸದ್ಯಃಪರನಿರ್ವೃತಯೇ
ಕಾಂತಾ ಸಂಮಿತತಯೋಪದೇಶಯುಜೇ॥' ಕಾವ್ಯ ಪ್ರಕಾಶ ; ಧರ್ಮಾರ್ಥ ಕಾಮಮೋಕ್ಷೇಷು
ವೈಚಕ್ಷಣ್ಯಂ ಕಲಾಸು ಚ। ಪ್ರೀತಿಂ ಕರೋತಿ ಕೀರ್ತಿಂ ಚ ಸಾಧುಕಾವ್ಯ ನಿಬಂಧನಂ ॥' ಭಾಮಹ
ಇತ್ಯಾದಿ.

ಕಾವ್ಯರಚನೆಗೆ ಪ್ರತಿಭಾ, ವ್ಯುತ್ಪತ್ತಿ ಮತ್ತು ಅಭ್ಯಾಸಗಳು ಕಾರಣವೆಂದು ಅಲಂಕಾರಿಕರ
ಅಭಿಪ್ರಾಯ—"ಶಕ್ತಿರ್ನಿಪುಣತಾ ಚೈವ ಲೋಕಕಾವ್ಯಾದ್ಯವೇಕ್ಷಣಾತ್ । ಕಾವ್ಯಜ್ಞಶಿಕ್ಷಯಾ
ಭ್ಯಾಸಃ ಇತಿ ಹೇತುಸ್ತದುದ್ಭವೇ॥"ಮಮ್ಮಟ;"ಕಾವ್ಯಂ ತು ಜಾಯತೇ ಜಾತು ಕಸ್ಯಚಿತ್ಪ್ರತಿ
ಭಾವತಃ" ಭಾಮಹ ಕಾವ್ಯರಚನೆಗೆ ಕೇವಲ ಪ್ರತಿಭೆಯೇಕಾರಣವೆಂದು ವಾಗ್ಭಟ, ರಾಜಶೇಖರ,
ಜಗನ್ನಾಥ ಮುಂತಾದವರು ಹೇಳುತ್ತಾರೆ. "ಪ್ರಜ್ಞಾನವನವೋನ್ಮೇಷಶಾಲಿನೀ ಪ್ರತಿಭಾ ಮತಾ"
ಎಂದು ಭಟ್ಟತೌತನು ಕಾವ್ಯಕೌತುಕದಲ್ಲಿ ಪ್ರತಿಭೆಯ ಸ್ವರೂಪವನ್ನು ನಿರೂಪಿಸಿದ್ದಾನೆ. ರಸಾನು
ಗುಣ ಪದಪ್ರಯೋಗ ಚಾರುತರವರ್ಣನೆ, ವಿನೂತನ ಕಲ್ಪನೆಗಳು ಪ್ರತಿಭಾವಂತನಿಗೆ ಸಾಧ್ಯ.
ವ್ಯುತ್ಪತ್ತಿ ಮತ್ತು ಅಭ್ಯಾಸಗಳು ಪ್ರತಿಭೆಗೆ ಪೋಷಕಗಳು.

ವಾಗರ್ಥಗಳು ಅವಿನಾಭಾವಸಂಬಂಧದಿಂದ ಕೂಡಿರುವುದು ಸ್ಪಷ್ಟ ಸಾಮಾನ್ಯವಾಗಿ
ಪ್ರಾಚೀನಾಲಂಕಾರಿಕರು ಶಬ್ದಾರ್ಥಗಳೆರಡಕ್ಕೂ ಸಮಪ್ರಾಧಾನ್ಯವನ್ನು ಕೊಟ್ಟು "ಶಬ್ದಾರ್ಥೌ
ಸಹಿತೌ ಕಾವ್ಯಂ" ಎಂಬ ಕಾವ್ಯಲಕ್ಷಣವನ್ನು ಅಂಗೀಕರಿಸಿದ್ದಾರೆ. ಭಾಮಹ, ರುದ್ರಟ, ವಕ್ರೋಕ್ತಿ
ಕಾರವಾಗ್ಭಟ (ಪ್ರ), ಮಮ್ಮಟ ಹೇಮಚಂದ್ರ ಮುಂತಾದವರು ಈ ವರ್ಗಕ್ಕೆ ಸೇರುತ್ತಾರೆ.
ಕೆಲವರು ಶಬ್ದಕ್ಕೆ ಪ್ರಾಧಾನ್ಯವನ್ನು ಕೊಟ್ಟಿದ್ದಾರೆ—"ಶರೀರಂ ತಾವದಿಷ್ಟಾರ್ಥವ್ಯವಚ್ಛಿನ್ನಾ
ಪದಾವಲೀ"ಕಾವ್ಯಾದರ್ಶ; "ರಮಣೀಯಾರ್ಥಪ್ರತಿಪಾದಕಃ ಶಬ್ದಃಕಾವ್ಯಂ" ರಸಗಂಗಾಧರ,
ಕೆಲವರು ರಸಾದಿಗೆ ಪ್ರಾಧಾನ್ಯವನ್ನು ಕೊಟ್ಟು ಕಾವ್ಯಲಕ್ಷಣವನ್ನು ಹೇಳಿದ್ದಾರೆ—"ಆಸ್ವಾದ
ಜೀವಾತುಃ ಪದಸಂದರ್ಭಃ ಕಾವ್ಯಂ "ಚಂಡೀದಾಸ ; "ಕಾವ್ಯಂ ರಸಾದಿಮದ್ವಾಕ್ಯಂ" ಶೌದ್ಧೋ
ದನಿ ; "ವಾಕ್ಯಂ ರಸಾತ್ಮಕಂ ಕಾವ್ಯಂ" ಸಾಹಿತ್ಯದರ್ಪಣ. ಕಾವ್ಯಾತ್ಮದ ವಿಷಯವಾಗಿ
ಆಲಂಕಾರಿಕರಲ್ಲಿ ಭಿನ್ನಾಭಿಪ್ರಾಯವಿದೆ. ಇದರಿಂದ ವಿಭಿನ್ನ ಕಾವ್ಯ ಸಂಪ್ರದಾಯಗಳಿವೆ. ರಸ,
ಧ್ವನಿ, ಗುಣ, ಅಲಂಕಾರ, ರೀತಿ, ಔಚಿತ್ಯ ಸಂಪ್ರದಾಯಗಳು ಮುಖ್ಯವಾದವು. ಭಟ್ಟ
ನಾಯಕನು ರಸ ಸಂಪ್ರದಾಯದವನೇ ಆದರೂ ಅವನ ವಿಚಾರಸರಣಿಯು ವಿಭಿನ್ನವಾಗಿದೆ. ಧ್ವನಿ
ಯನ್ನು ಅನುಮಾನದಲ್ಲಿಯೇ ಅಂತರ್ಭಾವಗೊಳಿಸುವ ಮಹಿಮಭಟ್ಟನು ಅನುಯಾಯಿಗಳಿಲ್ಲದೆ
ಒಂದು ಹೊಸ ಶಾಖೆಯನ್ನು, ಸ್ಥಾಪಿಸಲಾಗಲಿಲ್ಲ. ವಕ್ರೋಕ್ತಿಯು ಕಾವ್ಯಕ್ಕೆ ಜೀವಿತವೆಂದು
ಹೇಳುವ ಕುಂತಕನ ಶಾಖೆಯೂ ಬೆಳೆಯಲಿಲ್ಲ. ಈ ವಿವಿಧ ಪ್ರಸ್ಥಾನಗಳ ವಿವರಗಳು ಮುಂದೆ
ಆಯಾ ಗ್ರಂಥಗಳ ವಿವೇಚನೆಯಲ್ಲಿ ಬರುತ್ತವೆ.

ರಸಸಂಪ್ರದಾಯಕ್ಕೆ ಭರತನ ನಾಟ್ಯಶಾಸ್ತ್ರವೇ ಮೂಲ. ಅಭಿನವಗುಪ್ತನೂ ರಸವನ್ನು
ವಿಶೇಷವಾಗಿ ಪ್ರತಿಪಾದಿಸಿದ್ದಾನೆ. ವಿಭಾವಾನುಭಾವವ್ಯಭಿಚಾರಿಭಾವಗಳಿಂದ ಪ್ರತೀತವಾಗುವ




3*

ರಸವು ಆನಂದ ರೂಪವಾದುದು. ಇದನ್ನು 'ವಿಗಲಿತವೇದ್ಯಾಂತರ' 'ಲೋಕೋತ್ತರಚಮತ್ಕಾರ ಪ್ರಾಣ', 'ಬ್ರಹ್ಮಾನಂದಸಹೋದರ', 'ಅಖಂಡಸ್ವಪ್ರಕಾಶಾನಂದಚಿನ್ಮಯ' ಮುಂತಾಗಿ ವರ್ಣಿಸ ಲಾಗಿದೆ. ರಸದ ಆಸ್ವಾದಕ ಸಹೃದಯ. ರಸದ ನಿಷ್ಪತ್ತಿ, ಸ್ವರೂಪ ಮತ್ತು ಆಸ್ವಾದನ ಪ್ರಕಾರಗಳನ್ನು ಕುರಿತು ಬಹಳ ವಿವಾದ ನಡೆದಿದೆ. 'ವಿಭಾವಾನುಭಾವವ್ಯಭಿಚಾರಿಸಂಯೋಗಾ ದ್ರಸನಿಷ್ಪತ್ತಿಃ' ಎಂಬ ನಾಟ್ಯಶಾಸ್ತ್ರದ ರಸಸೂತ್ರದಲ್ಲಿ 'ಸ್ಥಾಯಿ' ಶಬ್ದವಿಲ್ಲದಿರುವುದರಿಂದಲೂ, ಸಂಯೋಗ ಮತ್ತು ನಿಷ್ಪತ್ತಿಶಬ್ದಗಳು ಅಸ್ಪಷ್ಟಾರ್ಥಕಗಳಾದುದರಿಂದಲೂ ಈ ಸೂತ್ರವನ್ನು ಹಲ ವಾರು ಬಗೆಯಲ್ಲಿ ವ್ಯಾಖ್ಯಾನಿಸಲಾಗಿದೆ. ಇವುಗಳಲ್ಲಿ ಭಟ್ಟಲೊಲ್ಲಟನ ಉತ್ಪತ್ತಿವಾದ, ಶ್ರೀ ಶಂಕುಕನ ಅನುಮಿತವಾದ, ಭಟ್ಟನಾಯಕನ ಭುಕ್ತಿವಾದ ಮತ್ತು ಅಭಿನವಗುಪ್ತನ ವ್ಯಕ್ತಿವಾದ ಗಳು ಪ್ರಸಿದ್ಧವಾಗಿವೆ. ರಸಗಂಗಾಧರದಲ್ಲಿ ಭರತನ ಸೂತ್ರಕ್ಕೆ ಎಂಟು ವಿಧವಾಗಿ ವ್ಯಾಖ್ಯಾನ ವನ್ನು ತೋರಿಸಲಾಗಿದೆ. ಭಾಮಹ, ಉದ್ಭಟ, ರುದ್ರಟ ಮೊದಲಾದವರು ಅಲಂಕಾರ ಸಂಪ್ರ ದಾಯಕ್ಕೆ ಸೇರಿದವರು. ಇವರ ಅಭಿಪ್ರಾಯದಲ್ಲಿ ರಸವದಾದ್ಯಲಂಕಾರಗಳಿಂದಲೇ ರಸವು ಗತಾರ್ಥ ವಾಗಿದೆ. ವಾಮನನು ರೀತಿಸಂಪ್ರದಾಯದ ಪ್ರವರ್ತಕ. ಅವನು 'ರೀತಿರಾತ್ಮಾ ಕಾವ್ಯಸ್ಯ' ಎಂದು ಸಾರಿದ್ದಾನೆ. ಕುಂತಕನ ವಕ್ರೋಕ್ತಿಜೀವಿತವು ವಕ್ರೋಕ್ತಿಸಂಪ್ರದಾಯಕ್ಕೆ ಪ್ರಸಿದ್ಧ. ಭಾಮಹನೂ ವಕ್ರೋಕ್ತಿಗೆ ಸಾಕಷ್ಟು ಸ್ಥಾನವನ್ನು ಕೊಟ್ಟಿದ್ದಾನೆ. ದಂಡಿಯೂ ''ಸೈಷಾ ಸರ್ವತ್ರ ವಕ್ರೋಕ್ತಿರನಯಾರ್ಥೋ ವಿಭಾವ್ಯತೇ। ಯತ್ನೋಽಸ್ಯಾಂ ಕವಿನಾ ಕಾರ್ಯಃ ಕೋಽಲಂಕಾರೋಽನಯಾ ವಿನಾ॥'' ಎಂದು ಹೇಳಿದ್ದಾನೆ. ಕುಂತಕನಾದರೋ 'ವಿದಗ್ಧಭಂಗೀ ಭಣಿತಿ' ರೂಪವಾದ ವಕ್ರೋಕ್ತಿಯೇ ಕಾವ್ಯಕ್ಕೆ ಜೀವಿತವೆಂದು ಹೇಳಿದ್ದಾನೆ. ಆನಂದವರ್ಧನನು ಧ್ವನಿ ಸಂಪ್ರದಾಯದ ಪ್ರವರ್ತಕ. 'ಕಾವ್ಯಸ್ಯಾತ್ಮಾ ಧ್ವನಿಃ' ಎಂದು ಇವನ ಮತ. ಕ್ಷೇಮೇಂದ್ರನು ಔಚಿತ್ಯಸಂಪ್ರದಾಯಕ್ಕೆ ಮೂಲ. ಇವನು ತನ್ನ 'ಔಚಿತ್ಯವಿಚಾರಚರ್ಚಾ' ಎಂಬ ಗ್ರಂಥದಲ್ಲಿ 'ಔಚಿತ್ಯಸ್ಯ ಚಮತ್ಕಾರಕಾರಿಣಶ್ಚಾರುಚರ್ವಣೇ ರಸ ಜೀವಿತಭೂತಸ್ಯ ವಿಚಾರಂ ಕುರುತೇಽ ಧುನಾ॥'' ಎಂದು ಹೇಳಿದ್ದಾನೆ.

## ಪ್ರಾ ಚೀ ನ ಯು ಗ

### ಭರತ

ಸಮೃದ್ಧವಾಗಿ ಬೆಳೆದಿರುವ ಸಂಸ್ಕೃತ ಸಾಹಿತ್ಯದ ರೂಪುರೇಖೆಗಳನ್ನು ಗುರ್ತಿಸುವ ನೂರಾರು ಲಕ್ಷಣ ಗ್ರಂಥಗಳಿವೆ. ಇವು ಕಾವ್ಯ, ನಾಟ್ಯ, ಛದಸ್ಸು, ಅಭಿನಯ, ಸಂಗೀತಾದಿಗಳ ಸ್ವರೂಪ ವನ್ನು ವಿವರಿಸುತ್ತವೆ. ಭಾಮಹಾದಿಗಳು ತಮ್ಮ ಗ್ರಂಥಗಳಲ್ಲಿ ಸೂಚಿಸಿರುವ ಅನೇಕರ ಕೃತಿ ಗಳಿಂದು ಉಪಲಬ್ಧವಿಲ್ಲ. ಸದ್ಯಕ್ಕೆ ದೊರೆತಿರುವ ಕೃತಿಗಳಲ್ಲೆಲ್ಲಾ ನಾಟ್ಯಶಾಸ್ತ್ರವೇ ಅತ್ಯಂತ ಪ್ರಾಚೀನವಾದುದು. ನಾಟ್ಯ, ಸಂಗೀತ, ಅಭಿನಯಗಳಿಗೇ ಮೀಸಲಾದ ಕೃತಿಯಾದರೂ ಇದು

ಛಂದಸ್ಸು, ರಸ, ಅಲಂಕಾರಾದಿಗಳನ್ನೂ ಪ್ರತಿಪಾದಿಸುತ್ತದೆ. ಆದ್ದರಿಂದ ಇದನ್ನು ಪ್ರಥಮ ಅಲಂಕಾರಗ್ರಂಥವೆಂದು ಪರಿಗಣಿಸಲಾಗಿದೆ ಇದರ 'ವಿಭಾವಾನುಭಾವವ್ಯಭಿಚಾರಿಸಂಯೋಗಾದ್ರಸನಿಷ್ಪತ್ತಿಃ' ಎಂಬ ರಸಸೂತ್ರವನ್ನು ಅವಲಂಬಿಸಿ ಸವಿಸ್ತಾರವಾಗಿ ರಸಸಿದ್ಧಾಂತವು ಬೆಳೆದಿದೆ.

ದೊರೆತಿರುವ ನಾಟ್ಯಶಾಸ್ತ್ರದ ಹಸ್ತಪ್ರತಿಗಳಲ್ಲಿ ಏಕರೂಪತೆ ಇಲ್ಲ; ಶ್ಲೋಕಗಳ ಸಂಖ್ಯೆ, ಅಧ್ಯಾಯಕ್ರಮಾದಿಗಳಲ್ಲಿ ಬಹಳ ವ್ಯತ್ಯಾಸವಿದೆ. ಕೆಲವು ಪ್ರತಿಗಳಲ್ಲಿ ೩೭ ಅಧ್ಯಾಯಗಳಿದ್ದರೆ ಮತ್ತೆ ಕೆಲವು ಪ್ರತಿಗಳಲ್ಲಿ ೩೬ ಅಧ್ಯಾಯಗಳಿವೆ ಅಭಿನವಗುಪ್ತನು ಅಭಿನವ ಭಾರತಿಯ ಪ್ರಾರಂಭದಲ್ಲಿ ನಾಟ್ಯಶಾಸ್ತ್ರದಲ್ಲಿ ೩೬ ಅಧ್ಯಾಯಗಳಿವೆಯೆಂದು ಹೇಳಿ ಆ ಕೃತಿಯನ್ನು ಭರತ ಸೂತ್ರವೆಂದು ಕರೆದಿದ್ದಾನೆ—'ಷಟ್‌ತ್ರಿಂಶಕಂ ಭರತಸೂತ್ರಮಿದಂ ವಿವೃಣ್ವ । ನ್ವಂದೇ ಶಿವಂ ಶ್ರುತಿತದರ್ಥವಿವೇಕಧಾಮ ॥' ನಾಟ್ಯಶಾಸ್ತ್ರವು ಭಾಗ ಭಾಗವಾಗಿ ಭಿನ್ನ ಭಿನ್ನ ಕಾಲಗಳಲ್ಲಿ ಮುದ್ರಣಗೊಂಡಿದೆ. ಭರತಮುನಿಯು ಇಂದ್ರನ ಮುಂದೆ ಅಪ್ಸರಸಾಶ್ರಯವಾದ ನಾಟ್ಯವನ್ನು ಪ್ರದರ್ಶಿಸಿದನೆಂದು ಕಾಳಿದಾಸನ ವಿಕ್ರಮೋರ್ವಶೀಯದಲ್ಲಿ ಹೇಳಿದ್ದಾನೆ 'ಮುನಿನಾ ಭರತೇನ ಯಃ ಪ್ರಯೋಗೋ ಭವತೀಷ್ವಪ್ಸರಸಾಶ್ರಯಃ ಪ್ರಯುಕ್ತಃ। ಲಲಿತಾಭಿನಯಂ ತಮದ್ಯ ಭರ್ತಾ ಮರುತಾಂ ದ್ರಷ್ಟುಮನಾಃ ಸಲೋಕಪಾಲಃ।. ಅಭಿನವಗುಪ್ತನು ನಾಟ್ಯಶಾಸ್ತ್ರದ ಒಂದು ಪಾಠದಲ್ಲಿ ನವರಸಗಳು ಉಕ್ತವಾಗಿವೆಯೆಂದು ತಿಳಿಸುತ್ತಾನೆ "ತಸ್ಮಾದಸ್ತಿ ಶಾಂತೋ ರಸಃ। ತಥಾ ಚ ಚಿರಂತನ ಪುಸ್ತಕೇಷು 'ಸ್ಥಾಯಿನೊ ಭಾವಾನ್ ರಸತ್ವಮುಪನೇಷ್ಯಾಮಃ' ಇತ್ಯನಂತರಂ 'ಶಾಂತೋ ನಾಮ ಶಮಸ್ಥಾಯಿವಿಭಾವಾತ್ಮಕಃ' ಇತ್ಯಾದಿ ಶಾಂತಲಕ್ಷಣಂ ಪಠ್ಯತೇ ।' ಆದ್ದರಿಂದ ಕ್ರಿ ॥ಶ॥ ೪ನೆಯ ಶತಮಾನದಿಂದ ಕ್ರಿ. ಶ. ೮ನೆಯ ಶತಮಾನದೊಳಗೆ ಶಾಂತರಸವನ್ನು ನಾಟ್ಯಶಾಸ್ತ್ರದಲ್ಲಿ ಸೇರಿಸಿರಬೇಕೆಂದು ತೋರುತ್ತದೆ. ಐದನೆಯ ಅಧ್ಯಾಯದ ಕಡೆಯ ೪೦ ಶ್ಲೋಕಗಳು ಕೆಲವು ಪಾಠಗಳಲ್ಲಿಲ್ಲ; ಅವುಗಳಿಗೆ ಅಭಿನವಗುಪ್ತನ ವ್ಯಾಖ್ಯಾನವೂ ಇಲ್ಲ. ಪ್ರಾಯಶಃ ಅವುಗಳನ್ನು ನಂದಿಕೇಶ್ವರನಿಂದ ತೆಗೆದುಕೊಂಡು ಸೇರಿಸಿರಬೇಕು. ಒಂದು ಪಾಠದ ೩೧ ನೆಯ ಅಧ್ಯಾಯ ೩೩೪ ಶ್ಲೋಕಗಳನ್ನು ಹೊಂದಿದ್ದರೆ ಮತ್ತೊಂದು ಪಾಠವು ೫೪೫ ಶ್ಲೋಕಗಳನ್ನು ಹೊಂದಿದೆ. ಹೀಗೆ ನಾಟ್ಯಶಾಸ್ತ್ರದ ಪಾಠಗಳಲ್ಲಿ ಬಹಳ ವ್ಯತ್ಯಾಸವಿದೆ. ಅಭಿನವ ಭಾರತೀಯ ಪಾಠಗಳಲ್ಲಿಯೂ ಸಾಕಷ್ಟು ವ್ಯತ್ಯಾಸವಿದೆ. ರಾಮಾಯಣ, ಭಾರತ ಮುಂತಾದ ಪ್ರಾಚೀನಕೃತಿಗಳಲ್ಲಿ ನಡೆದಿರುವಂತೆ ನಾಟ್ಯ ಶಾಸ್ತ್ರದಲ್ಲಿಯೂ ಧಾರಾಳವಾಗಿ ಪ್ರಕ್ಷೇಪವು ನಡೆದಿದೆ. ಆದ್ದರಿಂದ ನಾಟ್ಯಶಾಸ್ತ್ರದ ಮೂಲ ಸ್ವರೂಪ ಯಾವುದು ಮತ್ತು ಆದರ ಕರ್ತೃ ಯಾರು ಎಂಬ ಪ್ರಶ್ನೆಗಳು ಒಗಟಾಗಿವೆ.

ಮುದ್ರಿತವಾಗಿ ಪ್ರಚಾರದಲ್ಲಿರುವ ನಾಟ್ಯಶಾಸ್ತ್ರದಲ್ಲಿ ಶ್ಲೋಕಗಳ ಜೊತೆಗೆ ಗದ್ಯಭಾಗಗಳೂ ಇವೆ. ಕೆಲವು ಅಧ್ಯಾಯಗಳಲ್ಲಿ ಗದ್ಯವು ಅಧಿಕವಾಗಿದೆ. ಈ ಗದ್ಯಭಾಗಗಳು ಸೂತ್ರ ಮತ್ತು ಭಾಷ್ಯಗಳ ಶೈಲಿಯಲ್ಲಿಯೂ, ನಿರುಕ್ತದಂತೆಯೂ ಇವೆ. ಆರನೆಯ ಅಧ್ಯಾಯದ ರಸಸೂತ್ರ ಭಾಗವು ಸೂತ್ರ ಮತ್ತು ಭಾಷ್ಯಗಳ ಶೈಲಿಯಲ್ಲಿದೆ—'ತತ್ರ ವಿಭಾವಾನುಭಾವವ್ಯಭಿಚಾರಿ

ಸಂಯೋಗಾದ್ರಸನಿಷ್ಪತ್ತಿಃ। ಕೋ ವಾ ದೃಷ್ಟಾಂತ ಇತಿ ಚೇತ್, ಉಚ್ಯತೇ। ಯಥಾ ಹಿ ನಾನಾ ವ್ಯಂಜನೌಷಧಿದ್ರವ್ಯಸಂಯೋಗಾದ್ರಸನಿಷ್ಪತ್ತಿರ್ಭವತಿ। ......ಯಥಾಹಿ-ಗುಡಾದಿಭಿರ್ದ್ರವ್ಯೈ ರ್ವ್ಯಂಜನೌಷಧಿಭಿಶ್ಚ ಷಾಡವಾದಯೋ ರಸಾನಿರ್ವರ್ತ್ಯಂತೇ ತಥಾ ನಾನಾಭಾವೋಪಗತಾ ಅಪಿ ಸ್ಥಾಯಿನೋ ಭಾವಾ ರಸತ್ವಮಾಪ್ನುವಂತೀತಿ ಅತ್ರಾಹ-ರಸ ಇತಿ ಕಃ ಪದಾರ್ಥಃ। ಉಚ್ಯತೇ-ಆಸ್ವಾದ್ಯತ್ವಾತ್।,-ಇತ್ಯಾದಿ. ಇಲ್ಲಿ ಪ್ರಥಮವಾಕ್ಯವು ಸೂತ್ರದಂತಿದ್ದು, ಉಳಿದ ವಾಕ್ಯಗಳು ಭಾಷ್ಯದಂತಿವೆ. ವ್ಯಭಿಚಾರಿಣ ಇದಾನೀಂ ವಕ್ಷ್ಯಾಮಃ। ಅತ್ರಾಹ ವ್ಯಭಿಚಾರಿಣ ಇತಿ ಕಸ್ಮಾದುಚ್ಯತೇ । ವಿ, ಅಭಿ ಇತ್ಯೇತಾವುಪಸರ್ಗೌ । ಚರಗತೌ ಧಾತುಃ।'—ಈ ವಿವರಣೆಯು ನಿರುಕ್ತವನ್ನು ಹೋಲುತ್ತದೆ. ಹೀಗೆ ನಾಟ್ಯಶಾಸ್ತ್ರದಲ್ಲಿ ಸೂತ್ರ. ಭಾಷ್ಯ ಸಂಗ್ರಹ, ಕಾರಿಕಾ ನಿರುಕ್ತಾದಿಗಳ ರೂಪವನ್ನು ಕಾಣುತ್ತೇವೆ.

ನಾಟ್ಯಶಾಸ್ತ್ರದಲ್ಲಿ ಅಲ್ಲಲ್ಲಿ ಅನುವಂಶ್ಯ ಶ್ಲೋಕಗಳೂ, 'ಭವಂತಿ ಚಾತ್ರ ಶ್ಲೋಕಾಃ 'ಅತ್ರಾರ್ಯೇ ಭವತಃ ; 'ಅತ್ರ ಶ್ಲೋಕಾಃ ಎಂದು ಸೂಚಿಸಿಕೊಟ್ಟಿರುವ ಶ್ಲೋಕಗಳೂ ಇವೆ ಪರಂಪರೆಯಿಂದ ಬಂದ ಇವುಗಳನ್ನು ನಾಟ್ಯಶಾಸ್ತ್ರಕಾರನು ಸಂದರ್ಭೋಚಿತವಾಗಿ ಬಳಸಿ ಕೊಂಡಿದ್ದಾನೆ. 'ಸೂತ್ರಾನುಬದ್ಧೇ ಆರ್ಯೇ ಭವತಃ' ಎಂದು ಸೂಚಿಸಿಕೊಟ್ಟಿರುವ ಶ್ಲೋಕ ಗಳು ಸ್ವಂತ ರಚನೆಗಳಾಗಿವೆ. ಈ ಗ್ರಂಥದ ಆರ್ಯಾ, ಉಪಜಾತಿ ಮುಂತಾದ ಛಂದಸ್ಸಿನ ಕೆಲವು ಪದ್ಯಗಳನ್ನು ಬಿಟ್ಟರೆ ಉಳಿದವುಗಳೆಲ್ಲಾ ಶ್ಲೋಕಛಂದಸ್ಸಿನಲ್ಲಿವೆ. ನಾಟ್ಯಶಾಸ್ತ್ರಕಾರನು ಆರು ಮತ್ತು ಏಳನೆಯ ಅಧ್ಯಾಯಗಳ ಗದ್ಯ ಮತ್ತು ಅಲ್ಲಲ್ಲಿ ಬಂದಿರುವ ಆರ್ಯೆಗಳನ್ನು ಪೂರ್ವಾಚಾರ್ಯರಿಂದ ತೆಗೆದುಕೊಂಡಿದ್ದಾನೆಂದು ಅಭಿನವಗುಪ್ತನು ಅಭಿಪ್ರಾಯಪಡುತ್ತಾನೆ. ಗಾನ, ನೃತ್ಯ, ವಾದ್ಯಗಳು ಬಹಳ ಹಿಂದಿನಿಂದಲೂ ಪ್ರಚಾರದಲ್ಲಿದ್ದುವು. ನಾರದನು ಗಾಂಧರ್ವವೇದದ ಕರ್ತೃವೆಂದು ಮಹಾಭಾರತದ ಶಾಂತಿ ಪರ್ವವು ಹೇಳುತ್ತದೆ ನಾರದನು ರಚಿಸಿದ ಗಾಂಧರ್ವವನ್ನು ತಾನು ಪ್ರತಿಪಾದಿಸುವುದಾಗಿ ನಾಟ್ಯಶಾಸ್ತ್ರಕಾರನೇ ಹೇಳಿಕೊಂಡಿದ್ದಾನೆ ನಾಟ್ಯಶಾಸ್ತ್ರವು ಪ್ರಾರಂಭದಲ್ಲಿಯೇ ಬ್ರಹ್ಮನು ನಾಟ್ಯವೇದದ ಕರ್ತೃವೆಂದು ತಿಳಿಸುತ್ತದೆ. ಖಾರವೇಲರಾಜನು ಗಾಂಧರ್ವವೇದಬುಧನೆಂದು ಹತಿಗುಂಫಶಾಸನ (ಸು. ಕ್ರಿ. ಪೂ. ೨೦೦)ವು ತಿಳಿಸುತ್ತದೆ. ಕ್ರಿಸ್ತ ಪೂರ್ವದಿಂದಲೂ ಪ್ರಚಾರದಲ್ಲಿದ್ದ ಗಾನ ಮತ್ತು ನಾಟ್ಯಾಂಶ ಗಳು ನಾಟ್ಯಶಾಸ್ತ್ರದಲ್ಲಿ ಸೇರಿರಬೇಕು. ಶಿಲಾಲಿ ಮತ್ತು ಕೃಶಾಶ್ವರು ನಟಸೂತ್ರಕಾರರೆಂದು ಪಾಣಿನಿಯು ಹೇಳಿದ್ದಾನೆ. ಆದರೆ ಅವರ ಕೃತಿಗಳು ಉಪಲಬ್ಧವಿಲ್ಲ. ಅಲ್ಲದೆ ಅಮರಕೋಶವು ಶೈಲಾಲಿನ್ ಮತ್ತು ಕೃಶಾಶ್ವಿನ್ ಶಬ್ದಗಳನ್ನು ನಟರ ಪರ್ಯಾಯ ಶಬ್ದಗಳನ್ನಾಗಿ ಹೇಳುತ್ತದೆ.

ಭರತಶಬ್ದಕ್ಕೆ 'ನಟ'ನೆಂಬ ಅರ್ಥವಿದೆ. ಭರತ (ನಟ)ನು ನಾಟ್ಯಶಾಸ್ತ್ರವನ್ನು ರಚಿಸಿದನು; ಅವನ ಮಕ್ಕಳು ಅದನ್ನು ಕಲಿತರು. ಆದ್ದರಿಂದ ನಾಟ್ಯಶಾಸ್ತ್ರ ರೂಪಗೊಂಡ ಮೇಲೆ

---

1 ಶೈಲಾಲಿನಸ್ತು ಶೈಲೂಷಾ ಜಾಯಾಜೀವಾ ಕೃಶಾಶ್ವಿನಃ ।
ಭರತಾ ಇತ್ಯಪಿ ನಟಾಶ್ಚಾರಣಾಸ್ತು ಕುಶೀಲವಾಃ ॥

ಆದಕ್ಕೆ ಭರತನೆಂಬ ಕರ್ತೃ ಕಲ್ಪಿತನಾದನೆಂದು ಊಹಿಸಲು ಸಾಧ್ಯವಿದೆ. ಈ ಊಹೆ ಸರಿಯಲ್ಲ. ವೇದ, ಬ್ರಾಹ್ಮಣಾದಿಗಳಲ್ಲಿ ಭರತ ಶಬ್ದವನ್ನು ಹೆಸರನ್ನಾಗಿ ಬಳಸಲಾಗಿದೆ. (ಭರತ–ದೌಷ್ಯಂತಿ). ಪ್ರಾಯಶಃ ಪಾಣಿನಿ ಮತ್ತು ಕಾಲಿದಾಸರ ನಡುಗಾಲದಲ್ಲಿದ್ದ ಭರತನು ನಾಟ್ಯಶಾಸ್ತ್ರವನ್ನು ರಚಿಸಿರಬೇಕು ಮತ್ತು ಅದು ಹಲವರ ಕೈವಾಡದಿಂದ ಈಗಿನ ರೂಪವನ್ನು ಪಡೆದಿರಬೇಕೆಂದು ತೋರುತ್ತದೆ. ನಟರ ನಡತೆಯು ಸರಿಯಾಗಿರಲಿಲ್ಲವಾದ್ದರಿಂದ ಲೋಕವು ಅವರನ್ನು ಕೀಳಾಗಿ ಕಂಡಿತು ; ಧರ್ಮಸೂತ್ರ ಮತ್ತು ಸ್ಮೃತಿಗಳು ಅವರನ್ನು ಯಜ್ಞ, ಭೋಜನಾದಿಗಳಿಂದ ಬಹಿಷ್ಕರಿಸಿದವು. ಆದ್ದರಿಂದ ನಟರ ಸ್ಥಾನವನ್ನು ಉತ್ತಮಪಡಿಸುವುದಕ್ಕಾಗಿ ಸುಮಾರು ಕ್ರಿ. ಶ. ೩ ಅಥವಾ ೪ ನೆಯ ಶತಮಾನಕ್ಕೆ ಹಿಂದೆ ನಾಟ್ಯಶಾಸ್ತ್ರದ ಪ್ರಾರಂಭದಲ್ಲಿ ಐದು ಅಧ್ಯಾಯಗಳನ್ನು ಸೇರಿಸಿರಬೇಕೆಂದು ಊಹಿಸುತ್ತಾರೆ.

ನಾಟ್ಯಶಾಸ್ತ್ರದ ಒಂದು ಪ್ರತಿಯು ಅಂತ್ಯದಲ್ಲಿ ನಂದಿ ಮತ್ತು ಭರತರ ಸಂಗೀತ ಕೃತಿಯೆಂಬ ಮಾತಿದೆ. ನಂದಿ (ನಂದಿಕೇಶ್ವರ) ಗೂ ನಾಟ್ಯಶಾಸ್ತ್ರಕ್ಕೂ ಏನೋ ಸಂಬಂಧವಿರಬೇಕೆನಿಸುತ್ತದೆ. ಶಾಂಡಿಲ್ಯ, ವಾತ್ಸ್ಯ, ಕೋಹಲ, ದಂತಿಲರು ಭರತನ ನೂರು ಮಕ್ಕಳಲ್ಲಿ ಮೊದಲಿಗರು. ಭರತನು ತನ್ನ ಮಕ್ಕಳಿಗೆ ನಾಟ್ಯಶಾಸ್ತ್ರವನ್ನೂ ಅದರ ಪ್ರಯೋಗವನ್ನೂ ಕಲಿಸಿದನು. ನಾಟ್ಯಶಾಸ್ತ್ರದ ಕಡೆಯ ಅಧ್ಯಾಯದಲ್ಲಿ ಕೋಹಲನು ಈ ಗ್ರಂಥದಲ್ಲಿ ಬಿಟ್ಟಿರುವುದನ್ನು ಬೇರೆ ಕೃತಿಯಲ್ಲಿ ವಿವರಿಸು ವನೆಂಬ ಮಾತಿದೆ. ಅಭಿನವ ಭಾರತಿಯಲ್ಲಿ ಅನೇಕ ಕಡೆ ಕೋಹಲನ ಪ್ರಸ್ತಾಪವಿದೆ. ದಾಮೋದರ ಗುಪ್ತ (ಕ್ರಿ .ಶ. ೮ನೆಯ ಶತಮಾನ) ಕುಟ್ಟನೀಮತದಲ್ಲಿ ಕೋಹಲ ಮತ್ತು ಭರತರನ್ನು ನೃತ್ಯವಿಷಯದಲ್ಲಿ ಸಮಾನಾಧಿಕಾರಿಗಳನ್ನಾಗಿ ಹೇಳಿದ್ದಾನೆ ರಾಜಶೇಖರನು ಬಾಲರಾಮಾಯಣದಲ್ಲಿ ಕೋಹಲನೆಂಬ ನಾಟ್ಯಾಚಾರ್ಯನನ್ನು ಹೇಳಿದ್ದಾನೆ. ಶಿಂಗಭೂಪಾಲನು ರಸಾರ್ಣವಸುಧಾಕರದಲ್ಲಿ ಭರತ,ಶಾಂಡಿಲ್ಯ, ಕೋಹಲ, ದತ್ತಿಲ ಮತ್ತು ಮತಂಗರನ್ನು ನಾಟ್ಯ ಗ್ರಂಥಕಾರರೆಂದು ಹೇಳಿದ್ದಾನೆ ಕೋಹಲನಿಗೂ, ಪ್ರಚಾರದಲ್ಲಿರುವ ನಾಟ್ಯ ಶಾಸ್ತ್ರಕ್ಕೂ ಯಾವ ಸಂಬಂಧವಿದೆಯೋ ಖಚಿತವಾಗಿ ತಿಳಿಯದು. ಭರತನು ನಾಟ್ಯವೇದದ ಎರಡು ಸಂಗ್ರಹಗಳನ್ನು ರಚಿಸಿದನೆಂದೂ. ಒಂದರಲ್ಲಿ ೧೨೦೦೦ ಶ್ಲೋಕಗಳು, ಮತ್ತೊಂದರಲ್ಲಿ ೬೦೦೦ ಶ್ಲೋಕಗಳು ಇವೆಯೆಂದೂ ಭಾವಪ್ರಕಾಶನವು ತಿಳಿಸುತ್ತದೆ ವೃದ್ಧಭರತನು ದ್ವಾದಶಸಾಹಸ್ರಿಯನ್ನು ರಚಿಸಿದನೆಂದೂ ಅದು ಉಪಲಬ್ಧವಿದೆಯೆಂದೂ ಮತ್ತು ಭರತನು ೬೦೦೦ ಶ್ಲೋಕಗಳ ನಾಟ್ಯಶಾಸ್ತ್ರದ ಕರ್ತೃವೆಂದೂ ಶ್ರೀ ಕವಿಯು ಹೇಳುತ್ತಾನೆ. ನಾಟ್ಯಶಾಸ್ತ್ರದಲ್ಲಿರುವ ಗದ್ಯದ ಕರ್ತೃ ಭರತವೃದ್ಧನೆಂದು ಭಾವ ಪ್ರಕಾಶನವು ತಿಳಿಸುತ್ತದೆ.—"ಏವಂ ಹಿ ನಾಟ್ಯವೇದೇsಸ್ಮಿನ್ ಭರತೇನೋಚ್ಯತೇ ರಸಃ! ತಥಾ ಭರತವೃದ್ಧೇನ ಕಥಿತಂ ಗದ್ಯಮೀದೃಶಂ, ॥ ಯಥಾ ನಾನಾ ಪ್ರಕಾರೈರ್ವ್ಯಂಜನೌಷಧೈಶ್ಚ—", ಆರು ಸ್ಕಂಧಗಳು, ೩೨ ಅಧ್ಯಾಯಗಳು, ೨೨೧ ಪ್ರಕರಣಗಳು ಮತ್ತು ೬೦೦೦ ಶ್ಲೋಕಗಳನ್ನುಳ್ಳ ಆದಿಭರತನ ನಾಟ್ಯಶಾಸ್ತ್ರಕ್ಕೆ ವ್ಯಾಖ್ಯಾನವಾದ 'ನಾಟ್ಯಸರ್ವಸ್ವದೀಪಿಕಾ' ಎಂಬ ಕೃತಿ ಇರುವುದಾಗಿ ತಿಳಿದು ಬರುತ್ತದೆ. ಸಂಸ್ಕೃತ ನಾಟಕಗಳ ರಾಘವ ಭಟ್ಟನೇ ಮುಂತಾದ ವ್ಯಾಖ್ಯಾಕಾರರು

ಆದಿಭರತನಿಂದಲೂ, ಭರತನಿಂದಲೂ ಶ್ಲೋಕಗಳನ್ನು ಉದ್ಧರಿಸಿದ್ದಾರೆ ಅನೇಕ ಶ್ಲೋಕಗಳು ಸಮಾನವಾಗಿದ್ದರೂ ಅವರಿಗೆ ಎರಡು ಪ್ರತ್ಯೇಕ ಹಸ್ತಪ್ರತಿಗಳು ದೊರೆತಿರಬೇಕು ಒಟ್ಟಿನಲ್ಲಿ ನಾಟ್ಯಶಾಸ್ತ್ರಕ್ಕೆ ಹಲವು ಅಂಶಗಳು ಸೇರಿ ಈಗಿನ ರೂಪ ಬಂದಿದೆಯೆಂದು ಹೇಳಬಹುದು.

ನಾಟ್ಯಶಾಸ್ತ್ರದ ಕಾಲವನ್ನು ಕ್ರಿ. ಪೂ. ೨೦೦ ರಿಂದ ಕ್ರಿ. ಶ. ೩೦೦ ರವರೆಗೆ ವಿಮರ್ಶಕರು ಎಳೆದಾಡಿದ್ದಾರೆ ನಾಟ್ಯಶಾಸ್ತ್ರದಲ್ಲಿ ವಿಶ್ವಕರ್ಮಾ, ಪುರಾಣ, ಪೂರ್ವಾಚಾರ್ಯರು, ಕಾಮತಂತ್ರ ಬೃಹಸ್ಪತಿ, ನಾರದ, ತಂಡು, ಪಾಶುಪತ, ಶಬರ, ಆಭೀರ, ದ್ರವಿಡ ಮುಂತಾದ ವ್ಯಕ್ತಿಗಳ ಮತ್ತು ಕೃತಿಗಳ ಪ್ರಸ್ತಾಪವಿದೆ ಇದರಿಂದ ಕಾಲನಿರ್ಣಯಕ್ಕೆ ಯಾವ ಸಹಾಯವೂ ಆಗವುದಿಲ್ಲ. ಆದರೂ ನಾಟ್ಯಶಾಸ್ತ್ರವು ಕ್ರಿಸ್ತಶಕದ ಪ್ರಾರಂಭಕ್ಕಿಂತ ಹಿಂದಿನದಲ್ಲವೆಂದು ಊಹಿಸಬಹುದು. ಕಾಳಿದಾಸ (ಕ್ರಿ.ಶ. ೪ ಅಥವಾ ೫ನೆಯ ಶತಮಾನ) ನ ವಿಕ್ರಮೋರ್ವಶೀಯ ನಾಟಕದಿಂದ ಭರತನು ನಾಟ್ಯಶಾಸ್ತ್ರದ ಕರ್ತೃವೆಂದೂ, ಅಷ್ಟರಸಗಳನ್ನು ಪ್ರತಿಪಾದಿಸಿರುವನೆಂದೂ, ದೇವತೆಗಳ ಮುಂದೆ ನಾಟಕವನ್ನು ಪ್ರದರ್ಶಿಸಿದನೆಂದೂ ತಿಳಿದುಬರುತ್ತದೆ — "ಮುನಿನಾ ಭರತೇನ ಯಃ ಪ್ರಯೋಗೋ ಭವತೀಷ್ವಷ್ಟರಸಾಶಯಃ ಪ್ರಯುಕ್ತಃ। ಲಲಿತಾಭಿನಯಂ ತಮದ್ಯ ಭರ್ತಾ ಮರುತಾಂ ದ್ರಷ್ಟುಮನಾಃ ಸಲೋಕಪಾಲಃ॥ ". ಕುಟ್ಟಿನೀಮತ (ಕ್ರಿ.ಶ.ಸು. ೮ ನೆಯ ಶತಕ), ಧ್ವನ್ಯಾಲೋಕ (ಕ್ರಿ.ಶ. ೯ನೆಯ ಶತಕ) ಮುಂತಾದ ಕೃತಿಗಳಲ್ಲಿ ಭರತನ ಅಥವಾ ಅವನ ಅಭಿಪ್ರಾಯದ ಪ್ರಸ್ತಾಪವಿದೆ. ಭಾಮಹ, ಭಟ್ಟಿ, ದಂಡಿ, ಉದ್ಭಟ ಮುಂತಾದ ಅಲಂಕಾರಿಕರು ಸುಮಾರು ೩೦ಅಲಂಕಾರಗಳನ್ನು ಹೇಳಿದ್ದಾರೆ ಭರತನು ೪ ಅಲಂಕಾರಗಳನ್ನು ಮಾತ್ರ ಹೇಳಿದ್ದಾನೆ. ಆದ್ದರಿಂದ ನಾಟ್ಯಶಾಸ್ತ್ರವು ಕ್ರಿ.ಶ. ೩ ನೆಯ ಶತಮಾನಕ್ಕಿಂತ ಹಿಂದೆ ರಚಿತವಾಗಿರಬೇಕೆಂದು ಹೇಳಬಹುದು.

ನಾಟ್ಯಶಾಸ್ತ್ರದಲ್ಲೆ ೩೬ ಅಧ್ಯಾಯಗಳಿವೆ. ಇವುಗಳಲ್ಲಿ ಅನೇಕ ವಿಷಯಗಳನ್ನು ಪ್ರತಿ ಪಾದಿಸಲಾಗಿದೆ.

ಭರತನ ನಾಟ್ಯಶಾಸ್ತ್ರಕ್ಕೆ ಹಲವರು ವ್ಯಾಖ್ಯಾನವನ್ನು ಬರೆದಿದ್ದಾರೆ. ಶಾರ್ಙ್ಗದೇವನ ಸಂಗೀತರತ್ನಾಕರವು ನಾಟ್ಯಶಾಸ್ತ್ರದ ಐವರು ವ್ಯಾಖ್ಯಾಕಾರರನ್ನು ಹೆಸರಿಸುತ್ತದೆ—

ವ್ಯಾಖ್ಯಾತಾರೋ ಭಾರತೀಯೇ ಲೋಲ್ಲಟೋದ್ಭಟ ಶಂಕುಕಾಃ। ಭಟ್ಟಾಭಿನವ ಗುಪ್ತಶ್ಚ ಶ್ರೀಮತ್ಕೀರ್ತಿಧರೋಽಪರಃ॥ ಸುಪ್ರಸಿದ್ಧ ವಿದ್ವಾಂಸನಾದ ಅಭಿನವ ಗುಪ್ತನು ನಾಟ್ಯಶಾಸ್ತ್ರಕ್ಕೆ 'ಅಭಿನವಭಾರತೀ(ನಾಟ್ಯವೇದವಿವೃತಿ)' ಎಂಬ ಪಾಂಡಿತ್ಯಪೂರ್ಣವಾದ ವ್ಯಾಖ್ಯಾನವನ್ನು ಬರೆದಿದ್ದಾನೆ. ಇದು ಸಂಪೂರ್ಣವಾಗಿ ದೊರೆತಿಲ್ಲ. ಅಭಿನವಗುಪ್ತನು ಉದ್ಭಟ, ಔದ್ಭಟರು, ಶಕಲೀ ಗರ್ಭ, ಲೋಲ್ಲಟ, ಗೋಪಾಲ, ಭಟ್ಟನಾಯಕ ಪ್ರಿಯಾತಿಥಿ, ಭಟ್ಟಶಂಕರ ಮುಂತಾದವರ ಅಭಿಪ್ರಾಯವನ್ನು ಅಲ್ಲಲ್ಲಿ ಪ್ರಸ್ತಾಪಿಸಿದ್ದಾನೆ. ಲೋಲ್ಲಟ (ಸು.ಕ್ರಿ.ಶ. ೭೫೦-೮೦೦)ನು ನಾಟ್ಯ ಶಾಸ್ತ್ರದ ಕೆಲವು ಅಧ್ಯಾಯಗಳಿಗಾದರೂ 'ರಸವಿವರಣ' ವೆಂಬ ವ್ಯಾಖ್ಯಾನವನ್ನು ಬರೆದಿರಬೇಕೆಂದು ಭಾವಿಸಲಾಗಿದೆ, ಹೇಮಚಂದ್ರ, ಮಾಣಿಕ್ಯಚಂದ್ರ, ಸೋಮೇಶ್ವರ,ನಮಿಸಾಧು ಮೊದಲಾದವರು,

ಲೋಲ್ಲಟನ ಮಾತುಗಳನ್ನು ಉದ್ಧರಿಸಿದ್ದಾರೆ. ಭಟ್ಟನಾಯಕನು ನಾಟ್ಯಶಾಸ್ತ್ರಕ್ಕೆ ವ್ಯಾಖ್ಯಾನವನ್ನು ಬರೆದಿದ್ದಾನೋ ಅಥವಾ ಸ್ವತಂತ್ರ ಗ್ರಂಥವನ್ನು ರಚಿಸಿದ್ದಾನೋ ತಿಳಿಯದು. ಅಭಿನವಗುಪ್ತನು ಅನೇಕ ಕಡೆ ಶಂಕುಕನ ಅಭಿಪ್ರಾಯವನ್ನು ಪ್ರಸ್ತಾಪಿಸಿದ್ದಾನೆ ಆದರೆ ಇವನು ಬರೆದಿರಬಹುದಾದ ವಾಖ್ಯಾನವು ಉಪಲಬ್ಧವಿಲ್ಲ.

ಭಾಮಹನು ತನ್ನ ಕಾವ್ಯಾಲಂಕಾರದಲ್ಲಿ ಮೇಧಾವಿಯನ್ನು ಎರಡು ಸಲ ಪ್ರಸ್ತಾಪಿಸಿದ್ದಾನೆ. ನಮಿಸಾಧು ರುದ್ರಟನ ಕಾವ್ಯಾಲಂಕಾರದ ವ್ಯಾಖ್ಯಾನದಲ್ಲಿ 'ನನು ದಂಡಿಮೇಧಾವಿರುದ್ರಭಾಮಹಾದಿಕೃತಾನಿ ಸಂತ್ಯೇವಾಲಂಕಾರಶಾಸ್ತ್ರಾಣಿ' ಎಂದು ಹೇಳಿದ್ದಾನೆ.

## ವಿಷ್ಣುಧರ್ಮೋತ್ತರ ಪುರಾಣ

ವಿಷ್ಣುಧರ್ಮೋತ್ತರ ಪುರಾಣದಲ್ಲಿ ಮೂರು ಖಂಡಗಳೂ, ಪ್ರತಿಖಂಡದಲ್ಲಿ ಹಲವು ಕಾಂಡಗಳೂ ಇವೆ. ಮೂರನೆಯ ಖಂಡದ ೧೦೦೦ ಶ್ಲೋಕಗಳಲ್ಲಿ ನಾಟ್ಯಶಾಸ್ತ್ರ, ಕಾವ್ಯಾಲಂಕಾರ, ಗೀತ, ಆತೋದ್ಯ. ಮುದ್ರಾಹಸ್ತ, ಪ್ರತ್ಯಂಗವಿಭಾಗಗಳು ನಿರೂಪಿತವಾಗಿವೆ. ಮೊದಲನೆಯ ಕಾಂಡವು ವಜ್ರ ಮತ್ತು ಮಾರ್ಕಂಡೇಯರ ಸಂವಾದದಿಂದ ಪ್ರಾರಂಭವಾಗುತ್ತದೆ. ೩ ನೆಯ ಕಾಂಡದಲ್ಲಿ ಛಂದಸ್ಸು, ೧೪ರಲ್ಲಿ ಅನುಪ್ರಾಸ, ರೂಪಕ ಮುಂತಾದ ಹದಿನೇಳು ಅಲಂಕಾರಗಳು, ೧೫ರಲ್ಲಿ ಕಾವ್ಯವಿಚಾರ, ೧೭ರಲ್ಲಿ ದೃಶ್ಯಕಾವ್ಯ ೧೮ರಲ್ಲಿ ನಾಯಿಕೆಯರು, ೩೦–೩೧ ರಲ್ಲಿ ರಸಭಾವಗಳು ನಿರೂಪಿತವಾಗಿವೆ. ಈ ಪುರಾಣವು ನವರಸಗಳಿಂದ ಕಾವ್ಯವು ಕೂಡಿರಬೇಕೆಂದು ತಿಳಿಸುತ್ತದೆ— 'ರಸೈಃ ಕಾರ್ಯಂ ಸಮನ್ವಿತಂ.' ವಿಷ್ಣುಧರ್ಮೋತ್ತರ ಪುರಾಣವು ಅನುಪ್ರಾಸ, ಯಮಕ, ರೂಪಕ, ವ್ಯತಿರೇಕ, ಶ್ಲೇಷ, ಉತ್ಪ್ರೇಕ್ಷಾ, ಅರ್ಥಾಂತರನ್ಯಾಸ, ಉಪನ್ಯಾಸ, ವಿಭಾವನಾ, ಅತಿಶಯೋಕ್ತಿ, ವಾರ್ತಾ, ಯಥಾಸಂಖ್ಯ, ವಿಶೇಷೋಕ್ತಿ, ವಿರೋಧ, ನಿಂದಾಸ್ತುತಿ, ನಿದರ್ಶನ, ಅನನ್ವಯಗಳೆಂಬ ಹದಿನೇಳು ಅಲಂಕಾರಗಳನ್ನು ಹೇಳುತ್ತದೆ. ಭರತನ ನಾಟ್ಯಶಾಸ್ತ್ರವು ದಶರೂಪಕಗಳನ್ನು ಹೇಳಿದ್ದರೆ ಈ ಪುರಾಣವು ದ್ವಾದಶರೂಪಕಗಳನ್ನು ಹೇಳುತ್ತದೆ.

## ಭಾಮಹ

ಭರತನು ತನ್ನ ನಾಟ್ಯಶಾಸ್ತ್ರದಲ್ಲಿ ಮೊಟ್ಟಮೊದಲಿಗೆ ಕೆಲವು ಅಲಂಕಾರಗಳನ್ನು ಹೇಳಿದ್ದಾನೆ. ಭಾಮಹನಾದರೋ ಅಲಂಕಾರಗಳನ್ನು ಹೊಸ ವಿಚಾರಗಳಿಂದ ಪುಷ್ಟೀಕರಿಸಿ ವಿಸ್ತಾರವಾಗಿ ಪ್ರತಿಪಾದಿಸಿದ್ದಾನೆ. ಅಲಂಕಾರಶಾಸ್ತ್ರಕಾರರಲ್ಲಿ ಭಾಮಹನೇ ಮೊದಲಿಗ. ತನ್ನ ಹಿಂದೆ ಕೆಲವರು ಆಲಂಕಾರಿಕರಿದ್ದರೆಂದೂ, ಅವರಿಂದ ತಾನು ಉಪಕೃತನೆಂದೂ ಭಾಮಹನು ತನ್ನ ಕೃತಿಯಲ್ಲಿ ಅನೇಕ ಕಡೆ ಹೇಳಿಕೊಂಡಿದ್ದಾನೆ.

ಸಮಾಸೇನೋದಿತಮಿದಂ ಧೀಶೇದಾಯೈವ ವಿಸ್ತರಃ ।
ಅಸಂಗೃಹೀತಮಪ್ಯನ್ಯದಭ್ಯೂಹ್ಯಮನಯಾ ದಿಶಾ ॥ ೨-೯೫ ॥

ಇತಿ ನಿಗದಿತಾಸ್ತಾಸ್ತಾ ವಾಚಾಮಲಂಕೃತಯೋ ಮಯಾ ।
ಬಹುವಿಧಕೃತೀರ್ದೃಷ್ಟ್ವಾನ್ಯೇಷಾಂ ಸ್ವಯಂ ಪರಿತರ್ಕ್ಯ ಚ ॥ ೫-೬೯ ॥

ಅಲ್ಲದೆ ಭಾಮಹನು ತನ್ನ ಪ್ರಾಚೀನ ಆಲಂಕಾರಿಕನಾದ ಮೇಧಾವಿಯ ಹೆಸರನ್ನು ಎರಡು ಕಡೆ ಹೇಳಿದ್ದಾನೆ. ನಮಿಸಾಧು ಮೇಧಾವಿಯನ್ನು ಮೇಧಾವಿರುದ್ರನೆಂದು ಕರೆದಿದ್ದಾನೆ ; ಮೇಧಾವಿ ರುದ್ರನೆಂಬ ಹೆಸರು ರಾಜಶೇಖರನ ಕೃತಿಯಲ್ಲಿಯೂ ದೊರೆಯುತ್ತದೆ. ಭರತನಿಗೂ ಭಾಮಹ ನಿಗೂ ಮಧ್ಯದಲ್ಲಿದ್ದ ಆಲಂಕಾರಿಕರ ವಿಚಾರವಾಗಿ ಹೆಚ್ಚು ತಿಳಿಯದು. ಕಾಶ್ಯಪ, ವರರುಚಿಗಳೂ ಲಕ್ಷಣಗ್ರಂಥಗಳನ್ನು ಬರೆದಿದ್ದರೆಂಬ ಪ್ರತೀತಿಯಿದೆ.

ಭಾಮಹನ ಜೀವಿತ ವೃತ್ತಾಂತ ತಿಳಿಯದು. ಅವನು ತಾನು ರಕ್ರಿಲಗೋಮಿಯ ಮಗ ನೆಂದು ಹೇಳಿಕೊಂಡಿದ್ದಾನೆ[1]. ರಕ್ರಿಲಗೋಮಿಯೆಂಬ ಹೆಸರು ಭಾಮಹನು ಬೌದ್ಧನೆಂಬ ಚರ್ಚೆಗೆ ಅವಕಾಶವಿತ್ತಿದೆ. 'ರಕ್ರಿಲ' ಎಂಬ ಹೆಸರು 'ರಾಹುಲ ಪೋಟಲ' ಮುಂತಾದ ಬೌದ್ಧರ ಹೆಸರನ್ನು ಹೋಲುವುದರಿಂದಲೂ ; ಗೋಮಿನ್ ಎಂಬ ಹೆಸರು ಬೌದ್ಧರಲ್ಲಿ ವಿಶೇಷವಾಗಿ ಇರುತ್ತಿದ್ದುದರಿಂದಲೂ ಭಾಮಹನು ಬೌದ್ಧನಾಗಿರಬೇಕೆಂದು ಕೆಲವರು ಊಹಿಸಿದ್ದಾರೆ. ಮಂಗಳ ಪದ್ಯದಲ್ಲಿರುವ 'ಪ್ರಣಮ್ಯ ಸಾರ್ವಜ್ಞಂ' ಎಂಬ ಮಾತೂ ಇದಕ್ಕೆ ಪೋಷಕ ವಾಗಿದೆ.

ಅಭಿನವಗುಪ್ತ (ಕಿ. ಶ. ೧೦೦೦)ನ ಲೋಚನದಲ್ಲಿ ಭಾಮಹನ ಪ್ರಸ್ತಾಪವಿದೆ ಆನಂದ ವರ್ಧನ (ಸು. ಕ್ರಿ. ಶ ೯ನೆಯ ಶತ)ನ ಧ್ವನ್ಯಾಲೋಕದ ವೃತ್ತಿಯಲ್ಲಿ ಭಾಮಹನ ವಾಕ್ಯೋ ದ್ಧರಣವಿದೆ ಉದ್ಭಟ (ಕ್ರಿ. ಶ. ೮ನೆಯ ಶತ)ನು ಭಾಮಹ ವಿವರಣವೆಂಬ ದೊಡ್ಡ ವ್ಯಾಖ್ಯಾನವನ್ನು ಬರೆದಿದ್ದಾನೆ ; ಈಗ ಇದು ಖಂಡಶಃ ಅಚ್ಚಾಗಿದೆ. ಉದ್ಭಟನ ಸಮಕಾಲೀನ ನಾದ ವಾಮನನಿಗೂ ಭಾಮಹನ ಕೃತಿಯ ಪರಿಚಯವಿದ್ದಿತು. ಆದ್ದರಿಂದ ಭಾಮಹನು ಉದ್ಭಟ ಮತ್ತು ವಾಮನರಿಗಿಂತ ಹಿಂದಿನವನೆಂಬುದು ಸ್ಪಷ್ಟ. ಹೀಗೆ ಭಾಮಹನ ಈಚಿನ ಅವಧಿಯನ್ನು ನಿರ್ಣಯಿಸಿದರೂ ಹಿಂದಿನ ಅವಧಿಯ ವಿಚಾರವಾಗಿ ಬಹಳ ಅಭಿಪ್ರಾಯ

---

೧ ಅವಲೋಕ್ಯಮತಾನಿ ಸತ್ಕವೀನಾ-
ಮವಗಮ್ಯ ಸ್ವಧಿಯಾ ಚ ಕಾವ್ಯಲಕ್ಷ್ಮ ।
ಸುಜನಾವಗಮಾಯ ಭಾಮಹೇನ
ಗ್ರಥಿತಂ ರಕ್ರಿಲಗೋಮಿಸೂನುನೇದಮ್ ॥

ಕಾವ್ಯಾಲಂಕಾರ. (೬. ೬೪.)

ಭೇದವಿದೆ. ಜಯಾದಿತ್ಯ ಮತ್ತು ವಾಮನರು ಪಾಣಿನಿಯ ಸೂತ್ರಗಳಿಗೆ ಬರೆದಿರುವ 'ಕಾಶಿಕಾ' ಎಂಬ ವ್ಯಾಖ್ಯಾನಕ್ಕೆ ಜಿನೇಂದ್ರ ಬುದ್ಧಿಯು 'ಕಾಶಿಕಾವಿವರಣಪಂಚಿಕಾ' ಎಂಬ ಬೃಹದ್ವ್ಯಾಖ್ಯಾನವನ್ನು ಬರೆದಿದ್ದಾನೆ. ಇದನ್ನು ನ್ಯಾಸವೆಂದೂ ಕರೆಯುತ್ತಾರೆ. ಭಾಮಹನಿಗೆ ಈ ನ್ಯಾಸದ ಪರಿಚಯವಿದ್ದಿತ್ತು. ಇತ್ಸಿಂಗನ ಬರವಣಿಗೆಯಿಂದ ಜಯಾದಿತ್ಯನು ೬೬೧-೬೨ ರಲ್ಲಿ ಕಾಲವಾದನೆಂದು ತಿಳಿದುಬರುತ್ತದೆ. ನ್ಯಾಸವು ಕ್ರಿ.ಶ. ೭೦೦ಕ್ಕಿಂತ ಈಚಿನದಾಗಿರಲಾರದು. ಜಾಕೋಬಿಯು ಬೌದ್ಧನಾದ ಧರ್ಮಕೀರ್ತಿಯಿಂದ ಭಾಮಹನು ಉಪಕೃತನೆಂದೂ, ಧರ್ಮ ಕೀರ್ತಿಯ ಕಾಲ ಏಳನೆಯ ಶತಕವೆಂದೂ, ಆದ್ದರಿಂದ ಭಾಮಹನ ಕಾಲ ಏಳನೆಯ ಶತಕದ ಅಂತ್ಯ ಭಾಗವೆಂದೂ ಹೇಳುತ್ತಾನೆ. ಶಾಂತರಕ್ಷಿತನು (೭೦೫-೬೨) ತನ್ನ ತತ್ತ್ವಸಂಗ್ರಹದಲ್ಲಿ ಭಾಮಹ ನನ್ನು ಖಂಡಿಸಿದ್ದಾನೆ. ಮೇಲಿನ ಅಂಶಗಳಿಂದ ಭಾಮಹನ ಕಾಲ ಸು. ಕ್ರಿ ಶ. ೭ನೆಯ ಶತಕದ ಅಂತ್ಯ ಅಥವಾ ೮ನೆಯ ಶತಕದ ಆದಿಯಾಗಿರಬೇಕೆಂದು ತೋರುತ್ತದೆ. ಧರ್ಮಕೀರ್ತಿ ಮತ್ತು ಭಾಮಹರು ಸಮಕಾಲೀನರಾಗಿದ್ದಿರಬಹುದು.

ಕಾವ್ಯಾಲಂಕಾರವು ಭಾಮಹನಿಂದ ರಚಿತವಾದ ಅಲಂಕಾರಗ್ರಂಥ. ವಾಮನನ ಗ್ರಂಥದ ಟೀಕೆಯಾದ ಕಾಮಧೇನುವಿನಲ್ಲಿ ಭಾಮಹನ ಹೆಸರಿನಲ್ಲಿ ಕೆಲವು ಸೂತ್ರ, ವೃತ್ತಿ ಮತ್ತು ಅಲಂಕಾರ ಗಳನ್ನು ಉದ್ಧರಿಸಲಾಗಿದೆ. ಆದರೆ ಇವು ಕಾವ್ಯಾಲಂಕಾರದಲ್ಲಿಲ್ಲ. ನಾರಾಯಣನು ವೃತ್ತರತ್ನಾ ಕರದ ವ್ಯಾಖ್ಯಾನದಲ್ಲಿ ಭಾಮಹನಿಂದ ಛಂದಸ್ಸಿನ ವಿಚಾರವನ್ನು ಉದ್ಧರಿಸಿದ್ದಾನೆ. ರಾಘವ ಭಟ್ಟನು ಶಾಕುಂತಲದ ವ್ಯಾಖ್ಯಾನದಲ್ಲಿ 'ಕ್ಷೇಮಂ ಸರ್ವಗುರುರ್ಧತ್ತೇ ಮಗಣೋಭೂಮಿದೈವತಃ. ಇತಿ ಭಾಮಹೋಕ್ತೇಃ' ಎಂದು ಬರೆದಿದ್ದಾನೆ. ಆದ್ದರಿಂದ ಭಾಮಹನು ಛಂದಸ್ಸಿನ ಮೇಲೂ ಬರೆದಿರಬೇಕೆನಿಸುತ್ತದೆ. ವರರುಚಿಯ ವ್ಯಾಕರಣಕ್ಕೆ ಟೀಕೆಯನ್ನು ಬರೆದಿರುವ ಭಾಮಹನೂ, ಕಾವ್ಯಾಲಂಕಾರದ ಭಾಮಹನೂ ಒಬ್ಬನೆಂಬುದರಲ್ಲಿ ಸಂಶಯವಿದೆ. ಕಾವ್ಯಾಲಂಕಾರದಲ್ಲಿ ೬ ಪರಿಚ್ಛೇದಗಳೂ, ೩೯೬ ಕಾರಿಕೆಗಳೂ ಇವೆ। ಶ್ಲೋಕಛಂದಸ್ಸನ್ನು ಹೆಚ್ಚಾಗಿ ಬಳಸಲಾಗಿದೆ.

ಮೊದನೆಯ ಪರಿಚ್ಛೇದದಲ್ಲಿ ಕಾವ್ಯದ ಉದ್ದೇಶ, ಕವಿಯ ಅರ್ಹತೆ, ಕಾವ್ಯಲಕ್ಷಣ ಮತ್ತು ಕಾವ್ಯ ವಿಭಾಗಗಳು ಬಂದಿವೆ. ಗದ್ಯ, ಪದ್ಯ, ಸಂಸ್ಕೃತ, ಪ್ರಾಕೃತ, ಅಪಭ್ರಂಶ, ಕಲಾ ಶ್ರಯ, ಶಾಸ್ತ್ರಾಶ್ರಯ. ಆಖ್ಯಾಯಿಕಾ, ಕಥಾ—ಇವು ಭಾಮಹನು ಹೇಳಿರುವ ಕಾವ್ಯ ವಿಧ

---

೧ ಷಷ್ಟ್ಯಾ ಶರೀರಂ ನಿರ್ಣೀತಂ ಶತಷಷ್ಟ್ಯಾ ತ್ವಲಂಕೃತಿಃ ।
ಪಂಚಾಶತಾ ದೋಷದೃಷ್ಟಿಃ ಸಪ್ತತ್ಯಾ ನ್ಯಾಯನಿರ್ಣಯಃ ॥ ೬೫ ॥

ಷಷ್ಟ್ಯಾ ಶಬ್ದಸ್ಯ ಶುದ್ಧಿಃ ಸ್ಯಾದಿತ್ಯೇವಂ ವಸ್ತು ಪಂಚಕಂ ।
ಉಕ್ತಂ ಷಡ್ಭಿಃ ಪರಿಚ್ಛೇದೈ ರ್ಭಾಮಹೇನ ಕ್ರಮೇಣ ವಃ ॥ ॥ ೬೬ ॥

ಕಾವ್ಯಾಲಂಕಾರ

ಗಳು. ವೈದರ್ಭ, ಗೌಡ (ಶೈಲಿ) ರೀತಿಗಳನ್ನೂ, ನೇಯಾರ್ಥ ಕ್ಲಿಷ್ಟ ಮುಂತಾದ ಕೆಲವು ದೋಷ ಗಳನ್ನೂ ಈ ಪರಿಚ್ಛೇದವಲ್ಲಿ ಹೇಳಿದ್ದಾನೆ.

ಎರಡನೆಯ ಪರಿಚ್ಛೇದದಲ್ಲಿ ಮಾಧುರ್ಯ, ಓಜಸ್ಸು, ಪ್ರಸಾದಗಳೆಂಬ ಮೂರು ಗುಣಗಳನ್ನು ಹೇಳಿ ಅಲಂಕಾರಗಳನ್ನು ಪ್ರಾರಂಭಿಸಿದ್ದಾನೆ. ಅವು ಮೂರನೆಯ ಪರಿಚ್ಛೇದದಲ್ಲಿ ಮುಕ್ತಾಯ ಗೊಳ್ಳುತ್ತವೆ.

ನಾಲ್ಕನೆಯ ಪರಿಚ್ಛೇದದಲ್ಲಿ ಅಪಾರ್ಥ, ವ್ಯರ್ಥ, ಮುಂತಾದ ಹನ್ನೊಂದು ಕಾವ್ಯ ದೋಷಗಳನ್ನು ಹೇಳಿದ್ದಾನೆ. ಈ ಪರಿಚ್ಛೇದದಲ್ಲಿ ಹತ್ತು ದೋಷಗಳಿಗೆ ಲಕ್ಷಣವನ್ನು ಹೇಳಿ ಐದನೆಯ ಪರಿಚ್ಛೇದದಲ್ಲಿ ಹನ್ನೊಂದನೆಯದೋಷದ ಲಕ್ಷಣವನ್ನು ಹೇಳಿದ್ದಾನೆ ಹೇತು, ಪ್ರತಿಜ್ಞಾ ಅಥವಾ ದೃಷ್ಟಾಂತದ ತಪ್ಪಿನಿಂದ ದೋಷವು ಸಂಭವಿಸುತ್ತದೆಂದು ಹೇಳಿ, ನ್ಯಾಯ-ವೈಶೇಷಿಕ ಮತಾನುಸಾರವಾಗಿ ಪ್ರಮಾಣ, ಪ್ರತಿಜ್ಞಾ ಮತ್ತು ದೃಷ್ಟಾಂತಗಳ ವಿವರಣೆಯನ್ನು ಕೊಟ್ಟಿದ್ದಾನೆ.

ಆರನೆಯ ಪರಿಚ್ಛೇದದಲ್ಲಿ ಸೌಶಬ್ದ್ಯವನ್ನು ಕುರಿತು ಕವಿಗಳಿಗೆ ಮಾರ್ಗದರ್ಶನ ಮಾಡಿದ್ದಾನೆ. ಇಲ್ಲಿ ವ್ಯಾಕರಣದ ವಿಚಾರವೂ ಇದೆ. ।

ಭಾಮಹನು 'ಶಬ್ದಾರ್ಥೌ ಸಹಿತೌ ಕಾವ್ಯಂ' ಎಂದು ಕಾವ್ಯ ಲಕ್ಷಣವನ್ನು ಹೇಳಿದ್ದಾನೆ. ಭರತನು ಹತ್ತು ಗುಣಗಳನ್ನು ಹೇಳಿದ್ದರೆ ಇವನು ಮೂರೇ ಗುಣಗಳನ್ನು ಪ್ರತಿಪಾದಿಸಿದ್ದಾನೆ. ಅನುಪ್ರಾಸಾದಿ ಶಬ್ದಾಲಂಕಾರಗಳೂ, ಉಪಮಾದಿ ಅರ್ಥಾಲಂಕಾರಗಳೂ ಸೇರಿ ಒಟ್ಟು ೩೮ ಅಲಂಕಾರಗಳು, ನಿರೂಪಿತವಾಗಿವೆ. ಇತರರು ಹೇಳಿರುವ ಹೇತು, ಸೂಕ್ಷ್ಮ ಲೇಶ ಎಂಬ ಅಲಂಕಾರ ಗಳಿಗೆ ಇವನು ಅಲಂಕಾರತ್ವವನ್ನು ನಿಷೇಧಿಸಿದ್ದಾನೆ.[2] ಇವುಗಳಲ್ಲಿ ವಕ್ರೋಕ್ತಿ ಇಲ್ಲವಾಗಿ ಇವು ಅಲಂಕಾರಗಳಲ್ಲವೆಂಬುದು ಇವನ ಅಭಿಪ್ರಾಯ. ಅಲಂಕಾರ ಶಾಸ್ತ್ರದಲ್ಲಿ ಭಾಮಹನು ವಕ್ರೋಕ್ತಿ ಸಂಪ್ರದಾಯದ ಪ್ರವರ್ತಕ. ಅಲಂಕಾರಗಳಲ್ಲಿ ವಕ್ರೋಕ್ತಿಯೇ ಮುಖ್ಯವೆಂದು ಅವನ ಅಭಿಪ್ರಾಯ—

---

೧ ವಾಮನನೂ ತನ್ನ ಕಾವ್ಯಾಲಂಕಾರ ಸೂತ್ರವೃತ್ತಿಯ ಐದನೆಯ ಅಧಿಕರಣದಲ್ಲಿ ವಿಸ್ತಾರವಾಗಿ ವ್ಯಾಕರಣವನ್ನು ಪ್ರಸ್ತಾಪಿಸಿದ್ದಾನೆ.

೨ ಹೇತುಶ್ಚ ಸೂಕ್ಷ್ಮೋ ಲೇಶೋಽಥ ನಾಲಂಕಾರತಯಾ ಮತಃ ।
ಸಮುದಾಯಾಭಿಧಾನಸ್ಯ ವಕ್ರೋಕ್ತ್ಯನಭಿಧಾನತಃ ॥ ೮೬ ॥

ಗತೋಽಸ್ತಮರ್ಕೋ ಭಾತೀಂದುರ್ಯಾಂತಿ ವಾಸಾಯ ಪಕ್ಷಿಣಃ ।
ಇತ್ಯೇವಮಾದಿ ಕಿಂ ಕಾವ್ಯಂ ವಾರ್ತಾಮೇನಾಂ ಪ್ರಚಕ್ಷತೇ ॥ ೮೭ ॥

ಕಾವ್ಯಾಲಂಕಾರ, ೨

ಸೈಷಾ ಸರ್ವೈವ ವಕ್ರೋಕ್ತಿರನಯಾರ್ಥೋ ವಿಭಾವ್ಯತೇ ।
ಯತ್ನೋಽಸ್ಯಾಂ ಕವಿನಾ ಕಾರ್ಯಃ ಕೋಽಲಂಕಾರೋಽನಯಾ ವಿನಾ ॥

ಮುಂದೆ ಕುಂತಕನ 'ವಕ್ರೋಕ್ತಿಜೀವಿತ'ದಲ್ಲಿ ವಕ್ರೋಕ್ತಿಯು ಹೆಚ್ಚು ವಿಕಾಸವನ್ನು ಕಾಣುತ್ತೇವೆ. ಅಲಂಕಾರವಿಲ್ಲದೆ ಕಾವ್ಯವು ಶೋಭಿಸದೆಂದು ಭಾಮಹನ ದೃಢಾಭಿಪ್ರಾಯ

೧ ನ ಕಾಂತಮಪಿ ನಿರ್ಭೂಷಂ ವಿಭಾತಿ ವನಿತಾಮುಖಮ್ ।
೨ ಅನೇನ ವಾಗರ್ಥವಿದಾಮಲಂಕೃತಾ ।
ವಿಭಾತಿ ನಾರೀವ ವಿದಗ್ಧಮಂಡನಾ ॥

ಭಾಮಹನು ತಾನು ನಿರೂಪಿಸಿರುವ ಅಲಂಕಾರಗಳಿಗೆ ಸ್ವಂತ ಉದಾಹರಣೆಗಳನ್ನು ಕೊಟ್ಟಿದ್ದಾನೆ. ।

ಭಾಮಹನು ಕಾವ್ಯಾಲಂಕಾರದಲ್ಲಿ ಕೆಲವರು ಕೃತಿಕಾರರನ್ನೂ ಮತ್ತೆ ಕೆಲವು ಕೃತಿಗಳನ್ನೂ, ಹೆಸರಿಸಿದ್ದಾನೆ—ರಾಮಶರ್ಮನ ಅಚ್ಯುತೋತ್ತರ (೨–೧೯, ೫೮), ಅಶ್ಮಕವಂಶ (೧–೩೩), ಕಣಭಕ್ಷ (೫–೧೭), ನ್ಯಾಸ (೬–೩೬), ಪಾಣಿನಿ (ಸಾಲಾತುರೀಯ, ೬–೬೨, ೬೩), ಮೇಧಾವಿನ್, ರತ್ನಾಹರಣ (೩–೮), ರಾಜಮಿತ್ರ (೨–೪೫, ೩–೧೦), ಶಾಖವರ್ಧನ (೨–೪೭). ಹೆಸರಿಸದಿದ್ದರೂ ಭರತ, ಪತಂಜಲಿ, ಕಾತ್ಯಾಯನ (ಪದಕಾರ)ರ ಅಭಿಪ್ರಾಯವನ್ನು ಪ್ರಸ್ತಾಪಿಸಿದ್ದಾನೆ. ಅನೇಕ ಅಲಂಕಾರಿಕರು ಭಾಮಹನ ನೂರಾರು ಶ್ಲೋಕಗಳನ್ನು ತಮ್ಮ ಕೃತಿಗಳಲ್ಲಿ ಉದ್ಧರಿಸಿದ್ದಾರೆ. ಆರನೆಯ ಪರಿಚ್ಛೇದದ ಪ್ರಾರಂಭದಲ್ಲಿ ವ್ಯಾಕರಣವನ್ನು ಪ್ರಶಂಸಿಸಲು ಭಾಮಹನು ಕೊಟ್ಟಿರುವ ರೂಪಕವು ಸುಂದರವಾಗಿದೆ—

ಸೂತ್ರಾಂಭಸಂ ಪದಾವರ್ತಂ ಪಾರಾಯಣರಸಾತಲಮ್
ಧಾತೂಣಾದಿಗಣಗ್ರಾಹಂ ಧ್ಯಾನಗ್ರಹಬೃಹತ್ಪ್ಲವಮ್ ॥ ॥ ೧ ॥

ಧೀರೈರಾಲೋಕಿತಪ್ರಾಂತಮಮೇಧೋಭಿರಸೂಯಿತಮ್ ।
ಸದೋಪಭುಕ್ತಂ ಸರ್ವಾಭಿರನ್ಯವಿದ್ಯಾಕರೇಣುಭಿಃ ॥ ೨ ॥

---

೧ ಸ್ವಯಂ ಕೃತೈರೇವ ನಿದರ್ಶನೈರಿಯಮ್ ।
ಮಯಾ ಪ್ರಕ್ಲೃಪ್ತಾ ಖಲು ವಾಗಲಂಕೃತಿಃ ॥

ನಾಪಾರಯಿತ್ವಾ ದುರ್ಗಾಧಮಮುಂ ವ್ಯಾಕರಣಾರ್ಣವಮ್ ।
ಶಬ್ದರತ್ನಂ ಸ್ವಯಂ ಗಮ್ಯಮಲಂಕರ್ತುಮಯಂ ಜನಃ ॥ ೩ ॥

ಕಾವ್ಯರಚಿಸಲು ಅಗತ್ಯವಾದ ಜ್ಞಾನ—

ಶಬ್ದಚ್ಛಂದೋಽಭಿಧಾನಾರ್ಥಾ ಇತಿಹಾಸಾಶ್ರಯಾಃ ಕಥಾಃ ।
ಲೋಕೋ ಯುಕ್ತಿಃ ಕಲಾಶ್ಚೇತಿ ಮಂತವ್ಯಾ ಕಾವ್ಯವೈಖರೀ ॥

## ಭಟ್ಟಿಕಾವ್ಯ

ಭಟ್ಟಿಯಿಂದ ರಚಿತವಾದ ಕಾವ್ಯವನ್ನು ಭಟ್ಟಿಕಾವ್ಯವೆಂದೇ ಕರೆಯುತ್ತಾರೆ. ಭಟ್ಟಿಯನ್ನು 'ಭಟ್ಟಸ್ವಾಮಿನ್ ' ಮತ್ತು ' ಭರ್ತೃ ' ಎಂದೂ ಕರೆಯುತ್ತಿದ್ದಂತೆ ಕಾಣುತ್ತದೆ. ಭಟ್ಟಿಕಾವ್ಯದ ಜಯಮಂಗಲಾವ್ಯಾಖ್ಯಾನವು ಭಟ್ಟಿಯ ತಂದೆಯನ್ನು ' ಶ್ರೀ ಸ್ವಾಮಿನ್ ' ಎಂದು ತಿಳಿಸಿದರೆ, ಮತ್ತೊಬ್ಬ ವ್ಯಾಖ್ಯಾನಕಾರನಾದ ವಿದ್ಯಾವಿನೋದನು 'ಶ್ರೀಧರಸ್ವಾಮಿನ್' ಎಂದು ಹೇಳಿದ್ದಾನೆ. ಈ ಕಾವ್ಯದ ಕ್ರಿ.ಶ. ೧೪೮೪ರ ಒಂದು ಹಸ್ತ ಪ್ರತಿಯಲ್ಲಿ 'ಶ್ರೀಧರಸ್ವಾಮಿಸೂನೋರ್ಭಟ್ಟಿ ಬ್ರಾಹ್ಮಣಸ್ಯ ಕೃತೌ 'ಎಂಬ ಸಮಾಪ್ತಿ ವಾಕ್ಯವಿದೆ. ಶ್ರೀಧರಸೇನನು ವಲಭಿಯಲ್ಲಿ ರಾಜ್ಯಭಾರ ಮಾಡುತ್ತಿದ್ದಾಗ ಭಟ್ಟಿಯು ಈ ಕಾವ್ಯವನ್ನು ರಚಿಸಿದನು. ಕಾವ್ಯದ ಸಮಾಪ್ತಿಪದ್ಯದಲ್ಲಿ 'ಕಾವ್ಯ ಮಿದಂ ವಿಹಿತಂ ಮಯಾ ವಲಭ್ಯಾಂ ಶ್ರೀಧರಸೇನನರೇಂದ್ರ ಪಾಲಿತಾಯಾಂ'ಎಂಬ ಮಾತಿದೆ. ಭಟ್ಟಿಯು ಕ್ರಿ. ಶ. ಸು. ೬೦೦ರಿಂದ ೬೪೦ರೊಳಗೆ ಇದ್ದನೆಂದು ತೋರುತ್ತದೆ.

ಭಟ್ಟಿ ಕಾವ್ಯದಲ್ಲಿ ಪ್ರಕೀರ್ಣಕಾಂಡ, ಅಧಿಕಾರಕಾಂಡ, ಪ್ರಸನ್ನಕಾಂಡ, ತಿಙಂತ ಕಾಂಡ ಗಳೆಂಬ ನಾಲ್ಕು ಭಾಗಗಳಿದ್ದು ಒಟ್ಟು ೨೨ ಸರ್ಗಗಳಿವೆ. ವ್ಯಾಕರಣಸೂತ್ರಗಳಿಗೆ ಉದಾಹರಣೆ ಗಳನ್ನೊದಗಿಸುವುದು ಈ ಕಾವ್ಯದ ಮುಖ್ಯ ಗುರಿ. ಆದ್ದರಿಂದ ಇದು ದುರ್ಗಮವಾದ ಪ್ರೌಢ ಕಾವ್ಯವಾಗಿದೆ. ಇದರಪ್ರಸನ್ನಕಾಂಡದಲ್ಲಿ ಕಾವ್ಯಾಲಂಕಾರಗಳಿವೆ. ಹತ್ತನೆಯ ಸರ್ಗದಲ್ಲಿ ೩೮ ಅಲಂಕಾರಗಳಿವೆ (ಶಬ್ದಾಲಂಕಾರ–೨; ಅರ್ಥಾಲಂಕಾರ–೩೬). ೧೧ನೆಯ ಸರ್ಗದಲ್ಲಿ ಮಾಧುರ್ಯಗುಣ, ೧೨ರಲ್ಲಿ ಭಾವಿಕಾಲಂಕಾರ, ೧೩ರಲ್ಲಿ ಭಾಷಾಸಮ (ಸಂಸ್ಕೃತವೂ, ಪ್ರಾಕೃತವೂ ಆಗಬಹುದಾದ ಶ್ಲೋಕಗಳು)ಬಂದಿವೆ. ಭಾಮಹನು ಹೇಳಿರುವ ಅಪ್ರಸ್ತುತ ಪ್ರಶಂಸಾಲಂಕಾರಕ್ಕೆ ಭಟ್ಟಿಯು ಉದಾಹರಣೆಯನ್ನು ಕೊಟ್ಟಿಲ್ಲ. ಭಟ್ಟಿಯು ಹೇಳಿರುವ ಹೇತು ಮತ್ತು ವಾರ್ತಾ ಲಂಕಾರಗಳನ್ನು ಭಾಮಹನು ಅಂಗೀಕರಿಸಿಲ್ಲ. ಭಟ್ಟಿಯು ಉದಾಹರಣೆಯನ್ನು ಕೊಟ್ಟಿರುವ ನಿಪುಣಾಲಂಕಾರವು ಭಾಮಹ ಮತ್ತು ದಂಡಿಗಳ ಲಕ್ಷಣ ಗ್ರಂಥಗಳಲ್ಲಿಲ್ಲ. ದಂಡಿಯ ಲೇಶ, ಸೂಕ್ಷ್ಮಾಲಂಕಾರಗಳಿಗೆ ಭಟ್ಟಿ ಕಾವ್ಯದಲ್ಲಿ ಉದಾಹರಣೆಗಳಿಲ್ಲ. ಭಟ್ಟಿಯು ಉದಾಹರಣೆಗಳನ್ನು ಪರಿಶೀಲಿಸಿದರೆ ಅವನು ಭಾಮಹ, ದಂಡಿ, ವಾಮನರನ್ನು ಬಿಟ್ಟು ತನಗಿಂತ ಹಿಂದೆ ಇದ್ದಿರಬಹುದಾದ ಬೇರೆ ಅಲಂಕಾರಿಕರ ಲಕ್ಷಣಗಳಿಗೆ ಉದಾಹರಣೆಗಳನ್ನು ಬರೆದಿರುವಂತೆ ತೋರುತ್ತದೆ. ಭಟ್ಟಿಗೆ ಕೇವಲ ೩೮ ಅಲಂಕಾರಗಳ ಪರಿಚಯವಿತ್ತೆಂದು ಹೇಳಲು ಸಾಧ್ಯವಿಲ್ಲ.

ಪಾಣಿನಿಯು ಎಲ್ಲಾ ಸೂತ್ರಗಳ ಪರಿಚಯವಿದ್ದರೂ ಅವನು ಪ್ರಸಿದ್ಧ ಸೂತ್ರಗಳಿಗೆ ಮಾತ್ರ ಉದಾಹರಣೆಗಳನ್ನು ಬರೆದಿರುವಂತೆ, ಕೆಲವು ಅಲಂಕಾರಗಳಿಗೆ ಮಾತ್ರ ಉದಾಹರಣೆಗಳನ್ನು ಕೊಟ್ಟಿರಬಹುದು.

ಭಟ್ಟಿಕಾವ್ಯಕ್ಕೆ ಸುಮಾರು ಹದಿಮೂರು ವ್ಯಾಖ್ಯಾನಗಳಿವೆ. ಇವುಗಳಲ್ಲಿ 'ಜಯಮಂಗಲಾ'[1] ವ್ಯಾಖ್ಯಾನವು ಪ್ರಾಚೀನವಾದುದು. ಇದರ ಕರ್ತೃವಿಗೆ ಜಯೇಶ್ವರ, ಜಯದೇವ, ಜಯಮಂಗಲ ಎಂಬ ಮೂರು ಹೆಸರುಗಳು ದೊರೆಯುತ್ತವೆ. ಇವನು ಕ್ರಿ. ಶ. ಸು ೮೦೦ ರಿಂದ ೧೦೫೦ ರೊಳಗಿನ ಕಾಲದವನೆಂದು ತೋರುತ್ತದೆ.

## ದಂಡಿ

ಅವಂತಿಸುಂದರೀಕಥೆಯಲ್ಲಿರುವುದನ್ನು ಬಿಟ್ಟರೆ ದಂಡಿಯ ವಿಷಯವಾಗಿ ತಿಳಿದಿರುವುದು ಅತ್ಯಲ್ಪ. ಆ ಕೃತಿಯಿಂದ ಈ ಸಂಗತಿಗಳು ದೊರೆಯುತ್ತವೆ.

ಕಾಂಚಿಯಲ್ಲಿ ಸಿಂಹ ವಿಷ್ಣುವೆಂಬ ದೊರೆಯಿದ್ದನು. ಒಮ್ಮೆ ಒಬ್ಬ ಗಂಧರ್ವನು ಅವನ ಮುಂದೆ ಒಂದು ಆರ್ಯೆಯನ್ನು[2] ಪಠಿಸಿದನು. ದಂಡಿಯ ವಂಶಜರು ಆನಂದಪುರದಿಂದ ನಾಸಿಕ್ಯ ಭೂಮಿಯಲ್ಲಿದ್ದ ಅಚಲಪುರಕ್ಕೆ ಬಂದರು. ಮಹಾಕವಿಯಾದ ಭಾರವಿಯ ಸಲಹೆಯಂತೆ ಕೌಶಿಕ ಗೋತ್ರದ ದಾಮೋದರಸ್ವಾಮಿಯು ರಾಜಕುಮಾರನಾದ ವಿಷ್ಣುವರ್ಧನನೊಡನೆ ಸ್ನೇಹ ಬೆಳೆಸಿದನು. ಗಾಂಗೇಯ ವಂಶದ ದುರ್ವಿನೀತನು ತನ್ನ ಪರ್ಯಟನೆಗಳಿಗೆ ಪ್ರಸಿದ್ಧನಾಗಿದ್ದನು. ದಾಮೋದರನು ದುರ್ವಿನೀತನನ್ನು ಸಂಧಿಸಿದನು. ಗಂಧರ್ವನು ಸಿಂಹವಿಷ್ಣು (ಪಲ್ಲವ)ವಿಗೆ ಹೇಳಿದ ಆರ್ಯೆಯು ದಾಮೋದರನದಾಗಿದ್ದಿತು. ಸಿಂಹವಿಷ್ಣು ದಾಮೋದರನನ್ನು ತನ್ನ ಆಸ್ಥಾನಕ್ಕೆ ಕರೆಯಿಸಿಕೊಂಡು, ಮರ್ಯಾದೆಮಾಡಿ, ಅವನಿಗೆ ಭೂಮಿಯನ್ನು ಬಹುಮಾನವಾಗಿ ಕೊಟ್ಟನು. ದಾಮೋದರನಿಗೆ ಮೂವರು ಮಕ್ಕಳಾದರು. ವೀರದತ್ತನು ಅವರಲ್ಲಿ ಹಿರಿಯ ಮಗ. ದಂಡಿಯು ವೀರದತ್ತ ಮತ್ತು ಗೌರಿಯರ ಏಕೈಕ ಪುತ್ರ. ಅವನು ಶೈಶವದಲ್ಲಿಯೇ ತಾಯಿಯನ್ನು ಕಳೆದುಕೊಂಡನು ; ಉಪನಯನವಾದ ಮೇಲೆ ತಂದೆಯನ್ನೂ ಕಳೆದುಕೊಂಡನು. ಶತ್ರುಗಳ ಮುತ್ತಿಗೆ

---

೧ ಭಟ್ಟಿಕಾವ್ಯದ 'ಜಯಮಂಗಲಾ' ವ್ಯಾಖ್ಯಾಕಾರನೂ. ಕಾಮಸೂತ್ರದ 'ಜಯಮಂಗಲಾ' ವ್ಯಾಖ್ಯಾಕಾರನೂ ಭಿನ್ನರೆಂದು ತೋರುತ್ತದೆ.

೨ ದನುಜಪತಿಹೃದಯ-ಭೂಧರವಿಭೇದವಿಜ್ಞಾತಶಕ್ತಿನಖಕುಲಿಶಃ ।
ಜಗದುದಯಹೇತುವಿಷ್ಣೋರವತು ವಪುರ್ನರಸಿಂಹಃ ॥
ಈ ಆರ್ಯೆಯು ಅವಂತಿಸುಂದರೀಕಥಾಸಾರದಲ್ಲಿದೆ. ಇದು ನೃಸಿಂಹಾವತಾರಕ್ಕೂ, ಪಲ್ಲವರಾಜನಾದ ಸಿಂಹವಿಷ್ಣುವಿಗೂ ಅನ್ವಯಿಸುತ್ತದೆ.

ಯಿಂದ ಕಾಂಚಿಯು ನಾಶವಾದ ಮೇಲೆ ದಂಡಿಯು ಆ ನಗರಿಯನ್ನು ತ್ಯಜಿಸಿದನು. ಕೆಲವು ವರ್ಷಗಳ ಮೇಲೆ ಪಲ್ಲವರ ಆಸ್ಥಾನಕ್ಕೆ ಹಿಂದಿರುಗಿದ ದಂಡಿಯ ಕನಸಿನಲ್ಲಿ ಸರಸ್ವತಿಯು ಕಾಣಿಸಿಕೊಂಡು ವಿದ್ಯಾಧರರಾಜನಾದ ರಾಜವಾಹನನ ಕಥೆಯನ್ನು ಬರೆಯುವಂತೆ ತಿಳಿಸಿದಳು. ಅದರಂತೆ ಅವನು ಅವಂತಿಸುಂದರೀಕಥೆಯನ್ನು ಬರೆದನು. ಇದು ಕಥೆಯ ಮೊದಲ ಭಾಗ. ಪ್ರಚಾರದಲ್ಲಿರುವ ದಶಕುಮಾರ ಚರಿತವು ಮಧ್ಯಭಾಗ ಮತ್ತು ಉತ್ತರ ಪೀಠಿಕೆಗೆ ಒಂದು ಉಚ್ಛ್ವಾಸವಿ

ಪ್ರತೀಹಾರೇಂದುರಾಜನು ಮೊಟ್ಟ ಮೊದಲಿಗೆ ದಂಡಿಯನ್ನು ಹೆಸರಿಸಿದ್ದಾನೆ. ದಂಡಿಯು ಭೂತಭಾಷೆಯ ಬೃಹತ್ಕಥೆಯನ್ನೂ, ಮಹಾರಾಷ್ಟ್ರೀಪ್ರಾಕೃತದ ಸೇತುಬಂಧವನ್ನೂ ಉಲ್ಲೇಖಿಸಿದ್ದರೂ ಅವುಗಳಿಂದ ಅವನ ಕಾಲ ನಿರ್ಣಯಕ್ಕೆ ಲಾಭವಾಗುವುದಿಲ್ಲ. ಪ್ರೇಯೋಲಂಕಾರದ ಎರಡು ಉದಾಹರಣೆಯ ಪದ್ಯಗಳಲ್ಲಿ ರಾಜವರ್ಮನ್ (ರಾತವರ್ಮನ್) ಎಂಬ ದೊರೆಯ ಪ್ರಸ್ತಾಪವಿದ್ದರೂ ಅದರಿಂದಲೂ ಹೆಚ್ಚು ಉಪಕಾರವಾಗುವುದಿಲ್ಲ. ದಂಡಿಯ ಕಾಲ ಸು. ಕ್ರಿ. ಶ. ೭ನೆಯ ಶತಮಾನವೆಂದು ಹೇಳಬಹುದು.

ಶಾರ್ಙ್ಗಧರಪದ್ಧತಿ ಮತ್ತು ಜಲ್ಹಣನ ಸೂಕ್ತಿಮುಕ್ತಾವಳಿಗಳಲ್ಲಿರುವ ರಾಜಶೇಖರನ ಒಂದು ಪದ್ಯವು ದಂಡಿಯು ಮೂರು ಗ್ರಂಥಗಳ ಕರ್ತೃವೆಂದು ತಿಳಿಸುತ್ತದೆ[1] ಕಾವ್ಯಾದರ್ಶ ಮತ್ತು ದಶಕುಮಾರ ಚರಿತಗಳು ದಂಡಿಯವೆಂದು ಪ್ರಸಿದ್ಧವಾಗಿವೆ. ಅವಂತಿಸುಂದರೀಕಥೆಯು ದಂಡಿಯದೆಂಬ ಬಗ್ಗೆ ಭಿನ್ನಾಭಿಪ್ರಾಯಗಳಿವೆ. ಕೆಲವರು ದಶಕುಮಾರಚರಿತವನ್ನು ದಂಡಿಯದಲ್ಲವೆಂದು ಹೇಳುತ್ತಾರೆ. ದಂಡಿಯು ಕಾವ್ಯಾದರ್ಶಕ್ಕೆ ಪೂರಕವಾಗಿ 'ಕಲಾಪರಿಚ್ಛೇದ' ವನ್ನು ಬರೆಯಬೇಕೆಂದಿದ್ದನೆಂದು ತಿಳಿಯಲವಕಾಶವಿದೆ.[2]

ಕಾವ್ಯಾದರ್ಶದಲ್ಲಿ ಮೂರು ಪರಿಚ್ಛೇದಗಳೂ, ಒಟ್ಟು ೬೬೦ ಶ್ಲೋಕಗಳೂ ಇವೆ. ಮೊದಲನೆಯ ಪರಿಚ್ಛೇದದಲ್ಲಿ ಕಾವ್ಯಲಕ್ಷಣ, ಕಾವ್ಯವಿಧಗಳು, ರೀತಿ, ಗುಣ, ಪ್ರತಿಭಾದಿಗಳೂ ; ಎರಡನೆಯ ಪರಿಚ್ಛೇದದಲ್ಲಿ ಅರ್ಥಾಲಂಕಾರಗಳೂ ; ಮೂರನೆಯ ಪರಿಚ್ಛೇದದಲ್ಲಿ ಯಮಕ ಗೋಮೂತ್ರಿಕಾದಿ ಬಂಧಗಳು ಮತ್ತು ಕಾವ್ಯದೋಷಗಳೂ ನಿರೂಪಿತವಾಗಿವೆ. ಕಾವ್ಯಾದರ್ಶದ ಶೈಲಿಯು ಆಕರ್ಷಕವಾಗಿದೆ. ಒಂದೆರಡು ಸಂದರ್ಭಗಳನ್ನು ಬಿಟ್ಟರೆ ಉಳಿದಕಡೆ ದಂಡಿಯು ಸ್ವಂತ ಉದಾಹರಣೆಗಳನ್ನು ಕೊಟ್ಟಿದ್ದಾನೆ. ಅವನು ರೀತಿ ಸಂಪ್ರದಾಯಕ್ಕೂ, ಅಲಂಕಾರ ಸಂಪ್ರ

---

೧. ತ್ರಯೋಽಗ್ನಯಸ್ತ್ರಯೋ ವೇದಾಸ್ತ್ರಯೋ ದೇವಾಸ್ತ್ರಯೋ ಗುಣಾಃ ।
ತ್ರಯೋ ದಂಡಿಪ್ರಬಂಧಾಶ್ಚ ತ್ರಿಷು ಲೋಕೇಷು ವಿಶ್ರುತಾಃ ॥

೨. ಇತ್ಥಂ ಕಲಾಚತುಷ್ಷಷ್ಟಿ ವಿರೋಧಃ ಸಾಧು ನೀಯತಾಮ್ ।
ತಸ್ಯಾಃ ಕಲಾಪರಿಚ್ಛೇದೇ ರೂಪಮಾವಿರ್ಭವಿಷ್ಯತಿ ॥

ಕಾವ್ಯಾದರ್ಶ –೩. ೧೭೧

ದಾಯಕ್ಕೊ ಪಾಕ್ಷಿಕವಾಗಿ ಸೇರಿದವನೆಂದು ಹೇಳಬಹುದು. ಗುಣ ಮತ್ತು ಅಲಂಕಾರಗಳನ್ನು ವಿಸ್ತಾರವಾಗಿ ಹೇಳಿರುವುದರಿಂದ ದಂಡಿಯನ್ನು ಯಾವುದೇ ಒಂದು ಕಾವ್ಯಸಂಪ್ರದಾಯಕ್ಕೆ ಸೇರಿದವನೆಂದು ಗುರುತಿಸುವುದು ಕಷ್ಟ.

ದಂಡಿಯು ವೈದರ್ಭ, ಗೌಡಗಳೆಂಬ ಎರಡು ಮಾರ್ಗ (ರೀತಿ) ಗಳನ್ನು ಹೇಳಿದ್ದರೆ ವಾಮನನು ಮೂರನೆಯ ವಿಧವನ್ನು ಸೇರಿಸಿ ರೀತಿಯು ಕಾವ್ಯದ ಆತ್ಮವೆಂದುಸಾರಿದ್ದಾನೆ. ಭಾಮಹ ಮತ್ತು ದಂಡಿಗಳಲ್ಲಿ ಏಕಾಭಿಪ್ರಾಯದಂತೆ ಭಿನ್ನಾಭಿಪ್ರಾಯವೂ ಇದೆ; ಒಬ್ಬನಿಗೆ ಮತ್ತೊಬ್ಬನ ಕೃತಿಯ ಪರಿಚಯವಿದ್ದಿರಬೇಕೆನಿಸುತ್ತದೆ. ಭಾಮಹನ ಅಲಂಕಾರದ ಹೊಸರೀತಿಯನ್ನು ದಂಡಿಯು ಖಂಡಿಸಿದ್ದಾನೆ; ಆದರೆ ದಂಡಿಯ ಹೊಸ ರೀತಿಯನ್ನು ಭಾಮಹನು ಖಂಡಿಸಿಲ್ಲ. ವ್ಯಾಖ್ಯಾನಕಾರರೂ ಭಾಮಹನ ಅಭಿಪ್ರಾಯವನ್ನು ದಂಡಿಯು ವಿರೋಧಿಸಿದ್ದಾನೆಂದೇ ಹೇಳಿದ್ದಾರೆ. ಕಾವ್ಯಾಲಂಕಾರದಲ್ಲಿ ಆಖ್ಯಾಯಿಕಾ ಮತ್ತು ಕಥೆಗಳಿಗೆ ಸ್ಪಷ್ಟವಾದ ಭೇದವಿದೆ; ದಂಡಿಯು ಇವೆರಡಕ್ಕೂ ಗಣನೀಯ ಭೇದವಿಲ್ಲವೆಂದು ಹೇಳಿದ್ದಾನೆ.[1] ಅವನು ಹಿಂದಿನ ಆಲಂಕಾರಿಕರಿಂದ ಉಪಕೃತನಾಗಿದ್ದರೂ ಅವರಲ್ಲಿ ಯಾರನ್ನೂ ಹೆಸರಿಸದೆ ಅಲ್ಲಲ್ಲಿ ಪೂರ್ವಶಾಸ್ತ್ರಾಣಿ ಸಂಹೃತ್ಯ. ಸೂರಯಃ, ಪೂರ್ವಾಚಾರ್ಯೈಃ, ಕೇಷಾಂಚಿತ್, ಏಕೇ ಎಂದು ಹೇಳಿದ್ದಾನೆ. ಅವನು ಕಾಪಿಲ, ಸಂಗತ, ನ್ಯಾಯಂಗಳನ್ನೂ ಹೇತುವಿದ್ಯೆಗಳೆಂದು ಪ್ರಸ್ತಾಪಿಸಿದ್ದಾನೆ. ಹೃದಯಂಗಮವ್ಯಾಖ್ಯಾನವು ಕಾಶ್ಯಪ ಮತ್ತು ವರರುಚಿಗಳಿಂದ ದಂಡಿಯು ಉಪಕೃತನೆಂದು ತಿಳಿಸುತ್ತದೆ.

ದಂಡಿಯು ಪದಾವಲಿಯನ್ನು ಕಾವ್ಯಶರೀರವೆಂದು ಹೇಳಿದ್ದಾನೆ–' ಶರೀರಂ ತಾವದಿಷ್ಟಾರ್ಥ ವ್ಯವಚ್ಛಿನ್ನಾ ಪದಾವಲೀ ' ಕಾವ್ಯ ಸಂಪತ್ತಿಗೆ ಕಾರಣಗಳು—

ನೈಸರ್ಗಿಕೀ ಚ ಪ್ರತಿಭಾ ಶ್ರುತಂ ಚ ಬಹುನಿರ್ಮಲಂ ।
ಅಮಂದಶ್ಚಾಭಿಯೋಗೋಽಸ್ಯಾಃ ಕಾರಣಂ ಕಾವ್ಯಸಂಪದಃ ॥

ಅಲಂಕಾರ ಲಕ್ಷಣ—

ಕಾವ್ಯಶೋಭಾಕರಾನ್ ಧರ್ಮಾನಲಂಕಾರಾನ್ ಪ್ರಚಕ್ಷತೇ ।

ಕಾವ್ಯಾದರ್ಶದಲ್ಲಿ ಛಂದೋವಿಚಿತಿ (೧. ೧೨), ಬೃಹತ್ಕಥಾ (೧೯೩೮), ಸೇತುಬಂಧ (೧–೩೪) ಗಳನ್ನು ದಂಡಿಯು ಹೆಸರಿಸಿದ್ದಾನೆ. ಕರ್ತೃಗಳನ್ನು ಹೆಸರಿಸದಿದ್ದರೂ ಪತಂಜಲಿಯ ಮಹಾಭಾಷ್ಯ ಮತ್ತು ಭರತರ ನಾಟ್ಯಶಾಸ್ತ್ರಗಳ ಸೂಚನೆಯಿದೆ. ಕಾವ್ಯದರ್ಶದ ವ್ಯಾಖ್ಯಾನ

---

1 ೧ ಅನ್ಯೋವಕ್ತಾ ಸ್ವಯಂ ವೇತಿ ಕೀದೃಗ್ವಾ ಭೇದಲಕ್ಷಣಮ್ ।
೨ ಭೇದಶ್ಚ ದೃಷ್ಟೋ ಲಂಬಾದಿರುಚ್ಛ್ವಾಸೋ ವಾಸ್ತು ಕಿಂ ತತಃ ।

ಗಳಲ್ಲಿ ತರುಣವಾಚಸ್ಪತಿಯ ವ್ಯಾಖ್ಯಾನ ಮತ್ತು ಅಜ್ಞಾತಕರ್ತೃವಿನ ಹೃದಯಂಗಮವ್ಯಾಖ್ಯಾನಗಳು ಪ್ರಾಚೀನವೆಂದು ತೋರುತ್ತವೆ.

## ಉದ್ಭಟ

ಪ್ರಸಿದ್ಧ ಆಲಂಕಾರಿಕನಾದ ಉದ್ಭಟನು ಕಾಶ್ಮೀರ ದೇಶದವನು.1 ಕಾಶ್ಮೀರದ ದೊರೆಯಾದ ಜಯಾಪೀಡ (ಕ್ರಿ. ಶ. ೭೭೯-೮೧೩) ನ ಆಸ್ಥಾನದಲ್ಲಿದ್ದ ಉದ್ಭಟನೇ ಇವನೆಂದು ಕಾಶ್ಮೀರ ಪ್ರವಾದವಿದೆ. ಕಲ್ಹಣನ ರಾಜತರಂಗಿಣಿಯಲ್ಲಿ ಸಭಾಪತಿಯಾದ ಉದ್ಭಟನು ದೊರೆಯಿಂದ ದಿನಕ್ಕೆ ಲಕ್ಷದೀನಾರಗಳ ಸಂಭಾವನೆಯನ್ನು ಪಡೆಯುತ್ತಿದ್ದನೆಂಬ ಉಲ್ಲೇಖವಿದೆ.2 ಭಾಮಹನ ಕಾವ್ಯಾಲಂಕಾರಕ್ಕೆ ಉದ್ಭಟನು ವ್ಯಾಖ್ಯಾನವನ್ನು ಬರೆದಿದ್ದಾನೆ. ಆದ್ದರಿಂದ ಉದ್ಭಟನು ಭಾಮಹನಿಗಿಂತ ಹಿಂದಿನವನಾಗಿರಲು ಸಾಧ್ಯವಿಲ್ಲ. ಆನಂದವರ್ಧನ (ಕ್ರಿ. ಶ. ಸು. ೯ನೆಯ ಶತಮಾನ)ನು ತನ್ನ ಧ್ವನ್ಯಾಲೋಕದಲ್ಲಿ ಉದ್ಭಟನನ್ನು ಹಲವು ಸಾರಿ ಪ್ರಸ್ತಾಪಿಸಿದ್ದಾನೆ. ಆದ್ದರಿಂದ ಉದ್ಭಟನು ಕ್ರಿ. ಶ. ಸು. ೮ನೆಯ ಶತಕದವನೆಂದು ಹೇಳಬಹುದು.

ಉದ್ಭಟನು 'ಕಾವ್ಯಾಲಂಕಾರಸಾರಸಂಗ್ರಹ' ವೆಂಬ ಅಲಂಕಾರ ಗ್ರಂಥವನ್ನೂ ಅದಕ್ಕೆ ಉದಾಹರಣೆಯಾಗಿ ೯೪ ಪದ್ಯಗಳ ಕುಮಾರಸಂಭವ ಕಾವ್ಯವನ್ನು ಇಲ್ಲಿಯ ಲಕ್ಷಣಗಳಿಗೆ ಲಕ್ಷ್ಯಗಳನ್ನಾಗಿಯೂ ಕೊಟ್ಟಿದ್ದಾನೆ; 1 ಮಿಕ್ಕ ಕಾವ್ಯ ಭಾಗವು ದೊರೆತಿಲ್ಲ. ಉತ್ತಮ ಕಾವ್ಯದ ಲಕ್ಷಣಗಳನ್ನುಳ್ಳ ಈ ಕಾವ್ಯವು ಕಾಳಿದಾಸನ ಕುಮಾರಸಂಭವವನ್ನು ಹೋಲುತ್ತದೆ. ಕಾಳಿದಾಸನ ಕುಮಾರಸಂಭವಕ್ಕೆ ದೊರೆತ ಪ್ರಾಶಸ್ತ್ಯದಿಂದ ಈ ಕಾವ್ಯವು ಕಾಲಕ್ರಮದಲ್ಲಿ ಕಣ್ಮರೆಯಾಗಿರಬೇಕೆಂದು ತೋರುತ್ತದೆ. ಉದ್ಭಟನು ಭರತನ ನಾಟ್ಯ ಶಾಸ್ತ್ರಕ್ಕೆ ವ್ಯಾಖ್ಯಾನವನ್ನು ಬರೆದಿದ್ದುದಾಗಿ ತಿಳಿದು ಬರುತ್ತದೆ. ಇದು ಉಪಲಬ್ಧವಿಲ್ಲ. ಇವನು ಭಾಮಹನ ಕಾವ್ಯಾಲಂಕಾರಕ್ಕೆ ಭಾಮಹವಿವರಣ (ಭಾಮಹವಿವೃತಿ) ವೆಂಬ ವಿಸ್ತೃತವಾದ ವ್ಯಾಖ್ಯಾನವನ್ನು ಬರೆದಿದ್ದುದಾಗಿ ತಿಳಿದು ಬರುತ್ತದೆ. ಈಗ ಇದೂ ಉಪಲಬ್ಧವಿಲ್ಲ.

---

೧. ಜೈಯಟಿ, ಕೈಯಟ. ಅಲ್ಲಟ, ರುದ್ರಟ ಮುಂತಾದ ಕಾಶ್ಮೀರದವರ ಹೆಸರುಗಳ ಸಾಮ್ಯವು ಉದ್ಭಟ ಎಂಬ ಹೆಸರಿನಲ್ಲಿಯೂ ಇದೆ.

೨. ವಿದ್ವಾನ್ ದೀನಾರಲಕ್ಷೇಣ ಪ್ರತ್ಯಹಂ ಕೃತವೇತನಃ ।
ಭಟ್ಟೋಽಭೂದುದ್ಭಟಸ್ತಸ್ಯ ಭೂಮಿಭರ್ತುಃ ಸಭಾಪತಿಃ ॥ ೪. ೯೫ ॥

೧. ಅನೇನ ಗ್ರಂಥಕೃತಾ ಸ್ವೋಪರಚಿತಕುಮಾರ ಸಂಭವೈಕದೇಶೋಽತ್ರ ಉದಾಹರಣತ್ವೇನೋಪದರ್ಶಿತಃ ।—ಪ್ರತೀಹಾರೇಂದುರಾಜ

ಕಾವ್ಯಾಲಂಕಾರಸಾರಸಂಗ್ರಹದಲ್ಲಿ ಆರು ಅಧ್ಯಾಯಗಳಿದ್ದು ಅವುಗಳನ್ನು ವರ್ಗಗಳೆಂದು ಕರೆಯಲಾಗಿದೆ. ಮೊದಲನೆಯ ವರ್ಗದಲ್ಲಿ ಪುನರುಕ್ತವದಾಭಾಸ ಮುಂತಾದ ಶಬ್ದಾಲಂಕಾರ ಗಳೂ, ಉಳಿದ ವರ್ಗಗಳಲ್ಲಿ ಅರ್ಥಾಲಂಕಾರಗಳೂ ನಿರೂಪಿತವಾಗಿವೆ. ಆರು ವರ್ಗಗಳಲ್ಲಿ ೭೫ ಕಾರಿಕೆಗಳಿದ್ದು ೪೧ ಅಲಂಕಾರಗಳನ್ನು ಹೇಳಲಾಗಿದೆ. ಬಹಳ ಮಟ್ಟಿಗೆ ಭಾಮಹನು ಹೇಳಿರುವ ಕ್ರಮದಲ್ಲಿಯೇ ಈ ಗ್ರಂಥದಲ್ಲಿಯೂ ಅಲಂಕಾರಗಳೂ ಬಂದಿವೆ. ಆದರೆ ಉದ್ಭಟನು ಭಾಮಹ ನಿಂದ ಉಕ್ತವಾಗಿರುವ ಯಮಕ, ಉಪಮಾರೂಪಕ, ಉತ್ಪ್ರೇಕ್ಷಾವಯವ ಮುಂತಾದ ಕೆಲವು ಅಲಂಕಾರಗಳನ್ನು ಬಿಟ್ಟು ಭಾಮಹನು ಹೇಳದಿರುವ ಪುನರುಕ್ತವದಾಭಾಸ, ಸಂಕರ, ಕಾವ್ಯಲಿಂಗ, ದೃಷ್ಟಾಂತ ಅಲಂಕಾರಗಳನ್ನು ಪ್ರತಿಪಾದಿಸಿದ್ದಾನೆ. ನಿದರ್ಶನಾಲಂಕಾರವನ್ನು 'ವಿದರ್ಶನಾ' ಎಂದು ಕರೆದು ಒಂದು ವಿಧಕ್ಕೆ ಮಾತ್ರ ಉದಾಹರಣೆಯನ್ನು ಕೊಟ್ಟಿದ್ದಾನೆ. ಭಾಮಹನು ಅನುಪ್ರಾಸಕ್ಕೆ ಎರಡುವಿಧಗಳನ್ನು, ರೂಪಕಕ್ಕೆ ಎರಡು ವಿಧಗಳನ್ನೂ ಹೇಳಿದ್ದರೆ ಉದ್ಭಟನು ಅನುಪ್ರಾಸಕ್ಕೆ ಮೂರು ವಿಧಗಳನ್ನೂ ರೂಪಕಕ್ಕೆ ನಾಲ್ಕು ವಿಧಗಳನ್ನೂ ಹೇಳಿದ್ದಾನೆ. ಅನೇಕ ಅಲಂಕಾರಗಳ ವಿಷಯದಲ್ಲಿ ಭಾಮಹ ಮತ್ತು ಉದ್ಭಟರಿಗೆ ಪರಸ್ಪರ ಭಿನ್ನಾಭಿಪ್ರಾಯವಿದೆ. ಭಾಮಹನು ಸಹೋಕ್ತಿಯುಕ್ತ, ಉಪಮಾಯುಕ್ತ, ಹೇತುನಿರ್ದೇಶಯುಕ್ತವೆಂದು ಶ್ಲಿಷ್ಟಕ್ಕೆ ಮೂರು ವಿಧ ಗಳನ್ನು ಹೇಳಿದ್ದಾನೆ[1]; ಉದ್ಭಟನಾದರೋ ಅರ್ಥಶ್ಲಿಷ್ಟ, ಶಬ್ದಶ್ಲಿಷ್ಟವೆಂದು ಎರಡು ವಿಧ ಗಳನ್ನು ಹೇಳಿದ್ದಾನೆ[2]. ಭಾಮಹನು ಮತದಲ್ಲಿ ಗುರುದೇವಾದಿಗಳ ಪ್ರೀತಿವರ್ಣನೆಯು ಪ್ರೇಯೋಲಂಕಾರವಾದರೆ ಉದ್ಭಟನ ಮತದಲ್ಲಿ ಭಾವಾಲಂಕಾರವೇ ಪ್ರೇಯೋಲಂಕಾರ[3]. ಉದ್ಭಟನು ಭಾಮಹನಿಂದ ಉಕ್ತವಾಗದಿರುವ ಪರುಷಾ, ಗ್ರಾಮ್ಯಾ, ಉಪನಾಗರಿಕಾ ಎಂಬ ಮೂರು ಕಾವ್ಯವೃತ್ತಿಗಳನ್ನು ಹೇಳಿದ್ದಾನೆ.

ಸಮಾನವಾದ ವರ್ಣ ಮತ್ತು ಉಚ್ಚಾರಣೆಗಳನ್ನುಳ್ಳ ಶಬ್ದಗಳು ಭಿನ್ನಾರ್ಥಗಳನ್ನು ಹೊಂದಿದ್ದರೆ ಅವು ಭಿನ್ನ ಶಬ್ದಗಳೆಂದು ಉದ್ಭಟನ ಮತ. ಪ್ರತೀಹಾರೇಂದುರಾಜನು ಉದ್ಭಟನ ಶ್ಲೇಷಾಲಂಕಾರವನ್ನು ವ್ಯಾಖ್ಯಾನಿಸುವಾಗ 'ಅರ್ಥಭೇದೇನ ತಾವಚ್ಛಬ್ದಾ ಭಿದ್ಯಂತ ಇತಿ

---

೧ ತತ್‌ಸಹೋಕ್ತ್ಯುಪಮಾಹೇತುನಿರ್ದೇಶಾತ್ ತ್ರಿವಿಧಂ ಯಥಾ–ಭಾಮಹ.

೨ ದ್ವಿವಿಧೈರರ್ಥಶಬ್ದೋಕ್ತಿವಿಶಿಷ್ಟಂ ತತ್ಪ್ರತೀಯತಾಂ–ಉದ್ಭಟ

೩ (i) ಭೌಮಹೇನ ಹಿ ಗುರುದೇವನೃಪತಿಪುತ್ರವಿಷಯಪ್ರೀತಿವರ್ಣನಂ ಪ್ರೇಯೋಲಂಕಾರ ಇತ್ಯುಕ್ತಂ, ಉದ್ಭಟಿಮತೇ ಹಿ ಭಾವಾಲಂಕಾರ ಏವ ಪ್ರೇಯ ಇತ್ಯುಕ್ತಃ–ಲೋಚನ.

(ii) ರತ್ಯಾದಿಕಾನಾಂ ಭಾವಾನಾಮನುಭಾವಾದಿಸೂಚನೈಃ ।
ಯತ್ಕಾವ್ಯಂ ಬಧ್ಯತೇ ಸದ್ಭಿಸ್ತತ್ಪ್ರೇಯಸ್ವದುದಾಹೃತಂ ॥ –ಉದ್ಭಟ

(iii) ಅತ್ರಚ ಭಾವಾನಾಮಲಂಕಾರತಾ ಕಾವ್ಯವ ಲಂಕಾರ್ಯಂ–ಪ್ರತೀಹಾರರೇಂದು ರಾಜ





4*

ಭಟ್ಟೋದ್ಭಟಸ್ಯ ಸಿದ್ಧಾಂತಃ' ಎಂದು ಹೇಳಿದ್ದಾನೆ. ಉದ್ಭಟನಂ ಶ್ಲೇಷೆಯನ್ನು ಶಬ್ದಶ್ಲೇಷ ಮತ್ತು ಅರ್ಥಶ್ಲೇಷವೆಂದು ವಿಭಜಿಸಿ ಎರಡು ವಿಧಗಳನ್ನೂ ಅರ್ಥಾಲಂಕಾರಗಳನ್ನಾಗಿ ಪರಿಗಣಿಸಿದ್ದಾನೆ ; ಇದನ್ನು ಮಮ್ಮಟನು ಖಂಡಿಸಿದ್ದಾನೆ[2]. ಶ್ಲೇಷೆಯೊಡನೆ ಇತರ ಅಲಂಕಾರಗಳಿದ್ದರೆ ಉದ್ಭಟನು ಶ್ಲೇಷೆಗೆ ಪ್ರಾಧ್ಯಾನ್ಯವನ್ನು ಹೇಳಿದ್ದಾನೆ—

ಅಲಂಕಾರಾಂತರಗತಾಂ ಪ್ರತಿಭಾಂ ಜಯತ್ಪದೈಃ ।
ದ್ವಿವಿಧೈರರ್ಥ ಶಬ್ದೋಕ್ತಿವಿಶಿಷ್ಟಂ ತತ್ಪ್ರತೀಯತಾಂ ॥

ವ್ಯಾಖ್ಯಾಕಾರನು 'ಅಲಂಕಾರಾಂತರಾಣಾಮತ್ರ ಪ್ರತಿಭಾಮಾತ್ರಂ ನ ತು ಪದಬಂಧ ಇತ್ಯರ್ಥಃ' ಎಂದು ಸ್ಪಷ್ಟಪಡಿಸಿದ್ದಾನೆ. ಉದ್ಭಟನು ರಸವದಲಂಕಾರವನ್ನು ವಿವರಿಸುವಾಗ ಆಸ್ವಾದನೆಗೆ ಯೋಗ್ಯವಾದ ರತ್ಯಾದಿಗಳೇ ಶೃಂಗಾರಾದಿ ರಸಗಳೆಂದು ತಿಳಿಸಿ ಅವು ಸ್ವಶಬ್ದದಿಂದ ಉಕ್ತವಾಗುತ್ತವೆ ಎಂದಿದ್ದಾನೆ[3]. ಆದರೆ ಮಮ್ಮಟನು ಸ್ವಶಬ್ದದಿಂದ ಉಕ್ತವಾಗುವುದನ್ನು ದೋಷವೆಂದು ಹೇಳಿದ್ದಾನೆ. ಲೋಚನಕಾರನು ಭಟ್ಟೋದ್ಭಟಾದಿಗಳ ಮತದಲ್ಲಿ ಸಂಘಟನಾಧರ್ಮವೇ ಗುಣವೆಂದು ಹೇಳಿದ್ದಾನೆ.[1] ವ್ಯಾಕರಣವನ್ನವಲಂಬಿಸಿ ಅನೇಕ ಉಪಮಾಭೇದಗಳನ್ನು ಹೇಳಿರುವುದರಿಂದ ಉದ್ಭಟನನ್ನು ವ್ಯಾಕರಣ ವಿದ್ವಾಂಸನೆಂದು ತಿಳಿಯಬಹುದು. ಉದ್ಭಟನ ಮತದಂತೆ ಕಾವ್ಯದಲ್ಲಿ ಅಲಂಕಾರವೇ ಪ್ರಧಾನ. ಅನೇಕ ಆಲಂಕಾರಿಕರು ಇವನನ್ನು ಬಹಳ ಗೌರವ ಪೂರ್ವಕವಾಗಿ ಕಂಡಿದ್ದಾರೆ.

ಪ್ರತೀಹಾರೇಂದುರಾಜನು ಕಾವ್ಯಾಲಂಕಾರಸಾರಸಂಗ್ರಹಕ್ಕೆ 'ಲಘುವೃತ್ತಿ' ಯೆಂಬವ್ಯಾಖ್ಯಾನವನ್ನು ಬರೆದಿದ್ದಾನೆ. ರಾಜಾನಕತಿಲಕನೂ 'ಉದ್ಭಟವಿವೇಕ (ಉದ್ಭಟವಿಚಾರ)' ವೆಂಬ ವ್ಯಾಖ್ಯಾನವನ್ನು ಬರೆದಿದ್ದಾನೆ.

## ವಾಮನ

ರಾಜಶೇಖರನು (ಕ್ರಿ. ಶ. ಸು. ೧೦ ನೆಯ ಶತಮಾನ) ತನ್ನ ಕಾವ್ಯಮೀಮಾಂಸೆಯಲ್ಲಿ

---

೨ ಶಬ್ದಶ್ಲೇಷ ಇತಿ ಚೋಚ್ಯತೇ ಅರ್ಥಾಲಂಕಾರ-
ಮಧ್ಯೇ ಚ ಲಕ್ಷ್ಯತೇ ಇತಿ ಕೋಯಂ ನಯಃ-ಮಮ್ಮಟ.

೩ ರಸವದ್ದರ್ಶಿತಸ್ಪಷ್ಟ ಶೃಂಗಾರಾದಿರಸೋದಯಂ ।
ಸ್ವಶಬ್ದಸ್ಥಾಯಿಸಂಚಾರಿವಿಭಾವಾಭಿನಯಾಸ್ಪದಂ ॥ -ಉದ್ಭಟ.
ಏಷಾಂ ಚ ಶೃಂಗಾರಾದೀನಾಂ ನವಾನಾಂ ರಸಾನಾಂ ಸ್ವಶಬ್ದಾ-
ದಿಭಿಃ ಪಂಚಭಿರವಗತಿರ್ಭವತಿ- ಲಘುವೃತ್ತಿ.

೧ ಸಂಘಟನಾಯಾ ಧರ್ಮಾ ಗುಣಾ ಇತಿ ಭಟ್ಟೋದ್ಭಟಾದಯಃ
ಲೋಚನ.

ವಾಮನ ಅನುಯಾಯಿ (ವಾಮನೀಯ) ಗಳನ್ನು ಪ್ರಸ್ತಾಪಿಸಿದ್ದಾನೆ. ಪ್ರತೀಹಾರೇಂದುರಾಜ (ಕ್ರಿ.ಶ. ೧೦ನೆ ಶತಕ) ಮತ್ತು ಅಭಿನವಗುಪ್ತರು (ಕ್ರಿ.ಶ. ೧೦ನೆ ಶತ) ವಾಮನನ ವಾಕ್ಯಗಳನ್ನು ಉದ್ಧರಿಸಿದ್ದಾರೆ. ಆದ್ದರಿಂದ ವಾಮನನು ಕ್ರಿ.ಶ. ಒಂಬತ್ತನೆಯ ಶತವರ್ಷಕ್ಕಿಂತ ಹಿಂದೆ ಇದ್ದಿರಬೇಕು. ವಾಮನನು ಭವಭೂತಿಯ (ಕ್ರಿ. ಶ. ೮ನೆಯ ಶತ) ಉತ್ತರರಾಮಚರಿತ ಮತ್ತು ಮಾಲತೀಮಾಧವಗಳಿಂದ ಉದಾಹರಣೆಗಾಗಿ ಶ್ಲೋಕಗಳನ್ನು ಉದ್ಧರಿಸಿದ್ದಾನೆ. ವಾಮನನು ಕಾಶ್ಮೀರದ ದೊರೆಯಾದ ಜಯಾಪೀಡನ (ಕ್ರಿ. ಶ. ೭೭೯–೮೧೩) ಮಂತ್ರಿಯಾಗಿದ್ದ ನೆಂದು ರಾಜ ತರಂಗಿಣಿಯು ತಿಳಿಸುತ್ತದೆ.[1] ಕಾಶಿಕೆ (ಕ್ರಿ.ಶ.ಸು ೬೬೦) ಯನ್ನು ಬರೆದ ವಾಮನನೂ, ಕಾವ್ಯಾಲಂಕಾರಸೂತ್ರವನ್ನು ರಚಿಸಿದ ವಾಮನನೂ ಬೇರೆ ಬೇರೆ ವ್ಯಕ್ತಿಗಳು.

ವಾಮನನ ಕಾವ್ಯಾಲಂಕಾರಸೂತ್ರವು ಒಂದು ಪ್ರಸಿದ್ಧವಾದ ಅಲಂಕಾರಗ್ರಂಥ. ಇದರಲ್ಲಿ ಸೂತ್ರ, ವೃತ್ತಿ ಮತ್ತು ಲಕ್ಷಣಗಳೆಂಬ ಮೂರು ಭಾಗಗಳಿವೆ. ವೃತ್ತಿಯನ್ನು ತಾನೇ ಬರೆದಿರುವುದಾಗಿ ವಾಮನನು ಹೇಳಿಕೊಂಡಿದ್ದಾನೆ–

ಪ್ರಣಮ್ಯ ಪರಮಂ ಜ್ಯೋತಿರ್ವಾಮನೇನ ಕವಿಪ್ರಿಯಾ ।
ಕಾವ್ಯಾಲಂಕಾರಸೂತ್ರಾಣಾಂ ಸ್ವೇಷಾಂ ವೃತ್ತಿರ್ವಿಧೀಯತೇ ॥

ವಾಮನನು ಪ್ರಸಿದ್ಧ ಕಾವ್ಯಗಳಿಂದ ಆಯ್ದ ಶ್ಲೋಕಗಳನ್ನೂ, ತಾನೇ ರಚಿಸಿದ ಶ್ಲೋಕಗಳನ್ನೂ ಉದಾಹರಣೆಗಳನ್ನಾಗಿ ಕೊಟ್ಟಿದ್ದಾನೆ.[2]

ಕಾವ್ಯಾಲಂಕಾರಸೂತ್ರದಲ್ಲಿ ಐದು ಅಧಿಕರಣಗಳಿವೆ. ಒಂದೊಂದು ಅಧಿಕರಣ ದಲ್ಲಿಯೂ ; ಎರಡು ಅಥವಾ ಮೂರು ಅಧ್ಯಾಯಗಳಂತೆ ಈ ಗ್ರಂಥದಲ್ಲಿ ಒಟ್ಟು ಹನ್ನೆರಡು ಅಧ್ಯಾಯಗಳಿವೆ. ಸಾಧಾರಣವಾಗಿ ಸೂತ್ರಕಾರರು ಅಧ್ಯಾಯಗಳನ್ನು ಅಧಿಕರಣಗಳನ್ನಾಗಿ ವಿಭಾಗಿಸುತ್ತಾರೆ. ಆದರೆ ವಾಮನನು 'ಅರ್ಥಶಾಸ್ತ್ರ' ಮತ್ತು 'ಕಾಮಶಾಸ್ತ್ರ' ಗಳನ್ನನುಸರಿಸಿ ಅಧಿಕರಣಗಳನ್ನು ಅಧ್ಯಾಯಗಳನ್ನಾಗಿ ವಿಭಾಗಿಸಿರುವಂತೆ ತೋರುತ್ತದೆ. ಈ ಅಧಿಕರಣ ಗಳನ್ನು ಶಾರೀರ, ದೋಷದರ್ಶನ, ಗುಣವಿವೇಚನ, ಆಲಂಕಾರಿಕ, ಪ್ರಾಯೋಗಿಕ ಎಂದು ಹೆಸರಿಸಲಾಗಿದೆ. ಪ್ರಥಮ ಅಧಿಕರಣದಲ್ಲಿ ಕಾವ್ಯದ ಪ್ರಯೋಜನ ಮತ್ತು ವಿಧಗಳನ್ನೂ ; ದ್ವಿತೀಯ ಅಧಿಕರಣದಲ್ಲಿ ದೋಷಗಳನ್ನೂ ; ತೃತೀಯ ಅಧಿಕರಣದಲ್ಲಿ ಗುಣಗಳನ್ನೂ; ಚತುರ್ಥ

---

೧. ಮನೋರಥಃ ಶಂಖದತ್ತಶ್ಚಟಕಃ ಸಂಧಿಮಾಂಸ್ತಥಾ ।
ಬಭೂವುಃ ಕವಯಸ್ತಸ್ಯ ವಾಮನಾದ್ಯಶ್ಚ ಮಂತ್ರಿಣಃ ॥

೨. ಏಭಿರ್ನಿದರ್ಶನೈಃ ಸ್ವೀಯೈಃ ಪರಕೀಯೈಶ್ಚ ಪುಷ್ಕಲೈಃ ।
ಶಬ್ದವೈಚಿತ್ರ್ಯಗರ್ಭೇಯಮುಪಮೈವ ಪ್ರಪಂಚಿತಾ ॥
ಕಾವ್ಯಾಲಂಕಾರ ಸೂತ್ರ. ೪. ೩, ೩೩.

ಅಧಿಕರಣದಲ್ಲಿ ಯಮಕ, ಅನುಪ್ರಾಸ ಮತ್ತು ಉಪಮಾದ್ಯಲಂಕಾರಗಳನ್ನೂ; ಪಂಚಮ ಅಧಿಕರಣದಲ್ಲಿ ಕಾವ್ಯಸಮಯ ಮತ್ತು ಶಬ್ದಶುದ್ಧಿಗಳನ್ನೂ ವಿಚಾರ ಮಾಡಿದ್ದಾನೆ.

ವಾಮನನ ಮತದಲ್ಲಿ ಸುಂದರವಾದ ಶಬ್ದಾರ್ಥಯುಗಲವು ಕಾವ್ಯ. 'ಕಾವ್ಯಂ ಗ್ರಾಹ್ಯಂ ಅಲಂಕಾರಾತ್', 'ಸೌಂದರ್ಯಮಲಂಕಾರಃ', 'ಸ ದೋಷಗುಣಾಲಂಕಾರ ಹಾನಾದಾನಾಭ್ಯಾಂ. ಎಂದು ಸೂತ್ರಿಸಿ ವೃತ್ತಿಯಲ್ಲಿ 'ಕಾವ್ಯಶಬ್ದೋಽಯಂ ಗುಣಾಲಂಕಾರಸಂಸ್ಕೃತಯೋಃ ಶಬ್ದಾರ್ಥಯೋಃ ವರ್ತತೇ' ಎಂದು ತನ್ನ ಮತವನ್ನು ಸ್ಪಷ್ಟಪಡಿಸಿದ್ದಾನೆ. ಇದರಂತೆಯೇ ಮಮ್ಮಟನ ಕಾವ್ಯ ಲಕ್ಷಣವೂ ಇದೆ. ವಾಮನನು ರೀತಿಸಂಪ್ರದಾಯದ ಪ್ರವರ್ತಕ. ಇವನ ಮತದಂತೆ ರೀತಿಯು ಕಾವ್ಯಕ್ಕೆ ಆತ್ಮ—'ರೀತಿರಾತ್ಮಾಕಾವ್ಯಸ್ಯ । ವಿಶಿಷ್ಟಾ ಪದರಚನಾ ರೀತಿಃ । ವಿಶೇಷೋ ಗುಣಾತ್ಮಾ ।' ಇವನು ವೈದರ್ಭೀ, ಗೌಡೀಯಾ, ಪಾಂಚಾಲೀ, ಎಂಬ ಮೂರು ರೀತಿಗಳನ್ನು ಪ್ರತಿಪಾದಿಸಿದ್ದಾನೆ. 'ಆರೋಚಕಿನಃ ।' 'ಸತೃಣಾಭ್ಯವಹಾರಿಣಶ್ಚ[2]'ನ ಶಾಸ್ತ್ರಮಪ್ರವ್ಯೇ[3] ಷ್ವರ್ಥವತ್', ಕವಿತ್ವಬೀಜಂ ಪ್ರತಿಭಾನಂ' ಎಂದು ಇವನು ಕವಿಗಳ ಮತ್ತು ಉಪದೇಶಾರ್ಹರ ಬಗ್ಗೆ ನುಡಿದಿರುವ ಮಾತುಗಳು ವಿಚಾರಯೋಗ್ಯವಾಗಿವೆ. ಕಾವ್ಯವಿಧಗಳಲ್ಲಿ ರೂಪಕವು ಶ್ರೇಷ್ಠವೆಂದು ಇವನ ಅಭಿಪ್ರಾಯ. ಕಾವ್ಯಶೋಭೆಯನ್ನುಂಟುಮಾಡುವ ಶಬ್ದಾರ್ಥ ಧರ್ಮಗಳು ಗುಣಗಳೆಂದೂ, ಕಾವ್ಯ ಶೋಭಾತಿಶಯಕ್ಕೆ ಕಾರಣಗಳು ಅಲಂಕಾರಗಳೆಂದೂ ಇವನು ಗುಣಾಲಂಕಾರಗಳಿಗೆ ಭೇದವನ್ನು ಹೇಳಿದ್ದಾನೆ—'ಕಾವ್ಯಶೋಭಾಯಾಃ ಕರ್ತಾರೋ ಧರ್ಮಾ ಗುಣಾಃ', 'ತದತಿಶಯಹೇತವಸ್ತ್ವಲಂಕಾರಾಃ', ಯೇಖಲು ಶಬ್ದಾರ್ಥಯೋಃ ಧರ್ಮಾ 'ಕಾವ್ಯಶೋಭಾಂ ಕುರ್ವಂತಿ ತೇ ಗುಣಾಃ-ವೃತ್ತಿ. ಇವನು ಗುಣಗಳನ್ನು ನಿತ್ಯವೆಂದು ತಿಳಿಸಿ ಹತ್ತು ಶಬ್ದಗುಣಗಳನ್ನೂ, ಹತ್ತು ಅರ್ಥಗುಣಗಳನ್ನೂ ಹೇಳಿದ್ದಾನೆ. ವಾಮನನ ಗುಣಾಲಂಕಾರ ವಿವೇಚನೆಯನ್ನು ಮಮ್ಮಟನು ಖಂಡಿಸಿದ್ದಾನೆ. (ಕಾವ್ಯಪ್ರಕಾಶ-೮).

ವಾಮನನು ಯಮಕ, ಅನುಪ್ರಾಸ, ಉಪಮಾ, ಪ್ರತಿವಸ್ತೂಪಮಾ ಮುಂತಾದ ೩೩ ಅಲಂಕಾರಗಳನ್ನು ನಿರೂಪಿಸಿದ್ದಾನೆ. ಇವನು ವಕ್ರೋಕ್ತಿಯನ್ನು ಅರ್ಥಾಲಂಕಾರವನ್ನಾಗಿ ಪರಿಗಣಿಸಿ ಅದರ ಲಕ್ಷಣವನ್ನು 'ಸಾದೃಶ್ಯಾಲ್ಲಕ್ಷಣಾ ವಕ್ರೋಕ್ತಿಃ' ಎಂದು ಹೇಳಿದ್ದಾನೆ. 'ಏಕಗುಣ ಹಾನಿಕಲ್ಪನಾಯಾಂ ಸಾಮ್ಯದಾರ್ಢ್ಯಂ ವಿಶೇಷೋಕ್ತಿಃ' ಎಂದು ವಿಶೇಷೋಕ್ತಿಯ ಲಕ್ಷಣವನ್ನು ನಿರೂಪಿಸಲಾಗಿದೆ. ಇದು ಜಗನ್ನಾಥ ಮುಂತಾದವರ ಮತದಲ್ಲಿ ರೂಪಕ (ದೃಢಾರೋಪ). ಭಾಮಹನು ಕಾವ್ಯಾಲಂಕಾರದ ಆರನೆಯ ಪರಿಚ್ಛೇದದಲ್ಲಿ ವ್ಯಾಕರಣಾಂಶಗಳನ್ನು ಪ್ರಸ್ತಾಪಿಸಿರುವಂತೆ ವಾಮನನು ಹನ್ನೆರಡನೆಯ ಅಧ್ಯಾಯದಲ್ಲಿ ಶಬ್ದ ಶುದ್ಧಿಯನ್ನು ವಿಚಾರ ಮಾಡಿದ್ದಾನೆ.

---

೧. ವಿವೇಕಿಗಳು.

೨. ಅವಿವೇಕಿಗಳು.

೩. ಅವಿವೇಕಿಗಳು.

ಇವನು ಅರ್ಥವನ್ನು ವ್ಯಕ್ತ ಮತ್ತು ಸೂಕ್ಷ್ಮವೆಂದು ವಿಭಜಿಸಿ, ಸೂಕ್ಷ್ಮಕ್ಕೆ ಭಾವ್ಯ ಮತ್ತು ವಾಸನೀಯವೆಂಬ ಎರಡು ಉಪವಿಭಾಗಗಳನ್ನು ಹೇಳಿದ್ದಾನೆ.

ರಾಜಶೇಖರನು ಕಾವ್ಯಮೀಮಾಂಸೆಯಲ್ಲಿ ಮಂಗಲನೆಂಬ ಆಲಂಕಾರಿಕನ ಮತ್ತು ವಾಮನೀಯರ ಅಭಿಪ್ರಾಯಗಳನ್ನು ಉಲ್ಲೇಖಿಸಿದ್ದಾನೆ. ಹೇಮಚಂದ್ರನು ಕಾವ್ಯಾನುಶಾಸನದಲ್ಲಿ ವಾಮನ ಮತ್ತು ಮಂಗಲರು ಸಮಾನಾಭಿಪ್ರಾಯವನ್ನು ಹೊಂದಿದ್ದರೆಂದು ಹೇಳಿದ್ದಾನೆ. ಮಾಣಿಕ್ಯಚಂದ್ರ ಮತ್ತು ಸೋಮೇಶ್ವರರೂ ಮಂಗಲನನ್ನು ಪಸ್ತಾಪಿಸಿದ್ದಾರೆ. ಪ್ರತೀಹಾರೇಂದು ರಾಜ ಮತ್ತು ಅಭಿನವಗುಪ್ತರು ವಾಮನ ಮತ್ತು ಮಂಗಲರನ್ನು ಪ್ರಸ್ತಾಪಿಸಿದ್ದಾರೆ. ಈ ಮಂಗಲನು ಯಾರೋ, ಇವನಿಗೂ ವಾಮನನಿಗೂ ಯಾವ ಸಂಬಂಧವಿದ್ದಿತೋ ತಿಳಿಯದು.

ಸಹದೇವನು ಕಾವ್ಯಾಲಂಕಾರಸೂತ್ರಕ್ಕೆ ವ್ಯಾಖ್ಯಾನವನ್ನು ಬರೆದು ಅದರಲ್ಲಿ ನಷ್ಟವಾಗಿದ್ದ ವಾಮನನ ಕಾವ್ಯಾಲಂಕಾರಸೂತ್ರವನ್ನು ಭಟ್ಟಮುಕುಲನು ಸಂಪಾದಿಸಿದನೆಂದು ತಿಳಿಸಿದ್ದಾನೆ. ಈ ಆಲಂಕಾರಗ್ರಂಥಕ್ಕೆ ಗೋಪೇಂದ್ರತಿಪ್ಪ ಭೂಪಾಲ (ತ್ರಿಪುರಭೂಪಾಲ) ನು ಕಾಮಧೇನುವೆಂಬ ವ್ಯಾಖ್ಯಾನವನ್ನೂ, ಮಹೇಶ್ವರನು ಸಾಹಿತ್ಯಸರ್ವಸ್ವವೆಂಬ ವ್ಯಾಖ್ಯಾನವನನ್ನೂ ಬರೆದಿದ್ದಾರೆ.

## ರುದ್ರಟ

ರುದ್ರಟನ ಕಾವ್ಯಾಲಂಕಾರದ ಐದನೆಯ ಅಧ್ಯಾಯದ ೧೨–೧೪ ಕಾರಿಕೆಗಳನ್ನು ವ್ಯಾಖ್ಯಾನಿಸುವಾಗ ನಮಿಸಾಧು "ಅತ್ರ ಚಕ್ರೇ ಸ್ವನಾಮಾಂಕಭೂತೋಽಯಂ ಶ್ಲೋಕಃ ಕವಿನಾಂತರ್ಭಾವಿತೋ ಯಥಾ—

ಶತಾನಂದಾಪರಾಖ್ಯೇನ ಭಟ್ಟವಾಮುಕಸೂನುನಾ ।
ಸಾಧಿತಂ ರುದ್ರಟೇನೇದಂ ಸಾಮಾಜಾ ಧೀಮತಾಂ ಹಿತಮ್ ॥

ಎಂದು ಹೇಳಿದ್ದಾನೆ. ಇದರಿಂದ ರುದ್ರಟನಿಗೆ ಶತಾನಂದನೆಂಬ ಮತ್ತೊಂದು ಹೆಸರಿದ್ದಿತೆಂದೂ ವಾಮುಕಭಟ್ಟನು ಅವನ ತಂದೆಯೆಂದೂ, ರುದ್ರಟನು ಸಾಮವೇದ ಪಾಠಕನೆಂದೂ ತಿಳಿದು ಬರುತ್ತದೆ. ಹೆಸರನ್ನು ನೋಡಿದರೆ ಅವನು ಕಾಶ್ಮೀರದವನೆಂದು ತೋರುತ್ತದೆ. ಆದರೆ

---

೧ ವೇದಿತಾ ಸರ್ವಶಾಸ್ತ್ರಾಣಾಂ ಭಟ್ಟೋಽಭೂನ್ಮುಕುಲಾಭಿಧಃ ।
ಲಬ್ಧ್ವಾ ಕುತಶ್ಚಿದಾದರ್ಶಂ ಭ್ರಷ್ಟಾಮ್ನಾಯಂ ಸಮುದ್ಧೃತಮ್ ॥
ಕಾವ್ಯಾಲಂಕಾರಶಾಸ್ತ್ರಂ ಯತ್ತೇನೈತದ್ವಾಮನೋದಿತಮ್ ।
ಅಸೂಯಾ ತನ್ನ ಕರ್ತವ್ಯಾ ವಿಶೇಷಾಲೋಕಿಭಿಃ ಕ್ವಚಿತ್ ॥

ಕರ್ನಾಟಕದಲ್ಲಿ ದೊರೆತಿರುವ ಒಂದು ಶಾಸನದಲ್ಲಿ ರುದ್ರಭಟ್ಟನು ತನ್ನ ದೊರೆಯಲ್ಲಿ ಒಂದಕ್ಷರ ಒತ್ತೆಯಿಟ್ಟು ರುದ್ರಟನಾದ ಉಲ್ಲೇಖವಿದೆ.

ರುದ್ರಟನು ಭಾಮಹ, ದಂಡಿ ಮತ್ತು ಉದ್ಭಟರಿಗಿಂತ ಹೆಚ್ಚು ಅಲಂಕಾರಗಳನ್ನು ಪ್ರತಿಪಾದಿಸಿದ್ದಾನೆ. ಭಾಮಹನು ವಕ್ರೋಕ್ತಿಗೆ ವ್ಯಾಪಕಾರ್ಥವನ್ನು ಹೇಳಿದ್ದರೆ ದಂಡಿ ಮತ್ತು ವಾಮನರು ಅದರ ವ್ಯಾಪ್ತಿಯನ್ನು ಅನುಕ್ರಮವಾಗಿ ಹೆಚ್ಚು ಹೆಚ್ಚು ಸೀಮಿತ ಗೊಳಿಸಿದ್ದಾರೆ. ರುದ್ರಟನು ವಕ್ರೋಕ್ತಿಯನ್ನು ಕೇವಲ ಶಬ್ದಾಲಂಕಾರವನ್ನಾಗಿ ಪರಿಗ್ರಹಿಸಿದ್ದಾನೆ. ಆದ್ದರಿಂದ ರುದ್ರಟನು ಭಾಮಹ, ಉದ್ಭಟ, ದಂಡಿ ಮತ್ತು ವಾಮನರಿಗಿಂತ ಈಚಿನವನೆಂದು ತೋರುತ್ತದೆ. ರಾಜಶೇಖರ, ಕುಂತಕ, ಪ್ರತೀಹಾರೇಂದುರಾಜ, ಧನಿಕ, ಅಭಿನವಗುಪ್ತ ಮತ್ತು ಮಮ್ಮಟರು ರುದ್ರಟನ ಕಾವ್ಯಾಲಂಕಾರದಿಂದ ಶ್ಲೋಕಗಳನ್ನು ಉದ್ಧರಿಸಿದ್ದಾರೆ. ಆದ್ದರಿಂದ ರುದ್ರಟನು ಸು ಕ್ರಿ.ಶ. ೯ನೆಯ ಶತಮಾನಕ್ಕಿಂತ ಈಚಿನವನಲ್ಲ. ಕ್ರಿ.ಶ.ಸು ೮೧೮ಕ್ಕಿಂತ ಹಿಂದಿನವನಾದ ಉತ್ಪಲನು ವರಾಹಮಿಹಿರನ 'ಯೋಗಯಾತ್ರಾ' ದ ಪ್ರಥಮ ಶ್ಲೋಕವನ್ನು ವ್ಯಾಖ್ಯಾನಿಸು ವಾಗ ರುದ್ರಟನನ್ನು ಹೆಸರಿಸಿದ್ದಾನೆ. ವಲ್ಲಭದೇವ (ಸು.ಕ್ರಿ.ಶ. ೯ನೆಯ ಶತ) ನು ಶಿಶುಪಾಲ ವಧದ ತನ್ನ ವ್ಯಾಖ್ಯಾನದಲ್ಲಿ ರುದ್ರಟನನ್ನು ಪ್ರಸ್ತಾಪಿಸಿದ್ದಾನೆ. ಆದ್ದರಿಂದ ರುದ್ರಟನು ಕ್ರಿ.ಶ.ಸು ೮೫೦ ರಲ್ಲಿದ್ದನೆಂದು ಊಹಿಸಬಹುದು.

ರುದ್ರಟನ ಕಾವ್ಯಾಲಂಕಾರದಲ್ಲಿ ೧೬ ಅಧ್ಯಾಯಗಳಿವೆ ಸುಮಾರು ಎಲ್ಲ ಶ್ಲೋಕಗಳು ಆರ್ಯೆಯಲ್ಲಿದ್ದು ಉದಾಹರಣೆಗಳು ರುದ್ರಟನ ಸ್ವಂತ ರಚನೆಗಳಾಗಿವೆ. ೧೨ನೆಯ ಅಧ್ಯಾಯ ದಲ್ಲಿ ನಾಯಿಕೆಯರ ಲಕ್ಷಣವನ್ನು ತಿಳಿಸುವ ೧೪ ಶ್ಲೋಕಗಳನ್ನು ಪ್ರಕ್ಷಿಪ್ತಗಳೆಂದು ಪರಿಗಣಿಸ ಲಾಗಿದೆ. ರುದ್ರಟನು ಕಾವ್ಯಲಕ್ಷಣ, ಕಾವ್ಯವಿಧ, ರೀತಿ, ಅಲಂಕಾರ, ವೃತ್ತಿ, ದೋಷ, ರಸ, ನಾಯಕ–ನಾಯಿಕೆಯರು ಮುಂತಾದ ಅಲಂಕಾರಶಾಸ್ತ್ರದ ಎಲ್ಲ ಅಂಶಗಳನ್ನು ನಿರೂಪಿಸಿದ್ದಾನೆ. ಅರ್ಥಾಲಂಕಾರಗಳನ್ನು ಶಾಸ್ತ್ರೀಯವಾಗಿ ವಿಭಜಿಸಿರುವವರಲ್ಲಿ ರುದ್ರಟನೇ ಮೊದಲಿಗ. ಇವನು ವಾಸ್ತವ, ಔಪಮ್ಯ, ಅತಿಶಯ ಮತ್ತು ಶ್ಲೇಷವೆಂದು ನಾಲ್ಕು ಮೂಲಭೂತವಾದ ಅಂಶಗಳನ್ನು ತಿಳಿಸಿ, ಉಪಮಾ ಮುಂತಾದ ಎಲ್ಲ ಅರ್ಥಾಲಂಕಾರಗಳನ್ನು ಈ ನಾಲ್ಕರ ಭೇದಗಳೆಂದು ಹೇಳಿದ್ದಾನೆ ನಿಯಮವನ್ನು ಕಟ್ಟುನಿಟ್ಟಾಗಿ ಪಾಲಿಸುವುದರಿಂದ ಒಂದು ಅಲಂಕಾರವು ಎರಡು ಮೂರು ವರ್ಗಗಳಲ್ಲಿಯೂ ಬರುವುದುಂಟು. ಉದಾಹರಣೆಗೆ ಸಹೋಕ್ತಿ ಮತ್ತು ಸಮುಚ್ಚಯಗಳು ವಾಸ್ತವ ಮತ್ತು ಔಪಮ್ಯಗಳೆರಡರಲ್ಲಿಯೂ ಬರುತ್ತವೆ. ವ್ಯಾಜಸ್ತುತಿಯನ್ನು ವ್ಯಾಜಶ್ಲೇಷವೆಂದೂ, ಉದಾತ್ತವನ್ನು ಅವಸರವೆಂದೂ,ಸ್ವಭಾವೋಕ್ತಿಯನ್ನು ಜಾತಿಯೆಂದೂ ಕರೆಯಲಾಗಿದೆ. ರುದ್ರಟನ ಹೇತ್ವಲಂಕಾರವನ್ನು ಮಮ್ಮಟನು ಖಂಡಿಸಿದ್ದಾನೆ. ರುದ್ರಟನು 'ತಸ್ಮಾತ್ಕರ್ತವ್ಯಂ ಯತ್ನೇನ ಮಹೀಯಸಾ ರಸೈರ್ಯುಕ್ತಂ ೧೨.೨.' ಎಂದು ಹೇಳಿದ್ದರೂ ಅವನ ಒಲವು ಅಲಂಕಾರಗಳ ಕಡೆಗೆ ಅಧಿಕವಾಗಿರುವುದರಿಂದ ಅವನನ್ನು ಅಲಂಕಾರ ಸಂಪ್ರದಾಯದವನೆಂದು ಹೇಳಬೇಕಾಗುತ್ತದೆ. ರುದ್ರಟನು ಯಮಕಾದಿ ಶಬ್ದಾಲಂಕಾರಗಳ ಪ್ರಾರಂಭದಲ್ಲಿ 'ರಚನಾಚಾರುತ್ವೇ

ಖಲು ಶಬ್ದಗುಣಃ ಸಂನಿವೇಶಚಾರುತ್ವಂ' ಎಂದು ಹೇಳಿರುವ ಮಾತನ್ನು ನಮಿಸಾಧು 'ಚಾರುತ್ವ ಲಕ್ಷಣೋ ಯಃ ಶಬ್ದಗುಣಃ' ಎಂಬುದಾಗಿ ವಿವರಿಸಿದ್ದಾನೆ. ಈ ಕೃತಿಯಲ್ಲಿ ದ್ರವ್ಯ, ಗುಣ, ಕ್ರಿಯಾ, ಜಾತಿನಿಮಿತ್ತವಾದ ಅರ್ಥಭೇದಗಳನ್ನು ತಿಳಿಸಿ ಕಾವ್ಯಕ್ಕೆ ಗುಣದಾಯಕಗಳಾದ ಅರ್ಥಾಲಂಕಾರಗಳನ್ನು ಪ್ರತಿಪಾದಿಸಲಾಗಿದೆ. 'ರಸೈರ್ನಿರಂತರಂ' ೧೨-೨ ಎಂಬ ರುದ್ರಟನ ಮಾತನ್ನು ವ್ಯಾಖ್ಯಾನಿಸುವಾಗ ನಮಿಸಾಧು 'ಅಲಂಕಾರಮಧ್ಯ ಏವ ರಸಾ ಅಪಿ ಕಿಂ ನೋಕ್ತಾಃ' ಎಂದು ಪ್ರಶ್ನಿಸಿ 'ಕಾವ್ಯಸ್ಯ ಹಿ ಶಬ್ದಾರ್ಥೌ ಶರೀರಂ। ತಸ್ಯ ಚ ವಕ್ರೋಕ್ತಿವಾಸ್ತವಾದಯಃ ಕಟಕಕುಂಡಲಾದಯ ಇವ ಕೃತ್ರಿಮಾಲಂಕಾರಾಃ। ರಸಾಸ್ತು ಸೌಂದರ್ಯಾದಯ ಇವ ಸಹಜಾ ಗುಣಾಃ' ಎಂದು ವಿವರಿಸಿ,—ಆದ್ದರಿಂದ ಪ್ರತ್ಯೇಕವಾಗಿ ರಸಗಳನ್ನು ಪ್ರತಿಪಾದಿಸಲಾಗಿದೆ ಯೆಂದು ಸಮಾಧಾನ ಹೇಳಿದ್ದಾನೆ. ಆದ್ದರಿಂದ ರುದ್ರಟನ ಮತದಲ್ಲಿ ಅಲಂಕಾರಗಳಂತೆ ರಸಗಳು ಗುಣಗಳೇ ಆಗಿವೆ. ರುದ್ರಟನು ವೈದರ್ಭೀ, ಪಾಂಚಾಲೀ, ಲಾಟೀ, ಗೌಡೀ ಎಂಬ ನಾಲ್ಕು ರೀತಿಗಳನ್ನೂ; ಮಧುರಾ, ಲಲಿತಾ, ಪ್ರೌಢಾ, ಪರುಷಾ, ಭದ್ರಾ ಎಂಬ ಐದು ವೃತ್ತಿಗಳನ್ನೂ ಹೇಳಿ ಮಾಧುರ್ಯಾದಿಗುಣಗಳನ್ನು ಕೈಬಿಟ್ಟಿದ್ದಾನೆ. ಇವನು ಪ್ರಸಿದ್ಧವಾದ ಒಂಬತ್ತುರಸಗಳ ಜೊತೆಗೆ ಪ್ರೇಯಸ್ ಎಂಬ ಹತ್ತನೆಯ ರಸವನ್ನು ಸೇರಿಸಿದ್ದಾನೆ. ಶಬ್ದಾರ್ಥಗಳು ಕಾವ್ಯವೆಂದು ಇವನ ಮತ—'ನನು ಶಬ್ದಾರ್ಥೌ ಕಾವ್ಯಂ'. ನಮಿಸಾಧು ರುದ್ರಟನ ಕಾವ್ಯಾಲಂಕಾರಕ್ಕೆ ಒಂದು ಉಪಯುಕ್ತ ವ್ಯಾಖ್ಯಾನವನ್ನು (ಕ್ರಿ.ಶ. ೧೦೬೮-೯) ಬರೆದಿದ್ದಾನೆ. ಅವನು ಶ್ವೇತಾಂಬರ ಜೈನ; ಅವನ ಗುರು ಶಾಲಿಭದ್ರ. ಹಿಂದಿನ ವ್ಯಾಖ್ಯಾಕಾರರನ್ನು ತಾನು ಅನು ಸರಿಸಿರುವುದಾಗಿ ಅವನು ಹೇಳಿಕೊಂಡಿದ್ದಾನೆ. ಆಶಾಧರ ಮತ್ತು ಗೋಪಾಲಭಟ್ಟರೂ ಕಾವ್ಯಾ ಲಂಕಾರಕ್ಕೆ ವ್ಯಾಖ್ಯಾನಗಳನ್ನು ಬರೆದಿದ್ದಾರೆ.

## ರುದ್ರಭಟ್ಟ (ರುದ್ರ)

ರುದ್ರಭಟ್ಟ (ರುದ್ರ)ನು 'ಶೃಂಗಾರತಿಲಕ' ವೆಂಬ ಗ್ರಂಥವನ್ನು ರಚಿಸಿದ್ದಾನೆ. ಇದರ ಕೆಲವು ಹಸ್ತಪ್ರತಿಗಳಲ್ಲಿ ಕರ್ತೃವಿನ ಹೆಸರು ರುದ್ರಟನೆಂದೇ ಇದೆ ರುದ್ರ, ರುದ್ರಭಟ್ಟ ಮತ್ತು ರುದ್ರಟರ ವಿಷಯದಲ್ಲಿ ಸುಭಾಷಿತ ಸಂಗ್ರಹಕಾರರಲ್ಲಿ ಗಲಿಬಿಲಿಯು ಕಂಡು ಬರುತ್ತದೆ. ಆದ್ದರಿಂದ ರುದ್ರಟ ಮತ್ತು ರುದ್ರಭಟ್ಟರು ಒಬ್ಬನೆಂಬ ಮತ್ತು ಭಿನ್ನರೆಂಬ ವಾದ ವಿವಾದಗಳು ಬೆಳೆದಿವೆ.

ಶೃಂಗಾರತಿಲಕದಲ್ಲಿ ಮೂರು ಪರಿಚ್ಛೇದಗಳಿವೆ. ಪ್ರಥಮ ಪರಿಚ್ಛೇದದಲ್ಲಿ ನವರಸಗಳು, ಭಾವಗಳು ಮತ್ತು ನಾಯಕ ನಾಯಿಕೆಯರ ವಿಧಗಳೂ; ದ್ವಿತೀಯ ಪರಿಚ್ಛೇದದಲ್ಲಿ ವಿಪ್ರಲಂಭ ಶೃಂಗಾರ ಮತ್ತು ಅದರ ಹತ್ತು ಅವಸ್ಥೆಗಳು, ಪ್ರಣಯಿನಿಯ ಕೋಪಪರಿಹಾರೋಪಾಯಗಳೂ; ತೃತೀಯ ಪರಿಚ್ಛೇದದಲ್ಲಿ ಇತರ ರಸಗಳು, ಕೈಶಿಕ್ಯಾದಿ ನಾಲ್ಕು ವೃತ್ತಿಗಳೂ ಬಂದಿವೆ. ಗ್ರಂಥದ ಕೊನೆಯಲ್ಲಿ 'ಶೃಂಗಾರ ತಿಲಕವಿಧಿನಾ ಪುನರಪಿ ರುದ್ರಃ ಪ್ರಸಾದಯತಿ' ಎಂಬ ಮಾತಿದೆ.

ರುದ್ರಟನ ಕಾವ್ಯಾಲಂಕಾರದ ೧೨-೧ನೆ ಅಧ್ಯಾಯಗಳ ವಿಷಯವೇ ಶೃಂಗಾರ ತಿಲಕದಲ್ಲಿದ್ದು ಎರಡು ಕೃತಿಗಳಿಗೂ ಬಹಳ ಸಾಮ್ಯವಿದೆ ; ಉದಾಹರಣೆಗಳು ಮಾತ್ರ ಭಿನ್ನವಾಗಿವೆ. ಒಬ್ಬನೇ ಇಂತಹ ಎರಡು ಕೃತಿಗಳನ್ನು ರಚಿಸುವ ಅಗತ್ಯವಿಲ್ಲ. ಕಾವ್ಯಾಲಂಕಾರವು ಹತ್ತುರಸಗಳು ಮತ್ತು ಮಧುರಾದಿ ಪಂಚವೃತ್ತಿಗಳನ್ನು ಹೇಳಿದ್ದರೆ ಶೃಂಗಾರತಿಲಕವು ಒಂಭತ್ತು ರಸಗಳು ಮತ್ತು ಕೈಶಿಕ್ಯಾದಿ ನಾಲ್ಕು ವೃತ್ತಿಗಳನ್ನು ಹೇಳುತ್ತದೆ. ಇದರಿಂದ ಕೃತಿಕಾರರಲ್ಲಿ ಅಭಿಪ್ರಾಯ ಭೇದವು ಸ್ಪಷ್ಟವಾಗಿ ಕಾಣುತ್ತದೆ. ರಾಜಶೇಖರ ಮೊದಲಾದವರು ಕಾವ್ಯಾಲಂಕಾರದ ಕರ್ತೃವನ್ನು ರುದ್ರನೆಂದೇ ಕರೆದಿದ್ದಾರೆ. ಆದ್ದರಿಂದ ರುದ್ರಟ ಮತ್ತು ರುದ್ರಭಟ್ಟರನ್ನು ವಿಭಿನ್ನರೆಂದು ಭಾವಿಸಲಾಗಿದೆ. ಶೃಂಗಾರತಿಲಕವನ್ನು ಕ್ರಿ.ಶ.ಸು ಹನ್ನೊಂದನೆಯ ಶತಮಾನದಲ್ಲಿ ರಚಿಸಿರಬೇಕೆಂದು ಕೆಲವರು ಅಭಿಪ್ರಾಯಪಡುತ್ತಾರೆ.

## ನವ್ಯಯುಗ

### ಆ ನಂ ದ ವ ರ್ಧ ನ

ಸಾಹಿತ್ಯಶಾಸ್ತ್ರದ ಇತಿಹಾಸದಲ್ಲಿ ಅಮೂಲ್ಯವಾದ ಧ್ವನಿಸಿದ್ಧಾಂತವನ್ನು ಸ್ಥಾಪಿಸಿ ಧ್ವನಿಕಾರ, ಧ್ವನ್ಯಾಚಾರ್ಯನೆಂಬ ಶಾಶ್ವತಕೀರ್ತಿಗೆ ಪಾತ್ರನಾದ ಆನಂದವರ್ಧನನ ಜೀವಿತ ಸಂಗತಿಗಳು ದೊರೆಯದಿರುವುದು ವಿಷಾದನೀಯ. ಮುಂದಿನ ಆಲಂಕಾರಿಕರ ಮೇಲೆ ಇವನ ಪ್ರಭಾವವು ಅಧಿಕವಾಗಿ ಬಿದ್ದಿದೆ. ರಾಜಶೇಖರನು ಇವನನ್ನು ಮುಕ್ತಕಂಠದಿಂದ ಪ್ರಶಂಸಿಸಿದ್ದಾನೆ—

ಧ್ವನಿನಾತಿಗಭೀರೇಣ ಕಾವ್ಯತತ್ತ್ವನಿವೇಶಿನಾ ।
ಆನಂದವರ್ಧನಃ ಕಸ್ಯ ನಾಸೀದಾನಂದವರ್ಧನಃ ॥

ಜಗನ್ನಾಥನು ಇವನನ್ನು ಧ್ವನಿಮಾರ್ಗದ ವ್ಯವಸ್ಥಾಪಕನೆಂದು ಹೊಗಳಿದ್ದಾನೆ—
'ಧ್ವನಿಕೃತಾಮಾಲಂಕಾರಿಕಸರಣಿ ವ್ಯವಸ್ಥಾಪಕತ್ವಾತ್'

ಆನಂದವರ್ಧನನಿಂದಲೇ ರಚಿತವಾದ 'ದೇವೀಶತಕ'ದ ೧೦೧ನೆಯ ಶ್ಲೋಕದಿಂದ ಆನಂದವರ್ಧನನ ತಂದೆ 'ನೋಣ' ನೆಂದು ತಿಳಿದುಬರುತ್ತದೆ. ಹೇಮಚಂದ್ರನು ಕಾವ್ಯ ಮೀಮಾಂಸೆಯಲ್ಲಿ 'ನೋಣಸುತಃ ಶ್ರೀಮದಾನಂದವರ್ಧನನಾಮಾ' ಎಂದು ಹೇಳಿದ್ದಾನೆ. ಕಯ್ಯಟನು ದೇವೀಶತಕದ ವ್ಯಾಖ್ಯಾನದಲ್ಲಿ ಆನಂದವರ್ಧನನು ನೋಣನ ಮಗನೆಂದು ತಿಳಿಸಿದ್ದಾನೆ. ಮುಕ್ತಾಕಣ, ಶಿವಸ್ವಾಮಿ, ಆನಂದವರ್ಧನ ಮತ್ತು ರತ್ನಾಕರರು ಕಾಶ್ಮೀರದ ಅವಂತಿವರ್ಮನ ಆಶ್ರಯದಲ್ಲಿದ್ದರೆಂದು ರಾಜತರಂಗಿಣಿಯು ತಿಳಿಸುತ್ತದೆ.

ಆನಂದವರ್ಧನನು ಉದ್ಭಟ(ಕ್ರಿ. ಶ. ಸಂ. ೮೦೦)ನನ್ನು ಪ್ರಸ್ತಾಪಿಸಿದ್ದಾನೆ. ರಾಜಶೇಖರ (ಕ್ರಿ. ಶ. ಸಂ. ೯೦೦–೨೫)ನು ಆನಂದವರ್ಧನನನ್ನು ಪ್ರಸ್ತಾಪಿಸಿದ್ದಾನೆ ಆದ್ದರಿಂದ ಆನಂದವರ್ಧನನು ಉದ್ಭಟ ಮತ್ತು ರಾಜಶೇಖರರ ಮಧ್ಯಕಾಲದವನೆಂಬುದು ನಿರ್ವಿವಾದವಾಗಿದೆ. ಕ್ರಿ. ಶ. ಸು, ಹತ್ತನೆಯ ಶತಮಾನದ ಅಭಿನವಗುಪ್ತನು ಧ್ವನ್ಯಾಲೋಕಕ್ಕೆ ವ್ಯಾಖ್ಯಾನವನ್ನು ಬರೆದಿದ್ದಾನೆ. ಕಯ್ಯಟನು ಆನಂದವರ್ಧನನ ದೇವೀಶತಕಕ್ಕೆ ಕ್ರಿ. ಶ ೯೭೭ರಲ್ಲಿ ವ್ಯಾಖ್ಯಾನವನ್ನು ಬರೆದಿದ್ದಾನೆ. ರಾಜತರಂಗಿಣಿಯಿಂದ ಆನಂದವರ್ಧನನು ಅವಂತಿವರ್ಮ (ಕ್ರಿ. ಶ. ೮೫೫–೮೮೪)ನ ಸಾಮ್ರಾಜ್ಯದಲ್ಲಿದ್ದನೆಂದು ತಿಳಿದುಬರುತ್ತದೆ—

ಮುಕ್ತಾಕಣಃ ಶಿವಸ್ವಾಮೀ ಕವಿರಾನಂದವರ್ಧನಃ ।
ಪ್ರಥಾಂ ರತ್ನಾಕರಶ್ಚಾಗಾತ್ಸಾಮ್ರಾಜ್ಯೇಽವಂತಿವರ್ಮಣಃ ॥

ಆದ್ದರಿಂದ ಆನಂದವರ್ಧನನ ಕಾಲ ಕ್ರಿ. ಶ. ೯ನೆಯ ಶತಮಾನವೆಂದು ಹೇಳಬಹುದು. ಮನೋರಥನು ಆನಂದವರ್ಧನನ ಸಮಕಾಲೀನನೆಂದು ಲೋಚನವು ತಿಳಿಸುತ್ತದೆ.

ಆನಂದವರ್ಧನನು ಧ್ವನ್ಯಾಲೋಕ, ವಿಷಮಬಾಣಲೀಲಾ, ಅರ್ಜುನಚರಿತ ಮತ್ತು ದೇವೀ ಶತಕಗಳನ್ನು ಬರೆದಿದ್ದಾನೆ. ಧರ್ಮಕೀರ್ತಿಯ 'ಪ್ರಮಾಣನಿಶ್ಚಯ'ವೆಂಬ ಕೃತಿಗೆ ಧರ್ಮೋತ್ತರನು 'ಧರ್ಮೋತ್ತಮಾ, ಎಂಬ ವ್ಯಾಖ್ಯಾನವನ್ನು ಬರೆದಿದ್ದಾನೆ[1] ! ಆನಂದವರ್ಧನನು ಈ ವ್ಯಾಖ್ಯಾನಕ್ಕೆ ವಿವರಣೆಯನ್ನು ಬರೆದುದಾಗಿ ತಿಳಿದುಬರುತ್ತದೆ. 'ಯತ್ತ್ವನಿರ್ದೇಶ್ಯತ್ವಂ ಸರ್ವಲಕ್ಷಣವಿಷಯಂ ಬೌದ್ಧಾನಾಂ ಪ್ರಸಿದ್ಧಂ ತತ್ತನ್ಮತ ಪರೀಕ್ಷಯಾ ಗ್ರಂಥಾಂತರೇ ನಿರೂಪಯಿಷ್ಯಾಮಃ' ಎಂಬ ಧ್ವನ್ಯಾಲೋಕದ ಮಾತಿಗೆ 'ವಿನಿಶ್ಚಯಟೀಕಾಯಾಂ ಧರ್ಮೋತ್ತಮಾಯಾಂ ಯಾ ವಿವೃತಿರಮುನಾ ಗ್ರಂಥಕೃತಾ ಕೃತಾ ತತ್ರೈವ ತದ್ವ್ಯಾಖ್ಯಾತಂ' ಎಂದು ಲೋಚನವು ವಿವರಣೆಯನ್ನು ನೀಡುತ್ತದೆ. ದೇವೀಶತಕವು ಯಮಕ, ಭಾಷಾಶ್ಲೇಷ, ಗೋಮೂತ್ರಿಕಾ ಮೊದಲಾದ ಚಿತ್ರಬಂಧಗಳಿಂದ ತುಂಬಿದೆ. 'ಆನಂದವರ್ಧನನು 'ತತ್ತ್ವಾವಲೋಕ' ವೆಂಬ ಗ್ರಂಥವನ್ನು ರಚಿಸಿರುವುದಾಗಿ ಅಭಿನವಗುಪ್ತನ ಲೋಚನದಿಂದ ತಿಳಿದುಬರುತ್ತದೆ.

ಧ್ವನ್ಯಾಲೋಕವನ್ನು ಕಾವ್ಯಾಲೋಕ, ಸಹೃದಯ ಹೃದಯಾಲೋಕ, ಸಹೃದಯಾ ಲೋಕವೆಂದು ಕರೆಯುವುದುಂಟು. ಇದರಲ್ಲಿ ಕಾರಿಕಾ, ವೃತ್ತಿ ಮತ್ತು ಉದಾಹರಣೆಗಳೆಂಬ ಮೂರು ಭಾಗಗಳಿವೆ. ಕಾರಿಕಾಭಾಗವನ್ನು ಧ್ವನಿಯೆಂದೂ, ವೃತ್ತಿ ಮತ್ತು ಉದಾಹರಣೆಗಳನ್ನು ಆಲೋಕವೆಂದೂ ಗುರ್ತಿಸಿ ಸಮಗ್ರ ಕೃತಿಯನ್ನು ಧ್ವನ್ಯಾಲೋಕವೆಂದು ಕರೆಯುತ್ತಾರೆ, ವೃತ್ತಿ

---

೧, 'ಧರ್ಮೋತ್ತಮಾ'ದ ಮೂಲ ಪ್ರತಿಯು ಉಪಲಬ್ಧವಿಲ್ಲ. ಅದರ ಟಿಬೆಟನ್ ಭಾಷಾಂತರ ದೊರೆತಿದೆ.

ಮತ್ತು ಉದಾಹರಣೆಗಳು ಒಬ್ಬನವೆಂಬ ವಿಷಯದಲ್ಲಿ ಸಂಶಯವಿಲ್ಲ. ಕಾರಿಕಾ ಮತ್ತು ವೃತ್ತಿಗಳ ಏಕಕರ್ತೃತ್ವ ವಿಷಯದಲ್ಲಿ ಬಹಳ ವಿವಾದವಿದೆ. 'ನ ಚೈತನ್ಮಯೋಕ್ತಂ, ಅಪಿತು ಕಾರಿಕಾಕಾರಾಭಿಪ್ರಾಯೇಣೇತ್ಯಾಹ ತತ್ರೇತಿ, ಭವತಿ । ಮೂಲತೋ ದ್ವಿಭೇದತ್ವಂ ಕಾರಿಕಾಕಾರಸ್ಯಾಪಿ ಸಂಮತಮೇವೇತಿ ಭಾವಃ।; ಅತ ಏವ ಮೂಲಕಾರಿಕಾ ಸಕ್ಷಾತ್ತನ್ನಿರಾಕರಣಾರ್ಥಾ ನ ಶ್ರೂಯತೇ। ವೃತ್ತಿಕೃತ್ತು ನಿರಾಕೃತ ಮಪಿ ಪ್ರಮೇಯ ಸಂಖ್ಯಾಪೂರಣಾಯ ಕೇನೇನ ತತ್ಪಕ್ಷಮನೂದ್ಯ ನಿರಾಕರೋತಿ ಯೇಽಪೀತ್ಯಾದಿನಾ । ' ಈ ಮುಂತಾದ ಲೋಚನದ ಮಾತುಗಳಿಂದ ಒಂದು ವರ್ಗದವರು ಕಾರಿಕಾಕಾರ ಮತ್ತು ವೃತ್ತಿಕಾರರು ಭಿನ್ನರೆಂದು ವಾದಿಸುತ್ತಾರೆ. ಅಭಿನವ ಗುಪ್ತನು ವೃತ್ತಿಕಾರನನ್ನು ಗ್ರಂಥಕೃತ್ ಎಂದೂ, ಕಾರಿಕಾಕಾರನನ್ನು ಮೂಲಗ್ರಂಥಕೃತ್ ಎಂದೂ ವ್ಯವಹರಿಸಿರುವುದು ಮೇಲಿನ ವಾದಕ್ಕೆ ಪುಷ್ಟಿನೀಡುತ್ತದೆ. ಕಾರಿಕೆಯು ಎಲ್ಲಿಯೂ ಧ್ವನಿಯನ್ನು ವಸ್ತು, ಅಲಂಕಾರ, ರಸಾದಿ ಎಂದು ವಿಭಾಗಿಸಿಲ್ಲ ; ವೃತ್ತಿಯು ಈ ವಿಭಾಗವನ್ನೂ ಹೇಳುತ್ತದೆ.

ಕಾರಿಕಾಭಾಗದ ಪ್ರಾರಂಭದಲ್ಲಿ ಮಂಗಳವಿಲ್ಲ ; ವೃತ್ತಿಯ ಪ್ರಾರಂಭದಲ್ಲಿ ಮಂಗಳವಿದೆ, ಕಾರಿಕೆಗಳಿಗೆ ಸಮಾಪ್ತಿವಾಕ್ಯವಿಲ್ಲ ; ವೃತ್ತಿಗೆ ಸಮಾಪ್ತಿವಾಕ್ಯವಿದೆ. ವೃತ್ತಿಯು ಕಾರಿಕೆಗಳ ಭಾಗವಾಗಿ ಸಮಾವೇಶಗೊಂಡಂತಿದೆ. ಕಾರಿಕಾಕಾರನೇ ವೃತ್ತಿಯನ್ನು ಬರೆಯುವ ಸಂಪ್ರದಾಯವಿದೆ. ಲೋಚನಕಾರನು ವ್ಯಾಖ್ಯಾನ ಸೌಕರ್ಯಕ್ಕಾಗಿ ಮೂಲಗ್ರಂಥಕೃತ್ ಮತ್ತು ಗ್ರಂಥಕೃತ್ ಎಂದು ವಿಭಾಗಿಸಿಕೊಂಡಿರುವಂತೆ ತೋರುತ್ತದೆ. ಮಹಿಮಭಟ್ಟ, ಕ್ಷೇಮೇಂದ್ರ, ಹೇಮಚಂದ್ರ, ವಿಶ್ವನಾಥ ಮುಂತಾದ ಆಲಂಕಾರಿಕರು ಆನಂದವರ್ಧನನೇ ಕಾರಿಕೆಗಳಿಗೂ ವೃತ್ತಿಗೂ ಕರ್ತೃವೆಂದು ಭಾವಿಸಿದ್ದಾರೆ. ಈ ಮುಂತಾದ ಕಾರಣಗಳಿಂದ ಮತ್ತೊಂದು ವರ್ಗದವರು ಕಾರಿಕೆಗಳಿಗೂ ವೃತ್ತಿಗೂ ಏಕಕರ್ತೃತ್ವವನ್ನು ಸಮರ್ಥಿಸುತ್ತಾರೆ.

ಉದಾಹರಣೆಗಳಿಂದ ಕೂಡಿದ ವೃತ್ತಿಗೆ ಆನಂದವರ್ಧನನು ಕರ್ತೃವೆಂಬ ವಿಚಾರದಲ್ಲಿ ಮತ ಭೇದವಿಲ್ಲ. ಆನಂದವರ್ಧನನು ಕಾರಿಕಾಕಾರನಲ್ಲವಾದರೆ ಕಾರಿಕೆಗಳನ್ನು ಬರೆದವನು ಯಾರೆಂಬ ಪ್ರಶ್ನೆ ಸಹಜವಾಗಿ ಉದ್ಭವಿಸುತ್ತದೆ— 'ಸರಸ್ವತ್ಯಾಸ್ತತ್ತ್ವಂ ಕವಿಸಹೃದಯಾಖ್ಯಂ ವಿಜಯತಾತ್'' —ಲೋಚನ ; 'ತದ್ವ್ಯಾಕರೋತ್ ಸಹೃದಯೋದಯಲಾಭಹೇತೋಃ'— ಧ್ವನ್ಯಾಲೋಕದ (ವೃತ್ತಿಯ) ಕೊನೆಯ ಶ್ಲೋಕ ; 'ಲಕ್ಷಣಾಮಾರ್ಗಾವಗಾಹಿತ್ವಂ ತು ಧ್ವನೇಃ ಸಹೃದಯೈರ್ನೂತನತಯೋಪವರ್ಣಿತಸ್ಯ ವಿದ್ಯತ ಇತಿ ದಿಶಮುನ್ಮೀಲಯಿತುಮಿದ ಮುಕ್ತಂ'— ಅಭಿಧಾವೃತ್ತಿ ಮಾತೃಕಾ ; 'ತಥಾ ಹಿ ತತ್ರ ವಿವಕ್ಷಿತಾನ್ಯಪರತಾ ಸಹೃದಯೈಃ ಕಾವ್ಯವರ್ತ್ಮನಿ ನಿರೂಪಿತಾ'- ಮುಕುಲ, ಈ ಮುಂತಾದ ಮಾತುಗಳಿಂದ 'ಸಹೃದಯ' ನು ಕಾರಿಕೆಗಳ ಕರ್ತೃವೆಂದು ತೋರುತ್ತದೆ. 'ಸಹೃದಯಮನಃ ಪ್ರೀತಯೇ', 'ಅರ್ಥಃ ಸಹೃದಯ ಶ್ಲಾಘ್ಯಃ' ಎಂಬ ಕಾರಿಕೆಯ ಮಾತುಗಳೂ ಮೇಲಿನ ಅಭಿಪ್ರಾಯವನ್ನು ಪೋಷಿಸುತ್ತವೆ. ಆನಂದವರ್ಧನನಿಗಿಂತ ಹಿಂದಿನಿಂದಲೂ ಧ್ವನಿವಿಷಯಕವಾದ ವಿವೇಚನೆ ನಡೆದಿದ್ದಿತು, 'ಬುಧೈಃ ಸಮಾಮ್ನಾತ ಪೂರ್ವಃ' ಎಂಬ ಕಾರಿಕೆಯ ಮಾತುಗಳಿಗೆ ಆನಂದವರ್ಧನನು 'ಬುಧೈಃ

ಕಾವ್ಯತತ್ತ್ವವಿದ್ಭಿಃ ಕಾವ್ಯಸ್ಯಾತ್ಮಾ ಧ್ವನಿರಿತಿ ಸಂಜ್ಞಿತಃ ಪರಂಪರಯಾ ಯಃ ಸಮಾಮ್ನಾತಃ ಸಮಾಖ್ಯಾತ'ಃ ಎಂದು ವಿವರಣೆಯನ್ನು ಬರೆದಿದ್ದಾನೆ. ಕಾವ್ಯದ ಧ್ವನಿಯು ವೈಯಾಕರಣರ ಸ್ಫೋಟವಾದದಿಂದ ರೂಪಗೊಂಡಿತೆಂದು ಆನಂದವರ್ಧನನೆ. ವಿವರಿಸಿದ್ದಾನೆ. ಧ್ವನ್ಯಾಲೋಕದಲ್ಲಿ ಬಳಸಿಕೊಂಡಿರುವ ಅಜ್ಞಾತರ 'ಪರಿಕರಶ್ಲೋಕ'ಗಳೂ, 'ಸಂಗ್ರಹಶ್ಲೋಕ'ಗಳೂ ಹಿಂದಿನಿಂದಲೂ ಧ್ವನಿಯ ಚಿಂತನೆಯು ನಡೆದಿದ್ದಿತೆಂಬುದಕ್ಕೆ ಸಾಕ್ಷಿಗಳಾಗಿವೆ. ಆನಂದವರ್ಧನನು ಧ್ವನಿಸಿದ್ಧಾಂತಕ್ಕೆ ಸಮರ್ಪಕವಾದ ರೂಪವನ್ನು ಕೊಟ್ಟು ಅದನ್ನು ನೆಲೆಗೊಳಿಸಿ ಧ್ವನಿಕಾರ, ಧ್ವನ್ಯಾಚಾರ್ಯನೆಂದು ಪ್ರಸಿದ್ಧಿಗೆ ಬಂದನು. ಧ್ವನ್ಯಾಲೋಕವು ಅಲಂಕಾರಶಾಸ್ತ್ರದಲ್ಲಿ ವಿಶಿಷ್ಟಸ್ಥಾನವನ್ನು ಗಳಿಸಿಕೊಂಡಿದೆ. ವ್ಯಾಕರಣಶಾಸ್ತ್ರಕ್ಕೆ ಪಾಣಿನಿಸೂತ್ರಗಳಂತೆ, ವೇದಾಂತಶಾಸ್ತ್ರಕ್ಕೆ ವೇದಾಂತಸೂತ್ರಗಳಂತೆ ಅಲಂಕಾರ ಶಾಸ್ತ್ರಕ್ಕೆ ಧ್ವನ್ಯಾಲೋಕವು ಪ್ರಧಾನ. ಈ ಕೃತಿಯು ಆನಂದವರ್ಧನನ ವಿಷಯಪ್ರತಿಪಾದನಾಸಾಮರ್ಥ್ಯ ಮತ್ತು ಪರಿಶೀಲನ ಬುದ್ಧಿಗಳಿಗೆ ಸಾಕ್ಷಿಯಾಗಿದೆ. ಗ್ರಂಥದ ಶೈಲಿಯು ಸರಳವೂ, ಪ್ರಭಾವಶಾಲಿಯೂ ಆಗಿದೆ. ಆನಂದವರ್ಧನನು ತನ್ನ ಶ್ಲೋಕಗಳನ್ನೂ, ಇತರರ ಶ್ಲೋಕಗಳನ್ನೂ ಉದಾಹರಣೆಗಳನ್ನಾಗಿ ಕೊಟ್ಟಿದ್ದಾನೆ.

ಧ್ವನ್ಯಾಲೋಕದಲ್ಲಿ ನಾಲ್ಕು ಉದ್ಯೋತಗಳಿವೆ. ಪ್ರಥಮ ಉದ್ಯೋತದಲ್ಲಿ ಧ್ವನಿಯ ಸಾಮಾನ್ಯಲಕ್ಷಣ ಮತ್ತು ಅವಿವಕ್ಷಿತವಾಚ್ಯ, ವಿವಕ್ಷಿತಾನ್ಯಪರವಾಚ್ಯಗಳೆಂಬ ಧ್ವನಿಪ್ರಕಾರಗಳು; ದ್ವಿತೀಯ ಉದ್ಯೋತದಲ್ಲಿ ವ್ಯಂಗ್ಯಮುಖದಿಂದ ಧ್ವನಿಯ ಸ್ವರೂಪ ಮತ್ತು ಪ್ರಭೇದಗಳು; ತೃತೀಯ ಉದ್ಯೋತದಲ್ಲಿ ವ್ಯಂಜಕ ಮುಖದಿಂದ ಧ್ವನಿಯ ಸ್ವರೂಪ ಮತ್ತು ಪ್ರಭೇದಗಳು; ಚತುರ್ಥ ಉದ್ಯೋತದಲ್ಲಿ ಧ್ವನಿಯ ಪ್ರಯೋಜನಾಂತರಗಳು ಪ್ರತಿಪಾದಿತವಾಗಿವೆ. ಈ ಕೃತಿಯಲ್ಲಿ ಧ್ವನಿಗೂ, ರೀತಿ, ವೃತ್ತಿ, ಗುಣ ಮತ್ತು ಅಲಂಕಾರಗಳಿಗೂ ಇರುವ ಸಂಬಂಧವನ್ನೂ ವಿವರಿಸಲಾಗಿದೆ.

ಶಬ್ದಾರ್ಥಗಳಿಂದಾದ ಕಾವ್ಯಕ್ಕೆ ಧ್ವನಿಯು ಆತ್ಮವೆಂದು ಆನಂದವರ್ಧನನ ಮತ— 'ಕಾವ್ಯಸ್ಯಾತ್ಮಾಧ್ವನಿಃ 'ಕಾ।. ಧ್ವನಿಯು ಇಲ್ಲವೆಂದೂ; ಅದು ಲಕ್ಷಣೆಯಲ್ಲಿ ಅಂತರ್ಗತವೆಂದೂ; ಅದು ಕೇವಲ ಸಹೃದಯಹೃದಯವೇದ್ಯವೆಂದೂ ಮುಂತಾಗಿ ವಾದಿಸುವವರ ಅಭಿಪ್ರಾಯಗಳನ್ನು ಉಲ್ಲೇಖಿಸಿ ಅವುಗಳನ್ನು ಸಮರ್ಥವಾಗಿ ನಿರಾಕರಿಸುತ್ತಾನೆ. ಸಹೃದಯ ಶ್ಲಾಘ್ಯವಾದ ಕಾವ್ಯಾರ್ಥವನ್ನು ವಾಚ್ಯ ಮತ್ತು ಪ್ರತೀಯಮಾನಗಳೆಂದು ವಿಭಾಗಿಸಿ, ಉಪಮಾದ್ಯಲಂಕಾರ ಪ್ರಕಾರಗಳಿಂದ ವಾಚ್ಯಾರ್ಥವು ಪ್ರಸಿದ್ಧವೆಂದು ತಿಳಿಸಿ, ಲಲನೆಯರಲ್ಲಿ ಅವಯವಾತಿರಿಕ್ತವಾದ ವಿಶೇಷ ಲಾವಣ್ಯವಿರುವಂತೆ ಕವಿಗಳ ವಾಣಿಯಲ್ಲಿ ವಾಚ್ಯವಲ್ಲದ ಪ್ರತೀಯಮಾನವಾದ ಅರ್ಥವು ವಿರಾಜಿಸುತ್ತದೆಂದು ಹೇಳಿದ್ದಾನೆ—

ಪ್ರತೀಯಮಾನಂ ಪುನರನ್ಯದೇವ ವಸ್ತ್ವಸ್ತಿ ವಾಣೀಷು ಮಹಾಕವೀನಾಮ್।
ಯತ್ತತ್ಪ್ರಸಿದ್ಧಾವಯವಾತಿರಿಕ್ತಂ ವಿಭಾತಿ ಲಾವಣ್ಯಮಿವಾಂಗನಾಸು॥

ಪ್ರತೀಯಮಾನಾರ್ಥವು ವಸ್ತು, ಅಲಂಕಾರ ಮತ್ತು ರಸಾದಿಯೆಂದು ಮೂರು ವಿಧ. ಈ ಮೂರೂ ಅನೇಕ ವಿಧಗಳನ್ನು ಹೊಂದಿವೆ. ಪ್ರತೀಯಮಾನಾರ್ಥವು ಶಬ್ದಾರ್ಥಶಾಸನ ಜ್ಞಾನಕ್ಕೆ ನಿಲುಕುವುದಿಲ್ಲ; ಇದನ್ನು ಕಾವ್ಯಾರ್ಥತತ್ತ್ವಜ್ಞರು ತಿಳಿಯಬಲ್ಲರು—

ಶಬ್ದಾರ್ಥಶಾಸನಜ್ಞಾನಮಾತ್ರೇಣೈವ ನ ವೇದ್ಯತೇ ।
ವೇದ್ಯತೇ ಸ ಹಿ ಕಾವ್ಯಾರ್ಥತತ್ವಜ್ಞೈರೇವ ಕೇವಲಮ್ ॥

ವ್ಯಂಗ್ಯಾರ್ಥವು ಪ್ರಧಾನವಾಗಿದ್ದರೆ ಅದು ಧ್ವನಿಕಾವ್ಯ—

ಯತ್ರಾರ್ಥಃ ಶಬ್ದೋ ವಾ ತಮರ್ಥಮುಪಸರ್ಜನೀಕೃತಸ್ವಾರ್ಥೌ ।
ವ್ಯಂಕ್ತಃ ಕಾವ್ಯವಿಶೇಷಃ ಸ ಧ್ವನಿರಿತಿ ಸೂರಿಭಿಃ ಕಥಿತಃ ॥

ರಸಾದಿಗಳಿಗೆ ಪ್ರಾಶಸ್ತ್ಯವಿದ್ದು ಗುಣಾಲಂಕಾರಗಳು ಪರಿಪೋಷಕಗಳಾಗಿದ್ದರೆ ಅದು ಧ್ವನಿಯೆನಿಸುತ್ತದೆ; ಅಪ್ರಧಾನವಾದ ರಸಾದಿಯು ವಾಕ್ಯಾರ್ಥಕ್ಕೆ (ಅಲಂಕಾರಾ ದಿಗಳಿಗೆ) ಪೋಷಕವಾಗಿದ್ದರೆ ಅದು ರಸವದಲಂಕಾರಕ್ಕೆ ವಿಷಯವಾಗುತ್ತದೆ. ಇದು ಗುಣಾಲಂಕಾರಗಳಿಗಿರುವ ವ್ಯತ್ಯಾಸ—

ತಮರ್ಥಮವಲಂಬತೇ ಯೇಽಂಗಿನಂ ತೇ ಗುಣಾಃ ಸ್ಮೃತಾಃ ।
ಅಂಗಾಶ್ರಿತಾಸ್ತ್ವಲಂಕಾರಾ ಮಂತವ್ಯಾಃ ಕಟಕಾದಿವತ್ ॥

ಇವನು ಧ್ವನಿ, ಗುಣೀಭೂತವ್ಯಂಗ್ಯ ಮತ್ತು ಚಿತ್ರ ಎಂಬ ಮೂರು ಕಾವ್ಯವಿಧಗಳನ್ನು ಹೇಳಿದ್ದಾನೆ.

ಧ್ವನ್ಯಾಲೋಕದಲ್ಲಿ ರಾಮಾಯಣ, ಮಹಾಭಾರತ, ಅರ್ಜುನಚರಿತ, ಅಮರುಕ, ಉದ್ಭಟ, ಕಾದಂಬರೀ, ಕಾಲಿದಾಸ, ತಾಪಸವತ್ಸರಾಜ, ಧರ್ಮಕೀರ್ತಿ, ನಾಗಾನಂದ, ಭಟ್ಟಬಾಣ, ಭರತ, ಭಾಮಹ, ಮಧುಮಥನವಿಜಯ, ರತ್ನಾವಲೀ, ರಾಮಾಭ್ಯುದಯ, ವಿಷಮಬಾಣಲೀಲಾ, ವೇಣೀಸಂಹಾರ, ಸರ್ವಸೇನ, ಸಾತವಾಹನ, ಸೇತುಕಾವ್ಯ, ಹರಿವಿಜಯ, ಹರಿವಂಶ, ಹರ್ಷಚರಿತ, ಗಾಥಾಸಪ್ತಶತಿ, ಶಿಶುಪಾಲವಧ, ಸೂರ್ಯಶತಕ ಮುಂತಾದ ಕೃತಿಗಳನ್ನೂ, ಕೃತಿಕಾರರನ್ನೂ ಪ್ರಸ್ತಾಪಿಸಲಾಗಿದೆ.

ಅಭಿನವಗುಪ್ತನು ಧ್ವನ್ಯಾಲೋಕಕ್ಕೆ ಲೋಚನವೆಂಬ ವ್ಯಾಖ್ಯಾನವನ್ನು ಬರೆದಿದ್ದಾನೆ. ಲೋಚನಕ್ಕೂ ಹಿಂದೆ ಚಂದ್ರಿಕಾ (೯೦೦-೯೫೦) ಎಂಬ ಒಂದು ವ್ಯಾಖ್ಯಾನವಿದ್ದಿತು. ಅಭಿನವಗುಪ್ತನು ಈ ವ್ಯಾಖ್ಯಾನವನ್ನು ಹಲವು ಕಡೆ ಖಂಡಿಸಿದ್ದಾನೆ. ಲೋಚನದ ಪ್ರಥಮೋದ್ಯೋತಕ್ಕೆ ಉದಯೋತ್ತುಂಗನಿಂದ (೧೪೪೦) ರಚಿತವಾದ ಕೌಮುದೀ ಎಂಬ ವ್ಯಾಖ್ಯಾನವು ಮುದ್ರಿತವಾಗಿದೆ.

# ರಾಜಶೇಖರ

ಕವಿಯೂ ಶಾಸ್ತ್ರಕಾರನೂ ಆದ ರಾಜಶೇಖರನ ಕೃತಿಗಳಿಂದಲೇ ಅವನ ಜೀವಿತ ಕೆಲವು ಸಂಗತಿಗಳು ತಿಳಿದುಬರುತ್ತವೆ. ಅವನ ತಂದೆ ದುರ್ದುಕ (ದುಹಿಕ); ತಾಯಿ ಶೀಲವತಿ. ಅವನು ಯಾಯಾವರ ವಂಶದವನು. ಆ ವಂಶದಲ್ಲಿ ಅವನು ಅಕಾಲಜಲದನಿಂದ ನಾಲ್ಕನೆಯ ತಲೆಯವನು. ಅವನ ಪೂರ್ವಿಕರು ಮಹಾರಾಷ್ಟ್ರಕ್ಕೆ ಸೇರಿದವರು. ರಾಜಶೇಖರನ ಹೆಂಡತಿ ಯಾದ ಅವಂತಿಸುಂದರಿಯು ವಿದುಷಿಯೂ, ಕಾವ್ಯಪ್ರೇಮಿಯೂ ಆಗಿದ್ದಳು. ಅವಳದು ಚೌಹುವಾಣ ವಂಶ. ರಾಜಶೇಖರನು ಬಾಲಭಾರತವೆಂಬ ನಾಟಕಪ್ರಸ್ತಾವನೆಯಲ್ಲಿ ತಾನು ಮಹಾಮಂತ್ರಿಯ ಪುತ್ರನೆಂದು ಹೇಳಿಕೊಂಡಿದ್ದಾನೆ, 'ಮೃಗಾಂಕಲೇಖ' ಕೃತಿಯ ಕರ್ತೃವಾದ ಅಪರಾಜಿತನು ರಾಜಶೇಖರನನ್ನು ಬಾಲಕವಿ, ಕವಿರಾಜ ಎಂದೂ, ದೊರೆಯಾದ ನಿರ್ಭರನ ಗುರುವೆಂದೂ ಮೇಲಿಂದ ಮೇಲೆ ದೊಡ್ಡ ಪದವಿಗಳನ್ನು ಪಡೆದನೆಂದೂ ಹೇಳಿದ್ದಾನೆ. ರಾಜಶೇಖರನು ಮಹೇಂದ್ರಪಾಲನಿಗೆ ಗುರುವಾಗಿದ್ದನೆಂದು ಬಾಲರಾಮಾಯಣ ಮತ್ತು ವಿದ್ಧಶಾಲ ಭಂಜಿಕೆಗಳಿಂದ ತಿಳಿದು ಬರುತ್ತದೆ. ಮಹೋದಯದ(ಕನ್ಯಕುಬ್ಜ)ಮಹೇಂದ್ರಪಾಲನ ಆಸ್ಥಾನದಲ್ಲಿ ವಿದ್ವಾಂಸರ ಮುಂದೆ ರಾಜಶೇಖರನ ನಾಟಕಗಳನ್ನು ಪ್ರದರ್ಶಿಸಲಾಯಿತೆಂದು ಬಾಲಭಾರತದಿಂದ ಗೊತ್ತಾಗುತ್ತದೆ. ಆರ್ಯಾವರ್ತದ ಮಹಾರಾಜನಾದ ಮಹೀಪಾಲನು ನಿರ್ಭಯ ನರೇಂದ್ರನ ಮಗನೆಂದೂ, ಮಹೇಂದ್ರಪಾಲನು ರಾಜಶೇಖರನ ಶಿಷ್ಯನೆಂದೂ ಬಾಲಭಾರತದಿಂದ ತಿಳಿದು ಬರುತ್ತದೆ. ಆದ್ದರಿಂದ ಮಹಾರಾಷ್ಟ್ರವನ್ನು ಬಿಟ್ಟ ಮೇಲೆ ರಾಜಶೇಖರನು ಮಹೋದಯಕ್ಕೆ ಹೋಗಿ ನಿರ್ಭಯ (ಮಹೇಂದ್ರಪಾಲ) ಮತ್ತು ಅವನ ಮಗನಾದ ಮಹೀಪಾಲರಿಗೆ ಗುರುವಾಗಿದ್ದನೆಂದು ಸ್ಪಷ್ಟವಾಗುತ್ತದೆ.

ರಾಜಶೇಖರನು ಸರ್ವಭಾಷಾಚತುರನೆಂದು ಕರ್ಪೂರಮಂಜರಿಯು ತಿಳಿಸುತ್ತದೆ. ಪ್ರಾಕೃತದಲ್ಲಿ ಅವನಿಗೆ ವಿಶೇಷ ಪ್ರೀತಿ ಇದ್ದಿತು. ಹಿಂದಿನ ಜನ್ಮಗಳಲ್ಲಿ ತಾನು ವಾಲ್ಮೀಕಿ ಮೆಂಠ, ಭವಭೂತಿ ಆಗಿದ್ದನೆಂದು ಅವನೇ ಹೇಳಿಕೊಂಡಿದ್ದಾನೆ[1]. ಶಂಕರವರ್ಮ ವಿರಚಿತವೆಂದು ಭಾವಿಸಲಾಗಿರುವ ಒಂದು ಪದ್ಯವು ರಾಜಶೇಖರನ ಸೂಕ್ತಿಗಳನ್ನು ಸುಧಾಸ್ಯಂದಿಗಳೆಂದು ಹೇಳುತ್ತದೆ. ರಾಜಶೇಖರನಿಗೆ ಮಹೋದಯ ಮತ್ತು ಪಾಂಚಾಲ ದೇಶಗಳ ಕವಿಗಳು, ಮಹೋದಯದ ಸುಂದರಿಯರ ವೇಷ ಇವುಗಳ ವಿಷಯದಲ್ಲಿ ವಿಶೇಷಾಭಿಮಾನವಿದ್ದಿತು. ಅಲ್ಲದೆ ಅವನಿಗೆ ಲಾಟದೇಶದ ಪರಿಚಯವಿದ್ದಿತೆಂದೂ ತಿಳಿದುಬರುತ್ತದೆ.

ರುದ್ರಟ, ಆನಂದವರ್ಧನ ಮತ್ತು ಔದ್ಭಟರ ಮತಗಳನ್ನು ಉದ್ಧರಿಸಿರುವುದರಿಂದ ರಾಜಶೇಖರನು ಕ್ರಿ.ಶ. ೮೦೫ ಕ್ಕಿಂತ ಹಿಂದಿನವನಲ್ಲ. ಸೋಮದೇವನ ಯಶಸ್ತಿಲಕದಲ್ಲಿ

೧. ಬಭೂವ ವಲ್ಮೀಕಭವಃ ಕವಿಃ ಪುರಾ ತತಃ ಪ್ರಪೇದೇ ಭುವಿ ಭರ್ತೃಮೇಂಠತಾಮ್।
ಸ್ಥಿತಃ ಪುನರ್ಯೋ ಭವಭೂತಿರೇಖಯಾ ಸ ವರ್ತತೇ ಸಂಪ್ರತಿ ರಾಜಶೇಖರಃ ॥
ಬಾಲರಾಮಾಯಣ

(ಕ್ರಿ.ಶ. ೯೫೯–೯೭೦) ರಾಜಶೇಖರನ ಪ್ರಸ್ತಾಪವಿದೆ. ಆದ್ದರಿಂದ ರಾಜಶೇಖರನ ಕಾಲವು ಸು. ಕ್ರಿ.ಶ. ೯ ನೆಯ ಶತಕದ ಅಂತ್ಯ ಮತ್ತು ೧೦ನೆಯ ಶತಕದ ಆದಿ ಆಗುತ್ತದೆ.

ರಾಜಶೇಖರನು ಕರ್ಪೂರಮಂಜರೀ, ಬಾಲಭಾರತ, ಬಾಲರಾಮಾಯಣ, ಮತ್ತು ವಿದ್ಧ ಶಾಲಭಂಜಿಕಾ ಎಂಬ ನಾಲ್ಕು ನಾಟಕಗಳನ್ನೂ, ಕಾವ್ಯಮೀಮಾಂಸಾ ಎಂಬ ಅಲಂಕಾರಗ್ರಂಥ ವನ್ನೂ ರಚಿಸಿದ್ದಾನೆ. ಅವನು ಹರವಿಲಾಸ ಮುಂತಾದ ಮತ್ತೂ ಕೆಲವು ಗ್ರಂಥಗಳನ್ನು ಬರೆದಿರುವುದಾಗಿ ತೋರುತ್ತದೆ.

ಅಲಂಕಾರ ಗ್ರಂಥಗಳಲ್ಲಿ ವಿಶಿಷ್ಟ ಕೃತಿಯಾದ ಕಾವ್ಯಮೀಮಾಂಸೆಯು ನೇರವಾಗಿ ರಸ, ಗುಣ, ಅಲಂಕಾರಾದಿಗಳ ಲಕ್ಷ್ಯ, ಲಕ್ಷಣಗಳನ್ನು ಬೋಧಿಸದಿದ್ದರೂ ಕವಿಗಳಿಗೆ ಬಹಳ ಉಪ ಯುಕ್ತವಾಗಿದೆ. ಮುದ್ರಿತವಾಗಿ ಪ್ರಚಾರದಲ್ಲಿರುವ ಈ ಕೃತಿಯು ೧೮ ಅಧ್ಯಾಯಗಳನ್ನುಳ್ಳ ಒಂದು ಅಧಿಕರಣವಿದೆ. ಇದು ಸುಮಾರು ಕೌಟಿಲ್ಯನ ಅರ್ಥಶಾಸ್ತ್ರದ ಮಾದರಿಯಲ್ಲಿ ರಚಿತ ವಾಗಿದೆ. ಇಡೀ ಕೃತಿಯು ವಿಷಯುವನ್ನು 'ಕವಿರಹಸ್ಯ' ಎಂದು ಕರೆಯಲಾಗಿದೆ. ಪ್ರತಿ ಅಧ್ಯಾಯದ ಪ್ರಾರಂಭದಲ್ಲಿ ಶೀರ್ಷಿಕೆಯಂತಿರುವ ಪದಗಳನ್ನು ರಾಜಶೇಖರನು ಸೂತ್ರಗಳೆಂದು ಕರೆದಿದ್ದಾನೆ ; ಈ ಸೂತ್ರಗಳ ನಂತರ ವಿಸ್ತಾರವಾದ ವ್ಯಾಖ್ಯಾನವಿದೆ. ಇವನು ಉದಾಹರಣೆ ಗಾಗಿ ತನ್ನ ಮತ್ತು ಪ್ರಾಚೀನರ ಕೃತಿಗಳಿಂದ ಶ್ಲೋಕಗಳನ್ನು ಆಯ್ದುಕೊಂಡಿದ್ದಾನೆ. ಕಾವ್ಯ ಮೀಮಾಂಸೆಯಲ್ಲಿ 'ಇತ್ಥಂ ದೇಶವಿಭಾಗೋ ಮುದ್ರಾಮಾತ್ರೇಣ ಸೂತ್ರಿತಃ ಸಂಧ್ಯಾಂ । ಯಸ್ತುಜಿಗೀಷತ್ಯಧಿಕಂ ಪಶ್ಯತು ಮದ್ಭುವನಕೋಶಮಸೌ' ಎಂಬ ಮಾತಿದೆ. ಈ ಭುವನ ಕೋಶವು ಪ್ರತ್ಯೇಕ ಕೃತಿಯಾಗಿರಬಹುದು ಅಥವಾ ಕಾವ್ಯಮೀಮಾಂಸೆಯ ಅಂತ್ಯವಾಗಿರಬಹುದು. ಇದು ದೊರೆತಿರುವ ಕಾವ್ಯಮೀಮಾಂಸೆಯ ಅಂತ್ಯದಲ್ಲಿಲ್ಲ.

ರಾಜಶೇಖರನು ಸಾಹಿತ್ಯದ ಪ್ರಸಾರ ಮತ್ತು ಪ್ರಕಾರಗಳನ್ನೂ, ಅಲಂಕಾರಶಾಸ್ತ್ರವನ್ನೂ ಕಥಾರೂಪಕವಾಗಿ ವಿವರಿಸಿರುವುದು ಚಮತ್ಕಾರವಾಗಿದೆ. ಮಹೇಶ್ವರನು ಕಾವ್ಯವಿದ್ಯೆಯನ್ನು ಬ್ರಹ್ಮಾದಿಗಳಿಗೂ, ಬ್ರಹ್ಮನು ಕಾವ್ಯಪುರುಷಾದಿ ಶಿಷ್ಯರಿಗೂ, ಕಾವ್ಯಪುರುಷನು ೧೮ ಅಧಿಕರಣಗಳ ಕಾವ್ಯವಿದ್ಯೆಯನ್ನು ದೇವತೆಗಳಿಗೂ ಉಪದೇಶಿಸಿದರು. ಇಂದ್ರಾದಿಗಳು ಕವಿರಹಸ್ಯವೇ ಮೊದ ಲಾದ ಕಾವ್ಯವಿದ್ಯೆಯ ಭಾಗಗಳನ್ನು ಕಲಿತು ಪ್ರತ್ಯೇಕ ಪ್ರತ್ಯೇಕವಾಗಿ ಕೃತಿಗಳನ್ನು ರಚಿಸಿದರು[1]. ಹೀಗೆ ಕಾವ್ಯವಿದ್ಯೆಯು ಪ್ರಕೀರ್ಣವೂ ವಿಚ್ಛಿನ್ನವೂ ಆದುದರಿಂದ ರಾಜಶೇಖರನು ೧೮ ಪ್ರಕರಣ

೧. ತತ್ರ ಕವಿರಹಸ್ಯಂ ಸಹಸ್ರಾಕ್ಷಃ ಸಮಾಮ್ನಾಸೀತ್, ಔಕ್ತಿಕಮುಕ್ತಿಗರ್ಭಃ, ರೀತಿ ನಿರ್ಣಯಂ ಸುವರ್ಣನಾಭಃ, ಆನುಪ್ರಾಸಿಕಂ ಪ್ರಚೇತಾ, ಯಮಕಂ ಯಮಃ, ಚಿತ್ರಂ ಚಿತ್ರಾಂಗದಃ, ಶಬ್ದಶ್ಲೇಷಂ ಶೇಷಃ, ವಾಸ್ತವಂ ಪುಲಸ್ತ್ಯಃ, ಔಪಮ್ಯಮೌಪ ಕಾಯನಃ, ಅತಿಶಯಂ ಪರಾಶರಃ, ಅರ್ಥಶ್ಲೇಷಮುತಥ್ಯಃ, ಉಭಯಾಲಂಕಾರಿಕಂ ಕುಬೇರಃ, ವೈನೋದಿಕಂ ಕಾಮದೇವಃ, ರೂಪಕನಿರೂಪಣೀಯಂ ಭರತಃ ರಸಾಧಿಕಾರಿಕಂ ನಂದಿಕೇಶ್ವರಃ, ದೋಷಾಧಿಕರಣಂ ಧಿಷಣಃ, ಗುಣಾಪಾದಾನಿಕ ಮುಪಮನ್ಯುಃ, ಔಪನಿಷದಿಕಂ ಕುಚುಮಾರಃ ಇತಿ । ಕಾವ್ಯಮೀಮಾಂಸಾ.

ಕಾವ್ಯಮೀಮಾಂಸೆಯನ್ನು ರಚಿಸಿದನು. ಉಪಲಬ್ಧವಿರುವ ಕಾವ್ಯಮೀಮಾಂಸೆಯಲ್ಲಿ ೧೮ ಅಧ್ಯಾಯಗಳನ್ನುಳ್ಳ ಕವಿರಹಸ್ಯಂ ಎಂಬ ಒಂದು ಅಧಿಕರಣವಿದೆ. ಕೃತಿಯ ಪ್ರಾರಂಭದಲ್ಲಿ ಹೇಳಿರುವ ಪ್ರಕರಣಗಳಿಗೂ ಅಧ್ಯಾಯಗಳ ವಿಷಯ ವಿಭಾಗಕ್ಕೂ ವ್ಯತ್ಯಾಸವಿದೆ. ನಾಲ್ಕನೆಯ ಅಧ್ಯಾಯದಲ್ಲಿ 'ತಮೌಪನಿಷದಿಕೇ ವಕ್ಷ್ಯಾಮಃ' ಎಂದು ಹೇಳಲಾಗಿದೆ. ಈ ಭಾಗವೂ ಪ್ರಕೃತ ಕೃತಿಯಲ್ಲಿಲ್ಲ. ಆದ್ದರಿಂದ ಕಾವ್ಯಮೀಮಾಂಸೆಯು ಅಪೂರ್ಣಕೃತಿಯೆಂದು ತೋರುತ್ತದೆ.

ರಾಜಶೇಖರನು ಕೆಲವು ವಿಶಿಷ್ಟಾಭಿಪ್ರಾಯಗಳನ್ನು ಹೊಂದಿದ್ದನು : ಶಿಕ್ಷಾದಿಷಡಂಗಗಳ ಜೊತೆಗೆ ಅಲಂಕಾರವನ್ನು ಸಪ್ತಮಾಂಗವೆಂದು ಹೇಳಿದ್ದಾನೆ. ಸಾಹಿತ್ಯ ವಿದ್ಯೆಯ ಲಕ್ಷಣ-ಶಬ್ದಾರ್ಥ ಯೋರ್ಯಥಾವತ್‌ಸಹ ಭಾವೇನ ವಿದ್ಯಾಸಾಹಿತ್ಯವಿದ್ಯಾ. ಕಾವ್ಯಪುರುಷನ ವರ್ಣನೆ-'ಶಬ್ದಾರ್ಥೌ ತೇ ಶರೀರಂ, ಸಂಸ್ಕೃತಂ ಮುಖಂ, ಪ್ರಾಕೃತಂ ಭಾಹುಃ, ಜಘನಮಪಭ್ರಂಶಃ, ಪೈಶಾಚಂ ಪಾದೌ, ಉರೋ ಮಿಶ್ರಂ । ಸಮಃ ಪ್ರಸನ್ನೋ ಮಧುರ ಉದಾರ ಓಜಸ್ವೀ ಚಾಸಿ । ಉಕ್ತಿಚಣಂ ತೇ ವಚೋ, ರಸ ಆತ್ಮಾ, ರೋಮಾಣಿ ಛಂದಾಸಿ, ಪ್ರಶ್ನೋತ್ತರಪ್ರವಹ್ಲಿ ಕಾದಿಕಂ ಚ ವಾಕ್ಕೇಲಿಃ, ಅನುಪ್ರಾಸೋಪಮಾದಯಶ್ಚ ತ್ವಾಮಲಂಕುರ್ವಂತಿ ।' ರಾಜಶೇಖರನು ಬುದ್ಧಿಯನ್ನು ಸ್ಮೃತಿ, ಮತಿ, ಪ್ರಜ್ಞಾ ಎಂದು ವಿಭಾಗಿಸಿ 'ಸಾ ತ್ರಿಪ್ರಕಾರಾಪಿ ಕವೀನಾಮುಪಕರ್ತ್ರೀ' ಎಂದು ಹೇಳಿದ್ದಾನೆ. ಸಮಾಧಿ ಮತ್ತು ಅಭ್ಯಾಸಗಳಿಂದ ವಿಶೇಷಶಕ್ತಿಯು ಮೂಡುತ್ತದೆ ; ಆ ಶಕ್ತಿಯೇ ಕಾವ್ಯಕ್ಕೆ ಹೇತುವೆಂದು ಇವನ ಮತ. ಪ್ರತಿಭೆಯು ಕಾರಯಿತ್ರೀ, ಭಾವಯಿತ್ರೀ ಎಂದು ಎರಡು ವಿಧ ; ಕಾರಯಿತ್ರಿ ಪ್ರತಿಭೆಯು ಸಹಜಾ, ಅಹಾರ್ಯಾ, ಔಪದೇಶಿಕೀ ಎಂದು ಮೂರುವಿಧ ಕವಿಗೆಪ್ರತಿಭೆ ಮತ್ತು ವ್ಯುತ್ಪತ್ತಿಗಳೆರಡೂ ಮುಖ್ಯ. ಗುಣಾಲಂಕಾರಗಳಿಂದ, ಕೂಡಿದ ವಾಕ್ಯವೇ ಕಾವ್ಯ— 'ಗುಣವದಲಂಕೃತಂ ಚ ವಾಕ್ಯಮೇವ ಕಾವ್ಯಂ.' ಕಾವ್ಯ ಪುರುಷನ ಸ್ವಚ್ಛಂದಪರಿಭ್ರಮಣವನ್ನು ತಡೆಯಲು ಸಾಹಿತ್ಯವಿದ್ಯೆಯೊಡನೆ ಅವನ ವಿವಾಹವನ್ನು ನಡೆಸಿರುವ ಪ್ರಸಂಗವು ಅರ್ಥಗರ್ಭಿತ ವಾಗಿದೆ. ಅಲಂಕಾರಶಾಸ್ತ್ರದ ನಿಯಂತ್ರಣದಿಂದ ಕಾವ್ಯಗಳಿಗೆ ಉತ್ತಮ ಸಂಪ್ರದಾಯವು ದೊರೆಯುತ್ತದೆ. ಕವಿಗಳಿಗೆ ಉಪಕಾರಕವಾದ ಕಾವ್ಯಾರ್ಥಯೋನಿ, ಕವಿಸಮಯ, ದೇಶ ಕಾಲವಿಭಾಗ ಮುಂತಾದ ವಿಚಾರಗಳು ಕಾವ್ಯಮೀಮಾಂಸೆಯಲ್ಲಿ ವಿವರವಾಗಿ ಪ್ರಸ್ತಾಪಿತವಾಗಿವೆ. ನಾರಾಯಣಶಾಸ್ತ್ರಿಖಿಸ್ತೆ ಮತ್ತು ಮಧುಸೂದನಮಿಶ್ರರು ಕಾವ್ಯಮೀಮಾಂಸೆಗೆ ವ್ಯಾಖ್ಯಾನ ಗಳನ್ನು ಬರೆದಿದ್ದಾರೆ.

## ಭಟ್ಟತೌತ

ಭಟ್ಟತೌತನು (ತೋತ) ಅಭಿನವಗುಪ್ತನ ಗುರು. ಅಭಿನವಗುಪ್ತನು. ಇವನನ್ನು 'ಉಪಾಧ್ಯಾಯಾಃ' 'ಗುರವಃ' ಎಂದು ಗೌರವಪೂರ್ವಕವಾಗಿ ಸಂಭೋಧಿಸಿದ್ದಾನೆ. ಭಟ್ಟತೌತನ ಕೃತಿಯಾದ ಕಾವ್ಯಕೌತುಕಕ್ಕೆ ಅಭಿನವಗುಪ್ತನು ವಿವರಣವನ್ನು ಬರೆದಿದ್ದಾನೆ. ಭಟ್ಟತೌತನ

ಕೃತಿಯಾದ 'ಕಾವ್ಯಕೌತುಕವಾಗಲೀ, ವಿವರಣವಾಗಲೀ ಉಪಲಬ್ಧವಿಲ್ಲ. ಭಟ್ಟತೌತನ ಕಾಲ ಸಂ. ಕ್ರಿ.ಶ. ೧೦ನೆಯ ಶತಮಾನದ ಉತ್ತರಾರ್ಧ.

## ಭಟ್ಟನಾಯಕ

ಹೃದಯದರ್ಪಣಕಾರನಾದ ಭಟ್ಟನಾಯಕನು ಧ್ವನಿಕಾರನ ಅಭಿಪ್ರಾಯಗಳನ್ನು ವಿರೋಧಿಸಿದ್ದಾನೆ. ಲೋಚನಕಾರನು ಭಟ್ಟನಾಯಕನ ಅಭಿಪ್ರಾಯಗಳನ್ನು ವ್ಯಕ್ತಿಗತವಾಗಿ ಮತ್ತು ತೀವ್ರವಾಗಿ ವಿರೋಧಿಸಿದ್ದಾನೆ. ಆದ್ದರಿಂದ ಭಟ್ಟನಾಯಕನು ಅಭಿನವಗುಪ್ತನ ಸಮಕಾಲೀನನೋ ಅಥವಾ ಸ್ವಲ್ಪ ಹಿಂದಿನವನೋ ಆಗಿರಬೇಕೆಂದು ತೋರುತ್ತದೆ. (ಸು .ಕ್ರಿ ಶ. ೧೦ನೆಯ ಶತಕ) ಈಗ ಹೃದಯದರ್ಪಣವು ಉಪಲಬ್ಧವಿಲ್ಲ.

ಆಲಂಕಾರಿಕರು ಉದ್ಧರಿಸಿರುವ ಮಾತಂಗಳಿಂದ ಭಟ್ಟನಾಯಕನ ಕೆಲವು ಅಭಿಪ್ರಾಯಗಳನ್ನು ತಿಳಿಯಬಹುದು. ಇವನು ಕಾವ್ಯ ಅಥವಾ ನಾಟ್ಯಕ್ಕೆ ಸಂಬಂಧಿಸಿದಂತೆ ಅಭಿಧಾ, ಭಾವನಾ, ಭೋಗೀಕೃತಿ (ರಸಚರ್ವಣಾ ಅಥವಾ ಭೋಗ) ಎಂಬ ಮೂರು ಶಬ್ದವ್ಯಾಪಾರಗಳನ್ನು ಹೇಳುತ್ತಾನೆ ಇವನ ರಸಪ್ರತೀತಿ ಹೀಗೆ—

'ನ ತಾಟಸ್ಥ್ಯೇನ ನಾತ್ಮಗತತ್ವೇನ ರಸಃ ಪ್ರತೀಯತೇ ನೋತ್ಪದ್ಯತೇ ನಾಭಿವ್ಯಜ್ಯತೇ ಅಪಿತು ಕಾವ್ಯೇ ನಾಟ್ಯೇ ಚಾ ಭಿಧಾತೋ ದ್ವಿತೀಯೇನ ವಿಭಾವನಾದಿ ಸಾಧಾರಣೀಕರಣಾತ್ಮನಾ ಭಾವಕತ್ವವ್ಯಾಪಾರೇಣ ಭಾವ್ಯಮಾನಃ ಸ್ಥಾಯೀ ಸತ್ವೋದ್ರೇಕಪ್ರಕಾಶಾನಂದ ಮಯ ಸಂವಿದ್ವಿಶ್ರಾಂತಿಸತತ್ವೇನ ಭೋಗೇನ ಭುಜ್ಯತ ಇತಿ ಭಟ್ಟನಾಯಕಃ '—ಕಾವ್ಯಪ್ರಕಾಶ. ಭಟ್ಟನಾಯಕನ ಮತದಂತೆ ರಸಚರ್ವಣೆಯು (ಭೋಗ) ಕಾವ್ಯದ ಆತ್ಮ. ಇವನು ಧ್ವನಿಸಾಮಾನ್ಯವನ್ನು ಕಾವ್ಯದ ಆತ್ಮವೆಂದು ಒಪ್ಪುವುದಿಲ್ಲ. ರಸಚರ್ವಣೆಯ ಪ್ರತಿಪಾದನೆಯನ್ನು ನೋಡಿದರೆ ಇವನು ಮೀಮಾಂಸಕನೆಂದೂ, 'ಸತ್ವೋದ್ರೇಕಾತ್' ಎಂದು ಹೇಳಿರುವುದರಿಂದ ಇವನಿಗೆ ಸಾಂಖ್ಯದಲ್ಲಿ ಒಲವಿದ್ದಿತೆಂದೂ ತೋರುತ್ತದೆ.

ಶಾಸ್ತ್ರ, ಆಖ್ಯಾನ ಮತ್ತು ಕಾವ್ಯಗಳಿಗೆ ಭಟ್ಟನಾಯಕನು ಹೇಳಿರುವ ಭೇದ—

ಶಬ್ದಪ್ರಾಧಾನ್ಯಮಾಶ್ರಿತ್ಯ ತತ್ರ ಶಾಸ್ತ್ರಂ ಪೃಥಗ್ವಿದುಃ ।
ಅರ್ಥತತ್ವೇನ ಯುಕ್ತಂ ತು ವದಂತ್ಯಾಖ್ಯಾನಮೇತಯೋಃ ॥
ದ್ವಯೋರ್ಗುಣತ್ವೇ ವ್ಯಾಪಾರಪ್ರಾಧಾನ್ಯೇ ಕಾವ್ಯಗೀರ್ಭವೇತ್ ।

—ಲೋಚನ, ಕಾವ್ಯಾನುಶಾಸನ, ಕಾವ್ಯಪ್ರಕಾಶಸಂಕೇತ.

## ಕುಂತಕ

ವಕ್ರೋಕ್ತಿಜೀವಿತದ ಒಂದು ಹಸ್ತಪ್ರತಿಯು ಉನ್ಮೇಷಸಮಾಪ್ತಿವಾಕ್ಯಗಳಲ್ಲಿ ಗ್ರಂಥಕಾರನ ಹೆಸರು 'ರಾಜಾನಕ ಕುಂತಲಕ'ನೆಂದೂ, ಮತ್ತೊಂದು ಹಸ್ತಪ್ರತಿಯು ಉನ್ಮೇಷಸಮಾಪ್ತಿವಾಕ್ಯಗಳಲ್ಲಿ 'ರಾಜಾನಕಕುಂತಕ'ನೆಂದೂ ಇದೆ. ಮಹಿಮಭಟ್ಟ, ಭಟ್ಟಗೋಪಾಲ, ವಿದ್ಯಾಧರ ಮುಂತಾದ ಆಲಂಕಾರಿಕರು ವಕ್ರೋಕ್ತಿಜೀವಿತಕಾರನನ್ನು ಕುಂತಕನೆಂದೇ ಕರೆದಿದ್ದಾರೆ. ಜಯರಥನು ವಕ್ರೋಕ್ತಿಜೀವಿತಕಾರ ಮತ್ತು ಹೃದಯದರ್ಪಣಕಾರರನ್ನು ಧ್ವನಿಕಾರನ ಮುಂದಿನವರೆಂದು ಹೇಳಿದ್ದಾನೆ. ವಕ್ರೋಕ್ತಿಜೀವಿತಕಾರನು ಧ್ವನಿಕಾರ, ರುದ್ರಟ ಮತ್ತು ರಾಜಶೇಖರರ ಮಾತುಗಳನ್ನು ಉದ್ಧರಿಸಿದ್ದಾನೆ. ಮಹಿಮಭಟ್ಟನು (ಕ್ರಿ. ಶ. ೧೧ನೆಯ ಶತಮಾನ) ವಕ್ರೋಕ್ತಿಕಾರನ ಮಾತನ್ನು ಉದ್ಧರಿಸಿ ಖಂಡಿಸಿದ್ದಾನೆ. ಖಂಡಿಸಿರುವ ರೀತಿಯನ್ನು ನೋಡಿದರೆ ಕುಂತಕನು ಮಹಿಭಟ್ಟನ ಸಮಕಾಲೀನನೋ ಅಥವಾ ಅವನಿಗಿಂತ ಸ್ವಲ್ಪ ಹಿಂದಿನವನೋ ಆಗಿರಬೇಕೆಂದು ತೋರುತ್ತದೆ. ವಕ್ರೋಕ್ತಿಜೀವಿತದಿಂದ ಲೋಚನವಾಗಲೀ, ಲೋಚನದಿಂದ ವಕ್ರೋಕ್ತಿಜೀವಿತವಾಗಲೀ ಮಾತುಗಳನ್ನು ಉದ್ಧರಿಸದಿರುವುದೂ ಗಮನಾರ್ಹವಾಗಿದೆ. ಆದ್ದರಿಂದ ಕುಂತಕನ ಕಾಲವನ್ನು ಕ್ರಿ. ಶ. ೧೧ನೆಯ ಶತಮಾನದ ಅಂತ್ಯವೆಂದು ಹೇಳಬಹುದು.

ವಕ್ರೋಕ್ತಿಜೀವಿತದಲ್ಲಿ ಕಾರಿಕಾ, ವೃತ್ತಿ, ಉದಾಹರಣೆಗಳೆಂಬ ಮೂರು ಭಾಗಗಳಿವೆ ವಕ್ರೋಕ್ತಿಸಂಪ್ರದಾಯದ ಪ್ರಾಚಾರ್ಯನಾದ ಕುಂತಕನಿಂದಲೇ ಕಾರಿಕೆ ಮತ್ತು ವೃತ್ತಿಗಳು ರಚಿತವಾಗಿವೆ. ಉದಾಹರಣೆಗಳು ಪ್ರಾಚೀನ ಕೃತಿಗಳಿಂದ ಉದ್ಧೃತವಾಗಿವೆ. ವೃತ್ತಿಯು ಪ್ರಾರಂಭದಲ್ಲಿ ಶಿವನ ಪ್ರಾರ್ಥನೆಯಿದೆ.[1] ವಕ್ರೋಕ್ತಿಜೀವಿತದಲ್ಲಿ ನಾಲ್ಕು ಉನ್ಮೇಷಗಳಿದ್ದು ನಾಲ್ಕನೆಯ ಉನ್ಮೇಷದಲ್ಲಿ ಕೃತಿಯು ಮಧ್ಯದಲ್ಲಿಯೇ ನಿಂತುಹೋಗಿದೆ. ವಿಷಯಾವಲೋಕನದಿಂದ ಅಲ್ಲಿಂದ ಕೃತಿಯು ಹೆಚ್ಚು ಮುಂದುವರಿದಿರಲಾರದೆಂದು ತೋರುತ್ತದೆ. ವಕ್ರೋಕ್ತಿಜೀವಿತದಲ್ಲಿ ಕಾವ್ಯಕ್ಷೇತ್ರವನ್ನು ಸಮಗ್ರವಾಗಿ ವ್ಯಾಪಿಸಿಕೊಂಡಿರುವ ಸ್ವತಂತ್ರ ಅಭಿಪ್ರಾಯಗಳಿವೆ. ಕುಂತಕನವಾದವು ಯುಕ್ತಿಪೂರ್ವಕವೂ, ಸುಂದರವೂ ಆಗಿದೆ. ಭಾಮಹನ ಬೀಜರೂಪವಾದ ವಕ್ರೋಕ್ತಿಕಲ್ಪನೆಯು ವಕ್ರೋಕ್ತಿಜೀವಿತದಲ್ಲಿ ಸಮಸ್ತಸಾಹಿತ್ಯವನ್ನು ವ್ಯಾಪಿಸಿಕೊಂಡ ಮಹಾದ್ರುಮವಾಗಿ ಬೆಳೆದಿದೆ. ಪ್ರಥಮ ಉನ್ಮೇಷದಲ್ಲಿ ಕಾವ್ಯಪ್ರಯೋಜನ, ಕಾವ್ಯಸ್ವರೂಪ ಶಬ್ದಾರ್ಥಸ್ವರೂಪ, ಕವಿವ್ಯಾಪಾರವಕ್ರತ್ವದ ಪ್ರಕಾರಗಳು, ಮಾರ್ಗಗಳು (ರೀತಿ), ಗುಣಗಳನ್ನೂ; ದ್ವಿತೀಯ ಉನ್ಮೇಷದಲ್ಲಿ ವರ್ಣವಿನ್ಯಾಸವಕ್ರತಾ, ಪದಪೂರ್ವಾರ್ಧವಕ್ರತಾ, ಪದಪರಾರ್ಧವಕ್ರತಾಗಳನ್ನೂ; ತೃತೀಯಉನ್ಮೇಷದಲ್ಲಿ ವಾಕ್ಯವಕ್ರತೆಯನ್ನು; ಚತುರ್ಥ ಉನ್ಮೇಷದಲ್ಲಿ ಪ್ರಕರಣವಕ್ರತಾ, ಪ್ರಬಂಧವಕ್ರತಾಗಳನ್ನೂ ಪ್ರತಿಪಾದಿಸಲಾಗಿದೆ.

---

೧. ಜಗತ್ತ್ರಿತಯವೈಚಿತ್ರ್ಯ ಚಿತ್ರಕರ್ಮವಿಧಾಯಿನಮ್ ।
ಶಿವಂ ಶಕ್ತಿಪರಿಸ್ಪಂದಮಾತ್ರೋಪಕರಣಂ ನುಮಃ ॥

ಕುಂತಕನು ಗ್ರಂಥದ ಪ್ರಾರಂಭದಲ್ಲಿ ಲೋಕೋತ್ತರ ಚಮತ್ಕಾರಿಯಾದ ವೈಚಿತ್ರ್ಯ ಸಿದ್ಧಿಯು ತನ್ನ ಗುರಿಯೆಂದು ಹೇಳಿದ್ದಾನೆ—

ಲೋಕೋತ್ತರಚಮತ್ಕಾರಕಾರಿವೈಚಿತ್ರ್ಯ ಸಿದ್ಧಯೇ ।
ಕಾವ್ಯಸ್ಯಾಯಮಲಂಕಾರಃ ಕೋಽಪ್ಯಪೂರ್ವೋವಿಧೀಯತೇ॥

ವ್ಯವಹಾರಜ್ಞಾನ ವಸ್ತು ಧರ್ಮಾದಿಗಳು ಕಾವ್ಯಫಲಗಳಾದರೂ ಅಂತಶ್ಚಮತ್ಕಾರವು ಪ್ರಧಾನವಾದುದು—

ಚತುರ್ವರ್ಗಫಲಾಸ್ವಾದಮಪ್ಯತಿಕ್ರಮ್ಯ ತದ್ವಿದಾಮ್ ।
ಕಾವ್ಯಾಮೃತರಸೇನಾಂತಶ್ಚಮತ್ಕಾರೋ ವಿತನ್ಯತೇ ॥

ಅವಿಭಾಜ್ಯವಾದ ಶಬ್ದಾರ್ಥಯುಗಲವು ಕಾವ್ಯವೆಂದು ವಕ್ರೋಕ್ತಿಕಾರನಮತ ಸಾಹಿತ್ಯದ ಪ್ರಥಮ ಮಾರ್ಮಿಕ ವ್ಯಾಖ್ಯೆ ಅವನದು —

ಶಬ್ದಾರ್ಥೌ ಸಹಿತೌ ವಕ್ರಕವಿವ್ಯಾಪಾರಶಾಲಿನಿ ।
ಬಂಧೇ ವ್ಯವಸ್ಥಿತೌ ಕಾವ್ಯಂ ತದ್ವಿದಾಹ್ಲಾದಕಾರಿಣಿ ॥

ಲೋಕಸಾಧಾರಣ ಶಬ್ದಾರ್ಥಗಳು ಕಾವ್ಯವಾಗುವುದಿಲ್ಲ. ಅವು ಸಾಲಂಕೃತವಾಗಿರೆ ಬೇಕು.

ಶಬ್ದೋವಿವಕ್ಷಿತಾರ್ಥೈಕವಾಚಕೋಽನ್ಯೇಷು ಸತ್ಸ್ವಪಿ ।
ಅರ್ಥಃ ಸಹೃದಯಾಹ್ಲಾದಕಾರಿ ಸ್ವಸ್ಪಂದಸುಂದರಃ ॥
ಉಭಾವೇತಾವಲಂಕಾರ್ಯೌ ತಯೋಃ ಪುನರಲಂಕೃತಿಃ ।
ವಕ್ರೋಕ್ತಿರೇವ ವೈದಗ್ಧ್ಯಭಂಗೀಭಣಿತಿರುಚ್ಯತೇ ॥

ಕಾವ್ಯಪದವಿಯನ್ನು ಹೊಂದಲು ಶಬ್ದಾರ್ಥಗಳಲ್ಲಿ ವಕ್ರತೆಯೆಂಬ ಗುಣವಿರಬೇಕು. ಪ್ರತಿಭಾವಂತನಾದ ಕವಿಯು ಶಬ್ದಾರ್ಥಗಳಲ್ಲಿ ವಕ್ರತೆಯನ್ನು ತರಬಲ್ಲ. ಉಕ್ತಿವೈಚಿತ್ರ್ಯವು ಆಹ್ಲಾದಕರವಾದುದು.—'ವಕ್ರತ್ವಂ ಪ್ರಸಿದ್ಧಪ್ರಸ್ಥಾನವ್ಯತಿರೇಕಿವೈಚಿತ್ರ್ಯಂ'. ಕವಿಯ ಕರ್ಮವೇ ನಿರ್ವಿವಾದವಾಗಿ 'ಕಾವ್ಯ'ವಾದ್ದರಿಂದ, ಕವಿಪ್ರತಿಭೆ ಅಥವಾ ಕವಿವ್ಯಾಪಾರವೆನಿಸುವ ಕಾವ್ಯದಲ್ಲಿ 'ವಕ್ರೋಕ್ತಿ' ಯು ಜೀವನಾಡಿಯೆಂಬುದು ಕುಂತಕನ ತೀರ್ಮಾನ.

ವಕ್ರೋಕ್ತಿಕಾರನು ಸ್ವಭಾವೋಕ್ತಿಯನ್ನು ಅಲಂಕಾರವೆಂದು ಒಪ್ಪುವುದಿಲ್ಲ. ಇವನು ಧ್ವನಿಯನ್ನಾಗಲೀ, ರಸವನ್ನಾಗಲೀ, ಕಾವ್ಯದ ಜೀವಿತವೆಂದು ಹೇಳುವುದಿಲ್ಲ. ವಕ್ರೋಕ್ತಿಯು ಕಾವ್ಯದ ಜೀವಿತವೆಂದು ಇವನ ಮತ—

ವಿಚಿತ್ರೋ ಯತ್ರ ವಕ್ರೋಕ್ತಿವೈಚಿತ್ರ್ಯಂ ಜೀವಿತಾಯತೇ ।

ಪರಿಸ್ಫುರತಿ ಯಸ್ಯಾಂತಃ ಸಾ ಕಾಪ್ಯತಿಶಯಾಭಿಧಾ ॥

ಸರ್ವಸಂಪತ್ಪರಿಸ್ಪಂದಸಂಪಾದ್ಯಂ ಸರಸಾತ್ಮನಾಮ್ ।

ಅಲೌಕಿಕಚಮತ್ಕಾರಕಾರಿ ಕಾವ್ಯೈಕಜೀವಿತಮ್ ॥

ಶರೀರಂ ಜೀವಿತೇನೇವ ಸ್ಫುರಿತೇನೇವ ಜೀವಿತಮ್ ।

ವಿನಾ ನಿರ್ಜೀವತಾಂ ಯೇನ ವಾಕ್ಯಂ ಯಾತಿ ವಿಪಶ್ಚಿತಾಮ್ ॥

ಇವನು ವಕ್ರತೆಯಲ್ಲಿ ಪ್ರಧಾನವಾಗಿ ಆರು ವಿಧಗಳನ್ನು ಹೇಳಿದ್ದಾನೆ.—ವರ್ಣವಿನ್ಯಾಸವಕ್ರತ್ವ, ಪದಪೂರ್ವಾರ್ಧವಕ್ರತ್ವ, ಪ್ರತ್ಯಯವಕ್ರತ್ವ, ವಾಕ್ಯವಕ್ರತ್ವ, ಪ್ರಕರಣವಕ್ರತ್ವ ಪ್ರಬಂಧವಕ್ರತ್ವ. ಇವನು ಮಾಧುರ್ಯ, ಪ್ರಸಾದ, ಲಾವಣ್ಯ, ಆಭಿಜಾತ್ಯಗಳೆಂಬ ವೈಚಿತ್ರ್ಯದ ಗುಣಗಳನ್ನೂ; ವೈಚಿತ್ರ್ಯಮಾರ್ಗ, ಸಂಕೇವಾರಮಾರ್ಗ, ಸೌಕುಮಾರ್ಯವೈಚಿತ್ರ್ಯಸಂವಲಿತಮಾರ್ಗ (ಮಧ್ಯಮಮಾರ್ಗ) ಗಳೆಂಬ ಮಾರ್ಗ (ರೀತಿ) ಗಳನ್ನೂ ಹೇಳಿದ್ದಾನೆ. ಪ್ರಾಚೀನ ಆಲಂಕಾರಿಕರ ಅನುಪ್ರಾಸವೇ ಇವನ ವರ್ಣವಿನ್ಯಾಸ ವಕ್ರತಾ. ಉಪನಾಗರಿಕಾದಿ ವೃತ್ತಿಗಳು ಇದರಲ್ಲಿಯೇ ಅಂತರ್ಭಾವಗೊಳ್ಳುತ್ತವೆ; ಯಮಕವೂ ಇದರ ಒಂದು ವಿಧ. ಉಪಮಾದ್ಯಲಂಕಾರಗಳು ವಾಕ್ಯ ವಕ್ರತೆಯಲ್ಲಿ ಅಂತರಭಾವಗೊಳ್ಳುತ್ತವೆ. ಧ್ವನಿ-ರಸಗಳೂ ಕಾವ್ಯದ ವ್ಯಾಪಕಗುಣವೂ, ಜೀವಿತವೂ ಆದ ವಕ್ರತಾ ಪ್ರಕಾರಗಳಲ್ಲಿಯೇ ಅಂತರ್ಭಾವಗೊಳ್ಳುತ್ತವೆ. ಆದ್ದರಿಂದ ಇವನ ಮತದಂತೆ ಧ್ವನಿ ಮತ್ತು ರಸಗಳಿಗೆ ವಕ್ರೋಕ್ತಿಯ ಅಂಗಗಳಾಗಿ ಪ್ರಾಧಾನ್ಯವಿದೆ. ಇವನು ರಸವವ್, ಪ್ರೇಯಃ, ಊರ್ಜಸ್ವಿ, ಸಮಾಹಿತ, ಉದಾತ್ತಗಳನ್ನು ಅಲಂಕಾರಗಳೆನದೆ ಅಲಂಕಾರ್ಯಗಳೆಂದು ಹೇಳಿದ್ದಾನೆ. (ಉ-೩, ಕಾ ೧೧ರ ವೃತ್ತಿ)

ಈಚೆಗೆ ಡಾ॥ ಕೆ. ಕೃಷ್ಣಮೂರ್ತಿಗಳು ಪರಿಶ್ರಮವಹಿಸಿ ನಾಲ್ಕನೆಯ ಉನ್ಮೇಷದ ಅನುಪಲಬ್ಧಭಾಗವನ್ನು ಸಂಪಾದಿಸಿ ಪೂರ್ಣವಾಗಿ ನಾಲ್ಕೂ ಉನ್ಮೇಷಗಳನ್ನುಳ್ಳ ವಕ್ರೋಕ್ತಿ ಜೀವಿತವನ್ನು ಪ್ರಕಟಿಸಿದ್ದಾರೆ. ಸುಂದರವಾದ ಈ ಮುದ್ರಣವು ಉತ್ತಮವಾದ ಪಾಠಾಂತರ ಗಳನ್ನು ಪಡೆದಿದೆ. ಇದರ ಪ್ರಾರಂಭದಲ್ಲಿ ಉಪಯುಕ್ತ ಮತ್ತು ವಿಸ್ತೃತವಾದ ಪೀಠಿಕೆಯನ್ನೂ ಅಂತ್ಯದಲ್ಲಿ ನಾಲ್ಕೂ ಉನ್ಮೇಷಗಳ ಇಂಗ್ಲೀಷ್ ಭಾಷಾಂತರವನ್ನೂ ಕೊಡಲಾಗಿದೆ.

## ಅಗ್ನಿಪುರಾಣ

ಕಾವ್ಯಾದರ್ಶದ 'ಹೃದಯಂಗಮಾ' ವ್ಯಾಖ್ಯಾನ ಮತ್ತು 'ಶ್ರುತಾನುಪಾಲಿನೀ' ವ್ಯಾಖ್ಯಾನ ಗಳಿಂದ ಕಾಶ್ಯಪ, ವರರುಚಿ, ನಂದಿಸ್ವಾಮೀ ಮತ್ತು ಬ್ರಹ್ಮದತ್ತರೆಂಬವರಿಗಿಂತ ಹಿಂದೆ ಅಲಂಕಾರ

ಗ್ರಂಥಗಳನ್ನು ರಚಿಸಿದ್ದರೆಂದು ತಿಳಿದುಬರುತ್ತದೆ.[1] ಆದರೆ ಇವರ ಕೃತಿಗಳು ಉಪಲಬ್ಧವಿಲ್ಲ. ವಿಶ್ವನಾಥನು ಸಾಹಿತ್ಯದರ್ಪಣದಲ್ಲಿ 'ಕಿಂಚ ಕಾವ್ಯಸ್ಯೋಪಾದೇಯತ್ವಂ ಅಗ್ನಿಪುರಾಣೇಪ್ಯುಕ್ತಂ' ಎಂದು ಹೇಳಿ ಒಂದು ಶ್ಲೋಕವನ್ನು ಉದ್ಧರಿಸಿದ್ದಾನೆ. ಅಲಂಕಾರಕ್ಕೆ ಸಂಬಂಧಿಸಿದ ಹಲವು ವಿಚಾರಗಳು ಅಗ್ನಿಪುರಾಣದಲ್ಲಿ ದೊರೆಯುತ್ತವೆ.

ಅಗ್ನಿಪುರಾಣವು ಕ್ರಿ.ಶ. ೭ನೆಯ ಶತಮಾನಕ್ಕಿಂತ ಈಚಿನದೆಂದೂ, ಹತ್ತನೆಯ ಶತಕದಲ್ಲಿ ಅದರಲ್ಲಿ ಅಲಂಕಾರಭಾಗದ ಸಂಗ್ರಹವಾಗಿರಬೇಕೆಂದೂ ವಿಮರ್ಶಕರು ಅಭಿಪ್ರಾಯಪಡುತ್ತಾರೆ.

ಅಗ್ನಿಪುರಾಣವು ವಿಶ್ವಕೋಶದ (Encyclopaedia) ಮಾದರಿಯಲ್ಲಿದೆ. ಇದರಲ್ಲಿ ನಾನಾವಿದ್ಯೆಗಳ ಸಂಗ್ರಹವಿದೆ. ಇದರ ಹತ್ತು ಅಧ್ಯಾಯಗಳಲ್ಲಿ (೩೩೬–೩೪೬) ಅಲಂಕಾರಶಾಸ್ತ್ರದ ಅಂಶಗಳಿವೆ. ೩೩೬ನೆಯ ಅಧ್ಯಾಯದಲ್ಲಿ ಕಾವ್ಯಲಕ್ಷಣ ಮತ್ತು ಕಾವ್ಯವಿಧಗಳೂ ; ೩೩೭ರಲ್ಲಿ ರೂಪಕ ಮತ್ತು ಉಪರೂಪಕಗಳೂ ; ೩೩೮ರಲ್ಲಿ ರಸಭಾವಗಳು, ನಾಯಕನಾಯಿಕಾ ಭೇದಗಳೂ ; ೩೩೯ರಲ್ಲಿ ವೃತ್ತಿಗಳೂ ; ೩೪೦ ಮತ್ತು ೩೪೧ರಲ್ಲಿ ಅಭಿನಯವೂ ; ೩೪೨ರಲ್ಲಿ ಅನುಪ್ರಾಸ, ಯಮಕ, ಚಿತ್ರ ಮುಂತಾದ ಶಬ್ದಾಲಂಕಾರಗಳೂ ; ೩೪೩ರಲ್ಲಿ ಉಪಮಾದ್ಯರ್ಥಾಲಂಕಾರಗಳೂ ; ೩೪೪ರಲ್ಲಿ ಶಬ್ದಾಲಂಕಾರಗಳೆಂದು ಹೇಳಿ ಆಕ್ಷೇಪ, ಸಮಾಸೋಕ್ತಿ ಮುಂತಾದ ಅಲಂಕಾರಗಳೂ ; ೩೪೫ರಲ್ಲಿ ಕಾವ್ಯಗುಣಗಳೂ ; ೩೪೬ರಲ್ಲಿ ಕಾವ್ಯದೋಷಗಳೂ ಬಂದಿವೆ. ಈ ಪುರಾಣವು ಹನ್ನೆರಡು ರೂಪಕಗಳನ್ನು ಹೇಳುತ್ತದೆ. ಭೋಜನ ರಸಸಿದ್ಧಾಂತಕ್ಕೂ ಅಗ್ನಿಪುರಾಣದ ರಸಪ್ರತಿಪಾದನೆಗೂ ಬಹಳ ಸಾದೃಶ್ಯವಿದೆ (ಆನಂದ–ಅಹಂಕಾರ–ಅಭಿಮಾನ–ರಸ.)

## ಪ್ರತೀಹಾರೇಂದು ರಾಜ

ಪ್ರತೀಹಾರೇಂದುರಾಜನು ಉದ್ಭಟನ 'ಕಾವ್ಯಾಲಂಕಾರಸಾರಸಂಗ್ರಹ' ವೆಂಬ ಅಲಂಕಾರ ಗ್ರಂಥಕ್ಕೆ 'ಲಘುವೃತ್ತಿ' ಎಂಬ ವ್ಯಾಖ್ಯಾನವನ್ನು ಬರೆದಿದ್ದಾನೆ. ಅವನು ವ್ಯಾಖ್ಯಾನದ ಪ್ರಾರಂಭದಲ್ಲಿ ತಾನು ಕೊಂಕಣದವನೆಂದೂ, ಮುಕುಲನ ಶಿಷ್ಯನೆಂದೂ ಹೇಳಿಕೊಂಡಿದ್ದಾನೆ ಮುಕುಲನು ಮೀಮಾಂಸಾ, ವ್ಯಾಕರಣ, ತರ್ಕ ಮತ್ತು ಸಾಹಿತ್ಯಗಳಲ್ಲಿ ಅದ್ವಿತೀಯ ವಿದ್ವಾಂಸನಾಗಿದ್ದನೆಂದು ಲಘುವೃತ್ತಿಯ ಅಂತ್ಯದಲ್ಲಿ ತಿಳಿಸಲಾಗಿದೆ—

---

೧ ಪೂರ್ವೇಷಾಂ ಕಾಶ್ಯಪವರರುಚಿಪ್ರಭೃತೀನಾಂ ಆಚಾರ್ಯಾಣಾಂ ಲಕ್ಷಣಶಾಸ್ತ್ರಾಣಿ ಸಂಹೃತ್ಯ ಪರ್ಯಾಲೋಚ್ಯ—ಹೃದಯಂಗಮಾ

ಮೀಮಾಂಸಾಸಾರಮೇಘಾತ್ಪದಜಲಧಿವಿಧೋಸ್ತರ್ಕಮಾಣಿಕ್ಯಕೋಶಾತ್
ಸಾಹಿತ್ಯಶ್ರೀಮುರಾರೇರ್ಬುಧಕುಸುಮಮಧೋಃ ಶೌರಿಪಾದಾಬ್ಜಭೃಂಗಾತ್ ।
ಶ್ರುತ್ವಾಸೌಜನ್ಯಸಿಂಧೋರ್ದ್ವಿಜವರಮುಕುಲಾತ್ಕೀರ್ತಿವಲ್ಲ್ಯಾಲವಾಲಾತ್
ಕಾವ್ಯಾಲಂಕಾರಸಾರೇ ಲಘುವಿವೃತಿಮಧಾತ್ಕೌಂಕಣಃ ಶ್ರೀಂದುರಾಜಃ ॥

## ಭಟ್ಟೇಂದುರಾಜ

ಅಭಿನವಗುಪ್ತನು ಧ್ವನ್ಯಾಲೋಕದ ತನ್ನ ವ್ಯಾಖ್ಯಾನವಾದ ಲೋಚನದ ಪ್ರಾರಂಭದಲ್ಲಿ ಭಟ್ಟೇಂದುರಾಜನನ್ನು ತನ್ನ ಗುರುವೆಂದು ಹೇಳಿದ್ದಾನೆ।[1] ಲೋಚನದಲ್ಲಿ ಅನೇಕ ಕಡೆ ಭಟ್ಟೇಂದುರಾಜನ ಶ್ಲೋಕಗಳನ್ನು ಉದಾಹರಿಸಲಾಗಿದೆ. ಭಟ್ಟೇಂದುರಾಜನು ಪ್ರಾಜ್ಞನಾದ ಆಲಂಕಾರಿಕನೂ ಆಗಿದ್ದನೆಂದು ಲೋಚನದ ಕೆಲವು ಮಾತುಗಳಿಂದ ತಿಳಿದುಬರುತ್ತದೆ—

೧ ಏವಂ ವಸ್ತ್ವಲಂಕಾರರಸಭೇದೇನ ತ್ರಿಧಾ ಧ್ವನಿರತ್ರ ಶ್ಲೋಕೇ ಸ್ಮದ್ಗುರುಭಿರ್ವ್ಯಾಖ್ಯಾತಃ ।

೨ ಸರ್ವಥಾಲಂಕಾರಾದಿಷು ವ್ಯಂಗ್ಯಂ ವಾಚ್ಯೇ ಗುಣೀಭವತೀತಿ ನಃ
ಸಾಧ್ಯಮಿತ್ಯತ್ರಾಶಯೋಽತ್ರ್ಯಗ್ರಂಥೇಽಸ್ಮದ್ಗುರುಭಿರ್ನಿರೂಪಿತಃ ॥

ಆದರೆ ಭಟ್ಟೇಂದುರಾಜನ ಯಾವ ಸಮಗ್ರಕೃತಿಯೂ ದೊರೆತಿಲ್ಲ.

ಕೆಲವರು ಪ್ರತೀಹಾರೇಂದುರಾಜನೇ ಭಟ್ಟೇಂದುರಾಜನೆಂದು ವಾದಿಸುತ್ತಾರೆ. ಅಭಿನವಗುಪ್ತನು ಎಲ್ಲಿಯೂ ತನ್ನ ಗುರುವನ್ನು ಪ್ರತೀಹಾರೇಂದು ರಾಜನೆಂದು ಕರೆದಿಲ್ಲ ಪ್ರತೀಹಾರೇಂದು ರಾಜನು ಅಲಂಕಾರಸಂಪ್ರದಾಯದವನು; ಭಟ್ಟೇಂದುರಾಜನಾದರೋ ಧ್ವನಿಸಂಪ್ರದಾಯದವನು. ಆದ್ದರಿಂದ ಇವರಿಬ್ಬರೂ ವಿಭಿನ್ನ ವ್ಯಕ್ತಿಗಳೆಂದು ಸ್ಪಷ್ಟವಾಗುತ್ತದೆ.

## ಅಭಿನವಗುಪ್ತ

ಅಭಿನವಗುಪ್ತರು ಜ್ಞಾನದ ನಾನಾ ಶಾಖೆಗಳಲ್ಲಿ ಆಳವಾದ ಪರಿಶ್ರಮ ಪಡೆದಿದ್ದ ದೊಡ್ಡ ವಿದ್ವಾಂಸರು. ಅವರ ತೀಕ್ಷ್ಣ ಬುದ್ಧಿ ಮತ್ತು ಪ್ರತಿಭೆಗಳು ಅಸದೃಶವಾದುವು. ಅವರು ಕೈಯಾಡಿಸದ ಸಾಹಿತ್ಯ ಕ್ಷೇತ್ರವಿಲ್ಲ. ಅವರು 'ಪರಾತ್ರಿಂಶಿಕಾ'ಕ್ಕೆ ತಾವು ಬರೆದಿರುವ ವ್ಯಾಖ್ಯಾ

---

೧ ಭಟ್ಟೇಂದುರಾಜಚರಣಾಬ್ಜಕೃತಾಧಿವಾಸೋ ಹೃದ್ಯಶ್ರುತೋಽಭಿನವಗುಪ್ತಪದಾಭಿಧೋಽಹಮ್ ।

ನದ ಅಂತ್ಯ ಮತ್ತು 'ಈಶ್ವರಪ್ರತ್ಯಭಿಜ್ಞಾವಿವೃತಿವಿಮರ್ಶಿನೀ'ಯ ಅಂತ್ಯದಲ್ಲಿ ತಮ್ಮ ವಂಶಾವಳಿಯನ್ನು ಸಂಗ್ರಹವಾಗಿ ತಿಳಿಸಿದ್ದಾರೆ ಅದರಂತೆ ಕಾಶ್ಮೀರದ ದೊರೆಯಾದ ಲಲಿತಾ ಪೀಡನ ಆಹ್ವಾನದಿಂದ ಅತ್ರಿಗುಪ್ತನು ಅಂತರ್ವೇದಿಯಿಂದ (ಗಂಗಾ ಯಮುನಾ ನದಿಗಳ ಮಧ್ಯಪ್ರದೇಶ) ಕಾಶ್ಮೀರಕ್ಕೆ ಬಂದು ನೆಲಸಿದನು. ಅತ್ರಿಗುಪ್ತನ ವಂಶೋದ್ಭವನಾದ ವರಾಹ ಗುಪ್ತನಿಗೆ ಮಹಾಶಿವಭಕ್ತನಾದ ಚುಖಲನೆಂಬ ಮಗನು ಜನಿಸಿದನು. ಈ ಚುಖಲನೇ ಅಭಿನವಗುಪ್ತರ ತಂದೆ. ಜಯರಥನು ತಂತ್ರಾಲೋಕದ ಮೊದಲನೆಯ ಶ್ಲೋಕದ ಅರ್ಥವನ್ನು ವಿವರಿಸುವಾಗ ಅಭಿನವಗುಪ್ತರ ತಂದೆ ನರಸಿಂಹ ಗುಪ್ತನೆಂದೂ, ತಾಯಿ ವಿಮಲಾ (ವಿಮಲಕಲಾ) ಎಂದೂ ಹೇಳಿದ್ದಾನೆ. ಪ್ರಾಯಃ ಜನರು ನರಸಿಂಹಗುಪ್ತನನ್ನು ಚುಖಲನೆಂದು ಕರೆಯು ತ್ತಿದ್ದಿರಬೇಕು. ಅಭಿನವಗುಪ್ತರು ತಮ್ಮ ತಮ್ಮನಾದ ಮನೋರಥಗುಪ್ತ ಮತ್ತು ಶಿಷ್ಯರಾದ ಕರ್ಣ[1], ರಾಮದೇವರಿಗಾಗಿ ಪರತ್ರಿಂಶಿಕಾಕ್ಕೆ ವ್ಯಾಖ್ಯಾನವನ್ನು ಬರೆದುದಾಗಿ ಹೇಳಿದ್ದಾರೆ. ಶಿಷ್ಯರಾದ ಕರ್ಣ ಮತ್ತು ಮಂದ್ರರಿಗಾಗಿ ಅಭಿನವಗುಪ್ತರು 'ಮಾಲಿನೀವಿಜಯವಾರ್ತಿಕ'ವನ್ನೂ ಬರೆದರು 'ಅಭಿನವಭಾರತೀ'ಯಲ್ಲಿ ಅಭಿನವಗುಪ್ತರ ಚಿಕ್ಕಪ್ಪನಾದ ವಾಮನಗುಪ್ತನ ಒಂದು ಶ್ಲೋಕವು ಉದಾಹೃತವಾಗಿದೆ. ಯಶೋರಾಗನು ತಮ್ಮ ಮಾತಾಮಹನೆಂದು ಅಭಿನವ ಗುಪ್ತರು ಹೇಳಿಕೊಂಡಿದ್ದಾರೆ. ಅಭಿನವಗುಪ್ತರು ಬ್ರಹ್ಮಚಾರಿಯಾಗಿ ಬಾಳಿದರೆಂದು ತೋರು ತ್ತದೆ. ಅವರಿಗೆ ಅಲಂಕಾರಶಾಸ್ತ್ರದಲ್ಲಿ ಭಟ್ಟೇಂದುರಾಜನೂ, ನಾಟ್ಯ ಶಾಸ್ತ್ರದಲ್ಲಿ ಭಟ್ಟತೌತನೂ ಗುರುಗಳಾಗಿದ್ದರು.

ಆನಂದವರ್ಧನಾಚಾರ್ಯನ ಧ್ವನ್ಯಾಲೋಕಕ್ಕೆ ಬರೆದಿರುವ ವ್ಯಾಖ್ಯಾನವಾದ 'ಲೋಚನ' ಮತ್ತು ಭರತನ ನಾಟ್ಯಶಾಸ್ತ್ರದ ವ್ಯಾಖ್ಯಾನವಾದ 'ಅಭಿನವಭಾರತೀ'ಗಳು ಅಲಂಕಾರ ವರ್ಗಕ್ಕೆ ಸೇರುತ್ತವೆ. ಇವು ಅಲಂಕಾರ ಶಾಸ್ತ್ರದಲ್ಲಿಯೇ ಅಮೂಲ್ಯ ಕೃತಿಗಳು. ಮುಂದಿನ ಆಲಂಕಾರಿಕರೆಲ್ಲರೂ ಈ ಕೃತಿಗಳಿಂದ ಉಪಕೃತರಾಗಿದ್ದಾರೆ.

## ಧನಂಜಯ

ದಶರೂಪದ (ದಶರೂಪಕ) ಕಾರಿಕಾಕಾರನಾದ ಧನಂಜಯನ ತಂದೆ ವಿಷ್ಣು. ಧನಂಜ ಯನು ಮುಂಜನ ಸಭಾಪಂಡಿತನಾಗಿದ್ದನು. ವಾಕ್ಪತಿರಾಜನ (ಮುಂಜ) ಕ್ರಿ. ಶ. ೯೭೪ರ ಶಾಸನಗಲ್ಲಿ ಧನಿಕಪಂಡಿತನ ಮಗನಾದ ವಸಂತಾಚಾರ್ಯನಿಗೆ ಭೂದಾನಮಾಡಿದ ವಿಚಾರವಿದೆ. ಉಜ್ಜಯಿನಿಯ ಭಟ್ಟೇಶ್ವರೀ ದೇವತೆಗೆ ಗ್ರಾಮದಾನ ಮಾಡಿದ ಸಂಗತಿಯನ್ನು ತಿಳಿಸುವ ವಾಕ್ಪತಿ

೧ ಕರ್ಣನು ಕಾಶ್ಮೀರದ ಯಶಸ್ಕರನ ಮಂತ್ರಿಯಾದ ವಲ್ಲಭನ ಮಗ.

೨ ರಾಮದೇವನು ವ್ಯಾಕರಣ, ತರ್ಕ ಮತ್ತು ಮೀಮಾಂಸಾಗಳಲ್ಲಿ ಪಂಡಿತ.

ರಾಜನ ಕ್ರಿ. ಶ. ೧೦೩೭ರ ಮತ್ತೊಂದು ತಾಮ್ರ ಶಾಸನವೂ ದೊರೆತಿದೆ. ಆದ್ದರಿಂದ ಧನಂಜಯನ ಕಾಲ ಸುಮಾರು ಹತ್ತನೆಯ ಶತಮಾನ.

ದಶರೂಪವು ನಾಟ್ಯಶಾಸ್ತ್ರಕ್ಕೆ ಸಂಬಂಧಿಸಿದ ಕೃತಿಯಾದರೂ ಇದರ ನಾಲ್ಕನೆಯ ಪ್ರಕಾಶವು ರಸಸಿದ್ಧಾಂತವನ್ನು ಹೊಂದಿದೆ. ಈ ಕೃತಿಯು ೩೦೦ ಕಾರಿಕೆಗಳು ನಾಲ್ಕು ಪ್ರಕಾಶಗಳಾಗಿ ವಿಭಾಗಗೊಂಡಿವೆ. ನಾಟಕ, ಪ್ರಕರಣ ಮುಂತಾದ ೧೦ ರೂಪಕಗಳನ್ನು ಪ್ರತಿಪಾದಿಸುವುದರಿಂದ ಈ ಕೃತಿಗೆ ದಶರೂಪಕವೆಂಬ ಹೆಸರು ಬಂದಿದೆ. ಇದರ ಪ್ರಥಮ ಪ್ರಕಾಶದಲ್ಲಿ ನೃತ್ಯಗಳು, ಸಂಧಿಗಳು ಮತ್ತು ಅರ್ಥಪ್ರಕೃತಿಗಳನ್ನೂ; ದ್ವಿತೀಯ ಪ್ರಕಾಶದಲ್ಲಿ ನಾಯಕ-ನಾಯಿಕೆಯರನ್ನೂ; ತೃತೀಯ ಪ್ರಕಾಶದಲ್ಲಿ ದಶರೂಪಕಗಳನ್ನೂ; ಚತುರ್ಥಪ್ರಕಾಶದಲ್ಲಿ ರಸವನ್ನೂ ವಿವರಿಸಲಾಗಿದೆ. ದಶರೂಪಕವು ಶಾಂತರಸವನ್ನು ನಾಟ್ಯಕ್ಕೆ ಯೋಗ್ಯರಸವೆಂದು ಭಾವಿಸುವುದಿಲ್ಲ. ।

ಧನಂಜಯನ ಸೋದರನಾದ ಧನಿಕನು ದಶರೂಪಕಕ್ಕೆ ಅವಲೋಕವೆಂಬ ಪಾಂಡಿತ್ಯ ಪೂರ್ಣವಾದ ವ್ಯಾಖ್ಯಾನವನ್ನು ಬರೆದಿದ್ದಾನೆ. ಈ ವ್ಯಾಖ್ಯಾನದಿಂದ ಅವನು 'ಕಾವ್ಯನಿರ್ಣಯ'ವೆಂಬ ಮತ್ತೊಂದು ಗ್ರಂಥವನ್ನು ರಚಿಸಿರುವುದಾಗಿ ತಿಳಿದುಬರುತ್ತದೆ. ರಸವಿಷಯದಲ್ಲಿ ಧನಿಕನ ಅಭಿಪ್ರಾಯಗಳು ಭಟ್ಟನಾಯಕನ ಅಭಿಪ್ರಾಯಗಳಿಗೆ ಸದೃಶವಾಗಿದೆ ಎಂದು ತೋರುತ್ತದೆ— 'ನ ರಸಾದೀನಾಂ ಕಾವ್ಯೇನ ಸಹ ವ್ಯಂಗ್ಯವ್ಯಂಜಕಭಾವಃ ಕಿಂ ತರ್ಹಿ ಭಾವ್ಯಭಾವಕಸಂಬಧಃ ! ಕಾವ್ಯಂ ಹಿ ಭಾವಕಂ । ಭಾವ್ಯಾ ರಸಾದಯಃ । ದನಂಜಯ ಮತ್ತು ಧನಿಕರು ರಸನಿಷ್ಪತ್ತಿ ವಿಷಯದಲ್ಲಿ ಧ್ವನ್ಯಾಲೋಕಕ್ಕೆ ವಿರುದ್ಧವಾದ ಅಭಿಪ್ರಾಯವನ್ನು ಹೊಂದಿದ್ದರು ಧನಿಕನೇ ವಸಂತಾಚಾರ್ಯನ ತಂದೆಯಾದ ಧನಿಕ ಪಂಡಿತನೋ ಅಥವಾ ಬೇರೆಯೋ ನಿರ್ಣಯಿಸುವುದು ಕಷ್ಟ.

ನೃಸಿಂಹನು ಧನಿಕನ ಅವಲೋಕಕ್ಕೆ ವ್ಯಾಖ್ಯಾನವನ್ನು ಬರೆದಿದ್ದಾನೆ. ದಶರೂಪಕಕ್ಕೆ ಬಹುರೂಪಮಿಶ್ರನ ಪ್ರೌಢವಾದ ವ್ಯಾಖ್ಯಾನವಿರುವುದಾಗಿ ತಿಳಿದು ಬರುತ್ತದೆ.

## ಭೋಜ

ಧಾರಾನಗರಿಯ ಪರಮಾರದೊರೆಗಳಲ್ಲಿ ಭೋಜನು ಒಂಭತ್ತನೆಯವನು ಅವನ ತಂದೆ ಸಿಂಧುರಾಜ; ಚಿಕ್ಕಪ್ಪ ಮುಂಜ. ಭೋಜನು ಸ್ವತಃ ಕವಿಯೂ, ಕವಿಗಳಿಗೆ ಆಶ್ರಯದಾತನೂ ಆಗಿದ್ದನು. ಉದಯಪುರಿ ಪ್ರಶಸ್ತಿಯು ಭೋಜನನ್ನು ಹೀಗೆ ವರ್ಣಿಸುತ್ತದೆ—

ಸಾಧಿತಂ ವಿಹಿತಂ ದತ್ತಂ ಜ್ಞಾತಂ ತದ್ಯನ್ನ ಕೇನಚಿತ್ ।
ಕಿಮನ್ಯತ್ಕವಿರಾಜಸ್ಯ ಶ್ರೀಭೋಜಸ್ಯ ಪ್ರಶಸ್ಯತೇ ॥

---

೧ ರತ್ಯುತ್ಸಾಹಜುಗುಪ್ಸಾಃ ಕ್ರೋಧೋ ಹಾಸಃ ಸ್ಮಯೋ ಭಯಂ ಶೋಕಃ ।
ಶಮಮಪಿ ಕೇಚಿತ್ಪ್ರಾಹುಃಪುಷ್ಟಿರ್ನಾಟ್ಯೇಷು ನೈತಸ್ಯ ॥ ದಶರೂಪಕ,

ರಾಜತರಂಗಿಣಿಯು ಅವನನ್ನು 'ಕವಿಬಾಂಧವ'ನೆಂದು ಹೊಗಳುತ್ತದೆ. ಗುಜರಾತಿನ ದೊರೆಯಾದ ಭೀಮ ಮತ್ತು ತ್ರಿಪುರಿಯ ರಾಜನಾದ ಕಲಚುರಿಕರ್ಣರೊಡನೆ ನಡೆದ ಯುದ್ಧದಲ್ಲಿ ಭೋಜನು ಮೃತನಾದನು ಭೋಜನ ಚಿಕ್ಕಪ್ಪನಾದ ಮುಂಜನು ತೈಲಪನಿಂದ ಕ್ರಿ. ಶ. ೧೧ನೆಯ ಶತಮಾನದಲ್ಲಿ ಹತನಾದನು. ಭೋಜನ ನಂತರ ಸಿಂಹಾಸನವನ್ನೇರಿದ ಜಯಸಿಂಹನ ಕ್ರಿ. ಶ. ೧೦೫೫-೫೬ರ ಶಾಸನವು ದೊರೆತಿದೆ. ಭೋಜನ ಜ್ಯೋತಿಷಗ್ರಂಥವಾದ 'ರಾಜ ಮೃಗಾಂಕ'ವು ಕ್ರಿ.ಶ. ೧೦೪೨-೪೩ರಲ್ಲಿ ರಚಿತವಾಗಿದೆ. ಆದ್ದರಿಂದ ಭೋಜನ ಕಾಲ ಕ್ರಿ. ಶ. ೧೧ನೆಯ ಶತಮಾನ.

ಭೋಜರಾಜನ ಸರಸ್ವತೀಕಂಠಾಭರಣ ಮತ್ತು ಶೃಂಗಾರ ಪ್ರಕಾಶಗಳು ಅಲಂಕಾರ ಗ್ರಂಥ ಗಳಾಗಿವೆ. ಸರಸ್ವತೀಕಂಠಾಭರಣದಲ್ಲಿ ಐದು ಪರಿಚ್ಛೇದಗಳಿವೆ. ಇವುಗಳಲ್ಲಿ ಒಟ್ಟು ೬೪೩ ಕಾರಿಕೆಗಳಿದ್ದು ಅವುಗಳಲ್ಲಿ ಕೆಲವನ್ನು ಕಾವ್ಯಾದರ್ಶ, ಧ್ವನ್ಯಾಲೋಕ ಮುಂತಾದ ಪ್ರಾಚೀನ ಕೃತಿಗಳಿಂದ ತೆಗೆದುಕೊಳ್ಳಲಾಗಿದೆ. ಉದಾಹೃತವಾಗಿರುವ ಸು. ೧೫೦೦ ಶ್ಲೋಕಗಳನ್ನು ಪ್ರಾಚೀನ ಕೃತಿಗಳಿಂದ ತೆಗೆದುಕೊಳ್ಳಲಾಗಿದೆ. ಭೋಜನ ಅಲಂಕಾರಾದಿಗಳ ವಿಭಾಗ ಕ್ರಮವು ವಿಶಿಷ್ಟವಾದುದು. ಅವನು ೧೬ ಪದದೋಷಗಳನ್ನೂ, ೧೬ ವಾಕ್ಯದೋಷಗಳನ್ನೂ, ೧೬ ವಾಕ್ಯಾರ್ಥದೋಷಗಳನ್ನೂ ಮತ್ತು ೨೪ ಶಬ್ದಗುಣಗಳನ್ನೂ, ೨೪ ವಾಕ್ಯಾರ್ಥಗುಣಗಳನ್ನೂ ಹೇಳಿದ್ದಾನೆ. ಹೀಗೆಯೇ ಶಬ್ದಾಲಂಕಾರಗಳು-೨೪, ಅರ್ಥಾಲಂಕಾರಗಳು-೨೪, ಶಬ್ದಾರ್ಥೋ ಭಯಾಲಂಕಾರಗಳು-೨೪. ಅವನು ಉಪಮಾ, ಆಕ್ಷೇಪ, ಸಮಾಸೋಕ್ತಿ, ಅಪಹ್ನುತಿ ಮುಂತಾದುವನ್ನು ಶಬ್ದಾರ್ಥೋಭಯಾಲಂಕಾರಗಳೆಂದು ಹೇಳಿದ್ದಾನೆ ರೀತಿಯನ್ನು ಶಬ್ದಾರ್ಥಾಲಂಕಾರವೆಂದು ಕರೆದು ಅದರಲ್ಲಿ ವೈದರ್ಭೀ, ಪಾಂಚಾಲೀ, ಗೌಡೀಯಾ, ಆವಂತಿಕಾ ಲಾಟೀಯಾ, ಮಾಗಧೀ ಎಂಬ ಆರು ವಿಧಗಳನ್ನು ಕೊಡಲಾಗಿದೆ. ಜೈಮಿನಿಯ ಆರು ಪ್ರಮಾಣಗಳಿಗೆ ಅಲಂಕಾರ ಪದವಿಯನ್ನು ಕೊಡಲಾಗಿದೆ. ಎಂಟು ರಸಗಳನ್ನು ಪ್ರತಿಪಾದಿಸಿದ್ದರೂ ಅವನ ದೃಷ್ಟಿಯಲ್ಲಿ ಶೃಂಗಾರವೊಂದೇ ರಸ. ಭೋಜನು ಗುಣ ಮತ್ತು ರಸಗಳನ್ನೂ ಅಲಂಕಾರಗಳನ್ನಾಗಿಯೇ ಭಾವಿಸಿದ್ದಾನೆ. ರತ್ನೇಶ್ವರನು ಸರಸ್ವತೀಕಂಠಾಭರಣಕ್ಕೆ ರತ್ನ ದರ್ಪಣವೆಂಬ ವ್ಯಾಖ್ಯಾನವನ್ನು ಬರೆದಿದ್ದಾನೆ.

ಶೃಂಗಾರಪ್ರಕಾಶವು ಅಲಂಕಾರಗ್ರಂಥಗಳಲ್ಲೆಲ್ಲಾ ದೊಡ್ಡದು ಈ ಗ್ರಂಥದಲ್ಲಿ ೩೬ ಪ್ರಕಾಶಗಳವೆ. ೨೬ನೆಯ ಪ್ರಕಾಶವು ದೊರೆತಿಲ್ಲ. ಕೆಲವು ಪ್ರಕಾಶಗಳು ಮಾತ್ರ ಮುದ್ರಣ ಗೊಂಡಿವೆ. ಶೃಂಗಾರಪ್ರಕಾಶವು ಅಲಂಕಾರ ಮತ್ತು ನಾಟ್ಯಾಂಶಗಳನ್ನು ಹೊಂದಿದೆ. ಶೃಂಗಾರವೊಂದೇ ರಸವೆಂದು ಈ ಗ್ರಂಥವು ಪ್ರತಿಪಾದಿಸುತ್ತದೆ. ಶೃಂಗಾರವನ್ನು ಧರ್ಮ, ಅರ್ಥ, ಕಾಮ, ಮೋಕ್ಷಗಳೆಂದು ವಿಭಾಗಿಸಲಾಗಿದೆ. ರಸಕ್ಕೆ ಸಂಬಂಧಿಸಿದ ಭೋಜನ ಅಭಿಪ್ರಾಯ ವನ್ನು ಏಕಾವಲೀ ಮತ್ತು ರತ್ನಾಪಣಗಳು ಉಲ್ಲೇಖಿಸಿವೆ.

## ಮಹಿಮಭಟ್ಟ

ರಾಜಾನಕ ಮಹಿಮಭಟ್ಟನ 'ರಾಜಾನಕ'ವೆಂಬ ಬಿರುದು ಅವನು ಕಾಶ್ಮೀರದವನೆಂಬ ದನ್ನು ತಿಳಿಸುತ್ತದೆ. ಅವನ ತಂದೆ ಶ್ರೀಧೈರ್ಯ; ಗುರು ಮಹಾಕವಿಯಾದ ಶ್ಯಾಮಲ. ಮಹಿಮಭಟ್ಟನು ತನ್ನ ಮೊಮ್ಮಕ್ಕಳಿಗಾಗಿ ವ್ಯಕ್ತಿವಿವೇಕವನ್ನು ಬರೆದುದಾಗಿ ಹೇಳಿದ್ದಾನೆ—

ಅಥಾತುಂ ವ್ಯುತ್ಪತ್ತಿಂ ನಪ್ತೃಣಾಂ ಕ್ಷೇಮಯೋಗಭಾಜಾನಾಮ್ ।
ಸತ್ಸು ಪ್ರಥಿತ ತನಯಾನಾಂ ಭೀಮಸ್ಯಾಮಿತಗುಣಸ್ಯತನಯಾನಾಮ್ ॥

'ಪೌತ್ರಾಣಾಂ' ಎಂದು ಹೇಳದೆ 'ನಪ್ತೃಣಾಂ' ಎಂದು ಹೇಳಿರುವುದರಿಂದ ಭೀಮನು ಮಹಿಮಭಟ್ಟನ ಅಳಿಯನೆಂದು ತೋರುತ್ತದೆ. ಆನಂದವರ್ಧನನ ಸುಪ್ರಸಿದ್ಧವೂ, ಬಹುಜನ ಸಮ್ಮತವೂ ಆದ ಧ್ವನಿಸಿದ್ಧಾಂತವನ್ನು ಮೂಲೋತ್ಪಾಟನ ಮಾಡುವ ಇವನ ಎದೆಗಾರಿಕೆಯು ಆಶ್ಚರ್ಯಕರವಾದುದು. ಇವನು ಮಹಾಕವಿಗಳಲ್ಲಿ ದೋಷಗಳನ್ನು ಹುಡುಕುವ ತನ್ನ ಸಾಮರ್ಥ್ಯವನ್ನು ಕುರಿತು ಹೀಗೆ ಹೇಳಿಕೊಂಡಿದ್ದಾನೆ—

ಸ್ವಕೃತಿಷ್ವಯಂತ್ರಿತಃ ಕಥಮನುಶಿಷ್ಯಾದನ್ಯಮಯಮಿತಿ ನ ವಾಚ್ಯಮ್ ।
ವಾರಯತಿ ಭಿಷಗಪಥ್ಯಾದಿತರಾನ್ ಸ್ವಯಮಾಚರನ್ನಪಿ ತತ್ ॥

ಮಹಿಮಭಟ್ಟನಲ್ಲಿ ಧೈರ್ಯ ಮತ್ತು ಆತ್ಮವಿಶ್ವಾಸಗಳು ತುಂಬಿದ್ದವು.

ಅಲಂಕಾರಸರ್ವಸ್ವದಲ್ಲಿ ವ್ಯಕ್ತಿವಿವೇಕದ ಅಭಿಪ್ರಾಯಸಂಗ್ರಹವಿದೆ. ಆದ್ದರಿಂದ ವ್ಯಕ್ತಿ ವಿವೇಕವು ಅಲಂಕಾರಸರ್ವಸ್ವಕ್ಕಿಂತ ಹಿಂದಿನದು. ವ್ಯಕ್ತಿವಿವೇಕದಲ್ಲಿ 'ಬಾಲರಾಮಾಯಣ', 'ವಿದ್ಧಶಾಲಭಂಜಿಕಾ'ಗಳಿಂದ ಉದ್ಧೃತಗಳಿವೆ ಮತ್ತು 'ವಕ್ರೋಕ್ತಿಜೀವಿತ' 'ಲೋಚನ'ಗಳ ಖಂಡನೆಯಿದೆ. ಆದ್ದರಿಂದ ವ್ಯಕ್ತಿವಿವೇಕಕಾರನು ಕುಂತಕ ಮತ್ತು ಅಭಿನವಗುಪ್ತರಿಗಿಂತ ಈಚಿನವನು. ಮಮ್ಮಟನು ಕಾವ್ಯಪ್ರಕಾಶದ ಐದನೆಯ ಉಲ್ಲಾಸದಲ್ಲಿ ವ್ಯಕ್ತಿವಿವೇಕಕಾರನ ಅಭಿಪ್ರಾಯಗಳನ್ನು ಖಂಡಿಸಿದ್ದಾನೆಂದು ಕೆಲವರು ಅಭಿಪ್ರಾಯಪಡುತ್ತಾರೆ. ಇದನ್ನು ಒಪ್ಪಿಕೊಳ್ಳುವುದಾದರೆ ಮಹಿಮಭಟ್ಟನು ಕ್ರಿ.ಶ. ೧೧ನೆಯ ಶತಮಾನದ ಪ್ರಥಮಾರ್ಧದವ ನಾಗುತ್ತಾನೆ. ಇವನು ವ್ಯಕ್ತಿವಿವೇಕ ಮತ್ತು ತತ್ತ್ವೋಕ್ತಿಗಳೆಂಬ ಎರಡು ಅಲಂಕಾರ ಗ್ರಂಥಗಳನ್ನು ರಚಿಸಿದ್ದಾನೆ.

---

೧. ರಾಜಾ ತು ಶೃಂಗಾರಮೇಕಮೇವ ಶೃಂಗಾರಪ್ರಕಾಶೇ ರಸಮುರರೀಚಕಾರ ।

೨. ಶೃಂಗಾರ ಏಕ ಏವ ರಸ ಇತಿ ಶೃಂಗಾರಪ್ರಕಾಶಕಾರಃ ॥

ಧ್ವನಿಸಿದ್ಧಾಂತವನ್ನು ಖಂಡಿಸಿ ಅದನ್ನು ಅನುಮಾನದಲ್ಲಿ ಅಂತರ್ಭಾವಗೊಳಿಸುವ ವ್ಯಕ್ತಿವಿವೇಕವು ಅಲಂಕಾರ ಗ್ರಂಥಗಳಲ್ಲಿ ವಿಶಿಷ್ಟವಾದುದು. ರುಯ್ಯಕ, ವಿದ್ಯಾಧರ ಮುಂತಾದ ಅಲಂಕಾರಿಕರು ವ್ಯಕ್ತಿವಿವೇಕಕಾರನ ಅಭಿಪ್ರಾಯಗಳನ್ನು ಉಗ್ರವಾಗಿ ಖಂಡಿಸಿದ್ದಾರೆ. ಧ್ವನಿ ವಿರೋಧಿಸಿದವರಲ್ಲಿ ಮಹಿಮಭಟ್ಟನೇ ಮೊದಲಿಗನಲ್ಲ. ಇವನಿಗಿಂತ ಹಿಂದೆಯೇ ಭಟ್ಟನಾಯಕನ ಭುಕ್ತಿವಾದ ಮತ್ತು ಶ್ರೀಶಂಕುಕನ ಅನುಮಿತಿವಾದಗಳಿದ್ದವು. ಕುಂತಕನೂ ಧ್ವನಿವಾದವನ್ನು ಪ್ರತಿಭಟಿಸಿ ವಕ್ರೋಕ್ತಿಯನ್ನು ನಿರೂಪಿಸಿದ್ದಾನೆ. ಆನಂದವರ್ಧನನೂ ಮುಂದಿನವರು ಅನುಮಿತಿಯಲ್ಲಿ ಧ್ವನ್ಯಂತರ್ಭಾವವನ್ನು ಹೇಳಬಹುದೆಂದು ಶಂಕಿಸಿ ಎಲ್ಲೆಲ್ಲೂ ಲಿಂಗೀಪ್ರತೀತಿಯೇ ವ್ಯಂಗ್ಯಪ್ರತೀತಿಯಾಗಲು ಸಾಧ್ಯವಿಲ್ಲವೆಂದು ಸಾಧಿಸಿದ್ದಾನೆ. ಕೆಲವರ ಧ್ವನಿವಿಷಯಕವಾದ ಭಕ್ತಿ (ಗುಣವೃತ್ತಿ, ಉಪಚಾರ, ಲಕ್ಷಣಾ) ವಾದವನ್ನು ಮಹಿಮಭಟ್ಟನು ವಿಸ್ತರಿಸಿ ವ್ಯಕ್ತಿ ವಿವೇಕದಲ್ಲಿ ಅನುಮಿತಿಯನ್ನು ನೆಲೆಗೊಳಿಸಿದ್ದಾನೆಂದು ಹೇಳಬಹುದು. ಆದರೆ ಅನುಯಾಯಿಗಳೇ ಇಲ್ಲದೆ ಮಹಿಮಭಟ್ಟನ ಸಂಪ್ರದಾಯವು ಮೂಲೆಸೇರಿತು.

ವ್ಯಕ್ತಿವಿವೇಕದಲ್ಲಿ ಮೂರು ವಿಮರ್ಶೆಗಳಿವೆ. ಪ್ರಥಮ ವಿಮರ್ಶದಲ್ಲಿ ಧ್ವನಿಲಕ್ಷಣಾ ಕ್ಷೇಪವನ್ನು ; ದ್ವಿತೀಯ ವಿಮರ್ಶದಲ್ಲಿ ಶಬ್ದಾನೌಚಿತ್ಯ ವಿಚಾರವನ್ನು ; ತೃತೀಯ ವಿಮರ್ಶದಲ್ಲಿ ಧ್ವನ್ಯುದಾಹರಣೆಗಳಿಗೆ ಅನುಮಾನಾಂತರ್ಭಾವೋಪದರ್ಶನವನ್ನು ವಿಶದಪಡಿಸಲಾಗಿದೆ. ಮಹಿಮಭಟ್ಟನು ಮಂಗಳ ಪದ್ಯದಲ್ಲಿಯೇ ಕೃತಿರಚನೆಯ ಉದ್ದೇಶವನ್ನು ತಿಳಿಸಿದ್ದಾನೆ—

ಅನುಮಾನೇಽಂತರ್ಭಾವಂ ಸರ್ವಸ್ಯೈವ ಧ್ವನೇಃ ಪ್ರಕಾಶಯಿತುಂ ।
ವ್ಯಕ್ತಿವಿವೇಕಂ ಕುರುತೇ ಪ್ರಣಮ್ಯ ಮಹಿಮಾಪರಾಂ ವಾಚಮ್ ॥

ಪ್ರಥಮ ವಿಮರ್ಶವು 'ಯತ್ರಾರ್ಥಃ ಶಬ್ದೋ ವಾ' ಎಂಬ ಧ್ವನಿಕಾರಿಕೆಯ ಖಂಡನೆಯಿಂದಲೇ ಪ್ರಾರಂಭವಾಗುತ್ತದೆ. ಆನಂದವರ್ಧನನ ಈ ಕಾರಿಕೆಯಲ್ಲಿ ಹತ್ತು ದೋಷಗಳನ್ನು ಪ್ರಕಟಿಸ ಲಾಗಿದೆ,

ಅರ್ಥಸ್ಯ ವಿಶಿಷ್ಟತ್ವಂ ಶಬ್ದಃ ಸವಿಶೇಷಣಸ್ತದಃ ಪುಂಸ್ತ್ವಂ ।
ದ್ವಿವಚನವಾಶಬ್ದೌ ಚ ವ್ಯಕ್ತಿರ್ಧ್ವನಿನಾಮ ಕಾವ್ಯವೈಶಿಷ್ಟ್ಯಂ ॥
ವಚನಂ ಚ ಕಥನಕರ್ತುಃ ಕಥಿತಾ ಧ್ವನಿಲಕ್ಷಣೇತಿ ದಶದೋಷಾಃ ।

ಆನಂದವರ್ಧನನ ಧ್ವನಿಲಕ್ಷಣವನ್ನು ಕುರಿತು ಏತಚ್ಚ ವಿವಿಚ್ಯಮಾನಮನುಮಾನಸ್ಯೈವ ಸಂಗಚ್ಛತೇ ; ನಾನ್ಯಸ್ಯ' ಎಂದು ವಿವರಿಸಿದ್ದಾನೆ. ಇವನು ಅಭಿಧಾ ಮತ್ತು ಲಕ್ಷಣಾ ವೃತ್ತಿ ಗಳಿಗೆ ಭಿನ್ನವಾದ ವ್ಯಂಜನಾ ವೃತ್ತಿಯನ್ನು ಒಪ್ಪಿಕೊಳ್ಳುವುದಿಲ್ಲ. ಲಕ್ಷಣೆಯು ಅಭಿಧೆಯಲ್ಲಿಯೇ ಅಂತರ್ಗತವಾಗುತ್ತದೆಂದೂ, ಪ್ರತೀಯಮಾನಾರ್ಥವು ಅನುಮಾನದಿಂದಲೇ ತೋರುತ್ತದೆಂದೂ ಇವನ ಮತ. ಇವನು 'ರಸವು ಕಾವ್ಯದ ಆತ್ಮ' ವೆಂಬ ಅಭಿಪ್ರಾಯವನ್ನು ಪ್ರತಿಭಟಿಸುವುದಿಲ್ಲ; ಆದರೆ ರಸವನ್ನು ವ್ಯಂಗ್ಯವೆಂದು ಒಪ್ಪದೇ ಅನುಮೇಯವೆಂದು ಸಾಧಿಸುತ್ತಾನೆ. ಇವನು ಧ್ವನಿ

ಯಂತೆ ವಕ್ರೋಕ್ತಿಯನ್ನೂ ಅನುಮಾನದಲ್ಲಿಯೇ ಅಂತರ್ಭಾವಗೊಳಿಸುತ್ತಾನೆ. ದ್ವಿತೀಯ ವಿಮರ್ಶದಲ್ಲಿ ಅನೌಚಿತ್ಯವನ್ನು ಅರ್ಥ ವಿಷಯ ಮತ್ತು ಶಬ್ದ ವಿಷಯವೆಂದು ವಿಭಾಗಿಸಿ ; ವಿಭಾವಾದಿಗಳಿಗೆ ಸಂಬಂಧಿಸಿದ ಅಂತರಂಗ ಅನೌಚಿತ್ಯವನ್ನು ಹಿಂದಿನವರೇ ವಿವರಿಸಿದ್ದಾರೆಂದು ತಿಳಿಸಿ ; ಬಹಿರಂಗ ಅನೌಚಿತ್ಯವನ್ನು ಉದಾಹರಣೆಗಳ ಮೂಲಕ ವಿವರಿಸಿದ್ದಾನೆ. ತೃತೀಯ ವಿಮರ್ಶದಲ್ಲಿ ಧ್ವನ್ಯಾಲೋಕದ ಉದಾಹರಣೆಗಳಿಗೆ ಅನುಮಾನವನ್ನು ಪ್ರತಿಪಾದಿಸಿದ್ದಾನೆ. ಈ ಕೃತಿಯಲ್ಲಿ ಅಲ್ಲಲ್ಲಿ ಸಂಗ್ರಹಶ್ಲೋಕ ಅಥವಾ ಸಂಗ್ರಹಾರ್ಯೆಗಳು ಬಂದಿವೆ. ಇವು ವಾದದ ತಾತ್ಪರ್ಯವನ್ನು ಕೊಡುತ್ತವೆ. ಕೆಲವು ಕಡೆ ಅಂತರಶ್ಲೋಕ ಅಥವಾ ಅಂತರಾರ್ಯೆಗಳು ಬಂದಿವೆ. ಸಾಮಾನ್ಯವಾಗಿ ಇವುಗಳಲ್ಲಿ ವಾದವೇ ಮುಂದುವರಿದಿದೆ. ಸಂಗ್ರಹಶ್ಲೋಕ ಮತ್ತು ಅಂತರ ಶ್ಲೋಕಗಳು ಮಹಿಮಭಟ್ಟವಿರಚಿತಗಳೆಂದು ತೋರುತ್ತವೆ.

ವ್ಯಕ್ತಿವಿವೇಕಕ್ಕೆ ಅಜ್ಞಾತಕರ್ತೃವಿನ ಒಂದು ಅಸಮಗ್ರ ವ್ಯಾಖ್ಯಾನವು ದೊರೆತಿದೆ ಈ ವ್ಯಾಖ್ಯಾನವು ಪ್ರೌಢವೂ, ಪಾಂಡಿತ್ಯಪೂರ್ಣವೂ, ಸಂಕ್ಷಿಪ್ತವೂ ಆಗಿದೆ. ಇದು ಅಲಂಕಾರ ಸರ್ವಸ್ವದ ವೃತ್ತಿಕಾರನದೆಂಬ ಅಭಿಪ್ರಾಯವಿದೆ.

## ಕ್ಷೇಮೇಂದ್ರ

ಕ್ಷೇಮೇಂದ್ರನ ತಂದೆ ಪ್ರಕಾಶೇಂದ್ರ : ತಾತ ಸಿಂಧು : ಗುರು ಅಭಿನವಗುಪ್ತ, ಭಟ್ಟೋದಯ ಸಿಂಹ ಮತ್ತು ರಾಜಪುತ್ರಲಕ್ಷಣಾದಿತ್ಯರು ಇವನ ಶಿಷ್ಯರು. ಕಾಶ್ಮೀರದ ಬ್ರಾಹ್ಮಣನಾದ ಕ್ಷೇಮೇಂದ್ರನು ಮೊದಲು ಶೈವನಾಗಿದ್ದು ಅನಂತರ ಸೋಮಾಚಾರ್ಯನಿಂದ ವೈಷ್ಣವಮತವನ್ನು ಸ್ವೀಕರಿಸಿದನು. ಇವನು ತನ್ನ ಎಲ್ಲಾ ಕೃತಿಗಳಲ್ಲಿ ತನ್ನನ್ನು ವ್ಯಾಸದಾಸನೆಂದು ಕರೆದುಕೊಂಡಿದ್ದಾನೆ. ಇವನು 'ಸಮಯ ಮಾತೃಕಾ'ವನ್ನು ಕ್ರಿ. ಶ. ೧೦೫೦ರಲ್ಲೂ, 'ಔಚಿತ್ಯವಿಚಾರಚರ್ಚಾ' ಮತ್ತು 'ಕವಿಕಂಠಾಭರಣ'ಗಳನ್ನು ಕಾಶ್ಮೀರದ ದೊರೆಯಾದ ಅನಂತನ ಆಳ್ವಿಕೆಯ ಕಾಲದಲ್ಲೂ (ಕ್ರಿ. ಶ. ೧೦೨೮–೧೦೬೩) ದಶಾವತಾರಚರಿತವನ್ನು ಕಲಶನ ಆಳ್ವಿಕೆಯ ಕಾಲದಲ್ಲೂ (ಕ್ರಿ. ಶ. ೧೦೬೬) ರಚಿಸಿದನು. ಆದ್ದರಿಂದ ಕ್ಷೇಮೇಂದ್ರನ ಕಾಲ ಕ್ರಿ. ಶ. ೧೧ನೆಯ ಶತಮಾನ.

ಕ್ಷೇಮೇಂದ್ರನು ಭಾರತಕಥಾಮಂಜರೀ, ಬೃಹತ್ಕಥಾಮಂಜರೀ ಮುಂತಾದ ಸುಮಾರು ನಲವತ್ತು ಗ್ರಂಥಗಳನ್ನು ಬರೆದಿದ್ದಾನೆ. ಅಲಂಕಾರ ಶಾಸ್ತ್ರಕ್ಕೆ ಅವನ ಕೊಡುಗೆ ಕಡಿಮೆ, ಅವನು 'ಸುವೃತ್ತ ತಿಲಕ'ವೆಂಬ ಛಂದೋಗ್ರಂಥವನ್ನೂ, ಔಚಿತ್ಯವಿಚಾರಚರ್ಚಾ' ಮತ್ತು 'ಕವಿಕಂಠಾ ಭರಣ'ಗಳೆಂಬ ಅಲಂಕಾರ ಗ್ರಂಥಗಳನ್ನು ಬರೆದಿದ್ದಾನೆ.

ಸುವೃತ್ತತಿಲಕದಲ್ಲಿ ಮೂರು ವಿನ್ಯಾಸಗಳಿವೆ. ಇದರಲ್ಲಿ ಹೇಳಿರುವ ವೃತ್ತಿವಿನಿಯೋಗವು ಗಮನಾರ್ಹವಾದುದು. ಕಾಳಿದಾಸ ಮುಂತಾದ ಕವಿಗಳು ಯಾವ ಯಾವ ಛಂದಸ್ಸಿನ ಬಳಕೆಯಲ್ಲಿ ಕೀರ್ತಿಶಾಲಿಗಳೆಂಬುದನ್ನು ಈ ಕೃತಿಯಲ್ಲಿ ತಿಳಿಸಲಾಗಿದೆ.

'ಔಚಿತ್ಯವಿಚಾರಚರ್ಚಾ'ದಲ್ಲಿ ಕಾರಿಕಾ, ವೃತ್ತಿ ಮತ್ತು ಉದಾಹರಣೆಗಳೆಂಬ ಮೂರು ಭಾಗಗಳಿವೆ. ವೃತ್ತಿಯು ಕಾರಿಕಾಕಾರನಿಂದಲೇ ರಚಿತವಾಗಿದೆ. ಕ್ಷೇಮೇಂದ್ರನು ಪ್ರಾಚೀನ ಕೃತಿಗಳ ಶ್ಲೋಕಗಳನ್ನೂ ತನ್ನ ಶ್ಲೋಕಗಳನ್ನೂ ಉದಾಹರಣೆಗೆ ಬಳಸಿಕೊಂಡಿದ್ದಾನೆ ಅವನ ಮತದಂತೆ ಔಚಿತ್ಯವು ರಸದ ಜೀವಿತ—

ಔಚಿತ್ಯಸ್ಯ ಚಮತ್ಕಾರಕಾರಿಣಶ್ಚಾರುಚರ್ವಣೇ ।
ರಸಜೀವಿತಭೂತಸ್ಯ ವಿಚಾರಂ ಕುರುತೇऽಧುನಾ ॥

ಔಚಿತ್ಯವೆಂದರೆ—

ಉಚಿತಂ ಪ್ರಾಹುರಾಚಾರ್ಯಾಃ ಸದೃಶಂ ಕಿಲ ಯಸ್ಯ ಯತ್ ।
ಉಚಿತಸ್ಯ ಚ ಯೋ ಭಾವಸ್ತದೌಚಿತ್ಯಂ ಪ್ರಚಕ್ಷತೇ ॥

ಪದ, ವಾಕ್ಯ. ಪ್ರಬಂಧಾರ್ಥ, ಗುಣ, ಅಲಂಕಾರ, ರಸ, ಕ್ರಿಯಾ, ಕಾರಕ, ಲಿಂಗ, ವಚನ ಉಪಸರ್ಗ, ಕಾಲ, ದೇಶ, ಮುಂತಾದುವುಗಳಿಗೆ ಸಂಬಂಧಿಸಿದಂತೆ ಔಚಿತ್ಯವನ್ನುಪ್ರತಿಪಾದಿಸಲಾಗಿದೆ. ಪ್ರತಿಯೊಂದು ವಿಷಯವನ್ನೂ ಉದಾಹರಣೆ ಮತ್ತು ಪ್ರತ್ಯುದಾಹರಣೆಗಳಿಂದ ವಿವರಿಸಲಾಗಿದೆ. ಧ್ವನ್ಯಾಲೋಕದ ಮೂರನೆಯ ಉದ್ಯೋತದ ೭–೧೪ರವರೆಗಿನ ಕಾರಿಕೆಗಳಲ್ಲಿ ಆನಂದವರ್ಧನನು ಸಂಗ್ರಹವಾಗಿ ಹೇಳಿರುವ ಔಚಿತ್ಯವನ್ನೇ ಕ್ಷೇಮೇಂದ್ರನು ಈ ಕೃತಿಯಲ್ಲಿ ವಿಸ್ತಾರವಾಗಿ ಪ್ರತಿಪಾದಿಸಿದ್ದಾನೆ.

ಧ್ವನ್ಯಲೋಕವೂ ಕೂಡ—

'ಅನೌಚಿತ್ಯಾದೃತೇ ನಾನ್ಯದ್ರಸಭಂಗಸ್ಯ ಕಾರಣಂ ।
ಪ್ರಸಿದ್ಧೌಚಿತ್ಯಬಂಧಸ್ತು ರಸಸ್ಯೋಪನಿಷತ್ಪರಾ ॥' ಎಂದೇ ಹೇಳುತ್ತದೆ,

ಔಚಿತ್ಯವಿಚಾರಚರ್ಚೆಗೆ 'ಸಹೃದಯಂತೋಷಿಣೀ' ಎಂಬ ವ್ಯಾಖ್ಯಾನವಿದೆ,

ಕವಿಕಂಠಾಭರಣದಲ್ಲಿ ಐದು ಸಂಧಿಗಳೂ, ೬೫ ಕಾರಿಕೆಗಳೂ ಇವೆ. ಈ ಸಂಧಿಗಳಲ್ಲಿ ಅನುಕ್ರಮವಾಗಿ ಕವಿತ್ವಾಪ್ತಿ, ಶಿಕ್ಷಾ, ಚಮತ್ಕೃತಿ, ಗುಣದೋಷೋದ್ಗತಿ, ಪರಿಚಯ ಪ್ರಾಪ್ತಿಗಳನ್ನು ವಿವರಿಸಲಾಗಿದೆ, ಕ್ಷೇಮೇಂದ್ರನು ಕವಿಗಳನ್ನು ಛಾಯೋಪಜೀವಿ, ಪದಕೋಪಜೀವಿ, ಪಾದೋಪಜೀವಿ, ಸಕಲೋಪಜೀವಿ, ಭುವನೋಪಜೀವಿ ಎಂದು ವರ್ಗೀಕರಿಸಿದ್ದಾನೆ. ಈ ಕೃತಿಯಲ್ಲಿ

ಕವಿಗಳಿಗೆ ಕಾವ್ಯದ ಗುಣದೋಷಗಳ ವಿಷಯದಲ್ಲಿ ದಿಗ್ದರ್ಶನವಿದೆ. ರಸಾಸ್ವಾದ, ವಿಸ್ಮಯ (ವಕ್ರತ್ವ)ಮುಂತಾದ ಹತ್ತು ಚಮತ್ಕಾರಗಳ ನಿರೂಪಣೆಯಿಂದೆ.

## ಪರಿಷ್ಕಾರಯುಗ

### ಮಮ್ಮಟ



ಮಮ್ಮಟನ ಅಲಂಕಾರ ಗ್ರಂಥವು ಅಲಂಕಾರ ಶಾಸ್ತ್ರದಲ್ಲಿ ತನ್ನದೇ ಆದ ಸ್ಥಾನವನ್ನು ಗಳಿಸಿಕೊಂಡಿದೆ ; ಎಲ್ಲ ವಿದ್ವಾಂಸರ ಮನ್ನಣೆಯನ್ನು ಪಡೆದಿದೆ. ಅಲಂಕಾರಶಾಸ್ತ್ರದಲ್ಲಿ ದೊಡ್ಡ ವಿದ್ವಾಂಸನಾದ ಮಮ್ಮಟನಿಗೆ ಸಮಗ್ರ ಸಾಹಿತ್ಯದ ಪರಿಚಯವಿದ್ದಿತು. ಅವನಿಗೆ ವ್ಯಾಕರಣ ಶಾಸ್ತ್ರದಲ್ಲಿಯೂ ಆಳವಾದ ಪಾಂಡಿತ್ಯವಿದ್ದಿತು. ಅವನು ಮಹಾಭಾಷ್ಯ ಮತ್ತು ವಾಕ್ಯಪದೀಯಗಳಿಂದ ಮಾತುಗಳನ್ನು ಉದ್ಧರಿಸಿದ್ದಾನೆ ; ಉಪಮಾ, ವಿಭಾವನಾ, ಪದಸಂಕೇತ (ಜಾತ್ಯಾದಿಕ) ಮುಂತಾದ ಕಡೆ ವ್ಯಾಕರಣಕಾರರ ಅಭಿಪ್ರಾಯಗಳನ್ನು ಬಳಸಿಕೊಂಡಿದ್ದಾನೆ. ಮಮ್ಮಟನು 'ಕಾವ್ಯಪ್ರಕಾಶ' ವೆಂಬ ಅಲಂಕಾರಗ್ರಂಥವನ್ನೂ, 'ಶಬ್ದವ್ಯಾಪಾರವಿಚಾರ' ವೆಂಬ ಶಬ್ದಶಕ್ತಿಗಳನ್ನು ನಿರೂಪಿಸುವ ಮತ್ತೊಂದು ಲಕ್ಷಣ ಗ್ರಂಥವನ್ನೂ ರಚಿಸಿದ್ದಾನೆ. ಕಾವ್ಯಪ್ರಕಾಶದ ಎರಡನೆಯ ಉಲ್ಲಾಸದಲ್ಲಿ ಬಂದಿರುವ ಅಭಿಧಾ, ಲಕ್ಷಣಾ ವ್ಯಾಪಾರಗಳನ್ನು 'ಶಬ್ದವ್ಯಾಪಾರ ವಿಚಾರ' ದಲ್ಲಿ ವಿವರಿಸಲಾಗಿದೆ.

ಮಮ್ಮಟನ ಕಾವ್ಯಪ್ರಕಾಶಕ್ಕೆಮಾಣಿಕ್ಯಚಂದ್ರನು ಕ್ರಿ.ಶ. ೧೧೫೯–೬೦ ರಲ್ಲಿ ವ್ಯಾಖ್ಯಾನವನ್ನು ಬರೆದಿದ್ದಾನೆ. ಈ ಗ್ರಂಥಕ್ಕೆ ರುಯ್ಯಕನ (೧೨ನೆಯ ಶತಕದ ಉತ್ತರಾರ್ಧ) ವ್ಯಾಖ್ಯಾನವೂ ಇದೆ. ಜಯಸಲ್ಮೇರ್‌ನಲ್ಲಿ ದೊರೆತಿರುವ ಕಾವ್ಯಪ್ರಕಾಶದ ಹಸ್ತಪ್ರತಿಯು ಕ್ರಿ.ಶ. ೧೧೫೮ರಲ್ಲಿ ರಚಿತವಾದುದೆಂದು ತೋರುತ್ತದೆ. ಆದ್ದರಿಂದ ಮಮ್ಮಟನು ೧೨ನೆಯ ಶತಮಾನಕ್ಕಿಂತ ಈಚಿನವನಲ್ಲವೆಂಬುದು ಸ್ಪಷ್ಟ. ಮಮ್ಮಟನು ಅಭಿನವಗುಪ್ತನನ್ನು ಪ್ರಸ್ತಾಪಿಸಿದ್ದಾನೆ ಮತ್ತು ನವಸಾಹಸಾಂಕಚರಿತದಿಂದ (ಕ್ರಿ.ಶ ೧೦೦೫) ವಾಕ್ಯವನ್ನು ಉದ್ಧರಿಸಿದ್ದಾನೆ. ಕಾವ್ಯಪ್ರಕಾಶದಲ್ಲಿ ಉದಾತ್ತಾಲಂಕಾರಕ್ಕೆ ಉದಾಹೃತವಾಗಿರುವ ಪದ್ಯದಿಂದ ಭೋಜ (ಕ್ರಿ.ಶ. ೧೧ನೆಯ ಶತಕ) ಮತ್ತು ಮಮ್ಮಟರು ಸಮಕಾಲೀನರೆಂದು ತೋರುತ್ತದೆ. ಉವಟನು ಮಮ್ಮಟನ ಸೋದರ ನಾಗಿದ್ದರೂ ಇರಬಹುದು. ಮೇಲಿನ ಆಧಾರಗಳಿಂದ ಮಮ್ಮಟನ ಕಾಲ ಕ್ರಿ.ಶ. ೧೧ನೆಯ ಶತಮಾನದ ಉತ್ತರಾರ್ಧವೆಂದು ಹೇಳಬಹುದು.

ಕಾವ್ಯಪ್ರಕಾಶದಲ್ಲಿ ಕಾರಿಕಾ, ವೃತ್ತಿ, ಉದಾಹರಣೆಗಳೆಂಬ ಮೂರು ಪ್ರಧಾನ ಭಾಗಗಳಿವೆ. ಈ ಗ್ರಂಥದ ವ್ಯಾಖ್ಯಾಕಾರರಾದ ವಿದ್ಯಾವಿಭೂಷಣ ಮತ್ತು ಮಹೇಶ್ವರರು ಕಾರಿಕಾಕಾರನು ಭರತನೆಂದೂ ವೃತ್ತಿಕಾರನು ಮಮ್ಮಟನೆಂದೂ ಹೇಳುತ್ತಾರೆ. ಇವರು ಮಮ್ಮಟನ ಕೆಲವು

ಕಾರಿಕೆಗಳಿಗೂ ಮತ್ತು ಭರತನ ಕೆಲವು ಶ್ಲೋಕಗಳಿಗೂ ಇರುವ ಸಾದೃಶ್ಯದಿಂದ ಭ್ರಾಂತರಾಗಿ ಹೀಗೆ ಹೇಳಿರಬಹುದು ಭಾಮಹ, ವಾಮನ, ಆನಂದವರ್ಧನ ಮುಂತಾದವರ ಮಾತಂಗಳ ಸಾದೃಶ್ಯವನ್ನು ಕಾವ್ಯಪ್ರಕಾಶದ ಕಾರಿಕೆಗಳಲ್ಲೂ ಕಾಣಬಹುದು. ತನ್ನ ಕಾಲಕ್ಕಾಗಲೇ ಪ್ರಸಿದ್ಧರಾಗಿದ್ದ ಭರತಾದಿಗಳ ಮಾತುಗಳನ್ನು ಮಮ್ಮಟನು ಬಳಸಿಕೊಂಡಿದ್ದರೆ ಅದರಲ್ಲಿ ಯಾವ ತಪ್ಪೂ ಇಲ್ಲ. ಕಾರಿಕೆ ಮತ್ತು ವೃತ್ತಿಗಳ ಏಕಕರ್ತೃತ್ವಕ್ಕೆ ಸಾಕಷ್ಟು ಸಾಕ್ಷ್ಯವೂ ಇದೆ. ಮಮ್ಮಟನು ಎಲ್ಲಿಯೂ ತಾನು ಬೇರೆಯವರ ಕಾರಿಕೆಗಳಿಗೆ ವಿವರಣೆಯನ್ನು ಬರೆಯುತ್ತಿದ್ದೇನೆಂದು ಹೇಳಿಲ್ಲ' ವೃತ್ತಿಗೆ ಬೇರೆ ಮಂಗಳವಿಲ್ಲ. 'ಸಾಂಗಮೇತನ್ನಿರಂಗಂತು ಶುದ್ಧಂ ಮಾಲಾ ತು ಪೂರ್ವವತ್; ಎಂಬ ಕಾರಿಕೆಯು ಮಾಲಾರೂಪಕವು ಮಾಲೋಪಮೆಯಂತೆ ಎಂದು ಹೇಳುತ್ತದೆ. ಆದರೆ ಹಿಂದೆ ಮಾಲೋಪಮೆಯು ವೃತ್ತಿಯಲ್ಲಿ ಮಾತ್ರ ಬಂದಿದೆ. ಇದರಿಂದ ಕಾರಿಕೆ ಮತ್ತು ವೃತ್ತಿಗಳು ಒಬ್ಬನಿಂದಲೇ ರಚಿತವಾಗಿವೆ ಎಂಬುದು ಸ್ಪಷ್ಟ. ಮಾಣಿಕ್ಯಚಂದ್ರ, ಜಯಂತ, ಸರಸ್ವತೀತೀರ್ಥ, ಸೋಮೇಶ್ವರ. ಹೇಮಚಂದ್ರ, ಜಯರಥ ಮೊದಲಾದ ವ್ಯಾಖ್ಯಾಕಾರರು ಮಮ್ಮಟನೇ ಕಾರಿಕೆ ಮತ್ತು ವೃತ್ತಿಗಳ ಕರ್ತೃವೆಂದು ಭಾವಿಸಿದ್ದಾರೆ.

ಇತ್ಯೇಷ ಮಾರ್ಗೋ ವಿದುಷಾಂ ವಿಭಿನ್ನೋಽಪ್ಯಭಿನ್ನರೂಪಃ ಪ್ರತಿ
ಭಾಸತೇ ಯತ್ ।
ನ ತದ್ವಿಚಿತ್ರಂ ಯದಮುತ್ರ ಸಮ್ಯ-ಗ್ವಿನಿರ್ಮಿತಾ ಸಂಘಟನೈವ ಹೇತುಃ ॥

ಕಾವ್ಯಪ್ರಕಾಶದ ಈ ಸಮಾಪ್ತಿ ಪದ್ಯವನ್ನು ವ್ಯಾಖ್ಯಾನಿಸುವಾಗ ವ್ಯಾಖ್ಯಾಕಾರರು ಕಾವ್ಯ ಪ್ರಕಾಶವು ಇಬ್ಬರಿಂದ ರಚಿತವಾದುದೆಂದು ಅಭಿಪ್ರಾಯಪಡುತ್ತಾರೆ । ರಾಜಾನಕಾನಂದನು ತಾನು ಬರೆದಿರುವ 'ಕಾವ್ಯಪ್ರಕಾಶನಿದರ್ಶನ' ವೆಂಬ ವ್ಯಾಖ್ಯಾನದಲ್ಲಿ ಮಮ್ಮಟನು ಪರಿಕರದವರೆಗೆ ರಚಿಸಿದನೆಂದೂ, ಅಲಕನು ಉಳಿದ ಭಾಗವನ್ನು ಪೂರ್ಣಗೊಳಿಸಿದನೆಂದೂ ನಿರ್ದಿಷ್ಟವಾಗಿ ದ್ವಿಕರ್ತೃತ್ವಾಭಿಪ್ರಾಯವನ್ನು ಸ್ಪಷ್ಟಗೊಳಿಸಿದ್ದಾನೆ.[2] ಏಳನೆಯ ಉಲ್ಲಾಸದಲ್ಲಿಯೂ ಅಲಕನ ಕೈವಾಡವಿದೆಯೆಂಬ ಅಭಿಪ್ರಾಯವಿದೆ.

ಕಾವ್ಯಪ್ರಕಾಶದಲ್ಲಿ ಹತ್ತು ಉಲ್ಲಾಸಗಳಿವೆ, ಇದು ನಾಟ್ಯಶಾಸ್ತ್ರವನ್ನು ಬಿಟ್ಟು ಉಳಿದೆಲ್ಲ ಅಂಶಗಳನ್ನು ಪ್ರತಿಪಾದಿಸುವ ಒಂದು ಸಮಗ್ರವಾದ ಅಲಂಕಾರಗ್ರಂಥ. ಮಮ್ಮಟನು ಪ್ರಾಚೀನಾಲಂಕಾರಿಕರ ಅಭಿಪ್ರಾಯಗಳನ್ನು ತೆಗೆದುಕೊಂಡಿದ್ದರೂ ಸ್ವತಂತ್ರ ನಿರ್ಣಯವುಳ್ಳ

---

೧ ಅಥ ಚಾಯಂ ಗ್ರಂಥೋಽನ್ಯೇನಾರಬ್ಧೋಽಪರೇಣ ಚ ಸಮರ್ಥಿತ ಇತಿ
ದ್ವಿಖಂಡೋಽಪಿ ಸಂಘಟನಾವಶಾದಖಂಡಾಯತೇ ।
—ಮಾಣಿಕ್ಯ ಚಂದ್ರ.

೨ ಕೃತಃ ಶ್ರೀಮಮ್ಮಟಾಚಾರ್ಯವರ್ಯೈಃ ಪರಿಕರಾವಧಿಃ ।
ಪ್ರಬಂಧಃ ಪೂರಿತಃ ಶೇಷೋ ವಿಧಾಯಾಲಕಸೂರಿಣಾ ॥
—ರಾಜಾನಕಾನಂದ.

ವನು. ಇವನು ಶ್ಲೇಷದ ವಿಷಯದಲ್ಲಿ ಉದ್ಭಟನ ಅಭಿಪ್ರಾಯವನ್ನೂ, ವಾಮನನ ಗುಣಾಲಂಕಾರಗಳ ಭೇದವನ್ನೂ ಮತ್ತು ವಕ್ರೋಕ್ತಿಯ ವಿಷಯದಲ್ಲಿ ಭಾಮಹನ ಅಭಿಪ್ರಾಯವನ್ನೂ ಖಂಡಿಸಿದ್ದಾನೆ. ಯಶಸ್ಸು, ಅರ್ಥ, ವ್ಯವಹಾರಜ್ಞಾನ, ಅಮಂಗಳ ನಿವೃತ್ತಿ, ಪರಮಾನಂದ ಮತ್ತು ಉಪದೇಶಗಳು ಕಾವ್ಯದ ಪ್ರಯೋಜನಗಳು[1]. ಶಕ್ತಿ, ವ್ಯುತ್ಪತ್ತಿ ಮತ್ತು ಪ್ರವೃತ್ತಿಗಳಿಲ್ಲದೆ ಕಾವ್ಯಗಳನ್ನು ರಚಿಸಲಾಗುವುದಿಲ್ಲ. ಶಬ್ದಾರ್ಥಯುಗಲವು ಕಾವ್ಯ 'ತದದೋಷೌ ಶಬ್ದಾರ್ಥೌ ಸಗುಣಾವನಲಂಕೃತೀ ಪುನಃ ಕ್ವಾಪಿ'. ಮಮ್ಮಟನು ವಾಚ್ಯ, ಲಕ್ಷ್ಯ, ವ್ಯಂಗ್ಯಾರ್ಥಗಳ ಜೊತೆಗೆ ಅಭಿಹಿತಾನ್ವಯವಾದಿಗಳ ತಾತ್ಪರ್ಯಾರ್ಥವನ್ನು ಉಲ್ಲೇಖಿಸಿದ್ದಾನೆ. ಜಾತಿ, ದ್ರವ್ಯ, ಗುಣ, ಕ್ರಿಯಾರೂಪವಾದ ಸಂಕೇತವನ್ನು ಮಹಾಭಾಷ್ಯಕಾರರ ಅಭಿಪ್ರಾಯವನ್ನು ಬಳಸಿಕೊಂಡು ವಿವರಿಸಿದ್ದಾನೆ.

ಇದು ರಸಸ್ವರೂಪ—

> ಕಾರಣಾನ್ಯಥ ಕಾರ್ಯಾಣಿ ಸಹಕಾರೀಣಿ ಯಾನಿ ಚ ।
> ರತ್ಯಾದೇಃ ಸ್ಥಾಯಿನೋ ಲೋಕೇ ತಾನಿ ಚೇನ್ನಾಟ್ಯಕಾವ್ಯಯೋಃ ॥
> ವಿಭಾವಾ ಅನುಭಾವಾಶ್ಚ ಕಥ್ಯಂತೇ ವ್ಯಭಿಚಾರಿಣಃ ।
> ವ್ಯಕ್ತಃ ಸ ತೈರ್ವಿಭಾವಾದ್ಯೈಃ ಸ್ಥಾಯೀಭಾವೋ ರಸಃ ಸ್ಮೃತಃ ॥

ಗುಣಗಳು ರಸಧರ್ಮಗಳೆಂದೂ, ಅಲಂಕಾರಗಳು ಹಾರಾದಿಗಳಂತೆ ಕಾವ್ಯಕ್ಕೆ ಶೋಭೆಯನ್ನುಂಟು ಮಾಡುತ್ತವೆಂದೂ ಇವನು ಪ್ರತಿಪಾದಿಸಿದ್ದಾನೆ. ಮಾಧುರ್ಯ, ಓಜಸ್ಸು ಪ್ರಸಾದಗಳೆಂಬ ಮೂರು ಗುಣಗಳನ್ನು ಅಂಗೀಕರಿಸಿ ಇತರ ಗುಣಗಳಿಗೆ ಇವುಗಳಲ್ಲಿ ಅಂತರ್ಭಾವಾದಿಗಳನ್ನು ಹೇಳಲಾಗಿದೆ—

> ಕೇಚಿದಂತರ್ಭವಂತ್ಯೇಷು ದೋಷತ್ಯಾಗಾತ್ಪರೇ ಶ್ರಿತಾಃ ।
> ಅನ್ಯೇ ಭಜಂತಿ ದೋಷತ್ವಂ ಕುತ್ರಚಿನ್ನ ತತೋ ದಶ ॥

ಮಾಣಿಕ್ಯಚಂದ್ರ, ರುಯ್ಯಕ, ಸೋಮೇಶ್ವರ, ಸರಸ್ವತೀತೀರ್ಥ, ಜಯಂತ ಮೊದಲಾದವರು ಕಾವ್ಯಪ್ರಕಾಶಕ್ಕೆ ವ್ಯಾಖ್ಯಾನಗಳನ್ನು ಬರೆದಿದ್ದಾರೆ. ಇದಕ್ಕಿರುವಷ್ಟು ವ್ಯಾಖ್ಯಾನಗಳು ಬೇರೆ ಯಾವ ಅಲಂಕಾರ ಗ್ರಂಥಕ್ಕೂ ಇಲ್ಲ.

---

೧ ಕಾವ್ಯಂ ಯಶಸೇಽರ್ಥಕೃತೇ ವ್ಯವಹಾರವಿದೇ ಶಿವೇತರಕ್ಷತಯೇ ।
ಸದ್ಯಃ ಪರನಿರ್ವೃತಯೇ ಕಾಂತಾಸಂಮಿತತಯೋಪದೇಶಯುಜೇ ॥

ರುಯ್ಯಕನ 'ಅಲಂಕಾರ ಸರ್ವಸ್ವ'ಕ್ಕೆ ಜಯರಥನು ಬರೆದಿರುವ 'ವಿಮರ್ಶಿನೀ' ವ್ಯಾಖ್ಯಾನದಿಂದ ರಾಜಾನಕತಿಲಕನು ಉದ್ಭಟನ 'ಕಾವ್ಯಾಲಂಕಾರಸಾರ ಸಂಗ್ರಹ'ಕ್ಕೆ ವ್ಯಾಖ್ಯಾನವನ್ನು ಬರೆದಿರುವುದು ತಿಳಿದು ಬರುತ್ತದೆ.[1] ಈ ವ್ಯಾಖ್ಯಾನವು ಈಚೆಗೆ ದೊರೆತು ಮುದ್ರಿತವಾಗಿದೆ.

## ರುಯ್ಯಕ (ರುಚಕ)

ಅಲಂಕಾರಸರ್ವಸ್ವದ ಕರ್ತೃವಾದ, ರಾಜಾನಕರುಯ್ಯಕನನ್ನು ರುಚಕನೆಂದೂ ಕರೆಯುತ್ತಾರೆ. 'ರಾಜಾನಕ'ವೆಂಬುದು ವಂಶದ ಪರಂಪರೆಯಿಂದ ಬಂದ ಹೆಸರು ಕಾಶ್ಮೀರವು ಇವನ ದೇಶ ; ರಾಜಾನಕತಿಲಕನು ಇವನ ತಂದೆ ; ಮಂಖನು (ಮಂಖಕ) ಇವನ ಶಿಷ್ಯ. ಮಂಖನ ಸೋದರನಾದ ಅಲಂಕಾರನು (ಲಂಕಾರ) ಕಾಶ್ಮೀರದ ದೊರೆಗಳಾದ ಸುಸ್ಸಲ ಮತ್ತು ಜಯಸಿಂಹರಿಗೆ (ಕ್ರಿ. ಶ. ೧೧೨೮–೧೧೪೯) ಮಂತ್ರಿಯಾಗಿಯೂ, ಮತ್ತೊಬ್ಬ ಸೋದರನು ಸುಸ್ಸಲನ ಕೈಕೆಳಗೆ ದೊಡ್ಡ ಅಧಿಕಾರಿಯಾಗಿಯೂ ಇದ್ದರು ಆದ್ದರಿಂದ ರುಯ್ಯಕನು ಕ್ರಿ.ಶ. ೧೨ ನೆಯ ಶತಮಾನದವನೆಂದು ತೋರುತ್ತದೆ.

ರುಯ್ಯಕನು ಅಲಂಕಾರಸರ್ವಸ್ವ, ಅಲಂಕಾರನುಸಾರಿಣೀ, ನಾಟಕಮೀಮಾಂಸಾ. ವ್ಯಕ್ತಿವಿವೇಕವಿಚಾರ, ಶ್ರೀಕಂಠಸ್ತವ, ಸಹೃದಯಲೀಲಾ, ಸಾಹಿತ್ಯಮೀಮಾಂಸಾ, ಹರ್ಷ ಚರಿತವಾರ್ತಿಕ, ಕಾವ್ಯಪ್ರಕಾಶಸಂಕೇತ, ಅಲಂಕಾರಮಂಜರೀ ಮತ್ತು ಅಲಂಕಾರವಾರ್ತಿಕಗಳೆಂಬ ಗ್ರಂಥಗಳನ್ನು ರಚಿಸಿದ್ದಾನೆ. ಇವುಗಳಲ್ಲಿ ಕೆಲವು ಗ್ರಂಥಗಳು ಮುದ್ರಿತವಾಗಿವೆ.

ಅಲಂಕಾರಸರ್ವಸ್ವವು ಶಬ್ದ ಮತ್ತು ಅರ್ಥಾಲಂಕಾರಗಳನ್ನುಳ್ಳ ಒಂದು ಅಲಂಕಾರಗ್ರಂಥ ರುಯ್ಯಕನು ಇದರ ಪ್ರಾರಂಭದಲ್ಲಿ ಭಾಮಹ, ಉದ್ಭಟ, ರುದ್ರಟ, ವಾಮನ. ವಕ್ರೋಕ್ತಿ ಜೀವಿತಕಾರ, ವ್ಯಕ್ತಿವಿವೇಕಕಾರ, ಮತ್ತು ಧ್ವನಿಕಾರರ ಅಭಿಪ್ರಾಯವನ್ನು ಸಂಗ್ರಹವಾಗಿ ತಿಳಿಸಿ, ಧ್ವನಿ ಸಿದ್ಧಾಂತದ ಬಗ್ಗೆ ತನ್ನ ಸಮ್ಮತಿಯನ್ನು ಪ್ರಕಟಿಸಿದ್ದಾನೆ—'ರಸಾದಯಸ್ತು ಜೀವಿತಭೂತಾನಾಮಲಂಕಾರತ್ವೇನ ವಾಚ್ಯಾಃ । ಅಲಂಕಾರಾಣಾಮುಪಸ್ಕಾರಕತ್ವಾದ್ರಸಾದೀನಾಂ ಚ ಪ್ರಾಧಾನ್ಯೇನೋಪಸ್ಕಾರ್ಯತ್ವಾತ್ । ತಸ್ಮಾದ್ವ್ಯಂಗ್ಯ ಏವ ವಾಕ್ಯಾರ್ಥೀಭೂತಃ ಕಾವ್ಯಜೀವಿತಮಿತ್ಯೇಷ ಏವ ಪಕ್ಷೋ ವಾಕ್ಯಾರ್ಥವಿದಾಂ ಸಹೃದಯಾನಾಮಾವರ್ಜಕಃ ।' ರುಯ್ಯಕನು ಅನುಪ್ರಾಸ, ಯಮಕ ಮುಂತಾದ ಶಬ್ದಾಲಂಕಾರಗಳನ್ನೂ, ಉಪಮಾ ಮುಂತಾದ ಸುಮಾರು

---

1 (i) ಏತಚ್ಚೋದ್ಭಟವಿಚಾರೇ ರಾಜಾನಕತಿಲಕೇನೈವ ಸಪ್ರಪಂಚಮುಕ್ತಮಿತಿ ನ ತಥಾಸ್ಮಾಭಿರಾವಿಷ್ಕೃತಮ್

(ii) ಏತಚ್ಚೋದ್ಭಟವಿವೇಕೇ ರಾಜಾನಕತಿಲಕೇನ ಸಪ್ರಪಂಚಮುಕ್ತಮಿತಿ.......

—ವಿಮರ್ಶಿನಿ.

೭೫ ಅರ್ಥಾಲಂಕಾರಗಳನ್ನೂ ನಿರೂಪಿಸಿದ್ದಾನೆ. ಮಮ್ಮಟನು ಹೇಳಿರುವ ಅಲಂಕಾರಗಳ ಜೊತೆಗೆ ಇವನು ಪರಿಣಾಮ, ರಸವತ್, ಪ್ರೇಯಃ, ಊರ್ಜಸ್ವಿ, ಸಮಾಹಿತ, ಭಾವೋದಯ, ಭಾವಸಂಧಿ, ಮತ್ತು ಭಾವಶಬಲತೆಗಳನ್ನು ಸೇರಿಸಿರುವುದಲ್ಲದೆ ವಿಕಲ್ಪ ಮತ್ತು ವಿಚಿತ್ರಗಳೆಂಬ ಎರಡು ಹೊಸ ಅಲಂಕಾರಗಳನ್ನು ಹೇಳಿದ್ದಾನೆ.

ಅಲಂಕಾರ ಸರ್ವಸ್ವದಲ್ಲಿ ಸೂತ್ರ, ವೃತ್ತಿ ಮತ್ತು ಉದಾಹರಣೆಗಳೆಂಬ ಮೂರು ಭಾಗ ಗಳಿವೆ. ಉದಾಹರಣಶ್ಲೋಕಗಳನ್ನು ಪ್ರಸಿದ್ಧಕೃತಿಗಳಿಂದ ಉದ್ಧರಿಸಲಾಗಿದೆ. ಸೂತ್ರ ಮತ್ತು ವೃತ್ತಿಗಳ ಏಕಕರ್ತೃತ್ವ ವಿಷಯದಲ್ಲಿ ಭಿನ್ನಾಭಿಪ್ರಾಯಗಳಿವೆ. ನಿರ್ಣಯಸಾಗರದಿಂದ ಮುದ್ರಿತವಾದ ಪ್ರತಿಯ ಪ್ರಾರಂಭಶ್ಲೋಕದಲ್ಲಿ 'ನಿಜಾಲಂಕಾರಸೂತ್ರಾಣಾಂ ವೃತ್ತ್ಯಾ ತಾತ್ಪರ್ಯಮುಚ್ಯತೇ' ಎಂದಿದೆ. ವ್ಯಾಖ್ಯಾನಕಾರನಾದ ಜಯರಥನು ರುಯ್ಯಕನೇ ಸೂತ್ರ ಮತ್ತು ವೃತ್ತಿಗಳ ಕರ್ತೃವೆಂದು ಅಭಿಪ್ರಾಯ ಪಡುತ್ತಾನೆ. ಇದು ರತ್ನಾಪಣ ಮತ್ತು ಚಿತ್ರ ಮೀಮಾಂಸಾಗಳಿಗೂ ಸಮ್ಮತವಾಗಿದೆ. ಈಚಿನ ಆಲಂಕಾರಿಕರಿಗೂ ಇದೇ ಅಭಿಪ್ರಾಯವಿದೆ. ತ್ರಿವೇಂಡ್ರಂನಲ್ಲಿ ಮುದ್ರಣಗೊಂಡು ಸಮುದ್ರಬಂಧನ ವ್ಯಾಖ್ಯಾನವನ್ನುಳ್ಳ ಪ್ರತಿಯಲ್ಲಿ 'ನಿಜಾ ಲಂಕಾರಸೂತ್ರಾಣಾಂ ವೃತ್ತ್ಯಾ' ಎಂಬುದಕ್ಕೆ ಬದಲಾಗಿ 'ಗುರ್ವಲಂಕಾರಸೂತ್ರಾಣಾಂ ವೃತ್ತ್ಯಾ' ಎಂದಿರುವುದಲ್ಲದೆ,

'ಇತಿಮಂಖಕೋ ವಿತೇನೇ ಕಾಶ್ಮೀರಕ್ಷಿತಿಪಸಾಂಧಿವಿಗ್ರಹಿಕಃ ।
ಸುಕವಿಮುಖಾಲಂಕಾರಂ ತದಿದಮಲಂಕಾರಸರ್ವಸ್ವಮ್ ॥'

ಎಂಬ ಗ್ರಂಥಸಮಾಪ್ತಿಪದ್ಯವಿದೆ. ಸಮುದ್ರಬಂಧನ ವ್ಯಾಖ್ಯಾನವೂ 'ಮಂಖಕನಿಬಂಧ ವಿವೃತೌ ವಿಹಿತಾಯಾಮಿಹ ಸಮುದ್ರಬಂಧೇನ' ಎಂದು ಮುಗಿಯುತ್ತದೆ. ಇದರಿಂದ ರುಯ್ಯಕನು ಸೂತ್ರಕಾರನೆಂದೂ, ವೃತ್ತಿಕಾರನು ಮಂಖಕನೆಂದೂ ಅಭಿಪ್ರಾಯವಾಗುತ್ತದೆ. ಮಂಖಕನು ಕಾಶ್ಮೀರದ ಜಯಸಿಂಹನ ಮಂತ್ರಿಯಾಗಿದ್ದನು. ಅಲಂಕಾರಸರ್ವಸ್ವದಲ್ಲಿ ಮಂಖಕನ ಶ್ರೀಕಂಠ ಚರಿತದ ಶ್ಲೋಕಗಳು ಉದ್ಧೃತವಾಗಿವೆ. ಮಂಖಕನು ತನ್ನ ಗುರುವಿನ ಕೃತಿಯ ಪ್ರಚಾರಕ್ಕೆ ಸಾಕಷ್ಟು ಪ್ರಯತ್ನಿಸಿರಬೇಕು. ಆದ್ದರಿಂದ ಕೃತಿಯಲ್ಲಿ ಕೆಲವು ಬದಲಾವಣೆಗಳೂ ನಡೆದಿರ ಬಹುದು. ಜಯರಥನೂ ಅನಧಿಕೃತವಾದ ಬದಲಾವಣೆಗಳಾಗಿವೆಯೆಂದು ಹೇಳುತ್ತಾನೆ.

ಜಯರಥನು ಅಲಂಕಾರಸರ್ವಸ್ವಕ್ಕೆ 'ವಿಮರ್ಶಿನೀ' ಎಂಬ ಪಾಂಡಿತ್ಯಪೂರ್ಣವಾದ ವ್ಯಾಖ್ಯಾನವನ್ನು ಬರೆದಿದ್ದಾನೆ.

'ವ್ಯಕ್ತಿವಿವೇಕವಿಚಾರ'ವು ವ್ಯಕ್ತಿವಿವೇಕದ ವ್ಯಾಖ್ಯಾನ. 'ಸಹೃದಯಲೀಲಾ'ದಲ್ಲಿ ಗುಣ, ಅಲಂಕಾರ, ಜೀವಿತ ಮತ್ತು ಪರಿಕರಗಳೆಂಬ ನಾಲ್ಕು ಉಲ್ಲೇಖಗಳಿವೆ. ಇವುಗಳಲ್ಲಿ ರಮಣಿಯರ ರೂಪ, ಆಭರಣ, ಯೌವನ, ಸೌಂದರ್ಯಾದಿಗಳನ್ನು ವಿವರಿಸಲಾಗಿದೆ.

• ಸಾಹಿತ್ಯಮೀಮಾಂಸೆ'ಯು ಒಂದು ಅಲಂಕಾರ ಗ್ರಂಥ. ತ್ರಿವಂಡ್ರಂನಲ್ಲಿ ಈ ಕೃತಿಯು ಮುದ್ರಿತವಾಗಿದೆ. ಇದರ ಆದಿಯಲ್ಲಾಗಲೀ ಅಂತ್ಯದಲ್ಲಾಗಲೀ ಕೃತಿಕಾರನ ಹೆಸರಿಲ್ಲ. ಇದರಲ್ಲಿ ಕಾರಿಕಾ, ವೃತ್ತಿ ಮತ್ತು ಉದಾಹರಣೆಗಳೆಂಬ ಮೂರು ಪ್ರಧಾನ ಭಾಗಗಳಿವೆ. ಇದರಲ್ಲಿ ಉದ್ಧೃತವಾಗಿರುವ ಸುಮಾರು ೬೦೦ ಶ್ಲೋಕಗಳಲ್ಲಿ ೧೦೦ ಪ್ರಾಕೃತ ಶ್ಲೋಕಗಳಿವೆ. ಈ ಬೃಹತ್‌ಕೃತಿಯಲ್ಲಿ ಎಂಟು ಪ್ರಕರಣಗಳಿದ್ದು ಪ್ರಥಮ ಪ್ರಕರಣವು ಸಮಗ್ರಕೃತಿಯಲ್ಲಿ ಬರುವ ವಿಷಯಗಳನ್ನು ತಿಳಿಸುತ್ತದೆ. ಈ ಕೃತಿಯಲ್ಲಿ ವೃತ್ತಿ ವಿವಕ್ಷಾ, ತಾತ್ಪರ್ಯ, ಪ್ರವಿಭಾಗ, ವ್ಯಪೇಕ್ಷಣ, ಸಾಮರ್ಥ್ಯ ಅನ್ವಯ, ಏಕಾರ್ಥಗಳೆಂಬ ಎಂಟು ಸಾಹಿತ್ಯ ವಿಷಯಗಳೂ ; ದೋಷತ್ಯಾಗ, ಗುಣಧಾನ, ಅಲಂಕಾರಯೋಗ, ರಸಾನ್ವಯಗಳೆಂಬ ನಾಲ್ಕು ಸಾಹಿತ್ಯಪರಿಷ್ಕಾರವಿಷಯಗಳೂ ; ಸತ್ಕವಿ ವಿದಗ್ಧಕವಿ, ಅರೋಚಕಿಕವಿ, ಸತೃಣಾಭ್ಯವಹಾರಕವಿಗಳೆಂಬ ನಾಲ್ಕು ಕವಿವಿಧಗಳೂ ; ಉತ್ತಮ, ಮಧ್ಯಮ, ಅಧಮರೆಂಬ ರಸಿಕವಿಧಗಳೂ ಪ್ರತಿಪಾದಿತವಾಗಿವೆ. ಸಾಹಿತ್ಯ ಮೀಮಾಂಸೆಯಲ್ಲಿ ವ್ಯಂಜನೆಯಿಲ್ಲ ; ತಾತ್ಪರ್ಯ ವೃತ್ತಿಯಿಂದ ರಸವು ಪ್ರತೀತವಾಗುತ್ತದೆ ; ಸಮಾಸೋಕ್ತಿ, ಸಹೋಕ್ತಿ ಮುಂತಾದ ಅಲಂಕಾರಗಳು ವಕ್ರೋಕ್ತಿವಿಧಗಳು ವ್ಯಂಜನೆಯನ್ನು ಕೈಬಿಟ್ಟಿರುವುದೂ, ಅಲಂಕಾರ ನಿರೂಪಣೆಯಲ್ಲಿ ವ್ಯತ್ಯಾಸವಾಗಿರುವುದೂ ಧ್ವನಿವಾದಿಯಾದ ಅಲಂಕಾರಸರ್ವಸ್ವಕಾರನಿಗೆ ಹೊಂದಿಕೆಯಾಗುವುದಿಲ್ಲ. ಪ್ರಾಯಶಃ ರುಯ್ಯಕನು ಚಿಕ್ಕವಯಸ್ಸಿನಲ್ಲಿ ವಕ್ರೋಕ್ತಿಜೀವಿತಕಾರನಿಂದ ಪ್ರಭಾವಿತನಾಗಿದ್ದಾಗ ಸಾಹಿತ್ಯಮೀಮಾಂಸೆಯನ್ನೂ, ಅನುಭವಸ್ಥನಾಗಿ ಆನಂದವರ್ಧನ ಮತ್ತು ಅಭಿನವಗುಪ್ತರಿಂದ ಪ್ರಭಾವಿತನಾದಾಗ ಅಲಂಕಾರ ಸರ್ವಸ್ವವನ್ನೂ ಬರೆದಿರಬೇಕೆಂದು ತೋರುತ್ತದೆ.

## ವಾಗ್ಭಟ (ಪ್ರಥಮ)

ಪ್ರಾಕೃತದಲ್ಲಿ ವಾಗ್ಭಟನ ಹೆಸರು 'ವಾಹಡ' ಅಥವಾ 'ಬಾಹಡ' ಎಂದು ದೊರೆಯುತ್ತದೆ. ಅವನು ಜೈನಮತದವನು. ತಂದೆ ಸೋಮ. ವಾಗ್ಭಟನ ಕಾಲವನ್ನು ಕ್ರಿ. ಶ. ೧೨ನೆಯ ಶತಮಾನವೆಂದು ಹೇಳಬಹುದು. ಕಾವ್ಯಾನುಶಾಸನಕಾರನಾದ ವಾಗ್ಭಟನು ಇವನನ್ನು ಉಲ್ಲೇಖಿಸಿರುವುದರಿಂದ ಇವನನ್ನು ಪ್ರಥಮ ವಾಗ್ಭಟನೆಂದು ಗುರುತಿಸಲಾಗುತ್ತದೆ.

ವಾಗ್ಭಟನ ಅಲಂಕಾರಗ್ರಂಥವು ವಾಗ್ಭಟಾಲಂಕಾರವೆಂದೇ ಪ್ರಸಿದ್ಧವಾಗಿವೆ. ಕೃತಿಯು ಚಿಕ್ಕದಾಗಿದ್ದರೂ ಇದರಲ್ಲಿ ಪ್ರಧಾನವಾದ ಅಲಂಕಾರಾಂಶಗಳೆಲ್ಲಾ ಬಂದಿವೆ. ಇದರಲ್ಲಿ ಐದು ಪರಿಚ್ಛೇದಗಳಿವೆ. ಪರಿಚ್ಛೇದಗಳ ಅಂತ್ಯಶ್ಲೋಕಗಳನ್ನು ಬಿಟ್ಟರೆ ಉಳಿದವು ಸಾಮಾನ್ಯವಾಗಿ ಅನುಷ್ಟುಪ್‌ಛಂದಸ್ಸಿನಲ್ಲಿವೆ. ಓಜೋಗುಣಕ್ಕೆ ಒಂದು ಗದ್ಯಖಂಡವನ್ನು ಉದಾಹರಣೆಯನ್ನಾಗಿ ಕೊಡಲಾಗಿದೆ. ಈ ಕೃತಿಯಲ್ಲಿ ಕಾವ್ಯಲಕ್ಷಣ, ಕಾವ್ಯಸಮಯ, ಕಾವ್ಯಭಾಷೆ, ಗುಣ, ದೋಷ, ಅಲಂಕಾರ, ರೀತಿ, ರಸ, ನಾಯಕಾದಿಗಳನ್ನು ನಿರೂಪಿಸಲಾಗಿದೆ. ವಾಗ್ಭಟನು ಸ್ವಂತಪದ್ಯ

ಗಳನ್ನೂ (ಸಂಸ್ಕೃತ ಮತ್ತು ಪ್ರಾಕೃತ), ನೇಮಿನಿರ್ವಾಣಮಹಾಕಾವ್ಯದ ಪದ್ಯಗಳನ್ನೂ ಉದಾಹರಣೆಯಾಗಿ ಕೊಟ್ಟಿದ್ದಾನೆ ವಾಗ್ಭಟಾಲಂಕಾರ ಗ್ರಂಥಕಾರನೇ ಈ ಕಾವ್ಯದ ಕರ್ತೃವೂ ಆಗಿರಬಹುದು.

ವಾಗ್ಭಟನು ಶಬ್ದಾರ್ಥಯುಗಲವನ್ನು ಕಾವ್ಯವೆಂದು ಪರಿಗಣಿಸಿದ್ದಾನೆ—

ಸಾಧುಶಬ್ದಾರ್ಥಸಂದರ್ಭಂ ಗುಣಾಲಂಕಾರಭೂಷಿತಮ್ ।
ಸ್ಫುಟರೀತಿರಸೋಪೇತಂ ಕಾವ್ಯಂ ಕುರ್ವೀತ ಕೀರ್ತಯೇ ॥

ಪ್ರತಿಭೆಯ ಸ್ವರೂಪ—

ಪ್ರಸನ್ನ ಪದನವ್ಯಾರ್ಥಯುಕ್ತ್ಯುದ್ಬೋಧವಿಧಾಯಿನೀ ।
ಸ್ಫುರಂತೀ ಸತ್ಕವೇರ್ಬುದ್ಧಿಃ ಪ್ರತಿಭಾ ಸರ್ವತೋಮುಖೀ ॥

ಸಂಸ್ಕೃತ, ಪ್ರಾಕೃತ, ಅಪಭ್ರಂಶ ಮತ್ತು ಭೂತ ಭಾಷೆಗಳಲ್ಲಿಯೂ ಕಾವ್ಯವನ್ನು ರಚಿಸಬಹುದೆಂದೂ; ಕಾವ್ಯವು ಗದ್ಯ, ಪದ್ಯ ಅಥವಾ ಮಿಶ್ರ ರೂಪವಾಗಿರಬಹುದೆಂದೂ ವಾಗ್ಭಟನು ಹೇಳುತ್ತಾನೆ. ಇವನು ಚಿತ್ರ, ವಕ್ರೋಕ್ತಿ, ಅನುಪ್ರಾಸ, ಯಮಕಗಳೆಂಬ ನಾಲ್ಕು ಶಬ್ದಾಲಂಕಾರಗಳನ್ನೂ; ಉಪಮಾದಿ ಮೂವತ್ತೈದು ಅರ್ಥಾಲಂಕಾರಗಳನ್ನೂ ನಿರೂಪಿಸಿದ್ದಾನೆ. ಗೌಡೀಯಾ. ವೈದರ್ಭೀ ಎಂಬ ಎರಡೇ ರೀತಿಗಳೆಂದು ಇವನ ಅಭಿಪ್ರಾಯ. ರಸವಿಲ್ಲದೆ ಕಾವ್ಯವು ರುಚಿಸದೆಂದು ಇವನು ಹೇಳುತ್ತಾನೆ—

ಸಾಧುಪಾಕೇಽಪ್ಯನಾಸ್ವಾದ್ಯಂ ಭೋಜ್ಯಂ ನಿರ್ಲವಣಂ ಯಥಾ ।
ತಥೈವ ನೀರಸಂ ಕಾವ್ಯಮಿತಿ ಬ್ರೂಮೋ ರಸಾನಿಹ ॥

ವಾಗ್ಭಟಾಲಂಕಾರಕ್ಕೆ ಜಿನವರ್ಧನಸೂರಿ, ಸಿಂಹದೇವಗಣಿ, ಕ್ಷೇಮಹಂಸಗಣಿ. ಅನಂತ ಭಟ್ಟಸುತಗಣೇಶ ಮತ್ತು ರಾಜಹಂಸೋಪಾಧ್ಯಾಯರು ವ್ಯಾಖ್ಯಾನಗಳನ್ನು ಬರೆದಿದ್ದಾರೆ.

## ಹೇಮಚಂದ್ರ

ಈತನು ೧೧೧೮ರಲ್ಲಿ ಆಚಾರ್ಯನಾಗಿ (ಸೂರಿ), ೧೧೭೩ರಲ್ಲಿ ತನ್ನ ೮೪ನೆಯ ವಯಸ್ಸಿನಲ್ಲಿ ಕಾಲವಾದನು. ಇವನ ಹುಟ್ಟು ಹೆಸರು ಚಂಗದೇವ; ದೇವಚಂದ್ರನು ಇವನ ಗುರು. ಹೇಮಚಂದ್ರನು ಕಾವ್ಯಾನುಶಾಸನವನ್ನು ಬರೆದಿದ್ದಾನೆ.

ಕಾವ್ಯಾನುಶಾಸನವು ಒಂದು ಅಲಂಕಾರಗ್ರಂಥ. ಇದು ಸೂತ್ರ, ವೃತ್ತಿ ಮತ್ತು ಉದಾಹರಣೆಗಳೆಂಬ ಮೂರು ಭಾಗಗಳನ್ನು ಹೊಂದಿದೆ, ಸೂತ್ರಗಳು ಗದ್ಯರೂಪವಾಗಿವೆ,

ಸೂತ್ರಭಾಗಕ್ಕೆ ಕಾವ್ಯಾನುಶಾಸನವೆಂದೂ, ವೃತ್ತಿಭಾಗಕ್ಕೆ ಅಲಂಕಾರಚೂಡಾಮಣಿಯೆಂದೂ ಹೆಸರು. ಗ್ರಂಥಕಾರನೇ 'ವಿವೇಕ'ವೆಂಬ ಚಿಕ್ಕ ವ್ಯಾಖ್ಯಾನವನ್ನು ಬರೆದಿದ್ದಾನೆ. ಕಾವ್ಯಾನುಶಾಸನದಲ್ಲಿ ಎಂಟು ಅಧ್ಯಾಯಗಳಿವೆ. ಇವುಗಳಲ್ಲಿ ಕಾವ್ಯ ಲಕ್ಷಣ, ಅರ್ಥವಿಧಗಳು, ರಸ, ಭಾವ, ದೋಷ, ಗುಣ, ಅಲಂಕಾರಾದಿಗಳನ್ನು ವಿವರಿಸಲಾಗಿದೆ. ಸಂಕರದಲ್ಲಿ ಸಂಸೃಷ್ಟಿಯೂ, ದೀಪಕದಲ್ಲಿ ತುಲ್ಯಯೋಗಿತೆಯೂ, ಪರಿವೃತ್ತಿಯಲ್ಲಿ ಪರ್ಯಾಯವೂ, ಉಪಮೆಯಲ್ಲಿ ಅನನ್ವಯ—ಉಪಮೇಯೋಪಮಾಗಳೂ, ನಿದರ್ಶನದಲ್ಲಿ ಪ್ರತಿವಸ್ತೂಪಮಾ—ದೃಷ್ಟಾಂತಗಳೂ ವಿಧಗಳಾಗಿವೆ. ಸ್ವಭಾವೋಕ್ತಿಯನ್ನು ಜಾತಿಯೆಂದೂ, ಅಪ್ರಸ್ತುತಪ್ರಶಂಸೆಯನ್ನು ಅನ್ಯೋಕ್ತಿಯೆಂದೂ ಕರೆಯಲಾಗಿದೆ. ರಸ, ಭಾವಗಳ ಸಂಬಂಧವನ್ನುಳ್ಳ ರಸವತ್, ಪ್ರೇಯಃ ಮುಂತಾದ ಅಲಂಕಾರಗಳನ್ನು ಕೈಬಿಡಲಾಗಿದೆ. ಹೇಮಚಂದ್ರನು ೬ ಶಬ್ದಾಲಂಕಾರಗಳನ್ನೂ, ೨೯ ಅರ್ಥಾಲಂಕಾರಗಳನ್ನೂ ನಿರೂಪಿಸಿದ್ದಾನೆ. ಅವನು ಕಾವ್ಯಮೀಮಾಂಸಾ, ಕಾವ್ಯಪ್ರಕಾಶ, ಧ್ವನ್ಯಾಲೋಕ ಮತ್ತು ಅಭಿನವಗುಪ್ತನ ಕೃತಿಗಳಿಂದ ಮಾತುಗಳನ್ನು ಧಾರಾಳವಾಗಿ ತೆಗೆದುಕೊಂಡಿದ್ದಾನೆ. ಕಾವ್ಯಾನುಶಾಸನದಲ್ಲಿ ಸುಮಾರು ೧೫೦೦ ಉದಾಹರಣೆಗಳು ಬಂದಿವೆ.

## ಶಾರದಾತನಯ

ಕಾಶ್ಯಪಗೋತ್ರದ ಶಾರದಾತನಯನ ತಂದೆ ಭಟ್ಟಗೋಪಾಲ ; ತಾತಕೃಷ್ಣ. ಶಾರದಾತನಯನು ದಿವಾಕರನಿಂದ ನಾಟ್ಯಶಾಸ್ತ್ರವನ್ನು ಕಲಿತನು. ಇವನು ಭೋಜನ ಶೃಂಗಾರ—ಪ್ರಕಾಶದಿಂದ ಉಪಕೃತನಾಗಿದ್ದಾನೆ ಮತ್ತು ಸಿಂಗಭೂಪಾಲನು ಇವನ ಭಾವಪ್ರಕಾಶದಿಂದ ಮಾತುಗಳನ್ನು ಉದ್ಧರಿಸಿದ್ದಾನೆ. ಶಾರದಾತನಯನು ಕ್ರಿ. ಶ. ೧೧ ಮತ್ತು ೧೩ನೆಯ ಶತಕಗಳ ಮಧ್ಯಕಾಲದವನೆಂದು ತೋರುತ್ತದೆ.

ಶಾರದಾತನಯನು ಭಾವಪ್ರಕಾಶವೆಂಬ (ಭಾವಪ್ರಕಾಶಿಕಾ, ಭಾವಪ್ರಕಾಶನ) ಅಲಂಕಾರಗ್ರಂಥವನ್ನು ಬರೆದಿದ್ದಾನೆ. ಇದರಲ್ಲಿ ಹತ್ತು ಅಧಿಕಾರಗಳಿವೆ. ಇವುಗಳಲ್ಲಿ ನಾಟ್ಯಶಾಸ್ತ್ರದ ಜೊತೆಗೆ ರಸ, ಭಾವ, ನಾಯಕ, ನಾಯಿಕೆ, ಶಬ್ದಾರ್ಥಸಂಬಂಧ ಮುಂತಾದುವುಗಳನ್ನು ವಿವರಿಸಲಾಗಿದೆ.

## ಜಯದೇವ

ಚಂದ್ರಾಲೋಕ ಕರ್ತೃವಾದ ಜಯದೇವನು ತನ್ನನ್ನು ಪೀಯೂಷವರ್ಷನೆಂದು ಕರೆದು ಕೊಂಡಿದ್ದಾನೆ ಚಂದ್ರಾಲೋಕಕ್ಕೆ 'ರಾಕಾಗಮ'ವೆಂಬ ವ್ಯಾಖ್ಯಾನವನ್ನು ಬರೆದಿರುವ ಗಾಗಾಭಟ್ಟನು ಜಯದೇವನಿಗೆ ಪೀಯೂಷವರ್ಷನೆಂಬುದು ನಾಮಾಂತರವೆಂದು ಹೇಳಿದ್ದಾನೆ. ಜಯದೇವನ ತಂದೆ ಮಹಾದೇವ ; ತಾಯಿ ಸುಮಿತ್ರಾ. ಜಯದೇವನು ವಿದರ್ಭದವನೆಂದು

ತೋರುತ್ತದೆ. ಗೀತಗೋವಿಂದದ ಕರ್ತೃವಾದ ಜಯದೇವನೇ ಬೇರೆ. ಜಯದೇವಪೀಯೂಷವರ್ಷನೇ 'ಮಣ್ಯಾಲೋಕ' ವೆಂಬ ನ್ಯಾಯ ಗ್ರಂಥದ ಕರ್ತೃವಾದ ಜಯದೇವನೆಂದು (ಪಕ್ಷಧರ) ತೋರುತ್ತದೆ. ಜಯದೇವನು 'ಪ್ರಸನ್ನರಾಘವ'ವೆಂಬ ಒಂದು ನಾಟಕವನ್ನೂ ಬರೆದಿದ್ದಾನೆ. ಈ ನಾಟಕದ ಪ್ರಸ್ತಾವನೆಯಿಂದ ಜಯದೇವನು 'ಪ್ರಮಾಣಪ್ರವೀಣ'ನೆಂದು ತಿಳಿದುಬರುತ್ತದೆ.

ಜಯದೇವನ ಕಾಲವು ಸ್ಪಷ್ಟವಾಗಿ ತಿಳಿದಿಲ್ಲ. ಅವನು ತನ್ನ ಕೃತಿಯಲ್ಲಿ ಯಾವ ಕರ್ತೃವನ್ನೂ ಹೆಸರಿಸಿಲ್ಲ. ಆದರೆ ಚಂದ್ರಾಲೋಕದ 'ಅಂಗೀಕರೋತಿ ಯಃ ಕಾವ್ಯಂ ಶಬ್ದಾರ್ಥಾವನಲಂಕೃತೀ । ಅಸೌನ ಮನ್ಯತೇ ಕಸ್ಮಾದನುಷ್ಣಮನಲಂಕೃತೀ॥' ಎಂಬ ಶ್ಲೋಕದಲ್ಲಿ ಮಮ್ಮಟನ ಕಾವ್ಯಪ್ರಕಾಶದ ಕಾವ್ಯಲಕ್ಷಣವನ್ನು ತಿಳಿಸುವ ಕಾರಿಕೆಯ ಸ್ಪಷ್ಟ ನಿರ್ದೇಶವಿದೆ. ಅಲಂಕಾರ ಸರ್ವಸ್ವದಲ್ಲಿ ಮೊಟ್ಟ ಮೊದಲಿಗೆ ಕಾಣುವ ವಿಚಿತ್ರ ಮತ್ತು ವಿಕಲ್ಪಾಲಂಕಾರಗಳಿಗೆ ಚಂದ್ರಾ ಲೋಕದಲ್ಲಿ ಸುಮಾರು ಅದೇ ಪದಗಳಿಂದ ಲಕ್ಷಣವನ್ನು ಹೇಳಲಾಗಿದೆ. ಮಮ್ಮಟನು (ಕ್ರಿ.ಶ. ೧೧ನೆಯ ಶತಕ) ೬೧ ಅಲಂಕಾರಗಳನ್ನೂ, ರುಯ್ಯಕನು (ಕ್ರಿ. ಶ. ೧೨ನೆಯ ಶತಕ) ೭೫ ಅಲಂಕಾರಗಳನ್ನೂ ಹೇಳಿದ್ದರೆ ಜಯದೇವನು ೧೦೦ ಅಲಂಕಾರಗಳನ್ನು ಹೇಳಿದ್ದಾನೆ. ವಿಶ್ವನಾಥನ (ಕಿ. ಶ. ೧೪ನೆಯ ಶತಕ) ಸಾಹಿತ್ಯದರ್ಪಣ ಮತ್ತು ಶಾರ್ಙ್ಗಧರಪದ್ಧತಿ (೧೪ನೆಯಶತಕ) ಗಳಲ್ಲಿ ಪ್ರಸನ್ನರಾಘವದ ಪದ್ಯಗಳು ಉದ್ಧೃತವಾಗಿವೆ. ಆದ್ದರಿಂದ ಜಯದೇವನು ಕ್ರಿ. ಶ. ೧೩ನೆಯ ಶತಮಾನದವನೆಂದು ತೋರುತ್ತದೆ.

ಚಂದ್ರಾಲೋಕವು ಮೂಲ ವಿಷಯಗಳನ್ನು ಸರಳವೂ ಸುಲಭವೂ ಆಗಿ ಬೋಧಿಸುವ ಒಂದು ಅಲಂಕಾರ ಗ್ರಂಥ. ದಂಡಿ ಮತ್ತು ಭಾಮಹರಂತೆ ಜಯದೇವನೂ ಸ್ವಂತ ಉದಾಹರಣೆಗಳನ್ನು ಕೊಟ್ಟಿದ್ದಾನೆ ಚಂದ್ರಾಲೋಕದಲ್ಲಿ ಹತ್ತು ಮಯೂಖಗಳಿವೆ. ಇವುಗಳಲ್ಲಿ ಕಾವ್ಯಲಕ್ಷಣ, ಗುಣ, ದೋಷ, ಅಲಂಕಾರ, ರಸ, ಭಾವಾದಿಗಳನ್ನು ನಿರೂಪಿಸಲಾಗಿದೆ. ಜಯದೇವನು ಗೌಡೀ, ಲಾಟೀ, ಮತ್ತು ಪಾಂಚಾಲೀ ಎಂಬ ಮೂರು ರೀತಿಗಳನ್ನೂ; ಮಧುರಾ, ಪ್ರೌಢಾ, ಪರುಷಾ, ಲಲಿತಾ ಮತ್ತು ಭದ್ರಾ ಎಂಬ ಐದು ವೃತ್ತಿಗಳನ್ನೂ ಹೇಳಿದ್ದಾನೆ. ಐದನೆಯ ಮಯೂಖದಲ್ಲಿರುವ ಅರ್ಥಾಲಂಕಾರಗಳ ಪ್ರಾರಂಭದಲ್ಲಿ ಒಂದು ಮಂಗಳವಿದೆ. ಚಂದ್ರಾಲೋಕದ ಅರ್ಥಾಲಂಕಾರಭಾಗವು ಹೆಚ್ಚು ಜನಪ್ರಿಯವಾಗಿದೆ.

ಚಂದ್ರಾಲೋಕಕೆ್ಕ ವೈದ್ಯನಾಥಪಾಯಗುಂಡನು 'ರಮಾ' ಎಂಬ ವ್ಯಾಖ್ಯಾನವನ್ನೂ ಗಾಗಾಭಟ್ಟನು 'ರಾಕಾಗಮ'ವೆಂಬ ವ್ಯಾಖ್ಯಾನವನ್ನೂ. ಪ್ರದ್ಯೋತನಭಟ್ಟಾಚಾರ್ಯನು 'ಶರದಾಗಮ'ವೆಂಬ ವ್ಯಾಖ್ಯಾನವನ್ನೂ ಬರೆದಿದ್ದಾರೆ. ಈ ಗ್ರಂಥಕ್ಕೆ ಕೆಲವು ಅಪ್ರಸಿದ್ಧ ವ್ಯಾಖ್ಯಾನಗಳೂ ಇವೆ. ಅಪ್ಪಯ್ಯದೀಕ್ಷಿತರು ಬಹಳ ಮಟ್ಟಿಗೆ ಚಂದ್ರಾಲೋಕದ ಲಕ್ಷ್ಯಲಕ್ಷಣಗಳನ್ನೇ ಇಟ್ಟುಕೊಂಡು 'ಕುವಲಯಾನಂದ'ವೆಂಬ ಅಲಂಕಾರ ಗ್ರಂಥವನ್ನು ಬರೆದಿದ್ದಾರೆ.

## ವಿದ್ಯಾಧರ

'ಏಕಾವಲೀ' ಕರ್ತೃವಾದ ವಿದ್ಯಾಧರನ ಜೀವಿತವೃತಾಂತವು ತಿಳಿಯದು. ಉದಾಹರಣೆಗಳು ಗ್ರಂಥಕಾರನಿಂದಲೇ ರಚಿತವಾಗಿದ್ದು ಉತ್ಕಲದ (ಒರಿಸ್ಸ) ದೊರೆಯಾದ ನರಸಿಂಹನ ಪ್ರಶಂಶೆಯನ್ನು ಒಳಗೊಂಡಿವೆ—

ಏಷ ವಿದ್ಯಾಧರಸ್ತೇಷು ಕಾಂತಾಸಂಮಿತಲಕ್ಷಣಮ್ ।
ಕರೋಮಿ ನರಸಿಂಹಸ್ಯ ಚಾಟುಶ್ಲೋಕಾನುದಾಹರನ್ ॥

ವಿದ್ಯಾಧರನು ಕ್ರಿ. ಶ. ೧೩ನೆಯ ಶತಕದ ಅಂತ್ಯ ಅಥವಾ ೧೪ನೆಯ ಶತಕದ ಆದಿಯಲ್ಲಿದ್ದನೆಂದು ಹೇಳಬಹುದು.

ಏಕಾವಲಿಯು ಕಾರಿಕಾ, ವೃತ್ತಿ, ಉದಾಹರಣೆಗಳೆಂಬ ಮೂರು ಭಾಗಗಳನ್ನು ಹೊಂದಿದೆ. ನರಸಿಂಹರಾಜನ ಪ್ರಶಸ್ತಿಪದ್ಯಗಳನ್ನುಳ್ಳ ಈ ಕೃತಿಯು ಪ್ರತಾಪರುದ್ರಯಶೋಭೂಷಣ, ನಂಜ ರಾಜಯಶೋಭೂಷಣ, ರಘುನಾಥಭೂಪಾಲೀಯ, ಅಲಂಕಾರಮಂಜೂಷಾಗಳನ್ನು ಹೋಲು ತ್ತದೆ. ಏಕಾವಲಿಯಲ್ಲಿ ಎಂಟು ಉನ್ಮೇಷಗಳಿವೆ. ಇವುಗಳಲ್ಲಿ ಕಾವ್ಯಲಕ್ಷಣ, ಶಬ್ದಶಕ್ತಿಗಳು, ಧ್ವನಿ, ಗುಣ, ರೀತಿ, ದೋಷ, ಅಲಂಕಾರ ಮುಂತಾದುವನ್ನು ವಿವರಿಸಲಾಗಿದೆ. ಏಕಾವಳಿಯು ಬಹಳ ಮಟ್ಟಿಗೆ ಕಾವ್ಯಪ್ರಕಾಶ ಮತ್ತು ಅಲಂಕಾರಸರ್ವಸ್ವಗಳನ್ನು ಅವಲಂಬಿಸಿದೆ. ಮೊದ ಲನೆಯ ಉನ್ಮೇಷದಲ್ಲಿ ಧ್ವನ್ಯಾಲೋಕದ ಅನುವರ್ತನೆಯು ಕಂಡುಬರುತ್ತದೆ. ಪರಿಣಾಮ, ಉಲ್ಲೇಖ, ವಿಚಿತ್ರ ಮತ್ತು ವಿಕಲ್ಪಾಲಂಕಾರಗಳು ಸಮೂರು ಅಲಂಕಾರಸರ್ವಸ್ವದ ಮಾತು ಗಳಿಂದಲೇ ನಿರೂಪಿತವಾಗಿವೆ. ಅಭಿನವಗುಪ್ತ, ಬಿಲ್ಹಣ, ಭೋಜ, ಮಹಿಮಭಟ್ಟ, ವಾಮನ, ಶ್ರೀಹರ್ಷ, ಹಮ್ಮೀರ, ಹರಿಹರ, ಅರ್ಜುನ ಮುಂತಾದ ಕೃತಿಕಾರರನ್ನು ಹೆಸರಿಸಲಾಗಿದೆ. ಈ ಕೃತಿಗೆ ಮಲ್ಲಿನಾಥನು 'ತರಲ'ವೆಂಬ ವ್ಯಾಖ್ಯಾನವನ್ನು ಬರೆದಿದ್ದಾನೆ. ವಿದ್ಯಾಧರನು 'ಕೇಲಿ ರಹಸ್ಯ'ವೆಂಬ ಮತ್ತೊಂದು ಗ್ರಂಥವನ್ನು ರಚಿಸಿದ್ದಾನೆ.

## ವಿದ್ಯಾನಾಥ

ವಿದ್ಯಾನಾಥನು ತೆಲಂಗಾಣದ ಕಾಕತೀಯ ರಾಜನಾದ ಪ್ರತಾಪರುದ್ರದೇವನ (ವೀರರುದ್ರ, ರುದ್ರ) ಆಶ್ರಯ ಪಡೆದಿದ್ದನು. ಪ್ರತಾಪರುದ್ರದೇವನು ಏಕಶಿಲೆಯಲ್ಲಿ (ವಾರಂಗಲ್) ಕ್ರಿ. ಶ. ೧೩ನೆಯ ಶತಕದ ಅಂತ್ಯ ಮತ್ತು ೧೪ನೆಯ ಶತಕದ ಆದಿಯಲ್ಲಿ ಆಳುತ್ತಿದ್ದನೆಂದು ಶಾಸನಗಳಿಂದ ತಿಳಿದುಬರುತ್ತದೆ. ಕ್ರಿ. ಶ. ೧೩೨೩ರಲ್ಲಿ ಮೊಹಮ್ಮದ್ ತೊಗಲಕನ ಸೈನ್ಯವು ಇವನನ್ನು ಸೆರೆಹಿಡಿಯಿತು. ಆದ್ದರಿಂದ ವಿದ್ಯಾನಾಥನ ಕಾಲ ಕ್ರಿ. ಶ. ೧೪ನೆಯ ಶತಮಾನ

ವಿದ್ಯಾನಾಥನ ಅಲಂಕಾರಗ್ರಂಥವಾದ ಪ್ರತಾಪರುದ್ರಯಶೋಭೂಷಣವು ಕಾರಿಕಾ, ವೃತ್ತಿ, ಉದಾಹರಣೆಗಳೆಂಬ ಮೂರು ಭಾಗಗಳನ್ನು ಒಳಗೊಂಡಿದೆ. ಉದಾಹರಣೆಗಳು ಪ್ರತಾಪರುದ್ರನ ಪ್ರಶಸ್ತಿಪದ್ಯಗಳಾಗಿವೆ—

ಪ್ರತಾಪರುದ್ರದೇವಸ್ಯ ಗುಣಾನಾಶ್ರಿತ್ಯ ನಿರ್ಮಿತಃ ।
ಅಲಂಕಾರ ಪ್ರಬಂಧೋಽಯಂ ಸಂತಃ ಕರ್ಣೋತ್ಸವೋಽಸ್ತು ವಃ ॥

ಈ ಕೃತಿಯಲ್ಲಿ ಒಂಭತ್ತು ಪ್ರಕರಣಗಳಿವೆ. ಅವುಗಳಲ್ಲಿ ಕಾವ್ಯಸ್ವರೂಪ, ನಾಟಕ, ನಾಯಕ, ರಸ, ದೋಷ, ಗುಣ, ಅಲಂಕಾರಗಳನ್ನು ನಿರೂಪಿಸಲಾಗಿದೆ. ಮೂರನೆಯ ನಾಟಕ ಪ್ರಕರಣದಲ್ಲಿ ಲಕ್ಷ್ಯಗಳಿಗಾಗಿ 'ಪ್ರತಾಪರುದ್ರಕಲ್ಯಾಣ' ವೆಂಬ ಒಂದು ಮಾದರಿ ನಾಟಕವನ್ನು ಅಳವಡಿಸಲಾಗಿದೆ. ವಿದ್ಯಾನಾಥನು ಕಾವ್ಯಪ್ರಕಾಶ ಮತ್ತು ಅಲಂಕಾರಸರ್ವಸ್ವಗಳನ್ನು ಬಹಳ ಮಟ್ಟಿಗೆ ಅವಲಂಬಿಸಿದ್ದಾನೆ. ಇವನ ವಿಕಲ್ಪಾಲಂಕಾರದ ಲಕ್ಷಣವು ಚಂದ್ರಾಲೋಕದ ಲಕ್ಷಣವೇ ಆಗಿದೆ. ಇವನು ರುಯ್ಯಕನ ಮಾತಂಗಳನ್ನು ಉದ್ಧರಿಸಿದ್ದಾನೆ ಮತ್ತು ಮಲ್ಲಿನಾಥನು ಇವನ ಲಕ್ಷಣಗಳನ್ನು ತನ್ನ ವಾಖ್ಯಾನಗಳಲ್ಲಿ ಬಳಸಿಕೊಂಡಿದ್ದಾನೆ.

ಮಲ್ಲಿನಾಥನ ಮಗನಾದ ಕುಮಾರಸ್ವಾಮಿಯು ಪ್ರತಾಪರುದ್ರಯಶೋಭೂಷಣಕ್ಕೆ 'ರತ್ನಾಪಣ'ವೆಂಬ ವ್ಯಾಖ್ಯಾನವನ್ನು ಬರೆದಿದ್ದಾನೆ.

## ವಾಗ್ಭಟ (ದ್ವಿತೀಯ)

ಇವನು ವಾಗ್ಭಟಾಲಂಕಾರದ ಕರ್ತೃವಾದ ವಾಗ್ಭಟನನ್ನು ಹೆಸರಿಸುವುದರಿಂದ ಇವನನ್ನು ದ್ವಿತೀಯ ವಾಗ್ಭಟನೆಂದು ಗುರುತಿಸುತ್ತಾರೆ. ಇವನು ಸು.ಕ್ರಿ.ಶ. ೧೪ನೆಯ ಶತಮಾನದವನೆಂದು ವಿಮರ್ಶಕರು ಅಭಿಪ್ರಾಯ ಪಡುತ್ತಾರೆ.

ವಾಗ್ಭಟನು 'ಕಾವ್ಯಾನುಶಾಸನ' ವೆಂಬ ಅಲಂಕಾರ ಗ್ರಂಥವನ್ನು ಬರೆದಿದ್ದಾನೆ. ಇವನು 'ಋಷಭದೇವಚರಿತ'ವೆಂಬ ಮಹಾಕಾವ್ಯವನ್ನೂ, 'ಛಂದೋನುಶಾಸನ'ವನ್ನೂ ಬರೆದಿರುವುದಾಗಿ ತಿಳಿದು ಬರುತ್ತದೆ.

ಕಾವ್ಯಾನುಶಾಸನದಲ್ಲಿ ಸೂತ್ರ, ವೃತ್ತಿ ಮತ್ತು ಉದಾಹರಣೆಗಳೆಂಬ ಮೂರು ಪ್ರಧಾನ ಭಾಗಗಳಾಗಿವೆ. ಸೂತ್ರವು ಗದ್ಯರೂಪವಾಗಿದೆ. ವೃತ್ತಿ ಮತ್ತು ಉದಾಹರಣೆಗಳು ಗ್ರಂಥಕಾರನಿಂದಲೇ ರಚಿತವಾದ 'ಅಲಂಕಾರತಿಲಕ'ವೆಂಬ ವ್ಯಾಖ್ಯಾನದಲ್ಲಿ ಸೇರಿಹೋಗಿವೆ. ಐದು ಅಧ್ಯಾಯಗಳನ್ನುಳ್ಳ ಈ ಕೃತಿಯಲ್ಲಿ ಕಾವ್ಯಲಕ್ಷಣ, ಕಾವ್ಯವಿಧ, ಕವಿಸಮಯ, ದೋಷ, ಗುಣ ರೀತಿ, ೬೩ ಅರ್ಥಾಲಂಕಾರಗಳು, ರಸ, ಭಾವ, ನಾಯಕ ನಾಯಿಕೆಯರು ಮುಂತಾದ ವಿಚಾರಗಳನ್ನು ಪ್ರಸ್ತಾಪಿಸಲಾಗಿದೆ. ಉದಾಹರಣೆಗೆ ಇತರರ ಶ್ಲೋಕಗಳನ್ನು ಬಳಸಿಕೊಳ್ಳಲಾಗಿದೆ.

ಕೃತಿ ರಚನೆಯಲ್ಲಿ ಅಷ್ಟಾಗಿ ಸ್ವಂತಿಕೆ ಕಂಡುಬರುವುದಿಲ್ಲ. ಗ್ರಂಥಕಾರನು ಕಾವ್ಯಮೀಮಾಂಸಾ. ಕಾವ್ಯಪ್ರಕಾಶ ಮುಂತಾದ ಕೃತಿಗಳಿಂದ ಉಪಕೃತನಾಗಿದ್ದಾನೆ. ಇವನು ದಂಡಿ ಮತ್ತು ವಾಮನರು ಹೇಳಿರುವ ಹತ್ತು ಗುಣಗಳನ್ನು ತಿಳಿಸಿ ಮಾಧುರ್ಯ, ಓಜಸು ಮತ್ತು ಪ್ರಸಾದವೆಂಬ ಮೂರೇ ಗುಣಗಳೆಂದು ತನ್ನ ಅಭಿಪ್ರಾಯವನ್ನು ಕೊಟ್ಟಿದ್ದಾನೆ.

## ಸಿಂಗಭೂಪಾಲ

ಸಿಂಗಭೂಪಾಲನನ್ನು ಸು. ಕ್ರಿ. ಶ. ೧೩೩೦ರಲ್ಲಿ ವೆಂಕಟಗಿರಿಯಲ್ಲಿ[1] ಆಳುತ್ತಿದ್ದ ಸಿಂಗಮ ನಾಯುಡು ಎಂದು ಗುರುತಿಸಲಾಗಿದೆ. ಇವನ ತಂದೆ ಅನಂತ ; ತಾಯಿ ಅನ್ನಮಾಂಬಾ. ಸಿಂಗಭೂಪಾಲನಿಂದ ರಚಿತವಾದ 'ರಸಾರ್ಣವಸುಧಾಕರ' ದಲ್ಲಿ ಮೂರು ವಿಲಾಸಗಳಿವೆ ಇವುಗಳಲ್ಲಿ ನಾಟ್ಯ, ರಸ, ನಾಯಕ, ನಾಯಿಕಾ, ರೀತಿ, ವೃತ್ತಿ, ಭಾವ, ರಸಾಭಾಸ, ರೂಪಕಗಳು, ಅರ್ಥ ಪ್ರಕೃತಿ ಮುಂತಾದ ವಿಷಯಗಳನ್ನು ನಿರೂಪಿಸಲಾಗಿದೆ. ಸಿಂಗಭೂಪಾಲನು 'ನಾಟಕಪರಿಭಾಷಾ' ಮತ್ತು 'ಸಂಗೀತ ಸುಧಾಕರ' ಗಳೆಂಬ ಗ್ರಂಥಗಳನ್ನೂ ಬರೆದಿದ್ದಾನೆ.

## ವಿಶ್ವನಾಥ

ವಿಶ್ವನಾಥನು ಪಾಂಡಿತ್ಯಕ್ಕೆ ಪ್ರಸಿದ್ಧವಾದ ಬ್ರಾಹ್ಮಣ ಮನೆತನಕ್ಕೆ ಸೇರಿದವನು. ಅವನ ತಂದೆ ಚಂದ್ರಶೇಖರ ; ತಾತ ನಾರಾಯಣ. ಚಂದ್ರಶೇಖರನು ಹದಿನಾಲ್ಕು ಭಾಷೆಗಳಲ್ಲಿ ಪರಿಶ್ರಮವುಳ್ಳ ಸಂಧಿವಿಗ್ರಹಿಕನೂ, ನಾರಾಯಣನು (ಪ್ರಪಿತಾಮಹ) ಆಲಂಕಾರಿಕನೂ ಆಗಿದ್ದರು. ವಿಶ್ವನಾಥನ ತಂದೆಯು ಪುಷ್ಪಮಾಲಾ ಮತ್ತು ಭಾಷಾರ್ಣವವೆಂಬ ಎರಡು ಗ್ರಂಥಗಳನ್ನು ರಚಿಸಿದ್ದನೆಂದು ವಿಶ್ವನಾಥನಿಂದಲೇ ತಿಳಿದು ಬರುತ್ತದೆ. ವಿಶ್ವನಾಥನು ತನ್ನನ್ನು 'ಶ್ರೀಮನ್ನಾರಾಯಣಚರಣಾರವಿಂದಮಧುವ್ರತ'ನೆಂದು ಕರೆದುಕೊಂಡಿರುವುದರಿಂದ ವೈಷ್ಣವ ಸಂಪ್ರದಾಯದವನೆಂದು ತೋರುತ್ತದೆ. ಕಾವ್ಯಪ್ರಕಾಶದರ್ಪಣ ಮತ್ತು ಸಾಹಿತ್ಯದರ್ಪಣ ಗಳಲ್ಲಿ ವಿಶ್ವನಾಥನು ತನ್ನನ್ನು ಸಾಹಿತ್ಯಾರ್ಣವಕರ್ಣಧಾರ, ಧ್ವನಿಪ್ರಸ್ಥಾಪನ ಪರಮಾಚಾರ್ಯ, ಕವಿಸೂಕ್ತಿರತ್ನಾಕರ, ಅಷ್ಟಾದಶಭಾಷಾವಾರವಿಲಾಸಿನೀಭುಜಂಗ, ಸಾಂಧಿವಿಗ್ರಹಿಕ, ಮಹಾ ಪಾತ್ರ, ಕವಿರಾಜ, ಆಲಂಕಾರಿಕ ಚಕ್ರವರ್ತಿ, ಸಂಗೀತವಿದ್ಯಾವಿದ್ಯಾಧರ, ಕಲಾವಿದ್ಯಾಮಾಲತೀ ಮಧುಕರ ಮುಂತಾಗಿ ಕರೆದುಕೊಂಡಿದ್ದಾನೆ. ಕಾವ್ಯಪ್ರಕಾಶದರ್ಪಣದಲ್ಲಿ ಕೆಲವು ಸಂಸ್ಕೃತ ಪದಗಳಿಗೆ ಉರಿಯಾ ಭಾಷೆಯಲ್ಲಿರುವ ಅರ್ಥವನ್ನು ಪ್ರಸ್ತಾಪಿಸಿರುವುದರಿಂದ ವಿಶ್ವನಾಥನು 'ಒರಿಸ್ಸ' ದೇಶದವನೆಂದು ತೋರುತ್ತದೆ.

---

೧ ವಿಂಧ್ಯ ಮತ್ತು ಶ್ರೀಶೈಲಗಳ ನಡುವಣ ದೇಶ.

ವಿಶ್ವನಾಥನು ಕಾವ್ಯಪ್ರಕಾಶಕ್ಕೆ ವ್ಯಾಖ್ಯಾನವನ್ನು ಬರೆದಿರುವುದರಿಂದ ಮಮ್ಮಟನಿಗಿಂತ ಈಚಿನವನು ; ಜಗನ್ನಾಥನು ರಸಗಂಗಾಧರದಲ್ಲಿ ಸಾಹಿತ್ಯದರ್ಪಣವನ್ನು ಪ್ರಸ್ತಾಪಿಸಿರುವುದರಿಂದ ಜಗನ್ನಾಥನಿಗಿಂತ ಹಿಂದಿನವನು. ಜಮ್ಮುವಿನಲ್ಲಿ ಕ್ರಿ. ಶ. ೧೩೮೪ ರಲ್ಲಿ ರಚಿತವಾದ ಸಾಹಿತ್ಯ ದರ್ಪಣದ ಒಂದು ಹಸ್ತಪ್ರತಿಯು ದೊರೆತಿದೆ. ದೊರೆಯಾದ ಮೊಹಮ್ಮದ್ ಅಲ್ಲಾಉದ್ದೀನನ ವ್ಯಕ್ತಿತ್ವವನ್ನು ತಿಳಿಸುವ ಒಂದು ಪದ್ಯವು ಸಾಹಿತ್ಯದರ್ಪಣದಲ್ಲಿ ಉದ್ಧೃತವಾಗಿದೆ.[1] ಅಲ್ಲಾ ಉದ್ದೀನನು ಕ್ರಿ. ಶ. ೧೩೧೬ ರಲ್ಲಿ ವಿಷಪ್ರಯೋಗದಿಂದ ಸತ್ತನೆಂದು ತಿಳಿದು ಬರುತ್ತದೆ. ಪ್ರತಾಪರುದ್ರೀಯದ ವ್ಯಾಖ್ಯಾಕಾರನಾದ ಕುಮಾರಸ್ವಾಮಿ (೧೫ ನೆಯ ಶತಕ) ಯು ಸಾಹಿತ್ಯ ದರ್ಪಣವನ್ನು ಪ್ರಸ್ತಾಪಿಸಿದ್ದಾನೆ. ಆದ್ದರಿಂದ ವಿಶ್ವನಾಥನ ಕಾಲ ಕ್ರಿ. ಶ. ೧೪ ನೆಯ ಶತಮಾನ ವೆಂದು ಹೇಳಬಹುದು. ವಿಶ್ವನಾಥನದು ಬಹುಮುಖವಾದ ಪ್ರತಿಭೆ ಅವನು ರಾಘವವಿಲಾಸ, ಕುವಲಯಾಶ್ವಚರಿತ, ಕಾವ್ಯಪ್ರಕಾಶದರ್ಪಣ, ಸಾಹಿತ್ಯದರ್ಪಣ ಮುಂತಾದ ಗ್ರಂಥಗಳನ್ನು ರಚಿಸಿದ್ದಾನೆ. ಕಾವ್ಯಪ್ರಕಾಶದರ್ಪಣವು ಕಾವ್ಯ ಪ್ರಕಾಶದ ವ್ಯಾಖ್ಯಾನ.

ಸಾಹಿತ್ಯದರ್ಪಣವು ಪಾಂಡಿತ್ಯಪೂರ್ಣವೂ ಸಮಗ್ರವೂ ಆದ ಅಲಂಕಾರಗ್ರಂಥ ರೂಪಕಲಕ್ಷಣವನ್ನು ಒಳಗೊಂಡಿರುವುದು ಈ ಗ್ರಂಥದ ಒಂದು ವೈಶಿಷ್ಟ್ಯ. ವಿಶ್ವನಾಥನೇ ಕಾರಿಕೆಗಳನ್ನೂ ವೃತ್ತಿಯನ್ನೂ ರಚಿಸಿದ್ದಾನೆ. ವೃತ್ತಿಯು ಸ್ಪಷ್ಟವೂ ಸುಲಭಗ್ರಾಹ್ಯವೂ ಆಗಿದೆ. ಸ್ವತಃ ಕವಿಯಾದ್ದರಿಂದ ಅವನು ಲಕ್ಷಣಗಳನ್ನು ವಿವರಿಸುವಾಗ ತನ್ನ ಸಂಸ್ಕೃತ ಮತ್ತು ಪ್ರಾಕೃತ ಶ್ಲೋಕಗಳನ್ನು ಉದಾಹರಿಸಿದ್ದಾನೆ. ತನ್ನ ಪಿತಾಮಹ, ಪ್ರಪಿತಾಮಹರ ಪದ್ಯಗಳನ್ನೂ, ಪ್ರಸಿದ್ಧಕೃತಿಗಳಿಂದ ತೆಗೆದುಕೊಂಡ ಪದ್ಯಗಳನ್ನೂ ಉದಾಹರಣೆಗೆ ಬಳಸಿಕೊಂಡಿದ್ದಾನೆ. ಸಾಹಿತ್ಯದರ್ಪಣದಲ್ಲಿ ಹತ್ತು ಪರಿಚ್ಛೇದಗಳಿವೆ ಇವುಗಳಲ್ಲಿ ಕಾವ್ಯಲಕ್ಷಣ, ಅರ್ಥವಿಧಗಳು, ರಸ, ಭಾವ, ನಾಯಕ, ಧ್ವನಿ, ರೂಪಕಗಳು, ದೋಷ, ಗುಣ, ರೀತಿ ಮತ್ತು ಅಲಂಕಾರಗಳನ್ನು ನಿರೂಪಿಸಲಾಗಿದೆ. ಅಲಂಕಾರಶಾಸ್ತ್ರರಚನೆಯಲ್ಲಿ ಇವನು ಆನಂದವರ್ಧನ, ಮಮ್ಮಟ ಮತ್ತು ಜಗನ್ನಾಥರಿಗೆ ದ್ವಿತೀಯ ಸ್ಥಾನದವನಾದರೂ ತನ್ನದೇ ಆದ ವೈಶಿಷ್ಟ್ಯವನ್ನು ಪ್ರದರ್ಶಿಸಿದ್ದಾನೆ. ಮಮ್ಮಟನ ಕಾವ್ಯಪ್ರಕಾಶದ ಶೈಲಿಯು ಸುಲಭಗ್ರಾಹ್ಯವಲ್ಲ. ಜಗನ್ನಾಥನ ತಾರ್ಕಿಕ ಶೈಲಿಯು ಓದುಗರನ್ನು ಹೆದರಿಸುವಂತಿದೆ ವಿಶ್ವನಾಥನ ಶೈಲಿಯಾದರೋ ಸರಳವೂ, ಸುಂದರವೂ, ಸುಲಭ ಗ್ರಾಹ್ಯವೂ ಆಗಿದೆ. ಇವನು ಅಗತ್ಯವಿರುವ ಕಡೆ ಬೇರೆ ಆಲಂಕಾರಿಕರ ಅಭಿಪ್ರಾಯಗಳನ್ನು ಪರಿಶೀಲಿಸಿದ್ದಾನೆ.

ವಿಶ್ವನಾಥನು ಶಬ್ದಾರ್ಥಯುಗಲವನ್ನು ಕಾವ್ಯವೆಂದು ಒಪ್ಪುವುದಿಲ್ಲ. ವಕ್ರೋಕ್ತಿಯನ್ನಾಗಲಿ, ರೀತಿಯನ್ನಾಗಲಿ ಕಾವ್ಯದ ಆತ್ಮವೆಂದೂ ಒಪ್ಪುವುದಿಲ್ಲ. 'ವಾಕ್ಯಂ ರಸಾತ್ಮಕಂ

---

೧ ಸಂಧಾ ಸರ್ವಸ್ವಹರಣಂ ವಿಗ್ರಹೇ ಪ್ರಾಣನಿಗ್ರಹಃ ।
ಅಲಾವದೀನನೃಪತೌ ನ ಸಂಧಿರ್ನ ಚ ವಿಗ್ರಹಃ ॥ ಸಾ–೪.

ಕಾವ್ಯಂ' ಎಂಬುದು ಅವನು ಹೇಳಿರುವ ಕಾವ್ಯಲಕ್ಷಣ. ಇಲ್ಲಿ 'ರಸ' ಶಬ್ದಕ್ಕೆ 'ರಸಾದಿ' ಎಂದರ್ಥ, ಅವನು ದೋಷಗಳನ್ನು ರಸಾಪಕರ್ಷಕಗಳೆಂದೂ, ಗುಣಾಲಂಕಾರರೀತಿಗಳನ್ನು ರಸೋತ್ಕರ್ಷಕಗಳೆಂದೂ ಹೇಳಿದ್ದಾನೆ. ಇದು ಗುಣಾದಿಗಳಿಗಿರುವ ಭೇದ—

"ಗುಣಾಃ ಶೌರ್ಯಾದಿವತ್, ಅಲಂಕಾರಾಃ ಕಟಕಕುಂಡಲಾದಿವತ್, ರೀತಯೋಽವಯವ ಸಂಸ್ಥಾನ ವಿಶೇಷವತ್, ದೇಹದ್ವಾರೇಣೇವ ಶಬ್ದಾರ್ಥದ್ವಾರೇಣ ತಸ್ಯೈವ ಕಾವ್ಯಸ್ಯಾತ್ಮಭೂತಂ ರಸಮುತ್ಕರ್ಷಯಂತಃ ಕಾವ್ಯಸ್ಯೋತ್ಕರ್ಷಕಾ ಇತ್ಯುಚ್ಯಂತೇ"

ವಿಶ್ವನಾಥನು ರಸವನ್ನು ಪ್ರತಿಪಾದಿಸುವಾಗ ಕಾರಿಕೆಯಲ್ಲಿ 'ವಿಭಾವೇನ ಅನುಭಾವೇನ ತಥಾ ಸಂಚಾರಿಣಾ ವ್ಯಕ್ತಃ ರತ್ಯಾದಿಃ ಸ್ಥಾಯೀಭಾವಃ ರಸತಾಮೇತಿ' ಎಂದು ಹೇಳಿ, ವೃತ್ತಿಯಲ್ಲಿ 'ವ್ಯಕ್ತೋ ದಧ್ಯಾದಿನ್ಯಾಯೇನ ರೂಪಾಂತರಪರಿಣತೋ ವ್ಯಕ್ತೀಕೃತ ಏವ ರಸೋನತುದೀಪೇನ ಘಟ ಇವ ಪೂರ್ವಸಿದ್ಧೋ ವ್ಯಜ್ಯತೆ' ಎಂದು ವ್ಯಕ್ತಶಬ್ದದ ಅರ್ಥವನ್ನು ವಿವರಿಸಿದ್ದಾನೆ. ಅವನ ಮತದಲ್ಲಿ ರಸವು 'ಅಖಂಡಸ್ವಪ್ರಕಾಶಾನಂದಚಿನ್ಮಯ'. ಅವನು ಮುನೀಂದ್ರಸಮ್ಮತ ವಾದ ವತ್ಸಲರಸವನ್ನು ನಿರೂಪಿಸಿದ್ದಾನೆ. 'ರಸಸ್ಯಾಂಗಿತ್ವಮಾಪ್ತಸ್ಯ ಧರ್ಮಾಃ ಶೌರ್ಯಾದಯೋ ಯಥಾ ಗುಣಾಃ' ಎಂದು ಗುಣಸ್ವರೂಪವನ್ನು ತಿಳಿಸಿ ಮಾಧುರ್ಯ, ಓಜಸ್ಸು, ಪ್ರಸಾದಗಳೆಂಬ ಮೂರು ಗುಣಗಳನ್ನು ಅಂಗೀಕರಿಸಿದ್ದಾನೆ 'ಪದಸಂಘಟನಾ ರೀತಿರಂಗಸಂಸ್ಥಾ ವಿಶೇಷವತ್ ಉಪಕರ್ತ್ರೀರಸಾದೀನಾಂ' ಎಂದು ರೀತಿ ಲಕ್ಷಣವನ್ನು ಹೇಳಿ ವೈದರ್ಭೀ, ಗೌಡೀ ಪಾಂಚಾಲೀ ಲಾಟೀ ಎಂಬ ನಾಲ್ಕು ರೀತಿಗಳನ್ನು ವಿವರಿಸಿದ್ದಾನೆ.

ಸಾಹಿತ್ಯದರ್ಪಣಕ್ಕೆ ವಿಶ್ವನಾಥನ ಮಗನಾದ ಅನಂತದಾಸನು 'ಲೋಚನ' ವೆಂಬ ವ್ಯಾಖ್ಯಾನವನ್ನೂ, ಮಹೇಶ್ವರಭಟ್ಟನು 'ವಿಜ್ಞಪ್ರಿಯಾ' ಎಂಬ ವ್ಯಾಖ್ಯಾನವನ್ನೂ, ಗೋಪೀ ನಾಥನು 'ಪ್ರಭಾ'ಎಂಬ ವ್ಯಾಖ್ಯಾನವನ್ನೂ ಬರೆದಿದ್ದಾರೆ. ಸಾಹಿತ್ಯದರ್ಪಣಕ್ಕೆ ರಾಮಚರಣ ಮತ್ತು ಮಥುರಾನಾಥಶುಕ್ಲರ ವ್ಯಾಖ್ಯಾನಗಳೂ ಇವೆ. ಆಚಾರ್ಯಕೃಷ್ಣಮೋಹನ ಶಾಸ್ತ್ರಿ ಯುವರು 'ಲಕ್ಷ್ಮೀ' ಎಂಬ ಉಪಯುಕ್ತವೂ ವಿಸ್ತೃತವೂ ಆದ ವ್ಯಾಖ್ಯಾನವನ್ನು ಬರೆದಿದ್ದಾರೆ.

## ಭಾನುದತ್ತ

ಭಾನುದತ್ತನ ತಂದೆ ಗಣೇಶ್ವರ ; ದೇಶ ವಿದೇಹ. ಇವನು ಕ್ರಿ. ಶ. ೧೫೦೦ ಕ್ಕಿಂತ ಹಿಂದಿನವನು ಅಥವಾ ೧೫ ನೇಯ ಶತಕದವನು. ಭಾನುದತ್ತನು ರಸಮಂಜರೀ, ರಸತರಂಗಿಣೀ ಅಲಂಕಾರತಿಲಕ, ಗೀತಗೌರೀಶ, ಕುಮಾರಭಾರ್ಗವೀಯ ಮತ್ತು ಚಿತ್ರಚಂದ್ರಿಕಾ ಎಂಬ ಗ್ರಂಥಗಳನ್ನು ರಚಿಸಿದ್ದಾನೆ.

ರಸಮಂಜರೀ, ರಸತರಂಗಿಣೀ ಮತ್ತು ಅಲಂಕಾರತಿಲಕಗಳು ಆಲಂಕಾರ ಗ್ರಂಥಗಳು. ರಸ ಮಂಜರಿಯ ಬಹಳ ಭಾಗವು ನಾಯಿಕೆಯರಿಗೆ ಮೀಸಲಾಗಿದೆ. ಈ ಕೃತಿಯಲ್ಲಿ ನಾಯಿಕಾ, ಸಖೀ, ದೂತೀ, ಶೃಂಗಾರನಾಯಕ ನಾಯಕಸಹಾಯಕರು, ಸ್ತಂಭಾದಿಸಾತ್ವಿಕ ಗುಣಗಳು, ಶೃಂಗಾರವಿಧಗಳು ಮತ್ತು ವಿಪ್ರಲಂಭಾವಸ್ಥೆಗಳನ್ನು ನಿರೂಪಿಸಲಾಗಿದೆ. ಉದಾಹರಣೆಗಳಲ್ಲಿ ಕರ್ತೃವನ್ನು ಸೂಚಿಸಿರುವ ಕೆಲವನ್ನು ಬಿಟ್ಟರೆ ಉಳಿದುವೆಲ್ಲಾ ಗ್ರಂಥಕಾರನಿಂದಲೇ ರಚಿತವಾದುವು. ಈ ಕೃತಿಗೆ ಆನಂದಪಂಡಿತ, ನಾಗೇಶಭಟ್ಟ, ಗೋಪಾಲ ಮುಂತಾದವರು ವ್ಯಾಖ್ಯಾನಗಳನ್ನು ಬರೆದಿದ್ದಾರೆ.

ರಸತರಂಗಿಣಿಯಲ್ಲಿ ಎಂಟು ತರಂಗಗಳಿವೆ. ಇವುಗಳಲ್ಲಿ ರಸ, ಭಾವಗಳನ್ನು ವಿವರಿಸಲಾಗಿದೆ. ಬಹಳ ಮಟ್ಟಿಗೆ ಸ್ವಂತ ಉದಾಹರಣೆಗಳನ್ನು ಕೊಡಲಾಗಿದೆ.[1] ಈ ಕೃತಿಗೆ ಗಂಗಾರಾಮಜಾಡಿ, ಜೀವರಾಜ ಮುಂತಾದವರು ವ್ಯಾಖ್ಯಾನಗಳನ್ನು ಬರೆದಿದ್ದಾರೆ.

ಅಲಂಕಾರತಿಲಕದಲ್ಲಿ ಐದು ಪರಿಚ್ಛೇದಗಳಿವೆ. ಈ ಕೃತಿಯು ಗದ್ಯಪದ್ಯ ರೂಪವಾಗಿದೆ. ಗ್ರಂಥಕಾರನು ತನ್ನ ಮತ್ತು ತನ್ನ ತಂದೆಯ ಶ್ಲೋಕಗಳನ್ನು ಉದಾಹರಣೆಯಾಗಿ ಕೊಟ್ಟಿದ್ದಾನೆ. ಈ ಕೃತಿಯಲ್ಲಿ ಕಾವ್ಯಸ್ವರೂಪ, ಗುಣ, ಅಲಂಕಾರ, ರೀತಿ ಮುಂತಾದುವುಗಳ ನಿರೂಪಣೆಯಿದೆ. ಭಾನುದತ್ತನು ಕಾವ್ಯಕ್ಕೆ ರಸವು ಆತ್ಮ ; ಶಬ್ದಾರ್ಥಗಳು ಕಾವ್ಯಶರೀರ ; ಗತಿ ರೀತಿ, ವೃತ್ತಿ, ದೋಷಾಭಾವ, ಗುಣ, ಅಲಂಕಾರಗಳು ಇಂದ್ರಿಯಗಳು ; ವ್ಯುತ್ಪತ್ತಿಯು ಪ್ರಾಣ (ಉಸಿರು) ; ಅಭ್ಯಾಸವು ಮನಸ್ಸೆಂದು ಹೇಳಿದ್ದಾನೆ. ರೀತಿಯು ಕಾವ್ಯಧರ್ಮ. ಗುಣಗಳನ್ನು ಬಾಹ್ಯ, ಆಂತರ, ವೈಶೇಷಿಕವೆಂದು ವಿಭಾಗಿಸಿ, ಶಬ್ದಗುಣಗಳನ್ನು ಬಾಹ್ಯವೆಂದೂ, ಅರ್ಥಗುಣಗಳನ್ನು ಆಂತರವೆಂದೂ ಕರೆದು ಶ್ಲೇಷ ಮುಂತಾದ ೨೪ ಗುಣಗಳನ್ನು ತಿಳಿಸಿದ್ದಾನೆ.

## ರೂಪಗೋಸ್ವಾಮಿ

ಕರ್ನಾಟಕ ಬ್ರಾಹ್ಮಣರಾದ ರೂಪಗೋಸ್ವಾಮಿಯ ಪೂರ್ವಜರು ಕ್ರಿ.ಶ. ೧೪ನೆಯ ಶತಮಾನದಲ್ಲಿ ಬಂಗಾಳಕ್ಕೆ ವಲಸೆ ಬಂದು ನೆಲಸಿದರು. ರೂಪನು ದಾನಕೇಲಿಕೌಮುದೀ (೧೪೯೫) ವಿದಗ್ಧಮಾಧವನಾಟಕ (೧೫೩೨-೩), ಭಕ್ತಿರಸಾಮೃತಸಿಂಧು (೧೫೪೧-೨), ಉಜ್ವಲನೀಲಮಣಿ, ಉತ್ಕಲಿಕಾಮಂಜರೀ (೧೫೫೦) ಮುಂತಾದ ಗ್ರಂಥಗಳನ್ನು ರಚಿಸಿದ್ದಾನೆ. ಚೈತನ್ಯನ ಸಮಕಾಲೀನನಾದ ರೂಪನ ಕಾಲ ಕ್ರಿ.ಶ. ೧೫ನೆಯ ಶತಕದ ಅಂತ್ಯ ಮತ್ತು ೧೬ನೆಯ ಶತಕದ ಪೂರ್ವಾರ್ಧ.

---

೧ ಅವಗಾಹಸ್ವಮಾಗ್ದೇವಿ ದಿವ್ಯಾಂ ರಸತರಂಗಿಣೀಂ ।
ಅಸ್ಮತ್ಪದ್ಯೇನ ಪದ್ಮೇನ ರಚಯ ಶ್ರುತಿಭೂಷಣಂ ॥

ಕೃಷ್ಣಭಕ್ತಿಯನ್ನು ವಿವರಿಸುವ ಭಕ್ತಿರಸಾಮೃತಸಿಂಧು ಮತ್ತು ಉಜ್ಜ್ವಲ ನೀಲಮಣಿಗಳನ್ನು ಅಲಂಕಾರ ಗ್ರಂಥಗಳೆಂದು ಕರೆಯಬಹುದು. ಇವುಗಳ ಸ್ಥೂಲಪರಿಚಯಕ್ಕಾಗಿ ಉಜ್ಜ್ವಲ ನೀಲಮಣಿಯ ಕೆಲವು ಅಭಿಪ್ರಾಯಗಳನ್ನು ಕೊಡಲಾಗಿದೆ.
ಉಜ್ಜ್ವಲನೀಲಮಣಿಯ ಪ್ರಥಮಶ್ಲೋಕ—

ನಾಮಾಕೃಷ್ಟರಸಜ್ಞಃ ಶೀಲೇನೋದ್ದೀಪಯನ್ ಸದಾನಂದಮ್ ।
ನಿಜರೂಪೋತ್ಸವದಾಯೀ ಸನಾತನಾತ್ಮಾ ಪ್ರಭುರ್ಜಯತಿ ॥

ಮಧುರಾರತಿಯು ಭಕ್ತಿರಸದ ಸ್ಥಾಯಿಭಾವವೆಂದೂ, ಆ ಸ್ವಾದಿಸುವಾಗ ಅದಕ್ಕೆ ಮಧುರವೆಂಬ ಹೆಸರೆಂದೂ ಈ ಕೃತಿಯು ತಿಳಿಸುತ್ತದೆ—

ವಕ್ಷ್ಯಮಾಣೈರ್ವಿಭಾವಾದ್ಯೈಃ ಸ್ವಾದ್ಯತಾಂ ಮಧುರಾರತಿಃ ।
ನೀತಾ ಭಕ್ತಿರಸಃ ಪ್ರೋಕ್ತೋ ಮಧುರಾಖ್ಯೋ ಮನೀಷಿಭಿಃ ॥

ಸ್ನೇಹ, ಮಾನ, ಪ್ರಣಯ, ರಾಗ, ಅನುರಾಗ, ಮಹಾಭಾವಗಳು ಪ್ರೇಮವಿಲಾಸಗಳು—

ಬೀಜಮಿಕ್ಷುಃ ಸ ಚ ರಸಃ ಸ ಗಂಡಃ ಖಂಡ ಏವ ಸಃ ।
ಸ ಶರ್ಕರಾ ಸೀತಾ ಸಾ ಚ ಸಾ ಯಥಾ ಸ್ಯಾತ್ ಸಿತೋಪಲಾ
ಅತಃ ಪ್ರೇಮವಿಲಾಸಾಃ ಸ್ಯುರ್ಭಾವಾಃ ಸ್ನೇಹಾದಯಸ್ತು ಷಟ್ ॥

ಲೋಕದಲ್ಲಿ ಶುದ್ಧ, ಪವಿತ್ರ ಮತ್ತು ಸುಂದರವಾದುದೆಲ್ಲವೂ ಶೃಂಗಾರವೇ. ಈ ಕೃತಿಯಲ್ಲಿ ಕೃಷ್ಣನು ಮಧುರಾರತಿಗೆ ವಿಷಯ (ಆಲಂಬನ); ಅವನ ವಲ್ಲಭೆಯರು ಆಶ್ರಯ, ಅಚಲವಾದ ರತಿಯು ಪ್ರೇಮ, ಸಂಭೋಗಶೃಂಗಾರವು ಮುಖ್ಯ, ಗೌಣ ಎಂದು ಎರಡು ವಿಧ. ಈ ಕೃತಿಯಲ್ಲಿ ಭಕ್ತಿಗೆ ತೊಡಿಸಿರುವ ರಸಸಿದ್ಧಾಂತವೇಷವು ರಮ್ಯವಾಗಿದೆ. ಧಾರ್ಮಿಕ ಮತ್ತು ಆಧ್ಯಾತ್ಮಿಕ ರಹಸ್ಯತತ್ತ್ವವು ಲೌಕಿಕಪ್ರೇಮರೂಪದಿಂದ ಬೆಳಗಿದೆ. ಉಜ್ಜ್ವಲನೀಲಮಣಿಗೆ ಜೀವಗೋಸ್ವಾಮಿಯು 'ಲೋಚನರೋಚನೀ' ಎಂಬ ವ್ಯಾಖ್ಯಾನವನ್ನೂ, ವಿಶ್ವನಾಥ ಚಕ್ರವರ್ತಿಯು 'ಆನಂದಚಂದ್ರಿಕಾ' ಎಂಬ ವ್ಯಾಖ್ಯಾನವನ್ನೂ ಬರೆದಿದ್ದಾರೆ.

ರೂಪಗೋಸ್ವಾಮಿಯ ನಾಟಕಚಂದ್ರಿಕೆಯು ಒಂದು ನಾಟ್ಯಗ್ರಂಥ. ಇದರಲ್ಲಿ ಎಂಟು ವಿಭಾಗಗಳಿವೆ. ಇವುಗಳಲ್ಲಿ ನಾಟ್ಯಸ್ವರೂಪವನ್ನು ವಿವರಿಸಲಾಗಿದೆ. ವೈಷ್ಣವಕೃತಿಗಳಿಂದ ಉದಾಹರಣೆಗಳನ್ನು ತಗೆದುಕೊಳ್ಳಲಾಗಿದೆ.

## ಕೇಶವಮಿಶ್ರ

ಕೇಶವಮಿಶ್ರನ ಅಲಂಕಾರಶೇಖರವು ಕಾರಿಕಾ, ವೃತ್ತಿ, ಮತ್ತು ಉದಾಹರಣೆಗಳೆಂಬ

ಮೂರು ಪ್ರಧಾನ ಭಾಗಗಳನ್ನು ಹೊಂದಿದೆ. ಶೌದ್ಧೋದನೀಯು ಕಾರಿಕೆಗಳ ಕರ್ತೃವೆಂದು ಗ್ರಂಥಕಾರನೇ ಹೇಳಿದ್ದಾನೆ. ಕಾರಿಕಾಕಾರನ ಹೆಸರೇ ಶೌದ್ಧೋದನಿಯೋ ಅಥವಾ ಅಜ್ಞಾತ ಬೌದ್ಧನಿಂದ ರಚಿತವಾಗಿದ್ದ ಕಾರಿಕೆಗಳನ್ನು ಶೌದ್ಧೋದನಿಯ (ಭಗವಾನ್ ಬುದ್ಧ) ಕಾರಿಕೆಗಳೆಂದು ಕರೆಯಲಾಗಿದೆಯೋ ನಿರ್ಣಯಿಸುವುದು ಕಷ್ಟ. ಶೌದ್ಧೋದನೀಯ ಮತದಲ್ಲಿ ರಸವದ್ವಾಕ್ಯವು ಕಾವ್ಯ ಮತ್ತು ರಸವು ಕಾವ್ಯಕ್ಕೆ ಜೀವಿತ ವಿಷಯ ನಿರೂಪಣೆಯಲ್ಲಿ ಈ ಕಾರಿಕೆಗಳಿಗೂ ವಾಗ್ಭಟಾಲಂಕಾರಕ್ಕೂ ಸಾದೃಶ್ಯವಿದೆ. ಒಂದು ಕಡೆ ವ್ಯಕ್ತಿ ವಿವೇಕಕಾರನಾದ ಮಹಿಮ ಭಟ್ಟನ ಪ್ರಸ್ತಾಪವಿದೆ. ವಿಮರ್ಶಕರು ಕ್ರಿ.ಶ. ೧೧ ನೆಯ ಶತಮಾನದ ತರುವಾಯ ಈ ಕಾರಿಕೆಗಳ ರಚನೆಯಾಗಿರಬೇಕೆಂದು ಊಹಿಸುತ್ತಾರೆ.

ಕೇಶವಮಿಶ್ರನ ಕಾಲ ಕ್ರಿ.ಶ. ೧೬ ನೆಯ ಶತಮಾನವೆಂದು ತೋರುತ್ತದೆ. ಇವನು ಅಲಂಕಾರಶೇಖರಕ್ಕಿಂತ ಮೊದಲು ಅಲಂಕಾರಸರ್ವಸ್ವ, ಕಾವ್ಯರತ್ನ ಮುಂತಾದ ಏಳು ಕೃತಿಳನ್ನು ರಚಿಸಿದ್ದುದಾಗಿ ತಿಳಿಸಿದ್ದಾನೆ.

ಅಲಂಕಾರಶೇಖರದಲ್ಲಿ ೮ ರತ್ನಗಳು ಮತ್ತು ೨೨ ಮರೀಚಿಗಳೂ ಇವೆ. ಈ ಮರಿಚಿಗಳಲ್ಲಿ ಕಾವ್ಯಲಕ್ಷಣ, ಶಬ್ದಶಕ್ತಿ, ದೋಷ, ಗುಣ, ಅಲಂಕಾರ, ರಸ, ಭಾವ, ನಾಯಕ, ನಾಯಿಕೆ ಮುಂತಾದ ವಿಷಯಗಳನ್ನು ಪ್ರತಿಪಾದಿಸಲಾಗಿದೆ. ಈ ಕೃತಿಯಲ್ಲಿ ಸಂಕ್ಷಿಪ್ತತ್ವ, ಉದಾತ್ತತ್ವ, ಪ್ರಸಾದ. ಉಕ್ತಿ, ಸಮಾಧಿಗಳೆಂಬ ಐದು ಶಬ್ದಗುಣಗಳನ್ನೂ ; ಭಾವಿಕತ್ವ, ಸುಶಬ್ದತ್ವ, ಪರ್ಯಾಯೋಕ್ತಿ, ಸುಧರ್ಮಿತಾ ಎಂಬ ನಾಲ್ಕು ಅರ್ಥಗುಣಗಳನ್ನೂ ನಿರೂಪಿಸಲಾಗಿದೆ. ಕೆಲವು ಸಂದರ್ಭಗಳಲ್ಲಿ ದೋಷಗಳು ಗುಣಗಳಾಗಿ ಪರಿಣಮಿಸುತ್ತವೆಂದು ತಿಳಿಸಿ, ಅವುಗಳನ್ನು ವೈಶೇಷಿಕ ಗುಣಗಳೆಂದು ಕರೆಯಲಾಗಿದೆ. ಹದಿನಾಲ್ಕೇ ಅರ್ಥಾಲಂಕಾರಗಳೆಂದು ಕೇಶವಮಿಶ್ರನ ಅಭಿಪ್ರಾಯ. ೧೮ನೆಯ ಮರೀಚಿಯಲ್ಲಿ ಒಂದರಿಂದ ಸಾವಿರದವರೆಗಿನ ಸಂಖ್ಯಾವಾಚಕಗಳನ್ನೂ, ಶಬ್ದೋಪಾಯಗಳನ್ನೂ ತಿಳಿಸಲಾಗಿದೆ. ೧೯ನೆಯ ಮರೀಚಿಯಲ್ಲಿ ಸಮಸ್ಯಾಪೂರಣವನ್ನು ವಿವರಿಸಲಾಗಿದೆ.

## ಕವಿಕರ್ಣಪೂರ

ಕವಿಕರ್ಣಪೂರನ ತಂದೆ ಶಿವಾನಂದಸೇನ ; ಗುರು ಶ್ರೀನಾಥ. ಕವಿಕರ್ಣಪೂರನು ಕ್ರಿ.ಶ. ೧೫೨೪ ರಲ್ಲಿ ಕಾಂಚನಪಲ್ಲಿಯಲ್ಲಿ ಜನಿಸಿದನೆಂದು ತಿಳಿದು ಬರುತ್ತದೆ. ಇವನು ಚೈತನ್ಯ ಚರಿತಾಮೃತ, ಚೈತನ್ಯಚರಿತೋದಯ. ಅಲಂಕಾರಕೌಸ್ತುಭ ಮುಂತಾದ ಗ್ರಂಥಗಳನ್ನು ರಚಿಸಿದ್ದಾನೆ. ಅಲಂಕಾರಗ್ರಂಥವಾದ ಅಲಂಕಾರಕೌಸ್ತುಭದಲ್ಲಿ ಹತ್ತು ಕಿರಣಗಳಿವೆ. ಇವುಗಳಲ್ಲಿ ಕಾವ್ಯಲಕ್ಷಣ, ಧ್ವನಿ, ರಸ, ಭಾವ, ಗುಣ, ಅಲಂಕಾರ, ರೀತಿ, ದೋಷ ಮುಂತಾದುವುಗಳನ್ನು ನಿರೂಪಿಸಲಾಗಿದೆ.

ಅಪ್ಪಯ್ಯದೀಕ್ಷಿತನು ಏಕಾವಲೀ, ಅಲಂಕಾರಸರ್ವಸ್ವಸಂಜೀವಿನೀ ಮತ್ತು ಪ್ರತಾಪರುದ್ರ ಯಶೋಭೂಷಣಗಳಿಂದ ಶ್ಲೋಕಗಳನ್ನು ಉದ್ಧರಿಸಿರುವುದರಿಂದ ಕ್ರಿ. ಶ. ೧೪ನೆಯ ಶತಮಾನ ಕ್ಕಿಂತ ಈಚಿನವನು. ಕ್ರಿ.ಶ. ೧೭ನೆಯ ಶತಮಾನದ ಜಗನ್ನಾಥನು ಅಪ್ಪಯ್ಯದೀಕ್ಷಿತನನ್ನು ಉಗ್ರವಾಗಿ ಖಂಡಿಸಿದ್ದಾನೆ. ನೀಲಕಂಠವಿಜಯಚಂಪುವಿನ (ಕ್ರಿ.ಶ. ೧೬೩೭) ಕರ್ತೃವಾದ ನೀಲಕಂಠದೀಕ್ಷಿತನನ್ನು ಅವನಿಗೆ ಹನ್ನೆರಡು ವರ್ಷ ವಯಸ್ಸಾಗಿದ್ದಾಗ ಅಪ್ಪಯ್ಯದೀಕ್ಷಿತನು ಆಶೀರ್ವದಿಸಿದನೆಂಬ ಪ್ರವಾದವಿದೆ. ಪ್ರಥಮವೆಂಕಟನ ಕ್ರಿ.ಶ. ೧೬೦೧–೨ರ ಶಾಸನವು ದೊರೆತಿದೆ. ಶಿವಾನಂದಯತಿಯು ಅಪ್ಪಯ್ಯದೀಕ್ಷಿತನ ಆತ್ಮಾರ್ಪಣಸ್ತುತಿಗೆ ಬರೆದಿರುವ ವ್ಯಾಖ್ಯಾನವು ಅಪ್ಪಯ್ಯದೀಕ್ಷಿತನ ಜಾತಕವನ್ನು ತಿಳಿಸುತ್ತದೆ. ನೀಲಕಂಠದೀಕ್ಷಿತನ ಶಿವಲೀಲಾರ್ಣವ ಕಾವ್ಯವು ಅಪ್ಪಯ್ಯದೀಕ್ಷಿತನು ೭೨ ವರ್ಷಗಳ ಕಾಲ ಬದುಕಿದ ನೆಂದು ತಿಳಿಸುತ್ತದೆ—

ಕಾಲೇನ ಶಂಭುಃ ಕಿಲ ತಾವತಾಪಿ ಕಲಾಶ್ಚತುಷ್ಷಷ್ಟಿಮಿತಾಃ ಪ್ರಣಿನ್ಯೇ ।
ದ್ವಾಸಪ್ತತಿಂ ಪ್ರಾಪ್ಯ ಸಮಾಃ ಪ್ರಬಂಧಾಞ ಛತಂ ವ್ಯಧಾದಪ್ಪಯದೀಕ್ಷಿತೇಂದ್ರಃ ॥

ಈ ಮೇಲಿನ ಅಂಶಗಳಿಂದ ಅಪ್ಪಯ್ಯದೀಕ್ಷಿತನ ಕಾಲವನ್ನು ಕ್ರಿ.ಶ. ೧೫೫೪–೧೬೨೬ ಎಂದು ಸಾಮಾನ್ಯವಾಗಿ ಒಪ್ಪಲಾಗಿದೆ.

ಪ್ರಸಿದ್ಧ ವಿದ್ವಾಂಸನಾದ ಅಪ್ಪಯ್ಯದೀಕ್ಷಿತನು ನೂರಾರು ಗ್ರಂಥಗಳನ್ನು ರಚಿಸಿದ್ದಾನೆ; ಕವಿಯೂ ಶಾಸ್ತ್ರಕಾರನೂ ಆಗಿ ಶಾಶ್ವತಕೀರ್ತಿಯನ್ನು ಗಳಿಸಿದ್ದಾನೆ. ಅವನ ಕೃತಿಗಳು ವೃತ್ತಿ ವಾರ್ತಿಕ, ಕುವಲಯಾನಂದ, ಚಿತ್ರಮೀಮಾಂಸಗಳು ಅಲಂಕಾರ ಗ್ರಂಥಗಳು. ವೃತ್ತಿವಾರ್ತಿಕದಲ್ಲಿ ಮೂರು ಪರಿಚ್ಛೇದಗಳಿವೆ. ಅವುಗಳಲ್ಲಿ ಅಭಿಧಾ ಮತ್ತು ಲಕ್ಷಣಾ ಎಂಬ ಶಬ್ದಶಕ್ತಿಗಳನ್ನು ವಿವರಿಸಲಾಗಿದೆ.

ಕುವಲಯಾನಂದವು ಉಪಮಾ ಮುಂತಾದ ಅರ್ಥಾಲಂಕಾರಗಳನ್ನು ನಿರೂಪಿಸುವ ಒಂದು ಅಲಂಕಾರಗ್ರಂಥ. ಇದು ಚಂದ್ರಾಲೋಕದ ವ್ಯಾಖ್ಯಾನರೂಪವಾಗಿದೆ. ನೂರು ಅಲಂಕಾರ ಗಳಿಗೆ ಚಂದ್ರಾಲೋಕದ ಕಾರಿಕೆಗಳನ್ನೇ ಬಳಸಿಕೊಂಡು, ಹೊಸದಾಗಿ ಸೇರಿಸಿರುವ ಹದಿನೈದು ಅಲಂಕಾರಗಳಿಗೆ ಸ್ವಂತ ಕಾರಿಕೆಗಳನ್ನು ರಚಿಸಲಾಗಿದೆ. ಕುವಲಯಾನಂದದ ಕಾರಿಕೆಗಳಲ್ಲಿ ಲಕ್ಷ್ಯ ಲಕ್ಷಣಗಳೆರಡೂ ಬಂದಿವೆ. ಅಪ್ಪಯ್ಯದೀಕ್ಷಿತನು ವೆಂಕಟಪತಿಯ ಆಜ್ಞೆಯಿಂದ ಈ ಗ್ರಂಥವನ್ನು ರಚಿಸಿದುದಾಗಿ ಹೇಳಿಕೊಂಡಿದ್ದಾನೆ. ಅಪ್ಪಯ್ಯದೀಕ್ಷಿತನ ಶೈಲಿ ಮತ್ತು ವಿಷಯವನ್ನು ಪ್ರತಿಪಾದಿಸುವ ರೀತಿಗಳು ಆಕರ್ಷಕವಾಗಿವೆ. ಉದಾಹರಣೆಗಾಗಿ ಪ್ರಸಿದ್ಧ ಕೃತಿಗಳಿಂದ ಶ್ಲೋಕ ಗಳನ್ನು ಆಯ್ದುಕೊಳ್ಳಲಾಗಿದೆ. ಕುವಲಯಾನಂದದ ಕೆಲವು ಮುದ್ರಣಗಳಲ್ಲಿ ಚಿರಂಜೀವಿ ಭಟ್ಟಾಚಾರ್ಯನ ಕಾವ್ಯವಿಲಾಸದ ಶಬ್ದಾಲಂಕಾರಗಳನ್ನು ಸೇರಿಸಲಾಗಿದೆ.

ಚಿತ್ರಮೀಮಾಂಸೆಯು ಹೊಸ ಮಾದರಿಯ ಪ್ರೌಢ ಅಲಂಕಾರಗ್ರಂಥ. ಇದರಲ್ಲಿ ಮೊದಲು ಕಾರಿಕೆಗಳನ್ನು ಕೊಟ್ಟು ಅದರ ಕೆಳಗೆ ಗದ್ಯದಲ್ಲಿ ಇತರರ ಅಭಿಪ್ರಾಯಗಳನ್ನು ವಿಮರ್ಶಿಸಿ ತನ್ನ ಅಭಿಪ್ರಾಯವನ್ನು ನಿರೂಪಿಸಿದೆ. ಪ್ರಾರಂಭದಲ್ಲಿ ಧ್ವನಿ, ಗುಣೀಭೂತವ್ಯಂಗ್ಯ ಮತ್ತು ಚಿತ್ರಗಳೆಂಬ ಕಾವ್ಯವಿಧಗಳನ್ನು ತಿಳಿಸಿ, ತಾನು ಈ ಕೃತಿಯಲ್ಲಿ ಅರ್ಥಾಲಂಕಾರಗಳನ್ನು ಪ್ರತಿಪಾದಿಸುವುದಾಗಿ ಹೇಳಿದ್ದಾನೆ—

"ಶಬ್ದಚಿತ್ರಸ್ಯ ಪ್ರಾಯೋ ನೀರಸತ್ವಾನ್ನಾತ್ಯಂತಂ ತದಾದ್ರಿಯಂತೇ ಕವಯಃ, ನ ವಾ ತತ್ರ ವಿಚಾರಣೀಯಮತೀವೋಪಲಭ್ಯತ ಇತಿ ಶಬ್ದಚಿತ್ರಾಂಶಮಪಹಾಯಾರ್ಥಚಿತ್ರಮೀಮಾಂಸಾ ಪ್ರಸನ್ನವಿಸ್ತೀರ್ಣಾ ಪ್ರಸ್ತೂಯತೇ ।

ಚಿತ್ರಮೀಮಾಂಸೆಯ ಮುದ್ರಿತ ಪ್ರತಿಯಲ್ಲಿ ಉಪಮಾ, ಉಪಮೇಯೋಪಮಾ,ಅನನ್ವಯ ಮುಂತಾದ ಔಪಮ್ಯ ಮೂಲಕವಾದ ೨೨ ಅಲಂಕಾರಗಳು ಬಂದಿವೆ. ಅತಿಶಯೋಕ್ತಿಯ ಮಧ್ಯ ದಲ್ಲಿ ಕೃತಿಯು ನಿಂತುಹೋಗಿದೆ. ಚಿತ್ರಮೀಮಾಂಸೆಯ ಖಂಡನ ಗ್ರಂಥವಾದ ಜಗನ್ನಾಥನ ಚಿತ್ರಮೀಮಾಂಸಾಖಂಡನವೂ ಅಪಹ್ನುತಿಯವರೆಗೆ ದೊರೆತಿದೆ. ಅಲಂಕಾರ ನಿರೂಪಣೆಯ ಪ್ರಾರಂಭದಲ್ಲಿರುವ ಈ ಶ್ಲೋಕದಿಂದ ಕೃತಿಯು ಬೆಳೆದಿರುವ ರೀತಿಯನ್ನು ತಿಳಿದುಕೊಳ್ಳಬಹುದು.

ಉಪಮೈಕಾ ಶೈಲೂಷೀ ಸಂಪ್ರಾಪ್ತಾ ಚಿತ್ರಭೂಮಿಕಾಭೇದಾನ್ ।
ರಂಜಯಂತಿ ಕಾವ್ಯರಂಗೇ ನೃತ್ಯಂತೀ ತದ್ವಿದಾಂ ಚೇತಃ ॥

ಮುದ್ರಿತಪ್ರತಿಯ ಕೊನೆಯಲ್ಲಿರುವ ಈ ಪದ್ಯವು ಚಿತ್ರಮೀಮಾಂಸೆಯು ನೀಡುವ ಆನಂದ ವನ್ನು ತಿಳಿಸುತ್ತದೆ.

ಅಪ್ಯರ್ಥಚಿತ್ರಮೀಮಾಂಸಾ ನ ಮುದೇ ಕಸ್ಯ ಮಾಂಸಲಾ ।
ಅನೂರುರಿವ ಘರ್ಮಾಂಶೋರರ್ಧೇಂದುರಿವ ಧೂರ್ಜಟೇಃ ॥

ಅಪ್ಪಯ್ಯದೀಕ್ಷಿತನು ನಾಂದೀ, ಸೂತ್ರಧಾರ, ಪೂರ್ವರಂಗ ಮುಂತಾದ ನಾಟಕಾಂಶಗಳನ್ನು ವಿವರಿಸುವ 'ಲಕ್ಷಣರತ್ನಾವಲೀ' ಯೆಂಬ ಮತ್ತೊಂದು ಗ್ರಂಥವನ್ನು ರಚಿಸಿರುವುದಾಗಿ ತೋರುತ್ತದೆ.

## ಜಗನ್ನಾಥ

ಜಗನ್ನಾಥನ ತಂದೆ ಪೆರುಭಟ್ಟ ; ತಾಯಿ ಲಕ್ಷ್ಮೀ. ಇವನು ತೆಲಂಗಾಣದ ವೆಂಗಿನಾಡು (ವೆಂಗಿನಾಟ) ಬ್ರಾಹ್ಮಣಮನೆತನಕ್ಕೆ ಸೇರಿದವನು. ಇವನ ತಂದೆಯು ಅನೇಕ ಶಾಸ್ತ್ರಗಳನ್ನು

ಜಗನ್ನಾಥನು ಶಬ್ದಾರ್ಥಯುಗಲವನ್ನು ಕಾವ್ಯವೆಂದು ಒಪ್ಪುವುದಿಲ್ಲ. ಇವನು 'ರಮಣೀಯಾರ್ಥಪ್ರತಿಪಾದಕಃ ಶಬ್ದಃ ಕಾವ್ಯಂ' ಎಂದು ಕಾವ್ಯಲಕ್ಷಣವನ್ನು ಹೇಳಿದ್ದಾನೆ. 'ಕಾವ್ಯಘಟನಾನುಕೂಲಶಬ್ದಾರ್ಥೋಪಸ್ಥಿತಿ'ಯು ಪ್ರತಿಭೆ. ಈ ಪ್ರತಿಭೆಯೇ ಕಾವ್ಯರಚನೆಗೆ ಹೇತು. ಉತ್ತಮೋತ್ತಮ, ಉತ್ತಮ, ಮಧ್ಯಮ, ಅಧಮವೆಂದು ಕಾವ್ಯವು ನಾಲ್ಕುವಿಧ. ಜಗನ್ನಾಥನು ಗುಣಗಳು ಮೂರೆಂಬ ಮತವನ್ನೂ,ಹತ್ತೆಂಬ ಮತವನ್ನೂ ವಿವರಿಸಿದ್ದಾನೆ.

ಕ್ರಿ.ಶ. ೧೮ನೆಯ ಶತಮಾನದ ನಾಗೇಶಭಟ್ಟನು (ನಾಗೋಜಿಭಟ್ಟ) ರಸಗಂಗಾಧರಕ್ಕೆ 'ಮರ್ಮ ಪ್ರಕಾಶ'ವೆಂಬ ವ್ಯಾಖ್ಯಾನವನ್ನು, ಬರೆದಿದ್ದಾನೆ.

ಕ್ರಿ. ಶ. ೧೭ನೆಯ ಶತಮಾನದ ಕವಿಚಂದ್ರನು ಚಿಕಿತ್ಸಾರತ್ನಾವಲೀ, ಕಾವ್ಯಚಂದ್ರಿಕಾ ಎಂಬ ಅಲಂಕಾರಗ್ರಂಥಗಳನ್ನು ಬರೆದಿದ್ದಾನೆ. ಇವನು ಕಾವ್ಯಚಂದ್ರಿಕೆಯ ೧೫ ಪ್ರಕಾಶಗಳಲ್ಲಿ ಅಲಂಕಾರಶಾಸ್ತ್ರದ ಸುಮಾರು ಎಲ್ಲಾ ಅಂಶಗಳನ್ನೂ ಹೇಳಿದ್ದಾನೆ. ಶ್ವೇತಾಂಬರಜೈನರಾದ ಅರಿಸಿಂಹ ಮತ್ತು ಅಮರಚಂದ್ರರು 'ಕವಿತಾರಹಸ್ಯ'ವನ್ನೂ, ದೇವೇಶ್ವರನು 'ಕವಿಕಲ್ಪಲತಾ' ಎಂಬ ಗ್ರಂಥವನ್ನೂ ಬರೆದಿದ್ದಾರೆ. ಕ್ರಿ.ಶ. ೧೮ ಮತ್ತು ೧೯ನೆಯ ಶತಮಾನಗಳಲ್ಲಿ ರಚಿತವಾದ ಅಲಂಕಾರ ಗ್ರಂಥಗಳೂ ಇವೆ. ಕೇವಲ ಸಂಗೀತ ಮತ್ತು ಅಭಿನಯಗಳನ್ನು ಪ್ರತ್ಯೇಕವಾಗಿ ನಿರೂಪಿಸುವ ಗ್ರಂಥಗಳೂ ಇವೆ.

---

# ೨

# ವ್ಯಾಕರಣಶಾಸ್ತ್ರ

ಸಂಸ್ಕೃತಭಾಷೆಯ ವ್ಯಾಕರಣಶಾಸ್ತ್ರವು ಅತ್ಯಂತ ವಿಸ್ತೃತವೂ ತಲಸ್ಪರ್ಶಿಯೂ ಆಗಿ ಬೆಳೆದಿದೆ. ಭಾರತದೇಶವನ್ನು ಬಿಟ್ಟು ಜಗತ್ತಿನ ಇತರ ಯಾವ ಭಾಗದಲ್ಲಿಯೂ ವ್ಯಾಕರಣ ಶಾಸ್ತ್ರದ ಅಧ್ಯಯನ ಇಷ್ಟು ಆಳವಾಗಿಯೂ ಆಸಕ್ತಿ ಪೂರ್ಣವಾಗಿಯೂ ನಡೆದಿಲ್ಲ. ಸಂಸ್ಕೃತ ವ್ಯಾಕರಣದಲ್ಲಿ ಅನೇಕಶಾಖೆಗಳು. ಕ್ರಿ. ಶ. ೧೮ನೆಯ ಶತಮಾನದ ಅಂತ್ಯದವರೆಗೆ ಸುಮಾರು ೩೦೦ ಗ್ರಂಥಲೇಖಕರ ಹೆಸರು ದೊರೆಯುತ್ತದೆ. ಅವರು ರಚಿಸಿದ ಗ್ರಂಥಗಳ ಸಂಖ್ಯೆ ಒಂದು ಸಾವಿರವನ್ನು ಮೀರುತ್ತದೆ. ಇವುಗಳಲ್ಲಿ ಕೆಲವು ಮೂಲಗ್ರಂಥಗಳು. ಕೆಲವು ವ್ಯಾಖ್ಯಾನರೂಪ ವಾದವು. ಕೆಲವು ವ್ಯಾಕರಣದರ್ಶನಕ್ಕೆ ಸಂಬಂಧಿಸಿದವು. ಈ ಗ್ರಂಥಗಳ ಸಂಖ್ಯಾವಿಸ್ತಾರ ಮಾತ್ರವಲ್ಲ ಇವುಗಳಲ್ಲಿರುವ ಗಂಭೀರವಾದ ವಿಚಾರಪರಂಪರೆಗಳೂ ಭಾಷೆಯ ವೈಜ್ಞಾನಿಕ ವಿಶ್ಲೇಷಣ ವಿಧಾನಗಳೂ ಘನಿಷ್ಠವಾದ ದಾರ್ಶನಿಕ ಸಮಾಲೋಚನೆಗಳೂ ಅಚ್ಚರಿಯನ್ನುಂಟು ಮಾಡುತ್ತವೆ. ಅಮೂಲ್ಯವಾದ ಇಂಥ ಶಾಸ್ತ್ರಸಾಹಿತ್ಯದಿಂದ ಯಾವ ಜನಾಂಗವಾದರೂ ಹೆಮ್ಮೆ ಪಡಬಹುದು. ಆಧುನಿಕ ಭಾಷಾವಿಜ್ಞಾನಿಗಳು ತಮ್ಮ ಭಾಷಾಶಾಸ್ತ್ರಕ್ಕೆ ಈ ವ್ಯಾಕರಣಗ್ರಂಥಗಳಿಂದ ಮಹತ್ತರವಾದ ಉಪಕಾರವಾಗಿದೆಯೆಂದು ನಿಸ್ಸಂಕೋಚವಾಗಿ ತಿಳಿಸಿದ್ದಾರೆ.

## ವ್ಯಾಕರಣಶಾಸ್ತ್ರದ ಉದ್ಗಮ

ಸಂಸ್ಕೃತವ್ಯಾಕರಣಶಾಸ್ತ್ರದ ಉದ್ಗಮ ಯಾವಾಗ ಆಯಿತೆಂದು ನಿರ್ಧರಿಸುವುದು ಶಕ್ಯವಲ್ಲ. ಅತಿಪ್ರಾಚೀನವಾದ ಋಗ್ವೇದದಲ್ಲಿಯೇ ಇದಕ್ಕೆ ಸಂಬಂಧಿಸಿದ ಉಲ್ಲೇಖಗಳು ದೊರೆಯುತ್ತವೆ. ಪತಂಜಲಿ ತನ್ನ ಮಹಾಭಾಷ್ಯದ (ಕ್ರಿ. ಪೂ. ಸು. ೩ನೇ ಶತಮಾನ) ಆರಂಭದಲ್ಲಿ ಈ ಋಙ್ಮಂತ್ರಗಳಿಗೆ ವ್ಯಾಕರಣದ ಪರವಾಗಿ ಅರ್ಥ ಹೇಳಿದ್ದಾನೆ.

೧. ಚತ್ವಾರಿ ಶೃಂಗಾ ತ್ರಯೋ ಅಸ್ಯ ಪಾದಾಃ ... (ಋ. ೪–೫೮–೩)
೨. ಚತ್ವಾರಿ ವಾಕ್ ಪರಿಮಿತಾ ಪದಾನಿ ... (ಋ. ೧–೧೬೪–೪೫)
೩. ಉತತ್ವಃ ಪಶ್ಯನ್ನ ದದರ್ಶ ವಾಚಂ ... (ಋ. ೧೦–೭೧–೪)
೪. ಸಕ್ತುಮಿವ ತಿತಉನಾ ಪುನಂತೋ ... (ಋ. ೧೦–೭೦–೨)
೫. ಸುದೇವೋಽಸಿ ವರುಣ ... (ಋ. ೮–೬೯–೧೨)

ತೈತ್ತಿರೀಯಸಂಹಿತೆಯಲ್ಲಿ 'ವಾಗ್ವೈಪರಾಚ್ಯ ವ್ಯಾಕೃತಾವದತ್ । ತೇ ದೇವಾ ಇಂದ್ರಮಬ್ರುವನ್ ಇಮಾಂ ನೋ ವಾಚಂ ವ್ಯಾಕುರ್ವಿತಿ । ತಾಮಿಂದ್ರೋ ಮಧ್ಯತೋಽವಕ್ರಮ್ಯ ವ್ಯಾಕರೋತ್' (೬-೪-೭) ಎಂದು ಹೇಳಿದೆ. ಇಲ್ಲಿ "ತಾಮಖಂಡಾಂ ವಾಚಂ ಮಧ್ಯೇ ವಿಚ್ಛಿದ್ಯ ಪ್ರಕೃತಿ ಪ್ರತ್ಯಯವಿಭಾಗಂ ಸರ್ವತ್ರಾಕರೋತ್" ಎಂದು ಸಾಯಣ ಭಾಷ್ಯವಿದೆ. ಗೋಪಥಬ್ರಾಹ್ಮಣದಲ್ಲಿ ವ್ಯಾಕರಣಾಂತರ್ಗತವಾದ ಧಾತು, ಪ್ರಾತಿಪದಿಕ, ಮುಂತಾದ ಸಂಜ್ಞೆಗಳ ನಿರ್ದೇಶವಿದೆ।ಮೈತ್ರಾಯಣೀ ಸಂಹಿತೆಯಲ್ಲಿ ವಿಭಕ್ತಿಯ ಉಲ್ಲೇಖವಿದೆ (೧-೭-೩). ಐತರೇಯ ಬ್ರಾಹ್ಮಣದಲ್ಲಿರುವ "ಸಪ್ತಧಾ ವೈ ವಾಗವದತ್' (೭ ೭), ಎಂಬುದನ್ನು ವ್ಯಾಖ್ಯಾನಿಸುವಾಗ ಭಟ್ಟಭಾಸ್ಕರ ಭಾಷ್ಯದಲ್ಲಿ ಸಪ್ತಧಾ-ಎಂದರೆ 'ಸಪ್ತವಿಭಕ್ತಯಃ' ಎಂದು ಹೇಳಿದೆ. ವೈದಿಕ ಪದಪಾಠದ ಕಾಲದಲ್ಲಿಯೇ, ಪ್ರಕೃತಿ, ಪ್ರತ್ಯಯ, ಧಾತು-ಉಪಸರ್ಗ, ಸಮಾಸದ ಪೂರ್ವಪದ-ಉತ್ತರಪದಗಳ ವಿಭಾಗ ನಿರ್ಣೀತವಾಗಿತ್ತು ಕ್ರಿ ಪೂ. ೮೦೦ಕ್ಕೂ ಹಿಂದಿನ ಪ್ರಾತಿಶಾಖ್ಯಗಳಲ್ಲಿ, ಸಂಧಿ, ಣತ್ವ, ಷತ್ವ, ವಿಚಾರಗಳು ಆತ್ಮನೇಭಾಷ, ಪರಸ್ಮೈಭಾಷ ಮುಂತಾದ ಸಂಜ್ಞಾಶಬ್ದಗಳೂ ದೊರಕುತ್ತವೆ ಪ್ರಾತಿಶಾಖ್ಯಗಳು ಒಂದು ಬಗೆಯಲ್ಲಿ ವೈದಿಕವ್ಯಾಕರಣಗಳೆನ್ನಬಹುದು.

ನಿರುಕ್ತದಲ್ಲಿ ಹೇಳುವ ಶಬ್ದನಿರ್ವಚನವು ಧಾತು-ಪ್ರತ್ಯಯಗಳನ್ನು ಆಧರಿಸಿದೆಯೆಂಬುದು ಸ್ಪಷ್ಟ. ಯಾಸ್ಕನು (ಕ್ರಿ. ಪೂ. ಸು. ೭೦೦) ತನ್ನ ನಿರುಕ್ತದಲ್ಲಿ ನಾಮ, ಆಖ್ಯಾತ, ಉಪಸರ್ಗ, ನಿಪಾತಗಳೆಂಬ ನಾಲ್ಕು ಭೇದಗಳನ್ನು ಹೇಳಿದ್ದಾನೆ.[2] 'ಭಾವಪ್ರಧಾನಮಾಖ್ಯಾತಂ. ಸತ್ತ್ವ ನಾಮಾನಿ' ಎಂದು ನಾಮಾಖ್ಯಾತಗಳ ಲಕ್ಷಣವನ್ನು ಕೊಟ್ಟಿದ್ದಾನೆ. ಕೃತ್ತದ್ಧಿತಸಮಾಸಗಳನ್ನು ಉಲ್ಲೇಖಿಸಿದ್ದಾನೆ. ಸಕಲನಾಮಗಳೂ ಆಖ್ಯಾತಜನ್ಯಗಳೆಂಬ ನೈರುಕ್ತಸಮಯವನ್ನು ತಿಳಿಸಿದ್ದಾನೆ[4] ಯಾಸ್ಕನು ಸಾಮುದಾಯಿಕವಾಗಿ ವೈಯಾಕರಣರನ್ನೂ[5] ವೈಯಾಕರಣನಾದ ಶಾಕಟಾಯನ್ನನ್ನೂ ನಿರ್ದೇಶಿಸಿರುವುದರಿಂದ ನಿರುಕ್ತಕಾಲಕ್ಕೆ ಪೂರ್ವದಲ್ಲಿಯೇ ವ್ಯಾಕರಣವು ಶಾಸ್ತ್ರೀಯ ವಿಧಾನದಿಂದ ಕ್ರಮಬದ್ಧವಾಗಿ ರೂಪಿತವಾಗಿತ್ತೆಂದು ಹೇಳಬಹುದು.

---

೧ ಓಂಕಾರಂ ಪೃಚ್ಛಾಮಃ, ಕೋ ಧಾತುಃ ಕಿಂ ಪ್ರಾತಿಪದಿಕಂ, ಕಿಂ ನಾಮಾಖ್ಯಾತಂ, ಕಿಂ ಲಿಂಗಂ, ಕಿಂ ವಚನಂ, ಕಾ ವಿಭಕ್ತಿಃ, ಕಃ ಪ್ರತ್ಯಯಃ, ಕಃ ಸ್ವರ ಉಪಸರ್ಗೋ ನಿಪಾತಃ, ಕಿಂ ವೈವ್ಯಾಕರಣಂ, ಕೋ ವಿಕಾರಃ, ಕೋ ವಿಕಾರೀ, ಕತಿ ಮಾತಃ, ಕತಿವರ್ಣಃ, ಕತ್ಯಕ್ಷರಃ ಕತಿ ಪದಃ, ಕಃ ಸಂಯೋಗಃ, ಕಿಂ ಸ್ಥಾನನಾದಾನುಪ್ರದಾನಾನುಕರಣಂ .. (ಗೋ. ಬ್ರಾ. ಪೂ. ೧-೨೦)

೨ ತದ್ಯಾನ್ಯೇತಾನಿ ಚತ್ವಾರಿ ಪದಜಾತಾನಿ ನಾಮಾಖ್ಯಾತೇ ಚೋಪಸರ್ಗನಿಪಾತಾಶ್ಚ ತಾನೀಮಾನಿ ಭವಂತಿ (ನಿರು. ೧-೧-೮)

೩ ನಿರು. ೨-೨-೬; ೨-೨-೧೦

೪ ಆಖ್ಯಾತಜಾನೀತಿ ಶಾಕಟಾಯನಃ ನೈರುಕ್ತಸಮಯಶ್ಚ (ನಿರು. ೧-೧೨-೨).

೫ ನ ಸರ್ವಾಣೀತಿ ಗಾರ್ಗ್ಯೋ ವೈಯಾಕರಣಾನಾಂ ಚೈಕೇ (ನಿರು. ೧-೧೨-೨)

ನಿರುಕ್ತಕಾರನಾದ ಯಾಸ್ಕನು (ಕ್ರಿ. ಪೂ. ೮೦೦ ರಿಂದ ೭೦೦) ಬಳಸಿರುವ ಕೆಲವು ಸಂಜ್ಞಾಶಬ್ದಗಳು ಪಾಣಿನಿಯ ಅಷ್ಟಾಧ್ಯಾಯಿಯಲ್ಲಿ ಬೇರೆಯಾಗಿವೆ. ಉದಾಹರಣೆಗೆ,

| | |
|---|---|
| ನಿರುಕ್ತ | ಅಷ್ಟಾಧ್ಯಾಯೀ |
| ಕಾರಿತ | ಣಿಜಂತ |
| ಚರ್ಕರೀತ | ಯಙ್ಲುಗಂತ |
| ಚಿಕೀರ್ಷಿತ | ಸನ್ನಂತ |
| ವ್ಯಂಜನ | ವಿಶೇಷಣ |

ಅಲ್ಲದೆ ಪ್ರಥಮಾ, ದ್ವಿತೀಯಾದಿ ವಿಭಕ್ತಿಗಳು, ಸಮಾಸ, ಅವ್ಯಯೀಭಾವ, ತತ್ಪುರುಷ ಮೊದಲಾದುವು, ಕೃತ್, ತದ್ಧಿತುಮುಂತಾದವು ಪ್ರಾಚೀನ ಸಂಜ್ಞೆಗಳಾಗಿದ್ದು ಪಾಣಿನಿಯು ಅವುಗಳನ್ನು ಬಳಸಿಕೊಂಡಿದ್ದಾನೆ. ತದಶಿಷ್ಯಂ ಸಂಜ್ಞಾಪ್ರಮಾಣತ್ವಾತ್ (ಅಷ್ಟಾ. ೧-೨-೫೩), ಮುಂತಾದ ಸೂತ್ರಗಳೂ ಸಹ ಪಾಣಿನಿಗಿಂತ ಮೊದಲು ವೈಯಾಕರಣರಿದ್ದರೆಂಬುದನ್ನು ಸ್ಪಷ್ಟಪಡಿಸುತ್ತವೆ. ಯಾಸ್ಕನಿಗೂ ಪಾಣಿನಿಗೂ ನಡುವೆ ಕೆಲವು ವೈಯಾಕರಣರು ಇದ್ದಿರಬೇಕೆಂದೂ ಅವರಿಬ್ಬರಿಗೆ ಕನಿಷ್ಠ ೨೦೦ ವರ್ಷಗಳ ಅಂತರವಿದ್ದಿರಬೇಕೆಂದೂ ವಿದ್ವಾಂಸರ ಅಭಿಪ್ರಾಯವಿದೆ.

ಬೋಪದೇವನು ತನ್ನ ಕವಿಕಲ್ಪದ್ರುಮದಲ್ಲಿ,

ಇಂದ್ರಶ್ಚಂದ್ರಃ ಕಾಶಕೃತ್ಸ್ನಾಪಿಶಲೀ ಶಾಕಟಾಯನಃ ।
ಪಾಣಿನ್ಯಮರ ಜೈನೇಂದ್ರಾ ಜಯಂತ್ಯಷ್ಟಾದಿಶಾಬ್ದಿಕಾಃ ॥

ಎಂದು ಎಂಟು ಜನರನ್ನು 'ಆದಿಶಾಬ್ದಿಕರು' ಎಂದು ಹೇಳಿದ್ದಾನೆ. ಇವುಗಳಲ್ಲಿ ಐಂದ್ರಶಾಖೆ ಉಪಲಬ್ಧವಿಲ್ಲ, ವರರುಚಿ, ವ್ಯಾಡಿ, ಇಂದ್ರದತ್ತರು ಇಂದ್ರಶಾಖೆಯವರೆಂದು ಕಥಾಸರಿತ್ಸಾಗರದಲ್ಲಿ ಹೇಳಿದೆ. ಕಾಲಾಪ (ಕಾತಂತ್ರ) ವು ಐಂದ್ರಶಾಖೆಯದೆಂದು ಪಂ॥ ತಾರಾನಾಥರ ಅಭಿಪ್ರಾಯವಿದೆ. ಕಚ್ಚಾಯನನ ಪಾಳಿವ್ಯಾಕರಣವೂ, ಪ್ರಾತಿಶಾಖ್ಯಗಳೂ ಐಂದ್ರವ್ಯಾಕರಣಾನುಸಾರಿಗಳೆಂದು ಡಾ॥ ಬರ್ನೆಲ್ ಅವರು ಹೇಳುತ್ತಾರೆ. ಚಂದ್ರನೆಂದರೆ ಚಂದ್ರಗೋಮಿಯೇ. ಕಾಶಕೃತ್ಸ್ನ, ಆಪಿಶಲಿ, ಶಾಕಟಾಯನರ ಗ್ರಂಥ ದೊರಕಿಲ್ಲ ಕಾಶಿಕಾಕಾರನಿಗೂ ಕೈಯಟನಿಗೂ ಇವುಗಳ ಪರಿಚಯವಿತ್ತೆಂದು ಊಹಿಸಬಹುದಾಗಿದೆ[1] ಇನ್ನು ಅಮರಜೈನೇಂದ್ರರು ಪಾಣಿನಿಯ ಅನಂತರದವರು. ಅಮರನ ವ್ಯಾಕರಣ ನಮಗೆ ದೊರಕಿಲ್ಲ.

---

೧ ಕಾಶಿಕಾ (೪-೨-೬೫, ೫-೧-೫೮). ಕೈಯಟ (೫-೧-೨೧)

## ವ್ಯಾಕರಣಶಾಸ್ತ್ರದ ಪ್ರಯೋಜನ

ಪ್ರಯೋಗಾರ್ಹವಾದ ಸಾಧುಶಬ್ದಗಳನ್ನು ತಿಳಿಯುವುದೇ ವ್ಯಾಕರಣದಿಂದಾಗುವ ಮುಖ್ಯ ಪ್ರಯೋಜನ ಅಪಾರವಾದ ವ್ಯಾಙ್ಮಯದಲ್ಲಿ ಅಸಂಖ್ಯಾತವಾಗಿರುವ ನಾಮಪದಗಳನ್ನು ಕ್ರಿಯಾಪದಗಳನ್ನು ಪ್ರಯೋಗಭೇದಗಳನ್ನು ಅವುಗಳಿಂದ ತೋರುವ ಅರ್ಥವಿಶೇಷಣಗಳನ್ನು ಅರಿಯಲು ವ್ಯಾಕರಣವೇ ಮುಖ್ಯಸಾಧನ. ಭಾಷೆಯನ್ನು ವಿವಿಧವಿಕಾರಗಳಿಗೆ ಈಡುಮಾಡದೆ ಅದರ ಸ್ವರೂಪವನ್ನು ವ್ಯವಸ್ಥಿತ ರೀತಿಯಲ್ಲಿ ಉಳಿಸಿಕೊಳ್ಳಬಲ್ಲದ್ದು ವ್ಯಾಕರಣವೇ, ಇವಲ್ಲದೆ ರಕ್ಷಾ, ಊಹ, ಆಗಮ, ಲಾಘವ, ಅಸಂದೇಹ–ಎಂಬಿವು ವ್ಯಾಕರಣಶಾಸ್ತ್ರದ ಪ್ರಯೋಜನ ಗಳೆಂದು ಮಹಾಭಾಷ್ಯದಲ್ಲಿ ಹೇಳಿದೆ,[1] ಸಂಕ್ಷಿಪ್ತವಾದ ಇದರ ವಿವರಣೆ ಹೀಗೆ–

೧. ರಕ್ಷಾ :– ರಕ್ಷೆಯೆಂದರೆ ವೇದರಕ್ಷಣೆ. ಲೋಕದಲ್ಲಿ ಕಂಡುಬರುವ ಅನೇಕ ಶಬ್ದ ರೂಪಗಳು ವೇದದಲ್ಲಿವೆ. ಉದಾಹರಣೆಗೆ–

| ವೇದದಲ್ಲಿ | ಲೋಕದಲ್ಲಿ |
|---|---|
| ಅದುಹ್ರ | ಅದುಹತ |
| ನಿಗ್ರಾಭಃ | ನಿಗ್ರಾಹಃ |
| ಕರ್ಣೇಭಿಃ | ಕರ್ಣೈಃ |
| ಸಂತು ಪಂಥಾಃ | ಸಂತು ಪಂಥಾನಃ |

ಪಾಣಿನಿಯ ವ್ಯಾಕರಣದಲ್ಲಿ ಈ ವೈದಿಕ ಶಬ್ದಗಳ ನಿಷ್ಪತ್ತಿಯನ್ನು ಹೇಳಿದೆ. ವ್ಯಾಕರಣ ವನ್ನು ಸರಿಯಾಗಿ ತಿಳಿದವರು ಇವು ಅಪಶಬ್ದಗಳೆಂದು ತಿದ್ದಿಬಿಡಬಹುದು. ಆಗ ವೇದದ ಆನು ಪೂರ್ವಿ ವ್ಯತ್ಯಾಸಗೊಂಡಿತು. ಹಾಗಾಗದಂತೆ ರಕ್ಷಿಸುವುದು ವ್ಯಾಕರಣಶಾಸ್ತ್ರದ ಒಂದು ಪ್ರಯೋಜನ.

೨ ಊಹ :—ಯಾಗಪ್ರಕರಣದಲ್ಲಿ ಇದರ ಉಪಯೋಗ ಉಂಟು. ಉದಾ :–'ಅಗ್ನಯೇ ತ್ವಾಜುಷ್ಟಂ ನಿರ್ವಪಾಮಿ' ಎಂಬ ಮಂತ್ರವಿದೆ, ಇದು ಅಗ್ನಿಗೆ ಚರುವನ್ನರ್ಪಿಸುವಾಗ ಹೇಳುವ ಮಂತ್ರ. ಸೂರ್ಯನಿಗೆ ಚರುವನ್ನರ್ಪಿಸುವಾಗ ಇದನ್ನು ಯೋಗ್ಯರೀತಿಯಲ್ಲಿ ಊಹಿಸಿ ಮಾರ್ಪಡಿಸಬೇಕು. 'ಅಗ್ನಯೇ' ಎಂಬುದನ್ನು 'ಸೂರ್ಯಾಯ' ಎಂದು ಊಹಿಸಬೇಕು. ಈ ಊಹೆ ವ್ಯಾಕರಣಜ್ಞಾನದಿಂದ ಸಾಧ್ಯ.

---

೧ ರಕ್ಷೋಹಾಗಮಲಘ್ವಸಂದೇಹಾಃಪ್ರಯೋಜನಮ್ (ಪಸ್ಪಶಾಹ್ನಿಕ)

೩. ಆಗಮ : ಆಗಮವೆಂದರೆ ಶಾಸ್ತ್ರ. ವೇದವನ್ನು ಷಡಂಗಸಹಿತವಾಗಿ ಕಲಿಯಬೇಕೆಂದು ಶಾಸ್ತ್ರವಿಧಿಯುಂಟು, ವ್ಯಾಕರಣವು ಷಡಂಗಗಳಲ್ಲೊಂದು ಇದನ್ನು ಕಲಿಯಬೇಕೆಂದು ಶಾಸ್ತ್ರವಚನ ವಿರುವುದರಿಂದ ವ್ಯಾಕರಣವು ಪ್ರಯೋಜನ. ಇಲ್ಲಿ ಪ್ರಯೋಜನವೆಂದರೆ ಫಲವೆಂದು ಅರ್ಥವಲ್ಲ. ಪ್ರಯೋಜಕ-ಪ್ರವರ್ತಕ ಎಂದರ್ಥ, ಪ್ರಯೋಜಕವಾದ ಆಗಮವು ಸಾರ್ಥಕವಾಗಬೇಕಾದರೆ ವ್ಯಾಕರಣ ಆವಶ್ಯಕ.

೪. ಲಾಘವ (ಲಘು)-ವಿಪುಲವಾದ ಶಬ್ದರಾಶಿಯನ್ನರಿಯಲು ವ್ಯಾಕರಣವೇ ಲಘುವಾದ ಉಪಾಯ. ಈ ಲಾಘವ ವ್ಯಾಕರಣದಿಂದಾಗುತ್ತದೆ.

೫. ಅಸಂದೇಹ-ಕರ್ಮಧಾರಯ, ಬಹುವ್ರೀಹಿ-ಮುಂತಾದ ಸಮಾಸಭೇದಗಳಿಂದ ಶಬ್ದಾರ್ಥವು ವಿಭಿನ್ನವಾಗುತ್ತದೆ. ಪೀತಾಂಬರ ಶಬ್ದದಲ್ಲಿ ಕರ್ಮಧಾರಯವಾದರೆ ಪೀತವಾದ ಅಂಬರವೆಂದೂ (ಪೀತಂ ಚ ತತ್ ಅಂಬರಂ ಚ), ಬಹುವ್ರೀಯಾದರೆ ಪಿತಾಂಬರಧಾರಿಯೆಂದೂ (ಪೀತ ಮಂಬರಂ ಯಸ್ಯ ಸಃ) ಅರ್ಥವಾಗುತ್ತದೆ. ಈ ಸಮಾಸಗಳಿಗೆ ಉದಾತ್ತಾದಿಸ್ವರಗಳು ಬೇರೆಬೇರೆಯಾಗುತ್ತವೆ. ಸ್ವರದಿಂದ ಯಾವ ಸಮಾಸವೆಂದು ನಿರ್ಣಯಿಸಿ ಸಂದೇಹಕ್ಕೆ ಎಡೆಯಿಲ್ಲ ದಂತೆ, ಅರ್ಥವನ್ನು ತಿಳಿಯಲು ವ್ಯಾಕರಣದಿಂದ ಸಾಧ್ಯ.

ಮೇಲ್ಕಂಡ ರಕ್ಷೋಹಾದಿಪ್ರಯೋಜನಗಳಲ್ಲಿ ಲಾಘವಮಾತ್ರವೇ ಲೋಕದಲ್ಲಿ ಪ್ರಯೋಜನ. ಉಳಿದವು ವೇದಕ್ಕೆ ಸಂಬಂಧಿಸಿದವು. ಇವಲ್ಲದೆ ಇನ್ನೂ ಕೆಲವು ಆನುಷಂಗಿಕ ಪ್ರಯೋಜನಗಳನ್ನು ಪಂತಜಲಿ ಹೇಳಿದ್ದಾನೆ. ವ್ಯಾಕರಣಜ್ಞಾನವಿಲ್ಲದ್ದರಿಂದಾಗುವ ಯಾವ ಅನರ್ಥಗಳುಂಟೋ ಅವುಗಳ ನಿವಾರಣೆಯೇ ಈ ಪ್ರಯೋಜನಗಳು. ಅಪಶಬ್ದಗಳನ್ನು ಬಳಸಿದರೆ ಜನರು ನಿಂದ್ಯ ರಾಗುತ್ತಾರೆ. ಅಪಶಬ್ದಗಳಿಂದ ವಿರುದ್ಧಾರ್ಥವು ತೋರಿ ಅನರ್ಥವುಂಟಾಗುತ್ತದೆ. ಅರ್ಥಜ್ಞಾನ ವಿಲ್ಲದೆ ವೇದಾಧ್ಯಯನವು ನಿರರ್ಥಕವಾಗುತ್ತದೆ. ಅಪಶಬ್ದದ ಪ್ರಯೋಗದಿಂದ ಅಧರ್ಮವುಂಟಾ ಗುತ್ತದೆ-ಇತ್ಯಾದಿ. ಇವುಗಳ ನಿವಾರಣೆ ವ್ಯಾಕರಣದ ಪ್ರಯೋಜನಗಳು.

## ವ್ಯಾಕರಣ ದರ್ಶನ

ಭಾಷೆಯಲ್ಲಿರುವ ಪದಗಳ ಸರಿಯಾದ ರೂಪವನ್ನು ನಿರ್ಣಯಿಸಿ ಭಾಷೆಯು ವಿಕೃತವಾಗ ದಂತೆ ರಕ್ಷಿಸುವುದೇ ವ್ಯಾಕರಣಶಾಸ್ತ್ರದ ಮುಖ್ಯ ಉದ್ದೇಶವಾದರೂ ಭಾರತೀಯ ವೈಯಾಕರಣರ ಚಿಂತನ ಇನ್ನೂ ಮುಂದಕ್ಕೆ ಸಾಗಿದೆ. ಶಬ್ದದ ತಾತ್ತ್ವಿಕಸ್ವರೂಪ, ಅರ್ಥ, ಶಬ್ದಾರ್ಥಗಳಿಗಿರುವ ಪರಸ್ಪರ ಸಂಬಂಧ-ಇವೂ ಚಿಂತನಕ್ಕೆ ವಿಷಯಗಳಾದವು. ಶಬ್ದವೆಂದರೇನು? ಅದು ನಿತ್ಯವೆ ಅನಿತ್ಯವೆ ? ಪ್ರಕೃತಿಪ್ರತ್ಯಯವಿಭಾಗ ವಾಸ್ತವವೇ ?- ಕೃತಕವೇ? ಶಬ್ದದಲ್ಲಿ ಎಷ್ಟು ಪ್ರಕಾರಗಳು ? ಶಬ್ದಕ್ಕೂ ಅರ್ಥಕ್ಕೂ ಇರುವ ಸಂಬಂಧಯಾವುದು? ಕ್ರಿಯಾ ಕಾಲ ಸಂಖ್ಯಾ, ಮೊದಲಾದ

ಅರ್ಥಗಳಲ್ಲಿ ಪ್ರಕೃತಿಯ ಅರ್ಥ ಯಾವುದು? ಪ್ರತ್ಯಯದ ಅರ್ಥ ಯಾವುದು? ಕ್ರಿಯಾಕಾಲಾದ್ಯರ್ಥಗಳ ಸ್ವರೂಪವೇನು?–ಇತ್ಯಾದಿ ವಿಷಯಗಳು ಚಿಂತನೆಗೆ ಒಳಗಾದವು, ಇದರಿಂದಾಗಿ ವ್ಯಾಕರಣಶಾಸ್ತ್ರದಲ್ಲಿ ದಾರ್ಶನಿಕ ವಿಚಾರಗಳು ಬೆಳೆದವು.

ವ್ಯಾಕರಣದರ್ಶನವು ಪಾಣಿನಿಗಿಂತ ಹಿಂದಿನದು. ಯಾಸ್ಕನ ನಿರುಕ್ತದಲ್ಲಿ ಶಬ್ದವು ನಿತ್ಯವೆ–ಅನಿತ್ಯವೆ ಎಂಬ ವಿಚಾರವಿದೆ, ಭಾವಪ್ರಧಾನಮಾಖ್ಯಾತಂ ಸತ್ತ್ವಪ್ರಧಾನಾನಿ ನಾಮಾನಿ' ಎಂಬ ಯಾಸ್ಕೋಕ್ತಿಯು ದಾರ್ಶನಿಕ ವಿಚಾರವನ್ನು ಒಳಗೊಂಡಿದೆ. ಪಾಣಿನಿಯ ಸೂತ್ರಗಳಲ್ಲಿ ದರ್ಶನಾಂಶವು ಸೂಕ್ಷ್ಮವಾಗಿಯೂ, ಕಾತ್ಯಾಯನನ ವಾರ್ತಿಕಗಳಲ್ಲಿ ಸ್ಫುಟವಾಗಿಯೂ ಗೋಚರಿಸುತ್ತವೆ. ವ್ಯಾಡಿಯ ಲಕ್ಷಶ್ಲೋಕಾತ್ಮಕವಾದ ಸಂಗ್ರಹವು ಉಪಲಬ್ಧವಾಗಿಲ್ಲದಿದ್ದರೂ ಅದು ದಾರ್ಶನಿಕ ಗಂಥವೇ ಆಗಿರಬೇಕು. ಪತಂಜಲಿ ತನ್ನ ಮಹಾಭಾಷ್ಯದಲ್ಲಿ ಹಲವಾರು ಇಂಥ ವಿಚಾರಗಳನ್ನು ಪ್ರಸ್ತಾಪಿಸಿದ್ದಾನೆ. ಇವೆಲ್ಲವನ್ನೂ ಕ್ರೋಢೀಕರಿಸಿ ವ್ಯವಸ್ಥಿತರೂಪದಲ್ಲಿ ವ್ಯಾಕರಣದರ್ಶನವನ್ನು ಪ್ರತಿಷ್ಠಾಪಿಸಿದ ಕೀರ್ತಿ ಭರ್ತೃಹರಿಗೆ (ಕ್ರಿ. ಶ. ಸು ೪೦೦) ಸಲ್ಲುತ್ತದೆ. ಈತನ ವಾಕ್ಯಪದೀಯವು ಇಂದಿನ ವ್ಯಾಕರಣದರ್ಶನಕ್ಕೆ ಆಕರ ಗ್ರಂಥವಾಗಿದೆ. ಅನಂತರ ಈ ದರ್ಶನದ ವಿವರಣಕಾರರಲ್ಲಿ ವೃಷಭದೇವ, ಪುಣ್ಯರಾಜ, ಹೇಲಾರಾಜ, ಮಂಡನಮಿಶ್ರ, ಭಟ್ಟೋಜಿದೀಕ್ಷಿತ, ಕಾಂಡಭಟ್ಟ, ನಾಗೇಶಭಟ್ಟರು ಪ್ರಮುಖರು, ಅಲ್ಲದೆ ಸಾಯಣಾಚಾರ್ಯರು ಸರ್ವದರ್ಶನಸಂಗ್ರಹದಲ್ಲಿ ಪಾಣಿನೀಯದರ್ಶನ' ಎಂಬ ಹೆಸರಿಂದ ವ್ಯಾಕರಣದರ್ಶವನ್ನು ಪ್ರತಿಪಾದಿಸಿದ್ದಾರೆ. ಪಾಣಿನಿಯ ಶಾಖೆಯಲ್ಲಿ ಮಾತ್ರ ಈ ದಾರ್ಶನಿಕಾಂಶಗಳು ವಿಕಾಸಗೊಂಡಿವೆಯೆಂಬುದೂ ಇತರ ಶಾಖೆಗಳಲ್ಲಿ ವ್ಯಾಕರಣಶಾಸ್ತ್ರವು ಶಬ್ದಪ್ರಕ್ರಿಯಾ ಭಾಗಕ್ಕೆ ಮಾತ್ರ ಸೀಮಿತವಾಗಿದೆಯೆಂಬುದೂ ಗಮನಿಸಬೇಕಾದದ್ದು.

ವ್ಯಾಕರಣದರ್ಶನಕ್ಕೆ ವೇದವೇ ಮೂಲವಾಗಿದೆ. 'ಓಮಿತ್ಯೇತದಕ್ಷರಮಿದಂ ಸರ್ವಂವಾಗೇವ ವಿಶ್ವಾ ಭುವನಾನಿ ಜಜ್ಞೇ, ಓಂಕಾರ ಏವ ಸರ್ವಾ ವಾಕ್। ಸೈಷಾ ಸ್ಪರ್ಶೋಷ್ಮಭಿರ್ವ್ಯಜ್ಯಮಾನಾ ನಾನಾರೂಪಾ ಭವತಿ, ವಾಚಂ ಧೇನುಮುಪಾಸೀತ' ಮುಂತಾದ ಶ್ರುತಿವಾಕ್ಯಗಳಿಂದ ಈ ದರ್ಶನವು ರೂಪಿತವಾಗಿದೆ.

ಶಬ್ದವೇ ಬ್ರಹ್ಮ. ಅದು ಉತ್ಪತ್ತಿವಿನಾಶವಿಲ್ಲದ್ದು. ಅಖಂಡವಾದದ್ದು. ಅದರಿಂದ ವಿಶ್ವದ ಸೃಷ್ಟಿಯಾಗಿದೆ. ၊ ಯಾವುದನ್ನು ಜನರು ಉಚ್ಚರಿಸುತ್ತಾರೋ ಲೋಕದಲ್ಲಿ ಶಬ್ದವೆಂದು ವ್ಯವಹರಿಸುತ್ತಾರೋ, ಯಾವುದನ್ನು ಶ್ರೋತ್ರಗ್ರಾಹ್ಯವೆಂದು ಆಕಾಶದ ಗುಣವೆಂದೂ ತಾರ್ಕಿಕರು ಹೇಳುತ್ತಾರೋ ಅದು ವೈಯಾಕರಣದ ಶಬ್ದಬ್ರಹ್ಮವಲ್ಲ. ಲೌಕಿಕರೂ ತಾರ್ಕಿಕರೂ ಶಬ್ದವೆನ್ನುವುದು ವೈಖರೀನಾದವನ್ನು ಶಬ್ದಬ್ರಹ್ಮವಾದರೋ ವೈಖರೀನಾದದಿಂದ ಅಭಿವ್ಯಂಗ್ಯ

---

೧ ಅನಾದಿನಿಧನಂ ಬ್ರಹ್ಮ ಶಬ್ದತತ್ತ್ವಂ ಯದಕ್ಷರಂ ।
ವಿವರ್ತತ್ಯೇರ್ಥಭಾವೇನ ಪ್ರಕ್ರಿಯಾ ಜಗತೋ ಯತಃ ।

ವಾಗಿರುತ್ತದೆ. ವೈಖರೀನಾದವು ವರ್ಣಮಯವಾದದ್ದು. ವರ್ಣಗಳು ಹೇಗೆ ಜನಿಸುತ್ತವೆಯೆಂದರೆ : 'ಆತ್ಮನು ಬುದ್ಧಿಯೊಡಗೂಡಿ, ಹೇಳಬೇಕಾದ್ದನ್ನು ತಿಳಿದು, ಹೇಳುವ ಇಚ್ಛೆಯಿಂದ ಮನಸ್ಸನ್ನು ಪ್ರೇರೆಪಿಸುತ್ತಾನೆ ಮನಸ್ಸು ದೇಹಸ್ಥವಾದ ಅಗ್ನಿಯನ್ನು ಜೋಡಿಸುತ್ತದೆ. ಅದು (ಮೂಲಾಧಾರಚಕ್ರದಲ್ಲಿರುವ) ವಾಯುವನ್ನು ಪ್ರೇರಿಸುತ್ತದೆ. ಆ ವಾಯು ಕ್ರಮವಾಗಿ ಮೇಲೇರಿ ಮೂರ್ಧಸ್ಥಾನದಲ್ಲಿ ಅಭಿಹತವಾಗಿ ಬಾಯನ್ನು ಪ್ರವೇಶಿಸಿ ವರ್ಣಗಳನ್ನು ಉತ್ಪಾದಿಸುತ್ತದೆ.[1] ಕಂಠ, ತಾಲು, ಮೂರ್ಧ, ದಂತ, ಓಷ್ಠ, ನಾಸಿಕಾ, ಜಿಹ್ವಾಮೂಲ ಎಂಬ ಸ್ಥಾನಗಳಲ್ಲಿ ಬಾಹ್ಯ ಮತ್ತು ಅಭ್ಯಂತರ ಎಂಬ ಪ್ರಯತ್ನಗಳಿಂದ ವರ್ಣಗಳು ಹುಟ್ಟುತ್ತವೆ. ಸ್ಥಾನಭೇದ ಮತ್ತು ಪ್ರಯತ್ನ ಭೇದಗಳೇ ವಿಭಿನ್ನವರ್ಣಗಳ ಉತ್ಪತ್ತಿಗೆ ಕಾರಣ.

ಶಬ್ದಬ್ರಹ್ಮವು ವಿಭು. ಸರ್ವಗತವಾಗಿದ್ದರೂ ಮಾತನಾಡಲು ಇಚ್ಛೆಯಾದಾಗ, ಶಿಕ್ಷೆಯಲ್ಲಿ ಹೇಳಿದಂತೆ, ವಾಯು ಅದನ್ನು ಮೂಲಾಧಾರಚಕ್ರದಲ್ಲಿ ಅಭಿವ್ಯಕ್ತಗೊಳಿಸುತ್ತದೆ. ಮೂಲಾಧಾರದಲ್ಲಿರುವ ಶಬ್ದಕ್ಕೆ 'ಪರಾವಾಕ್' ಎಂದು ಹೆಸರು. ಇದು ಸ್ಪಂದಶೂನ್ಯ ನಿರ್ವಿಕಲ್ಪಕಸಮಾಧಿಯಲ್ಲಿರುವ ಯೋಗಿಗಳಿಗೆ ಮಾತ್ರ ಗೋಚರ. ಇದೇ ಶಬ್ದಬ್ರಹ್ಮ. ಆಮೇಲೆ ನಾಭಿಪರ್ಯಂತವಾಗಿ ಮೇಲೆದ್ದ ವಾಯುವಿನಿಂದ ಸಂಸ್ಕೃತವಾಗಿ ನಾಭಿಸ್ಥಾನದಲ್ಲಿ ವ್ಯಕ್ತವಾದಾಗ 'ಪಶ್ಯಂತಿ' ಎನಿಸಿಕೊಳ್ಳುತ್ತದೆ ಇವರಲ್ಲಿ ಕಿಂಚಿತ್ ಸ್ಪಂದ ಉಂಟು. ಇದು ಯೋಗಿಗಳ ಸವಿಕಲ್ಪಕ ಸಮಾಧಿಗೆ ಗೋಚರ. ಅನಂತರ ಹೃದಯಪರ್ಯಂತವಾಗಿ ಮೇಲೆದ್ದ ವಾಯುವಿನಿಂದ ನಾದಮಯವಾದ ವಾಕ್ ಅಭಿವ್ಯಕ್ತವಾಗಿ 'ಮಧ್ಯಮಾ' ಎನಿಸಿಕೊಳ್ಳುತ್ತದೆ. ಇದು ವಕ್ತೃವಿನ ಬುದ್ಧಿಗೆ ಗೋಚರವೂ ಸ್ಪಂದಯುಕ್ತವೂ ಆಗಿರುತ್ತದೆ. ಆಮೇಲೆ ಅದೇ ವಾಯು ಬಾಯನ್ನು ಪ್ರವೇಶಿಸಿ ಕಂಠತಾಲ್ವಾದಿಸ್ಥಾನಗಳನ್ನು ಅಲುಗಿಸಿ, ವೈಖರೀವಾಕ್ಕನ್ನು ಅಭಿವ್ಯಂಜಿಸುತ್ತದೆ. ಇದರಲ್ಲಿ ಸ್ಫುಟವಾದ ಸ್ಪಂದ ಉಂಟು. ದೀಪದಿಂದ ಪ್ರಭೆ ಹುಟ್ಟುವಂತೆ, ಮಧ್ಯಮಾ ವೈಖರಿಗಳಿಂದ ನಾದ ಹುಟ್ಟುತ್ತದೆ. ಪ್ರಭೆ ತನಗೆ ನಿಮಿತ್ತವಾದ ದೀಪವನ್ನು ಅಭಿವ್ಯಕ್ತಗೊಳಿಸುವಂತೆ ಈ ನಾದವು ಮಧ್ಯಮಾ ವೈಖರಿಗಳನ್ನು ಅಭಿವ್ಯಕ್ತಗೊಳಿಸುತ್ತದೆ. ನಾದದಿಂದ ವ್ಯಜ್ಯಮಾನವಾದ 'ಮಧ್ಯಮಾ ವಾಕ್' ಸ್ಫೋಟವೆನಿಸಿಕೊಳ್ಳುತ್ತದೆ. ಏಕೆಂದರೆ, ಇದರಿಂದ ವಕ್ತೃವಿಗೆ ಅರ್ಥಬೋಧವಾಗುತ್ತದೆ. ಯಾವುದರಿಂದ ಅರ್ಥಬೋಧವಾಗುವುದೋ ಅದು ಸ್ಫೋಟ[2] ವೈಖರೀ ನಾದದಿಂದ ಅದು ಸ್ಫುಟತರವಾಗಿ ಶ್ರೋತೃಗಳಿಗೆ ಅರ್ಥಬೋಧವನ್ನುಂಟುಮಾಡುತ್ತದೆ.

---

೧. ಆತ್ಮಾಬುದ್ಧ್ಯಾ ಸಮೇತ್ಯಾರ್ಥಾನ್ ಮನೋ ಯುಂಕ್ತೇ ವಿವಕ್ಷಯಾ ।
ಮನಃ ಕಾಯಾಗ್ನಿಮಾಹಂತಿ ಸ ಪ್ರೇರಯಂತಿ ಮಾರುತಂ ॥
ಸೋದೀರ್ಣೋ ಮೂರ್ಧ್ನ್ಯಭಿಹತೋ ವಕ್ತ್ರಮಾಪದ್ಯ ಮಾರುತಃ ।
ವರ್ಣಾನ್ ಜನಯಂತೇ...

ಪಾಣಿನೀಯಶಿಕ್ಷಾ

೨. ಸ್ಫುಟತ್ಯರ್ಥಃ ಅನೇನೇತಿ ಸ್ಫೋಟಃ–ಸ್ಫೋಟಯತ್ಯರ್ಥಮಿತಿ ವಾ ಸ್ಫೋಟಃ.

ಯಿಂದ ರಚಿತವಾದ ಉದ್ದಾಮ ಗ್ರಂಥಗಳು ಬೆಳೆದಿವೆ. ಪ್ರಕ್ರಿಯಾಭಾಗಕ್ಕೆ ಸಂಬಂಧಿಸಿದಂತೆ ಸೂತ್ರಾರ್ಥ ಮತ್ತು ಪರಿಭಾಷಾರ್ಥಗಳ ವಿಚಾರವಾಗಿಯೂ ಪ್ರೌಢಗ್ರಂಥಗಳು ವಿರಚಿಸಲ್ಪಟ್ಟಿವೆ. ಕ್ರಿ.ಪೂ.ಸು ೬ನೇ ಶತಮಾನದಿಂದ ಕ್ರಿ.ಶ. ೧೮ನೇ ಶತಮಾನದ ವರೆಗೆ ಸುಮಾರು ೨೪೦೦ ವರ್ಷಗಳ ಇತಿಹಾಸ ಸಂಸ್ಕೃತ ವ್ಯಾಕರಣಶಾಸ್ತ್ರಕ್ಕೆ ಇದೆ. ಈ ಕಾಲದಲ್ಲಿದ್ದ ಪ್ರಸಿದ್ಧ ವೈಯಾಕರಣರ ಮತ್ತು ಅವರ ಗ್ರಂಥಗಳ ಪರಿಚಯವನ್ನು ಈ ಪ್ರಬಂಧದಲ್ಲಿ ಸ್ಥೂಲವಾಗಿ ನಿರೂಪಿಸಲಾಗಿದೆ.

ನಮಗೆ ಪೂರ್ಣವಾಗಿ ಉಪಲಬ್ಧವಾಗಿರುವ ಅತ್ಯಂತ ಪ್ರಾಚೀನ ವ್ಯಾಕರಣವೆಂದರೆ ಪಾಣಿನಿಯ ಅಷ್ಟಾಧ್ಯಾಯಿ (ಕ್ರಿ.ಪೂ.ಸು. ೬೦೦). ಪಾಣಿನಿಗಿಂತ ಹಿಂದೆ ಅನೇಕ ವೈಯಾಕರಣರಿದ್ದರೆಂಬುದು ಅಷ್ಟಾಧ್ಯಾಯಿಯಿಂದ ಗೊತ್ತಾಗುತ್ತದೆ. ಪ್ರಾಚಾಂ, ಉದೀಚಾಂ, ಆಚಾರ್ಯಾಣಾಂ –ಎಂದು ಅವರ ಸಾಮಾನ್ಯನಿರ್ದೇಶವಲ್ಲದೆ ಹತ್ತುಜನ ವೈಯಾಕರಣರ ವಿಶೇಷನಿರ್ದೇಶವು ಅಷ್ಟಾಧ್ಯಾಯಿಯಲ್ಲಿದೆ. ಪಾಣಿನಿಯಿಂದ ಸ್ಮೃತರಾದ ಅವರು ಯಾರೆಂದರೆ : ಆಪಿಶಲಿ, ಕಾಶ್ಯಪ, ಗಾರ್ಗ್ಯ, ಗಾಲವ, ಚಾಕ್ರವರ್ಮಣ, ಭಾರದ್ವಾಜ, ಶಾಕಟಾಯನ, ಶಾಕಲ್ಯ, ಸೇನಕ ಮತ್ತು ಸ್ಫೋಟಾಯನ.

ಪಾಣಿನಿಯು ಉಲ್ಲೇಖಿಸದಿದ್ದರೂ ಇತರರು ಉಲ್ಲೇಖಿಸಿರುವ ಕೆಲವು ಪ್ರಾಚೀನ ವೈಯಾಕರಣರ ಹೆಸರು ನಮಗೆ ದೊರೆಯುತ್ತದೆ. ಉದಾ : ಭಾಗುರಿ, ಪೌಷ್ಕರಸಾದಿ, ಕುಣಿ, ಶಂತನು, ಕಾಶಕೃತ್ಸ್ನ, ಮಾಧ್ಯಂದಿನಿ, ರೌಢಿ, ಶೌನಕ, ಗೌತಮ ಮತ್ತು ವ್ಯಾಡಿ.

ವ್ಯಾಡಿಯು ಸಂಗ್ರಹವೆಂಬ ಲಕ್ಷಶ್ಲೋಕಾತ್ಮಕವಾದ ಗ್ರಂಥವನ್ನು ಬರೆದಿದ್ದನು[1]. ದಾಕ್ಷಾಯಣನೆಂದು ವ್ಯಾಡಿಯ ಗೋತ್ರನಾಮವಾಗಿತ್ತು[2]. ಇದು ವ್ಯಾಕರಣ ದರ್ಶನಕ್ಕೆ ಸಂಬಂಧಿಸಿದ ಗ್ರಂಥವಾಗಿರಬೇಕು. ಪುರುಷೋತ್ತಮದೇವನ ಭಾಷಾವೃತ್ತಿಯಲ್ಲಿ ಶಬ್ದಪ್ರಕ್ರಿಯೆಗೆ ಸಂಬಂಧಿಸಿದಂತೆ ವ್ಯಾಡಿಯ ಮತವು ಉಲ್ಲಿಖಿತವಾಗಿದೆ.[3] ಅಲ್ಲದೆ ವ್ಯಾಡಿಯು ಅಷ್ಟಾಧ್ಯಾಯಿಗೆ

---

೧ 1) ಸಂಗ್ರಹೇ ಏತತ್ ಪ್ರಾಧಾನ್ಯೇನ ಪರೀಕ್ಷಿತಂ–ನಿತ್ಯೋವಾ ಸ್ಯಾತ್ ಕಾರ್ಯೋವೇತಿ
—(ಮಹಾಭಾಷ್ಯ–ಪಸ್ಪಶಾಹ್ನಿಕ)

2) ಸಂಗ್ರಹೋ ವ್ಯಾಡಿಕೃತೋ ಲಕ್ಷಶ್ಲೋಕಸಂಖ್ಯೋ ಗ್ರಂಥ ಇತಿ ಪ್ರಸಿದ್ಧಿ :
—ನಾಗೇಶಭಟ್ಟ, ಉದ್ಯೋತ (ಪಸ್ಪಶಾಹ್ನಿಕ)

೨ 'ಶೋಭನಾ ಖಲು ದಾಕ್ಷಾಯಣಸ್ಯ ಸಂಗ್ರಹಸ್ಯ ಕೃತಿ :
—ಮಹಾಭಾಷ್ಯ, ೨–೩–೬೬

೩ ಇಕಾಂ ಯಣ್‌ಭಿರ್ವ್ಯವಧಾನಂ ವ್ಯಾಡಿಗಾಲವಯೋರಿತಿ ವಕ್ತವ್ಯಂ (೬–೧–೭೭)

ಒಂದು ವ್ಯಾಖ್ಯಾನವನ್ನು ಬರೆದಿದ್ದನೆಂದೂ ಊಹಿಸಲು ಆಧಾರ ಉಂಟು[1]. ಈತನ ಗ್ರಂಥ ಯಾವುದೂ ಉಪಲಬ್ಧವಾಗಿಲ್ಲ.

ಈ ವೈಯಾಕರಣರಲ್ಲಿ ಯಾರು ಪಾಣಿನಿಯಿಂದ ಸ್ಮೃತರಾಗಿರುವರೋ ಅವರು ಪ್ರಾಚೀನ ರೆನ್ನಬಹುದು. ಪಾಣಿನಿಯಿಂದ ಅನುಲ್ಲಿಖಿತರಾದವರಲ್ಲಿ ಅರ್ವಾಚೀನರೂ ಇರಬಹುದು. ಇವರಲ್ಲದೆ ಪ್ರಾತಿಶಾಖ್ಯಗಳಲ್ಲಿ ಸುಮಾರು ೪೦ ಆಚಾರ್ಯರ ಹೆಸರು ದೊರೆಯುತ್ತದೆ. ಅವರಲ್ಲಿ ಕೆಲವರಾದರೂ ವ್ಯಾಕರಣ ಗ್ರಂಥಗಳನ್ನು ರಚಿಸಿದವರಾಗಿರಬೇಕು. ವ್ಯಾಕರಣಶಾಸ್ತ್ರದ ಅಧ್ಯಯನದ ವ್ಯಾಪ್ತಿ ಎಷ್ಟು ವಿಶಾಲವಾಗಿತ್ತೆಂಬುದಕ್ಕೆ ಇದು ದಿಕ್ಸೂಚಿಯಾಗಿದೆ.

ಮಹಾಭಾಷ್ಯಕಾರನು ಗೌರವದಿಂದ ಉಲ್ಲೇಖಿಸುವ ವ್ಯಾಡಿಕೃತ ಸಂಗ್ರಹವು ಈಗನಷ್ಟ ವಾಗಿರುವುದು ವ್ಯಾಕರಣಶಾಸ್ತ್ರಕ್ಕೆ ದೊಡ್ಡ ಆಘಾತವೇ ಸರಿ. ಇದಕ್ಕಾಗಿಯೇ ಭರ್ತೃಹರಿಯು ವಾಕ್ಯಪದೀಯದಲ್ಲಿ.

ಪ್ರಾಯೇಣ ಸಂಕ್ಷೇಪರುಚೀನಲ್ಪವಿದ್ಯಾಪರಿಗ್ರಹಾನ್ ।
ಸಂಪ್ರಾಪ್ಯ ವೈಯಾಕರಣಾನ್ ಸಂಗ್ರಹೇಽಸ್ತಮುಪಾಗತೇ ॥

ಎಂದು ವಿಷಾದದಿಂದ ಈ ವಿಷಯವನ್ನು ಸ್ಮರಿಸಿದ್ದಾನೆ.

## ಪಾಣಿನಿಸಂಪ್ರದಾಯ

### ೧ ಪಾಣಿನಿ (ಕ್ರಿ. ಪೂ. ಸು. ೬೦೦)

ಅಷ್ಟಾಧ್ಯಾಯಿಯನ್ನು ರಚಿಸಿದ ಪಾಣಿನಿಯ ಕೀರ್ತಿ ಸಂಸ್ಕೃತವಾಙ್ಮಯದಲ್ಲಿ ಸುಪ್ರತಿಷ್ಠಿತ ವಾಗಿದೆ. ಅಷ್ಟಾಧ್ಯಾಯಿಯು ಭಾಷೆಗಳ ಇತಿಹಾಸದಲ್ಲಿ ಅಪೂರ್ವವೈಜ್ಞಾನಿಕರೀತಿಯಲ್ಲಿ ರಚಿಸಿದ ಶಾಸ್ತ್ರಗ್ರಂಥಗಳಲ್ಲಿ ಅಸದೃಶವೂ ಆಗಿದೆ. ತ್ರಿಕಾಂಡಶೇಷದಲ್ಲಿ ಪುರುಷೋತ್ತಮದೇವನು (ಕ್ರಿ. ಶ. ೧೨ನೆಯ ಶತಮಾನ) ಪಾಣಿನಿಗೆ ಆಹಿಕ, ದಾಕ್ಷೀಪುತ್ರ, ಪಾಣಿನ, ಶಾಲಂಕಿ, ಶಾಲಾ

---

೧ 1 ರಸಾಚಾರ್ಯಃ ಕವಿರ್ವ್ಯಾಡಿಃ ಶಬ್ದಬ್ರಹ್ಮೈಕವಾಙ್ಮುನಿಃ ।
ದಾಕ್ಷೀಪುತ್ರವಚೋವ್ಯಾಖ್ಯಾಪಟುರ್ಮೀಮಾಂಸಕಾಗ್ರಣೀ ॥
— ಸಮುದ್ರಗುಪ್ತನ ಕೃಷ್ಣಚರಿತಪ್ರಸ್ತಾವನೆ

2 ಶ್ವೋಭೂತಿವ್ಯಾಡಿಪ್ರಭೃತಯಃ 'ಶ್ಚ್ಯಕಃಕಿತಿ' (ಅಷ್ಟಾ. ೩) ಇತ್ಯತ್ರ ದ್ವಿಕಕಾರಕ ನಿರ್ದೇಶೇನ ಹೇತುನಾ ಚರ್ತ್ವಭೂತೋ ಗಕಾರಃ ಪ್ರಶ್ಲಿಷ್ಟ ಇತ್ಯಾಚಕ್ಷತೇ
— ನ್ಯಾಸ ೬–೨.೧೧

ತುರೀಯ–ಎಂಬ ಪರ್ಯಾಯ ನಾಮಗಳನ್ನು ತಿಳಿಸಿದ್ದಾನೆ. ಪಣಿನ್ ಎಂಬುವನ ವಂಶದವನು ಪಾಣಿನಿ ಅಥವಾ ಪಾಣಿನ ಇವನ ತಾಯಿ ದಾಕ್ಷೀ. ತಂದೆಯ ಹೆಸರು ಶಲಂಕು ಎಂದಿರ ಬೇಕು. ಶಾಲಾತುರ ಎಂಬ ಗ್ರಾಮ ಈತನ ಪೂರ್ವಜರ ವಾಸಸ್ಥಾನವಾದ್ದರಿಂದ ಇವನು ಶಾಲಾತುರೀಯ[1]. ಇದು ಈಗ ಪಾಕಿಸ್ತಾನದ ಪೆಶಾವರ್ ಜಿಲ್ಲೆಯಲ್ಲಿರುವ 'ಲಾಹುರ್' ಎಂಬ ಗ್ರಾಮ. ಶಾಲಾತುರದಲ್ಲಿ ಪಾಣಿನಿಯ ಸ್ಮಾರಕವಾಗಿ ಆತನ ಒಂದು ಪ್ರತಿಮೆ ಇತ್ತೆಂದು ಚೀನಯಾತ್ರಿಕ ಹೂಎನ್‌ತ್ಸಾಂಗನು (ಕ್ರಿ. ಶ. ೬೦೦) ಬರೆದಿದ್ದಾನೆ. ಪಂಚತಂತ್ರದಲ್ಲಿರುವ ಒಂದು ಕಥೆಯಲ್ಲಿ ಪಾಣಿನಿಯನ್ನು ಸಿಂಹವು ಕೊಂದಿತೆಂದು ಹೇಳಿದೆ.[2] ತ್ರಯೋದಶಿಯ ದಿನ ಪಾಣಿನಿಯು ಸ್ವರ್ಗಸ್ಥನಾದನೆಂದು ಆ ದಿನವನ್ನು ಅನಧ್ಯಯನವಾಗಿ ಆಚರಿಸುವ ಸಂಪ್ರದಾಯ ವೈಯಾಕರಣರಲ್ಲಿ ಉಂಟು. ಕಥಾಸರಿತ್ಸಾಗರದಲ್ಲಿ ಪಾಣಿನಿಯ ಗುರು ವರ್ಷಾಚಾರ್ಯನೆಂದೂ ವಾರ್ತಿಕಕಾರ ಕಾತ್ಯಾಯನ, ವ್ಯಾಡಿ, ಇಂದ್ರದತ್ತರು ಪಾಣಿನಿಯ ಸತೀರ್ಥ್ಯರೆಂದೂ ಕಥೆ ಇದೆ. ಪಾಣಿನಿಯು ತಪಸ್ಸುಮಾಡಿ ಶಿವನಿಂದ ವ್ಯಾಕರಣಶಾಸ್ತ್ರದ ಉಪದೇಶವನ್ನು ಪಡೆದನೆಂದೂ ಅದರಲ್ಲಿ ಹೇಳಿದೆ. ಸಂಗ್ರಹಕಾರನಾದ ವ್ಯಾಡಿಯನ್ನು ದಾಕ್ಷಾಯಣನೆಂದು ಪತಂಜಲಿಯು ಕರೆದಿರುವುದರಿಂದ[3]. ದಾಕ್ಷೀಪುತ್ರನಾದ ಪಾಣಿನಿಗೆ ವ್ಯಾಡಿಯು ಮಾತೃಬಂಧುವಾಗಿರಬಹುದು. ಕೌತ್ಸ ಎಂಬುವನು ಪಾಣಿನಿಯ ಒಬ್ಬ ಶಿಷ್ಯನಾಗಿರಬಹುದು[4].

## ಪಾಣಿನಿಯ ಕಾಲ

ಇದರ ವಿಷಯವಾಗಿ ವಿದ್ವಾಂಸರಲ್ಲಿ ತುಂಬ ಭಿನ್ನಾಭಿಪ್ರಾಯಗಳಿವೆ. ಅವರು ಹೇಳು ವಂತೆ ಪಾಣಿನಿಯ ಕಾಲ ಈ ರೀತಿ ಇದೆ—

೧. ಶ್ರೀ ಎಸ್. ಕೆ. ಬೆಲ್ವಾಲ್ಕರ್ – ಕ್ರಿ. ಪೂ. ೭೦೦ಕ್ಕಿಂತ ಹಿಂದೆ.

೨. ಶ್ರೀ ಆರ್. ಜಿ. ಭಂಡಾರಕರ್ ಮತ್ತು ಗೋಲ್ಡ್‌ಸ್ಟಕರ್ — ಕ್ರಿ. ಪೂ. ೮ನೆಯ ಶತಮಾನ.

೩. ಶ್ರೀ ವಿನ್ಸೆಂಟ್‌ಸ್ಮಿತ್ – ಕ್ರಿ. ಪೂ. ೭ನೆಯ ಶತಮಾನಕ್ಕಿಂತ ಹಿಂದೆ.

೪. ಶ್ರೀ ವಿಂಟರ್‌ನಿಟ್ಸ್ – ಕ್ರಿ. ಪೂ. ೫ನೆಯ ಶತಕ.

---

೧. 'ಶಾಲಾತುರೋ ನಾಮ ಗ್ರಾಮಃ । ಸೋऽಭಿಜನೋऽಸ್ಯೇತಿ ಶಾಲಾತುರೀಯಃ ತತ್ರಭವಾನ್ ಪಾಣಿನಿಃ' (ಗಣರತ್ನ ಮಹೋ. ಕ್ರಿ. ಶ. ೧೧೪೦). 'ಯೈತ್ರ ಪೂರ್ವೈರುಷಿತಂ ಸೋऽಭಿಜನಃ'

೨ 'ಸಿಂಹೋವ್ಯಾಕರಣಸ್ಯ ಕರ್ತುರಹರೆತ್ ಪ್ರಾಣಾನ್ ಪ್ರಿಯಾನ್ ಪಾಣಿನೇಃ' (ಪಂಚ. ಮಿತ್ರ. ಶ್ಲೋ. ೩೬)

೩ 'ಶೋಭನಾ ಖಲು ದಾಕ್ಷಾಯಣಸ್ಯ ಸಂಗ್ರಹಸ್ಯ ಕೃತಿಃ' (ಮ. ಭಾಷ್ಯ. ೨–೩–೬೬)

೪ ಉಪಸೇದಿವಾನ್ ಕಾತ್ಸಃ ಪಾಣಿನಿಂ (ಮ. ಭಾಷ್ಯ. ೩–೨–೧೦೮)

೫. ಶ್ರೀ ಪ್ರೊ. ಕೀತ್ ಮತ್ತು ಡಾ॥ ವಾಸುದೇವಶರಣ ಅಗ್ರವಾಲಾ—

ಕ್ರಿ. ಪೂ. ೪ನೆಯ ಶತಕ.

೬. ಶ್ರೀ ಯುಧಿಷ್ಠಿರ ಮೀಮಾಂಸಕ—ಮಹಾಭಾರತ ಯುದ್ಧವಾದ ಮೇಲೆ ಸಂ. ೨೦೦ ವರ್ಷಗಳು (ಕ್ರಿ. ಪೂ. ಸು. ೨೯೫೬)

## ಪಾಣಿನಿಯ ಶಬ್ದಾನುಶಾಸನ (ಅಷ್ಟಾಧ್ಯಾಯಿ)

ಪಾಣಿನಿಯ ಶಬ್ದಾನುಶಾಸನದಲ್ಲಿ ಎಂಟು ಅಧ್ಯಾಯಗಳಿವೆ. ಆದ್ದರಿಂದ ಇದು ಅಷ್ಟಾಧ್ಯಾಯಿಯೆಂದು ಪ್ರಸಿದ್ಧವಾಗಿದೆ. ಒಂದೊಂದು ಅಧ್ಯಾಯದಲ್ಲಿ ನಾಲ್ಕು ಅಧ್ಯಾಯಗಳಿವೆ. ಒಂದು ಅಧ್ಯಾಯದಲ್ಲಿ ಇಷ್ಟೇ ಸೂತ್ರಗಳಿರಬೇಕೆಂಬ ನಿಯಮವೇನೂ ಇಲ್ಲ. ಸಿದ್ಧಾಂತ ಕೌಮುದಿಯ ಪ್ರಕಾರ ಅಷ್ಟಾಧ್ಯಾಯಿಯಲ್ಲಿ ಒಟ್ಟು ೩೯೮೩ ಸೂತ್ರಗಳಾಗುತ್ತವೆ.

ಪಾಠಭೇದ :—ಅಷ್ಟಾಧ್ಯಾಯಿಯಲ್ಲಿ ಪಾಠಭೇದಗಳಾಗಿವೆಯೆಂದು ಹೇಳಲು ಆಧಾರ ಉಂಟು, ಶಿಷ್ಯರಿಗೆ ಪಾಠ ಹೇಳುವಾಗ ಪಾಣಿನಿಯೇ ಕೆಲವು ಪಾಠಾಂತರಗಳನ್ನು ಬೋಧಿಸಿದ್ದನೆಂದು ಪತಂಜಲಿಯ ಮಾತಿನಿಂದ ಗೊತ್ತಾಗುತ್ತದೆ[1]. 'ಚಟಕಾಯಾ ಐರಕ್ (೪–೧–೧೨೮), ಎಂಬ ಸೂತ್ರ 'ಚಟಕಾದ್ಯೈರಕ್' ಎಂದಿದ್ದಿತೆಂದೂ ಲೇಖಕ ಪ್ರಮಾದದಿಂದ ರೂಪಾಂತರವಾಗಿದೆಯೆಂದೂ ನ್ಯಾಸದಲ್ಲಿ ಹೇಳಿದೆ. ಕೆಲವು ವಾರ್ತಿಕಗಳೂ ಗಣಸೂತ್ರಗಳೂ ಸೂತ್ರಪಾಠದಲ್ಲಿ ಪ್ರಕ್ಷಿಪ್ತವಾಗಿದೆಯೆಂದು ವ್ಯಾಖ್ಯಾನಕಾರರು ಅಲ್ಲಲ್ಲಿ ಹೇಳುತ್ತಾರೆ. ನಾಗೇಶಭಟ್ಟನು ಇವೆಲ್ಲವನ್ನೂ ಪರಿಶೀಲಿಸಿ, ಪಾಣಿನಿಯು ರಚಿಸಿದ ಸೂತ್ರಗಳ ಸಂಖ್ಯೆ ೩೯೬೪ ಎಂದು ನಿರ್ಧರಿಸಿದ್ದಾನೆ[2].

ಪಾಣಿನಿ ಸೂತ್ರಗಳಲ್ಲಿ ಕೆಲವು ಛಂದೋಬದ್ಧವಾದ ಶ್ಲೋಕಖಂಡಗಳಂತಿವೆ. "ವೃದ್ಧಿರಾದೈಚ್, ಅದೇಙ್ಗುಣಃ, ಇಗ್ಯಣಃ ಸಂಪ್ರಸಾರಣಂ, ಕೃತ್ತದ್ಧಿತಸಮಾಸಾಶ್ಚ, ತಙಾನಾವಾತ್ಮನೇಪದಂ" ಮುಂತಾದ ಸೂತ್ರಗಳಲ್ಲಿ ಅನುಷ್ಟುಪ್ ಛಂದಸ್ಸಿನ ಲಕ್ಷಣವಿದೆ.

ಪಕ್ಷಿಮತ್ಸ್ಯಮೃಗಾನ್ ಹಂತಿ, ಪರಿಪಂಥಂ ಚ ತಿಷ್ಠತಿ (೪–೪–೬೬,೬೭)
ತದಸ್ಮೈದೀಯತೇ ಯುಕ್ತಂ, ಶ್ರಾಣಾಮಾಂಸೌದನಾಟ್ಟಿಠನ್ (೪–೪–೬೬,೬೭)

---

೧. 'ಉಭಯಥಾ ಹ್ಯಾಚಾರ್ಯೇಣ ಶಿಷ್ಯಾಃ ಸೂತ್ರಂ ಪ್ರತಿಪಾದಿತಃ ಕೇಚಿದಾ ಕಡಾರಾತ್ ಏಕಾಸಂಜ್ಞಾ ಇತಿ । ಕೇಚಿತ್ ಪ್ರಾಕ್ಕಡಾರಾತ್ ಪರಂ ಕಾರ್ಯಮಿತಿ'

—ಮ.ಭಾಷ್ಯ ೧–೪–೧

೨. ತ್ರೀಣಿ ಸೂತ್ರ ಸಹಸ್ರಾಣಿ ನವಸೂತ್ರಶತಾನಿ ಚ ।
ಚತುಃಷಷ್ಟಿ. ಚ ಸೂತ್ರಾಣಿ ಕೃತವಾನ್ ಪಾಣಿನಿಃ ಸ್ವಯಂ ॥

—ವ್ಯಾಕರಣ ಶಾಸ್ತ್ರಕಾ ಇತಿಹಾಸ ಭಾಗ–೩, ಪು. ೫೭.

ಮುಂತಾದ ಕಡೆ ಶ್ಲೋಕಾರ್ಧದ ಲಕ್ಷಣವನ್ನು ಕಾಣಬಹುದು. ಛಂದೋಬದ್ಧವಾದ ಪ್ರಾಚೀನ ಸೂತ್ರಗಳಲ್ಲಿ ಕೆಲವನ್ನು ಪಾಣಿನಿಯು ಉದ್ಧರಿಸಿದ್ದಾನೆಂದು ಊಹಿಸಲು ಇದರಿಂದ ಅವಕಾಶವಾಗಿದೆ.

ಅಷ್ಟಾಧ್ಯಾಯಿಗೆ ಪೂರ್ವದಲ್ಲಿ ಅನೇಕ ವ್ಯಾಕರಣ ಗ್ರಂಥಗಳಿದ್ದವು. ಪಾಣಿನಿಯ ಅಷ್ಟಾಧ್ಯಾಯಿ ರಚಿತವಾದ ಮೇಲೆ ಅವು ಲುಪ್ತವಾದವು. ಆದ್ದರಿಂದ ಪಾಣಿನಿ ಆ ಗ್ರಂಥಗಳಿಂದ ಎಷ್ಟರಮಟ್ಟಿಗೆ ಉಪಕೃತನಾಗಿದ್ದಾನೆಂದು ಹೇಳುವುದು ಕಷ್ಟ. ಟಿ, ಘು, ಭ–ಮೊದಲಾದ ಅಲ್ಪಾಕ್ಷರದ ಸಂಜ್ಞೆಗಳು ಪ್ರಾಯಶಃ ಪಾಣಿನಿ ನಿರ್ಮಿತಗಳೇ ಸರಿ. ಧಾತು, ಸರ್ವನಾಮ ತದ್ಧಿತ–ಮುಂತಾದುವು ಪ್ರಾಚೀನ ಸಂಜ್ಞೆಗಳು. ಅಲ್ಲದೆ ಪಾಣಿನಿ ಕೆಲವು ಸಂಜ್ಞೆಗಳಿಗೆ ಅರ್ಥವನ್ನು ಹೇಳದೆ ತನ್ನ ಶಾಸ್ತ್ರದಲ್ಲಿ ಬಳಸಿಕೊಂಡಿದ್ದಾನೆ. ಅವು ಆ ಕಾಲದಲ್ಲಿ ಪ್ರಸಿದ್ಧವಾಗಿದ್ದವೆಂದು ಇದರಿಂದ ಊಹಿಸಬೇಕಾಗುತ್ತದೆ. ಯಾವುದಕ್ಕೆ ಆದೇಶ ಬರುತ್ತದೆಯೋ ಅದನ್ನು ಷಷ್ಠ್ಯಂತವಾಗಿ ಪಾಣಿನಿಯು ನಿರ್ದೇಶಿಸುತ್ತಾನೆ, ಪೂರ್ವ ವ್ಯಾಕರಣಗಳಲ್ಲಿ ಅದನ್ನು ಪ್ರಥಮಾಂತವಾಗಿ ನಿರ್ದೇಶಿಸುತ್ತಿದ್ದರು.[2] ಈ ಬಗೆಯ ಪ್ರಥಮಾ ನಿರ್ದೇಶವೂ ಅಷ್ಟಾಧ್ಯಾಯಿಯಲ್ಲಿ ಕಂಡುಬರುತ್ತದೆ.[3]

## ವ್ಯಾಕರಣ ರಚನೆಯ ಕ್ಲಿಷ್ಟತೆ

ಸಂಸ್ಕೃತದ ಶಬ್ದರಾಶಿ ವಿಪುಲವಾದುದು. ಸಂಧಿ, ಸಮಾಸ, ಲಿಂಗ, ವಿಭಕ್ತಿಗಳಿಂದಾಗಿ ಶಬ್ದಗಳ ಮಾರ್ಪಾಡು ಅಧಿಕವಾಗಿದೆ. ಸ್ತ್ರೀಪ್ರತ್ಯಯಗಳೂ, ತದ್ಧಿತಪ್ರತ್ಯಯಗಳೂ ಶಬ್ದರೂಪಗಳನ್ನು ಅಸಂಖ್ಯಾತವಾಗಿ ಮಾಡುತ್ತವೆ. ರಾಜಶೇಖರನು 'ತದ್ಧಿತಮೂಢಾಃ ಪಾಣಿನೀಯಾಃ' ಎಂದಿರುವುದು[4] ಅತಿಶಯೋಕ್ತಿ ಏನಲ್ಲ. ಸುಮಾರು ೨೦೦೦ ಧಾತುಗಳಿದ್ದು ಹತ್ತುಗಣಗಳಾಗಿ ವಿಭಕ್ತವಾಗಿವೆ. ಒಂದೊಂದು ಧಾತುವಿನ ಕ್ರಿಯಾಪದಗಳಲ್ಲಿ ಹತ್ತು ಪ್ರಕಾರಗಳಿವೆ[5].

---

೧. ಉದಾ : ಔಜ ಆಪಃ (೭–೧–೧೮) = ಔಙ್
ಆಙ್ ಚಾಪಃ (೭–೩–೧೦೫) = ಆಙ್
ಉಭಯಥರ್ಕ್ಷು (೮–೩–೮) = ಉಭಯಥಾ
ಹೀಗೆಯೇ ಪ್ರಥಮಾ, ದ್ವಿತೀಯಾ–ಮೊದಲಾದುವು.

೨. ಪೂರ್ವವ್ಯಾಕರಣೇ ಪ್ರಥಮಯಾ ಕಾರ್ಯೀ ನಿರ್ದಿಶ್ಯತೇ.
—ಕೈಯಟ (೬–೧–೧೬೩)

೩. 1. ಅಲ್ಲೋಪೋಽನಃ (೬–೪–೧೩೪) = ಆತ್, ತಿವಿಂಶತೇರ್ಡಿತಿ (೬–೪–೧೪೨) = ತಿ

೪. ಕಾವ್ಯಮೀಮಾಂಸೆ, ಅಧ್ಯಾ = ೬

೫. ವೇದದಲ್ಲಿರುವ ಲೇಟ್ ಸೇರಿದರೆ ೧೧ ಪ್ರಕಾರ.

ಒಂದೊಂದು ಪ್ರಕಾರಕ್ಕೆ ಪುರುಷವಚನಗಳಿಂದ ೯ ರೂಪಗಳಿದ್ದು. ಒಂದು ಧಾತುವಿಗೆ ೯೦ ರೂಪಗಳಾಗುತ್ತವೆ. ಆತ್ಮನೆಪದ, ಪರಸ್ಮೈಪದ ಭೇದದಿಂದ ೧೮೦ ಆಗಬಹುದು. ಇನ್ನು ಣಿಚ್, ಸನ್, ಯಙ್, ಯಙ್‌ಲುಕ್‌ಗಳು ಬಂದಾಗ ಒಂದೊಂದರಲ್ಲಿಯೂ ೧೮೦ ರೂಪಗಳು ಗಣಿತವಾಗುತ್ತವೆ. ಇನ್ನು ಧಾತುವಿಗೆ ಸೇರುವ ಕೃತ್ ಪ್ರತ್ಯಯಗಳೂ ಅನೇಕ. ಸೇಟ್ ಅನಿಟ್ ಎಂದು ಧಾತುಗಳಲ್ಲಿ ಭೇದವುಂಟು. ಅಲ್ಲದೆ ವಿಭಿನ್ನಧಾತುಗಳಿಗೆ ವಿಭಿನ್ನರೂಪದ ಪ್ರತ್ಯಯಗಳು ಸೇರುತ್ತವೆ. ಷತ್ವ, ಣತ್ವಗಳ ಗೊಂದಲ ಬೇರೆ. ಹೀಗಾಗಿ ಒಂದು ಧಾತುವಿನಿಂದ ಸಾವಿರಾರು ವಿವಿಧರೂಪಗಳಾಗುತ್ತವೆ. ಉದಾತ್ತ, ಅನುದಾತ್ತ, ಸ್ವರಿತಗಳೆಂಬ ಸ್ವರಭೇದಗಳೂ ಇವೆ. ಸಂಕ್ಲಿಷ್ಟವಾದ ಈ ಶಬ್ದರಾಶಿಯ ಅಗಾಧತೆಯನ್ನೂ ವೈಚಿತ್ರ್ಯವನ್ನೂ ಗಮನಿಸಿದಾಗ, ಸಂಸ್ಕೃತಭಾಷೆಗೆ ಸಮಗ್ರವೂ ಕೂಲಂಕಷವೂ ಆದ ವ್ಯಾಕರಣವನ್ನು ರಚಿಸುವುದು ಎಂತಹ ಕಠಿಣವಾದ ಕಾರ್ಯವೆಂದು ಊಹಿಸಬಹುದು. ಇದರಿಂದ ಪಾಣಿನಿಯ ಸಾಮರ್ಥ್ಯದ ಒಂದಂಶ ನಮಗೆ ತಿಳಿದೀತು.

ಪಾಣಿನಿಯ ಸೂತ್ರಗಳು ಅಲ್ಪಾಕ್ಷರಯುಕ್ತವಾದರೂ ಅರ್ಥಬಾಹುಲ್ಯದಿಂದ ಕೂಡಿವೆ[1], ಕಂಠಪಾಠಮಾಡಲು ಈ ಸೂತ್ರರಚನೆ ಉಪಯುಕ್ತವಾಗಿದೆ. ಸೂತ್ರರಚನೆಗೆ ಅನುಕೂಲವಾಗುವಂತೆ ವೃದ್ಧಿ, ಗುಣ ಮುಂತಾದ ಪಾರಿಭಾಷಿಕ ಸಂಜ್ಞೆಗಳನ್ನು ಸೂತ್ರಕಾರನು ಬಹಳ ಜಾಣ್ಮೆಯಿಂದ ಬಳಸಿಕೊಂಡಿದ್ದಾನೆ. ಅಲ್ಪಾಕ್ಷರದ ಸೂತ್ರಗಳಿಗೆ ನಿರ್ದಿಷ್ಟವಾದ ಅರ್ಥವನ್ನು ಗೊತ್ತುಮಾಡಲು ಪರಿಭಾಷೆಗಳಿವೆ. ಪ್ರತ್ಯಯ, ಆಗಮ, ಆದೇಶಗಳಿಗೆ ನಾನಾ ಅನುಬಂಧಗಳನ್ನು ಜೋಡಿಸಿ ಕಿತ್, ಙಿತ್, ಣಿತ್ ಮುಂತಾದ ಸಂಕೇತಗಳನ್ನು ಬಳಸಿಕೊಳ್ಳಲಾಗಿದೆ. ಸೂತ್ರಕಾರನು ವ್ಯಾಪಕವಾದ ಸಾಮಾನ್ಯಸೂತ್ರವನ್ನು ರಚಿಸಿ, ಅದನ್ನು ಬಾಧಿಸುವ ವಿಶೇಷ ಸೂತ್ರಗಳನ್ನು ಹೇಳುತ್ತಾನೆ. ಈ ಬಗೆಯ ಸೂತ್ರಗಳಿಗೆ ಉತ್ಸರ್ಗಾಪವಾದಗಳೆಂದು ಹೆಸರು. ಕೆಲವು ಶಬ್ದಗಳನ್ನು ಮುಂದಿನ ಸೂತ್ರಗಳಿಗೆ ಸಂಬಂಧಿಸಿ ಅನುವೃತ್ತಿಮಾಡಿಕೊಳ್ಳಬೇಕಾಗುತ್ತದೆ[2].

ಅನುವೃತ್ತಿ, ಅಸಿದ್ಧತ್ವ, ಸೂತ್ರಗಳ ಪೌರ್ವಾಪರ್ಯ—ಇವನ್ನು ವ್ಯವಸ್ಥಿತವಾಗಿ ನೋಡಿಕೊಳ್ಳಬೇಕಾದ್ದರಿಂದ, ಸಂಧಿಪ್ರಕರಣ ಸಮಾಸಪದ ಪ್ರಕರಣ—ಇತ್ಯಾದಿ ವಿಷಯವಿಭಾಗವನ್ನು ಮಾಡುವುದು ಅಷ್ಟಾಧ್ಯಾಯಿಯಲ್ಲಿ ಸಾಧ್ಯವಾಗಿಲ್ಲ. ಆದರೂ ಸಹ ಸಾಧ್ಯವಾದ ಒಂದು ವಿಭಾಗವ್ಯವಸ್ಥೆಯನ್ನು ಅಷ್ಟಾಧ್ಯಾಯಿಯಲ್ಲಿ ಕಾಣಬಹುದು.

---

೧. ಅಲ್ಪಾಕ್ಷರಮಸಂದಿಗ್ಧಂ ಸಾರವದ್ವಿಶ್ವತೋ ಮುಖಂ ।
ಅಸ್ತೋಭಮನವದ್ಯಂ ಚ ಸೂತ್ರಂ ಸೂತ್ರವಿದೋ ವಿದುಃ ॥
—ಪರಾಶರ, ಉಪಪುರಾಣ

೨. ಸಂಜ್ಞಾ ಚ ಪರಿಭಾಷಾ ಚ ವಿಧಿರ್ನಿಯಮ ಏವ ಚ ।
ಅತಿದೇಶೋಽಪವಾದಶ್ಚ ಷಡ್ವಿಧಂ ಸೂತ್ರಲಕ್ಷಣಂ ॥

ಪ್ರಥಮಾಧ್ಯಾಯದಲ್ಲಿ ಸಾಮಾನ್ಯಸಂಜ್ಞೆಗಳು, ಪರಿಭಾಷೆಗಳು ಕರ್ತ್ರಾದಿ ಕಾರಕಸಂಜ್ಞೆಗಳು, ಏಕಶೇಷ, ಆತ್ಮನೇಪದ ಪರಸ್ಮೈಪದ ವಿಧಿಗಳು ಬಂದಿವೆ. ದ್ವಿತೀಯಾಧ್ಯಾಯದಲ್ಲಿ ಸಮಾಸಪ್ರಕರಣವೂ, ಪ್ರಥಮಾದಿ ವಿಭಕ್ತಿ ವಿಧಿಯೂ, ಕೆಲವು ಆದೇಶಲುಗ್ವಿಧಿಗಳೂ ಇವೆ. ತೃತೀಯಾಧ್ಯಾಯವು ಧಾತುಪ್ರತ್ಯಯಗಳಾದ ತಿಙ್, ಕೃತ್, ವಿಕರಣಗಳಿಗೆ ಮೀಸಲಾಗಿದೆ. ಚತುರ್ಥಪಂಚಮಾಧ್ಯಾಯಗಳಲ್ಲಿ ತದ್ಧಿತಪ್ರತ್ಯಯಗಳೂ, ಸಮಾಸಾಂತಗಳೂ ಬಂದಿವೆ ಷಷ್ಠಾಧ್ಯಾಯದ ಮೊದಲನೆಯ ಮೂರು ಅಧ್ಯಾಯಗಳಲ್ಲಿ ಕೆಲವು ಆದೇಶಗಳೂ, ವೈದಿಕಸ್ವರ ಪ್ರಕರಣವೂ ಬರುತ್ತದೆ. ಷಷ್ಠಾಧ್ಯಾಯದ ನಾಲ್ಕನೆಯ ಪಾದದಿಂದ ಅಂಗಾಧಿಕಾರವು ಪ್ರಾರಂಭವಾಗಿ ಸಪ್ತಮಾಧ್ಯಾಯವನ್ನು ಪೂರ್ತಿಯಾಗಿ ವ್ಯಾಪಿಸುತ್ತದೆ. ಈ ಅಂಗಾಧಿಕಾರದಲ್ಲಿ ಧಾತು, ಪ್ರಾತಿಪದಿಕ, ಪ್ರತ್ಯಯಗಳಿಗೆ ಬರುವ ನಾನಾ ಬಗೆಯ ಲೋಪ, ಆಗಮ, ಆದೇಶಗಳನ್ನು ಹೇಳಲಾಗಿದೆ. ಅಷ್ಟಮಾಧ್ಯಾಯದ ಪ್ರಥಮ ಪಾದದಲ್ಲಿ ಏಕಶೇಷವೂ, ಸ್ವರವಿಧಾನವೂ ಬಂದಿವೆ. ಈ ಅಧ್ಯಾಯದ ದ್ವಿತೀಯ, ತೃತೀಯ, ಚತುರ್ಥಪಾದಗಳು ಪೂರ್ವತ್ರಾಸಿದ್ಧದ ವ್ಯಾಪ್ತಿಗೆ ಬಂದು ತ್ರಿಪಾದಿಯೆಂದು ಪ್ರಸಿದ್ಧವಾಗಿವೆ. ಇದರಲ್ಲಿ ಮತ್ತೆ ವಿಭಿನ್ನ ಆದೇಶಗಳೂ ಸ್ವರವಿಧಾನವೂ ಬರುತ್ತವೆ. ತೃತೀಯಪಾದದಲ್ಲಿ ಷತ್ವವಿಧಿಯೂ ಚತುರ್ಥಪಾದದಲ್ಲಿ ಣತ್ವ ವಿಧಿಯೂ ಬಂದಿದೆ. ಅಷ್ಟಾಧ್ಯಾಯಿಯಲ್ಲಿ 'ವೃದ್ಧಿರಾದೈಚ್' ಎಂಬುದು ಆದಿಸೂತ್ರ. 'ಅಅ' ಎಂಬುದು ಅಂತಿಮ ಸೂತ್ರ.

ತನ್ನ ಶಬ್ದಾನುಶಾಸನದಲ್ಲಿ ಪಾಣಿನಿಯು ವೈದಿಕ ಶಬ್ದರೂಪಗಳನ್ನು ಆಸಕ್ತಿಯಿಂದ ವ್ಯುತ್ಪಾದಿಸಿದ್ದಾನೆ. ಇದರಿಂದ ವೇದಾನುಪೂರ್ವಿಯ ರಕ್ಷಣೆಗೂ ವೇದಾರ್ಥನಿರ್ಣಯಕ್ಕೂ ಮಹೋಪಕಾರವಾಗಿದೆ. ಉವ್ವಟ, ಸಾಯಣಾಚಾರ್ಯ ಮೊದಲಾದ ವೇದಭಾಷ್ಯಕಾರರು ಈ ವಿಷಯದಲ್ಲಿ ಪಾಣಿನಿಯಿಂದ ತುಂಬ ಉಪಕೃತರಾಗಿದ್ದಾರೆ. ಮಹಾಭಾಷ್ಯಕಾರನಾದ ಪತಂಜಲಿಯು "ರಕ್ಷಾರ್ಥಂ ವೇದಾನಾಮಧ್ಯೇಯಂ ವ್ಯಾಕರಣಂ" "ಸರ್ವವೇದಪಾರಿಷದಂ ಹೀದಂ ಶಾಸ್ತ್ರಂ" ಎಂದಿರುವುದು ಗಮನಾರ್ಹವಾದುದು.

## ಗಣಪಾಠ

ಗಣಪಾಠವು ಅಷ್ಟಾಧ್ಯಾಯಿಯ ಮುಖ್ಯವಾದ ಒಂದು ಅಂಗವಾಗಿದೆ. ಸುಮಾರು ೨೫೮ ಗಣಗಳಿದ್ದು ಇವುಗಳಲ್ಲಿ ಸುಮಾರು ೩೧ ಗಣಗಳು ವಾರ್ತಿಕಕಾರನಿಂದ ಪಠಿತವಾಗಿವೆ. ಎಲ್ಲ ಗಣಗಳಲ್ಲಿ ಪಠಿತವಾದ ಶಬ್ದಗಳು ಅನೇಕ ಸಹಸ್ರ ಸಂಖ್ಯೆಯಲ್ಲಿದ್ದು, ಒಂದೊಂದು ಗಣದ ಶಬ್ದಗಳು ಏಕರೂಪವಾದ ವಿಧಿನಿಷೇಧಗಳಿಗೆ ಒಳಪಡುತ್ತವೆ. ಈ ಎಲ್ಲ ಗಣಗಳೂ ಅಷ್ಟಾಧ್ಯಾಯಿ ಮತ್ತು ವಾರ್ತಿಕಗಳಲ್ಲಿ ಪರಾಮೃಷ್ಟವಾಗಿವೆ. ಆದ್ದರಿಂದ ಗಣಪಾಠವು ಪಾಣಿನಿ ಕಾತ್ಯಾಯನರಿಗೆ ಸಮ್ಮತವಾದವು. ಗಣಪಾಠದ ರಚನೆ ಪಾಣಿನಿಗಿಂತ ಪ್ರಾಚೀನರಾದ ಕಾಶಕೃತ್ಸ್ನಾದಿ ವೈಯಾಕರಣರಿಂದ ಆಗಿರಲೂ ಸಾಧ್ಯವಿದೆ. ಆದರೆ ಅದು ಪಾಣಿನಿ ಸಮ್ಮತವಾದುದು.

ಪಾಣಿನಿಯು ಗಣಪಾಠವನ್ನು ಪರಿಷ್ಕರಿಸಿರುವ ಸಾಧ್ಯತೆಯೂ ಉಂಟು. ಆದರೆ ಕಾತ್ಯಾಯನನ ಗಣಪಾಠವು ಮಾತ್ರ ಆತನಿಂದಲೇ ರಚಿತವಾಗಿರಬೇಕು.

ಈ ಗಣಗಳಲ್ಲಿ ಕೆಲವು ಮಾತ್ರ ಆಕೃತಿಗಣಗಳು. ಸಮಾನವಾದ ಆಕೃತಿಯನ್ನು ಎಂದರೆ ರೂಪವನ್ನು ಪಡೆಯಬಹುದಾದ ಇತರ ಶಬ್ದಗಳೂ ಇವೆಯೆಂದೂ, ಶಿಷ್ಟಪ್ರಯೋಗಾನುಸಾರವಾಗಿ ಅವನ್ನು ಆ ಗಣದಲ್ಲಿ ಸೇರಿಸಿಕೊಂಡು ಆಯಾಕಾರ್ಯವನ್ನು ಮಾಡಬಹುದೆಂದೂ ಆಕೃತಿಗಣವೆನ್ನುವುದರ ಅಭಿಪ್ರಾಯ. ಅಂತಹ ಆಕೃತಿಯುಳ್ಳ ಶಬ್ದಗಳು ಯಾವುವೆಂಬುದನ್ನು ಸಾಂಪ್ರದಾಯಿಕವಾಗಿ ಗುರುತಿಸಲಾಗಿದೆ. ಉದಾಹರಣೆಗೆ ಮಯೂರವ್ಯಂಸಕಾದಿಯು ಆಕೃತಿಗಣ. ಸಾಮಾನ್ಯ ಸೂತ್ರಗಳಿಂದ ಸಿದ್ಧವಾಗದ ಕೆಲವು ಸಮಾಸರೂಪಗಳನ್ನು ಇದರಲ್ಲಿ ನಿಪಾತ ಮಾಡಲಾಗಿದೆ. ಆಕೃತಿಗಣವಾದ್ದರಿಂದ ಮಯೂರವ್ಯಂಸಕಾದಿಯಲ್ಲಿಲ್ಲದಾಗ ಅಕುತೋಭಯ ಆಹೋಪುರುಷಿಕಾ' ಮೊದಲಾದ ಶಬ್ದಗಳನ್ನು ಸಿದ್ಧಪಡಿಸಬಹುದು.

ಸುಮಾರು ೨೦೦೦ ಧಾತುಗಳಿರುವ ಧಾತುಪಾಠವುಂಟು. ಇದು ಭ್ವಾದಿಯಲ್ಲಿ ಸೇರುತ್ತದೆ. ಅದಾದಿ, ಜುಹೋತ್ಯಾದಿ ಮೊದಲಾದುವು ಅಂತರ್ಗಣಗಳು. ಧಾತುಗಳಿಗೆ ಕಾರ್ಯ ವಿಶೇಷವನ್ನು ಹೇಳಲು ಅ, ಇ, ಉ, ಋ, ಇರ್–ಮುಂತಾದ ಅನುಬಂಧಗಳನ್ನು ಸೇರಿಸಲಾಗಿದ್ದು ಇವೆಲ್ಲವೂ ಅಷ್ಟಾಧ್ಯಾಯಿಯಲ್ಲಿ ಪರಾಮೃಷ್ಟವಾಗಿವೆ. ಧಾತುಪಾಠದಲ್ಲಿ ಕಂಡುಬರುವ ಅರ್ಥನಿರ್ದೇಶವು ಮಾತ್ರ ಆಧುನಿಕವೆಂದೂ ಪಾಣಿನಿಯು ಕೆಲವು ಧಾತುಗಳಿಗೆ ಮಾತ್ರ ಅರ್ಥ ನಿರ್ದೇಶವನ್ನು ಮಾಡಿದ್ದಾನೆಂದೂ ವ್ಯಾಖ್ಯಾನಕಾರರು ಅಭಿಪ್ರಾಯಪಡುತ್ತಾರೆ. ಈ ವಿಷಯವಾಗಿ ಕೆಳಗೆ ಕಂಡ ಭಾಷ್ಯವಚನಗಳು ಗಮನಾರ್ಹವಾಗಿವೆ.

೧. ಭೂವಾದಯೋ ಧಾತವಃ : (೧–೩–೧) ಎಂಬ ಸೂತ್ರದಲ್ಲಿ ಭಾಷ್ಯ ಹೀಗಿದೆ.

' ಪರಿಮಾಣಗ್ರಹಣಂ ಕರ್ತವ್ಯಂ, ಕುತೋಹ್ಯೇತತ್ ? ಭೂಶಬ್ದೋ ಧಾತುಸಂಜ್ಞೋ ಭವಿಷ್ಯತಿ, ನ ಪುನರ್ಭ್ವೇಧಶಬ್ದ : '

ಭೂ ಎಂಬುದು ಧಾತು, ' ಭ್ವೇಧ ' ಎಂಬ ಸಮುದಾಯಕ್ಕೆ ಧಾತುಸಂಜ್ಞೆ ಏಕಿಲ್ಲ ?– ಎಂದು ಇಲ್ಲಿ ಆಕ್ಷೇಪಿಸಲಾಗಿದೆ. ಇದರಿಂದ ಭೂ ಏಧ' ಇವುಗಳ ನಡುವೆ ' ಸತ್ತಾಯಾಂ ' ಎಂಬ ಅರ್ಥನಿರ್ದೇಶವಿರಲಿಲ್ಲ ಎಂದು ಊಹಿಸಬಹುದು.

೨. ಚುಟೂ (೧–೩–೭)ಎಂಬ ಸೂತ್ರದಲ್ಲಿ ಹೀಗಿದೆ :

' ಯದಯಮಿರಿತ : ಕಾಂಶ್ಚಿನ್ನುಮನುಷಕ್ತಾನ್ ಪಠತಿ 'ಉಬುಂದಿರ್ ನಿಶಾಮನೇ ', ಸ್ಕಂದಿರ್‌ಗತಿಶೋಷಣಯೋರಿತಿ' ತೇನ ನೇರಿತಾಮಿದಿದ್ವಿಧಿಃ ।

ಈ ಧಾತುಗಳಿಗೆ ಪಾಣಿನಿಯು ' ಇರ್ ' ಎಂಬ ಅನುಬಂಧವನ್ನು ಸೇರಿಸಿದ್ದಾನೆಂದೂ ಇವುಗಳ ಅರ್ಥವನ್ನು ನಿರ್ದೇಶಿಸಿದ್ದಾನೆಂದೂ ಈ ಮಾತಿನಿಂದ ಗೊತ್ತಾಗುತ್ತದೆ.

೩. ನವೇೋವರಿವಶ್ಚಿತ್ರಜ : ಕ್ಯಚ್ (೩–೧–೧೯) ಎಂಬ ಸೂತ್ರದಲ್ಲಿ ಭಾಷ್ಯ ಹೀಗಿದೆ :
'ಕಃ ಖಲ್ವಪಿ ಪಚಾದೀನಾಂ ಕ್ರಿಯಾವಚನತ್ವೇ ಯತ್ನಂ ಕರೋತಿ? ಯೇನೈವ ಖಲ್ಪಪಿ ಹೇತುನಾ ಪಚಾದಯಃ ಕ್ರಿಯಾವಚನಾಸ್ತೇನೈವ ಕ್ಯಜಾದಯೋಽಪಿ । ಏವಮರ್ಥಂ ಖಲ್ವಪ್ಯಾಚಾರ್ಯಶ್ಚಿತ್ರಯಂತಿ ಕ್ವಚಿದರ್ಥಾನ್, ಆದಿಶತಿ ಕ್ವಚಿನ್ನೇತಿ ।

ಪಾಣಿನಿಯು ಕೆಲವು ಧಾತುಗಳಿಗೆ ಅರ್ಥವನ್ನು ಹೇಳಿದ್ದಾನೆ, ಕೆಲವಕ್ಕೆ ಹೇಳಿಲ್ಲ ಎಂಬುದು ಇಲ್ಲಿ ಸ್ಪಷ್ಟವಾಗಿದೆ.

ಅಣ್, ಅಕ್–ಮುಂತಾದ ಪ್ರತ್ಯಾಹಾರಗಳು. ಸ್ಥಾನಿವದ್ಭಾವ ಇವೂ ಸಹ ಪಾಣಿನಿಯು ಆಶ್ರಯಿಸಿರುವ ಕೆಲವು ಉಪಾಯಗಳು. ಪಾಣಿನಿಯು ಬಳಸಿರುವ ಇನ್ನೊಂದು ತಂತ್ರವೆಂದರೆ ಅಸಿದ್ಧತ್ವ. ಒಂದು ಸೂತ್ರದಿಂದ ಕಾರ್ಯವು ಬಂದಿದ್ದರೂ ಇನ್ನೊಂದು ಸೂತ್ರದ ದೃಷ್ಟಿಯಿಂದ ಅದು ಅಸಿದ್ಧ, ಎಂದರೆ ಅದು ಬಂದಿಲ್ಲವೆಂದು ತಿಳಿಯಬೇಕು. ಇದಕ್ಕೆ ಒಂದು ಉದಾಹರಣೆ ಯನ್ನಿಲ್ಲಿ ಕೊಡಬಹುದು :–ಸಃ + ಆಗಚ್ಛತಿ = ಸ ಆಗಚ್ಛತಿ ಇಲ್ಲಿ 'ಸಃ' ಶಬ್ದದ ವಿಸರ್ಗಕ್ಕೆ ಲೋಪವಾಗಿದೆ.[1] ಈಗ ಸ + ಆ = ಸಾ ಎಂದು ಸವರ್ಣದೀರ್ಘ ಬರಬೇಕಾಗುತ್ತದೆ. ಇದನ್ನು ತಪ್ಪಿಸಲು ವಿಸರ್ಗಲೋಪವು ಅಸಿದ್ಧವೆನ್ನಲಾಗಿದೆ. ನಡುವೆ ವಿಸರ್ಗವು ಇದೆಯೆಂದು ಭಾವಿಸಿ ಸವರ್ಣದೀರ್ಘ ಬರುವುದಿಲ್ಲ! ಇಂಥ ಅಸಿದ್ಧತ್ವವನ್ನು ಅನೇಕ ಸ್ಥಳಗಳಲ್ಲಿ ಬಳಸಲಾಗಿದೆ[೨]".

ಸೂತ್ರಗಳ ಕ್ರಮಸಂಖ್ಯೆಯನ್ನು ಸೂತ್ರಕಾರನು ಬಹಳ ಎಚ್ಚರಿಕೆಯಿಂದ ನಿರ್ಧರಿಸಿದ್ದಾನೆ. ಒಂದು ಸೂತ್ರವನ್ನು ಆ ಸ್ಥಳದಿಂದ ಕದಲಿಸಿ ಇನ್ನೆಲ್ಲಿಯೋ ಹೇಳುವಂತಿಲ್ಲ. ಕ್ರಮವು ವ್ಯತ್ಯಾಸಗೊಂಡರೆ ಅನುವೃತ್ತಿಗೆ ಧಕ್ಕೆಯಾಗುತ್ತದೆ. ಪೂರ್ವಸೂತ್ರಕ್ಕಿಂತ ಪರಸೂತ್ರವು ಪ್ರಬಲವೆಂಬ ವ್ಯವಸ್ಥೆ[3]" ಬಾಧಿತವಾಗುತ್ತದೆ ಅಸಿದ್ಧತ್ವದ ತಂತ್ರಕ್ಕೆ ತೊಂದರೆಯಾಗುತ್ತದೆ. ಉತ್ಸರ್ಗಾಪವಾದಗಳು[4] ಅವ್ಯವಸ್ಥಿತವಾಗುತ್ತವೆ.

ಹೀಗೆ ಪಾಣಿನಿಯ ಅಷ್ಟಾಧ್ಯಾಯಿಯು ಅದ್ಭುತಮೇಧಾಶಕ್ತಿಯಿಂದ ನಿರ್ಮಿಸಿದ ಸೂಕ್ಷ್ಮ ರಚನೆಯ ಒಂದು ಮಹಾಯಂತ್ರವಾಗಿದೆ. ಮಹಾಭಾಷ್ಯಕಾರನಾದ ಪತಂಜಲಿಯು ಪಾಣಿನಿ

---

೧. ವಾಸ್ತವವಾಗಿ ಇಲ್ಲಿ ಬಂದಿರುವುದು ಯಕಾರಲೋಪ. ತಿಳಿಸುವ ಸೌಕರ್ಯಕ್ಕಾಗಿ ವಿಸರ್ಗ ಲೋಪವೆಂದು ಬರೆದಿದೆ.

೨. 1. ಪೂರ್ವತ್ರಾಸಿದ್ಧಂ (೮–೨–೧) 2 ಅಸಿದ್ಧವದತ್ರಾಭಾತ್ (೬–೪–೨೨)೩. ಷತ್ವತುಕೋರಸಿದ್ಧಃ (೬–೧–೮೬)

೩. ವಿಪ್ರತಿಷೇಧೇ ಪರಂ ಕಾರ್ಯಂ (೧–೪–೨)

೪. ಪುರಸ್ತಾದಪವಾದಃ ಪೂರ್ವಾನ್ ವಿಧೀನ್ ಬಾಧಂತೇ, ನೋತ್ತರಾನ್; ಅನಂತರಸ್ಯ ವಿಧಿರ್ವಾಭವತಿ ಪ್ರತಿಷೇಧೋ ವಾ (ಪರಿಭಾಷಾ).

ಯನ್ನು 'ಭಗವಾನ್, ಆಚಾರ್ಯ,' ಎಂಬ ಗೌರವನಾಮಗಳಿಂದ ನಿರ್ದೇಶಿಸುತ್ತಾನೆ. ಆತನ ಈ ಮಾತು ಗಮನಾರ್ಹವಾದದ್ದು.

"ಪ್ರಮಾಣಭೂತ ಆಚಾರ್ಯೋ ದರ್ಭಪವಿತ್ರಪಾಣಿಃ ಶುಚಾವವಕಾಶೇ ಪ್ರಾಙ್ಮುಖ ಉಪ ವಿಶ್ಯ ಮಹತಾ ಪ್ರಯತ್ನೇನ ಸೂತ್ರಾಣಿ ಪ್ರಣಯತಿ ಸ್ಮ । ತತ್ರಾಶಕ್ಯಂ ವರ್ಣೇನಾಪ್ಯ ನರ್ಥಕೇನ ಭವಿತುಂ, ಕಿಂ ಪುನರಿಯಂತಾ ಸೂತ್ರೇಣ"

—ಮಹಾಭಾಷ್ಯ (೧-೧-೧)

ಜಯಾದಿತ್ಯನು ಕಾಶಿಕಾವೃತ್ತಿಯಲ್ಲಿ ಹೀಗೆ ಬರೆಯುತ್ತಾನೆ. "ಮಹತೀ ಸೂಕ್ಷ್ಮೇಕ್ಷಿಕಾ ವರ್ತತೇ ಸೂತ್ರಕಾರಸ್ಯ" (ಕಾಶಿಕಾ, ೪-೨-೭೪)

ಪಾಶ್ಚಾತ್ಯವಿದ್ವಾಂಸರಾದ ಶ್ರೀ ಮಾನಿಯರ್ ವಿಲಿಯಮ್ಸ್, ಮ್ಯಾಕ್ಸ್‌ಮುಲ್ಲರ್, ಕೋಲ್ ಬ್ರೂಕ್, ಸರ್‌ಹಂಟರ್, ಗೋಲ್ಡ್‌ಸ್ಟಕರ್-ಮೊದಲಾದವರು ಪಾಣಿನಿಯ ವ್ಯಾಕರಣ ಶಾಸ್ತ್ರವು ಮಾನವ ಪ್ರತಿಭೆಯ ಒಂದು ಅದ್ಭುತ ಆವಿಷ್ಕಾರವೆಂದು ಮೆಚ್ಚುಗೆಯನ್ನು ವ್ಯಕ್ತಪಡಿಸಿದ್ದಾರೆ.

ವ್ಯಾಕರಣಗಳಲ್ಲಿ ಪಾಣಿನಿಯ ಅಷ್ಟಾಧ್ಯಾಯಿ ಎಲ್ಲ ಶಾಸ್ತ್ರ ಮತ್ತು ಕಾವ್ಯವಾಙ್ಮಯದ ಮೇಲೆ ತನ್ನ ಪ್ರಭಾವಮುದ್ರೆಯನ್ನೊತ್ತಿದೆ. ಸಂಸ್ಕೃತವಿದ್ವಾಂಸರು ಪ್ರಮಾಣಭೂತವಾದ ಗ್ರಂಥವೆಂದು ಮುಖ್ಯವಾಗಿ ಆದರಿಸುವುದು ಅಷ್ಟಾಧ್ಯಾಯಿಯನ್ನೇ.[1]

ಪಾಣಿನಿಗೆ ಶಬ್ದ ಶಾಸ್ತ್ರದಲ್ಲಿ ಮಾತ್ರವಲ್ಲ. ಸಮಸ್ತ ಪ್ರಾಚೀನವಾಙ್ಮಯದಲ್ಲಿಯೂ ಅಸಾಧಾರಣವಾದ ಪಾಂಡಿತ್ಯವಿತ್ತೆಂದು ಅಷ್ಟಾದ್ಯಾಯಿಯ ಪರಿಶೀಲನೆಯಿಂದ ಹೇಳಬಹುದಾಗಿದೆ. ಆ ಕಾಲದಲ್ಲಿದ್ದ ವೈದಿಕ ಲೌಕಿಕ ವಾಙ್ಮಯವೆಲ್ಲವನ್ನು ಅವನು ಬಲ್ಲವನಾಗಿದ್ದನು. ವೈದಿಕ ಸ್ವರವಿಶೇಷಕ್ಕಾಗಿಯೇ ಸುಮಾರು ೪೦೦ ಸೂತ್ರಗಳನ್ನು ವಿನಿಯೋಗಿಸಿದ್ದಾನೆ. ಪಾಣಿನಿಯ ಶಬ್ದಾನುಶಾಸನವೇ ವೇದಾಂಗವೆಂದು ಪರಿಗಣಿತವಾಗಿದೆ. ಸಮಸ್ತ ವೈದಿಕವಾಙ್ಮಯವೂ ವೇದಾಂಗಗಳೂ ಭಿಕ್ಷುಸೂತ್ರನಟಸೂತ್ರಾದಿಗಳೂ ವಿಭಿನ್ನವ್ಯಾಖ್ಯಾನಗಳೂ ಪುರಾಣಗಳೂ ವಾಸ್ತುವಿದ್ಯಾದಿಗಳೂ ಅಷ್ಟಾಧ್ಯಾಯಿಯಲ್ಲಿ ಪ್ರಸಕ್ತವಾಗಿವೆ. ಅನೇಕ ಕಾವ್ಯನಾಮಗಳನ್ನು ಪಾಣಿನಿಯು ವ್ಯುತ್ಪಾದಿಸಿದ್ದಾನೆ. ಕೃಷಿ, ವಾಣಿಜ್ಯಾದಿ ವ್ಯವಹಾರಗಳಲ್ಲಿ ಬಳಸುವ ಶಬ್ದಗಳನ್ನು ನಿಷ್ಪಾದಿಸಿದ್ದಾನೆ. ಜನಸಾಮಾನ್ಯರು ನಿತ್ಯವ್ಯವಹಾರದಲ್ಲಿ ಬಳಸುವ ವಿವಿಧ ಶಬ್ದಗಳನ್ನು ನುಡಿಗಟ್ಟುಗಳನ್ನು (Idioms) ವ್ಯುತ್ಪಾದಿಸಿದ್ದಾನೆ. ಗಣಪಾಠದಲ್ಲಿ ವಿಭಿನ್ನಾರ್ಥದಲ್ಲಿರುವ

1 ಪಾಣಿನೀಯಂ ಮಹಾಶಾಸ್ತ್ರಂ ಪದಸಾಧುತ್ವ ಲಕ್ಷಣಂ ।
ಸರ್ವೋಪಕಾರಕಂ ಗ್ರಾಹ್ಯಂ ಕೃತ್ಸ್ನಂ, ತ್ಯಾಜ್ಯಂ ನ ಕಿಂಚಿನ ॥

ವಿಪುಲ ಶಬ್ದಗಳು ದೊರೆಯುತ್ತವೆ. ಪ್ರಾಚೀನಭಾರತದ ಸಂಸ್ಕೃತಿಯನ್ನರಿಯಲು ಪಾಣಿನಿಯ ಅಷ್ಟಾಧ್ಯಾಯಿ ಒಂದು ಕೈದೀವಿಗೆ; ಪ್ರಾಚೀನ–ಆಧುನಿಕ ನಾಗರಿಕತೆಯನ್ನು ಸಂಘಟಿಸುವ ಒಂದು ಸೇತು.

## ಉಪಸಂಹಾರ

'ಪಾಣಿನೀಯಶಿಕ್ಷಾ' ಎಂಬುದು ೬೦ ಶ್ಲೋಕಗಳುಳ್ಳ ಒಂದು ಗ್ರಂಥ. ಇದರಲ್ಲಿರುವ ಆತ್ಮಾ ಬುದ್ಧ್ಯಾ ಸಮೇತ್ಯಾರ್ಥಾನ್...' ಇತ್ಯಾದಿ ಕೆಲವು ಶ್ಲೋಕಗಳನ್ನು ಭರ್ತೃಹರಿಯು (ಕ್ರಿ.ಶ. ೬೫೦) ವಾಕ್ಯಪದೀಯದ ಸ್ವೋಪಜ್ಞ ವ್ಯಾಖ್ಯಾನದಲ್ಲಿ[1] ಉದಾಹರಿಸಿರುವುದರಿಂದ ಈ ಶಿಕ್ಷೆ ಪ್ರಾಚೀನವಾದುದೇ. 'ಅಥ ಶಿಕ್ಷಾಂ ಪ್ರವಕ್ಷ್ಯಾಮಿ ಪಾಣಿನೀಯಮತಂ ಯಥಾ' ಎಂದು ಇದರ ಆರಂಭವಿರುದರಿಂದ ಇದು ಪಾಣಿನಿಕೃತವಲ್ಲವೆಂದು ಊಹಿಸಬಹುದು. ಇದನ್ನು ಪಾಣಿನಿಯ ತಮ್ಮ ಪಿಂಗಳಾಚಾರ್ಯನು ರಚಿಸಿದ್ದಾನೆಂದು ಶಿಕ್ಷಾಪ್ರಕಾಶವೆಂಬ ಇದರ ಟೀಕೆಯಲ್ಲಿ ಬರೆದಿದೆ[2]. ಧಾತುಪಾಠ, ಗಣಪಾಠಗಳು, ಪಾಣಿನಿಕೃತವಾದವುಗಳೇ, ಲಿಂಗಾನುಶಾಸನ, ಉಣಾದಿಸೂತ್ರಗಳು ಪಾಣಿನೀಯವೆಂಬುದರಲ್ಲಿ ವಿದ್ವಾಂಸರು ಭಿನ್ನಾಭಿಪ್ರಾಯವನ್ನು ಹೊಂದಿದ್ದಾರೆ.

## ೨ ಕಾತ್ಯಾಯನ (ಕ್ರಿ. ಪೂ. ಸು. ४೦೦)

ಕಾತ್ಯಾಯನನು ಅಷ್ಟಾಧ್ಯಾಯಿಯ ವಾರ್ತಿಕಕಾರ. ವರರುಚಿಯೆಂದು ಅಂಕಿತನಾಮ ವಿರಬೇಕು. ಇವನು ವರ್ಷೋಪಾಧ್ಯಾಯನ ಶಿಷ್ಯನೂ ಪಾಣಿನಿಯ ಸತೀರ್ಥ್ಯನೂ ಆಗಿದ್ದನೆಂದು ಕಥಾಸರಿತ್ಸಾಗರದಲ್ಲಿ ಹೇಳಿದೆ. ಅದರ ಪ್ರಕಾರ ವರರುಚಿಯು ಕೌಶಾಂಬೀ[3] ನಿವಾಸಿಯೂ, ಸೋಮದತ್ತನೆಂಬ ವಿಪ್ರನ ಪುತ್ರನೂ ಆಗಿದ್ದಾನೆ. ಕಾತ್ಯಾಯನನ ಕಾಲದ ವಿಷಯವಾಗಿ ಆಧುನಿಕ ವಿಮರ್ಶಕರು ಹೇಳುವುದೇನೆಂದರೆ.

---

೧ ಬ್ರಹ್ಮಕಾಂಡ, ಶ್ಲೋ. ೧೧೫

೨ ೮೬ ಅಧ್ಯಾಯಗಳಿರುವ 'ಪಾಣಿನಿಕೃತಶಿಕ್ಷಾಸೂತ್ರ' ಎಂಬ ಗ್ರಂಥವನ್ನು ಪಂ॥ ಯುಧಿಷ್ಠಿರ ಮೀಮಾಂಸಕರು ಪ್ರಕಟಿಸಿದ್ದಾರೆಂದು ತಿಳಿದುಬರುತ್ತದೆ.

(ವ್ಯಾಕರಣಶಾಸ್ತ್ರಕಾ ಇತಿಹಾಸ ಭಾಗ 1, ಪು. ೨೫೭)

೩ ಕೌಶಾಂಬೀನಗರವು ಈಗ ಪ್ರಯಾಗದ ಬಳಿ ಯಮುನಾತೀರದಲ್ಲಿರುವ 'ಕೋಶಂ' ಎಂಬ ಪಟ್ಟಣವೆಂದು ಶ್ರೀ ಕನ್ನಿಂಗ್ ಹ್ಯಾಮ್ ಮೊದಲಾದ ಪಾಶ್ಚಾತ್ಯಶೋಧಕರ ಅಭಿಪ್ರಾಯ

೧. ಪಾಣಿನಿಯ ಕಾಲದಲ್ಲಿ ಬಳಕೆಯಲ್ಲಿದ್ದ ಅನೇಕ ಶಬ್ದ ರೂಪಗಳು ಕಾತ್ಯಾಯನನ ಕಾಲದಲ್ಲಿ ಬಳಕೆಯಿಂದ ತಪ್ಪಿಹೋಗಿದ್ದವು[1]

೨. ಯೌಗಿಕ ಶಬ್ದಗಳು ಯೋಗಾರ್ಥವನ್ನು ಬಿಟ್ಟು ಅರ್ಥಾಂತರವಲ್ಲಿ ರೂಢವಾಗಿದ್ದವು[2].

೩. ಕಾತ್ಯಾಯನನ ಕಾಲದಲ್ಲಿ ಕೆಲವು ಶಬ್ದಗಳಿಗೆ ಹೊಸ ಅರ್ಥ ರೂಢಿಗೆ ಬಂದಿತ್ತು[3].

೪. ಪಾಣಿನಿಗೆ ಗೊತ್ತಿಲ್ಲದ ಕೆಲವು ಕೃತಿಗಳು ಕಾತ್ಯಾಯನನಿಗೆ ಗೊತ್ತಿದ್ದವು. ಎಂದರೆ ಅವು ಪಾಣಿನಿಯ ಕಾಲದಲ್ಲಿ ಪ್ರಸಿದ್ಧವಾಗಿರಲಿಲ್ಲ ಅಥವಾ ರಚಿತವಾಗಿರಲಿಲ್ಲ[4].

೫. ಪಾಣಿನಿಗೆ ಸಮೀಪಕಾಲದಲ್ಲಿದ್ದ ಗ್ರಂಥಕರ್ತರನ್ನು ವಾರ್ತಿಕಕಾರನು ಪ್ರಾಚೀನರೆಂದು ಭಾವಿಸುತ್ತಾನೆ[5].

ಈ ಬಗೆಯ ಬದಲಾವಣೆಗಳಾಗಲು ಯಾವ ಭಾಷೆಯಲ್ಲಾದರೂ ಕನಿಷ್ಠಪಕ್ಷ ೨೦೦ ವರ್ಷಗಳಾದರೂ ಕಳೆದಿರಬೇಕಾಗುತ್ತದೆ. ಆದ್ದರಿಂದ ಕಾತ್ಯಾಯನನು ಪಾಣಿನಿಗಿಂತ ೨೦೦ ವರ್ಷ ಅರ್ವಾಚೀನ. ಅವನ ಕಾಲ ಕ್ರಿ. ಪೂ. ಸು. ೪೦೦ ಇರಬಹುದು[6].

ವಾರ್ತಿಕಕಾರನು ದಾಕ್ಷಿಣಾತ್ಯನೆಂದು ಪತಂಜಲಿಯ ಒಂದು ಹೇಳಿಕೆಯಿಂದ ಗೊತ್ತಾಗುತ್ತದೆ[7]. ಪತಂಜಲಿಯು ಕಾತ್ಯಾಯನನ್ನು ಭಗವಾನ್ ಎಂದೂ, ಆಚಾರ್ಯನೆಂದೂ ಗೌರವದಿಂದ ನಿರ್ದೇಶಿಸಿದ್ದಾನೆ.

---

೧. 'ಅಸ್ತ್ಯಪ್ರಯುಕ್ತಃ'–ಸಂತಿ ವೈ ಶಬ್ದಾ ಅಪ್ರಯುಕ್ತಾಃ । ತದ್ಯಥಾ-ಊಷ, ತೀರ, ಚಕ್ರ, —ಪೇಚ (ಪಸ್ಪಶಾಹ್ನಿಕ)

೨. ' ಸ್ನೇಹೇ ತೈಲಚ್ ' (ವಾರ್ತಿಕ–ಅಷ್ಟಾ. ೫–೨–೨೯)

೩. ' ಯುವನಾಲ್ಲಿಪ್ಯಾಂ ' (ವಾರ್ತಿಕ. ೪–೧–೪೯)

೪. ' ಲುಬಾಖ್ಯಾಯಿಕಾಭ್ಯೋ ಬಹುಲಂ ' (ವಾರ್ತಿಕ. ೪–೪೧–೯). ಉದಾ—ವಾಸವದತ್ತಾ, ಸುಮನೋತ್ತರಾ

೫. 'ಪುರಾಣಪ್ರೋಕ್ತೇಷು ಬ್ರಾಹ್ಮಣ ಕಲ್ಪೇಷು'. ' ಯಾಜ್ಞವಲ್ಕ್ಯಾದಿಭ್ಯಃ ಪ್ರತಿಷೇಧಸ್ತುಲ್ಯ ಕಾಲತ್ವಾತ್ ' (ವಾರ್ತಿಕ. ೪–೩–೧೦೫)

೬. ಮ್ಯಾಕ್ಸ್‌ಮುಲ್ಲರ್ ಅವರು ಕಾತ್ಯಾಯನನನ್ನು ಪಾಣಿನಿಯ ಸಮಕಾಲಿಕನೆಂದು ಒಪ್ಪುತ್ತಾರೆ. ಅವರ ಪ್ರಕಾರ ಕಾತ್ಯಾಯನನ ಕಾಲ ಕ್ರಿ. ಪೂ. ೩೫೦.

೨೨. ಯುಧಿಷ್ಠಿರಮೀಮಾಂಸಕರು ಮೇಲ್ಕಂಡ ಒಂದು ವಾದವನ್ನು ಒಪ್ಪದೆ ಕಾತ್ಯಾಯನನು ಪಾಣಿನಿಯ ಸಮಕಾಲಿಕನೆಂದೂ, ಅವನ ಕ್ರಿ. ಪೂ. ೨೯೫೬ ಎಂದೂ ಹೇಳುತ್ತಾರೆ.

—ವ್ಯಾಕರಣಶಾಸ್ತ್ರ ಕಾ ಇತಿಹಾಸ ಭಾಗ ೧–ಪು. ೩೦೬

೭. ಪ್ರಿಯತದ್ಧಿತಾ ದಾಕ್ಷಿಣಾತ್ಯಾಃ (ಪಸ್ಪಶಾಹ್ನಿಕ)

ವಾರ್ತಿಕ ಲಕ್ಷಣವನ್ನು ಹೀಗೆ ಹೇಳಲಾಗಿದೆ.

ಉಕ್ತಾನುಕ್ತದುರುಕ್ತಾನಾಂ ಚಿಂತಾ ಯತ್ರ ಪ್ರವರ್ತತೇ ।
ತಂ ಗ್ರಂಥಂ ವಾರ್ತಿಕಂ ಪ್ರಾಹುರ್ವಾರ್ತಿಕಜ್ಞಾ ಮನೀಷಿಣಃ ॥

(ಪಾರಾಶರೋಪಪುರಾಣ)

ವಾರ್ತಿಕಗಳು ಸೂತ್ರಗಳಿಗೆವ್ಯಾಖ್ಯಾನರೂಪವಾದವು. ಸೂತ್ರದಲ್ಲಿ ಉಕ್ತವಾದ ಪದಕ್ಕೆ ಪ್ರಯೋಜನವೇನೆಂದು ವಿಚಾರ ಮಾಡುತ್ತವೆ. ಅನುಕ್ತವಾದ ಪದವನ್ನು ಸೇರಿಸಬೇಕೆಂದು ಕೆಲವೆಡೆ ಹೇಳುತ್ತವೆ. ಕೆಲವುವೇಳೆ ಸೂತ್ರದಲ್ಲಿ ವಿಷಯವು ದುರುಕ್ತವಾಗಿದೆಯೆಂದು ಅದನ್ನು ಸರಿಪಡಿಸುತ್ತವೆ.ವಾರ್ತಿಕೆಗಳಲ್ಲಿ ಅನೇಕ ಪೂರ್ವಪಕ್ಷ ಸಿದ್ಧಾಂತಗಳು ಬರುತ್ತವೆ. ಸೂತ್ರಗಳನ್ನು ಖಂಡಿಸುವುದಕ್ಕಾಗಿ ವಾರ್ತಿಕಗಳು ಹೊರಟಿವೆಯೆಂಬ ಅಭಿಪ್ರಾಯ ಸರಿಯಲ್ಲ. ಕಾತ್ಯಾಯನನು ಸಾಮಾನ್ಯವಾಗಿ ಪಾಣಿನಿಯ ಪಾರಿಭಾಷಿಕ ಸಂಜ್ಞೆಗಳಿಗೆ ಬದಲಾಗಿ ಅದ್ಯತನೀ (ಲಙ್), ಭವಂತೀ (ಲಟ್), ವ್ಯಂಜನ (ಹಲ್), ಸ್ವರ (ಅಚ್) ಮುಂತಾದ ಪ್ರಾಚೀನ ಸಂಜ್ಞೆಗಳನ್ನು ಬಳಸುತ್ತಾನೆ.

ವಾರ್ತಿಕಪಾಠವು ಪ್ರತ್ಯೇಕವಾಗಿ ಉಪಲಬ್ಧವಾಗಿಲ್ಲ. ಮಹಾಭಾಷ್ಯದಲ್ಲಿ ಅದು ಸೇರಿ ಹೋಗಿದೆ. 'ಉಕ್ತಂ ವಾ, ವಕ್ತವ್ಯಂ, ಉಪಸಂಖ್ಯಾನಂ' ಮುಂತಾದ ಗುರುತುಗಳಿಂದ ಅವನ್ನು ಗುರುತಿಸಬಹುದಾಗಿದೆ. ಅಲ್ಲದೆ ಭಾಷ್ಯಕಾರನು ತನಗೆ ಆವಶ್ಯಕವೆನಿಸಿದ ವಾರ್ತಿಕಗಳನ್ನು ಮಾತ್ರ ಬಳಸಿಕೊಂಡಿದ್ದಾನೆ. ಕೆಲವು ವಾರ್ತಿಕಗಳು ಶ್ಲೋಕರೂಪವಾಗಿಯೂ ಇವೆ[1],

ಅಷ್ಟಾಧ್ಯಾಯಿಗೆ ಅನೇಕ ಪ್ರಾಚೀನ ಆಚಾರ್ಯರು ವಾರ್ತಿಕಗಳನ್ನು ರಚಿಸಿದ್ದರು. ಪತಂಜಲಿಯು ತನ್ನ ಮಹಾಭಾಷ್ಯದಲ್ಲಿ ಭಾರದ್ವಾಜೀಯ (೧–೧–೫೬) ಸೌನಾಗ (೨–೨–೧೮), ಕ್ರೋಷ್ಟ್ರೀಯ(೧–೧–೩), ಕುಣರವಾಡವ(೮–೩–೧೦೬)–ಎಂಬುವರನ್ನು ಉಲ್ಲೇಖಿಸಿದ್ದಾನೆ. ಅಲ್ಲದೆ ಮಹಾಭಾಷ್ಯದಲ್ಲಿ ಗೋಣಿಕಾಪುತ್ರ (೧–೪–೫೧), ಸೌರ್ಯಭಗವಾನ್ (೮–೨–೪೬) ಎಂಬಿಬ್ಬರ ಉಲ್ಲೇಖವೂ ಇದೆ ಮತ್ತು ವ್ಯಾಘ್ರಭೂತಿ, ವೈಯಾಘ್ರಪದ್ಯ— ಎಂಬುವರು ವಾರ್ತಿಕಕಾರರೆಂದು ವ್ಯಾಖ್ಯಾನಕಾರರ ಹೇಳಿಕೆಯಿಂದ ಗೊತ್ತಾಗುತ್ತದೆ. ವಾರ್ತಿಕಗಳಿಗೆ ವಾಕ್ಯ, ವೃತ್ತಿ. ವ್ಯಾಖ್ಯಾನಸೂತ್ರ, ಅನುತಂತ್ರ, ಅನುಸ್ಮೃತಿ–ಎಂದೂ ವ್ಯವಹಾರ ಉಂಟು. ವಾರ್ತಿಕಗಳ ಮೇಲೆ ಹೇಲಾರಾಜನು 'ವಾರ್ತಿಕೋನ್ಮೇಷ' ಎಂಬ ಗ್ರಂಥವನ್ನು ರಚಿಸಿದ್ದನು[2].

---

೧. 'ವಾರ್ತಿಕಕಾರಸ್ಯಾಪಿ ತದೇವ ದರ್ಶನಮಿತಿ ವಾರ್ತಿಕೋನ್ಮೇಷೇ ಕಥಿತಮಸ್ಮಾಭಿಃ'
—ವಾಕ್ಯಪದೀಯಂ, ಕಾಂ, ಹೇಲಾರಾಜವ್ಯಾಖ್ಯಾ ಪು. ೪೪೩, ೪೪೪

೨. 1. ಸುಪಾಂ ಕರ್ಮಾದಯೋಽಪ್ಯರ್ಥಾಃ ಸಂಖ್ಯಾ ಚೈವ ತಥಾ ತಿಙಾಮ್ ।
ಪ್ರಸಿದ್ಧೋ ನಿಯಮಸ್ತತ್ರನಿಯಮಃ ಪ್ರಕೃತೀಷು ವಾ —(೧–೪–೨೧)

2. ಅದಸಃ ಸೋರ್ಭವೇದಾತ್ವಂ ಕಿಂ ಸುಲೋಪೋ ವಿಧೀಯತೇ ।
ಹ್ರಸ್ವಾಲ್ಲುಂಪ್ಯೇತ ಸಂಬುದ್ಧಿರ್ನ ಹಲಃ ಪ್ರಕೃತಂ ಹಿ ತತ್ ॥
—(೬–೨ : ೧೦೭)

ಕಾತ್ಯಾಯನನ ವಾರ್ತಿಕಗಳ ಶೈಲಿ ಸೂತ್ರಶೈಲಿಯಂತೆಯೇ ಇದ್ದು ಅರ್ಥವತ್ತಾಗಿಯೂ ಬಿಗಿಯಾಗಿಯೂ ಇದೆ. ವ್ಯಾಕರಣಶಾಸ್ತ್ರಕ್ಕೆ ಕಾತ್ಯಾಯನನ ಕೊಡುಗೆ ಅಮೂಲ್ಯವಾದುದು.

### 3. ಪತಂಜಲಿ—ಮಹಾಭಾಷ್ಯಕಾರ (ಕ್ರಿ.ಪೂ.ಸು.೨೫೦)

ಪತಂಜಲಿಯು ಅಷ್ಟಾಧ್ಯಾಯಿಗೆ ವಿಸ್ತೃತವಾದ ಭಾಷ್ಯವನ್ನು ಬರೆದಿದ್ದಾನೆ. ಇದಕ್ಕೆ ಮಹಾಭಾಷ್ಯವೆಂದು ಪ್ರಸಿದ್ಧಿಯುಂಟು. ಪತಂಜಲಿಯು ತನ್ನ ಪರಿಚಯವನ್ನು ಸ್ವಲ್ಪವೂ ಇದರಲ್ಲಿ ತಿಳಿಸಿಲ್ಲ. ಭಾಷ್ಯದಲ್ಲಿರುವ 'ಉಭಯಥಾ ಗೋಣಿಕಾಪುತ್ರಃ (೧-೪-೫೧), 'ಗೋನರ್ದೀಯಸ್ತ್ವಾಹ' (೧-೧-೨೧) ಎಂಬ ಮಾತುಗಳು ಪತಂಜಲಿಗೆ ಅನ್ವಯಿಸುತ್ತವೆಯೆಂದು ವ್ಯಾಖ್ಯಾನಕಾರರ ಅಭಿಪ್ರಾಯವಿದೆ.[1] ವೈಜಯಂತೀಕೋಶದಲ್ಲಿ 'ಗೋನರ್ದೀಯಃ ಪತಂಜಲಿಃ' ಎಂದು ಹೇಳಿದೆ. ಗೋನರ್ದದೇಶವು ಕಾಶ್ಮೀರದಲ್ಲಿತ್ತೆಂದು ಕೆಲವು ಇತಿಹಾಸಕಾರರ ಅಭಿಪ್ರಾಯವಿದೆ. ಕಾಶಿಕಾಕಾರನ ಮತದಂತೆ ಇದು ಪ್ರಾಚ್ಯದೇಶ.[2] ಪತಂಜಲಿಯ ಕಾಲವನ್ನು ಗೊತ್ತುಮಾಡಲು ಕೆಳಗೆ ಕಂಡ ಮಹಾಭಾಷ್ಯವಚನಗಳು ಮಾರ್ಗಸೂಚಿಗಳೆಂದು ಪರಿಶೋಧಕರು ಹೇಳಿದ್ದಾರೆ :

೧. ಅರುಣದ್ಯವನಃ ಸಾಕೇತಂ, ಅರುಣದ್ಯವನೋ ಮಾಧ್ಯಮಿಕಾಂ (೩-೨-೧೧೧)
೨. ಪುಷ್ಯಮಿತ್ರಸಭಾ, ಚಂದ್ರಗುಪ್ತಸಭಾ (೧-೧-೬೮)
೩. ಇಹ ಪುಷ್ಯಮಿತ್ರಂ ಯಾಜಯಾಮಃ (೩-೨-೧೨೩)

ಈ ವಾಕ್ಯಗಳನ್ನು ಪರಿಶೀಲಿಸಿದಾಗ ಚಾರಿತ್ರಿಕವಾಗಿ ಈ ಅಂಶಗಳು ಗಮನಾರ್ಹವಾಗುತ್ತವೆ. ಮಿನಾಂಡರನು ಸಾಕೇತವನ್ನೂ ಮಾಧ್ಯಮಿಕಾನಗರವನ್ನು (ರಾಜಸ್ಥಾನ ಚಿತ್ತೂರಿನ ಬಳಿ ಇರುವ ನಾಗರೀ) ಕ್ರಿ.ಪೂ. ೧೫೫–೩ರಲ್ಲಿ ಮುತ್ತಿಗೆ ಹಾಕಿದನು. 'ಅರುಣತ್' ಎಂಬ ಲಙ್‌ಪ್ರಯೋಗದಿಂದ ಭಾಷ್ಯಕಾರನ ಕಾಲದಲ್ಲಿ ಈ ಮುತ್ತಿಗೆ ನಡೆದಿರಬೇಕು. ಚಂದ್ರಗುಪ್ತ ಮೌರ್ಯನ (ಕ್ರಿ.ಪೂ. ೩೨೨–೨೯೮) ತರುವಾಯ ಪತಂಜಲಿಯ ಕಾಲವಾಗುತ್ತದೆ. ಕ್ರಿ.ಪೂ.

---

೧. 1. 'ಗೋಣಿಕಾಪುತ್ರೋ ಭಾಷ್ಯಕಾರ ಇತ್ಯಾಹುಃ'
—ಉದ್ಯೋತ

2. ಗೋನರ್ದೀಯ ಪದಕ್ಕೆ ಕೈಯಟನು ಭಾಷ್ಯಕಾರ ಎಂದು ಅರ್ಥಹೇಳಿದ್ದಾನೆ.
—(ಪ್ರದೀಪ ೧-೧-೨೧)

ಆದರೆ ವಾತ್ಸ್ಯಾಯನನ ಕಾಮಸೂತ್ರದಲ್ಲಿ ಇವರಿಬ್ಬರನ್ನೂ ವಿಭಿನ್ನ ವ್ಯಕ್ತಿಗಳಾಗಿ ನಿರ್ದೇಶಿಸಲಾಗಿದೆ–ಗೋಣಿಕಾಪುತ್ರನ ಮತದಲ್ಲಿ ನಾಯಕಭೇದವು ನಾಲ್ಕು; ಗೋನರ್ದೀಯನ ಮತದಲ್ಲಿ ಎಂಟು.

೨. ಕಾಶಿಕಾ (೧-೧-೭೫)

೧೮೫ರಲ್ಲಿ ಪುಷ್ಯಮಿತ್ರನು ಬೃಹದ್ರಥಮೌರ್ಯನನ್ನು ಕೊಂದು ರಾಜ್ಯವನ್ನು ವಹಿಸಿಕೊಂಡನು. 'ಇಹ ಪುಷ್ಯಮಿತ್ರಂ ಯಾಜಯಾಮಃ, ಎಂದು ವರ್ತಮಾನ ಕಾಲವನ್ನು ಹೇಳಿರುವುದರಿಂದ ಪುಷ್ಯಮಿತ್ರನ ಕಾಲದಲ್ಲಿಯೇ ಪತಂಜಲಿ ಇದ್ದನೆಂಬುದು ಸ್ಪಷ್ಟವಾಗುತ್ತದೆ. ಆದ್ದರಿಂದ ಪತಂಜಲಿಯ ಕಾಲ ಕ್ರಿ ಪೂ. ೧೫೦ ಎಂದು ಹೇಳಬಹುದು.

## ಮಹಾಭಾಷ್ಯದ ಅಧ್ಯಯನ ಪರಂಪರೆ

ಮಹಾಭಾಷ್ಯವು ಒಂದು ಕಾಲದಲ್ಲಿ ಅಧ್ಯಯನ ಪರಂಪರೆಯಿಂದ ಲುಪ್ತವಾಗಿತ್ತೆಂದೂ ಅದನ್ನು ಮಹಾಪ್ರಯತ್ನದಿಂದ ಸಂಪಾದಿಸಿ ಪರಿಷ್ಕರಿಸಿದರೆಂದೂ ಹೇಳಲು ಆಧಾರ ಉಂಟು. ಬೈಜಿ ಮೊದಲಾದ ಕೆಲವು ಶುಷ್ಕತಾರ್ಕಿಕರು ಮಹಾಭಾಷ್ಯವನ್ನು ವಿಪ್ಲವಗೊಳಿಸಿದರೆಂದೂ, ಚಂದ್ರಾಚಾರ್ಯನೇ ಮೊದಲಾದ ವಿದ್ವಾಂಸರು ದಕ್ಷಿಣದೇಶಕ್ಕೆ ಹೋಗಿ ಯಾವುದೋ ಪರ್ವತ ಪ್ರಾಂತದಿಂದ (ಶ್ರೀಪರ್ವತ ?) ಭಾಷ್ಯದ ಒಂದು ಪ್ರತಿಯನ್ನು ಸಂಪಾದಿಸಿ ತಂದು ಪರಿಷ್ಕರಿಸಿದ ರೆಂದೂ ಭರ್ತೃಹರಿಯು (ಕ್ರಿ.ಶ.ಸು ೪೫೦) ಹೇಳಿದ್ದಾನೆ[1]. ಮಹಾಭಾಷ್ಯದ ಪ್ರವಚನ ಸಂಪ್ರದಾಯವು ಮತ್ತೊಮ್ಮೆ ವಿಚ್ಛಿನ್ನವಾಯಿತೆಂದೂ, ಕಾಶ್ಮೀರದ ಮಹಾರಾಜ ಜಯಾಪೀಡನು (ಕ್ರಿ ಶ. ೭೭೪-೭೭೫) ಕ್ಷೀರನೆಂಬ ವ್ಯಾಕರಣ ವಿದ್ವಾಂಸನಿಂದ ಅದನ್ನು ನೆಲೆಗೊಳಿಸಿದನೆಂದೂ ಕಲ್ಹಣನು ತಿಳಿಸುತ್ತಾನೆ[2]. ಕೈಯಟ, ನಾಗೇಶಭಟ್ಟ-ಮೊದಲಾದವರು ಮಹಾಭಾಷ್ಯದ ಅನೇಕ ಸ್ಥಳಗಳಲ್ಲಿ ಪಾಠಾಂತರವನ್ನೂ ನಷ್ಟಭಾಗವನ್ನೂ ಸೂಚಿಸಿದ್ದಾರೆ[3].

೧ ಬೈಜಿಸೌಭರಿಹರ್ಯಕ್ಷೈಃಶುಷ್ಕತರ್ಕಾನುಸಾರಿಭಿಃ ।
ಆರ್ಷೇ ವಿಪ್ಲಾವಿತೇ ಗ್ರಂಥೇ ಮಹಾಭಾಷ್ಯೇ ನಿಬಂಧನೇ ॥
ಸ ಪತಂಜಲಿಶಿಷ್ಯೇಭ್ಯೋ ಭ್ರಷ್ಟೋ ವ್ಯಾಕರಣಾಗಮಃ ।
ಕಾಲೇ ಸ ದಾಕ್ಷಿಣಾತ್ಯೇಷು ಗ್ರಂಥಮಾತ್ರೇ ವ್ಯವಸ್ಥಿತಃ ॥
ಪರ್ವತಾದಾಗಮಂ ಲಬ್ಧ್ವಾ ಭಾಷ್ಯಬೀಜಾನುಸಾರಿಭಿಃ ।
ಸ ನೀತೋ ಬಹುಶಾಖಾತ್ವಂ ಚಂದ್ರಾಚಾರ್ಯಾದಿಭಿಃ ಪುನಃ ॥

—ವಾಕ್ಯ. ೨. ೪೮೭, ೪೮೮, ೪೮೯

೨ ದೇಶಾಂತರಾದಾಗಮಯ್ಯ ವ್ಯಾಚಕ್ಷಾಣಾನ್ ಕ್ಷಮಾಪತಿಃ ।
ಪ್ರಾವರ್ತಯತ ವಿಚ್ಛಿನ್ನಂ ಮಹಾಭಾಷ್ಯಂ ಸ್ವಮಂಡಲೇ ।
ಕ್ಷೀರಾಭಿಧಾತ್ ಶಬ್ದವಿದ್ಯೋಪಾಧ್ಯಾಯಾತ್ ಸಂಭೃತಶ್ರುತಃ ॥

೩ 1 'ನಾಯಂ ಪ್ರಸಜ್ಯಪ್ರತಿಷೇಧಃ ಇತಿಪಾಠೋಽಯಂ

—ರಾಜತರಂಗಿಣಿ ೧. ೪೮೮ ೪೮೯

ಲೇಖಕಪ್ರಮಾದಾನ್ನಷ್ಟಃ (ಪ್ರದೀಪ ೮-೪-೩೭)

2 'ಕಷ್ಟಾಯೇತಿ ಯಾದೇಶೋ ದೀರ್ಘತ್ವಸ್ಯ' ಇತಿ ಗ್ರಂಥೋ ಭಾಷ್ಯಪುಸ್ತಕೇಷು ನಷ್ಟಃ ೧ (ಉದ್ಯೋತ ೧-೧-೩೬)

ಸೂತ್ರಾರ್ಥೋ ವರ್ಣ್ಯತೇ ಯತ್ರವಾಕ್ಯೈಃ ಸೂತ್ರಾನುಸಾರಭಿಃ ।

ಸ್ವಪದಾನಿ ಚ ವರ್ಣ್ಯಂತೇ ಭಾಷ್ಯಂ ಭಾಷ್ಯವಿದೋ ವಿದುಃ ॥

(ಪಾರಾಶರೋಪಪುರಾಣ)

ಎಂಬ ನುಡಿ ಪತಂಜಲಿಯ ಭಾಷ್ಯಕ್ಕೆ ಸರಿಯಾಗಿ ಅನ್ವಯಿಸುತ್ತದೆ. ವಾರ್ತಿಕಗಳು ವೃತ್ತಿ ಸೂತ್ರಗಳೇ ಆದ್ದರಿಂದ ಅಷ್ಟಾಧ್ಯಾಯಿ ಮತ್ತು ವಾರ್ತಿಕಗಳಿಗೆ ಸಮವಾಗಿ ಭಾಷ್ಯವು ಪ್ರವೃತ್ತವಾಗಿದೆ. ಸೂತ್ರಾರ್ಥವನ್ನವಲಂಬಿಸಿ ವಾರ್ತಿಕಗಳಿಗೆ ಅವತರಣಿಕೆಯನ್ನಿತ್ತು ಅವುಗಳ ಅರ್ಥವನ್ನು ವಿವರಿಸಿ ಉದಾಹರಣೆ- ಪ್ರತ್ಯುದಾಹರಣೆಗಳನ್ನು ಪತಂಜಲಿ ಕೊಡುತ್ತಾನೆ. ಅದರ ಮೇಲೆ ನಾನಾ ಶಂಕೆಗಳನ್ನೆತ್ತಿ ಸಮಾಧಾನ ಕೊಡುತ್ತಾನೆ. ಪ್ರಾಸಂಗಿಕವಾಗಿ ಶಾಸ್ತ್ರೀಯ ದೃಷ್ಟಾಂತಗಳನ್ನೀಯುತ್ತಾನೆ. ತನ್ನ ಅಭಿಪ್ರಾಯವನ್ನು ಸ್ಪಷ್ಟಪಡಿಸಲು ವಿಪುಲವಾಗಿ ಲೌಕಿಕ ದೃಷ್ಟಾಂತಗಳನ್ನು ಕೊಡುವುದರಲ್ಲಿ ಪತಂಜಲಿ ಸಿದ್ಧಹಸ್ತ. ಅಲ್ಲಲ್ಲಿ ಚಿಕ್ಕ ಕಥಾ ಸಂದರ್ಭವನ್ನು ನೆಯ್ದು ಶಾಸ್ತ್ರೀಯ ವಿಷಯವನ್ನು ವಿಶದೀಕರಿಸುತ್ತಾನೆ. ಒಂದರ ಮೇಲೊಂದರಂತೆ ಶಂಕಾಸಮಾಧಾನಗಳು ಪುಂಖಾನುಪುಂಖವಾಗಿ ಬರುತ್ತವೆ. ಎದುರಿಗೆ ಅನೇಕ ಶಿಷ್ಯರನ್ನು ಕುಳ್ಳಿರಿಸಿಕೊಂಡು ಸಂಭಾಷಣಾರೂಪದಲ್ಲಿ ಪಾಠಹೇಳುವ ಉಪನ್ಯಾಸಕನ ಶೈಲಿ ಪತಂಜಲಿಯದು, ಶಾಸ್ತ್ರೀಯ ವಿಚಾರದಿಂದ ಮನಸ್ಸು ರೋಸಿಹೋಗದಂತೆ ನಡುನಡುವೆ ಹಾಸ್ಯದ ಅಲೆಯನ್ನೆಬ್ಬಿಸುವ ಚಮತ್ಕಾರದ ನುಡಿಗಳಿಂದ ಭಾಷ್ಯವನ್ನು ರಸಮಯವನ್ನಾಗಿ ಮಾಡಿದ್ದಾನೆ.

ಪತಂಜಲಿಯ ಮೇಧಾಶಕ್ತಿಯೂ ಘನಿಷ್ಠವಾದ ಪಾಂಡಿತ್ಯವೂ ಅಸದೃಶವಾದುದು. ವೈದಿಕ ಲೌಕಿಕ ವಾಙ್ಮಯಗಳೆಲ್ಲವೂ ಅವರಿಗೆ ಕರತಲಾಮಲಕವಾಗಿವೆ. ಭಾಷ್ಯವೆಲ್ಲವೂ ಲಲಿತ ಮನೋಹರವಾದ ಚಿಕ್ಕ ಚಿಕ್ಕ ವಾಕ್ಯಗಳಿಂದ ಕೂಡಿದೆ. ಕಠಿಣವಾದ ಶಾಸ್ತ್ರವನ್ನು ಮಾತನಾಡುವ ಸರಳ ಶೈಲಿಯಲ್ಲಿ ನಿರೂಪಿಸಿರುವುದು ವಿಸ್ಮಯಾವಹವೇ ಸರಿ. ಶಾಸ್ತ್ರವಾಙ್ಮಯದಲ್ಲಿ ಮಹಾಭಾಷ್ಯಕ್ಕೆ ಸದೃಶವಾದ ಇನ್ನೊಂದು ಕೃತಿ ದುರ್ಲಭ. "ಮಹಾಭಾಷ್ಯಂ ವಾ ಪಠನೀಯಂ ಮಹಾರಾಜ್ಯಂ ವಾ ಪಾಲನೀಯಂ" ಎಂಬ ಪ್ರಶಂಸೆಯ ನುಡಿ ಅತಿಶಯೋಕ್ತಿಯಲ್ಲ. ನಿದರ್ಶನಾರ್ಥವಾಗಿ ಭಾಷ್ಯದ ಕೆಲವು ವಾಕ್ಯಗಳನ್ನು ಇಲ್ಲಿ ಉದಾಹರಿಸಲಾಗಿದೆ.

೧. ಯದಿ ಪ್ರಯೋಗೇ ಧರ್ಮಃ, ಸರ್ವೋ ಲೋಕೋಽಭ್ಯುದಯೇನ ಯುಜ್ಯೇತ। ಕಶ್ಚೇದಾನೀಂಭವತೋ ಮತ್ಸರೋಯದಿ ಸರ್ವೋ ಲೋಕೋಽಭ್ಯುದಯೇನ ಯುಜ್ಯೇತ ? ನಖಲುಕಶ್ಚಿನ್ಮತ್ಸರಃ, ಪ್ರಯತ್ನಾನರ್ಥಕ್ಯಂ ತು ಭವತಿ । ಫಲವತಾ ಚ ನಾಮ ಪ್ರಯತ್ನೇನ ಭವಿತವ್ಯಂ (ಪಸ್ಪಶಾಹ್ನಿಕ)

೨. ಕಥಂ ಪುನರೇಕೇನ ಯತ್ನೇನ ಉಭಯಂ ಲಭ್ಯಂ ? ಲಭ್ಯಮಿತ್ಯಾಹ । ಕಥಂ ? ದ್ವಿಗತಾ ಅಪಿ ಹೇತವೋ ಭವಂತಿ । ತದ್ಯಥಾ-ಆಮ್ರಾಶ್ಚ ಸಿಕ್ತಾಃ ಪಿತರಶ್ಚ ಪ್ರೀಣಿತಾ ಇತಿ (ಪಸ್ಪಶಾಹ್ನಿಕ)

೩. ಕಾ ಪುನಃ ಕ್ರಿಯಾ ? ಈಹಾ । ಕಾ ಪುನರೀಹಾ ? ಚೇಷ್ಟಾ । ಕಾ ಪುನಶ್ಚೇಷ್ಟಾ ? ವ್ಯಾಪಾರಃ । ಸರ್ವಥಾ ಭವಾನ್ ಶಬ್ದೈರೇವ ಶಬ್ದಾನಾಚಷ್ಟೇ, ನ ಕಿಂಚಿದರ್ಥಜಾತಂ ನಿದರ್ಶಯತ್ಯೇವಂಜಾತೀಯಕಾ ಕ್ರಿಯೇತಿ (೧-೩-೧)

೪. ನ ಹಿ ದೋಷಾಃ ಸಂತೀತಿ ಪರಿಭಾಷಾನ ಕರ್ತವ್ಯಾ, ಲಕ್ಷಣಂ ವಾ ನ ಪ್ರಣೇಯಂ। ನ ಹಿ ಭಿಕ್ಷುಕಾಃ ಸಂತೀತಿ ಸ್ಥಾಲ್ಯೋನಾಧಿಶ್ರೀಯಂತೇ, ನ ಚ ಮೃಗಾಃ ಸಂತೀತಿ ಯವಾ ನೋಪ್ಯಂತೇ (೧-೧-೩೮)

೫. ಇದಮಿಹ ಸಂಪ್ರಧಾರ್ಯಂ । ಇಟ್‌ಕ್ರಿಯತಾಂ ಲೋಪ ಇತಿ । ಕಿಮಂತ್ರ ಕರ್ತವ್ಯಂ ? ಪರತ್ವಾದಿಡಾಗಮಃ । ನಿತ್ಯೋಲ್ಲೋಪಃ । ಕೃತೇಽಪೀತಿ ಪ್ರಾಪ್ನೋತ್ಯಕೃತೇಽಪಿ। ಇಡಪಿ ನಿತ್ಯಃ। ಕೃತೇಽಪಿ ಲೋಪೇ ಪ್ರಾಪ್ನೋತ್ಯಕೃತೇಽಪಿ (೭-೨-೬೭)

ಪತಂಜಲಿಯು ಪಾಣಿನಿ, ಕಾತ್ಯಾಯನರನ್ನು 'ಭಗವಾನ್, ಆಚಾರ್ಯಃ', ಎಂದು ಗೌರವ ನಾಮಗಳಿಂದ ವ್ಯವಹರಿಸಿದ್ದಾನೆ. ಕೆಲವು ಕಡೆ ಸೂತ್ರವಾರ್ತಿಕಗಳೆರಡನ್ನು ಒಪ್ಪದೆ ಸ್ವಂತತ್ರವಾಗಿ 'ಇಷ್ಯತೇ, ಇಷ್ಟಿಃ' ಎಂದು ತನ್ನ ಅಭಿಪ್ರಾಯವನ್ನು ಕೊಡುವುದುಂಟು. ವ್ಯಾಕರಣ ಸಂಪ್ರದಾಯದಲ್ಲಿ ಸೂತ್ರಕ್ಕಿಂತ ವಾರ್ತಿಕಕ್ಕೂ ವಾರ್ತಿಕಕ್ಕಿಂತ ಭಾಷ್ಯಕ್ಕೂ ಹೆಚ್ಚಿನ ಪ್ರಾಮಣ ಉಂಟು.[1]

## ಉಪಸಂಹಾರ

ಪಾಣಿನಿ, ಕಾತ್ಯಾಯನ, ಪತಂಜಲಿ ಈ ಮೂವರೇ ಪ್ರಮಾಣಭೂತರಾದ ಆಚಾರ್ಯರೆಂದೂ, ಮುನಿತ್ರಯವೆಂದೂ ಪಾಣಿನಿಯ. ವ್ಯಾಕರಣ ಸಂಪ್ರದಾಯವು ಮನ್ನಿಸುತ್ತದೆ. ಈ ಮುನಿತ್ರಯದ ಹೇಳಿಕೆಗೆ ವ್ಯತಿರಿಕ್ತವಾದುದು ಪ್ರಾಮಾಣಿಕವಲ್ಲವೆಂದು ತಿಳಿಯಲಾಗಿದೆ. ಮುಂದೆ ಹುಟ್ಟಿದ ಅಸಂಖ್ಯಾತ ಗ್ರಂಥಗಳೆಲ್ಲವೂ ಈ ಅಂಶವನ್ನು ಪುರಸ್ಕರಿಸಿವೆ.

---

೧ 'ಯಥೋತ್ತರಂ ಮುನೀನಾಂ ಪ್ರಾಮಾಣ್ಯಂ'ಸಿ. ಕಾ. (೧-೧-೨೯) ಶಾಸ್ತ್ರಾಂತರದ ಭಾಷ್ಯಗಳಿಗೆ ವ್ಯತಿರಿಕ್ತವಾಗಿ ಪತಂಜಲಿಯ ಭಾಷ್ಯವು 'ಇಷ್ಟಿಘಟಿತ'ವಾಗಿ ಸೂತ್ರಕ್ಕಿಂತ ಅಧಿಕವಾದ ಪ್ರಾಮಾಣ್ಯವನ್ನು ಗಳಿಸಿಕೊಂಡಿರುವುದರಿಂದ ಇದಕ್ಕೆ 'ಮಹಾಭಾಷ್ಯ'ವೆಂಬ, ಹೆಸರು ಬಂದಿದೆಯೆನ್ನುತ್ತಾರೆ. ಪತಂಜಲಿಯನ್ನು 'ಆದಿಶೇಷ'ನ ಅವತಾರವೆಂದು ಗೌರವಿಸಲಾಗಿದೆ.

ವ್ಯಾಕರಣ ಶಾಸ್ತ್ರದ ದಾರ್ಶನಿಕ ಗ್ರಂಥಗಳಾಗಲಿ, ಪ್ರಕ್ರಿಯಾಗ್ರಂಥಗಳಾಗಲಿ ಬೆಳೆಸಿರುವ ವಾದಸರಣಿಗೆ ಈ ಮೂವರ ವಚನಗಳೇ ಮೂಲಸ್ರೋತಗಳು.

## ೪ ಭರ್ತೃಹರಿ [ಕ್ರಿ. ಶ. ಸು.೪೫೦]

ಪಾಣಿನೀಯ ಸಂಪ್ರದಾಯದಲ್ಲಿ ಪತಂಜಲಿಯ ತರುವಾಯ ಭರ್ತೃಹರಿಗೆ ತುಂಬ ಗೌರವದ ಸ್ಥಾನವಿದೆ, 'ಭಗವಾನ್ ಭರ್ತೃಹರಿ:' ಎಂದು ವೈಯಾಕರಣರು ಈತನನ್ನು ಉಲ್ಲೇಖಿಸುತ್ತಾರೆ, ಹರಿ ಎಂಬುದು ಈತನ ಸಂಕ್ಷಿಪ್ತನಾಮ. ಈತನು ಮಹಾ ವೈಯಾಕರಣನೂ ಮಹಾ ದಾರ್ಶನಿಕನೂ ಆಗಿದ್ದನು.

ಕಾಲ :—ಚೀನದೇಶದ ಯಾತ್ರಿಕನಾದ ಇತ್ಸಿಂಗನ ಪ್ರಕಾರ ಕ್ರಿ. ಶ. ೬೫೦ ರಲ್ಲಿ ಭರ್ತೃಹರಿಯು ಮೃತನಾದನೆಂದು ತಿಳಿದುಬರುತ್ತದೆ. ಭರ್ತೃಹರಿಯು ಮೃತನಾಗಿ ೪೦ ವರ್ಷಗಳಾದವೆಂದು ಕ್ರಿ. ಶ. ಸು. ೬೯೦ ರಲ್ಲಿ ಇತ್ಸಿಂಗನು ಬರೆದಿದ್ದಾನೆ. ಅಲ್ಲದೆ ಭರ್ತೃಹರಿಯು ಬೌದ್ಧಮತಾವಲಂಬಿಯಾಗಿದ್ದನೆಂದೂ, ಏಳು ಸಲ ಸಂನ್ಯಾಸಿಯಾಗಿ ಮತ್ತೆ ಗೃಹಸ್ಥನಾಗುತ್ತಿದ್ದನೆಂದೂ ಇತ್ಸಿಂಗನು ಹೇಳುತ್ತಾನೆ. ಈ ಸಂದರ್ಭದಲ್ಲಿ ಪರಿಶೀಲನೀಯವಾದ ಅಂಶಗಳು ಇವು—

೧. ಕಾಶಿಕಾಕಾರನಾದ ಜಯಾದಿತ್ಯನು ಕ್ರಿ. ಶ. ೬೬೦ರಲ್ಲಿ ಮೃತನಾದನೆಂದು ಇತ್ಸಿಂಗನು ಹೇಳುತ್ತಾನೆ. ಜಯಾದಿತ್ಯನು ಕಾಶಿಕೆಯನ್ನು ರಚಿಸಿದ ಕಾಲ ಕ್ರಿ. ಶ. ಸು. ೬೫೦ ಇರಬಹುದು. ಅಷ್ಟಾ ೪-೩-೮೮ ನೇ ಸೂತ್ರದ ಕಾಶಿಕೆಯಲ್ಲಿ ಭರ್ತೃಹರಿಯ ವಾಕ್ಯಪದೀಯದ ಉಲ್ಲೇಖವಿದೆ, ಅಷ್ಟರಲ್ಲಿಯೇ ವಾಕ್ಯಪದೀಯವು ಪ್ರಸಿದ್ಧವಾಗಿತ್ತೆಂದೂ, ಜಯಾದಿತ್ಯನು ಸಮಕಾಲಿಕವಾದ ಗ್ರಂಥವನ್ನು ಉಲ್ಲೇಖಿಸಿದ್ದಾನೆಂದೂ ನಂಬುವುದು ಕಷ್ಟ.

೨. ವಾಗ್ಭಟನ ಸಾಕ್ಷಾತ್ ಶಿಷ್ಯನಾದ ಇಂದುವು ಅಷ್ಟಾಂಗಸಂಗ್ರಹದ ಉತ್ತರತಂತ್ರದ (ಅಧ್ಯಾ. ೫೦) ವ್ಯಾಖ್ಯಾನದಲ್ಲಿ ವಾಕ್ಯಪದೀಯದ 'ಸಂಯೋಗೋ ವಿಪ್ರಯೋಗಶ್ಚ...' ಇತ್ಯಾದಿ ಶ್ಲೋಕದ್ವಯವನ್ನು ಹರಿಯದೆಂದು ಉದ್ಧರಿಸಿದ್ದಾನೆ. ವಾಗ್ಭಟನು ಎರಡನೆಯ ಚಂದ್ರಗುಪ್ತನ ಕಾಲದಲ್ಲಿ (ಕ್ರಿ. ಶ. ೩೭೭-೪೧೨) ಇದ್ದನೆಂದು ಇತಿಹಾಸಜ್ಞರು ಹೇಳಿದ್ದಾರೆ.

ಇತ್ಯಾದಿ ಪ್ರಮಾಣಗಳಿಂದ ಭರ್ತೃಹರಿಯು ಕ್ರಿ.ಶ. ೩ನೆಯ ಶತಮಾನದಲ್ಲಿದ್ದಿರಬೇಕೆಂದು ಕೆಲವು ವಿಮರ್ಶಕರು ಅಭಿಪ್ರಾಯ ಪಡುತ್ತಾರೆ.[1] ಆದರೆ ಕ್ರಿ. ಶ. ೫ನೇ ಶತಮಾನದಲ್ಲಿದ್ದ

---

೧. ನೋಡಿ : ಭರ್ತೃಹರಿಯ ಕಾಲ, ಗಂಗಾನಾಥ ಝಾ ರಿಸರ್ಚ್ ಇನ್ಸ್ಟಿಟ್ಯೂಟ್ ಜರ್ನಲ್ ಭಾಗ ೧೫, ಅಂಕ ೨-೪ (ಸಮ್ಮಿಲಿತ). ವ್ಯಾಕರಣಶಾಸ್ತ್ರಕಾ ಇತಿಹಾಸ (ಪ್ರ, ಭಾಗ ಪುಟ. ೩೬೫-೩೬೮)

ದಿಙ್ನಾಗನು ವಾಕ್ಯಪದೀಯವನ್ನು ಉದಾಹರಿಸಿರುವುದರಿಂದ ಭರ್ತೃಹರಿಯು ೫ನೇ ಶತಕಕ್ಕಿಂತ ಅರ್ವಾಚೀನನಲ್ಲವೆಂದು ಖಚಿತವಾಗಿ ಹೇಳಬಹುದು.

ಭರ್ತೃಹರಿಯು ಬೌದ್ಧನೆಂಬುದು ಮಾತ್ರ ಎಂದಿಗೂ ವಿಶ್ವಾಸಾರ್ಹವಲ್ಲ. ಇವನು ವೇದವೇ ಪ್ರಮಾಣವೆಂದು ಸಾರಿದ ಪರಮ ವೈದಿಕನೆಂಬುದಕ್ಕೆ ಇವನ ವಾಕ್ಯಪದೀಯದಲ್ಲಿ ಆಧಾರಗಳಿವೆ.[1] ಜೈನ ವಿದ್ವಾಂಸನಾದ ವರ್ಧಮಾನನು ಭರ್ತೃಹರಿಯನ್ನು 'ವೇದವಿದಾಮಲಂಕಾರಭೂತಃ' ಎಂದು ಉಲ್ಲೇಖಿಸಿದ್ದಾನೆ.[2] ಆಸ್ತಿಕರಾದ ಉತ್ಪಲದೇವ, ಅಭಿನವಗುಪ್ತ-ಮೊದಲಾದ ಪ್ರಾಚೀನ ದಾರ್ಶನಿಕರು ಈತನನ್ನು ಪ್ರಾಮಾಣಿಕ ಆಚಾರ್ಯನೆಂದು ಗೌರವಿಸಿ 'ಭಗವಾನ್' ಎಂದು ಉಲ್ಲೇಖಿಸಿದ್ದಾರೆ. ಇತ್ಸಿಂಗನು ಯಾವುದೋ ದಂತಕಥೆಯನ್ನು ಕೇಳಿ ಭ್ರಾಂತನಾಗಿರಬೇಕು. ಭರ್ತೃಹರಿಯು ಅದ್ವೈತದರ್ಶನವನ್ನವಲಂಬಿಸಿ ಶಬ್ದಶಾಸ್ತ್ರದ ಪದಾರ್ಥಗಳನ್ನು ವಿವರಿಸಿದ್ದಾನೆ.[3]

## ಭರ್ತೃಹರಿಯ ಗ್ರಂಥಗಳು

೧. ಮಹಾಭಾಷ್ಯದೀಪಿಕಾ.

೨. ವಾಕ್ಯಪದೀಯ (೩ ಕಾಂಡಗಳು)

೩. ವಾಕ್ಯಪದೀಯದ ೧–೨ ಕಾಂಡಗಳಿಗೆ ಸ್ವೋಪಜ್ಞಟೀಕಾ

---

೧. 1. ನ ಚಾಗಮಾದೃತೇ ಧರ್ಮಸ್ತರ್ಕೇಣ ವ್ಯವತಿಷ್ಠತೇ ।
—ವಾಕ್ಯ. ಬ್ರಹ್ಮ, ೪೭

2. ವೇದಶಾಸ್ತ್ರಾವಿರೋಧೀ ಚ ತರ್ಕಶ್ಚಕ್ಷುರಪಶ್ಯತಾ । —ಅದೇ ೧೩೭

3. ಪ್ರಾಪ್ತ್ಯುಪಾಯೋಽನುಕಾರಶ್ಚ ತಸ್ಯ ವೇದೋ ಮಹರ್ಷಿಭಿಃ ।
ಏಕೋಽಪ್ಯನೇಕವರ್ತ್ಮೇವ ಸಮಾಮ್ನಾತಃ ಪೃಥಕ್ ಪೃಥಕ್ ॥
—ಇತ್ಯಾದಿ—ಅದೇ ೫

೨. ಗಣರತ್ನಮಹೋದಧಿ, ಪುಟ ೨೭೪

೩. 1. ಯತ್ರ ದ್ರಷ್ಟಾ ಚ ದೃಶ್ಯಂ ಚ ದರ್ಶನಂ ಚ ವ್ಯವಸ್ಥಿತಂ ।
—ವಾಕ್ಯ. ಬ್ರಹ್ಮ.

2. ವಿವರ್ತತೇಽರ್ಥಭಾವೇನ... ।
ಅದೇ. ೧

3. ಏಷ ಚ ಸರ್ವತ್ರೈವಾಸ್ಯ ಗ್ರಂಥಕಾರಸ್ಯ ಅಭಿಪ್ರಾಯಃ । ಪದಾರ್ಥಚರ್ಚಾ ವಿಷಯೇ ಬ್ರಹ್ಮದರ್ಶನನಯೇನೈವ ಸಂಬಂಧಾದಿವಿಚಾರೇ ವಿನಿಗಮನಾತ್ ।
ಹೇಲಾರಾಜಟೀಕಾ. ವಾಕ್ಯ ೩–೩೫

4. ...ಅದ್ವೈತೇ ಬ್ರಹ್ಮಣಿ ವ್ಯುತ್ಪಾದ್ಯತಾಂ...
—ಶಬ್ದಕೌಸ್ತುಭ, ಪ್ರಥಮಾಹ್ನಿಕ

ವರ್ಧಮಾನನು ಗಣರತ್ನ ಮಹೋದಧಿಯಲ್ಲಿ ಭರ್ತೃಹರಿಯನ್ನು 'ಮಹಾಭಾಷ್ಯತ್ರಿಪಾದ್ಯಾ ವ್ಯಾಖ್ಯಾತಾ' ಎಂದು ಕರೆದಿದ್ದಾನೆ. ಮಹಾಭಾಷ್ಯದೀಪಿಕೆಯಲ್ಲಿ ಒಂದು ತ್ರುಟಿತಹಸ್ತಪ್ರತಿ ಜರ್ಮನ್ ರಾಯಲ್ ಲೈಬ್ರರಿಯಲ್ಲಿ ದೊರಕಿದೆ. ವಾಕ್ಯಪದೀಯದಲ್ಲಿ ಆಗಮಕಾಂಡ (ಬ್ರಹ್ಮಕಾಂಡ), ವಾಕ್ಯಕಾಂಡ, ಪ್ರಕೀರ್ಣಕಾಂಡಗಳೆಂದು ೩ ಕಾಂಡಗಳಿದ್ದು ಒಟ್ಟು ಸುಮಾರು ೨೦೦೦ ಶ್ಲೋಕಗಳಿವೆ. ಇದು ವ್ಯಾಕರಣಶಾಸ್ತ್ರಕ್ಕೆ ಸಂಬಂಧಿಸಿದ ಪ್ರೌಢವಾದ ದಾರ್ಶನಿಕಗ್ರಂಥ.

ಭಟ್ಟಿಕಾವ್ಯ ಮತ್ತು ಶತಕತ್ರಯವನ್ನು ಈ ಭರ್ತೃಹರಿಯೇ ಬರೆದನೆಂದು ಹೇಳಿಕೆಯಿಂದೆ. ಭಾಗವೃತ್ತಿಯನ್ನು ಬರೆದ ಭರ್ತೃಹರಿ ಈತನಲ್ಲ. ಮೀಮಾಂಸಾಭಾಷ್ಯ, ವೇದಾಂತಸೂತ್ರವೃತ್ತಿಗಳನ್ನೂ ವೈಯಾಕರಣನಾದ ಈ ಭರ್ತೃಹರಿ ರಚಿಸಿದ್ದನೆಂದು ತಿಳಿದುಬರುತ್ತದೆ.
ವಾಕ್ಯಪದೀಯದಲ್ಲಿ : ಅನಾದಿನಿಧನಂ ಬ್ರಹ್ಮ ಶಬ್ದತತ್ತ್ವಂ ಯದಕ್ಷರಂ

ವಿವರ್ತತೇಽರ್ಥಭಾವೇನ ಪ್ರಕ್ರಿಯಾ ಜಗತೋ ಯತಃ॥ (ಬ್ರಹ್ಮ. ೧)

'ವಿವರ್ತತೇ' ಎಂಬ ಪ್ರಯೋಗವಿದೆ. ವಿವರ್ತವಾದದ ಸೂಚನೆ ಪ್ರಥಮವಾಗಿ ಇಲ್ಲಿ ದೊರಕುತ್ತದೆ.

ಭರ್ತೃಹರಿಯು ಮಹಾಭಾಷ್ಯದ ಮೊದಲನೆಯ ಮೂರು ಪಾದಗಳಿಗೆ ವ್ಯಾಖ್ಯಾನವನ್ನು ಬರೆದನೆಂದು ಪ್ರತೀತಿ ಇದ್ದರೂ ಸಂಪೂರ್ಣಭಾಷ್ಯಕ್ಕೆ ವ್ಯಾಖ್ಯಾನವನ್ನು ಬರೆದಿದ್ದನೆಂದೂ ಉಳಿದ ಭಾಗಗಳು ದೊರೆತಿಲ್ಲವೆಂದೂ ಹೇಳಬೇಕಾಗಿದೆ. ಕೈಯಟನು ತನ್ನ ಪ್ರದೀಪವ್ಯಾಖ್ಯಾನದ ಆರಂಭದಲ್ಲಿ ಭಾಷ್ಯಟೀಕೆಯನ್ನು ಬರೆಯಲು ಭರ್ತೃಹರಿಯಿಂದ ಉಪಕೃತನಾದನೆಂದು ಸ್ಪಷ್ಟವಾಗಿ ಹೇಳಿದ್ದಾನೆ ೧. ಕೇವಲ ತ್ರಿಪಾದೀವ್ಯಾಖ್ಯಾನದಿಂದಾಗಲಿ, ವಾಕ್ಯಪದೀಯದಿಂದಾಗಲಿ, ಸಂಪೂರ್ಣಭಾಷ್ಯಕ್ಕೆ ಟೀಕೆಯನ್ನು ಬರೆಯಲು ಉಪಕಾರವಾಯಿತೆಂದು ಹೇಳುವುದು ಕಷ್ಟ.

ಪಾಣಿನಿ ಸಂಪ್ರದಾಯದಲ್ಲಿ ಪತಂಜಲಿಯ ತರುವಾಯ ಭರ್ತೃಹರಿಗೆ ಸಂದಷ್ಟು ಗೌರವ ಇನ್ನುಯಾರಿಗೂ ದೊರಕಲಿಲ್ಲ. ವಾಕ್ಯಪದೀಯವು ಆತನ ಸೂಕ್ಷ್ಮದರ್ಶಿತೆಗೂ ವಿಭಿನ್ನದರ್ಶನಗಳಲ್ಲಿ ಅವನಿಗಿದ್ದ ಘನಿಷ್ಠ ಪಾಂಡಿತ್ಯಕ್ಕೂ ನಿದರ್ಶನವಾಗಿದೆ. ಸೂತ್ರ, ವಾರ್ತಿಕ, ಭಾಷ್ಯಗಳಲ್ಲಿ ಸೂಕ್ಷ್ಮವಾಗಿ ಬಂದಿರುವ ಪ್ರಕೃತ್ಯರ್ಥ, ಪ್ರತ್ಯಯಾರ್ಥ, ಕಾರಕಭೇದಗಳು, ಕ್ರಿಯೆ, ಕಾಲ, ದಿಕ್ಕು, ಸಂಬಂಧ, ಶಕ್ತಿ ಮೊದಲಾದ ದಾರ್ಶನಿಕ ವಿಷಯಗಳನ್ನು ವಾಕ್ಯಪದೀಯದಲ್ಲಿ ವಿಪುಲವಾಗಿ ವಿವೇಚಿಸಿದ್ದಾನೆ. ತನ್ನ ವಿವೇಚನೆಯಲ್ಲಿ ಭರ್ತೃ ಹರಿಯು ವೈದಿಕ ಉದಾಹರಣೆಗಳನ್ನು ಕೊಡುವುದೇ ಅಧಿಕ. ವಾದ ವಿವಾದಗಳನ್ನು ಬೆಳಸದೆ ಪ್ರಮೇಯವನ್ನು ಮಾತ್ರ ನಿರೂಪಿಸುತ್ತಾ ಹೋಗುವುದು ಈತನ ಒಂದು ವೈಶಿಷ್ಟ್ಯವಾಗಿದೆ. ತನಗೆ ಸಮ್ಮತವಲ್ಲದ ದರ್ಶನಾಂತರ ವಿಷಯಗಳನ್ನು

---

೧ ತಥಾಪಿ ಹರಿಬದ್ಧೇನ ಸಾರೇಣ ಗ್ರಂಥಸೇತುನಾ ।
ಕ್ರಮಮಾಣಃ ಶನೈಃ ಪಾರಂ ತಸ್ಯ ಪ್ರಾಪ್ತಾಸ್ಮಿಪಂಗುವತ್ ॥
— ಭಾಷ್ಯಪ್ರದೀಪದ ಆದಿಯಲ್ಲಿ

ಅನುವಾದಿಸಿ ಕೈಬಿಡುತ್ತಾನೆಯೇ ಹೊರತು ಅವನ್ನು ಖಂಡಿಸುವುದಿಲ್ಲ. ಯುಕ್ತಿಗಿಂತ ಆಗಮವೇ (ವೇದ) ಪ್ರಬಲವಾದ ಪ್ರಮಾಣವೆಂದು ಭರ್ತೃಹರಿಯ ಅಭಿಮತ :—

ಯತ್ನೇನಾನುಮಿತೋಽಪ್ಯರ್ಥಃ ಕುಶಲೈರನುಮಾತೃಭಿಃ ।
ಅಭಿಯುಕ್ತತರೈರನ್ಯೈರನ್ಯಥೈವೋಪಪಾದ್ಯತೇ ॥
ಹಸ್ತಸ್ಪರ್ಶಾದಿವಾಂಧೇನ ವಿಷಮೇ ಪಥಿ ಧಾವತಾ ।
ಅನುಮಾನಪ್ರಧಾನೇನ ವಿನಿಪಾತೋ ನ ದುರ್ಲಭಃ ॥

— ವಾಕ್ಯ. ಬ್ರಹ್ಮ. ೩೪, ೪೨

ವ್ಯಾಡಿಯ ಸಂಗ್ರಹವು ದುರ್ದೈವದಿಂದ ನಷ್ಟವಾಗಿದ್ದರೂ ಭರ್ತೃಹರಿಯ ವಾಕ್ಯಪದೀಯವು ದೊರಕಿದೆಯೆಂದು ಸಮಾಧಾನ ಪಡೆಬೇಕಾಗಿದೆ. ಶಬ್ದಾದ್ವೈತದರ್ಶನ ಅಥವಾ ವ್ಯಾಕರಣದರ್ಶನ ಎಂಬುದು ರೂಪಿತವಾಗಿರುವುದು ಭರ್ತೃಹರಿಯ ವಾಕ್ಯಪದೀಯದಿಂದಲೇ ಎನ್ನಬಹುದು.

## ೫. ಜಯಾದಿತ್ಯ–ವಾಮನ [ಕಿ. ಶ: ೬೫೦]

ಪಾಣಿನಿಯ ಅಷ್ಟಾಧ್ಯಾಯಿಗೆ ಸುಮಾರು ೩೦ ವೃತ್ತಿಗಳು ರಚಿತವಾಗಿದ್ದವೆಂದು ತಿಳಿದು ಬರುತ್ತದೆ. ಇವುಗಳಲ್ಲಿ ಉಪಲಬ್ಧವಾದ ಶ್ರೇಷ್ಠವೃತ್ತಿ ಕಾಶಿಕಾ. ಕಾಶಿಯಲ್ಲಿ ಬರೆದ ಗ್ರಂಥವಾದ್ದರಿಂದ ಕಾಶಿಕಾ ಎಂದು ಅನ್ವರ್ಥನಾಮ. ಕಾಶಿಕೆಯಲ್ಲಿ ಮೊದಲನೆಯ ೫ ಅಧ್ಯಾಯಗಳನ್ನು ಜಯಾದಿತ್ಯನೂ ಕಡೆಯ ೩ ಅಧ್ಯಾಯಗಳನ್ನು ವಾಮನನೂ ರಚಿಸಿದ್ದಾರೆ ವಾಮನನು ಬರೆದ ಭಾಗ ಹೆಚ್ಚು ಪ್ರೌಢವಾಗಿದೆ ಸಂಮಿಶ್ರವೃತ್ತಿಗೆ ಜಿನೇಂದ್ರ ಬುದ್ಧಿಯ ನ್ಯಾಸ, ಹರದತ್ತನ ಪದಮಂಜರಿ ಎಂಬ ಎರಡು ವ್ಯಾಖ್ಯಾನಗಳಿವೆ.

ಇತ್ಸಿಂಗನ ಹೇಳಿಕೆಯಂತೆ ಕಾಶಿಕಾಕಾರನಾದ ಜಯಾದಿತ್ಯನು ಕಿ. ಶ.ಸಂ. ೬೫೦ರಲ್ಲಿ ಮೃತನಾದನೆಂದು ತಿಳಿದು ಬರುತ್ತದೆ. ಭಾಗವೃತ್ತಿಕಾರನು (ಕ್ರಿ ಶ. ೬೬೦) ವಾಮನನ ಮತವನ್ನು ಅನೇಕ ಕಡೆ ದೂಷಿಸಿರುವುದರಿಂದ ವಾಮನನು ಭಾಗವೃತ್ತಿಕಾರನಿಗಿಂತ ಹಿಂದಿನವನು ವಾಮನ–ಜಯಾದಿತ್ಯರು ಸಮಕಾಲಿಕರಾಗಿರಬಹುದು.

### ಕಾಶಿಕಾವೃತ್ತಿಯ ಶ್ರೇಷ್ಠತೆ

ಉಪಲಬ್ಧ ವೃತ್ತಿಗಳಲ್ಲಿ ಇದು ಅತ್ಯಂತ ಪ್ರಾಚೀನವೂ ಸಮಗ್ರವೂ ಆಗಿದೆ. ಅಷ್ಟಾಧ್ಯಾಯೀಕ್ರಮದಲ್ಲಿ ಇದನ್ನು ಬರೆಯಲಾಗಿದ್ದು, ಅನುವೃತ್ತಿ, ಸರಳವಾದ ಸೂತ್ರಾರ್ಥ, ಉದಾಹರಣೆ ಪ್ರತ್ಯುದಾಹರಣೆಗಳಿಂದ ಈ ವೃತ್ತಿ ಅತ್ಯಂತ ಉಪಯುಕ್ತವಾದ ಗ್ರಂಥವಾಗಿದೆ. ಪ್ರಾಚೀನ

ವೃತ್ತಿಗಳಲ್ಲಿ ಗಣಪಾಠವನ್ನು ಸೇರಿಸಿಲ್ಲವೆಂದೂ, ಕಾಶಿಕೆಯಲ್ಲಿ ಅದನ್ನು ಯಥಾಸ್ಥಾನದಲ್ಲಿ ಸೇರಿಸಲಾಗಿದೆಯೆಂದೂ, ಹರದತ್ತನು ಹೇಳಿದ್ದಾನೆ. ಈಗ ವಿಲುಪ್ತವಾದ ಪ್ರಾಚೀನ ವೃತ್ತಿಗಳ ಸಾರವನ್ನು ಕಾಶಿಕೆಯಲ್ಲಿ ಸೇರಿಸಲಾಗಿದೆ. ಈಗ ಅಪ್ರಸಿದ್ಧವಾದ ಪ್ರಾಚೀನ ಪ್ರಯೋಗಗಳೂ ಐತಿಹಾಸಿಕವಾದ ಅಂಶಗಳೂ ಉದಾಹರಣೆಯಲ್ಲಿ ಲಭಿಸುತ್ತವೆ. ಈ ಎಲ್ಲ ಕಾರಣಗಳಿಂದ ಕಾಶಿಕೆಯು ಒಂದು ಪ್ರಶಂಸಾರ್ಹವಾದ ಕೃತಿಯಾಗಿದೆ.

ಭಾಗವೃತ್ತಿಯೆಂಬುದು ಅಷ್ಟಾಧ್ಯಾಯಿಗೆ ಬರೆದ ಒಂದು ವೃತ್ತಿ. ಇದು ಉಪಲಬ್ಧವಾಗಿಲ್ಲವಾದರೂ ಕೈಯಟ, ಹರದತ್ತ, ಭಟ್ಟೋಜಿದೀಕ್ಷಿತ-ಮೊದಲಾದವರು ಇದರಿಂದ ವಿಪುಲವಾಗಿ ಉದ್ಧರಿಸಿದ್ದಾರೆ. ಇದರಲ್ಲಿ ವಿಶೇಷವಾಗಿ ಕಾಶಿಕೆಯನ್ನು ಖಂಡಿಸಲಾಗಿದೆ. ಕಾತಂತ್ರ ಪರಿಶಿಷ್ಟದಲ್ಲಿ 'ವಿಮಲಮತಿ 'ಯು ಭಾಗವೃತ್ತಿಯನ್ನು ರಚಿಸಿದನೆಂದು ಬರೆದಿದೆ. ಅವನ ಕಾಲ ಕ್ರಿಸ್ತೀಯ ೭ನೆಯ ಶತಕದ ಉತ್ತರಾರ್ಧವಿರಬಹುದು.

## ೭. ಜಿನೇಂದ್ರಬುದ್ಧಿ [ಕ್ರಿ. ಶ. ೮ನೆಯ ಶತಮಾನ]

ಈತನು ಕಾಶಿಕಾವೃತ್ತಿಗೆ ಕಾಶಿಕಾವಿವರಣಪಂಜಿಕಾ ಅಥವಾ ನ್ಯಾಸವೆಂದು ಸುಪ್ರಸಿದ್ಧವಾದ ವ್ಯಾಖ್ಯಾನವನ್ನು ಬರೆದಿದ್ದಾನೆ. ಜಿನೇಂದ್ರಬುದ್ಧಿಗೆ 'ಬೋಧಿಸತ್ವದೇಶೀಯ' ಎಂಬ ಬಿರುದಿತ್ತು. ಇವನು ಬೌದ್ಧಮತದವನು.

### ಕಾಲ

ಹರದತ್ತನು ಪದಮಂಜರಿಯಲ್ಲಿ (೪-೧-೪೨) ನ್ಯಾಸಕಾರವನ್ನು ನಿರ್ದೇಶಿಸಿರುವುದರಿಂದ ಇವನು ಹರದತ್ತನಿಗಿಂತ ಪ್ರಾಚೀನ, ಡಾ॥ ಯಾಕೋಬಿಯವರು ಕ್ರಿ. ಶ. ೮೭೮ರಲ್ಲಿ ಹರದತ್ತನ ದೇಹಾವಸಾನವಾಯಿತೆಂದು ಹೇಳುತ್ತಾರೆ[1]. ಆದ್ದರಿಂದ ಕಾಶಿಕಾ-ಪದಮಂಜರಿಗಳಿಗೆ ಮಧ್ಯವರ್ತಿಯಾಗಿ ಈತನು ಇದ್ದಿರಬೇಕು. ಕ್ರಿ. ಶ. ೮ನೆಯ ಶತಮಾನ ಜಿನೇಂದ್ರಬುದ್ಧಿಯ ಕಾಲವೆಂದು ಹೇಳಬಹುದು. ಆದರೆ ಹರದತ್ತನ ಕಾಲ ಕ್ರಿ. ಶ. ೧೧ನೆಯ ಶತಮಾನವೆಂಬ ಪಕ್ಷದಲ್ಲಿ ಈತನ ಕಾಲ ಇನ್ನೂ ಅರ್ವಾಚೀನವಾಗುತ್ತದೆ.

ಭಾಮಹನು (ಕ್ರಿ. ಶ. ಸು. ೫೦೦) 'ಶಿಷ್ಟಪ್ರಯೋಗಮಾತ್ರೇಣ ನ್ಯಾಸಕಾರಮತೇನ ವಾ' (ಕಾವ್ಯ ೬-೩೬) ಎಂದೂ, ಮಾಘನು (ಕಿ. ಶ. ೭೦೦) 'ಅನುತ್ಸೂತ್ರಪದನ್ಯಾಸಾ...' (ಶಿಶು. ೨-೧೧೨) ಎಂದೂ ನ್ಯಾಸವನ್ನು ಉಲ್ಲೇಖಿಸಿದ್ದಾರೆ. ಅವರಿಬ್ಬರೂ ಕಾಶಿಕಾಕಾರನಿಗಿಂತ

---

೧. ರಾಯಲ್ ಏಷಿಯಾಟಿಕ್ ಸೊಸೈಟಿ ಜರ್ನಲ್, ಬೊಂಬಾಯಿ. ಭಾಗ ೨೩-ಪು. ೩೧)

ಪ್ರಾಚೀನರಾದ್ದರಿಂದ ಅವರು ಹೇಳುವ ನ್ಯಾಸವು ಜಿನೇಂದ್ರಬುದ್ಧಿಯದಲ್ಲವೆಂದು ಹೇಳಬೇಕಾಗುತ್ತದೆ. ನ್ಯಾಸವೆಂಬ ಹೆಸರಿನ ಅನೇಕ ವ್ಯಾಕರಣಗ್ರಂಥಗಳಿದ್ದವೆಂಬುದಕ್ಕೆ ಆಧಾರ ಉಂಟು.

ಜಿನೇಂದ್ರಬುದ್ಧಿಯ ನ್ಯಾಸ ಪ್ರೌಢವಾದುದು. 'ಸೂತ್ರೇಷ್ವೇವ ಹಿ ತತ್ಸರ್ವಂ ಯದ್ವೃತ್ತೌ ಯಚ್ಚ ವಾರ್ತಿಕೇ' ಎಂಬ ಸಿದ್ಧಾಂತವನ್ನಿಟ್ಟುಕೊಂಡು ವಾರ್ತಿಕ ಮತ್ತು ವೃತ್ತಿಗಳಲ್ಲಿ ಹೇಳಿದ ವಿಷಯವೆಲ್ಲವೂ ಸೂತ್ರಾಕ್ಷರಗಳಿಂದಲೇ ಸಿದ್ಧವಾಗುವುದೆಂದು ಈತನು ಸಾಧಿಸಿದ್ದಾನೆ. ನ್ಯಾಸವು ಪಾಣಿನಿಸಂಪ್ರದಾಯಕ್ಕೆ ಬೌದ್ಧಮತೀಯರು ನೀಡಿದ ಉತ್ತಮವಾದ ಕಾಣಿಕೆ.

## ೭. ವೃಷಭದೇವ

ಭರ್ತೃಹರಿಯ ವಾಕ್ಯಪದೀಯದ ಮೊದಲನೇ ಎರಡು ಕಾಂಡಗಳಿಗೆ ಸ್ವೋಪಜ್ಞವೃತ್ತಿ ಇದೆ. ಒಂದನೆಯ ಕಾಂಡದ ಸ್ವೋಪಜ್ಞವೃತ್ತಿಗೆ ವೃಷಭದೇವನು ಪ್ರೌಢವಾದ ವ್ಯಾಖ್ಯಾನವನ್ನು ಬರೆದಿದ್ದಾನೆ. ಪ್ರಸ್ತಾವನಾಶ್ಲೋಕಗಳಿಂದ ಈತನು ಶ್ರೀದೇವಯಶಸ್ಸಿನ ಮಗನೆಂದೂ, ವಿಷ್ಣುಗುಪ್ತರಾಜನ ಆಶ್ರಿತನೆಂದೂ ತಿಳಿದು ಬರುತ್ತದೆ. ವಾಕ್ಯಪದೀಯಕ್ಕೆ ಅನೇಕ ಟೀಕೆಗಳಿದ್ದವೆಂದು ವೃಷಭದೇವನು ಹೇಳಿದ್ದಾನೆ. ಈತನ ಕಾಲದೇಶಾದಿಗಳು ಸರಿಯಾಗಿ ತಿಳಿದು ಬಂದಿಲ್ಲ.

## ೮. ಪುಣ್ಯರಾಜ [ಕ್ರಿ. ಶ. ೧೧ನೆಯ ಶತಮಾನ]

ವಾಕ್ಯಪದೀಯದ ಎರಡನೆಯ ವಾಕ್ಯಕಾಂಡಕ್ಕೆ ಇವನು ಟೀಕೆಯನ್ನು ಬರೆದಿದ್ದಾನೆ, ಶಶಾಂಕನ ಶಿಷ್ಯನಿಂದ ತಾನು ವಾಕ್ಯಪದೀಯವನ್ನು ಅಧ್ಯಯನ ಮಾಡಿದನೆಂದು ಹೇಳಿದ್ದಾನೆ. ವಾಮನನ ಕಾವ್ಯಾಲಂಕಾರಸೂತ್ರಕ್ಕೆ ಟೀಕೆಯನ್ನು ಬರೆದ ಶತಾಂಕಧರನ ಶಿಷ್ಯನ ಹೆಸರು ಸಹದೇವನೆಂದು ಗೊತ್ತಾಗಿದೆ. ಸಹದೇವನೇ ಪುಣ್ಯರಾಜನ ಗುರುವಾಗಿರಬಹುದು. ಈ ಪಕ್ಷದಲ್ಲಿ ಪುಣ್ಯರಾಜನ ಕಾಲ ಕ್ರಿ. ಶ. ೧೧ನೇ ಶತಮಾನವಾಗುತ್ತದೆ.

## ೯. ಹೇಲಾರಾಜ [ಕ್ರಿ. ಶ. ೧೧ನೆಯ ಶತಮಾನ]

ವಾಕ್ಯಪದೀಯದ ಮೂರನೆಯ ಖಂಡಕ್ಕೆ ಹೇಲಾರಾಜನು ಟೀಕೆಯನ್ನು ಬರೆದಿದ್ದಾನೆ. ಇವನ ಹೇಳಿಕೆಯಂತೆ ಈತನು ಕಾಶ್ಮೀರರಾಜ ಮುಕ್ತಾಪೀಡನ ಮುಖ್ಯ ಪ್ರಧಾನ ಲಕ್ಷ್ಮಣನ ವಂಶದವನು. ತಂದೆ ಭೂತಿರಾಜ. ಅಭಿನವಗುಪ್ತನು ತಾನು ಭೂತಿರಾಜನ ಮಗನಾದ ಭಟ್ಟೇಂದುರಾಜನ ಶಿಷ್ಯನೆಂದು ಹೇಳಿಕೊಂಡಿದ್ದಾನೆ. ಹೇಲಾರಾಜನ ತಂದೆ ಭೂತಿರಾಜನೇ ಇವನಾದರೆ, ಇಂದುರಾಜ ಹೇಲಾರಾಜರು ಸೋದರರೆಂದು ಸಿದ್ಧವಾಗುತ್ತದೆ. ಈ ಪಕ್ಷದಲ್ಲಿ ಹೇಲಾರಾಜನ ಕಾಲ ಕ್ರಿಸ್ತೀಯ ೧೧ನೆಯ ಶತಕವಾಗುತ್ತದೆ.

ವಾಕ್ಯಪದೀಯದ ಮೂರನೆಯ ಕಾಂಡಕ್ಕೆ ಬರೆದ ಈತನ ಟೀಕೆಯ ಹೇಳಿಕೆಯಿಂದ ಉಳಿದ ಎರಡು ಕಾಂಡಗಳಿಗೂ ಇವನು ಟೀಕೆಯನ್ನು ಬರೆದಿದ್ದನೆಂದು ಗೊತ್ತಾಗುತ್ತದೆ. ಹೇಲಾರಾಜನ ಟೀಕೆ ಹೃದಯಂಗಮವೂ ವೈದುಷ್ಯಪೂರ್ಣವೂ ಆಗಿದೆ.

## ೧೦. ಕೈಯಟ (ಕ್ರಿ. ಶ. ೧೧ನೆಯ ಶತಮಾನ)

ವ್ಯಾಕರಣಶಾಸ್ತ್ರದ ಚರಿತ್ರೆಯಲ್ಲಿ ಕೈಯಟನ ಹೆಸರು ವಿಖ್ಯಾತವಾದುದು. ಈತನ ಭಾಷ್ಯಪ್ರದೀಪವು ಸುಪ್ರಸಿದ್ಧವೂ ಪಾಂಡಿತ್ಯಪೂರ್ಣವೂ, ಆಗಿದೆ. ಮಹಾಭಾಷ್ಯದ ದುರೂಹವಾದ ಅಭಿಪ್ರಾಯವನ್ನು ಕೈಯಟನು ವಿಶದವಾಗಿ ನಿರೂಪಿಸಿದ್ದಾನೆ. ಮಹಾಭಾಷ್ಯದ ಅಧ್ಯಯನಕ್ಕೆ ಕೈಯಟನಿಂದಾದ ಉಪಕಾರ ಅಮೂಲ್ಯವಾದುದು.

ಭಾಷ್ಯಪ್ರದೀಪದ ಪ್ರತಿಯೊಂದು ಅಧ್ಯಾಯದ ಕಡೆಯಲ್ಲಿ "ಇತ್ಯುಪಾಧ್ಯಾಯ ಜೈಯಟ ಪುತ್ರ ಕೈಯಟಕೃತೇ ಮಹಾಭಾಷ್ಯಪ್ರದೀಪೇ" ಎಂಬ ಪುಷ್ಟಿಕೆ ದೊರೆಯುತ್ತದೆ. ಇದರಿಂದ ಇವನ ತಂದೆ ಜೈಯಟನೆಂದು ಮಾತ್ರ ಗೊತ್ತಾಗುತ್ತದೆ. ಮಮ್ಮಟ, ಉವ್ವಟ–ಮುಂತಾದ ನಾಮಸಾದೃಶ್ಯದಿಂದ ಇವನು ಕಾಶ್ಮೀರದೇಶದವನೆಂದು ಊಹಿಸಬಹುದು. ಇವನ ಗುರು ಪದವಾಕ್ಯಪ್ರಮಾಣಪಾರಾವಾರೀಣನಾದ ಮಹೇಶ್ವರ. ಭರ್ತೃಹರಿಯ ಸಾರವತ್ತಾದ ಗ್ರಂಥದ ನೆರವಿನಿಂದ ಪ್ರದೀಪವನ್ನು ಬರೆದಿರುವುದಾಗಿ ಕೈಯಟನು ವಿನಯದಿಂದ ಹೇಳಿಕೊಂಡಿದ್ದಾನೆ. "ಭರ್ತೃಹರಿಣಾ ವಿಸ್ತರೇಣ ಪ್ರದರ್ಶಿತ ಊಹಃ" ಎಂದು ಕೈಯಟನು ಪಸ್ಪಶಾಹ್ನಿಕದಲ್ಲಿ ಹೇಳಿದ್ದಾನೆ. ಆದ್ದರಿಂದ ಕೈಯಟನಿಗೆ ಭರ್ತೃಹರಿಯ ಭಾಷ್ಯದೀಪಿಕೆ ದೊರಕಿತ್ತು.

ಹರದತ್ತನ ಪದಮಂಜರಿಗೂ ಕೈಯಟನ ಪ್ರದೀಪಕ್ಕೂ ಹಲವಾರು ಕಡೆ ವಾಕ್ಯಸಾಮ್ಯ ಕಂಡು ಬರುವುದು.[1] ಹರಿದತ್ತನು "ಅನ್ಯೇತ್ತು, ಅಪರ ಆಹರ ಆಹ, ಆಹ ಚ" ಎಂಬ ಅವತರಣಿಕೆ ಯೊಡನೆ ಸಾಮ್ಯವಿರುವ ಭಾಗವನ್ನು ಹೇಳುವನಾದ್ದರಿಂದ ಅವನೇ ಕೈಯಟನ ಪ್ರದೀಪದಿಂದ ಉದ್ಧರಿಸುತ್ತಾನೆಂದು ಹೇಳಬಹುದಾಗಿದೆ. ಹರದತ್ತನ ಕಾಲ ಕ್ರಿ.ಶ. ೧೧ನೆಯ ಶತಕವಾದರೆ ಕೈಯಟನ ಸಮಯ ೧೦ನೇ ಶತಕದ ಅಂತ್ಯಭಾಗವೆನ್ನಬಹುದಾಗಿದೆ. ಅರ್ವಾಚೀನ ವೈಯಾಕರಣರೆಲ್ಲರೂ ಉದ್ದಾಮ ಪಂಡಿತನಾದ ಕೈಯಟನಿಗೆ ಋಣಿಯರಾಗಿದ್ದಾರೆ.

## ೧೧. ಹರದತ್ತ (ಕ್ರಿ. ಶ. ೧೧ನೆಯ ಶತಮಾನದ ಮಧ್ಯಭಾಗ)

ಕಾಶಿಕೆಯ ಮೇಲೆ ಈತನು ಪದಮಂಜರಿಯೆಂಬ ವಿಸ್ತೃತವೂ, ಪ್ರೌಢವೂ ಆದ ವ್ಯಾಖ್ಯಾನವನ್ನು ಬರೆದಿದ್ದಾನೆ.

---

೧ ಹೋಲಿಸಿ. ೩–೨–೧೧೫, ೪–೩–೭೦, ೫–೨–೧೦, ೭–೨–೫ ಪ ದೀಪ, ಪದಮಂಜರೀ

ಅನಧೀತೇ ಮಹಾಭಾಷ್ಯೇ ವ್ಯರ್ಥಾ ಸಾ ಪದಮಂಜರೀ ।
ಅಧೀತೇ ತು ಮಹಾಭಾಷ್ಯೇ ವ್ಯರ್ಥಾ ಸಾ ಪದಮಂಜರೀ ॥

ಎಂಬ ವಿಮರ್ಶಕವಚನವು ಆಪಾತತಃ ನಿಂದಾರೂಪವಾಗಿದ್ದರೂ ಮಹಾಭಾಷ್ಯಕ್ಕೆ ಸಮಾನವಾದ ಗ್ರಂಥ ಎಂಬ ಸುತ್ತಿಯನ್ನೊಳಗೊಂಡಿದೆ. ಹರದತ್ತನು ದೊಡ್ಡ ವಿದ್ವಾಂಸ. ವ್ಯಾಕರಣದಲ್ಲಿ ಮಾತ್ರವಲ್ಲದೆ ವೈದಿಕವಾಙ್ಮಯದಲ್ಲಿಯೂ, ಗೃಹ್ಯಸೂತ್ರಧರ್ಮಸೂತ್ರಗಳಲ್ಲಿಯೂ ಈತನ ಪಾಂಡಿತ್ಯ ಪ್ರಶಂಸನೀಯವಾದುದು. ಪದಮಂಜರಿಯಲ್ಲಿ

ತಾತಂ ಪದ್ಮಕುಮಾರಾಖ್ಯಂ ಪ್ರಣಮ್ಯಾಂಬಾಂ ಶ್ರಿಯಂ ತಥಾ ।
ಜ್ಯೇಷ್ಠಂಚಾಗ್ನಿಕುಮಾರಾಖ್ಯಮಾಚಾರ್ಯಮಪರಾಜಿತಂ ॥

ಎಂದು ತನ್ನ ಪರಿಚಯವನ್ನು ಹೇಳಿಕೊಂಡಿದ್ದಾನೆ. ಇವನು ದಕ್ಷಿಣದೇಶದವನೆಂದೂ, ದ್ರವಿಡ ಭಾಷೆಯಲ್ಲಿ ಅಭಿಜ್ಞನೆಂದೂ ಹೇಳಲು ಈ ಆಧಾರಗಳನ್ನು ಕೊಡಬಹುದು—

೧. ಅನುಷ್ಠಾನಮಪಿ ಚೋಲದೇಶೇ ಪ್ರಾಯೇಣೈವಂ ।
(ಗೌತಮ ಧರ್ಮ. ಟೀಕಾ, ೧೪-೪೪)

೨. ಯಸ್ಯಾಂ ವಸಂತಿ ಯಾಮುಪಜೀವಂತಿ, ಯಥಾ ಕಾವೇರಿ ತವ ।
(ಆಪ. ಗೃಹ್ಯ. ಟೀಕಾ ೧೪೬)

೩. ಕಿಲಾಸಃ ತ್ವಗ್ ದೋಷಃ ತೇಮಲ್ ಇತಿ ದ್ರವಿಡಭಾಷಾಯಾಂ ಪ್ರಸಿದ್ಧಃ
(ಗೌತಮ ಧರ್ಮ. ಟೀಕಾ (೧-೧೮)

ಹೀಗೆಯೇ ತನ್ನ ಗ್ರಂಥಗಳಲ್ಲಿ ಶಬ್ದಾರ್ಥವನ್ನು ಹೇಳುವಾಗ ದ್ರವಿಡ ಭಾಷೆಯ ಪರ್ಯಾಯ ಪದಗಳನ್ನು ಕೊಡುತ್ತಾನೆ.

## ಕಾಲ

ಡಾ ॥ ಯಾಕೋಬಿಯವರು ಭವಿಷ್ಯ ಪುರಾಣದ ಆಧಾರದ ಮೇಲೆ ಹರದತ್ತನ ಕಾಲವನ್ನು ಕ್ರಿ ಶ. ೮೭೮ ಎಂದು ಹೇಳಿದ್ದಾರೆ. ಧರ್ಮಕೀರ್ತಿಯು ರೂಪಾವತಾರದಲ್ಲಿ (ಕ್ರಿ.ಶ. ೧೧೦೬) ಹರದತ್ತನನ್ನು ಉಲ್ಲೇಖಿಸಿದ್ದಾನೆ. ಕೈಯಟನ ಪ್ರದೀಪದಿಂದ ಹರದತ್ತನು ಕೆಲವು ವಾಕ್ಯಗಳನ್ನು ಉದ್ಧರಿಸಿದ್ದಾನೆ. ಇವನ ಕಾಲ ಕ್ರಿ.ಶ. ೧೧ನೇ ಶತಕದ ಉತ್ತರಾರ್ಧವೆಂದು ಬಹುಮಂದಿ ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.

ಹರದತ್ತನು ಪದಮಂಜರಿಯಲ್ಲಿ "ಭಾಷ್ಯವಾರ್ತಿಕವಿರೋಧಸ್ತು ಮಹಾಪದಮಂಜರ್ಯಾ ಮಸ್ಮಾಭಿಃ" (೧-೧-೨೦) ಎಂದು ಬರೆದಿರುವುದರಿಂದ, ಮಹಾಪದಮಂಜರಿಯನ್ನು ಈತನು ರಚಿಸಿದ್ದನು. ಅದು ದೊರಕಿಲ್ಲ. ಹರದತ್ತನು ಆತ್ಮಪ್ರಶಂಸಾಪರ.

ಪ್ರಕ್ರಿಯಾತರ್ಕಗಹನಪ್ರ ವಿಷ್ಟೋ ಹೃಷ್ಟಮಾನಸಃ ।
ಹರದತ್ತಹರಿಃ ಸ್ವೈರಂ ವಿಹರನ್ ಕೇನ ವಾರ್ಯತೇ ॥

ಎನ್ನುತ್ತಾನೆ (ಪದ. ಮಂ ೧-೧-೪), ಇವನು ಆಶ್ವಲಾಯನಗೃಹ್ಯಸೂತ್ರಾದಿಗಳಿಗೂ, ಏಕಾಗ್ನಿಕಾಂಡಕ್ಕೂ ಟೀಕೆಯನ್ನು ಬರೆದಿದ್ದಾನೆ.

## ೧೨: ಧರ್ಮಕೀರ್ತಿ [ಕ್ರಿ. ಶ. ೧೧ ನೇ ಶತಮಾನದ ಅಂತ್ಯಭಾಗ]

ಅಷ್ಟಾಧ್ಯಾಯೀ ಕ್ರಮದಂತೆ ವ್ಯಾಕರಣವನ್ನು ಅಭ್ಯಾಸ ಮಾಡುವ ಪದ್ಧತಿ ದೀರ್ಘಕಾಲ ದಿಂದ ಇದ್ದಿತು. ಈ ಪದ್ಧತಿಯಲ್ಲಿ ಒಂದೊಂದು ಶಬ್ದದ ರೂಪಸಿದ್ಧಿಗೆ ನಾನಾ ಅಧ್ಯಾಯಗಳಲ್ಲಿ ರುವ ವಿಭಿನ್ನಸೂತ್ರಗಳ ಅಧ್ಯಯನದವರೆಗೆ ಕಾಯಬೇಕಾಗುತ್ತದೆ. ಅಷ್ಟಾಧ್ಯಾಯೀಯ ಅಧ್ಯ ಯನ ಮುಗಿದ ಹೊರತು ಒಂದು ಶಬ್ದದ ಪ್ರಕ್ರಿಯಾಜ್ಞಾನ ಪೂರ್ಣವಾಗುವುದಿಲ್ಲ. ಅಭ್ಯಾಸ ಗಳಿಗೆ ಇದು ಕಷ್ಟವೆಂಬ ಭಾವನೆಯಿಂದ ಶಬ್ದಪ್ರಕ್ರಿಯಾನುಸಾರವಾಗಿ ಒಂದೆಡೆಯಲ್ಲಿ ವಿಭಿನ್ನ ಸೂತ್ರಗಳನ್ನು ಅಳವಡಿಸಿದ ಗ್ರಂಥಗಳು ರಚಿತವಾದವು. ಈ ಬಗೆಯ ಪ್ರಕ್ರಿಯಾನುಸಾರಿ ಗ್ರಂಥಗಳಲ್ಲಿ ಧರ್ಮಕೀರ್ತಿಯ ರೂಪಾವತಾರ ಮೊದಲನೆಯದು ವಿಭಿನ್ನ ಅಧ್ಯಾಯಗಳಲ್ಲಿರುವ ಪಾಣಿನಿ ಸೂತ್ರಗಳನ್ನು ಪ್ರಕ್ರಿಯಾನುಗುಣವಾಗಿ ಸಂಕಲಿಸಿ ಈ ಗ್ರಂಥವನ್ನು ರಚಿಸಲಾಗಿದೆ.

ಧರ್ಮಕೀರ್ತಿ ಬೌದ್ಧಪಂಡಿತ. ಇವನು ರೂಪಾವತಾರದಲ್ಲಿ ಹರದತ್ತನನ್ನು (ಕ್ರಿ. ಶ. ೧೧ ನೆಯ ಶತಮಾನ) ಉಲ್ಲೇಖಿಸಿದ್ದಾನೆ ಹೇಮಚಂದ್ರನು ತನ್ನ ಲಿಂಗಾನುಶಾಸನದಲ್ಲಿ (ಕ್ರಿ. ಶ. ೧೧೪೦) ಈತನ ರೂಪಾವತಾರವನ್ನು ಸ್ಮರಿಸಿದ್ದಾನೆ. ಆದ್ದರಿಂದ ಧರ್ಮಕೀರ್ತಿಯ ಕಾಲ ಕ್ರಿಸ್ತೀಯ ೧೧ ನೇ ಶತಕದ ಅಂತ್ಯಭಾಗವಾಗಿರಬೇಕು.

ಈತನ ರೂಪಾವತಾರವೇ ಮುಂದಿನ ಪ್ರಕ್ರಿಯಾ ಕೌಮುದೀ, ಸಿದ್ಧಾಂತ ಕೌಮುದೀ— ಮುಂತಾದ ಪ್ರಕ್ರಿಯಾನುಸಾರ ಗ್ರಂಥಗಳಿಗೆ ಮಾರ್ಗದರ್ಶನವನ್ನು ಮಾಡಿದೆ.

## ೧೩: ವರ್ಧಮಾನ (ಕ್ರಿ. ಶ. ೧೧೪೦)

ಇವನು ಗಣರತ್ನಮಹೋದಧಿಯನ್ನು ರಚಿಸಿದ್ದಾನೆ. ಗ್ರಂಥದ ಕಡೆಯ ಶ್ಲೋಕದಿಂದ ಇದು ವಿಕ್ರಮಶಕ ೧೧೯೭ ರಲ್ಲಿ (ಕ್ರಿ. ಶ. ೧೧೪೦) ರಚಿತವಾಗಿದೆಯೆಂದು ಗೊತ್ತಾಗುತ್ತದೆ.[1]

---

೧ ಸಪ್ತನವತ್ಯಧಿಕೇಷ್ವೇಕಾದಶಸು ಶತೇಷತೀತೇಷು ।
ವರ್ಷಾಣಾಂ ವಿಕ್ರಮತೋ ಗಣರತ್ನಮಹೋದಧಿರ್ವಿಹಿತಃ ॥

ವರ್ಧಮಾನನು ಜೈನಮತದವನು ಗೋವಿಂದ ಸೂರಿಯ ಶಿಷ್ಯ.

ವಿದಿತ್ವಾ ಶಬ್ದಶಾಸ್ತ್ರಾಣಿ ಪ್ರಯೋಗಾನುಪಲಕ್ಷ್ಯ ಚ ।
ಸ್ವಶಿಷ್ಯಪ್ರಾರ್ಥಿತಾಃ ಕುರ್ವೇ ಗಣರತ್ನ ಮಹೋದಧಿಂ ॥

ಎಂದು ಹೇಳಿದ್ದಾನೆ. ಇದಕ್ಕೆ ಸ್ವೋಪಜ್ಞವೃತ್ತಿ ಇದೆ. ಶಾಲಾತುರೀಯ (ಪಾಣಿನಿ, ಜೈನ ಶಾಕಟಾಯನ (ಪಾಲ್ಯಕೀರ್ತಿ), ಚಂದ್ರಗೋಮಿ, ದಿಗ್ವಸ್ತ್ರ (ದೇವನಂದಿ), ಭರ್ತೃಹರಿ, ವಾಮನ ಭೋಜ, ದೀಪಕಕರ್ತನಾದ ಭದ್ರೇಶ್ವರಸೂರಿ, ಹೇಮಚಂದ್ರ ಮೊದಲಾದ ವೈಯಾಕರಣರನ್ನು ಸ್ಮರಿಸಿದ್ದಾನೆ ವೃತ್ತಿಯಲ್ಲಿ ಶಿವಸ್ವಾಮಿ, ಪತಂಜಲಿ, ಕಾತ್ಯಾಯನರನ್ನು ಉಲ್ಲೇಖಿಸಿದ್ದಾನೆ.

ಈ ಗ್ರಂಥದಲ್ಲಿ ೮ ಅಧ್ಯಾಯಗಳಿದ್ದು ೪೬೦ ವಿಭಿನ್ನವೃತ್ತದ ಶ್ಲೋಕಗಳಿವೆ. ಚಾದಿ, ಅರ್ಧರ್ಚಾದಿ—ಮುಂತಾದ ಗಣಗಳಲ್ಲಿ ಪಠಿತವಾದ ಶಬ್ದಗಳನ್ನು ಶ್ಲೋಕಗಳಲ್ಲಿ ಸಂಗ್ರಹಿಸಿ, ವೃತ್ತಿಯಲ್ಲಿ ಆ ಶಬ್ದಗಳಿಗೆ ವ್ಯಾಖ್ಯಾನವನ್ನು ಮಾಡಿರುವುದೇ ಈ ಗ್ರಂಥದ ವೈಶಿಷ್ಟ್ಯವಾಗಿದೆ ಲುಪ್ತಪ್ರಾಯವಾದ ಹಲವು ಶಬ್ದಗಳನ್ನೂ ಅರ್ಥವನ್ನು, ತಿಳಿಯಲು ಈ ಗ್ರಂಥ ತುಂಬ ಉಪಯುಕ್ತವಾಗಿದೆ. ವರ್ಧಮಾನನು ಕಿರಾತಾರ್ಜುನೀಯವೇ ಮೊದಲಾದ ಸಾಹಿತ್ಯಗ್ರಂಥ ಗಳಿಂದ ಪ್ರಯೋಗವಿಶೇಷಗಳನ್ನು ಉದ್ಧರಿಸಿದ್ದಾನೆ ಶಬ್ದಗಳ ಪ್ರಕ್ರಿಯೆಗಾಗಿ ವರ್ಧಮಾನನು ಕೆಲವು ಸೂತ್ರಗಳನ್ನು ಪ್ರಮಾಣವಾಗಿ ಉದಾಹರಿಸುತ್ತಾನೆ. ಇವು ಪಾಣಿನಿಸೂತ್ರಗಳಲ್ಲಿ ಯಾವ ವ್ಯಾಕರಣಸೂತ್ರವನ್ನು ಅವನು ಅವಲಂಬಿಸಿದ್ದಾನೆಂಬುದು ತಿಳಿಯದಾಗಿದೆ. ಆದರೂ ಅಷ್ಟಾಧ್ಯಾಯಿವ್ಯಾಸಂಗಿಗಳಿಗೆ ಗಣರತ್ನಮಹೋದಧಿ ಉಪಯುಕ್ತವಾಗಿದೆ. ಸಾಮಾನ್ಯವಾಗಿ ಗಣಪಠಿತಶಬ್ದಗಳಿಗೆ ವ್ಯಾಕರಣಗ್ರಂಥಗಳಲ್ಲಿ ಅರ್ಥವನ್ನು ವಿವರಿಸುವುದಿಲ್ಲವಾದ್ದರಿಂದ ಅನೇಕ ಶಬ್ದ ಗಳ ಅರ್ಥವನ್ನೂ ಪ್ರಯೋಗವಿಶೇಷವನ್ನೂ ತಿಳಿಯುವುದು ಕಠಿಣ. ಈ ದಿಶೆಯಲ್ಲಿ ವರ್ಧಮಾನನ ಈ ಅಪೂರ್ವಗ್ರಂಥ ಅತ್ಯಂತ ಉಪಕಾರಿಯಾಗಿದೆ.

## ೧೪. ಶರಣದೇವ [ಕ್ರಿ. ಶ. ೧೧೭೪]

ಇವನು 'ದುರ್ಘಟವೃತ್ತಿ' ಎಂಬ ಗ್ರಂಥವನ್ನು ರಚಿಸಿದ್ದಾನೆ, ಯಾವ ಶಬ್ದರೂಪವು ಆಪಾತತಃ ಪಾಣಿನೀಯ ವ್ಯಾಕರಣಕ್ಕೆ ವಿರುದ್ಧವಾಗಿ ಕಾಣಿಸುವುದೋ ಅಂತಹ ದುರ್ಘಟ ಶಬ್ದವನ್ನು ಸಾಹಿತ್ಯಗ್ರಂಥಗಳಿಂದ ಆರಿಸಿಕೊಂಡು ಅದಕ್ಕೆ ಸಾಧುತ್ವವನ್ನು ಶಾಸ್ತ್ರೀಯವಾಗಿ ನಿರೂಪಿಸಿದ್ದಾನೆ. ಇನ್ನು ಕೆಲವು ಶಬ್ದರೂಪಗಳು ಅಸಾಧುವೆಂದು ಹೇಳಿದ್ದಾನೆ. ಅಷ್ಟಾಧ್ಯಾ

ಯಿಯ ಅಧ್ಯಾಯಕ್ರಮವನ್ನವಲಂಬಿಸಿ ಶಬ್ದಸಾಧುತ್ವವನ್ನು ವಿಮರ್ಶಿಸಿದ್ದಾನೆ ಗ್ರಂಥಗಳ ಮತ್ತು ಗ್ರಂಥಕಾರರ ನಾಮನಿರ್ದೇಶಪೂರ್ವಕವಾಗಿ ದುರ್ಘಟಶಬ್ದಗಳನ್ನಾರಿಸಿ ಕೊಂಡಿರು ವುದರಿಂದ, ಈಗ ಲುಪ್ತವಾಗಿರುವ ವಿಪುಲಗ್ರಂಥಗಳ ಮತ್ತು ಗ್ರಂಥಕಾರರ ಹೆಸರು ವರ್ಧಮಾನ ನಿಂದ ನಿಮಗೆ ಗೊತ್ತಾಗುತ್ತದೆ.

ಶರಣದೇವನು ಮಂಗಳಶ್ಲೋಕದಲ್ಲಿ ಸರ್ವಜ್ಞಬುದ್ಧನನ್ನು ವಂದಿಸಿದ್ದಾನಲ್ಲದೆ, ಅನೇಕ ಬೌದ್ಧಗ್ರಂಥಗಳ ಪ್ರಯೋಗಗಳನ್ನು ತೋರಿಸಿದ್ದಾನೆ ಇವನು ಬೌದ್ಧಮತದವನು. ಶಾ ಶ ೧೦೯೬ ರಲ್ಲಿ (ಕ್ರಿ.ಶ. ೧೧೭೪) ದುರ್ಘಟವೃತ್ತಿಯನ್ನು ಬರೆದನೆಂದು ಈತನೇ ಹೇಳಿರುವುದರಿಂದ ಈತನ ಕಾಲ ನಿಶ್ಚಿತವಾಗಿದೆ. ಈ ಗ್ರಂಥವನ್ನು ಸರ್ವರಕ್ಷಿತನು ಪರಿಷ್ಕರಿಸಿದ್ದಾನೆಂದು ಶರಣದೇವನು ಹೇಳಿಕೊಂಡಿದ್ದಾನೆ.

## ಸಾಯಣ (ಮಾಧವ) ಕ್ರಿ.ಶ. ೧೩೧೧—೧೩೮೭)

ಸಂಸ್ಕೃತವಾಙ್ಮಯದಲ್ಲಿ ಸಾಯಣಾಚಾರ್ಯನು ಅತ್ಯಂತ ಪ್ರಸಿದ್ಧನಾಗಿದ್ದಾನೆ. ಈತನು ರಚಿಸಿದ ವೇದಭಾಷ್ಯಾದಿಗಳು ಸುವಿದಿತ ತನ್ನ ಜ್ಯೇಷ್ಠಸೋದರನಾದ ಮಾಧವನ (ಶ್ರೀವಿದ್ಯಾರಣ್ಯರು) ಹೆಸರಿನಲ್ಲಿ ಪಾಣಿನಿಯ ಧಾತುಪಾಠದ ಮೇಲೆ ಒಂದು ವೃತ್ತಿಯನ್ನು ಬರೆದಿದ್ದಾನೆ. ಇದು ಮಾಧವೀಯಧಾತುವೃತ್ತಿ ಎಂದು ಪ್ರಖ್ಯಾತವಾಗಿದೆ.

ಸಾಯಣನಿಗೂ ಹಿಂದೆ ಕ್ಷೀರಸ್ವಾಮಿ (ಕ್ರಿ.ಶ. ೧೧ನೆಯ ಶತಕ), ಮೈತ್ರೇಯರಕ್ಷಿತ (ಕ್ರಿ.ಶ. ೧೨ನೆಯ ಶತಕ) ಎಂಬಿಬ್ಬರು ಸಂಕ್ಷಿಪ್ತವಾದ ಧಾತುವೃತ್ತಿಗಳನ್ನು ರಚಿಸಿದ್ದರು. ಸನ್ನಂತ, ಯಙಂತಾದಿ ಪ್ರಕ್ರಿಯೆಗಳನ್ನು ಪ್ರದರ್ಶಿಸಿರಲಿಲ್ಲ. ಮಾಧವೀಯಧಾತು ವೃತ್ತಿಯಾದರೋ ಎಲ್ಲ ಧಾತುಗಳ ಸನ್ನಾಂತಾದಿರೂಪಗಳನ್ನೂ ವಿವರಿಸಿದೆ. ಕೃದಂತರೂಪಗಳನ್ನು ತೋರಿಸಿದೆ. ವಿದ್ವಾಂಸರ ಮತಬೇದವನ್ನು ಅಲ್ಲಲ್ಲಿ ನಿರೂಪಿಸಿದೆ. ಗಹನವಾದ ಧಾತುರೂಪಪ್ರಕ್ರಿಯೆಯನ್ನರಿಯಲು ಇದು ಉಪಯುಕ್ತವಾಗಿದೆ.

ಸಾಯಣಾಚಾರ್ಯನ ತಂದೆ ಮಾಯಣ. ತಾಯಿ ಶ್ರೀಮತಿ. ಅಣ್ಣ ಶ್ರೀ ವಿದ್ಯಾರಣ್ಯರು. ತಮ್ಮ ಭೋಗನಾಥ. ಈತನು ತೈತ್ತಿರೀಯ ಶಾಖೆಯ ಬೋಧಾಯನ ಸೂತ್ರದವನೂ, ಭರ ದ್ವಾಜಗೋತ್ರದವನೂ ಆಗಿದ್ದನು. ವಿಜಯನಗರದ ರಾಜರಾದ ಹರಿಹರನ ತಮ್ಮ ಕಂಪಣ, ಸಂಗಮ, ಬುಕ್ಕ ಮತ್ತು ಎರಡನೆಯ ಹರಿಹರನ ಆಸ್ಥಾನದಲ್ಲಿದ್ದನು. ಈತನ ಕಾಲ ಕ್ರಿ. ಶ. ೧೩೧೪_೧೩೮೭.

## ೧೬. ರಾಮಚಂದ್ರ (ಕ್ರಿ.ಶ. ೧೪೭೫)

ಇವನ ಗ್ರಂಥ ಪ್ರಕ್ರಿಯಾಕೌಮುದೀ. ಧರ್ಮಕೀರ್ತಿಯ ರೂಪಾವತಾರದಂತೆ ಶಬ್ದ ರೂಪಪ್ರಕ್ರಿಯೆಯನ್ನನುಸರಿಸಿ ಪಾಣಿನಿಸೂತ್ರಗಳನ್ನು ವ್ಯಾಖ್ಯಾನಮಾಡಿ ಅಳವಡಿಸಲಾಗಿದೆ. ರೂಪಾವತಾರಕ್ಕಿಂತ ವಿಸ್ತೃತವಾಗಿದ್ದರೂ ಸರಳವಾದ ಶೈಲಿಯಿದೆ. ಶಬ್ದಗಳ ಪ್ರಕ್ರಿಯೆಯನ್ನು ವಿದ್ಯಾರ್ಥಿಗಳಿಗೆ ತಿಳಿಯಪಡಿಸುವುದು ಇವರ ಮುಖ್ಯ ಉದ್ದೇಶ.

ರಾಮಚಂದ್ರನು ಶೇಷವಂಶದವನೆಂದು ಪ್ರಸಿದ್ಧಿ ಇದೆ. ಶೇಷವಂಶವು ವೈಯಾಕರಣರ ವಂಶವೆಂದು ವಿಖ್ಯಾತವಾದದ್ದು. ಈ ವಂಶದಲ್ಲಿ ಸುಮಾರು ೨೫ ವೈಯಾಕರಣರು ಗ್ರಂಥಕರ್ತ ರೆಂದು ಗೊತ್ತಾಗಿದೆ. ರಾಮಚಂದ್ರನ ಮಗ ನೃಸಿಂಹನು ತನ್ನ ಧರ್ಮತತ್ತ್ವಾಲೋಕದಲ್ಲಿ ತಂದೆ ಅಷ್ಟವ್ಯಾಕರಣ ಪಂಡಿತನೆಂದೂ, ಸಾಹಿತ್ಯರತ್ನಾಕರನೆಂದೂ ಹೇಳಿದ್ದಾನೆ.

ರಾಮಚಂದ್ರನ ಪೌತ್ರನಾದ ವಿಠ್ಠಲನು ಪ್ರಕ್ರಿಯಾಕೌಮುದಿಗೆ ಪ್ರಸಾದವೆಂಬ ವ್ಯಾಖ್ಯೆಯನ್ನು ಬರಿದಿದ್ದಾನೆ. ಇದರ ಒಂದು ಹಸ್ತಪ್ರತಿ ವಿ.ಶ. ೧೫೬೦ ರಲ್ಲಿ (ಕ್ರಿ.ಶ. ೧೫೦೪) ಲಿಖಿತವಾಗಿದೆ.[1] ಇದನ್ನನುಸರಿಸಿ ಊಹಿಸಿದರೆ ಪ್ರಕ್ರಿಯಾಕೌಮುದಿಯ ಕಾಲ ಕನಿಷ್ಠ ಪಕ್ಷ ಕ್ರಿ.ಶ. ೧೪೭೫ ಆಗಬಹುದು.

## ೧೭. ಶೇಷಕೃಷ್ಣ (ಕ್ರಿ.ಶ. ೧೫೭೫)

ಗಂಗಾಯಮುನೆಗಳ ಮಧ್ಯದಲ್ಲಿದ್ದ ಪತ್ರಪುಂಜದ ರಾಜ ಕಲ್ಯಾಣನ ಆದೇಶದಂತೆ ಪ್ರಕ್ರಿಯಾಕೌಮುದಿಗೆ ಪ್ರಕಾಶವೆಂಬ ವ್ಯಾಖ್ಯಾನವನ್ನು ಶೇಷಕೃಷ್ಣನು ಬರೆದಿದ್ದಾನೆ. ಇವನ ತಂದೆ ಶೇಷನೃಸಿಂಹ. ಮಗ ಶೇಷವೀರೇಶ್ವರ. ವೀರೇಶ್ವರನು ರಸಗಂಗಾಧರವನ್ನು ಬರೆದ ಜಗನ್ನಾಥ ಪಂಡಿತನ ಗುರು. ಶ್ರೀ ಕೃಷ್ಣನು ಭಟ್ಟೋಜಿದೀಕ್ಷಿತನ ಗುರು. ಶ್ರೀ ಕೃಷ್ಣನು 'ಪ ಜ್ಞಾಲುಗಂತ ಶಿರೋಮಣಿ' ಎಂಬ ಇನ್ನೊಂದು ಗ್ರಂಥವನ್ನು ರಚಿಸಿದ್ದಾನೆ.

## ೧೮ ಭಟ್ಟೋಜಿದೀಕ್ಷಿತ (ಕ್ರಿ.ಶ.ಸು. ೧೫೭೫–೧೬೫೦)

ಸಿದ್ಧಾಂತಕೌಮುದಿಯನ್ನು ವಿರಚಿಸಿದ ಭಟ್ಟೋಜಿದೀಕ್ಷಿತನು ವ್ಯಾಕರಣ ವಿದ್ಯಾರ್ಥಿಗಳಿಗೆ ಸುಪರಿಚಿತನಾಗಿದ್ದಾನೆ. ಇವನು ಮಹಾರಾಷ್ಟ್ರದವನು. ತಂದೆ ಲಕ್ಷ್ಮೀಧರ. ತಮ್ಮ ರಂಗೋಜಿಭಟ್ಟ. ಈತನ ವಂಶವೃಕ್ಷವನ್ನು ಹೀಗೆ ಸೂಚಿಸಬಹುದು.

---

೧ ಬರೋಡ ರಾಜಕೀಯ ಪುಸ್ತಕಾಲಯದ ಕ್ಯಾಟಲಾಗ್, ಪುಟ ೧೭




ಭಟ್ಟೋಜಿದೀಕ್ಷಿತನು ಪ್ರಕ್ರಿಯಾಪ್ರಕಾಶವನ್ನು ಬರೆದ ಶೇಷಕೃಷ್ಣನಿಂದ ವ್ಯಾಕರಣ ಶಾಸ್ತ್ರವನ್ನು ಅಭ್ಯಾಸ ಮಾಡಿದನು.[1] ತನ್ನ ತತ್ತ್ವಕೌಸ್ತುಭದಲ್ಲಿ ಅಪ್ಪಯ್ಯದೀಕ್ಷಿತರನ್ನು 'ಅಶೇಷ ವಿದ್ಯಾಗುರು' ಎಂದು ಸ್ತುತಿಸಿದ್ದಾನೆ. ಕ್ರಿ. ಶ. ೧೫೮೧ ರಿಂದ ೧೬೨೫ರವರೆಗೆ ಕೆಳದಿಯನ್ನಾಳಿದ ವೆಂಕಟಪ್ಪನಾಯಕನ ಆಸ್ಥಾನಕ್ಕೆ ಬಂದಿದ್ದನೆಂದೂ, ರಾಮಾನುಜಶೃಂಗಿ ಎಂಬ ಪಂಡಿತನನ್ನು ವಾಗ್ವಾದದಲ್ಲಿ ಜಯಿಸಿದನೆಂದೂ ಕೆಳದಿನೃಪವಿಜಯದಲ್ಲಿ ಬರೆದಿದೆ[2]. ಈ ವೆಂಕಟಪ್ಪನಾಯಕನ ಪ್ರೋತ್ಸಾಹದಿಂದ ತತ್ತ್ವಕೌಸ್ತುಭವೆಂಬ ವೇದಾಂತಗ್ರಂಥವನ್ನು ಬರೆದಿದ್ದೇನೆಂದೂ ಅದರಲ್ಲಿ ಭಟ್ಟೋಜಿದೀಕ್ಷಿತನು ಹೇಳಿದ್ದಾನೆ.[3] ಈತನ ಕಾಲ ಸುಮಾರು ಕ್ರಿ. ಶ. ೧೫೭೫ ರಿಂದ ೧೬೫೦ ರವರೆಗೆ ಇರಬಹುದು.

ಇವನ ಗ್ರಂಥಗಳು—

## ೧. ಶಬ್ದ ಕೌಸ್ತುಭ

ಇದು ಅಷ್ಟಾಧ್ಯಾಯಿಗೆ ಬರೆದ ವಿಸ್ತೃತವಾದ ವೃತ್ತಿ. ಪೂರ್ಣವಾಗಿ ದೊರೆತಿಲ್ಲ.

---

೧. 1. 'ತದೇತತ್ ಸಕಲಮಭಿಸಂಧಾಯ ಪ್ರಕ್ರಿಯಾಪ್ರಕಾಶೇ ಗುರುಚರಣೈರುಕ್ತಂ'

—ಶಬ್ದಕೌಸ್ತುಭ. ಪು. ೧೪೫

2. 'ಇಹ ಕೇಚಿತ್ (ಭಟ್ಟೋಜಿದೀಕ್ಷಿತಾಃ) ಶೇಷಾವತಂಸಾನಾಂ ಶ್ರೀಕೃಷ್ಣಪಂಡಿತಾನಾಂ ಚಿರಾಯಾರ್ಚಿತಯೋಃ ಪಾದುಕಯೋಃ ಪ್ರಸಾದಾದಾಸಾದಿತ ಶಬ್ದಾನುಶಾಸನಾಃ'

—ಜಗನ್ನಾಥಪಂಡಿತನ ಮನೋರಮಾಕುಚಮರ್ದಿನೀ

೨. ಕೆಳದಿನೃಪವಿಜಯಂ. ಆಶ್ವಾಸ ೫

೩. ವಿಸ್ತರಸ್ತು ಯಥಾ ಶಾಸ್ತ್ರಂ ದರ್ಶಿತಃ ಶಬ್ದಕೌಸ್ತುಭೇ !

—ಸಿ: ಕೌಮುದೀ

ಸಿದ್ಧಾಂತಕೌಮುದಿಯನ್ನು ಬರೆಯುವುದಕ್ಕೆ ಮೊದಲು ಇದು ರಚಿತವಾಗಿರಬೇಕು.1 ಇದರ ಮೇಲೆ ನಾಗೇಶಭಟ್ಟನ ವಿಷಮಪದೀ ಮೊದಲಾದ ಕೆಲವು ವ್ಯಾಖ್ಯಾನಗಳು ವಿರಚಿತವಾಗಿವೆ.

## ೨. ಸಿದ್ಧಾಂತಕೌಮುದೀ

ಭರತಖಂಡದಲ್ಲಿ ಎಲ್ಲೆಡೆಯೂ ಸುವಿಖ್ಯಾತವಾದ ಗ್ರಂಥವಿದು. ಪ್ರಕ್ರಿಯಾಕ್ರಮದಿಂದ ಎಲ್ಲ ಅಷ್ಟಾಧ್ಯಾಯೀ ಸೂತ್ರಗಳಿಗೂ ಉದಾಹರಣಸಹಿತವಾಗಿ ಇದರಲ್ಲಿ ವೃತ್ತಿಯನ್ನು ಬರೆಯಲಾಗಿದೆ. ಸಂಜ್ಞಾ, ಪರಿಭಾಷಾ, ಸಂಧಿ, ಸುಬಂತ, ಮುಂತಾದ ಪ್ರಕರಣಗಳನ್ನಾಗಿ ವಿಂಗಡಿಸಿಕೊಳ್ಳಲಾಗಿದೆ. ವೈದಿಕಪ್ರಕ್ರಿಯೆ ಪ್ರತ್ಯೇಕವಾಗಿದೆ. ಉಣಾದಿಸೂತ್ರ, ಫಿಟ್‌ಸೂತ್ರ, ಲಿಂಗಾನುಶಾಸನಗಳಿಗೂ ಭಟ್ಟೋಜಿದೀಕ್ಷಿತನು ಇದರಲ್ಲಿ ವೃತ್ತಿಯನ್ನು ಬರೆದಿದ್ದಾನೆ. ಭಾಷ್ಯಾದಿಗ್ರಂಥಗಳನ್ನು ಆಳವಾಗಿ ಅಭ್ಯಾಸಮಾಡಿ ಬಹುಪ್ರಯಾಸದಿಂದ ನಿರ್ಮಿಸಿದ ಪರಿಷ್ಕೃತವೂ, ಪ್ರಮಾಣಭೂತವೂ ಆದ ಗ್ರಂಥ ಸಿದ್ಧಾಂತ ಕೌಮುದೀ. ಇದು ರಚಿತವಾದ ಮೇಲೆ ಕಾಶಿಕಾವೃತ್ತಿಯ ಅಧ್ಯಯನ ಹಿಂದೆ ಬಿದ್ದಿತೆಂದು ತೋರುತ್ತದೆ. ವಿದ್ವತ್‌ಪ್ರಿಯವಾದ ಈ ಗ್ರಂಥಕ್ಕೆ ಸಂಸ್ಕೃತ ಲೋಕದಲ್ಲಿ ಸರ್ವಮಾನ್ಯತೆ ಉಂಟು. ಇದರ ಮೇಲೆ ನಾಗೇಶಭಟ್ಟನ ಶಬ್ದೇಂದುಶೇಖರ, ಜ್ಞಾನೇಂದ್ರಸರಸ್ವತಿಯ ತತ್ತ್ವಬೋಧಿನೀ, ವಾಸುದೇವದೀಕ್ಷಿತನ ಬಾಲಮನೋರಮಾ ಮೊದಲಾದ ವ್ಯಾಖ್ಯಾನಗಳು ನಿರ್ಮಿತವಾಗಿವೆ.

## ೩. ಪ್ರೌಢಮನೋರಮಾ

ಭಟ್ಟೋಜಿದೀಕ್ಷಿತನೇ ತನ್ನ ಸಿದ್ಧಾಂತಕೌಮುದಿಗೆ ಪ್ರೌಢಮನೋರಮಾ ಎಂಬ ಸ್ವೋಪಜ್ಞ ವ್ಯಾಖ್ಯೆಯನ್ನು ಬರೆದಿದ್ದಾನೆ. ಇದರಲ್ಲಿ ಪ್ರಕ್ರಿಯಾಕೌಮುದೀ ಮೊದಲಾದ ಹಿಂದಿನ ಗ್ರಂಥಗಳ ಖಂಡನೆ ವಿಶೇಷವಾಗಿದೆ.

ಭಟ್ಟೋಜಿದೀಕ್ಷಿತನ ಮೊಮ್ಮಗನಾದ ಹರಿದೀಕ್ಷಿತನು ಪ್ರೌಢಮನೋರಮೆಗೆ ಬೃಹಚ್ಛಬ್ದರತ್ನ, ಲಘುಶಬ್ದರತ್ನ ಎಂಬ ಎರಡು ವ್ಯಾಖ್ಯಾನಗಳನ್ನು ಬರೆದಿದ್ದಾನೆ. ಹರಿದೀಕ್ಷಿತನ ಶಿಷ್ಯನಾದ ನಾಗೇಶಭಟ್ಟನು ಈ ವ್ಯಾಖ್ಯಾನಗಳನ್ನು ಬರೆದು ತನ್ನ ಗುರುವಿಗೆ ಅರ್ಪಿಸಿದ್ದಾನೆಂದು ಪ್ರತೀತಿ ಇದೆ. ನಾಗೇಶಭಟ್ಟನ ಶಬ್ದೇಂದುಶೇಖರದೊಂದಿಗೆ ಹೋಲಿಸಿದರೆ ವಿಷಯ ನಿರೂಪಣಾಕ್ರಮವೂ, ಭಾಷಾ ಶೈಲಿಯೂ ಏಕರೂಪವಾಗಿವೆ. ನಾಗೇಶಭಟ್ಟನೇ ಶಬ್ದರತ್ನವನ್ನು ಬರೆದಿರಬಹುದು.

---

೧. ಕೆಲದೀವೇಂಕಟೇಂದ್ರಸ್ಯ ನಿದೇಶಾದ್ವಿದುಷಾಂ ಮುದೇ।
ಧ್ವಾಂತೋಚ್ಛಿತ್ತ್ಯೈ ಪಟುತರಸ್ತನ್ಯತೇ ತತ್ತ್ವಕೌಸ್ತುಭಃ ॥

## ೪. ವೈಯಾಕರಣಸಿದ್ಧಾಂತಕಾರಿಕಾ

ಇದು ೭೫ ಕಾರಿಕೆಗಳಿರುವ ವ್ಯಾಕರಣದರ್ಶನಕ್ಕೆ ಸಂಬಂಧಿಸಿದ ಗ್ರಂಥ ಭಟ್ಟೋಜಿ ದೀಕ್ಷಿತನ ತಮ್ಮನಾದ ರಂಗೋಜಿಭಟ್ಟನ ಮಗ ಕೌಂಡಭಟ್ಟನು ಈ ಕಾರಿಕೆಗಳ ಮೇಲೆ ಬೃಹದ್ವೈಯಾಕರಣಭೂಷಣಸಾರ, ವೈಯಾಕರಣಭೂಷಣಸಾರ ಎಂಬ ಎರಡು ಪ್ರೌಢವ್ಯಾಖ್ಯಾನ ಗಳನ್ನು ಬರೆದಿದ್ದಾನೆ.

ಭಟ್ಟೋಜಿದೀಕ್ಷಿತನು ಈ ವ್ಯಾಕರಣಗ್ರಂಥಗಳನ್ನಲ್ಲದೆ ತತ್ತ್ವಕೌಸ್ತುಭ, ಸಂಧ್ಯಾಭಾಷ್ಯ, ಗೋತ್ರಪ್ರವರನಿರ್ಣಯ-ಮೊದಲಾದ ಸುಮಾರು ೨೫ ಗ್ರಂಥಗಳನ್ನು ರಚಿಸಿದ್ದಾನೆ.

## ೧೯. ನಾಗೇಶಭಟ್ಟ (ಕಿ. ಶ. ೧೬೭೦–೧೭೫೦)

ಈತನಿಗೆ ನಾಗೋಜಿಭಟ್ಟನೆಂದೂ ವ್ಯವಹಾರನಾಮವಿದೆ. ಇವನ ತಂದೆ ಶಿವಭಟ್ಟ; ತಾಯಿ ಸತೀದೇವಿ. ಭಟ್ಟೋಜಿದೀಕ್ಷಿತನ ಪೌತ್ರನಾದ ಹರಿದೀಕ್ಷಿತನು ಈತನ ಗುರು. ವೈದ್ಯನಾಥ ಪಾಯಗುಂಡೆ ಮತ್ತು ಅವನ ಮಗ ಬಾಲಶರ್ಮಾ ಎಂಬುವರು ಶಿಷ್ಯರು. ನಾಗೇಶ ಭಟ್ಟನಿಗೆ ಸಂತತಿ ಇರಲಿಲ್ಲವೆಂದು ತಿಳಿದು ಬರುತ್ತದೆ.[1] ಇವನು ಶೃಂಗವೇರಪುರದ ದೊರೆಯಾದ ರಾಮಸಿಂಹನ ಆಶ್ರಿತ. ವ್ಯಾಕರಣಶಾಸ್ತ್ರದಲ್ಲಿ ಉದ್ದಾಮ ಪಂಡಿತ.

### ಕಾಲ

ಕ್ರಿ. ಶ. ೧೭೧೪ರಲ್ಲಿ ಜಯಪುರದ ರಾಜನು ಅಶ್ವಮೇಧಯಾಗವನ್ನು ಮಾಡಿದನು. ಆದಕ್ಕೆ ಬರುವಂತೆ ರಾಜನು ನಾಗೇಶಭಟ್ಟನಿಗೆ ಆಹ್ವಾನವನ್ನು ಕಳಿಸಿದನೆಂದೂ, ಕಾಶಿಯಲ್ಲಿ ಕ್ಷೇತ್ರ ಸಂನ್ಯಾಸವನ್ನು ಸ್ವೀಕರಿಸಿದ್ದರಿಂದ ನಾಗೇಶಭಟ್ಟನು ಆಹ್ವಾನವನ್ನು ಒಪ್ಪಿಕೊಳ್ಳಲಿಲ್ಲವೆಂದೂ ಗೊತ್ತಾಗಿದೆ. ಅಲ್ಲದೆ ಭಟ್ಟೋಜಿದೀಕ್ಷಿತನ ಮೊಮ್ಮಗನಾದ ಹರಿದೀಕ್ಷಿತನ ಶಿಷ್ಯನಾದ ನಾಗೇಶ ಭಟ್ಟನಿಗೂ ಭಟ್ಟೋಜಿದೀಕ್ಷಿತನಿಗೂ ಜೀವಿತಕಾಲದಲ್ಲಿ ೮೦ ವರ್ಷಗಳ ಅಂತರವನ್ನು ಹೇಳಬಹುದು : ಆದ್ದರಿಂದ ಈತನು ಕ್ರಿ. ಶ. ೧೬೭೦–೧೭೪೦ರ ನಡುವೆ ಇದ್ದಿರಬೇಕು.

---

೧ ಶಬ್ದೇಂದುಶೇಖರಃ ಪುತ್ರೋ ಮಂಜೂಷಾ ಚೈವ ಕನ್ಯಕಾ ।
ಸ್ವಮತೌ ಸಮ್ಯಗುತ್ಪಾದ್ಯ ಶಿವಯೋರರ್ಪಿತೌ ಮಯಾ ॥

—ಲ. ಶಬ್ದೇಂದುಶೇಖರ

# ನಾಗೇಶಭಟ್ಟನ ವ್ಯಾಕರಣ ಗ್ರಂಥಗಳು

## ೧. ಮಹಾಭಾಷ್ಯಪ್ರದೀಪೋದ್ಯೋತ

ಇದು ಕೈಯಟನ ಪ್ರದೀಪದ ಮೇಲೆ ಬರೆದ ಪ್ರೌಢವ್ಯಾಖ್ಯಾನ. ಪ್ರದೀಪದ ಅಭಿಪ್ರಾಯವನ್ನು ನಾಗೇಶನು ಸಮರ್ಥವಾಗಿ ವಿವರಿಸಿದ್ದಾನೆ. ಅಲ್ಲದೆ ಮಹಾಭಾಷ್ಯದ ಅಂತರಂಗವನ್ನು ಅಸಾಧಾರಣ ವೈದುಷ್ಯದಿಂದ ವಿಶದೀಕರಿಸಿದ್ದಾನೆ.

## ೨. ಲಘುಶಬ್ದೇಂದುಶೇಖರ

ಇದು ಸಿದ್ಧಾಂತ ಕೌಮುದಿಯ ಪ್ರೌಢವಾದ ವ್ಯಾಖ್ಯಾನ. ನಾಗೇಶಭಟ್ಟನ ಆಳವಾದ ಪಾಂಡಿತ್ಯ ಇದರಲ್ಲಿ ವ್ಯಕ್ತವಾಗಿದೆ. ಅನೇಕ ಸ್ಥಳಗಳಲ್ಲಿ ಸಿದ್ಧಾಂತಕೌಮುದಿಯ ಅಭಿಪ್ರಾಯವು ಸರಿಯಲ್ಲವೆಂದು ವಿವರಿಸಲಾಗಿದೆ. ನಾಗೇಶಭಟ್ಟನು ಬೃಹಚ್ಛಬ್ದೇಂದುಶೇಖರವೆಂಬ ಇನ್ನೊಂದು ವ್ಯಾಖ್ಯಾನವನ್ನು ಬರೆದಿದ್ದಾನೆ. ಅದರಲ್ಲಿ ಕೆಲವು ಅಂಶಗಳು ಮಾತ್ರ ಅಧಿಕವಾಗಿವೆ.

## ೩. ಪರಿಭಾಷೇಂದುಶೇಖರ

ಸೀರದೇವನೇ (ಕ್ರಿ. ಶ. ೧೪ನೆಯ ಶತಮಾನ) ಮೊದಲಾದವರು ಸಂಗ್ರಹಿಸಿದ ಪರಿಭಾಷೆಗಳನ್ನು ಕ್ರೋಡೀಕರಿಸಿ ಬರೆದ ವಿಸ್ತೃತವಾದ ವ್ಯಾಖ್ಯಾನವೇ ಪರಿಭಾಷೇಂದುಶೇಖರ. ಪರಿಭಾಷೆಗಳ ವಿಷಯದಲ್ಲಿ ಸಮಗ್ರತೆಯನ್ನು ಪಡೆದಿರುವ ಗ್ರಂಥವಿದು. ಇದಕ್ಕೆ ಭೈರವಮಿಶ್ರನೇ (ಕ್ರಿ. ಶ. ೧೯ನೆಯ ಶತಮಾನ) ಮೊದಲಾದವರ ೧೩ ವ್ಯಾಖ್ಯೆಗಳು ಉಪಲಬ್ಧವಾಗಿವೆ.

## ೪. ಲಘುಮಂಜೂಷಾ

ವ್ಯಾಕರಣದರ್ಶನಕ್ಕೆ ಸಂಬಂಧಿಸಿದ ಪ್ರೌಢಗ್ರಂಥವಿದು. ನಾಗೇಶಭಟ್ಟನಿಗೆ ವಿವಿಧಶಾಸ್ತ್ರಗಳಲ್ಲಿದ್ದ ಬಹುಮುಖವಾದ ಪಾಂಡಿತ್ಯವನ್ನು ಇದರಲ್ಲಿ ಕಾಣಬಹುದು. ಇದನ್ನು ಸಾರವತ್ತಾಗಿ ಸಂಗ್ರಹಿಸಿ 'ಪರಮಲಘುಮಂಜೂಷೆ' ಯನ್ನು ಈತನು ರಚಿಸಿದ್ದಾನೆ.

## ೫. ಸ್ಫೋಟವಾದ

ಸ್ಫೋಟವಿಷಯಕವಾದ ಎಲ್ಲ ಅಂಶಗಳನ್ನು ಇದರಲ್ಲಿ ಸ್ಪಷ್ಟಗೊಳಿಸಲಾಗಿದೆ.

ಇವಲ್ಲದೆ ತಿಙಂತಸಂಗ್ರಹ, ಧಾತುಪಾಠವೃತ್ತಿ, ಞೇರುಶೇಪಾದಾರ್ಥ್ಯ, ಶಬ್ದಕೌಸ್ತುಭದ ವ್ಯಾಖ್ಯಾನ ವಿಷಮೀ–ಮೊದಲಾದವೂ ನಾಗೇಶಭಟ್ಟನ ವ್ಯಾಕರಣಗ್ರಂಥಗಳು. ಈತನಲ್ಲಿ ವಿಶಿಷ್ಟವಾದ ಒಂದು ವಿಮರ್ಶಕ ದೃಷ್ಟಿಯನ್ನು ಕಾಣಬಹುದು. ಮಹಾಭಾಷ್ಯವನ್ನು ನಾಗೇಶ ಭಟ್ಟನು ಕೂಲಂಕಷವಾಗಿ ಅಭ್ಯಾಸಮಾಡಿದ್ದನು. ಭಾಷ್ಯಾನುರೋಧವಾಗಿ ಅಷ್ಟಾಧ್ಯಾಯೀ ಪಾಠವನ್ನು ಶೋಧಿಸಿ ಸೂತ್ರಗಳ ಪಾಠಭೇದವನ್ನೂ ಕ್ರಮವ್ಯತ್ಯಾಸವನ್ನೂ ತಿಳಿಸಿದ್ದಾನೆ ಭಾಷ್ಯದ ಆಶಯವನ್ನು ಗೊತ್ತುಮಾಡುವುದರಲ್ಲಿ ತುಂಬ ಸಮರ್ಥ, ದಾರ್ಶನಿಕ ವಿಚಾರಗಳಲ್ಲಿಯೂ ಸಹ ಅನೇಕ ಹೊಸ ವಿಷಯಗಳನ್ನು ಹೊರಗೆಡವಿದ್ದಾನೆ[1].

ನಾಗೇಶಭಟ್ಟನು ಶಾಸ್ತ್ರಾಂತರಗಳಲ್ಲಿಯೂ ಗ್ರಂಥಗಳನ್ನು ರಚಿಸಿದ್ದಾನೆ. ಕಾವ್ಯಪ್ರಕಾಶದ ಪ್ರದೀಪಕ್ಕೆ ಬರೆದ ಉದ್ಯೋತ, ರಸಗಂಗಾಧರದ ಮರ್ಮಪ್ರಕಾಶಿಕಾ ಎಂಬ ಅಲಂಕಾರಶಾಸ್ತ್ರ ಗ್ರಂಥಗಳು ಪ್ರಸಿದ್ಧವಾದವು. ವಾಲ್ಮೀಕಿರಾಮಾಯಣಕ್ಕೆ ತಿಲಕ ಎಂಬ ವ್ಯಾಖ್ಯಾನವನ್ನು ಆಶ್ರಯದಾತನಾದ ರಾಮಸಿಂಹನ ಹೆಸರಿನಲ್ಲಿ ಬರೆದಿದ್ದಾನೆ. ಯೋಗಶಾಸ್ತ್ರ, ವೇದಾಂತ, ಧರ್ಮಶಾಸ್ತ್ರಗಳಲ್ಲಿಯೂ ಈತನ ಗ್ರಂಥಗಳಿವೆ. ಸುಮಾರು ೪೫ ಕೃತಿಗಳು ನಾಗೇಶಭಟ್ಟನವು.

ಕ್ರಿ.ಶ. ೧೯ನೆಯ ಶತಮಾನದ ಆದಿಭಾಗದಲ್ಲಿದ್ದ ಭೈರವಮಿಶ್ರನು ಲ. ಶಬ್ದೇಂದುಶೇಖರ, ಪರಿಭಾಷೇಂದುಶೇಖರ, ಶಬ್ದರತ್ನ ಮುಂತಾದ ಗ್ರಂಥಗಳಿಗೆ ಪ್ರೌಢವಾದ ವ್ಯಾಖ್ಯಾನಗಳನ್ನು ಬರೆದಿದ್ದಾನೆ.

## ೨೦. ವೈದ್ಯನಾಥಪಾಯಗುಂಡ

## (೧೮ನೆಯ ಶತಮಾನದ ಪೂರ್ವಾರ್ಧ)

ಇವನು ನಾಗೇಶಭಟ್ಟನ ಶಿಷ್ಯನಾದ್ದರಿಂದ ೧೮ನೆಯ ಶತಮಾನದ ಆದಿಭಾಗದಲ್ಲಿದ್ದನೆಂದು ಹೇಳಬಹುದು. ಇವನ ಗ್ರಂಥಗಳು—

(೧) ನಾಗೇಶಭಟ್ಟನ ಪ್ರದೀಪೋದ್ಯೋತಕ್ಕೆ ಛಾಯಾ ಎಂಬ ವ್ಯಾಖ್ಯಾನ.

(೨) ಪರಿಭಾಷೇಂದುಶೇಖರಕ್ಕೆ ಗದಾ ಎಂಬ ವ್ಯಾಖ್ಯಾನ

---

೧ ಉದಾ :—ಅಭೇದವು ಸಂಬಂಧವಲ್ಲ, ವಾಚ್ಯವಾಚಕ ಭಾವವು ಶಬ್ದಾರ್ಥಗಳ ಸಂಬಂಧವೇ ಹೊರತು ತಾರ್ಕಿಕರ ಶಕ್ತಿಯೆಲ್ಲ, ಬೌದ್ಧಪದಾರ್ಥವನ್ನು ಸ್ವೀಕರಿಸ ಬೇಕು. ಇತ್ಯಾದಿ.

# ಪರಿಶಿಷ್ಟ

## ೧ ಲಿಂಗಾನುಶಾಸನ

ಅಷ್ಟಾಧ್ಯಾಯಿಯ ಅಂಗವಾಗಿ ಲಿಂಗಾನುಶಾಸನವನ್ನು ಪಾಣಿನಿಯೇ ರಚಿಸಿದ್ದನೆಂದು ಹೇಳಬಹುದಾಗಿದೆ.[1] ಇದು ಪಾಣಿನಿಪ್ರಣೀತವಲ್ಲವೆಂದೂ ಅರ್ವಾಚೀನವೆಂದೂ ಕೀಲ್‌ಹಾರ್ನರವರ ಅಭಿಪ್ರಾಯ. ಸಿದ್ಧಾಂತಕೌಮುದಿಯಲ್ಲಿ ಭಟ್ಟೋಜಿದೀಕ್ಷಿತನು ಈ ಸೂತ್ರಗಳಿಗೆ ವೃತ್ತಿಯನ್ನು ಬರೆದಿದ್ದಾನೆ.

## ೨ ಪರಿಭಾಷೆಗಳು

ಪಾಣಿನಿಯು ಅಷ್ಟಾಧ್ಯಾಯಿಯಲ್ಲಿ ಕೆಲವು ಪರಿಭಾಷೆಗಳನ್ನು ಸೂತ್ರಗಳಲ್ಲಿ ಹೇಳಿದ್ದಾನೆ. ಇವಲ್ಲದೆ ಜ್ಞಾಪಕನ್ಯಾಯಸಿದ್ಧಗಳಾದ ಕೆಲವು ಪರಿಭಾಷೆಗಳನ್ನು ಮಹಾಭಾಷ್ಯದಲ್ಲಿ ವಿವರಿಸಲಾಗಿದೆ. ಹರಿದತ್ತನು (ಕ್ರಿ.ಶ. ೧೧ನೇ ಶತಮಾನ) 'ಪರಿಭಾಷಾ ಪ್ರಕರಣ'ವೆಂಬ ಗ್ರಂಥವನ್ನು ಬರೆದಿದ್ದನೆಂದು ತಿಳಿದು ಬರುತ್ತದೆ[2]. ಪುರುಷೋತ್ತಮದೇವನು (ಕ್ರಿ.ಶ. ೧೨ನೆಯ ಶತಮಾನ) ಪರಿಭಾಷಾಲಘುವೃತ್ತಿಯನ್ನು ಬರೆದಿದ್ದಾನೆ. ಸೀರದೇವನ (ಕ್ರಿ.ಶ. ೧೪ನೆಯ ಶತಮಾನ) ಪರಿಭಾಷಾವೃತ್ತಿಯೂ ನಾಗೇಶಭಟ್ಟನ ಪರಿಭಾಷೇಂದುಶೇಖರವೂ ಪ್ರಸಿದ್ಧವಾದವು.

## ೩ ಉಣಾದಿಸೂತ್ರ

ಪಾಣಿನಿಯು 'ಉಣಾದಯೋ ಬಹುಲಂ' (೩-೩-೧) ಎಂಬ ಸೂತ್ರದಲ್ಲಿ ಉಣಾದಿಗಳನ್ನು ಸ್ಮರಿಸಿದ್ದಾನೆ. ಉಣಾದಿಸೂತ್ರಗಳಲ್ಲಿ ಪಂಚಪಾದೀ, ದಶಪಾದೀ ಎಂಬ ಎರಡು ಪಾಠಗಳು ದೊರೆಯುತ್ತವೆ. ಪಂಚಪಾದಿಯು ದಶಪಾದಿಗೆ ಮೂಲವಾಗಿರಬೇಕು. ಸಿದ್ಧಾಂತಕೌಮುದಿಯಲ್ಲಿ ಪಂಚಪಾದಿಯ ಮೇಲೆ ವೃತ್ತಿ ಇದೆ.

ಉಣಾದಿಸೂತ್ರಗಳನ್ನು ಶಾಕಟಾಯನನು ಬರೆದಿದ್ದಾನೆಂದು ನಾಗೇಶಭಟ್ಟನ ಅಭಿಪ್ರಾಯವಿದೆ[3]. ಪಾಣಿನಿಯೇ ಬರೆದಿದ್ದಾನೆಂದು ಕೆಲವರ ಅಭಿಪ್ರಾಯವಿದೆ[4]. ಕ್ರಿ.ಶ. ೧೨ನೆಯ ಶತಕದಲ್ಲಿದ್ದ ಉಜ್ವಲದತ್ತನು ಉಣಾದಿಸೂತ್ರಗಳಿಗೆ ವೃತ್ತಿಯನ್ನು ಬರೆದಿದ್ದಾನೆ.

---

೧ 'ಅಪ್ಸುಮನಃಸಮಾಸಿಕತಾವರ್ಷಾಣಾಂ ಬಹುತ್ವಂ ಚ' ಇತಿ ಪಾಣಿನೀಯೇ ಸೂತ್ರಂ

—ಪದಮಂಜರೀ, ಭಾಗ ೨, ಪುಟ ೪೫೪

ಇದು ಲಿಂಗಾನುಶಾಸನದ ೭೯ನೇ ಸೂತ್ರವಾಗಿದೆ

೨ 'ಏತಚ್ಚಾಸ್ಮಾಭಿಃ ಪರಿಭಾಷಾಪ್ರಕರಣಾಖ್ಯೇ ಗ್ರಂಥೇ ಉಪಪಾದಿತಂ'

—ಪದಮಂಜರೀ, ಭಾಗ ೨, ಪುಟ ೪೩೭

೩ 'ಏವಂಚ' ಕೃವಾ ಪೇತಿ ಉಣಾದಿಸೂತ್ರಾಣಿ ಶಾಕಟಾಯನಸ್ಯೇತಿ ಸೂಚಿತಂ ।

—ಭಾಷ್ಯಪ್ರದೀಪೋದ್ಯೋತ (೩-೩-೧)

## ೪. ಫಿಟ್ ಸೂತ್ರ

ಭಟ್ಟೋಜಿದೀಕ್ಷಿತನು ಸಿದ್ಧಾಂತಕೌಮುದಿಯ ವೈದಿಕ ಪ್ರಕರಣದಲ್ಲಿ ಫಿಟ್‌ಸೂತ್ರಗಳಿಗೆ ವೃತ್ತಿಯನ್ನು ಬರೆದಿದ್ದಾನೆ. ಇವು ಉದಾತ್ತಾದಿ ಸ್ವರವಿಧಾಯಕಗಳು. ಇವನ್ನು ಶಂತನು ಎಂಬ ಆಚಾರ್ಯನು ರಚಿಸಿದ್ದಾನೆಂದು ಹರದತ್ತನು ಹೇಳುತ್ತಾನೆ[1]. ಈ ಸೂತ್ರಗಳು ಪಾಣಿನಿ ಸಂಪ್ರದಾಯಕ್ಕೆ ಸಮ್ಮತವಾದವು.

ಫಿಟ್ (ಫಿಷ್) ಎಂದು ಪ್ರಾತಿಪದಿಕಕ್ಕೆ ಪ್ರಾಚೀನಾಚಾರ್ಯರ ಸಂಜ್ಞೆ. 'ಫಿಷೋಽಂತ ಉದಾತ್ತಃ' ಎಂದು ಆದಿಸೂತ್ರವಿರುವುದರಿಂದ ಇವುಗಳಿಗೆ ಫಿಟ್‌ಸೂತ್ರ ಎಂದು ಹೆಸರು ಬಂದಿದೆ. ನಪ್ (ನಪುಂಸಕ), ಶಿಟ್ (ಸರ್ವನಾಮ), ಅಪ್ (ಸ್ವರ) ಮುಂತಾದ ಸಂಜ್ಞೆಗಳನ್ನು ಈ ಸೂತ್ರಗಳಲ್ಲಿ ಬಳಸಲಾಗಿದೆ.

## ೫. ಪ್ರಾತಿಶಾಖ್ಯಗಳು

ವೈದಿಕಸಂಹಿತೆಗಳ ಸಂಧಿಕಾರ್ಯ, ಷತ್ವ, ಣತ್ವ. ಉದಾತ್ತಾದಿ ಸ್ವರಗಳಿಗೆ ಸಂಬಂಧಿಸಿದ ಕಾರ್ಯಗಳನ್ನು ಪ್ರಾತಿಶಾಖ್ಯಗಳು ವಿಧಿಸುತ್ತವೆ. ಇವನ್ನು ವ್ಯಾಕರಣದ ಪರಿಶಿಷ್ಟಗಳೆನ್ನ ಬಹುದು. ಪ್ರಾತಿಶಾಖ್ಯವೆಂದರೆ ಒಂದೊಂದು ಶಾಖೆಗೆ ಸಂಬಂಧಿಸಿದ ಸಂಧಿಕಾರ್ಯಾದಿಗಳನ್ನು ಹೇಳುವ ಗ್ರಂಥ. ಇದಕ್ಕೆ ಪಾರ್ಷದ, ಪಾರಿಷದ ಎಂಬ ನಾಮಾಂತರಗಳು ಇವೆ. ಋಕ್ ಪ್ರಾತಿಶಾಖ್ಯ, ತೈತ್ತಿರೀಯ ಪ್ರಾತಿಶಾಖ್ಯ ಮೊದಲಾದ ಏಳು ಪ್ರಾತಿಶಾಖ್ಯಗಳು ಉಪಲಬ್ಧ ವಾಗಿವೆ. ಋಕ್ ಪ್ರಾತಿಶಾಖ್ಯದ ಉವ್ವಟನ ಭಾಷ್ಯ ಪ್ರಸಿದ್ಧವಾದುದು.

## ಉಪಸಂಹಾರ

ಈ ರೀತಿಯಲ್ಲಿ ಪಾಣಿನಿಯ ಅಷ್ಟಾಧ್ಯಾಯಿ ಸುಮಾರು ೨೫೦೦ ವರ್ಷಗಳಿಂದ ಅಖಂಡ ವಾಗಿ ಭರತಖಂಡದ ವಿದ್ವತ್ ಪ್ರಪಂಚದಲ್ಲಿ ತನ್ನ ಸಾಮ್ರಾಜ್ಯವನ್ನು ಸ್ಥಾಪಿಸಿದೆ. ಅಧ್ಯಯನ ಪದ್ಧತಿ ಅವಿಚ್ಛಿನ್ನವಾಗಿ ಸಾಗಿಬಂದಿದೆ. ಸೂತ್ರಾರ್ಥವಿಷಯದಲ್ಲಿಯೂ ಶಾಬ್ದಬೋಧಾದಿ ದಾರ್ಶನಿಕವಿಚಾರದಲ್ಲಿಯೂ ವಾದವಿವಾದಗಳನ್ನೊಗೊಂಡ ಪ್ರೌಢಗ್ರಂಥಗಳು ರಚಿತವಾಗಿವೆ. ಕ್ರಿ. ಶ. ೧೯ ಮತ್ತು ೨೦ ನೆಯ ಶತಮಾನಗಳಲ್ಲಿ ವಿವಿಧಕಾರಣಗಳಿಂದ ಪ್ರೌಢಗ್ರಂಥಗಳ ರಚನೆ

---

೧. ಪದಮಂಜರೀ (೭–೩–೪)

೪. ಆಕಾರಂ ಮಂಕುರಸ್ಯಾದಾ ಉಕಾರಂ ದರ್ದುರಸ್ಯ ಚ ।
ಬಭಾಣ ಪಾಣಿನಿಸ್ತಾತಂ ವ್ಯತ್ಯಯೇನಾಹ ಭೋಜರಾಟ್ ॥
—ಪ್ರಕ್ರಿಯಾಸರ್ವಸ್ವ
'ಮಂಕುರದರ್ದುರಾ' (ಉಣಾದಿ ೧–೪೦)

ಇಳಿಮುಖವಾಗಿರುವುದನ್ನು ಗುರುತಿಸಬಹುದು. ವ್ಯಾಕರಣವನ್ನು ಸರಳಗೊಳಿಸಲು ಲಘು ಕೌಮುದೀ, ಲಘುಪಾಣಿನೀಯ, ಶಬ್ದರೂಪಾವಳಿ—ಮುಂತಾದ ಚಿಕ್ಕ ಗ್ರಂಥಗಳು ಅವಶ್ಯಕತೆಗೆ ಅನುಗುಣವಾಗಿ ರಚಿತವಾದವು.

## ಪಾಣಿನಿಸಂಪ್ರದಾಯಕ್ಕೆ ಭಿನ್ನವಾದ ಇತರ ವ್ಯಾಕರಣಶಾಸ್ತ್ರಗಳು

ಅಷ್ಟಾಧ್ಯಾಯಿಯು ಸರ್ವತ್ರ ಪ್ರಚುರವಾಗಿದ್ದರೂ ಹೊಸದಾಗಿ ಸ್ವತಂತ್ರವಾದ ಭಿನ್ನ ಸಂಪ್ರದಾಯದ ವ್ಯಾಕರಣಗ್ರಂಥಗಳು ಉದಯಿಸಿದವು. ಅದಕ್ಕೆ ಕಾರಣಗಳನ್ನು ಹೀಗೆ ಊಹಿಸಬಹುದು.

೧. ಪಾಣಿನಿಯ ಸೂತ್ರಗಳಿಂದ ಸಿದ್ಧವಾಗದ ಕೆಲವು ಶಬ್ದಗಳು ಪ್ರಚಾರದಲ್ಲಿದ್ದುದರಿಂದ ಅವುಗಳಿಗೆ ಸಾಧುತ್ವವನ್ನು ಕಾತ್ಯಾಯನನೂ ಪತಂಜಲಿಯೂ ಹೇಳಿ ನ್ಯೂನತೆಯನ್ನು ಸರಿಪಡಿಸಿದರು. ಈ ಮುನಿತ್ರಯದ ದೃಷ್ಟಿಯಿಂದಲೂ ನುಣಿಚಿಕೊಂಡ ಹಲವಾರು ಶಬ್ದಗಳು ಸಂಸ್ಕೃತ ವಾಙ್ಮಯದಲ್ಲಿ ಉಳಿದವು. ಇವೆಲ್ಲವನ್ನೂ ಸಂಗ್ರಹಿಸಿ ಮುನಿತ್ರಯದ ಮತಗಳನ್ನು ಸಂಕಲನ ಮಾಡಿದ ವ್ಯಾಕರಣದ ಆವಶ್ಯಕತೆ ತಲೆದೋರಿತು.

೨. ಅಷ್ಟಾಧ್ಯಾಯಿಯಲ್ಲಿ ಲೌಕಿಕ, ವೈದಿಕ ಶಬ್ದಗಳಿಗೆ ಸಮವಾದ ಪ್ರಾಧಾನ್ಯವಿತ್ತು. ವೈದಿಕಗ್ರಂಥಗಳ ಅಭ್ಯಾಸ ಕುಂಠಿತವಾದಾಗ ವೈದಿಕ ಶಬ್ದಗಳನ್ನು ವ್ಯಾಕರಣದಿಂದ ಕೈಬಿಡುವುದು ಉತ್ತಮವೆಂಬ ಭಾವನೆಯುಂಟಾಯಿತು. ಅಲ್ಲದೆ ಜೈನವಿದ್ವಾಂಸರಿಗೆ ವೈದಿಕಶಬ್ದಗಳ ಅಧ್ಯಯನ ಅನಾವಶ್ಯಕವಾಯಿತು.

೩. ಪಾಣಿನಿಯು ಹೇಳಿದ ಎಷ್ಟೋ ಶಬ್ದಗಳು ಪ್ರಯೋಗದಿಂದ ಲುಪ್ತವಾಗಿದ್ದವು. ಅಂಥ ಶಬ್ದಗಳ ಪ್ರಕ್ರಿಯೆಯನ್ನು ತ್ಯಜಿಸುವುದು ಆವಶ್ಯಕವೆನಿಸಿತು.

೪. ಅಷ್ಟಾಧ್ಯಾಯಿ ವೇದಾಂಗವೆಂದು ಪರಿಗಣಿತವಾಗಿ ವೈದಿಕಸಂಪ್ರದಾಯಕ್ಕೆ ಸೇರಿದುದಾಗಿತ್ತು. ಜೈನವಿದ್ವಾಂಸರಿಗೆ ವೇದಸಂಬಂಧವನ್ನು ತ್ಯಜಿಸುವ ಸ್ವತಂತ್ರವಾದ ವ್ಯಾಕರಣಶಾಸ್ತ್ರ ಬೇಕೆನಿಸಿತು.

೫. ಅಷ್ಟಾಧ್ಯಾಯಿಯಲ್ಲಿ ಆರ್ಷಪ್ರಯೋಗಗಳಿದ್ದವು. ಅನುವೃತ್ತಿ, ಪದವಿಭಾಗ ಮೊದಲಾದದ್ದು ವ್ಯಾಖ್ಯಾನ ಸಾಪೇಕ್ಷವಾಗಿ ಸೂತ್ರಾರ್ಥವು ಕ್ಲಿಷ್ಟವೆಂದೂ, ಇದನ್ನು ಸರಳಗೊಳಿಸಬೇಕೆಂದೂ ತೋರಿತು.

ಪ್ರಾಯಶಃ ಈ ಕಾರಣಗಳಿಂದ ಭಿನ್ನಸಂಪ್ರದಾಯದ ವ್ಯಾಕರಣಗಳು ಹುಟ್ಟಿದವು. ಇವು ತಾತ್ಕಾಲಿಕವಾಗಿಯೂ ಪ್ರಾದೇಶಿಕವಾಗಿಯೂ ಪ್ರಚಾರದಲ್ಲಿದ್ದವೇ ಹೊರತು ಭರತಖಂಡದ ಎಲ್ಲಾ ಭಾಗಗಳನ್ನು ವ್ಯಾಪಿಸಿ ಮಾನ್ಯತೆಯನ್ನು ಪಡೆಯಲಿಲ್ಲ. ಇದರ ಕಾರಣವನ್ನು ಹೀಗೆ ಹೇಳಬಹುದು—

ವೈದಿಕಮತದವರು ಅಷ್ಟಾಧ್ಯಾಯಿಯೇ ಆರ್ಷವೆಂದೂ ವೇದಾಂಗವೆಂದೂ, ಆದ್ದರಿಂದ ಅಧ್ಯಯನಯೋಗ್ಯವೆಂದೂ ತಿಳಿದಿದ್ದರು. ಪತಂಜಲಿ, ಭರ್ತೃಹರಿ, ಕೈಯಟ, ಹರದತ್ತ ಮೊದಲಾದವರ ಪ್ರೌಢವಿಚಾರಪರಂಪರೆಗಳು ಸಹಜವಾಗಿ ವಿದ್ವಾಂಸರ ಮನ್ನಣೆಯನ್ನು ಗಳಿಸಿ ಕುತೂಹಲವನ್ನು ಹೆಚ್ಚಿಸಿದವು. ಜಯಾದಿತ್ಯ, ವಾಮನ, ಜಿನೇಂದ್ರಬುದ್ಧಿ—ಮೊದಲಾದ ಬೌದ್ಧವಿದ್ವಾಂಸರು ಅಷ್ಟಾಧ್ಯಾಯಿಗೆ ಪ್ರೋತ್ಸಾಹವನ್ನಿತ್ತರು. ಮುನಿತ್ರಯಸಂಮತವಾದ ಶಬ್ದವೇ ಸಾಧು. ವ್ಯತಿರಿಕ್ತವಾದುದು ಅಸಾಧು—ಎಂಬ ವಿಶ್ವಾಸವು ಪ್ರಬಲವಾದುದರಿಂದ ಇತರ ವ್ಯಾಕರಣಗಳಿಗೆ ಪ್ರೋತ್ಸಾಹ ದೊರೆಯಲಿಲ್ಲ. ಅಲ್ಲದೆ ೧೭—೧೮ನೆಯ ಶತಮಾನಗಳಲ್ಲಿ ಶೇಷಕೃಷ್ಣ, ಭಟ್ಟೋಜಿದೀಕ್ಷಿತ, ನಾಗೇಶಭಟ್ಟ, ಮೊದಲಾದವರ ಗ್ರಂಥರಚನೆ, ಅಧ್ಯಾಪನಗಳು ಪ್ರಬಲವೂ ವಿಶಾಲವೂ ಆಗಿ ವಿಸ್ತರಿಸಿದವು. ಆಗ ಪ್ರಬಲವಾಗುತ್ತಿದ್ದ ಸಾರಸ್ವತಾದಿ ವ್ಯಾಕರಣವು ಈ ವಿದ್ವಾಂಸರ ಸಾಹಸದಿಂದ ಹಿಮ್ಮೆಟ್ಟಿತು.

ಅನ್ಯವ್ಯಾಕರಣಗಳಲ್ಲಿ ಇನ್ನೊಂದು ನ್ಯೂನತೆ ಇತ್ತು. ಅವು ಶಬ್ದಗಳ ರೂಪಸಿದ್ಧಿಗೆ ಮಾತ್ರ ಗಮನವನ್ನಿತ್ತವು. ಅವುಗಳಲ್ಲಿ ದಾರ್ಶನಿಕ ವಿಚಾರಗಳೂ ಇರಲಿಲ್ಲ. ವಿದ್ವತ್ಪ್ರಿಯವಾದ ಗ್ರಂಥಗಳೂ ಹುಟ್ಟಲಿಲ್ಲ.

ಪಾಣಿನೀಯೇತರ ಪದ್ಧತಿಗಳಲ್ಲಿ ಮುಖ್ಯವಾದ ಕೆಲವು ಗ್ರಂಥಗಳನ್ನೂ ಗ್ರಂಥಕಾರರನ್ನೂ ಮುಂದೆ ಪರಿಚಯ ಮಾಡಿಕೊಡಲಾಗಿದೆ.

## ೧. ಕಾತಂತ್ರಶಾಖೆ (—ಶರ್ವವರ್ಮ) (ಕ್ರಿ. ಶ. ಆದಿಭಾಗ)

ವ್ಯಾಕರಣಶಾಸ್ತ್ರದ ಇತಿಹಾಸದಲ್ಲಿ ಕಾತಂತ್ರಶಾಖೆಗೆ ಒಂದು ಮುಖ್ಯಸ್ಥಾನ ಸಲ್ಲುತ್ತದೆ. ಇದಕ್ಕೆ ಕಲಾಪಕ, ಕೌಮಾರ ಎಂಬ ವ್ಯವಹಾರವೂ ಇದೆ. ಕಾತಂತ್ರವನ್ನು ದುರ್ಗಸಿಂಹಾದಿಗಳು ಲಘುತಂತ್ರವೆಂದು ಕರೆದಿದ್ದಾರೆ. ಅವರ ಪ್ರಕಾರ ಅಲ್ಪಾರ್ಥಕವಾದ ಕುಶಬ್ದಕ್ಕೆ 'ಕಾ' ಆದೇಶ ಬಂದು ಕಾತಂತ್ರವೆಂಬ ರೂಪವಾಗಿದೆ. ಷಣ್ಮುಖನು ಕಲಾಪದ (ನವಿಲುಗರಿಯ) ಮೇಲೆ ಈ ಶಾಸ್ತ್ರವನ್ನು ಬರೆದಿದ್ದರಿಂದ ಕಾಲಾಪಕವೆಂದು ಹೆಸರಾಯಿತೆಂದು ಕಥೆ ಇದೆ. ಕಾಶಕೃತ್ಸ್ನನ ಶಬ್ದಕಲಾಪವೆಂಬ ಬೃಹದ್ವ್ಯಾಕರಣದ ಸಂಕ್ಷಿಪ್ತರೂಪವಾದ್ದರಿಂದ ಕಲಾಪಕವೆಂದು ಹೆಸರಾಗಿರಬೇಕು. ಕುಮಾರನು (ಷಣ್ಮುಖನು) ಉಪದೇಶಿಸಿದ್ದರಿಂದ 'ಕೌಮಾರ' ಎಂದು ವ್ಯುತ್ಪತ್ತಿಯನ್ನು

ಹೇಳುತ್ತಾರೆ. ಕುಮಾರರಿಗೆ ಉಪಯುಕ್ತವಾದ ಲಘುತಂತ್ರವಾದ್ದರಿಂದ ಕೌಮಾರ ಎಂಬ ಹೆಸರು ಬಂದಿರಬಹುದು.1

ಚನ್ನವೀರಕವಿಯಿಂದ ಕನ್ನಡದಲ್ಲಿ ವ್ಯಾಖ್ಯಾತವಾದ ಕಾಶಕೃತ್ಸ್ನ ಧಾತುಪಾಠ ಎಂಬ ಗ್ರಂಥ ದೊರಕಿದೆ. ಈ ಧಾತುಪಾಠಕ್ಕೂ ಕಾತಂತ್ರದ ಧಾತುಪಾಠಕ್ಕೂ ತುಲನೆಯನ್ನು ಮಾಡಿದರೆ ಕಾತಂತ್ರವು ಕಾಶಕೃತ್ಸ್ನನ ಸಂಕ್ಷಿಪ್ತಭಾಗವೆಂದು ಗೊತ್ತಾಗುತ್ತದೆ2.

ಸಾತವಾಹನನೆಂಬ ರಾಜನು ರಾಣಿಯೊಡನೆ ಜಲಕ್ರೀಡೆಯಾಡುವಾಗ, ಅವಳು 'ಮೋದಕಂ ಕ್ಷಿಪ' (ಮಾ + ಉದಕಂ + ಕ್ಷಿಪ) ಎಂದಳಂತೆ. ರಾಜನು ಇದರ ಅರ್ಥವನ್ನರಿಯದೆ ಮೋದಕಗಳನ್ನು ಮಾಡಿಸಿ ರಾಣಿಯ ಎದುರಿಗೆ ಸುರಿಸಿದನಂತೆ. ರಾಣಿಯು ಪತಿಯ ಮೂರ್ಖತೆಯನ್ನು ಕಂಡು ಹಾಸ್ಯಮಾಡಿದಳೆಂದೂ, ಖಿನ್ನನಾದ ರಾಜನು ಶರ್ವವರ್ಮನೆಂಬ ವಿದ್ವಾಂಸನಿಂದ ವ್ಯಾಕರಣವನ್ನು ಹೇಳಿಸಿಕೊಂಡನೆಂದೂ, ರಾಜನಿಗಾಗಿ ಶರ್ವವರ್ಮನು ಕಾತಂತ್ರವ್ಯಾಕರಣವನ್ನು ಬರೆದನೆಂದೂ ಕಥಾಸರಿತ್ಸಾಗರದಲ್ಲಿ ಕಥೆ ಇದೇ. ಸಾತವಾಹನನು ಕ್ರಿ.ಶ.ದ ಆದಿ ಭಾಗದಲ್ಲಿದ್ದನೆಂದು ಇತಿಹಾಸಜ್ಞರು ಹೇಳುತ್ತಾರೆ. ಆದ್ದರಿಂದ ಶರ್ವವರ್ಮನ ಕಾಲವೂ ಅದೇ ಆಗುತ್ತದೆ.

ವ್ಯಾಕರಣವನ್ನು ಸುಲಭಗೊಳಿಸುವುದೇ ಕಾತಂತ್ರದ ಉದ್ದೇಶವಾಗಿತ್ತು. ಇದು ಜನಪ್ರಿಯವಾಗಿ ಬಹುಜನರನ್ನು ಬಹುಕಾಲದವರೆಗೆ ಆಕರ್ಷಿಸಿದ್ದರಿಂದ ಉದ್ದೇಶವೂ ಸಾರ್ಥಕವಾಯಿತು. ಇದರ ವಿಶೇಷರಚನೆ ಹೇಗಿದೆಯೆಂದರೆ—

೧. ಲೋಕಪ್ರಸಿದ್ಧವಾದ 'ಅ ಆ ಇ ಈ...' ಎಂಬ ಅಕ್ಷರಮಾಲೆಯನ್ನು ಬಳಸಲಾಗಿದೆ. ಪ್ರತ್ಯಾಹಾರಸೂತ್ರಗಳಿಲ್ಲ. ಸ್ವರ, ವ್ಯಂಜನ—ಮುಂತಾದ ಶಬ್ದಗಳಿಂದಲೇ ವ್ಯವಹಾರ ಸಾಗಿದೆ.

೨. ಸಿದ್ಧಾಂತಕೌಮುದೀಕ್ರಮದಂತೆ ವಿಷಯಭಾಗವಿದೆ. ಸಂಧಿಪ್ರಕರಣ, ನಾಮಪ್ರಕರಣ, ಆಖ್ಯಾತಪ್ರಕರಣ, ಕೃತ್‌ಪ್ರಕರಣ ಎಂದು ವಿಂಗಡಿಸಲಾಗಿದೆ, ಕಾರಕ, ಸಮಾಸ, ತದ್ಧಿತಗಳು ನಾಮಪ್ರಕರಣದಲ್ಲಿ ಸೇರುತ್ತವೆ.

---

೧. ಛಾಂದಸಾಃ ಸ್ವಲ್ಪಮತಯಃ ಶಾಸ್ತ್ರಾಂತರರತಾಶ್ಚ ಯೇ ।
ಈಶ್ವರಾ ವ್ಯಾಧಿನಿರತಾಸ್ತಥಾಲಸ್ಯಯುತಾಶ್ಚ ಯೇ ॥
ವಣಿಕ್ ಸಸ್ಯಾದಿ ಸಂಸಕ್ತಾ ಲೋಕಯಾತ್ರಾದಿಷು ಸ್ಥಿತಾಃ ।
ತೇಷಾಂ ಕ್ಷಿಪ್ರಂ ಪ್ರಬೋಧಾರ್ಥಂ...

—ವ್ಯಾಖ್ಯಾನ ಪ್ರಕ್ರಿಯಾ(Ms No. ೬೧೭ of ೧೮೭೫–೭೬
(From the Deccan college)

೨. ವಿವರಗಳಿಗೆ ಯುಧಿಷ್ಠಿರಮೀಮಾಂಸಕಾರ 'ಕಾಶಕೃತ್ಸ್ನ ವ್ಯಾಕರಣಂ' ಎಂಬ ಪುಸ್ತಕವನ್ನು ನೋಡಬಹುದು.

೩. ವೈದಿಕಶಬ್ದದ ಮತ್ತು ಅಪ್ರಸಿದ್ಧಶಬ್ದಗಳ ಪ್ರಕ್ರಿಯೆಯನ್ನು ಕೈಬಿಡಲಾಗಿದೆ.

ಮೊದಲನೆಯ ಆಖ್ಯಾತಾಂತ ವಿಭಾಗದಲ್ಲಿ ೮೫೫ ಸೂತ್ರಗಳಿವೆ. ಎರಡನೆಯ ಕೃತ್ ಪ್ರಕರಣವನ್ನು ಸೇರಿಸಿದರೆ ಒಟ್ಟು ೧೪೦೦ ಸೂತ್ರಗಳಾಗುತ್ತವೆ. ಮೊದಲನೆಯ ಆಖ್ಯಾತಾಂತ ವಿಭಾಗವನ್ನು ಶರ್ವವರ್ಮನು ಬರೆದಿದ್ದಾನೆಂದು ಸಂಪ್ರತಿಪನ್ನವಾಗಿದೆ. ಎರಡನೆಯ ಕೃತ್ ಪ್ರಕರಣವನ್ನು ಕಾತ್ಯಾಯನನು ಬರೆದಿದ್ದಾನೆಂದು ವ್ಯಾಖ್ಯಾನಕಾರನಾದ ದುರ್ಗಸಿಂಹನು (ಕ್ರಿ. ಶ. ೭ನೆಯ ಶತಮಾನ) ಹೇಳುತ್ತಾನೆ. ಈ ಕಾತ್ಯಾಯನನು ಯಾರೋ ತಿಳಿಯದು.

ಕಾತಂತ್ರವು ಒಂದು ಕಾಲದಲ್ಲಿ ಕಾಶ್ಮೀರದಿಂದ ಶ್ರೀಲಂಕೆಯವರೆಗೆ ಪ್ರಚಾರದಲ್ಲಿತ್ತು. ಈಗಲೂ ಬಂಗಾಳದಲ್ಲಿ ಇದರ ಅಧ್ಯಯನ ಉಂಟು. ಬೌದ್ಧಭಿಕ್ಷುಗಳ ಮೂಲಕ ಇದು ಮಧ್ಯ ಏಷ್ಯಾದವರೆಗೂ ಹೋಯಿತು.

ಕಾತಂತ್ರದಲ್ಲಿದ್ದ ಕೆಲವು ನ್ಯೂನತೆಗಳನ್ನು ಸರಿಪಡಿಸುವುದಕ್ಕಾಗಿ ಶ್ರೀಪತಿದತ್ತನು (ಕ್ರಿ. ಶ. ಸು. ೧೦ನೆಯ ಶತಕ) ಕಾತಂತ್ರಪರಿಶಿಷ್ಟವನ್ನೂ, ವಿಜಯಾನಂದನು (ಕ್ರಿ.ಶ. ೧೨ನೆಯ ಶತಮಾನ) ಕಾತಂತ್ರೋತ್ತರವನ್ನೂ ಬರೆದರು.

ಕಾತಂತ್ರಸೂತ್ರಗಳಿಗೆ ದುರ್ಗಸಿಂಹನು (ಕ್ರಿ. ಶ. ೭ನೆಯ ಶತಮಾನ) ಒಂದು ಉತ್ತಮವಾದ ಟೀಕೆಯನ್ನು ಬರೆದಿದ್ದಾನೆ. ತ್ರಿಲೋಚನದಾಸನು 'ಕಾತಂತ್ರಪಂಜಿಕಾ' ಎಂಬ ಬೃಹದ್ವ್ಯಾಖ್ಯಾನವನ್ನು ಈ ಟೀಕೆಯ ಮೇಲೆ ಬರೆದಿದ್ದಾನೆ.

## ೨ ಚಂದ್ರಾಚಾರ್ಯ–ಚಂದ್ರಗೋಮಿ

## (ಕ್ರಿ. ಶ. ಸು. ೪ನೇ ಶತಮಾನದ ಅಂತ್ಯಭಾಗ)

ಚಂದ್ರಾಚಾರ್ಯನು ಭರ್ತೃಹರಿಯ ಗುರುವಾದ ವಸುರಾತನಿಗೆ ಗುರುವೆಂಬ ಹೇಳಿಕೆ ಇದೆ. ಇದು ನಿಜವಾದಲ್ಲಿ ಭರ್ತೃಹರಿಗೆ ಸುಮಾರು ೫೦–೭೦ ವರ್ಷಗಳಷ್ಟು ಹಿಂದಿನವನೆಂದು ಹೇಳಬಹುದು. ಆ ಪಕ್ಷದಲ್ಲಿ ಈಗಿನ ನಂಬಿಕೆಯಂತೆ ಕ್ರಿ. ಶ. ೭ನೇ ಶತಮಾನದ ಅಂತ್ಯಭಾಗ ಚಂದ್ರಾಚಾರ್ಯನ ಸಮಯವಾಗುತ್ತದೆ. ನಷ್ಟವಾಗಿದ್ದ ಮಹಾಭಾಷ್ಯವನ್ನು ಚಂದ್ರಾಚಾರ್ಯನು ಬಹುಶ್ರಮದಿಂದ ಉದ್ಧರಿಸಿದ್ದನೆಂದು ಭರ್ತೃಹರಿಯ ಮಾತಿನಿಂದ ಗೊತ್ತಾಗುತ್ತದೆ.[1]

ಚಂದ್ರಾಚಾರ್ಯನಿಗೆ ಚಂದ್ರಗೋಮಿಯೆಂದೂ ಹೆಸರುಂಟು. ಈತನು ಬೌದ್ಧಮತದವನೆಂದು ಅವನ ವ್ಯಾಕರಣ ಗ್ರಂಥದ ಈ ಮಂಗಳ ಶ್ಲೋಕದಿಂದ ಗೊತ್ತಾಗುತ್ತದೆ.

---

೧ ಪತಂಜಲಿಯ ಪ್ರಕರಣವನ್ನು ನೋಡಿ.

ಸಿದ್ಧಂ ಪ್ರಣಮ್ಯ ಸರ್ವಜ್ಞಂ ಸರ್ವೀಯಂ ಜಗತೋ ಗುರುಂ ।
ಲಘುವಿಸ್ಪಷ್ಟಸಂಪೂರ್ಣಮುಚ್ಯತೇ ಶಬ್ದಲಕ್ಷಣಂ ॥

ಚಂದ್ರಗೋಮಿಯ ವ್ಯಾಕರಣದ ಕೆಲವು ಭಾಗ ಮಾತ್ರ ಡಾ॥ ಬುಲರ್ ಅವರಿಗೆ ಕಾಶ್ಮೀರದಲ್ಲಿ ದೊರಕಿತ್ತು. ಶ್ರೀಹರಪ್ರಸಾದಶಾಸ್ತ್ರಿಗಳಿಗೆ ನೇಪಾಳಿ ಲಿಪಿಯಲ್ಲಿದ್ದ ಪೂರ್ಣಪ್ರತಿ ಸಿಕ್ಕಿತು. ಟಿಬೆಟ್ ಭಾಷೆಯ ಭಾಷಾಂತರವೂ ದೊರಕಿರುವುದರಿಂದ ಚಾಂದ್ರ ವ್ಯಾಕರಣವು ಸಮಗ್ರವಾಗಿ ದೊರಕಿದಂತಾಗಿದೆ, ಇದರಲ್ಲಿ ೬ ಅಧ್ಯಾಯಗಳಿದ್ದು ಒಟ್ಟು ೩೧೦೦ ಸೂತ್ರಗಳಿವೆ, ಶಬ್ದಗಳ ಪ್ರಕ್ರಿಯೆ ಪೂರ್ತಿಯಾಗಿದೆ ವೈದಿಕಶಬ್ದಗಳ ಮತ್ತು ಸ್ವರಗಳ ಪ್ರಕ್ರಿಯೆ ಇಲ್ಲ. ಚಾಂದ್ರವ್ಯಾಕರಣದಲ್ಲಿ ೮ ಅಧ್ಯಾಯಗಳಿದ್ದವೆಂದು ಸ್ವರ ವೈದಿಕಪ್ರಕ್ರಿಯೆಯೂ ಇದ್ದಿತೆಂದೂ ಯುಧಿಷ್ಠಿರ ಮೀಮಾಂಸಕರು ಹೇಳುತ್ತಾರೆ 1.

ಚಂದ್ರಗೋಮಿಯು ತನ್ನ ವ್ಯಾಕರಣದ ರಚನೆಗೆ ಮಹಾಭಾಷ್ಯದಿಂದ ತುಂಬ ಪ್ರಯೋಜನವನ್ನು ಪಡೆದಿದ್ದಾನೆ. ವಾರ್ತಿಕಗಳನ್ನೂ ಇಷ್ಟಿಗಳನ್ನೂ ಸೂತ್ರಗಳಲ್ಲಿ ಸೇರಿಸಿಕೊಂಡಿದ್ದಾನೆ. ಅಕ್ಷರಸಮಾಮ್ನಾಯದ 'ಹಯವರಟ್ ಲಣ್ ' ಎಂಬ ಸೂತ್ರಗಳನ್ನು ಸೇರಿಸಿ 'ಹಯವರಲಣ್' ಎಂದು ಮಾರ್ಪಡಿಸಿದ್ದಾನೆ. ಪ್ರತ್ಯಾಹಾರಗಳನ್ನಲ್ಲದೆ ಬೇರೆ ಪಾರಿಭಾಷಿಕ ಸಂಜ್ಞೆಗಳನ್ನು ಬಳಸಿಲ್ಲ. 'ಲಘು ವಿಸ್ಪಷ್ಟ' ವಾಗಲೆಂದು ಅಷ್ಟಾಧ್ಯಾಯೀ ಪದ್ಧತಿಯನ್ನು ಚಂದ್ರಗೋಮಿ ಪರಿಷ್ಕರಿಸಿದ್ದಾನೆಂದು ಹೇಳಬಹುದು. ಇವನು ಸ್ವತಂತ್ರವಾಗಿ ಸೇರಿಸಿದ್ದು ಸುಮಾರು ೩೫ ಸೂತ್ರಗಳು ಮಾತ್ರ.

ಚಂದ್ರಗೋಮಿಯು ತನ್ನ ವ್ಯಾಕರಣದ ಅಂಗವಾಗಿ ಧಾತುಪಾಠ, ಗಣಪಾಠ, ಉಣಾದಿ ಸೂತ್ರ, ಲಿಂಗಾನುಶಾಸಗಳನ್ನು ಬರೆದಿದ್ದನು, ಈತನ ಉಪಸರ್ಗ ವೃತ್ತಿಯು ಟಿಬೆಟ್ ಭಾಷೆಯಲ್ಲಿ ದೊರೆತಿದೆ. ಈತನ ಶಿಕ್ಷಾಸೂತ್ರದಲ್ಲಿ ವರ್ಣೋಚ್ಚಾರಣೆಗೆ ಸಂಬಂಧಿಸಿದ ೪೮ ಸೂತ್ರಗಳಿವೆ. ಅಲ್ಲದೆ ಶಿಷ್ಯಲೇಖ ಎಂಬ ಧಾರ್ಮಿಕ ಕವಿತೆಯನ್ನೂ, ಲೋಕಾನಂದವೆಂಬ ನಾಟಕವನ್ನೂ ಚಂದ್ರಗೋಮಿ ರಚಿಸಿದ್ದಾನೆ,

ಚಾಂದ್ರಸೂತ್ರಗಳಿಗೆ ಧರ್ಮದಾಸನು ಬರೆದ ವೃತ್ತಿ ದೊರಕಿದೆ. ಬೌದ್ಧಭಿಕ್ಷು ಕಶ್ಯಪನು (ಕ್ರಿ. ಶ. ೧೨೦೦) ಚಾಂದ್ರಸೂತ್ರಗಳ ಮೇಲೆ ಬಾಲಬೋಧಿನೀ ಎಂಬ ವೃತ್ತಿಯನ್ನು ಬರೆದಿದ್ದಾನೆ. ಇದು ಈಗಲೂ ಶ್ರೀಲಂಕಾದಲ್ಲಿ ಬಳಕೆಯಲ್ಲಿದೆ.

## ೩ ದೇವನದಿ (ಪೂಜ್ಯಪಾದ (ಕ್ರಿ. ಶ. ಸು. ೬೦೦)

ಇವನು ಜೈನಮತದವನಾಗಿದ್ದು ಜೈನಸಾಹಿತ್ಯದಲ್ಲಿ ಪೂಜ್ಯಪಾದನೆಂದು ವಿಖ್ಯಾತನಾಗಿ

---

೧ ವ್ಯಾಕರಣ ಶಾಸ್ತ್ರಕಾ ಇತಿಹಾಸ ೧ ಪು. ೫೭೩–೫೭೪

ದ್ದಾನೆ. ಈತನು ಕರ್ನಾಟಕ ದೇಶದ ಕೊಳ್ಳಾಗಾಲದ (ಕೊಳ್ಳೆಗಾಲ–ಮೈಸೂರುಜಿಲ್ಲೆ) ಮಾಧವ ಭಟ್ಟನೆಂಬ ಬ್ರಾಹ್ಮಣನ ಮಗನೆಂದೂ, ಬಾಲ್ಯದಲ್ಲಿಯೇ ಜಿನದೀಕ್ಷೆಯನ್ನು ತಳೆದನೆಂದೂ ದೇವಚಂದ್ರನ ಕನ್ನಡ ರಾಜಾವಳೀ ಕಥೆಯಲ್ಲಿ ಬಂದಿದೆ. ದೇವನಂದಿಯು ಬರೆದ ವ್ಯಾಕರಣವು ಜೈನೇಂದ್ರವ್ಯಾಕರಣನೆಂದು ಪ್ರಸಿದ್ಧವಾಗಿದೆ. ಜಿನನು (ಮಹಾವೀರನು) ಇಂದ್ರನಿಗೆ ಉಪದೇಶಿಸಿದ್ದರಿಂದ ಈ ಹೆಸರು ಬಂದಿತೆಂದು ಸಾಂಪ್ರದಾಯಿಕವಾದ ನಂಬಿಕೆ. ಪೂಜ್ಯಪಾದನಿಗೆ ಜಿನೇಂದ್ರಬುದ್ಧಿಯೆಂಬ ನಾಮಾಂತರವೂ ಇದ್ದಿತು. ಆದ್ದರಿಂದ ಜೈನೇಂದ್ರವ್ಯಾಕರಣವೆಂದು ಹೆಸರಾಗಿರಬೇಕು.

## ಕಾಲ

೧. ಜೈನೇಂದ್ರವ್ಯಾಕರಣವನ್ನು ಅಕಳಂಕದೇವನು (ಕ್ರಿ.ಶ. ೭೫೦) ತತ್ತ್ವಾರ್ಥರಾಜ ವಾರ್ತಿಕದಲ್ಲಿಯೂ, ಜಯಾದಿತ್ಯವಾಮನರು (ಕ್ರಿ. ಶ. ೬೫೦) ಕಾಶಿಕಾವೃತ್ತಿಯಲ್ಲಿಯೂ ಉದ್ಧರಿಸಿದ್ದಾರೆ.

೨. ಕರ್ನಾಟಕಕವಿಚರಿತಕಾರರು ಗಂಗವಂಶೀಯನಾದ ದುರ್ವಿನೀತರಾಜನು ಪೂಜ್ಯಪಾದನ ಶಿಷ್ಯನೆಂದೂ, ದುರ್ವಿನೀತನ ಕಾಲ ಕ್ರಿ. ಶ. ೬ ನೇ ಶತಕದ ಅಂತ್ಯಭಾಗವೆಂದೂ ನಿರ್ಣಯಿಸಿದ್ದಾರೆ.

ಆದ್ದರಿಂದ ದೇವನಂದಿ ಕ್ರಿ. ಶ. ೬೦೦ರಲ್ಲಿ ಇದ್ದಿರಬೇಕು.

ಈ ವ್ಯಾಕರಣವು ಪಾಣಿನಿಯ ಅಷ್ಟಾಧ್ಯಾಯಿಯ ಆಧಾರದ ಮೇಲೆ ರಚಿತವಾಗಿದೆ. ಚಾಂದ್ರವ್ಯಾಕರಣದ ಸಹಾಯವನ್ನು ಪಡೆಯಲಾಗಿದೆ. ಇದರಲ್ಲಿ ಉದೀಚ್ಯ, ದಾಕ್ಷಿಣಾತ್ಯ-ಎಂಬ ಎರಡು ಪಾಠಗಳು ಉಪಲಬ್ಧವಾಗಿದ್ದು ಮೊದಲನೆಯದರಲ್ಲಿ ಸು. ೩೦೦೦ ಸೂತ್ರಗಳೂ ಎರಡನೆಯದರಲ್ಲಿ ಅದಕ್ಕಿಂತ ೭೦೦ ಸೂತ್ರಗಳು ಅಧಿಕವಾಗಿಯೂ ಇವೆ. ಈ ಎರಡು ಪಾಠ ಗಳಲ್ಲಿ ಯಾವುದು ಮೂಲಪಾಠವೆಂದು ನಿರ್ಣಯಿಸುವುದು ಕಠಿಣವಾಗಿದೆ.

ಇದರಲ್ಲಿ ಶಬ್ದಲಾಘವಕ್ಕಾಗಿ ಚಿಕ್ಕ ಪರ್ಯಾಯಪದಗಳನ್ನು ಉಪಯೋಗಿಸಲಾಗಿದೆ. ಉದಾಹರಣೆಗೆ, 'ವಿಭಾಷಾ, ಅನ್ಯತರಸ್ಯಾಂ ಇವುಗಳಿಗೆ 'ವಾ' ಎಂದೂ, 'ಮನುಷ್ಯ' ಎಂಬುದಕ್ಕೆ 'ನೃ' ಎಂದೂ ಪ್ರಯೋಗಿಸಿದೆ. 'ಅತೋಭಿಸ ಐಸ್' ಎಂಬ ಪಾಣಿನಿಸೂತ್ರವನ್ನು 'ಭಿಸ್ಯೋತ ಐಸ್' ಎಂದೂ ಪರಿವರ್ತಿಸಲಾಗಿದೆ. ಅಣ್ ಮುಂತಾದ ಪ್ರತ್ಯಾಹಾರ ಪಾಣಿನೀಯದಂತೆಯೇ ಇದೆ. ಪ್ರತ್ಯಯವನ್ನು 'ತ್ಯ' ಎನ್ನುವುದೂ, ಕರ್ಮಧಾರಯವನ್ನು 'ಯ' ಎನ್ನುವುದೂ ಶಬ್ದ ಲಾಘವಕ್ಕಾಗಿ ಎಂಬುದು ಸ್ಪಷ್ಟ. ಜೈನೇಂದ್ರ ವ್ಯಾಕರಣದಲ್ಲಿ ವೈದಿಕಪ್ರಕರಣವೂ ಏಕಶೇಷಪ್ರಕರಣವೂ ಇಲ್ಲ.

ಇದಕ್ಕೆ ಅಭಯನಂದಿಯ (ಕ್ರಿ. ಶ. ೭೫೦) ಮಹಾವೃತ್ತಿಯೂ, ಪ್ರಭಾಚಂದ್ರನ (ಕ್ರಿ.ಶ. ೧೦೨೦) ಶಬ್ದಾಂಭೋಜಭಾಸ್ಕರನ್ಯಾಸ ವೆಂಬ ದೊಡ್ಡ ವ್ಯಾಖ್ಯಾನವೂ ಇವೆ. ದಾಕ್ಷಿಣಾತ್ಯ ಪಾಠಕ್ಕೆ ಸೋಮದೇವಸೂರಿಯು ಕ್ರಿ.ಶ. ೧೨೦೫) ಚಂದ್ರಿಕಾ ಎಂಬ ಟೀಕೆಯನ್ನು ಬರೆದಿದ್ದಾನೆ.

ಜೈನೇಂದ್ರವ್ಯಾಕರಣವನ್ನು ಕೆಲವು ಜೈನಗ್ರಂಥಗಳು ಮಾತ್ರ ಉಲ್ಲೇಖಿಸುತ್ತವೆ. ಇದು ದಿಗಂಬರ ಸಂಪ್ರದಾಯಕ್ಕೆ ಸೇರಿದ್ದು. ಕ್ರಿ. ಶ. ೧೩ ನೆಯ ಶತಕದ ಅನಂತರ ಪ್ರಚಾರದಿಂದ ನಿಂತು ಹೋಯಿತು.

## ಶಾಕಟಾಯನ (ಪಾಲ್ಯಕೀರ್ತಿ) (ಕ್ರಿ.ಶ. ೯ನೆಯ ಶತಮಾನ)

ಈತನಿಗೆ ಶಾಕಟಾಯನ ಎಂಬುದು ಗೋತ್ರನಾಮವಾಗಿಯೂ ಪಾಲ್ಯಕೀರ್ತಿ ಎಂಬುದು ಜನ್ಮನಾಮವಾಗಿಯೂ ಇರಬೇಕು. ಪಾಣಿನಿಯು ಸ್ಮರಿಸಿದ ಪ್ರಾಚೀನ ಶಾಕಟಾಯನನು ಈತನಲ್ಲ

ಈ ಶಾಕಟಾಯನನು ಶ್ವೇತಾಂಬರ ಜೈನಸಂಪ್ರದಾಯಕ್ಕೆ ಸೇರಿದವನೆಂದು ಕೆಲವರು ಹೇಳಿದ್ದಾರೆ[1] ಇವನು ತನ್ನ ವ್ಯಾಕರಣಸೂತ್ರವೃತ್ತಿಗೆ 'ಅಮೋಘವೃತ್ತಿ' ಎಂದು ಹೆಸರಿಟ್ಟಿದ್ದಾನೆ. ಅಲ್ಲದೆ 'ಖ್ಯಾತೇ ದೃಶ್ಯೇ' (೪-೩-೭೦) ಎಂಬ ತನ್ನ ಸೂತ್ರಕ್ಕೆ 'ಅದಹದಮೋಘ ವರ್ಷೋಽರಾತೀನ್' ಎಂದು ಉದಾಹರಿಸಿದ್ದಾನೆ. ಅಮೋಘವರ್ಷನು ೧ ರಾಷ್ಟ್ರಕೂಟದ ದೊರೆ. ಇವನ ಕಾಲ ಕ್ರಿ.ಶ ೮೧೭-೮೭೭ ಇದೇ ಪಾಲ್ಯಕೀರ್ತಿಯ ಸಮಯವಾಗಿರ ಬೇಕು.

ಇವನ ವ್ಯಾಕರಣವು ಅಷ್ಟಾಧ್ಯಾಯಿ ಮತ್ತು ಜೈನೇಂದ್ರವ್ಯಾಕರಣದ ಆಧಾರದಿಂದ ರಚಿತವಾದದ್ದು. ೪ ಅಧ್ಯಾಯಗಳೂ ೩೨೦೦ ಸೂತ್ರಗಳೂ ಇವೆ ಆಯೋಗವಾಹಗಳನ್ನು ಪ್ರತ್ಯಾಹಾರ ಸೂತ್ರಗಳಲ್ಲಿ ಸೇರಿಸಿದ್ದಾನೆ. ವೈದಿಕ ಪ್ರಕ್ರಿಯೆ ಇಲ್ಲ.

ಪಾಲ್ಯಕೀರ್ತಿಯು ತನ್ನ ವ್ಯಾಕರಣಸೂತ್ರಗಳ ಮೇಲೆ 'ಅಮೋಘವೃತ್ತಿ' ಎಂಬ ಬಹು ವಿಸ್ತೃತವಾದ ವ್ಯಾಖ್ಯಾನವನ್ನು ಬರೆದಿದ್ದಾನೆ. ಇದರ ಮೇಲೆ ಆಚಾರ್ಯಪ್ರಭಾಚಂದ್ರನು ನ್ಯಾಸವೆಂಬ ಟೀಕೆಯನ್ನು ರಚಿಸಿದ್ದಾನೆ. ಈಸಂಪ್ರದಾಯದಲ್ಲಿ ಮುಂದೆ ಪ್ರಕ್ರಿಯಾಸಂಗ್ರಹ, ರೂಪಸಿದ್ಧಿ ಮೊದಲಾದ ಪ್ರಕ್ರಿಯಾಗ್ರಂಥಗಳು ಹುಟ್ಟಿದವು.

## ೫. ಭೋಜರಾಜ (ಕ್ರಿಶ ೧೦೧೯-೧೦೫೪)

ಭೋಜರಾಜನು ಸರಸ್ವತೀಕಂಠಾಭರಣವೆಂಬ ಬೃಹತ್ ಶಬ್ದಾನುಶಾಸನವನ್ನು ರಚಿಸಿ

೧ ಈಗ ಲುಪ್ತವಾಗಿರುವ ಯಾಪನೀಯ ಸಂಪ್ರದಾಯದವನೆಂದೂ ಅಭಿಪ್ರಾಯವಿದೆ

—ವ್ಯಾಕರಣ ಶಾಸ್ತ್ರಕಾ ಇತಿಹಾಸ-ಪೃ೧. ೫೯೪

ದ್ದಾನೆ. ಈತನು ವಿದ್ವಾಂಸರಿಗೂ ಕವಿಗಳಿಗೂ ಆಶ್ರಯದಾತನಾಗಿ ಮಹಾದಾನಶೀಲನಾಗಿದ್ದನೆಂದು ಇತಿಹಾಸದಲ್ಲಿ ಸುಪ್ರಸಿದ್ಧನಾಗಿದ್ದಾನೆ. ಸಂಸ್ಕೃತಭಾಷೆಗೆ ಮಹತ್ತರವಾದ ಆಶ್ರಯವನ್ನಿತ್ತು ಪೋಷಿಸಿದ ಕೀರ್ತಿ ಇವನಿಗೆ ಸಲ್ಲುತ್ತದೆ. ಭೋಜರಾಜನು ಧಾರಾನಗರದ ಅಧಿಪತಿ. ಸಿಂಧುಲ ರಾಜನ ಪುತ್ರ, ಮಹಾರಾಜ ಜಯಸಿಂಹನ ತಂದೆ. ಭೋಜನು ಸ್ವಯಂ ವಿದ್ವಾಂಸನಾಗಿದ್ದನು. ಇವನು ಸರಸ್ವತೀಕಂಠಾಭರಣವನ್ನಲ್ಲದೆ ಶೃಂಗಾರಪ್ರಕಾಶ, ಚಂಪೂರಾಮಾಯಣ, ಯೋಗ ಸೂತ್ರವೃತ್ತಿ, ರಾಜಮೃಗಾಂಕವೆಂಬ ವೈದ್ಯಗ್ರಂಥ ಮೊದಲಾದವನ್ನು ರಚಿಸಿದ್ದಾನೆ.

ವ್ಯಾಕರಣಶಾಸ್ತ್ರದ ಅಧ್ಯಯನವು ಉತ್ತರೋತ್ತರವಾಗಿ ಕ್ಷೀಣಿಸುತ್ತ ಬಂದಿತ್ತು. ಪರಿಭಾಷಾ, ಗಣಪಾಠ, ಉಣಾದಿ — ಮೊದಲಾದವು ಪರಿಶಿಷ್ಟರೂಪದಲ್ಲಿದ್ದು ಇವುಗಳ ಅಧ್ಯಯನ ಗೌಣವಾಗುತ್ತ ಬಂದಿತ್ತು. ಈ ನ್ಯೂನತೆಯನ್ನು ಸರಿಪಡಿಸುವುದಕ್ಕಾಗಿ ಭೋಜರಾಜನು ಇವೆಲ್ಲವನ್ನೂ ಶಬ್ದಾನುಶಾಸನದಲ್ಲಿ ಸಮಾವೇಶಗೊಳಿಸಿದನು.

ಈತನ ಶಬ್ದಾನುಶಾಸನದಲ್ಲಿ ೮ ಅಧ್ಯಾಯಗಳಿದ್ದು ಒಂದೊಂದು ಅಧ್ಯಾಯದಲ್ಲಿ ೪ ಪಾದಗಳಿವೆ. ಒಟ್ಟು ೬೪೧೧ ಸೂತ್ರಗಳಿವೆ. ೮ನೆಯ ಅಧ್ಯಾಯವು ವೈದಿಕ ಪ್ರಕ್ರಿಯೆಗೆ ಮೀಸಲಾಗಿದೆ. ಭೋಜನು ಅಷ್ಟಾಧ್ಯಾಯೀ- ಮೊದಲಾದವನ್ನು ಅಭ್ಯಾಸಮಾಡಿ, ತನಗೆ ಗೋಚರಿಸಿದ ಶಿಷ್ಟಪ್ರಯೋಗಗಳೆಲ್ಲವನ್ನು ಕ್ರೋಡೀಕರಿಸಿ ತನ್ನ ಶಬ್ದಾನುಶಾಸನದಲ್ಲಿ ಸಮಾವೇಶಗೊಳಿಸಿದ್ದಾನೆ. ಇಂದೊಂದು ಮಹತ್ತ್ವಪೂರ್ಣವಾದ ಕೃತಿ. ವರ್ಧಮಾನ, ಕ್ಷೀರಸ್ವಾಮಿ ಮೊದಲಾದವರು ಇದರಿಂದ ಉದ್ಧರಿಸಿದ್ದಾರೆ. ಆರ್ಷವಲ್ಲವೆಂಬ ಒಂದೇ ಒಂದು ಕಾರಣದಿಂದ ಮುಂದೆ ಇದು ಉಪೇಕ್ಷಿತವಾಗಿರಬೇಕು. ಭೋಜರಾಜನು ಇದಕ್ಕೆ ತಾನೇ ವೃತ್ತಿಯನ್ನು ಬರೆದಿದ್ದನೆಂದು ತಿಳಿದುಬರುತ್ತದೆ. ದಂಡನಾಥನಾರಾಯಣಭಟ್ಟನು (ಕ್ರಿ.ಶ. ೧೨ನೆಯ ಶತಮಾನ) ಹೃದಯಹಾರಿಣಿ ಎಂಬ ವಿಸ್ತೃತ ವ್ಯಾಖ್ಯೆಯನ್ನೂ ಕೃಷ್ಣಲೀಲಾ ಶುಕಮುನಿಯು (ಕ್ರಿ. ಶ. ೧೪ ನೆಯ ಶತಮಾನ) ಪುರುಷಾಕಾರವೆಂಬ ವ್ಯಾಖ್ಯೆಯನ್ನು ಸರಸ್ವತೀಕಂಠಾಭರಣಕ್ಕೆ ಬರೆದಿದ್ದಾರೆ.

## ೬ ಹೇಮಚಂದ್ರ (ಕ್ರಿ.ಶ. ೧೧೪೯)

ಪ್ರಸಿದ್ಧ ಜೈನಾಚಾರ್ಯನಾದ ಹೇಮಚಂದ್ರನು 'ಸಿದ್ಧಹೈಮ ಶಬ್ದಾನುಶಾಸನ' ಎಂಬ ವ್ಯಾಕರಣವನ್ನು ರಚಿಸಿದ್ದಾನೆ. ಈತನು ವಿಕ್ರಮಶಕ ೧೧೪೫ ನೇ (ಕ್ರಿ. ಶ. ೧೦೮೮) ಕಾರ್ತಿಕ ಪೂರ್ಣಿಮೆಯಂದು ಅಹಮ್ಮದಾಬಾದ್ ಜಿಲ್ಲೆಯ ಧುಂಡಕ ಗ್ರಾಮದಲ್ಲಿ ಜನಿಸಿದನು. ತಂದೆ ಚಂಚಿಗ. ತಾಯಿ ಪಹಿನಿ. ಗುರು ಚಂದ್ರದೇವಸೂರಿ. ಹೇಮಚಂದ್ರನ ಜನ್ಮನಾಮ ಚಾಂಗದೇವ ಎಂದಿತ್ತು. ಜೈನ ಮುನಿಯಾದ ಮೇಲೆ ಹೇಮಚಂದ್ರಾಚಾರ್ಯನೆಂದು ಪ್ರಸಿದ್ಧನಾದನು. ಇವನು ಶ್ವೇತಾಂಬರ ಸಂಪ್ರದಾಯದವನು. ೮೪ ವರ್ಷಗಳ ಕಾಲ ಜೀವಿಸಿದ್ದು ಪ್ರಾಯೋಪವೇಶನದಿಂದ ದೇಹತ್ಯಾಗ ಮಾಡಿದನು.

ಗುಜರಾತಿನ ದೊರೆ ಸಿದ್ಧರಾಜನ ಆದೇಶದಂತೆ ಇವನು ಶಬ್ದಾನುಶಾಸನವನ್ನು ರಚಿಸಿದನು. ಇದರ ಮೊದಲನೆಯ ೭ ಅಧ್ಯಾಯಂಗಳಲ್ಲಿ ಸಂಸ್ಕೃತಭಾಷೆಗೂ, ೮ ನೆಯ ಅಧ್ಯಾಯದಲ್ಲಿ ಪ್ರಾಕೃತಭಾಷೆಗೂ ವ್ಯಾಕರಣವನ್ನು ಬರೆಯಲಾಗಿದೆ. ಒಂದೊಂದು ಅಧ್ಯಾಯದಲ್ಲಿ ೪ ಪಾದಗಳಿದ್ದು ೭ ಅಧ್ಯಾಯಗಳಲ್ಲಿ ೩೫೬೬ ಸೂತ್ರಗಳೂ, ೮ನೆಯದರಲ್ಲಿ ೧೧೯೯ ಸೂತ್ರಗಳೂ ಇವೆ.

ಈ ಶಬ್ದಾನುಶಾಸನವು ಶಾಕಟಾಯನನ ಶಬ್ದಾನುಶಾಸನ ಮತ್ತು ಅಮೋಘ ವೃತ್ತಿಗಳ ಆಧಾರದಿಂದ ರಚಿತವಾಗಿದೆ. ಕಾತಂತ್ರದಂತೆ ಪ್ರಕ್ರಿಯಾನುಸಾರಿಯಾಗಿದ್ದು ಸಂಜ್ಞಾ, ಸ್ವರಸಂಧಿ, ವ್ಯಂಜನಸಂಧಿ—ಇತ್ಯಾದಿ ಪ್ರಕರಣಗಳಿವೆ. ಇದಕ್ಕೆ ಲಘುವೃತ್ತಿ, ಮಧ್ಯವೃತ್ತಿ, ಬೃಹದ್ವೃತ್ತಿಗಳೆಂಬ ಮೂರು ವೃತ್ತಿಗಳನ್ನು ಹೇಮಚಂದ್ರನೇ ಬರೆದಿದ್ದಾನೆ. ಈ ಆಚಾರ್ಯನು 'ಶಬ್ದಮಹಾರ್ಣವನ್ಯಾಸ' ವೆಂಬ ೯೦ ಸಾವಿರ ಶ್ಲೋಕ ಪರಿಮಿತವಾದ ಇನ್ನೊಂದು ವ್ಯಾಕರಣ ಶಾಸ್ತ್ರ ಸಂಬಂಧಿ ಗ್ರಂಥವನ್ನು ರಚಿಸಿದ್ದನು. ಅದರಲ್ಲಿ ೫ ಅಧ್ಯಾಯಗಳಲ್ಲಿ ೫ ಭಾಗಗಳಲ್ಲಿ ಪ್ರಕಟವಾಗಿವೆ. ಈತನು ವ್ಯಾಕರಣಕ್ಕೆಅಂಗವಾಗಿ ಧಾತುಪಾಠ, ಗಣಪಾಠಾದಿ ಗಳನ್ನೂ ಅವಕ್ಕೆ ವೃತ್ತಿಯನ್ನೂ ಬರೆದಿದ್ದಾನೆ. ಜೈನಸಿದ್ಧಾಂತಕ್ಕೆ ಸಂಬಂಧಿಸಿದ ಹಲವಾರು ಗ್ರಂಥಗಳನ್ನೂ ರಚಿಸಿದ್ದಾನೆ. ಈತನ ಲೇಖನ ವ್ಯವಸಾಯ ಆಶ್ಚರ್ಯಕರವಾದುದು.

ಹೈಮವ್ಯಾಕರಣದ ಮೇಲೆ ಸುಮಾರು ೧೬ ಜನ ವಿದ್ವಾಂಸರು ವಿಭಿನ್ನ ಕೃತಿಗಳನ್ನು ರಚಿಸಿದಂತೆ ತಿಳಿದು ಬಂದಿದೆ.

## ೭. ಮಲಯಗಿರಿ (ಕ್ರಿ.ಶ. ೧೧೪೩)

ಈ ಜೈನಾಚಾರ್ಯನು ಶಬ್ದಾನುಶಾಸನ ಎಂಬ ಹೆಸರಿನ ಸಾಂಗವಾದ ಒಂದು ವ್ಯಾಕರಣವನ್ನು ಬರೆದಿದ್ದಾನೆ. ಹೈಮವ್ಯಾಕರಣದಂತೆ ಇದು ಪ್ರಕ್ರಿಯಾನುಸಾರಿಯಾಗಿದೆ. ಇದಕ್ಕೆ ಸ್ವೋಪಜ್ಞವೃತ್ತಿ ಇದೆ. ಈ ಶಬ್ದಾನುಶಾಸನವು ಅಪೂರ್ಣವಾಗಿ ದೊರೆತಿದೆ. ಕ್ರಿ. ಶ. ೧೧೪೩ರಲ್ಲಿ ಪಟ್ಟಾಭಿಷಿಕ್ತನಾದ ಕುಮಾರಪಾಲನ (ಅಬುಗಿರ್ನಾರಾಪ್ರಾಂತದ ರಾಜ) ಕಾಲದಲ್ಲಿ ಈತನು ಇದ್ದನೆಂದು ತಿಳಿದು ಬರುತ್ತದೆ.

## ೮ ಭೋಪದೇವ (ಕ್ರಿ.ಶ. ೧೩ನೆಯ ಶತಮಾನ)

ಭೋಪದೇವನು ಮುಗ್ಧ ಬೋಧವೆಂಬ ವ್ಯಾಕರಣವನ್ನು ಬರೆದಿದ್ದಾನೆ. ಇವನು ವೈದ್ಯ ಕೇಶವನ ಮಗ. ಧನೇಶ ಎಂಬುವನು ಗುರು. ಈಗಿನ ದೌಲತಾಬಾದ್ (ಮಹಾರಾಷ್ಟ್ರಪ್ರಾಂತ)

ಸಮೀಪದ ಗ್ರಾಮ ಇವನ ಜನ್ಮಸ್ಥಳ. ದೇವಗಿರಿಯ ಯಾದವರಾಜ ಮಹಾದೇವನಿಗೆ ಮಂತ್ರಿಯಾದ ಹೇಮಾದ್ರಿ ಈತನ ಆಶ್ರಯದಾತ. ಬೋಪದೇವನು ನಾನಾ ಶಾಸ್ತ್ರಗಳಲ್ಲಿ ವಿವಿಧ ಗ್ರಂಥಗಳನ್ನು ರಚಿಸಿದ್ದಾನೆ.

ಪಾಣಿನಿಯ ಅಷ್ಟಾಧ್ಯಾಯೀ ವಾರ್ತಿಕ. ಇಷ್ಟಿ ಮೊದಲಾದವುಗಳು ಗಹನವಾದ ಪ್ರಯುಕ್ತ ಸರಳವೂ ಸಂಕ್ಷಿಪ್ತವೂ ಆದ ವ್ಯಾಕರಣವನ್ನು ರಚಿಸಬೇಕೆಂಬುದು ಇವನ ಉದ್ದೇಶವಾಗಿರಬೇಕು. ಸರಳತೆಗಾಗಿ ಕಾತಂತ್ರದ ವರ್ಣಾರ್ಗವನ್ನೂ, ಸಂಕ್ಷಿಪ್ತತೆಗಾಗಿ ಪ್ರತ್ಯಾಹಾರಕ್ರಮವನ್ನೂ ಆಶ್ರಯಿಸಿದ್ದಾನೆ. ಮುಗ್ಧಬೋಧದಲ್ಲಿ ವೈದಿಕ ಪ್ರಕ್ರಿಯೆಯನ್ನೆಲ್ಲ 'ಬಹುಲಂ ಬ್ರಹ್ಮಣಿ' ಎಂಬ ಒಂದೇ ಸೂತ್ರದಿಂದ ಮುಗಿಸಿದ್ದಾನೆ. ಸಂಕ್ಷೇಪದ ದೃಷ್ಟಿಯಿಂದ ಧಾತುವಿಗೆ ಧೂ, ವೃದ್ಧಿಗೆ ವೃ, ಸರ್ವನಾಮಕ್ಕೆ ಶ್ರೀಮಂತಾದ ಏಕಾಕ್ಷರಸಂಜ್ಞೆಗಳನ್ನು ಬಳಸಿದ್ದಾನೆ. ಉದಾಹರಣೆಗಳಲ್ಲಿ ಹರಿ, ಹರ ಮೊದಲಾದ ದೇವತೆಗಳ ಹೆಸರನ್ನೇ ಪ್ರಯೋಗಿಸುತ್ತಾನೆ.

ಉದಾಹರಣೆ :

ಇಮಂ ವಿದ್ಧಿ ಹರೇರ್ಭಕ್ತಂ ವಿದ್ಧ್ಯಥೈನಂ ಶಿವಾರ್ಚಕಂ ।
ಅನೇನ ಪೂಜಿತಃ ಕೃಷ್ಣೋಽಥಾನೇನ ಗಿರಿಶೋಽರ್ಚಿತಃ ॥

ರಾಧಾ, ಶಿವ-ಮೊದಲಾದ ಪದಗಳನ್ನು ಸಂಜ್ಞೆಗಳನ್ನಾಗಿ ಬಳಸುವ ಮುಂದಿನ ಕೆಲವು ವ್ಯಾಕರಣಗಳಿಗೆ ಇವನು ತಳಹದಿಯನ್ನು ಹಾಕಿದನೆನ್ನಬಹುದು.

ಮುಗ್ಧಬೋಧವು ಸುಮಾರು ೩೦೦ ವರ್ಷಗಳವರೆಗೆ ಮಹಾರಾಷ್ಟ್ರದಲ್ಲಿ ಪ್ರಚುರವಾಗಿತ್ತು. ಆಮೇಲೆ ಬಂಗಾಳದಲ್ಲಿ ಪ್ರಸಿದ್ಧಿಗೆ ಬಂದಿತು. ಮಹಾತಾರ್ಕಿಕನಾದ ರಾಮತರ್ಕವಾಗೀಶನೂ ಇದಕ್ಕೆ ವ್ಯಾಖ್ಯಾನವನ್ನು ಬರೆದಿದ್ದಾನೆ. ಈ ಸಂಪ್ರದಾಯದಲ್ಲಿ ವಿಪುಲಗ್ರಂಥಗಳು ಹುಟ್ಟಿವೆ.

## ೯ ನರೇಂದ್ರಾಚಾರ್ಯ—ಸಾರಸ್ವತಶಾಖೆ

೫೯೧ ಸೂತ್ರಗಳೂ ೯೧ ವಕ್ತವ್ಯಗಳೂ ಇರುವ ಸಾರಸ್ವತ ವ್ಯಾಕರಣವೆಂಬ ಗ್ರಂಥವು ಪ್ರಸಾರದಲ್ಲಿತ್ತು. ಇದಕ್ಕೆ ಸಾರಸ್ವತ ಎಂಬ ಹೆಸರು ಏಕೆ ಬಂದಿತೆಂಬುದು ಸ್ಪಷ್ಟವಾಗಿಲ್ಲ. ಅನುಭೂತಿಸ್ವರೂಪಾಚಾರ್ಯನಿಗೆ ಸರಸ್ವತಿಯು ಪ್ರಸನ್ನಳಾಗಿ ಈ ಸೂತ್ರಗಳನ್ನು ಉಪದೇಶಿಸಿದಳೆಂದೂ, ಆದ್ದರಿಂದ ಈ ಹೆಸರು ಬಂದಿದೆಯೆಂದೂ ದಂತಕಥೆ ಇದೆ. ಆದರೆ ಸೂತ್ರಗಳನ್ನು ನರೇಂದ್ರಾಚಾರ್ಯನು ರಚಿಸಿದನೆಂದು ಹೇಳಬಹುದಾಗಿದೆ. ಏಕೆಂದರೆ, ಇದಕ್ಕೆ ಟೀಕೆಯನ್ನು ಬರೆದ ಕ್ಷೇಮೇಂದ್ರನು (ಇವನು ಕಾಶ್ಮೀರದ ಪ್ರಸಿದ್ಧ ಕವಿಯಾದ ಕ್ಷೇಮೇಂದ್ರನಲ್ಲ) —

'ಇತಿ ಶ್ರೀ ನರೇಂದ್ರಾಚಾರ್ಯಸಾರಸ್ವತೇ ಕ್ಷೇಮೇಂದ್ರಕೃತಂ ಟಿಪ್ಪನಂ ಸಮಾಪ್ತಂ'

ಎಂದು ಬರೆದಿದ್ದಾನೆ. ಅಮೃತಭಾರತೀ ಎಂಬ ಇನ್ನೊಬ್ಬ ವ್ಯಾಖ್ಯಾನಕಾರನೂ—

ಯನ್ನರೇಂದ್ರನಗರಿಪ್ರಭಾಷಿತಂ ಯಚ್ಚ ವೈಮಲ ಸರಸ್ವತೀರಿ ತಂ।
ತನ್ಮಯಾತ್ರಲಿಖಿತಂ ತಥಾಧಿಕಂ ಕಿಂಚಿದೇವ ಕಲಿತಂ ಸ್ವಯಾ ಧಿಯಾ ॥

ಎಂದಿದ್ದಾನೆ. ಆದ್ದರಿಂದ ನರೇಂದ್ರಾಚಾರ್ಯನು ಸೂತ್ರಕರ್ತನೆಂದೂ, ವಿಮಲಸರಸ್ವತಿಯು ಕೆಲವು ವಾರ್ತಿಕಗಳನ್ನು ಬರೆದು ಪ್ರಸಿದ್ಧಪಡಿಸಿದನೆಂದೂ ಊಹಿಸಬಹುದಾಗಿದೆ. ವಿಮಲಸರಸ್ವತಿಯು ಈ ವ್ಯಾಕರಣದ ಪ್ರಸಿದ್ಧಿಗೆ ಕಾರಣವಾದ್ದರಿಂದ ಸಾರಸ್ವತವ್ಯಾಕರಣ ಎಂದು ಪ್ರಖ್ಯಾತವಾಗಿರಬೇಕು. ನಿಶ್ಚಯಿಸಿ ಹೇಳಲು ತಕ್ಕ ಆಧಾರಗಳಿಲ್ಲ. ನರೇಂದ್ರಾಚಾರ್ಯನ ವಿಷಯವಾಗಿ ಕಾಲದೇಶಾದಿಗಳೊಂದೂ ತಿಳಿದು ಬಂದಿಲ್ಲ. ಮುಗ್ಧಬೋಧದಲ್ಲಿ ಬೋಪದೇವನು ಸಾರಸ್ವತದ ವಿಷಯವಾಗಿ ಏನನ್ನೂ ಹೇಳಿಲ್ಲ. ಇತರ ಶಾಖೆಗಳನ್ನು ಉದ್ಧರಿಸಿದ್ದಾನೆ. ಹಾಗೆಯೇ ಹೇಮಚಂದ್ರನ ವಿಸ್ತೃತ ಗ್ರಂಥಗಳಲ್ಲಿಯೂ ಇದರ ವಿಷಯವಿಲ್ಲ. ಅಲ್ಲದೆ ಇದರ ವ್ಯಾಖ್ಯಾನಗಳೆಲ್ಲವೂ ಕ್ರಿ. ಶ. ೧೫ನೇಯ ಶತಮಾನಕ್ಕೆ ಈಚಿನವು. ಆದ್ದರಿಂದ ಸಾರಸ್ವತ ವ್ಯಾಕರಣವು ಕ್ರಿ. ಶ. ೧೨೫೦ಕ್ಕೆ ಹಿಂದಿನದಲ್ಲ ಎಂದಿಷ್ಟೇ ಹೇಳಬಹುದು.

ಈ ಸಾರಸ್ವತಶಾಖೆಗೆ ಗಯಾಸುದ್ದೀನ್ ಖಿಲ್ಜಿ, ಸಲೆಮುಷಾ, ಜಹಂಗೀರ್ ಚಕ್ರವರ್ತಿ ಮೊದಲಾದ ಮುಸಲ್ಮಾನ ರಾಜರು ವಿಶೇಷವಾಗಿ ಪ್ರೋತ್ಸಾಹವನ್ನಿತ್ತರು. ಇದೊಂದು ಚಾರಿತ್ರಿಕವಾದ ವಿಶೇಷ.

ಇದರಲ್ಲಿ ಪ್ರತ್ಯಾಹಾರಗಳ ಬಳಕೆ ಇದೆ. ಕಿತ್, ಙಿತ್ ಮೊದಲಾದ ಇತ್ಸಂಜ್ಞಕಗಳಿಲ್ಲ. ಸವರ್ಣ, ಸ್ವರ. ಆಖ್ಯಾತ–ಮುಂತಾದ ಪ್ರಸಿದ್ಧ ಸಂಜ್ಞೆಗಳ ಬಳಕೆ ಇದೆ, ಪರಿಭಾಷೆಗಳ ಆವಶ್ಯಕತೆಯನ್ನು ಕಾಣಿಸಿಲ್ಲ. ಇದು ಮಹಾರಾಷ್ಟ್ರ, ರಾಜಾಸ್ಥಾನ–ಮೊದಲಾದ ಸ್ಥಳಗಳಲ್ಲಿ ವಿಶೇಷ ಪ್ರಚಾರದಲ್ಲಿದ್ದು, ಭಟ್ಟೋಜಿದೀಕ್ಷಿತನ ತರುವಾಯ ಕ್ಷೀಣಿಸಿತು.

## ೧೦ ಕ್ರಮದೀಶ್ವರ–ಜೌಮರಶಾಖೆ

### (ಕ್ರಿ. ಶ. ಸು. ೧೩ನೇ ಶತಮಾನ)

ಕ್ರಮದೀಶ್ವರನು ಸಂಕ್ಷಿಪ್ತಸಾರವನ್ನು ಬರೆದಿದ್ದಾನೆ. ಇದು ಅಷ್ಟಾಧ್ಯಾಯಿಯ ಸಂಕ್ಷಿಪ್ತರೂಪವೆನ್ನಬಹುದು. ಈತನು ಬೋಪದೇವನಿಗಿಂತ ಈಚಿನವನೆಂದು ಶ್ರೀಕೋಲ್ ಬ್ರೂಕ್ ಅವರು ಹೇಳುತ್ತಾರೆ. ಇದಕ್ಕೆ ರಸವತಿಯೆಂಬ ಸ್ವೋಪಜ್ಞವೃತ್ತಿ ಇದೆ, ಅದು 'ಮಹಾರಾಜಾಧಿರಾಜ ಜುಮರನಂದಿತ ಶೋಧಿತ! ಜುಮರನಂದಿಯು ಪರಿಷ್ಕರಿಸಿದ್ದರಿಂದ ಜೌಮರ ವ್ಯಾಕರಣವೆಂದು ಪ್ರಸಿದ್ಧವಾಗಿದೆ. ಇದಕ್ಕೆ ಗೋವಿಂದಚಂದ್ರನ ಉತ್ಕೃಷ್ಟವಾದ ಟೀಕೆ ಇದೆ. ಜೌಮರಶಾಖೆ ಪಶ್ಚಿಮಬಂಗಾಳದಲ್ಲಿ ಈಗಲೂ ಪ್ರಚಲಿತವಾಗಿದೆ.

## ೧೧. ಪದ್ಮನಾಭದತ್ತ—ಸೌಪದ್ಮಶಾಖೆ (ಕ್ರಿ.ಶ. ೧೪೭೦)

ಮೈಥಿಲಿ ಬ್ರಾಹ್ಮಣನಾದ ಪದ್ಮನಾಭದತ್ತನು ಸುಪದ್ಮ ಎಂಬ ಸಂಕ್ಷಿಪ್ತ ವ್ಯಾಕರಣದ ಕರ್ತೃ. ಸುಪದ್ಮಕ್ಕೆ ಪಂಜಿಕಾ ಎಂಬ ಸ್ವೋಪಜ್ಞವೃತ್ತಿ ಇದೆ. ಕ್ರಿ.ಶ. ೧೪೭೦ರಲ್ಲಿ ಪೃಷೋದರಾದಿ ವೃತ್ತಿಯನ್ನು ಬರೆದಿದ್ದಾನೆ.

ಸುಪದ್ಮವ್ಯಾಕರಣದಲ್ಲಿ ೫ ಭಾಗಗಳಿದ್ದು ಸೂತ್ರರಚನೆಯಲ್ಲಿ ಪಾಣಿನಿಯ ಅನುಕರಣೆ ಸ್ಪಷ್ಟವಾಗಿದೆ. ಪ್ರಯೋಗದೀಪಿಕಾ, ಉಣಾದಿವೃತ್ತಿ, ಧಾತುಕೌಮುದೀ, ಯಙ್‌ಲುಗ್‌ವೃತ್ತಿ -ಮೊದಲಾದ ಗ್ರಂಥಗಳನ್ನು ಈತನು ರಚಿಸಿದ್ದಾನೆ. ಈ ಸುಪದ್ಮವ್ಯಾಕರಣಕ್ಕೆ ಬರೆದ ವ್ಯಾಖ್ಯಾನಗಳಲ್ಲಿ ವಿಷ್ಣುಮಿತ್ರನ ಸುಪದ್ಮಮಕರಂದ ಉತ್ಕೃಷ್ಟವಾದುದು. ಬಂಗಾಳದಲ್ಲಿ ಈ ಸೌಪದ್ಮಶಾಖೆ ಪ್ರಚಾರದಲ್ಲಿದೆ.

### ನವೀನಶಾಖೆಗಳು

ಚೈತನ್ಯನ ಶಿಷ್ಯನಾದ ರೂಪಗೋಸ್ವಾಮಿಯು (ಕ್ರಿ.ಶ. ೧೬ನೆಯ ಶತಮಾನ) ಹರಿನಾಮಾಮೃತವೆಂಬ ಗ್ರಂಥವನ್ನು ಬರೆದಿದ್ದಾನೆ. ಕೃಷ್ಣ, ರಾಧಾ ಮುಂತಾದವು ಇದರಲ್ಲಿ ಪಾರಿಭಾಷಿಕಶಬ್ದಗಳು. ಶೈವನಾದ ಬಲರಾಮಪಂಚಾನನನು ಶಿವಸಂಧಿಪಾದ, ಶಕ್ತ್ಯಂತ ಸ್ತ್ರೀಲಿಂಗ ಪಾದ, ಶಿವಾಂತಪುಲ್ಲಿಂಗಪಾದ-ಇತ್ಯಾದಿ ವಿಭಾಗಗಳುಳ್ಳ ಪ್ರಭೋದ ಪ್ರಕಾಶವನ್ನು ರಚಿಸಿದ್ದಾನೆ. ಅಲ್ಲದೆ ರಾಮಕಿಂಕರನ ಆಶುಬೋಧ, ಭರತಸೇನನ ದ್ರುತಬೋಧ-ಇತ್ಯಾದಿಯಾಗಿ ಸುಮಾರು ೧೫ ವ್ಯಾಕರಣಗ್ರಂಥಗಳು ದೊರೆಯುತ್ತವೆ. ಇವು ಪ್ರಚಾರದಲ್ಲಿ ಬರಲಿಲ್ಲ. ಹರಿ, ಶಿವ ಮೊದಲಾದ ಶಬ್ದಗಳ ಉಚ್ಚಾರಣೆ ಶಾಸ್ತ್ರಾಭ್ಯಾಸಪ್ರಸಂಗದಲ್ಲಿಯೂ ಪುಣ್ಯಕರವೆಂಬ ಮತೀಯ ಭಾವನೆಯೂ, ವ್ಯಾಕರಣವನ್ನು ಸುಲಭಗೊಳಿಸಬೇಕೆಂಬ ಕಲ್ಪನೆಯೂ ಈ ಗ್ರಂಥಗಳ ರಚನೆಗೆ ನಿಮಿತ್ತಗಳಾದವು.

---

೩

## (ತರ್ಕ ನ್ಯಾಯ ವೈಶೇಷಿಕ ದರ್ಶನಗಳು)

ನ್ಯಾಯವೈಶೇಷಿಕದರ್ಶನಗಳು ಭಾರತೀಯದರ್ಶನಗಳಿಗೆಲ್ಲಾ ಬೆನ್ನೆಲುಬಿನಂತಿವೆ. ಇವೆರಡು ಶಾಸ್ತ್ರಗಳನ್ನು ತರ್ಕಶಾಸ್ತ್ರವೆಂಬ ಒಂದೇ ಹೆಸರಿನಿಂದ ವ್ಯವಹರಿಸುವುದೂ ಉಂಟು. ಈ ಎರಡು ಶಾಸ್ತ್ರಗಳ ಅಧ್ಯಯನವು ಇತರ ದರ್ಶನಗಳ ಅಧ್ಯಯನಕ್ಕೆ ಬಹಳ ಸಹಕಾರಿಯಾಗಿದೆ. ಭಾರತೀಯ ದರ್ಶನಗಳ ಅನೇಕ ಶಾಖೆಗಳಲ್ಲಿ ನ್ಯಾಯ ವೈಶೇಷಿಕ ದರ್ಶನಗಳನ್ನು ಪ್ರಮಾಣವಾಗಿ ಉದಾಹರಿಸುವುದೂ ಇದೆ. ಹೇತುವಾದವನ್ನು ಪುರಸ್ಕರಿಸಿ ಇವೆರಡು ಶಾಸ್ತ್ರಗಳೂ ಪ್ರವರ್ತಿಸುವುದರಿಂದ ಇವೆರಡಕ್ಕೂ ಹೇತುಶಾಸ್ತ್ರ ಎಂದೂ ಹೆಸರು. ನ್ಯಾಯಶಾಸ್ತ್ರವನ್ನು ಆನ್ವೀಕ್ಷಿಕೀ ನ್ಯಾಯವಿಸ್ತರ, ನ್ಯಾಯದರ್ಶನ, ಪ್ರಮಾಣಶಾಸ್ತ್ರ ಎಂದೂ ಕರೆದರು. ವೈಶೇಷಿಕ ದರ್ಶನವು ಪ್ರಮೇಯಶಾಸ್ತ್ರ ಎಂದು ಹೆಸರಿಸಲು ಅರ್ಹವಾಗಿದೆ. ಹೀಗೆ ಇವೆರಡು ಶಾಸ್ತ್ರಗಳೂ ಪರಸ್ಪರ ಸಹಾಯಕವಾಗಿ ಬೆಳೆದು ಸಮಾನತಂತ್ರ ಎನಿಸಿಕೊಂಡವು. ಆದರೂ ಇವೆರಡು ದರ್ಶನಗಳೂ ಸ್ವತಂತ್ರವಾಗಿಯೇ ಬೆಳೆದವು. ಕಾಲಕ್ರಮದಲ್ಲಿ ಇವೆರಡೂ ಸೇರಿದ್ದೂ ಇದೆ.

ವೈಶೇಷಿಕ ಮತಕ್ಕೆ ವೈಶೇಷಿಕ ಸೂತ್ರಗಳೇ ಆಧಾರ. ಇವು ಔಲೂಕ್ಯನೆಂಬ ನಾಮಾಂತರವುಳ್ಳ ಕಣಾದನಿಂದ ರಚಿತವಾದುವು. ಇವನು ಬೌದ್ಧಮತಕ್ಕಿಂತ ಹಿಂದೆಯೇ ಇದ್ದನು. ಪ್ರಶಸ್ತಪಾದನು ವೈಶೇಷಿಕ ಸೂತ್ರಗಳಿಗೆ ಭಾಷ್ಯವನ್ನು ಬರೆದನು. ಈ ಸೂತ್ರಗಳಿಗೆ ರಾವಣ ಭಾಷ್ಯ, ಮತ್ತು ಭಾರದ್ವಾಜವೃತ್ತಿ ಎಂಬ ವ್ಯಾಖ್ಯಾನಗಳೂ ಇವೆಯೆಂದು ತಿಳಿದು ಬಂದಿದೆ. ರಾವಣಭಾಷ್ಯಕ್ಕೆ ವ್ಯೋಮಶೇಖರಾಚಾರ್ಯನಿಂದ ರಚಿತವಾದ ವ್ಯೋಮವತೀ ಎಂಬ ವ್ಯಾಖ್ಯಾನ ವಿದೆ ಪ್ರಶಸ್ತಪಾದ ಭಾಷ್ಯಕ್ಕೆ ಶ್ರೀಧರನು ನ್ಯಾಯಕಂದಲೀ ಎಂಬ ವ್ಯಾಖ್ಯಾನವನ್ನು ಬರೆದನು. ಉದಯನನು ಕಿರಣಾವಲೀ ಎಂಬ ವ್ಯಾಖ್ಯಾನವನ್ನೂ, ಶ್ರೀ ವತ್ಸಾಚಾರ್ಯನು ಲೀಲಾವತೀ ಎಂಬ ವ್ಯಾಖ್ಯಾನವನ್ನೂ ಬರೆದರು. ಪ್ರಶಸ್ತಪಾದನ ಭಾಷ್ಯಕ್ಕೆ ಶಂಕರಮಿಶ್ರನ ಕಣಾದರಹಸ್ಯ ಎಂಬ ವ್ಯಾಖ್ಯಾನವೂ, ಜಗದೀಶ ಭಟ್ಟಾಚಾರ್ಯನ ಭಾಷ್ಯಸೂಕ್ತಿ ಎಂಬ ವ್ಯಾಖ್ಯಾನವೂ ಇವೆ.

ನ್ಯಾಯದರ್ಶನಕ್ಕೆ ನ್ಯಾಯಸೂತ್ರಗಳೇ ಆಧಾರ. ನ್ಯಾಯಸೂತ್ರಗಳನ್ನು ಗೌತಮ ಅಥವಾ ಅಕ್ಷಪಾದನು ರಚಿಸಿದನು. ವಾತ್ಸಾಯನನು ಈ ಸೂತ್ರಗಳಿಗೆ ಭಾಷ್ಯವನು ಬರೆದಿರುವನು.

ಉದ್ಯೋತಕರನು ಈ ಭಾಷ್ಯಕ್ಕೆ ನ್ಯಾಯವಾರ್ತಿಕ ಎಂಬ ಟೀಕೆಯನ್ನು ಬರೆದು ಬೌದ್ಧವಾದಿಯಾದ ದಿಙ್ನಾಗನ ಪ್ರಮಾಣ ಸಮುಚ್ಚಯ ಎಂಬ ಗ್ರಂಥವನ್ನು ಖಂಡಿಸಿರುವನು. ವಾಚಸ್ಪತಿಮಿಶ್ರರು ಈ ವಾರ್ತಿಕಕ್ಕೆ ನ್ಯಾಯವಾರ್ತಿಕತಾತ್ಪರ್ಯಟೀಕಾ ಎಂಬ ವ್ಯಾಖ್ಯಾನವನ್ನು ಬರೆದಿರುವರು. ಉದಯನಾಚಾರ್ಯರು ಈ ಗ್ರಂಥಕ್ಕೆ ನ್ಯಾಯವಾರ್ತಿಕತಾತ್ಪರ್ಯ ಟೀಕಾಪರಿಶುದ್ಧಿ ಎಂಬ ವ್ಯಾಖ್ಯಾನವನ್ನು ಬರೆದರು. ಈ ಗ್ರಂಥಕ್ಕೆ ವರ್ಧಮಾನನ ನ್ಯಾಯ ನಿಬಂಧಪ್ರಕಾಶ, ಅದಕ್ಕೆ ಪದ್ಮನಾಭನ ವರ್ಧಮಾನೇಂದು ಎಂಬ ಟಿಪ್ಪಣಿ, ಅದಕ್ಕೆ ಶಂಕರಮಿಶ್ರನ ನ್ಯಾಯತಾತ್ಪರ್ಯಮಂಡನ ಎಂಬ ವ್ಯಾಖ್ಯಾನ ಇವೆ. ವಿಶ್ವನಾಥನು ನ್ಯಾಯಸೂತ್ರಕ್ಕೆ ಸ್ವತಂತ್ರವಾದ ವೃತ್ತಿಯೊಂದನ್ನು ರಚಿಸಿರುವನು. ರಾಧಾಮೋಹನನು ನ್ಯಾಯಸೂತ್ರಕ್ಕೆ ನ್ಯಾಯಸೂತ್ರವಿವರಣ ಎಂಬ ವ್ಯಾಖ್ಯಾನ ಬರೆದಿರುವನು. ಜಯಂತಭಟ್ಟನ ನ್ಯಾಯಮಂಜರೀ ; ಉದಯನನ ಕುಸುಮಾಂಜಲೀ ; ಇದಕ್ಕೆ ವರ್ಧಮಾನನ ಪ್ರಕಾಶ ಎಂಬ ಟೀಕಾ ; ಈ ಟೀಕೆಗೆ ರುಚಿದತ್ತನ ಮಕರಂದ ಎಂಬ ಟಿಪ್ಪಣಿ ; ಉದಯನನ ಆತ್ಮತತ್ತ್ವ ವಿವೇಕ ; ವಿಶ್ವನಾಥನ ಭಾಷಾಪರಿಚ್ಛೇದ, ಅವನಿಂದಲೇ ರಚಿತವಾದ ಮುಕ್ತಾವಳೀ ಎಂಬ ಅದರ ವ್ಯಾಖ್ಯಾನ ; ಮುಕ್ತಾವಲೀಪ್ರಕಾಶ (ದಿನಕರೀಯ) ಎಂಬ ಮಹಾದೇವನ ವಾಖ್ಯಾನ ; ಅದಕ್ಕೆ ರಾಮರುದ್ರಭಟ್ಟಾಚಾರ್ಯನ ರಾಮರುದ್ರೀಯವೆಂಬ ವ್ಯಾಖ್ಯಾನ ; ಅನ್ನಂಭಟ್ಟನ ತರ್ಕ ಸಂಗ್ರಹ, ಅದಕ್ಕೆ ಅವನ ದೀಪಿಕಾವ್ಯಾಖ್ಯಾನ ; ತರ್ಕಸಂಗ್ರಹಕ್ಕೆ ನ್ಯಾಯಬೋಧಿನಿ, ಪದಕೃತ್ಯ; ವಾಕ್ಯವೃತ್ತಿ ಇತ್ಯಾದಿ ವ್ಯಾಖ್ಯಾನಗಳು ; ನ್ಯಾಯಪ್ರದೀಪದಿಂದ ಸಹಿತವಾದ ತರ್ಕಭಾಷಾ ; ಶಿವಾದಿತ್ಯನಿಂದ ರಚಿತವಾದಸಪ್ತಪದಾರ್ಥೀ ; ಮಲ್ಲಿನಾಥನ ನಿಷ್ಕಂಟಕಾ ಎಂಬ ವ್ಯಾಖ್ಯಾನ ಸಹಿತವಾದ ವರದರಾಜನ ತಾರ್ಕಿಕರಕ್ಷಾ ; ಭಾಸರ್ವಜ್ಞನ ನ್ಯಾಯಸಾರ ; ಜಾನಕೀನಾಥ ಭಟ್ಟಾಚಾರ್ಯನ ನ್ಯಾಯಸಿದ್ಧಾಂತಮಂಜರೀ ; ಶಶಿಧರನ ನ್ಯಾಯಸಿದ್ಧಾಂತದೀಪ ಎಂಬ ಗ್ರಂಥಗಳು ತರ್ಕಶಾಸ್ತ್ರದಲ್ಲಿ ಮುಖ್ಯವಾಗಿವೆ.

ಹನ್ನೆರಡನೆಯ ಶತಮಾನದಲ್ಲಿ ಗಂಗೇಶೋಪಾಧ್ಯಾಯನಿಂದ ನವೀನ ನ್ಯಾಯದರ್ಶನವು ಪ್ರಚಾರಕ್ಕೆ ಬಂದಿತು ಅವನು ತತ್ತ್ವಚಿತಾಮಣಿ ಎಂಬ ಗ್ರಂಥವನ್ನು ಬರೆದನು. ಇದಕ್ಕೆ ರಘುನಾಥ ಶಿರೋಮಣಿಯ ದೀಧಿತಿ ಎಂಬ ವ್ಯಾಖ್ಯಾನ, ದೀಧಿತಿಗೆ ಮಥುರಾನಾಥಭಟ್ಟಾಚಾರ್ಯ, ಜಗದೀಶಭಟ್ಟಾಚಾರ್ಯ, ಗದಾಧರಭಟ್ಟಾಚಾರ್ಯ ಎಂಬುವರ ವ್ಯಾಖ್ಯಾನಗಳು, ಇವುಗಳಿಗೂ ವ್ಯಾಖ್ಯಾನಗಳೂ ಈ ಕ್ರಮದಲ್ಲಿ ನವೀನನ್ಯಾಯವು ಬೆಳೆಯಿತು. ಈ ಗ್ರಂಥಗಳ ವ್ಯಾಸಂಗದಿಂದ ಅತಿಸೂಕ್ಷ್ಮವಾದ ವಿಷಯಗಳನ್ನು ಅನ್ಯೂನಾನತಿ ಪ್ರಸಕ್ತವಾದ ವಾಕ್ಯಗಳಿಂದ ಪರಿಷ್ಕಾರ ಕ್ರಮದಲ್ಲಿ ತಿಳಿಸಲು ಸಾಧ್ಯವಾಗುತ್ತದೆ ಎಂದು ಭಾವಿಸಲಾಗುತ್ತದೆ.

## ವೈಶೇಷಿಕ ದರ್ಶನದ ಪದಾರ್ಥ ವಿಚಾರ

ತಾರ್ಕಿಕರ ದರ್ಶನವು ಮುಖ್ಯವಾಗಿ ಧರ್ಮಧರ್ಮಿಗಳಿಗೆ ಭೇದವನ್ನು ಒಪ್ಪಿ ಏಳು ಪದಾರ್ಥಗಳನ್ನು ಸ್ವೀಕರಿಸಿದೆ. ಧರ್ಮವೆಂದರೆ ಇರುವ ವಸ್ತುವು ; ಧರ್ಮಿ ಎಂದರೆ ಆಧಾರವಾದ

ವಸ್ತು. ವೈಶೇಷಿಕರು ಬಾಹ್ಯಾರ್ಥಸತ್ತ್ವವಾದಿಗಳು. ಮನುಷ್ಯರ ಸಾಧಾರಣವಾದ ಅನುಭವವನ್ನು ಆಧರಿಸಿ ಈ ದರ್ಶನವು ಹೊರಟಿದೆ.

ವೈಶೇಷಿಕರು ದ್ರವ್ಯ, ಗುಣ, ಕರ್ಮ, ಸಾಮಾನ್ಯ, ವಿಶೇಷ, ಸಮವಾಯ, ಅಭಾವವೆಂಬ ಏಳು ಪದಾರ್ಥಗಳನ್ನು ಒಪ್ಪುತ್ತಾರೆ. ದ್ರವ್ಯ : ಪ್ರಪಂಚದಲ್ಲಿ ನಾವು ನೋಡುವ ಪದಾರ್ಥಗಳಲ್ಲಿ ಅನೇಕ ಗುಣ, ಕರ್ಮಗಳು ಕಾಣಿಸಿಕೊಳ್ಳುತ್ತವೆ. ಇವುಗಳಿಗೆ ಆಧಾರವಾದ ಮಡಿಕೆ, ಬಟ್ಟೆ, ಕಂಭ, ಮನೆ ಮುಂತಾದುವುಗಳು ದ್ರವ್ಯಗಳು.

ಗುಣ ಮತ್ತು ಕರ್ಮಗಳು : ಮಡಿಕೆಯಲ್ಲಿರುವ ರೂಪ, ರಸ, ಸ್ಪರ್ಶ, ಉದ್ದ, ಅಗಲ, ತೂಕ ಮುಂತಾದ ಹೆಚ್ಚು ಸ್ಥಿರವಾದ ಧರ್ಮಗಳೇ ಗುಣಗಳು. ಗಡಿಗೆಯನ್ನು ನಾವು ಅಲ್ಲಾಡಿಸಿದಾಗ ಸ್ವಲ್ಪ ಹೊತ್ತು ಇದ್ದು ನಾಶವಾಗುವ ಚಲನ ಮುಂತಾದುವುಗಳು ಕರ್ಮಗಳು ನಮ್ಮ ಸಾಮಾನ್ಯ ಅನುಭವದಲ್ಲಿಯೂ ರೂಪಾದಿಗಳು, ಬೀಳುವುದು, ಏಳುವುದು, ಓಡುವುದು, ಮುಂತಾದುವುಗಳೂ ತಮ್ಮ ಸ್ವರೂಪದಿಂದಲೇ ಭಿನ್ನವಾಗಿ ಗೋಚರಿಸುತ್ತವೆ. ಹೀಗೆ ಸ್ಥೂಲವಾಗಿ ವಿಚಾರ ಮಾಡಿದಾಗ ಈ ಬಾಹ್ಯಜಗತ್ತು ದ್ರವ್ಯ, ಗುಣ ಮತ್ತು ಕರ್ಮ ಎಂಬ ಮೂರು ಪದಾರ್ಥಗಳ ಸಮುದಾಯ ರೂಪವಾಗಿದೆ. ಕಣಾದನು ಈ ಮೂರು ವಸ್ತುಗಳನ್ನೇ ಮೊದಲಿನ ಮೂರು ಪದಾರ್ಥಗಳೆಂದು ಹೇಳಿ, ಅವುಗಳ ಅಸ್ತಿತ್ವವು ನೇರವಾಗಿ, ನಮ್ಮ ಬುದ್ಧಿಗೆ ಮೊದಲೇ ಗೋಚರಿಸುವುದರಿಂದ ಅವುಗಳಲ್ಲಿಯೇ 'ಸತ್ತಾ' (Existence) ಎಂಬ ಜಾತಿ ಇದೆ ಎಂದು ಒಪ್ಪಿರುತ್ತಾನೆ.

ಸಾಮಾನ್ಯ; ಲೋಹದಲ್ಲಿ ಅನೇಕ ವಸ್ತುಗಳು ಒಂದೇ ರೀತಿಯಿಂದ ಇರುತ್ತವೆ. ಆದುದರಿಂದ ನಾವು ಅವುಗಳನ್ನು ಒಂದೇ ಶಬ್ದದಿಂದ ವ್ಯವಹರಿಸುತ್ತೇವೆ. ಪ್ರಪಂಚದಲ್ಲಿರುವ ಎಲ್ಲಾ ಮಡಿಕೆಗಳನ್ನು 'ಘಟ' ಎಂಬ ಒಂದೇ ಶಬ್ದದಿಂದ ವ್ಯವಹರಿಸುವುದನ್ನು ನೋಡಿದಾಗ ಈ ಎಲ್ಲಾ ಧರ್ಮಿಗಳಲ್ಲಿ ಅನುಸ್ಯೂತವಾದ ಒಂದು ಧರ್ಮವು ಇರಬೇಕೆಂದು ನಮಗೆ ಅನಿಸುತ್ತದೆ. ಅದೇ ಸಾಮಾನ್ಯವು. ಇದನ್ನು ಜಾತಿಯೆಂದೂ ಕರೆಯುತ್ತಾರೆ. ಇದು ಪದಾರ್ಥಗಳಲ್ಲಿ ಬಾಹ್ಯವಾಗಿಯೇ ಇರುವ ಧರ್ಮ. ಇದು ನಿತ್ಯವಾಗಿದ್ದು ಅನೇಕ ವಸ್ತುಗಳಲ್ಲಿ ವ್ಯಾಪಿಸಿದ್ದರೆ ಅದನ್ನು ಜಾತಿಯೆಂದೂ, ಹೀಗಿಲ್ಲದಿದ್ದರೆ ಅದನ್ನು ಉಪಾಧಿಯೆಂದೂ ಕರೆಯುತ್ತಾರೆ. ಮನುಷ್ಯತ್ವ ಜಾತಿ ; ಉಪಾಧ್ಯಾಯತ್ವ, ಪಾಚಕತ್ವ ಮುಂತಾದುದು ಉಪಾಧಿ. ಈ ಜಾತಿಯು ಮನಸ್ಸಿನ ಕಲ್ಪನೆ ; ಘಟತ್ವವೆಂದರೆ ಘಟತ್ವವಲ್ಲದ್ದಕ್ಕಿಂತ ಬೇರೆಯಾಗಿರುವಿಕೆ ; 'ಅಘಟವ್ಯಾವೃತ್ತಿ' ಎಂದು ಬೌದ್ಧರು ಹೇಳುತ್ತಾರೆ. ಆದರೆ ಸಾಮಾನ್ಯವು ಕೇವಲ ಮಾನವಕಲ್ಪನೆಯೆಂದು ಒಪ್ಪಿದರೆ ಬಾಹ್ಯಜಗತ್ತಿನ ಅಸ್ತಿತ್ವವೇ ಮುಳುಗಿ ಹೋಗುತ್ತದೆ.

ಈ ಸಾಮಾನ್ಯವು ಪರಸಾಮಾನ್ಯ ಅಪರಸಾಮಾನ್ಯ ಎಂದು ಎರಡು ವಿಧವಾಗಿದೆ. ಹಿಂದೆ ಹೇಳಿದಂತೆ ದ್ರವ್ಯ ಗುಣ ಕರ್ಮ ಈ ಮೂರರಲ್ಲಿರುವ ಸತ್ತಾ ಎಂಬುದು ಪರಸಾಮಾನ್ಯವಾಗಿದೆ. ಸತ್ತೆಯನ್ನು ಬಿಟ್ಟರೆ, ದ್ರವ್ಯತ್ವ, ಗುಣತ್ವ, ಕರ್ಮತ್ವಗಳು, ಸಾಮಾನ್ಯಗಳು. ಆದರೆ ಇವು

ಕೇವಲ ಪರಸಾಮಾನ್ಯಗಳಲ್ಲ. ಪೃಥಿವೀತ್ವ ಮುಂತಾದವುಗಳಿಗಿಂತ ವ್ಯಾಪಕವಾಗಿಯೂ ಸತ್ತೆಗಿಂತ ವ್ಯಾಪ್ಯವಾಗಿಯೂ (ಅಂದರೆ ಕಡಿಮೆ ಸ್ಥಳದಲ್ಲಿ ಇರುವವುಗಳು) ಇರುವುದರಿಂದ ಪರಾಪರ ಸಾಮಾನ್ಯ ಎನ್ನಿಸಿಕೊಳ್ಳುತ್ತವೆ. ಘಟತ್ವ ಮುಂತಾದ ಸಾಮಾನ್ಯಗಳು ಕೇವಲ ಅಪರ (ಚಿಕ್ಕ ಸಾಮಾನ್ಯಗಳೆಂದು ಹೇಳಲ್ಪಡುತ್ತವೆ.

ವಿಶೇಷ : ತಾರ್ಕಿಕರು ಪೃಥಿವೀ ಮುಂತಾದ ನಾಲ್ಕು ಭೂತ ಪದಾರ್ಥಗಳ ಸೂಕ್ಷ್ಮಾಂಶಗಳನ್ನು ಪರಮಾಣುಗಳೆಂದು ಹೇಳುತ್ತಾರೆ. ಈ ಪರಮಾಣುಗಳು ಒಂದೊಂದೂ ಭಿನ್ನವ್ಯಕ್ತಿಯಾಗಿರುವುದರಿಂದ ಇನ್ನೊಂದರ ಸಮಾನತೆಯನ್ನು ಹೊಂದಿರುವುದಿಲ್ಲ. ಆದ್ದರಿಂದ ಪರಮಾಣುಗಳಲ್ಲಿ ಸಾಮಾನ್ಯವಿರುವುದಿಲ್ಲ, ವಿಶೇಷವೇ ಇರುತ್ತದೆ. ಲೋಕದಲ್ಲಿರುವ ಘಟ, ಪಟ ಮುಂತಾದ ಪದಾರ್ಥಗಳಿಗೆ ಅವುಗಳ ಅವಯವಗಳ ಭೇದದಿಂದ ಭೇದವನ್ನು ಹೇಳುತ್ತೇವೆ. ಎರಡು ಘಟಗಳ ಅವಯವಗಳು ಬೇರೆ ಬೇರೆಯಾಗಿಯೇ ಇರುತ್ತವೆ. ಆದರೆ ಪೃಥಿವಿಯ ಎರಡು ಪರಮಾಣುಗಳಲ್ಲಿ ಪೃಥಿವೀತ್ವ, ದ್ರವತ್ವ ಮುಂತಾದ ಧರ್ಮಗಳು ಸಮಾನವೇ ಆಗಿರುವಾಗ ಅವೆರಡಕ್ಕೆ ಬೇಧವನ್ನು ಹೇಗೆ ಹೇಳಬೇಕು ? ಪರಮಾಣುಗಳು ಪರಸ್ಪರ ಭಿನ್ನವಾಗಿಲ್ಲದಿದ್ದರೆ ಪರಮಾಣುಗಳ ಸ್ಥಾಪನೆಯನ್ನು ಮಾಡಲು ಸಾಧ್ಯವಿಲ್ಲ. ಆದುದರಿಂದ ಎರಡೂ ಸಮಾನವಾದ ಪರಮಾಣುಗಳಲ್ಲಿ ವಿಶೇಷವೆಂಬ ಪದಾರ್ಥವನ್ನು ಒಪ್ಪಿ ಅವುಗಳಿಗೆ ಭೇದವನ್ನು ಸಾಧಿಸಬೇಕಾಗಿದೆ. ಈ ರೀತಿ ವಿಶೇಷವೆಂಬ ಪದಾರ್ಥದ ಕಲ್ಪನೆಯು ಪರಮಾಣುವಾದದ ಒಂದು ಅವಶ್ಯಕ ಅಂಗವಾಗಿದೆ. ಈ ವಿಶೇಷವೆಂಬ ಪದಾರ್ಥವನ್ನು ಒಪ್ಪುವುದರಿಂದಲೇ ಇವರಿಗೆ ವೈಶೇಷಿಕರೆಂಬ ಹೆಸರು ಬಂದಿರಬಹುದು ಕಣಾದ ಕಣ—ಪರಮಾಣುಗಳು–ಇವುಗಳ–ಸಾಧನ, ಅವುಗಳ ಭೇದ ಸಾಧನದಲ್ಲಿ ಆದ = ಆನಂದವನ್ನು ಅನುಭವಿಸುವವನು ಎಂಬ ಕಣಾದ ನಾಮಪದದ ನಿರ್ವಚನವನ್ನು ಈ ದೃಷ್ಟಿಯಿಂದ ಮಾಡುವವರಿದ್ದಾರೆ. ಬಾಹ್ಯಾರ್ಥಸ್ಥಾಪನೆಯಲ್ಲಿ ವಿಶೇಷಪದಾರ್ಥಕ್ಕೆ ಮಹತ್ವವಿಲ್ಲದಿದ್ದರೂ ಪರಮಾಣುವಾದಕ್ಕೆ ವಿಶೇಷವು ಮಹತ್ತಾದ ಸಾಧಕವಾಗಿದೆ. ಕಾಲ, ದಿಕ್, ಆತ್ಮಾ, ಮನಸ್ಸುಗಳಲ್ಲಿಯೂ ವೈಶೇಷಿಕರು ವಿಶೇಷ ಪದಾರ್ಥವನ್ನು ಒಪ್ಪುತ್ತಾರೆ. ಈ ವಿಶೇಷಗಳಿಗೆ ಪರಸ್ಪರ ಭೇದವು ಸ್ವತಃ ಸಿದ್ಧಿಸುತ್ತದೆ.

ಸಮವಾಯ : ನ್ಯಾಯ ವೈಶೇಷಿಕ ದರ್ಶನಗಳಲ್ಲಿ ಧರ್ಮಧರ್ಮಿಗಳಿಗೆ ಭೇದವನ್ನು ಒಪ್ಪಿದ್ದರಿಂದ ಅವೆರಡಕ್ಕೆ ಸಂಬಂಧವನ್ನು ಹೇಳಬೇಕು. ಒಂದು ಪದಾರ್ಥವು ಇನ್ನೊಂದು ಪದಾರ್ಥವನ್ನು ಅಗಲಿ ಇರುವುದಿಲ್ಲವಾದರೆ ಅವೆರಡಕ್ಕೆ ಅಯುತ ಸಿದ್ಧಗಳೆಂದು ಹೆಸರು. ಅಯುತ ಸಿದ್ಧಗಳಿಗೆ ಸಂಬಂಧವು ಸಮವಾಯ. ಸಂಯೋಗವು ದ್ರವ್ಯಗಳಿಗೆ ಮಾತ್ರ. ಸಮವಾಯವು ತಂತು (ದಾರ), ಪಟ ಮುಂತಾದ ಅವಯವ ಆವಯವಿಗಳಿಗೂ ; ರೂಪಾದಿ ಗುಣ ಮತ್ತು ಗುಣಿಗಳಾದ ಘಟ ಮುಂತಾದವುಗಳಿಗೂ ; ಚಲನಾದಿಕ್ರಿಯೆ ಮತ್ತು ಅವುಗಳುಳ್ಳ ವಸ್ತುಗಳಿಗೂ ; ಘಟತ್ವಾದಿ ಜಾತಿ ಮತ್ತು ಘಟಾದಿ ವಸ್ತುಗಳಿಗೂ ಸಮವಾಯಸಂಬಂಧವು. ಇಲ್ಲಿ ಬಟ್ಟೆಯು ತಂತುವಿನಲ್ಲಿ ಸಮವಾಯ ಸಂಬಂಧದಿಂದ ಇರುವ ಧರ್ಮ. ಹೀಗೆ ದ್ರವ್ಯದಲ್ಲಿ

(ತಂತುವಿನಲ್ಲಿ) ಅವಯವಿ, ಗುಣ, ಕ್ರಿಯಾ, ಸಾಮಾನ್ಯ, ವಿಶೇಷ ಈ ಐದೂ ಸಮವಾಯ ಸಂಬಂಧದಿಂದ ಇರುತ್ತವೆ.

ಅಭಾವ : ಕಣಾದ ಮತ್ತು ಪ್ರಶಸ್ತಪಾದರು ಆರು ಪದಾರ್ಥಗಳನ್ನು ಮಾತ್ರ ಪರಿಗಣಿಸಿದ್ದಾರೆ. ಆದರೆ ಮುಂದೆ ಬರುಬರುತ್ತಾ ಈ ದರ್ಶನದ ಪದಾರ್ಥವಿಭಾಗ ಮಾಡುವಾಗ ಏಳನೆಯದಾದ ಅಭಾವ ಪದಾರ್ಥವನ್ನು ಸೇರಿಸಿದ್ದಾರೆ. ಅಭಾವವು ವಸ್ತು, ಸತ್ ಪದಾರ್ಥ ; ಶಶಶೃಂಗ, ಆಕಾಶಪುಷ್ಪ ಮುಂತಾದವುಗಳಂತೆ ತುಚ್ಛ, ಅಸತ್ (Unreal) ಅಲ್ಲ. ಭೂತಲೇ ಘಟೋ ನಾಸ್ತಿ- ಭೂಮಿಯಲ್ಲಿ ಗಡಿಗೆಯಿಲ್ಲ ಎಂಬಲ್ಲಿ ಘಟಾಭಾವವು ನಿಷೇಧಾತ್ಮಕವಾಗಿ ತೋರಿದರೂ ಸರ್ವಥಾ ಅಸತ್ ಅಲ್ಲ. ಹೀಗೆ ಈ ಮತದಲ್ಲಿ ಪದಾರ್ಥವು ಎರಡು ವಿಧ— ಭಾವ ಮತ್ತು ಅಭಾವ. ಭಾವವು ಹಿಂದೆ ಹೇಳಿದಂತೆ ಆರು ವಿಧ. ಅಭಾವವು ಮುಂದೆ ಹೇಳುವ ರೀತಿಯಿಂದ ಎರಡು ವಿಧ. ಕಣಾದರೂ ಅಭಾವವನ್ನು ಕಂಠತಃ ಹೇಳದಿದ್ದರೂ ಒಪ್ಪಿರುವ ಸೂಚನೆಗಳಿವೆ. ಅಭಾವವು ಸಂಸರ್ಗಾಭಾವ ಮತ್ತು ಅನ್ಯೋನ್ಯಾಭಾವವೆಂದು ಎರಡು ವಿಧ. ಸಂಸರ್ಗಾಭಾವವು ಪ್ರಾಗಭಾವ, ಪ್ರಧ್ವಂಸಾಭಾವ ಮತ್ತು ಅತ್ಯಂತಾಭಾವ ಎಂದು ಮೂರು ವಿಧವಾಗಿದೆ. ತಂತುಗಳಿಂದ ಪಟವು ಉತ್ಪನ್ನವಾಗುವುದಕ್ಕೆ ಮೊದಲು ಪಟವು ತಂತುಗಳಲ್ಲಿ ಹುಟ್ಟುವುದು. ಅರ್ಥಾತ್ ಈಗ ಪಟವಿಲ್ಲ ಎಂಬ ಪ್ರತೀತಿಗೆ ವಿಷಯವಾದ ಅಭಾವವೇ ಪ್ರಾಗಭಾವವು. ಪಟವು ನಾಶವಾದಾಗ ತಂತುಗಳಲ್ಲಿ ಪಟದ ಪ್ರಧ್ವಂಸಾಭಾವವು, ಭೂತಲದಲ್ಲಿ ಘಟವಿಲ್ಲ, ವಾಯುವಿನಲ್ಲಿ ರೂಪವಿಲ್ಲ ಎಂಬ ಅಭಾವವು ಅತ್ಯಂತಾಭಾವವೆಂದು ಹೇಳಲ್ಪಡುತ್ತವೆ. ಘಟವು ಪಟವಲ್ಲ ಎಂಬ ಅಭಾವವು ಅನ್ಯೋನ್ಯಾಭಾವವು.

ಸಪ್ತಪದಾರ್ಥಗಳಲ್ಲಿ ಮೊದಲನೆಯದಾದ ಆತ್ಮದ್ರವ್ಯವು ೯ ವಿಧ. ಇವುಗಳು ಪೃಥಿವೀ, ಜಲ, ತೇಜಸ್ಸು, ವಾಯು, ಆಕಾಶ, ಕಾಲ, ದಿಕ್, ಮನಸ್ಸುಗಳು. ಮೊದಲಿನ ನಾಲ್ಕು ದ್ರವ್ಯಗಳನ್ನು ಭೌತಿಕದ್ರವ್ಯ, ಅಣ್ವಾರಬ್ಧದ್ರವ್ಯ (Material Substances) ಎಂದು ಹೇಳುತ್ತಾರೆ. ಇವು ನಾಲ್ಕು ಮಾತ್ರ ಕಾರ್ಯದ್ರವ್ಯಗಳು. ಆಕಾಶ, ಕಾಲ, ದಿಕ್, ಆತ್ಮಗಳು ನಿತ್ಯ ಮತ್ತು ವಿಭುಗಳು. ವಿಭುವೆಂದರೆ ಸರ್ವವ್ಯಾಪಕ ದ್ರವ್ಯ. ಈಶ್ವರನು ಪ್ರತ್ಯೇಕ ದ್ರವ್ಯವಲ್ಲ. ಆತ್ಮರಲ್ಲಿ ವಿಶೇಷರೀತಿಯು ಆತ್ಮನು, ಪರಮಾತ್ಮನು. ಮೂಲತಃ ವೈಶೇಷಿಕಸಂಪ್ರದಾಯದಲ್ಲಿ ಈಶ್ವರನಿಗೆ ಪ್ರತ್ಯೇಕ ಸ್ಥಾನವಿರಲಿಲ್ಲ. ಆದರೆ ನ್ಯಾಯವೈಶೇಷಿಕಗಳು ಸಮ್ಮಿಲಿತವಾದಾಗ ಆತ್ಮನೆಂಬ ಎಂಟನೆಯ ದ್ರವ್ಯದಲ್ಲಿಯೇ ಈಶ್ವರನನ್ನು ಸೇರಿಸಿಕೊಳ್ಳಲಾಯಿತು. ಆತ್ಮರಂತೆ ಮನಸ್ಸುಗಳೂ ಅನಂತ. ಆದರೆ ಅವು ಸರ್ವವ್ಯಾಪಕವಲ್ಲ, ಅಣುಗಳು.

ಆಕಾಶ ಕಾಲ ಮತ್ತು ದಿಕ್ಕುಗಳು : ಈ ಮೂರು ಪದಾರ್ಥಗಳ ಸ್ವರೂಪವನ್ನು ವೈಶೇಷಿಕ ದರ್ಶನಕಾರರು ಹೇಗೆ ಒಪ್ಪಿಕೊಂಡಿದ್ದಾರೆಂದು ತಿಳಿಯಬೇಕು. ಆಕಾಶವು ಶಬ್ದೋತ್ಪತ್ತಿಗೆ ಸಮವಾಯಕಾರಣ ಮಾತ್ರ. ಶಬ್ದದ ಹೊರತು ಇದರ ಕಾರ್ಯವು ಮತ್ತಾವುದೂ

ಇಲ್ಲ. ಪೃಥಿವ್ಯಾದಿ ಪಂಚಮಹಾಭೂತಗಳು ಎಂಬ ವ್ಯವಹಾರದಲ್ಲಿ ಆಕಾಶವು ಸೇರುತ್ತದೆ. ಆದರೆ ವೈಶೇಷಿಕದರ್ಶನದಂತೆ ಭೂತವೆಂದರೆ ಜಗತ್ತಿಗೆ ಸಮವಾಯಿ (ಉಪಾದಾನ)– ಕಾರಣ (Material Cause). ಆಕಾಶವು ಪೃಥಿವ್ಯಾಧಿಗಳಂತೆ ಜಗತ್ತಿಗೆ ಸಮವಾಯಿಕಾರಣವಲ್ಲ. ಆದುದರಿಂದ 'ಪಂಚಭೂತಗಳು ಎಂಬ ವ್ಯವಹಾರವು ಉಪನಿಷತ್ತುಗಳಿಂದ ಈ ದರ್ಶನದಲ್ಲಿ ಬಂದಿದೆ ಮತ್ತು ಗೌಣ ಎಂದು ತಿಳಿಯಬೇಕು. ಕಾಲ (time) ಮತ್ತು ದಿಕ್ (space) ಇವುಗಳೂ ಪ್ರತ್ಯೇಕ ಅಸ್ತಿತ್ವವುಳ್ಳ ದ್ರವ್ಯಗಳೆಂದು ತಿಳಿಯಬೇಕು. ದೂರ, ಹತ್ತಿರ ಎಂಬ ವ್ಯವಹಾರಗಳಿಗೆ ಕಾರಣವಾದ ಪದಾರ್ಥವೇ ದಿಕ್ಕು. ಕಾಲತಃ ದೊಡ್ಡವನು, ಚಿಕ್ಕವನು ಎಂಬ ವ್ಯವಹಾರಕ್ಕೆ ಕಾರಣವಾದುದೇ ಕಾಲ.

ನ್ಯಾಯ-ವೈಶೇಷಿಕದರ್ಶನದ ಅಸತ್ಕಾರ್ಯವಾದ—ಈ ದರ್ಶನದಲ್ಲಿ ಕಾರ್ಯವು ಕಾರಣಕ್ಕಿಂತ ಸರ್ವಥಾ ಭಿನ್ನವಾಗಿದೆ. ಸಾಂಖ್ಯರು ಕಾರಣ ಕಾರ್ಯಗಳಿಗೆ ತಾದಾತ್ಮ್ಯ (ಎರಡೂ ಒಂದು) ವನ್ನು ಹೇಳುತ್ತಾರೆ ಅಂದರೆ ತಂತುಗಳೇ ಪಟರೂಪದಿಂದ ಪರಿಣಾಮವನ್ನು ಹೊಂದಿದೆ ಎಂದು ಹೇಳುತ್ತಾರೆ. ಆದರೆ ಈ ದರ್ಶನಕ್ಕೆ ಅನುಸಾರವಾಗಿ ಪಟವು ತಂತುಗಳಿಗಿಂತ ಸರ್ವಥಾ ಭಿನ್ನವಾದ ಒಂದು ಹೊಸ ಪದಾರ್ಥವು. ಇಲ್ಲಿ ತಂತುವಿನಿಂದ ಪಟ ಉತ್ಪನ್ನವಾಯಿತೆಂದು ಹೇಳುವುದಕ್ಕಿಂತ ತಂತುಗಳಲ್ಲಿ ಪಟ ಉತ್ಪನ್ನವಾಯಿತು ಎಂಬ ವ್ಯವಹಾರವೇ ಸರಿ. ಇದನ್ನೇ ಆರಂಭವಾದವೆನ್ನುತ್ತಾರೆ. ಸಾಂಖ್ಯರ ಪರಿಣಾಮವಾದವು ಸಾಮಾನ್ಯರಿಗೆ ಸರಿಯೆಂದು ಕಂಡರೂ ಬಾಹ್ಯಾರ್ಥವಾದದ ರಕ್ಷಣೆಯ ದೃಷ್ಟಿಯಿಂದ ಈ ವಾದವು ಯುಕ್ತವೆಂದು ಹೇಳಬೇಕಾಗಿದೆ. ತಂತುಪಟಗಳು ಒಂದೇ ತತ್ತ್ವವಾದರೆ ಪಟದಲ್ಲಿ ಹೊಸ ಧರ್ಮಗಳು ಎಲ್ಲಿಂದ ಹೇಗೆ ಬರಲು ಸಾಧ್ಯ ! ತಂತುವು ಪಟವಾಗಿ ಪರಿವರ್ತಿತವಾಯಿತು ಎಂಬಲ್ಲಿ ಪರಿವರ್ತನ ಎಂಬುದೇ ಹೊಸ ಅಂಶ. ಹೀಗೆ ವಿಚಾರ ಮಾಡಿದಾಗ ತಂತು ಪಟಗಳೆರಡೂ ಭಿನ್ನ ವಸ್ತುಗಳೆಂದೇ ತೋರುತ್ತದೆ. ತಂತುವಿನಲ್ಲಿ ಪಟವು ಸಮವಾಯಸಂಬಂಧದಿಂದ ಹುಟ್ಟುತ್ತದೆ. ಉತ್ಪತ್ತಿಗಿಂತ ಪೂರ್ವದಲ್ಲಿ ಪಟವೆಂಬ ಕಾರ್ಯವು ಸರ್ವಥಾ'ಅಸತ್' ಆದುದರಿಂದಲೇ ಈ ವಾದಕ್ಕೆ ಅಸತ್‌ಕಾರ್ಯವಾದವೆಂದು ಹೆಸರು. ಸಾಂಖ್ಯರು ಸತ್ಕಾರ್ಯವಾದಿಗಳು. ಕಾರ್ಯವೂ ಕಾರಣವೂ ಒಂದೇ ಎಂದು ಆ ವಾದದ ಅಭಿಪ್ರಾಯ. ಇದಕ್ಕೆ ವಿರುದ್ಧವಾದುದೇ ಅಸತ್ಕಾರ್ಯವಾದ. ಕಾರ್ಯಕಾರಣಗಳಿಗೆ ಭೇದ ಮತ್ತು ಅಭೇದಗಳೆರಡನ್ನು ಹೇಳುವುದಕ್ಕೂ ಯುಕ್ತಿಗಳು ಸಮಬಲವಾಗಿರುವುದರಿಂದ, ಜೈನ ಪಾತಂಜಲ, ಕುಮಾರಿಲಭಟ್ಟರ ಮತಗಳಲ್ಲಿ ಸದಸತ್ಕಾರ್ಯವಾದವನ್ನು ಆಶ್ರಯಿಸಲಾಗಿದೆ. ಸದಸತ್ಪಕ್ಷಗಳಿಗೆ ಪರಸ್ಪರ ವಿರೋಧವಿರುವುದರಿಂದ ಕೆಲವರು ಸದಸದ್ವಿಲಕ್ಷಣಕಾರ್ಯವಾದವನ್ನು ಒಪ್ಪಿಕೊಂಡಿರುವರು. ಈ ಎಲ್ಲಾ ಮತಗಳಲ್ಲಿಯೂ ಕಾರಣವು ಸತ್. ಇವರೆಲ್ಲರಿಗೂ ವಿರುದ್ಧವಾಗಿ ಬೌದ್ಧರು ಅಸತ್ಕಾರಣವಾದಿಗಳು. ಶೂನ್ಯವೇ ಪ್ರಪಂಚಕ್ಕೆ ಮೂಲಕಾರಣವೆಂದು ತಿಳಿಯುತ್ತಾರೆ. ಸತ್, ಅಸತ್, ಸದಸತ್. ಸದಸದನುಭಯಾತ್ಮಕವೆಂಬ ನಾಲ್ಕುಕೋಟಿಗಳಿಂದ ವಿನಿರ್ಮುಕ್ತವಾದ ವಸ್ತುವೇ ಶೂನ್ಯವೆಂದು ಬೌದ್ಧರ ಕಲ್ಪನೆ.

ತಾರ್ಕಿಕರು ಕಾರ್ಯಕಾರಣ ಭಾವದಲ್ಲಿ ವಿಶೇಷ ದೃಷ್ಟಿಯುಳ್ಳವರು. ಕಾರ್ಯ ಹುಟ್ಟುವುದಕ್ಕಿಂತ ಪೂರ್ವದಲ್ಲಿ ನಿಯತವಾಗಿರುವ ವಸ್ತುವೇ ಕಾರಣ. ವಸ್ತ್ರವೆಂಬಕಾರ್ಯವು ಹುಟ್ಟಬೇಕಾದರೆ ತಂತುವೇ ಮೊದಲಾದುವುಗಳು ನಿಯಮತಃ ಪೂರ್ವಕ್ಷಣದಲ್ಲಿರಬೇಕಾಗುತ್ತದೆ. ನಿಯಮವೆಂದರೆ ಯಾವುದು ಇಲ್ಲದಿದ್ದರೆ ಕಾರ್ಯವು ಉದಯಿಸಲಾರದೋ ಅಂತಹ ವಸ್ತುವಿನ ಇರುವಿಕೆ. ಸಕಲಕಾರ್ಯಗಳಿಗೂ ಪ್ರಾಯಃ ಮೂರು ಕಾರಣಗಳು ಬೇಕು. ಬಟ್ಟೆಗೆ ತಂತುಗಳು ಸಮವಾಯಿಕಾರಣ. ತಂತುಗಳ ಸಂಯೋಗ (ಸೇರುವಿಕೆಯು) ಅಸಮವಾಯಿಕಾರಣ ನೇಕಾರನೇ ಮೊದಲಾದ ಉಳಿದ ವಸ್ತುಗಳೆಲ್ಲವೂ ನಿಮಿತ್ತಕಾರಣ.

ಪರಮಾಣುವಾದ :—ಘಟ, ಪಟ ಮುಂತಾದ ಪ್ರತಿಯೊಂದು ಪದಾರ್ಥದ ಅವಯವವೂ ಆ ಪದಾರ್ಥಕ್ಕೆ ಸಮವಾಯಿಕರಣ. ಆ ಅವಯವಕ್ಕೆ ಅದರ ಅವಯವವೂ ಸಮವಾಯಿ ಕಾರಣ. ಹೀಗೆ ಕಾರಣ ಪರಂಪರೆಯು. ಮುಂದುವರಿಯುತ್ತಾ ಹೋದರೆ ಪ್ರತಿಯೊಂದು ವಸ್ತುವಿಗೂ ಅನಂತ ಅವಯವಗಳು ಇವೆಯೆಂದು ಹೇಳಬೇಕಾಗುತ್ತದೆ. ಆಗ ಒಂದು ಸಾಸಿವೆಯ ಕಾಳು ಮತ್ತು ಮೇರುಪರ್ವತ, ಇವೆರಡಕ್ಕೂ ಅನಂತ ಅವಯವ ಗಳಿರುವುದರಿಂದ ಅವೆರಡರ ಪರಿಮಾಣವೂ ಒಂದಾಗಬೇಕಾದೀತು. ಅವಯವಗಳ ನ್ಯೂನತೆ ಅಥವಾ ಅಧಿಕತೆಯಿಂದ ಪರಿಮಾಣ ತಾರತಮ್ಯವನ್ನು ಹೇಳಬೇಕಾಗುತ್ತದೆ. ಅದು ಇಲ್ಲದಿರು ವಾಗ ಮೇರು ಸರ್ಷಪಗಳಿಗೆ ಹಿಂದೆ ಹೇಳಿದಂತೆ ಸಾಮ್ಯವನ್ನೇಕೆ ಹೇಳಬಾರದು. ಈ ಆಪೇಕ್ಷದ ಪರಿಹಾರಕ್ಕಾಗಿ ಅವಯವಧಾರೆಯ ಸಮಾಪ್ತಿಯ ಸ್ಥಾನವನ್ನು 'ಅಣು' ಅಥವಾ 'ಪರಮಾಣು' ಎಂದು ಕರೆಯಬೇಕು. ಪರಮಾಣುವನ್ನು ನಿರವಯವ ಎಂದು ಒಪ್ಪದಿದ್ದರೆ ವಿಷಮ ಪರಿಣಾಮವುಳ್ಳ ಕಾರ್ಯಗಳು ಎಂಬ ಮಾತು ಅರ್ಥಹೀನವಾಗುತ್ತದೆ ಎಂದು ತಾತ್ಪರ್ಯ.

ಇಂತಹ ಎರಡು ಪರಮಾಣುಗಳ ಸಂಯೋಗದಿಂದ ದ್ವ್ಯಣುಕವೆಂಬ ಕಾರ್ಯ ಉಂಟಾಗುತ್ತದೆ. ಈ ದ್ವ್ಯಣುಕದ ಪರಿಮಾಣವೂ ಅಣು ಪರಿಮಾಣವೇ ಆಗಿದೆ. ಎರಡು ಅಣುಗಳ ಮೇಲನದಿಂದ ಪರಿಮಾಣದಲ್ಲಿ ವ್ಯತ್ಯಾಸ ಉಂಟಾಗುವುದಿಲ್ಲ. ಮೂರು ದ್ವ್ಯಣುಕ ಗಳಿಂದ 'ತ್ರ್ಯಣುಕ' ಉಂಟಾಗುತ್ತದೆ. ತ್ರ್ಯಣುಕದಲ್ಲಿ ಮಹತ್ ಪರಿಮಾಣವಿರುತ್ತದೆ. ಹೀಗೆಯೇ ತ್ರ್ಯಣುಕಗಳು ನಾಲ್ಕು ಸೇರಿ ಮತ್ತೊಂದು ಕಾರ್ಯ ಇತ್ಯಾದಿಗಳು ಉಂಟಾಗುತ್ತವೆ.

೨೪ ಗುಣಗಳು : ಆಧುನಿಕ ತರ್ಕಗ್ರಂಥಗಳಲ್ಲಿ ರೂಪ. ರಸ ಇತ್ಯಾದಿ ೨೪ ಗುಣಗಳನ್ನು ಹೇಳಿದ್ದರೂ ಕಣಾದನು ೧೭ನ್ನು ಮಾತ್ರ ಕಂಠತಃ ಹೇಳಿದ್ದಾನೆ. ಉಳಿದ ಏಳನ್ನು ಪ್ರಶಸ್ತ ಪಾದನು ಸೇರಿಸಿರುತ್ತಾನೆ. ರೂಪ, ರಸ, ಗಂಧ, ಸ್ಪರ್ಶ, ಎಂಬ ನಾಲ್ಕು ಗುಣಗಳು ಪೃಥಿವೀ ಮುಂತಾದ ನಾಲ್ಕು ಭೂತಗಳಲ್ಲಿವೆ. ಇವನ್ನು ವಿಶೇಷ ಗುಣವೆಂದೂ ಹೇಳುತ್ತಾರೆ, ಸಂಖ್ಯಾ ಪರಿಮಾಣ, ಪೃಥಕ್ತ್ವ, ಸಂಯೋಗ. ವಿಭಾಗಗಳು ಎಲ್ಲಾ ದ್ರವ್ಯಗಳಲ್ಲಿಯೂ ಇವೆ. ಇವು ಐದು ಮತ್ತು ಪರತ್ವ ಅಪರತ್ವಗಳೂ ಅನೇಕ ದ್ರವ್ಯವೃತ್ತಿ ಗುಣಗಳು. ಜ್ಞಾನ, ಸುಖ ದುಃಖ ಇಚ್ಛಾ. ದ್ವೇಷ, ಪ್ರಯತ್ನ ಈ ಆರು ಆತ್ಮನ (ಜೀವಾತ್ಮನ) ವಿಶೇಷಗುಣಗಳು, ಇವಿಷ್ಟು ಕಣಾದನು ಹೇಳಿರುವ ಗುಣಗಳು. ಗುರುತ್ವ, ದ್ರವತ್ವ, ಸ್ನೇಹ, ಸಂಸ್ಕಾರ, ಧರ್ಮ, ಅಧರ್ಮ,

ಶಬ್ದ ಈ ಏಳನ್ನು ಪ್ರಶಸ್ತಪಾದರು ಹೇಳಿದ್ದಾರೆ. ಗಂಧತ್ವವು ಪೃಥಿವೀ ಜಲಗಳ ಗುಣ. ಸ್ವಾಭಾವಿಕ ದ್ರವ್ಯತ್ವವು ಜಲದ ಗುಣ. ನೈಮಿತ್ತಿಕ ದ್ರವತ್ವವು ಪೃಥಿವೀ (ತುಪ್ಪ, ಅರಗು ಇತ್ಯಾದಿಗಳ) ಗುಣ. ತೇಜಸ್ಸಿನಲ್ಲಿ (ಚಿನ್ನ ಮುಂತಾದವುಗಳಲ್ಲಿಯೂ) ನೈಮಿತ್ತಿಕ ದ್ರವತ್ವವಿದೆ. ವೇಗವೆಂಬ ಸಂಸ್ಕಾರವು ಪೃಥ್ವ್ಯಾದಿ ನಾಲ್ಕರಲ್ಲಿಯೂ ಮನಸ್ಸಿನಲ್ಲಿಯೂ ಇದೆ. ಸ್ಥಿತಿಸ್ಥಾಪಕ ಸಂಸ್ಕಾರವು (ಬೇರೆ ಸ್ಥಿತಿಯನ್ನು ಹೊಂದಿದ ವಸ್ತುವು ಮೊದಲಿನ ಸ್ಥಿತಿಯನ್ನು ಹೊಂದುವುದಕ್ಕೆ ಕಾರಣವಾದ ಗುಣವು) ಪೃಥಿವಿಯಲ್ಲಿ ಮಾತ್ರ ಇದೆ. ಅನುಭವದಿಂದ ಹುಟ್ಟಿ ಸ್ಮರಣೆಗೆ ಕಾರಣವಾಗುವ ಭಾವನಾ (Impression) ಎಂಬ ಸಂಸ್ಕಾರವು ಜೀವಾತ್ಮನಲ್ಲಿ ಮಾತ್ರ ಇರುತ್ತದೆ ಧರ್ಮಾಧರ್ಮಗಳು ಜೀವಾತ್ಮನ ಗುಣಗಳು. ಶಬ್ದವು ಆಕಾಶದ ಗುಣ ಸಂಖ್ಯೆಯು ನವದ್ರವ್ಯಗಳಲ್ಲಿಯೂ ಇದೆ. ಒಂದರಿಂದ ಪರಾರ್ಧ (ಹದಿನೆಂಟನೆಯ ಸ್ಥಾನ) ದವರೆಗಿದೆ. ನಿತ್ಯಪದಾರ್ಥಗಳಲ್ಲಿ ಏಕತ್ವವು ನಿತ್ಯವಾಗಿದೆ. ಅನಿತ್ಯ ಪದಾರ್ಥಗಳಲ್ಲಿ ಅನಿತ್ಯ, ದ್ವಿತ್ವ ಮುಂತಾದ ಸಂಖ್ಯೆಗಳೆಲ್ಲವೂ ಅನಿತ್ಯ. ಅವು ಪದಾರ್ಥಗಳಲ್ಲಿ ಮೂರು ಕ್ಷಣಮಾತ್ರ ಇರುತ್ತವೆ. ಇದು (ಮಡಿಕೆ) ಒಂದು, ಬಟ್ಟೆಯು ಒಂದು, ಎಂಬ ಒಂದು ರೀತಿಯ, ನೋಡುವವನ ಅಪೇಕ್ಷಾ ಬುದ್ಧಿಯಿಂದ ಬಾಹ್ಯವಾದ ಅಸ್ತಿತ್ವವುಳ್ಳ (External objective reality) ದ್ವಿತ್ವವೆಂಬ ಗುಣವು ಹುಟ್ಟುತ್ತದೆ. ಬೌದ್ಧರು ಜ್ಞಾನವಿಶೇಷವೇ ದ್ವಿತ್ವವೆಂದು ಹೇಳುತ್ತಾರೆ. ಆದುದರಿಂದ ಬಾಹ್ಯಾಸ್ತಿತ್ವವುಳ್ಳ ದ್ವಿತ್ವವೆಂಬ ವಸ್ತುವನ್ನು ಬೌದ್ಧವಿರೋಧಿಗಳಾದ ತಾರ್ಕಿಕರು ಸಾಧಿಸುತ್ತಾರೆ.

ಪರಿಮಾಣ :—ನಾಲ್ಕು ವಿಧವಾಗಿದೆ. ಅಣು ಪರಿಮಾಣ, ಮಹತ್‌ಪರಿಮಾಣ, ಹ್ರಸ್ವ ಪರಿಮಾಣ ಮತ್ತು ದೀರ್ಘಪರಿಮಾಣವೆಂಬ ನಾಲ್ಕು ಪರಿಮಾಣಗಳಲ್ಲಿ ಹ್ರಸ್ವಲ್ವ ಅಣುತ್ವಗಳೂ, ಮಹತ್ವ ದೀರ್ಘತ್ವಗಳೂ ಒಟ್ಟಿಗೆ ಇರುತ್ತವೆ. ಪರಿಮಾಣು ದ್ವ್ಯಣುಕಮನಸ್ಸುಗಳಲ್ಲಿ ಅಣುಪರಮಾಣವಿದೆ. ತ್ರಣುಕದಿಂದ ಆರಂಭಿಸಿ ನಮ್ಮ ಅನುಭವಕ್ಕೆ ಬರುವ ವಸ್ತುಗಳಲ್ಲೆಲ್ಲಾ ಆಕಾಶ, ಚಂದ್ರ, ಸೂರ್ಯ ಮುಂತಾದುವುಗಳಲ್ಲಿ ಮಹತ್ಪರಿಮಾಣವಿದೆ. ಆಕಾಶ, ಕಾಲ, ದಿಕ್ ಆತ್ಮರ ಪರಿಮಾಣುವನ್ನು ಪರಮ ಮಹತ್ಪರಿಮಾಣವೆಂದು ಹೇಳುತ್ತಾರೆ.

ಪ್ರತಿಯೊಂದು ಪದಾರ್ಥವೂ ಇನ್ನೊಂದಕ್ಕಿಂತ ಪೃಥಕ್ ಆಗಿ ಕಾಣಿಸುತ್ತದೆ. ಇದನ್ನು ಪೃಥಕ್ತ್ವವೆಂದು ಹೇಳುತ್ತಾರೆ. ಇದು ಅದು ಅಲ್ಲ, (ಕಂಭವು ಶಿಲೆಯಲ್ಲ) ಎಂಬ ಅನುಭವ ಸಿದ್ಧವಾದ ಅನ್ಯೋನ್ಯಾಭಾವವೂ ಪೃಥಕ್ತ್ವವಲ್ಲ. ಅನ್ಯೋನ್ಯಾಭಾವವು ಅಭಾವಾತ್ಮಕ. ಪೃಥಕ್ತ್ವವು ಭಾವಾತ್ಮಕ, ವಿಧಿರೂಪವಾಗಿದೆ.

ಸಂಯೋಗ ವಿಭಾಗಗಳೂ ಎಲ್ಲಾ ದ್ರವ್ಯಗಳಲ್ಲಿರುವ ಗುಣಗಳು. ಆದರೆ ಆಕಾಶ, ಕಾಲ ಮುಂತಾದ ವ್ಯಾಪಕವಾದ (ವಿಭು) ದ್ರವ್ಯಗಳಲ್ಲಿ ಪರಸ್ಪರ ಸಂಯೋಗವಿಲ್ಲ. ವಿಭಾಗವು ಸಂಯೋಗ ಪೂರ್ವಕವಾಗಿಯೇ ಇರುತ್ತದೆ. ಎರಡು ದ್ರವ್ಯಗಳಿಗೆ ಸಂಯೋಗವಾಗದೆ ವಿಭಾಗವಾಗುವುದಿಲ್ಲ.

ಜ್ಞಾನವಿಭಾಗ : ಜ್ಞಾನವು ಅನುಭವ ಮತ್ತು ಸ್ಮೃತಿ ಎಂದು ಎರಡು ವಿಧ. ಅನುಭವವು ಯಥಾರ್ಥ ಮತ್ತು ಅಯಥಾರ್ಥ ಎಂದು ಎರಡು ವಿಧ. ಯಥಾರ್ಥಾನುಭವವು ಪ್ರತ್ಯಕ್ಷ. ಅನುಮಿತಿ, ಉಪಮಿತಿ ಮತ್ತು ಶಾಬ್ದಬೋಧವೆಂದು ನಾಲ್ಕು ವಿಧ. ಇವುಗಳಿಗೆ ಪ್ರತ್ಯಕ್ಷ (ಇಂದ್ರಿಯಗಳು). ಅನುಮಾನ (ವ್ಯಾಪ್ತಿ ಅಂದರೆ ನಿಯಮದ ಜ್ಞಾನ), ಉಪಮಾನ (ಸಾದೃಶ್ಯಜ್ಞಾನ), ಮತ್ತು ಪದಜ್ಞಾನಗಳು ಸಾಧನವಾಗಿರುತ್ತವೆ. ಇಂದ್ರಿಯಕ್ಕೂ ವಸ್ತುವಿಗೂ ಸಂಪರ್ಕ (ಸನ್ನಿಕರ್ಷ)ವಿಲ್ಲದೆ ಕೇವಲ ಸಂಸ್ಕಾರದಿಂದ ಹುಟ್ಟುವ ಜ್ಞಾತವಿಷಯಕ ಜ್ಞಾನ (ತಿಳಿದ ವಸ್ತುವನ್ನು ಪುನಃ ತಿಳಿಯುವುದು)ವು ಸ್ಮೃತಿಯು. 'ಅನಧಿಗತಾರ್ಥಗಂತೃ-ಪ್ರಮಾಣ' ಹೊಸ ವಿಷಯವನ್ನು ತಿಳಿಸುವುದೇ ಪ್ರಮಾಣವೆಂದು ಮೀಮಾಂಸಕರು ಹೇಳುತ್ತಾರೆ. ಆದರೆ ಎದುರಿಗೆ ಇರುವ ಘಟವನ್ನು ನೋಡುತ್ತಲೇ ಇರುವಾಗ ಉಂಟಾಗುವ ಜ್ಞಾನವು ಹೊಸ ವಿಷಯವನ್ನು ಒಳಗೊಳ್ಳದಿರುವುದರಿಂದ ಈ ಲಕ್ಷಣವು ಸರಿಯಲ್ಲ. ಪ್ರತ್ಯಕ್ಷವು ಸಾಕ್ಷಾತ್ಕಾರಿ ಅನುಭವ, ಉಳಿದವುಗಳು ಪರೋಕ್ಷಾನುಭವವಾಗಿರುತ್ತವೆ. ಅನುಮಾನ ಪ್ರಮಾಣವು ತರ್ಕ ಶಾಸ್ತ್ರದ ಮಹತ್ವಪೂರ್ಣವಾದ ಅಂಗವಾಗಿರುತ್ತದೆ. ಉಪಮಾನ ಮತ್ತು ಶಬ್ದಪ್ರಮಾಣಗಳನ್ನು ವೈಶೇಷಿಕರು ಅನುಮಾನದಲ್ಲಿ ಅಂತರ್ಭಾವ ಮಾಡಿದ್ದರೂ, ನೈಯಾಯಿಕರು ಅವೆರಡನ್ನು ಪ್ರತ್ಯೇಕ ಪ್ರಮಾಣವೆಂದು ಸಾಧಿಸಿರುವುದರಿಂದಲೂ, ನವೀನನ್ಯಾಯದ ಗಂಗೇಶನೂ ಅವನ್ನು ಒಪ್ಪಿರುವುದರಿಂದಲೂ ಸಾಮಾನ್ಯವಾಗಿ ತಾರ್ಕಿಕರು ಪ್ರಮಾಣ ಚತುಷ್ಟಯವಾದಿಗಳೆಂದೇ ಪ್ರಸಿದ್ಧಿಯಿದೆ.

ಅಯಥಾರ್ಥಾನುಭವವು ಸಂಶಯ, ವಿಪರ್ಯಯ (ಭ್ರಮೆ) ಮತ್ತು ತರ್ಕವೆಂದು ಮೂರು ವಿಧವಾಗಿದೆ. ಇವುಗಳಲ್ಲಿ ಮೋಟು ಮರವನ್ನು ದೂರದಿಂದ ನೋಡಿದಾಗ ಉಂಟಾಗುವ—'ಇದು ಮೋಟು ಮರವೋ ಮನುಷ್ಯನೋ. (ಸ್ಥಾಣುಃ ಪುರುಷೋ ವಾ) ಎಂಬ ಜ್ಞಾನವು ಸಂಶಯ ಕಪ್ಪೆಯ ಚಿಪ್ಪನ್ನು ನೋಡಿದಾಗ ಉಂಟಾಗುವವು 'ಇದು ಬೆಳ್ಳಿ' ಎಂಬ ಜ್ಞಾನವು ಭ್ರಮ. ಪರ್ವತದಲ್ಲಿ ಹೊಗೆಯನ್ನು ಕಂಡು ಬೆಂಕಿಯಿಂದೆಯೆಂದು ಸಾಧಿಸಿದಾಗ, ಹೊಗೆಯಿರಲಿ. ಬೆಂಕಿ ಇಲ್ಲದೇ ಇರಬಹುದು ಎಂದು ಯಾರಾದರೂ ವಾದಿಸಿದರೆ, ಅಲ್ಲಿ ಬೆಂಕಿ ಇಲ್ಲದಿದ್ದರೆ ಹೊಗೆ ಇರಲಾರದು ಎಂಬ ಆಪಾದನೆಯು ತರ್ಕವೆಂದೂ ಕರೆಯಲ್ಪಡುತ್ತದೆ. (ಯದಿ ವಹ್ನಿಃ ನ ಸ್ಯಾತ್ ತರ್ಹಿ ಧರ್ಮೋಽಪಿ ನ ಸ್ಯಾತ್) ಯಾವುದಾದರೊಂದು ವಸ್ತುವಿನ ವಿಷಯದಲ್ಲಿ ಅನಿಶ್ಚಯಾತ್ಮಕವಾದ ಊಹಾಪೋಹಜ್ಞಾನರೂಪವಾದ್ದರಿಂದ ತರ್ಕವನ್ನು ತಾರ್ಕಿಕರು ಅಯಥಾರ್ಥಾನುಭವದಲ್ಲಿ ಸೇರಿಸಿದ್ದಾರೆ.

ಪ್ರಾಮಾಣ್ಯವಾದ : ಅನಭವದ ಯಥಾರ್ಥತೆಯನ್ನು ಪ್ರಾಮಾಣ್ಯವೆಂದೂ. ಅಯಥಾರ್ಥತೆಯನ್ನು ಅಪ್ರಾಮಾಣ್ಯವೆಂದೂ ಹೇಳುತ್ತಾರೆ. ಶುಕ್ತಿಯನ್ನು (ಕಪ್ಪೆಚಿಪ್ಪನ್ನು) ನೋಡಿ ಇದು ಶುಕ್ತಿಯೆಂಬ ಜ್ಞಾನ ಉಂಟಾದರೆ ಇಲ್ಲಿ ವಿಶೇಷಣವಾಗಿ ತೋರುವ ಶುಕ್ತಿತ್ವವಿದ್ದಲ್ಲಿಯೇ ಅದನ್ನು ಗ್ರಹಿಸಿದ್ದರಿಂದ ಇದು ಯಥಾರ್ಥಾನುಭವ. ಧರ್ಮವು ಇಲ್ಲದಿದ್ದಲ್ಲಿ ಅದನ್ನು ಗ್ರಹಿಸಿದರೆ ಅದು ಅಯಥಾರ್ಥಾನುಭವವಾಗುತ್ತದೆ. ಶುಕ್ತಿಯನ್ನು ನೋಡಿದಾಗ ಉಂಟಾಗುವ 'ಇದು

ರಜತಂ' ಇದು ಬೆಳ್ಳಿ ಎಂಬ ಜ್ಞಾನವು ಅಪ್ರಮಾಣ ಈ ಪ್ರಾಮಾಣ್ಯ ಅಪ್ರಾಮಾಣ್ಯಗಳು ಜ್ಞಾನದ ಜೊತೆಗೆ ಹುಟ್ಟುವುದಿಲ್ಲ. ಮತ್ತು ಜ್ಞಾನದ ಗ್ರಹಣ (ತಿಳುವಳಿಕೆ)ದ ಜತೆಗೇ ತಿಳಿಯಲ್ಪಡುವುದಿಲ್ಲ ಗುಣವಿದ್ದರೆ ಜ್ಞಾನದಲ್ಲಿ ಪ್ರಾಮಾಣ್ಯವು ಹುಟ್ಟುತ್ತದೆ. ದೋಷದಿಂದ ಅಪ್ರಾಮಾಣ್ಯವು ಹುಟ್ಟುತ್ತದೆ. ಜ್ಞಾನವು ಉಂಟಾದ ಮೇಲೆ ನಮ್ಮ ಪ್ರವೃತ್ತಿ (ಪ್ರಯತ್ನ ಮತ್ತು ಕ್ರಿಯೆಗಳು) ಸಫಲವಾದರೆ ಆ ಜ್ಞಾನವು ಪ್ರಮಾಣವೆಂದು ನಿಶ್ಚಿತವಾಗುತ್ತದೆ. ಇದು ನೀರು ಎಂಬ ಜ್ಞಾನ ಉಂಟಾದ ಮೇಲೆ ನಾವು ನೀರಿದ್ದಲ್ಲಿಗೆ ಹೋಗಿ ಕುಡಿದು ಬಾಯಾರಿಕೆಯನ್ನು ಹಿಂಗಿಸಿಕೊಂಡಾಗ ನಮಗೆ ಉಂಟಾದ ಇದು ನೀರು ಎಂಬ ಜ್ಞಾನವು ಪ್ರಮಾಣ–ಯಥಾರ್ಥ ಎಂದು ತಿಳಿದು ಬರುತ್ತದೆ. ಹೀಗೆಯೇ ಅಪ್ರಾಮಾಣ್ಯವನ್ನು ತಿಳಿಯಬೇಕು. ಪ್ರತ್ಯಕ್ಷವು ಎಲ್ಲಾ ಪ್ರಮಾಣಗಳಲ್ಲಿ ಪ್ರಬಲವಾದುದು. ಪ್ರತ್ಯಕ್ಷಸಿದ್ಧವಾದ ವಿಷಯದಲ್ಲಿ ವಿಪರೀತವಾಗಿ ಪ್ರವೃತ್ತವಾದ ಅನುಮಾನ ಪ್ರಮಾಣವು ಬಾಧಿತವಾಗುತ್ತದೆ. ಆದರೆ ತಾರ್ಕಿಕರು ಪ್ರತ್ಯಕ್ಷದಿಂದ ನೋಡಿದ ವಿಷಯವನ್ನು ಅನುಮಾನದಿಂದ ತಿಳಿಯಲು ಪ್ರಯತ್ನಿಸುತ್ತಾರೆ. ಇದು ಕುತೂಹಲಕರವಾದ ವಿಷಯವಾಗಿದೆ. (ಪ್ರತ್ಯಕ್ಷ ಪರಿಕಲಿತಮಪ್ಯರ್ಥಂ ಅನುಮಾನೇನ ಬುಭುತ್ಸಂತೆ ತರ್ಕರಸಿಕಾಃ—ವಾಚಸ್ಪತಿಮಿಶ್ರರು) ಸಿಷಾಧಯಿಷಾ ಅಂದರೆ ಅನುಮಾನದಿಂದ ಈ ವಿಷಯವನ್ನು ತಿಳಿಯಬೇಕು ಎಂಬ ಇಚ್ಛೆಯೇ ಇವಕ್ಕೆ ಕಾರಣ ಸಿಷಾಧಯಿಷಾ ಇಲ್ಲದಿದ್ದರೆ ಪ್ರತ್ಯಕ್ಷದಿಂದ ವಿಷಯ ಸಿದ್ಧಿಯಾದ ಮೇಲೆ ಅನುಮಾನದಿಂದ ಅದನ್ನು ತಿಳಿಯಲು ಯಾರೂ ಪ್ರಯತ್ನಿಸುವುದಿಲ್ಲ. ಆನೆಯನ್ನು ಪ್ರತ್ಯಕ್ಷವಾಗಿ ನೋಡಿದ ಮೇಲೆ ಅದರ ಚೀತ್ಕಾರದಿಂದ ಇದು ಆನೆಯೆಂದು ಯಾರೂ ಅನುಮಾನ ಪ್ರಮಾಣದಿಂದ ತಿಳಿಯಲು ಹೋಗುವುದಿಲ್ಲ. (ನ ಹಿ ಕರಿಣಿ ದೃಷ್ಟೇ ಚೀತ್ಕಾರೇಣ ತಮನುಮಿಮಂತೇ ಅನುಮಾತಾರಃ—ವಾಚಸ್ಪತಿಮಿಶ್ರರು)

ಹೀಗೆ ಜ್ಞಾನದ ಪ್ರಾಮಾಣ್ಯ ಅಪ್ರಾಮಾಣ್ಯಗಳೆರಡೂ ಪರತಃ ಎಂದು ತರ್ಕಸಿದ್ಧಾಂತ. ಪೂರ್ವಮೀಮಾಂಸಕರು ಪ್ರಾಮಾಣ್ಯವು ಸ್ವತಃ, ಅಪ್ರಾಮಾಣ್ಯವು ಪರತಃ ಎಂದೂ; ಬೌದ್ಧರು ಅಪ್ರಾಮಾಣ್ಯವು ಸ್ವತಃ, ಪ್ರಾಮಾಣ್ಯವು ಪರತಃ ಎಂದೂ; ಜೈನರು ಪ್ರಾಮಾಣ್ಯ ಅಪ್ರಾಮಾಣ್ಯ ಎರಡೂ ಸ್ವತಃ ಎಂದೂ ಹೇಳುತ್ತಾರೆ.

ಭ್ರಮವಿಚಾರ :—(ಅನ್ಯಥಾಖ್ಯಾತಿ) ಭ್ರಮದ ವಿಷಯದಲ್ಲಿ ಬೇರೆ ಬೇರೆ ದರ್ಶನಗಳಲ್ಲಿ ಭಿನ್ನ ಭಿನ್ನವಾದ ಸಿದ್ಧಾಂತವಿದೆ. ನ್ಯಾಯವೈಶೇಷಿಕದರ್ಶನಕ್ಕನುಸಾರವಾಗಿ ಶುಕ್ತಿಯಲ್ಲಿ ರಜತವೆಂಬ ಜ್ಞಾನವುಂಟಾದಾಗಶುಕ್ತಿಯಲ್ಲಿ ಇಲ್ಲದೇ ಇರುವ ರಜತತ್ವವೆಂಬ ಧರ್ಮವನ್ನು ಗ್ರಹಿಸಿದ್ದರಿಂದ ಇದು ಭ್ರಮವಾಗಿದೆ. ಇದನ್ನು ವಿಪರೀತಖ್ಯಾತಿ, ಅಥವಾ ಅನ್ಯಥಾಖ್ಯಾತಿ ಎಂದು ಕರೆಯುತ್ತಾರೆ ಇಲ್ಲಿ ಕಾಣಿಸುವ ರಜತವು ಆಪಣದಲ್ಲಿರುವ ರಜತದಲ್ಲಿ ಇದ್ದೇ ಇದೆ. ಈ ವಿಷಯದಲ್ಲಿ ಮತಭೇದಗಳು ಹೀಗಿವೆ. ಯೋಗಾಚಾರಬೌದ್ಧರು ಆಂತರವಾದ ಜ್ಞಾನವೇ ರಜತಾಕಾರದಿಂದ ತೋರುತ್ತದೆ ಎಂದು ಹೇಳುತ್ತಾರೆ. ಇದು ಆತ್ಮಖ್ಯಾತಿ. ಸತ್ತ್ವ, ಅಸತ್ತ್ವ ಸದಸತ್ತ್ವ, ಸದಸದನುಭಯಾತ್ಮಕತ್ವವೆಂಬ ಚತುಷ್ಕೋಟಿ ವಿನಿರ್ಮುಕ್ತವಾದ ಶೂನ್ಯವೇ ರಜತಾ

ಕಾರೇಣ ತೋರುತ್ತದೆ ಎಂದು ಮಾಧ್ಯಮಿಕಬೌದ್ಧರು ಹೇಳುತ್ತಾರೆ. ಇದೇ ಅಸತ್ ಖ್ಯಾತಿ. ಪ್ರಾಭಾಕರ ಮೀಮಾಂಸಕರು ಭ್ರಮವೇ ಇಲ್ಲವೆನ್ನುತ್ತಾರೆ. ಶುಕ್ತಿಯನ್ನು ನೋಡಿ ಇದಂ ರಜತಂ ' ಎಂಬ ಜ್ಞಾನವುಂಟಾದಾಗ–ಅದು ' ಇದಂ ' ಎಂಬ ಅಂಶದಲ್ಲಿ ಗ್ರಹಣಾತ್ಮಕ ಅಂದರೆ ಪ್ರತ್ಯಕ್ಷಾತ್ಮಕಜ್ಞಾನ, ರಜತಾಂಶದಲ್ಲಿ ಸ್ಮರಣಾತ್ಮಕಜ್ಞಾನ. ಸಾಮಾನ್ಯವಾಗಿ ಸ್ಮರಣವು ಅದು ಹಾಗಿತ್ತು ಎಂದು ಉಂಟಾಗುತ್ತದೆ. ಆದರೆ ದೋಷದಿಂದಾಗಿ ತತ್ ಎಂಬ ಅಂಶವು ಹೊರಟು ಹೋಗಿದೆ (ಪ್ರಮುಷಿತವಾಗಿದೆ). ಈ ಎರಡು ಜ್ಞಾನಗಳೂ ಸ್ವರೂಪತಃ ವಿಷಯತಃ ಯಥಾರ್ಥ ವಾದರೂ ಇವೆರಡಕ್ಕೆ ಭೇದಜ್ಞಾನ ಬರದೇ ಇರುವುದರಿಂದ ಶುಕ್ತಿಯನ್ನು ನೋಡಿ ರಜತಾರ್ಥಿಯೂ ಪ್ರವೃತ್ತನಾಗುತ್ತಾನೆ ಹೀಗೆ ಎಲ್ಲಾ ಜ್ಞಾನವೂ ಯಥಾರ್ಥವೆಂಬ ಈ ವಾದವನ್ನು ಅಖ್ಯಾತಿ ವಾದವೆನ್ನುತ್ತಾರೆ. ಶುಕ್ತಿಯಲ್ಲಿ ಕಾಣುವ ರಜತವು 'ಸತ್' ಅಲ್ಲ. ಏಕೆಂದರೆ ಸತ್ ಪದಾರ್ಥಕ್ಕೆ ಬಾಧವಿಲ್ಲ. ಅದು 'ಅಸತ್' ಅಲ್ಲ. ಏಕೆಂದರೆ 'ಅಸತ್' ಪದಾರ್ಥಕ್ಕೆ ಪ್ರತೀತಿಯಿಲ್ಲ. ಸದಸತ್ತ್ವವು ವಿರುದ್ಧವಾದುದರಿಂದ ಆ ರಜತವು ಸದಸದ್ವಿಲಕ್ಷಣ. ಅನಿರ್ವಾಚ್ಯವೆಂದು (ಅದ್ವೈತ) ವೇದಾಂತಿಗಳು ಹೇಳುತ್ತಾರೆ. (ಆತ್ಮಖ್ಯಾತಿರಸತ್‌ಖ್ಯಾತಿರಖ್ಯಾತಿಃ ಖ್ಯಾತಿರನ್ಯಥಾ । ತಥಾ ನಿರ್ವಚನೀಯಖ್ಯಾತಿರಿತ್ಯೇತತ್ ಖ್ಯಾತಿಪಂಚಕಂ)

ಪ್ರಮಾಣಗಳ ವಿಚಾರ :— ಪ್ರಮಾಣಗಳು ಎಷ್ಟು ಎಂಬ ವಿಚಾರದಲ್ಲಿ ದರ್ಶನಕಾರರಲ್ಲಿ ಮತಭೇದವಿದೆ. ಚಾರ್ವಾಕರು ಪ್ರತ್ಯಕ್ಷ ಒಂದೇ ಪ್ರಮಾಣವೆಂದೂ, ಬೌದ್ಧ ಮತ್ತು ವೈಶೇಷಿಕರು ಪ್ರತ್ಯಕ್ಷ ಅನುಮಾನ ಇವೆರಡೇ ಪ್ರಮಾಣವೆಂದೂ, ಸಾಂಖ್ಯರು ಪ್ರತ್ಯಕ್ಷ ಅನುಮಾನ ಮತ್ತು ಶಬ್ದ ಈ ಮೂರೇ ಪ್ರಮಾಣಗಳೆಂದೂ, ನೈಯಾಯಿಕರು ಪ್ರತ್ಯಕ್ಷ ಅನುಮಾನ ಉಪಮಾನ ಶಬ್ದಗಳೆಂದು ನಾಲ್ಕು ಪ್ರಮಾಣಗಳೆಂದೂ ಒಪ್ಪುತ್ತಾರೆ. ಪ್ರಭಾಕರರು ಅರ್ಥಾಪತ್ತಿಯನ್ನು ಸೇರಿಸಿ ೫ ಪ್ರಮಾಣಗಳೆಂದೂ, ಭಾಟ್ಟರು ಅಭಾವ (ಅನುಪಲಬ್ಧಿ) ಪ್ರಮಾಣವನ್ನು ಸೇರಿಸಿ ೬ ಪ್ರಮಾಣಗಳೆಂದೂ, ಪೌರಾಣಿಕರು ಸಂಭವ ಐತಿಹ್ಯಗಳನ್ನು ಸೇರಿಸಿ ಎಂಟು ಪ್ರಮಾಣಗಳೆಂದೂ ಹೇಳುತ್ತಾರೆ. ನ್ಯಾಯ ಮತ್ತು ವೈಶೇಷಿಕ ಮತಗಳಲ್ಲಿ ಪ್ರಮಾಣ ಸಂಖ್ಯೆಯ ವಿಷಯದಲ್ಲಿ ಮತಭೇದವಿದ್ದರೂ ಸಮ್ಮಿಲಿತ ಸಂಪ್ರದಾಯದಲ್ಲಿ ನಾಲ್ಕು ಪ್ರಮಾಣ ಗಳನ್ನು ಒಪ್ಪುತ್ತಾರೆ. ಪ್ರಮಾ, ಪ್ರಮಿತಿ ಎಂದರೆ ಯಥಾರ್ಥಜ್ಞಾನ; ಇದರ ಸಾಧನವೇ ಪ್ರಮಾಣ. ಈ ನಾಲ್ಕು ಪ್ರಮಾಣಗಳಿಗೂ ಬಾಹ್ಯಾರ್ಥವಾದ (Realism) ಸ್ಥಾಪನೆಗೂ ವಿಶೇಷವಾದ ಸಂಬಂಧವಿದೆ. ಇವುಗಳಲ್ಲಿ ತರ್ಕಶಾಸ್ತ್ರದಲ್ಲಿ ಅನುಮಾನಕ್ಕೆ ಹೆಚ್ಚು ಪ್ರಾಧಾನ್ಯ ವಿರುವುದರಿಂದ ಅದನ್ನು ವಿಚಾರಿಸೋಣ.

ಅನುಮಾನ :— ಪರ್ವತದಲ್ಲಿ ಹೊಗೆಯನ್ನು ನೋಡಿದಾಗ ಬೆಂಕಿಯ ಜ್ಞಾನವುಂಟಾಗು ತ್ತದೆ. ಇದೇ ಅನುಮಿತಿ ಧೂಮಜ್ಞಾನವೇ ಅನುಮಾನಪ್ರಮಾಣ. ಪರ್ವತದ ಧೂಮವನ್ನು ನೋಡಿದಾಗ ನಮಗೆ ಎಲ್ಲೆಲ್ಲಿ ಧೂಮವಿದೆಯೋ ಅಲ್ಲೆಲ್ಲಾ ಬೆಂಕಿಯಿದೆ, ಎಂಬ ನಿಯತ ಸಾಹಚರ್ಯ (ವ್ಯಾಪ್ತಿ)ದ, ಸ್ಮರಣೆಯುಂಟಾಗುತ್ತದೆ. ಅದರ ನಂತರ ಈ ವ್ಯಾಪ್ತಿಯಿಂದ

ಕೂಡಿದ ಧೂಮವು ಪರ್ವತದಲ್ಲಿದೆ ಎಂಬ ಜ್ಞಾನ (ಪರಾಮರ್ಶ) ದಿಂದ ಪರ್ವತದಲ್ಲಿ ಬೆಂಕಿ ಇದೆ ಎಂಬ ಅನುಮಿತಿಯುಂಟಾಗುತ್ತದೆ. ಹೀಗೆ ತನಗೆ ಜ್ಞಾನವುಂಟಾದಾಗ ಅದನ್ನು ಸ್ವಾರ್ಥಾನುಮಾನವೆಂದು ಹೇಳುತ್ತಾರೆ. ಇನ್ನೊಬ್ಬನಿಗೆ ಇವನ್ನು ತಿಳಿಸಿಕೊಡುವಾಗ ನಾವು ಪ್ರಯೋಗ ಮಾಡುವ ವಾಕ್ಯಸಮುದಾಯವನ್ನು ಪರಾರ್ಥಾನುಮಾನವೆನ್ನುತ್ತಾರೆ. ಈ ಪರಾರ್ಥಾನುಮಾನಕ್ಕೆ ಐದು ಅವಯವಗಳಿವೆ.

೧) ಪ್ರತಿಜ್ಞಾ : ಪರ್ವತವು ಬೆಂಕಿಯುಳ್ಳದ್ದು

೨) ಹೇತುಃ ಧೂಮವು ಇರುವುದರಿಂದ

೩) ಉದಾಹರಣ : ಎಲ್ಲೆಲ್ಲಿ ಧೂಮವಿದೆಯೋ ಅಲ್ಲೆಲ್ಲಾ ಬೆಂಕಿ ಇದೆ, ಅಡಿಗೆ ಮನೆಯಂತೆ.

೪) ಉಪನಯ : ಈ ಪರ್ವವೂ ವಹ್ನಿವ್ಯಾಪ್ತವಾದ ಧೂಮವುಳ್ಳದ್ದು.

೫) ನಿಗಮನ : ಆದ ರಿಂದ ಈ ಪರ್ವತವೂ ವಹ್ನಿವುಳ್ಳದ್ದಾಗಿದೆ.

ಪಾಶ್ಚಾತ್ಯ ತರ್ಕಶಾಸ್ತ್ರದಲ್ಲಿ (Logic) ಅನುಮಾನಕ್ಕೆ ಮೂರು ಅವಯವಗಳನ್ನು ಹೇಳಲಾಗಿದೆ. 1) Major premise (ಪ್ರತಿಜ್ಞೆ) ಎಲ್ಲಾ ಮನುಷ್ಯರೂ ಮರಣವುಳ್ಳವರು. (ಇಂತಹವನಂತೆ) 2) Minor premise (ಉಪನಯ) ಸ್ಸಾಕಟೀಸನೂ ಮನುಷ್ಯ 3) ಪರಿಣಾಮ (ಉಪಸಂಹಾರ–ನಿಗಮನ (Conclusion) ಆದ್ದರಿಂದ ಸಾಕ್ರಟೀಸನೂ ಮರಣವುಳ್ಳವನು.

ಉಪಮಾನ : ಗವಯ (ಚಮರೀಮೃಗದ ಜಾತಿಯ ಒಂದು ಪ್ರಾಣಿ) ವನ್ನು ನೋಡದಿದ್ದ ಮನುಷ್ಯನು–ಗೋವಿನಂತೆ ಗವಯವಿದೆ ಎಂದು ಹೇಳಿ ಕಾಡಿಗೆ ಹೋಗಿ ಅಂತಹ ಪ್ರಾಣಿಯನ್ನು ನೋಡುತ್ತಾನೆ ಆಗ ಅವನಿಗೆ ಇದನ್ನು (ಈತರಹದ ಪ್ರಾಣಿಯನ್ನೆಲ್ಲಾ) ಗವಯವೆಂದ. ಹೇಳುತ್ತಾರೆ–ಅಯಂ ಗವಯಪದವಾಚ್ಯಃ, ಗವಯಃ ಗವಯಪದವಾಚ್ಯಃ) ಇದೇ ಉಪಮಾನ ಪ್ರಮಾಣ ಮತ್ತು ಉಪಮಿತಿಯು.

ಶಬ್ದಪ್ರಮಾಣ :—ಆಪ್ತನಾದ ಪುರುಷನಿಂದ ಒಂದು ವಾಕ್ಯವನ್ನು ಕೇಳಿದಾಗ ಅದರಿಂದ ಉಂಟಾಗುವ ಯಥಾರ್ಥಾನುಭವವನ್ನು ಶಾಬ್ದಬೋಧ, ಶಾಬ್ದಪ್ರಮಾ ಎಂದು ಕರೆಯುತ್ತಾರೆ. ಇದಕ್ಕೆ ಕಾರಣವಾದ ವಾಕ್ಯಜ್ಞಾನವನ್ನು(ಪದಜ್ಞಾನವನ್ನು)ಶಬ್ದಪ್ರಮಾಣವೆಂದು ಕರೆಯುತ್ತಾರೆ.

ಪ್ರತ್ಯಕ್ಷಪ್ರಮಾಣ :—ಗೋತಮರು–ಯಾವ ಜ್ಞಾನವು ಇಂದ್ರಿಯ ಮತ್ತು ಅರ್ಥ (ವಸ್ತು) ಗಳ ಸನ್ನಿಕರ್ಷ (ಸಂಬಂಧ) ದಿಂದ ಹುಟ್ಟುತ್ತದೆಯೋ ಭ್ರಮವಲ್ಲದ, ಅಂತಹ ಜ್ಞಾನವೇ ಪ್ರತ್ಯಕ್ಷ. ಅದು ಎರಡು ವಿಧ—ಶಬ್ದಪ್ರಯೋಗವಿಲ್ಲದ ನಿರ್ವಿಕಲ್ಪಕ ಮತ್ತು ಶಬ್ದಪ್ರಯೋಗಾರ್ಹವಾದ ಸವಿಕಲ್ಪಕ (ವ್ಯವಸಾಯ) ಎಂದು. 'ಇಂದ್ರಿಯಾರ್ಥಸನ್ನಿಕರ್ಷೋತ್ಪನ್ನಂ ಜ್ಞಾನಮ

ವ್ಯಪದೇಶ್ಯಂ ಅವ್ಯಭಿಚಾರಿ ವ್ಯವಸಾಯಾತ್ಮಕಂ ಪ್ರತ್ಯಕ್ಷಂ. (ನ್ಯಾ ಸೂ ೧-೧-೪). ನವೀನ ನೈಯಾಯಿಕರು 'ಇಂದ್ರಿಯಾರ್ಥಸನ್ನಿಕರ್ಷಜನ್ಯಂ ಜ್ಞಾನಂ ಪ್ರತ್ಯಕ್ಷಂ, ಎಂದು ಪ್ರತ್ಯಕ್ಷಲಕ್ಷಣ ವನ್ನು ಹೇಳಿರುತ್ತಾರೆ. ಗಂಗೇಶನು ಜ್ಞಾನಾಕರಣಕಂ ಜ್ಞಾನಂ ಪ್ರತ್ಯಕ್ಷಂ. ಯಾವ ಜ್ಞಾನಕ್ಕೆ ಮತ್ತೊಂದು ಜ್ಞಾನವು ಕರಣವಲ್ಲವೋ ಅದೇ ಪ್ರತ್ಯಕ್ಷವೆಂದು ಹೇಳಿದ್ದಾನೆ. ಅನುಮಿತಿಗೆ ವ್ಯಾಪ್ತಿಜ್ಞಾನವೂ, ಉಪಮಿತಿಗೆ ಸಾದೃಶ್ಯ ಜ್ಞಾನವೂ, ಶಾಬ್ದಬೋಧಕ್ಕೆ ಪದಜ್ಞಾನವೂ ಸ್ಮೃತಿಗೆ ಅನುಭವವೂ ಕಾರಣಗಳಾಗಿವೆ. ಇದು ಘಟ ಇತ್ಯಾದಿ ಪ್ರತ್ಯಕ್ಷಜ್ಞಾನಕ್ಕೆ ಕಣ್ಣು ಮುಂತಾದ ಇಂದ್ರಿಯಗಳು ಕಾರಣ. ಇವು ಜ್ಞಾನರೂಪವಲ್ಲ.

ಪ್ರತ್ಯಕ್ಷಭೇದ :— ಸವಿಕಲ್ಪಕ ಮತ್ತು ನಿರ್ವಿಕಲ್ಪಕವೆಂದು ಪ್ರತ್ಯಕ್ಷವು ಎರಡು ವಿಧ. ಇದು ಮಡಿಕೆ (ಅಯಂ ಘಟ) ಎಂಬ ಜ್ಞಾನವು ಸವಿಕಲ್ಪಕ. ಒಂದು ಉದ್ದೇಶ್ಯ ಮತ್ತು ವಿಧೇಯು ದಿಂದ ಕೂಡಿದ ಜ್ಞಾನವು ಸವಿಕಲ್ಪಕ. 'ಇದು ಘಟ, ಎಂಬ ಜ್ಞಾನದಲ್ಲಿ ಇದು ಈ ವಸ್ತುವು ಉದ್ದೇಶ್ಯ. ಘಟತ್ವ ಜಾತಿಯು ವಿಧೇಯು (ವಿಶೇಷಣ) ವಿಶೇಷ್ಯ ; ವಿಶೇಷಣ ಮತ್ತು ಅವುಗಳ ಸಂಬಂಧವನ್ನು ಒಳಗೊಂಡ ಜ್ಞಾನವನ್ನೇ ಸಪ್ರಕಾರಕ ಜ್ಞಾನ (ಸವಿಕಲ್ಪಕಜ್ಞಾನ) ಎಂದು ಹೇಳುತ್ತಾರೆ.

ಇಂತಹ ಸವಿಕಲ್ಪಕ ಜ್ಞಾನಕ್ಕಿಂತ ಮೊದಲು ನಿರ್ವಿಲಕ್ಪಕ ಜ್ಞಾನವು ಆವಶ್ಯಕ. ಸವಿಕ ಕಲ್ಪಕಜ್ಞಾನವು ವಿಶೇಷಣ ವಿಶೇಷ್ಯ ಮತ್ತು ಅವುಗಳ ಸಂಬಂಧವನ್ನು ವಿಷಯೀಕರಿಸುವುದರಿಂದ ಅದಕ್ಕಿಂತ ಮೊದಲು ವಿಶೇಷಣ. ವಿಶೇಷ್ಯ ಮತ್ತು ಅವುಗಳ ಸಂಬಂಧದ ಸ್ವರೂಪಜ್ಞಾನವು ಆವಶ್ಯಕ ಅಯಂ ದಂಡೀ ಪುರುಷಃ ಇವನು ದಂಡವುಳ್ಳ ಮನುಷ್ಯನು ಎಂಬ ಜ್ಞಾನಕ್ಕಿಂತ ಪೂರ್ವದಲ್ಲಿ ದಂಡ ಮತ್ತು ಪುರುಷರ ಜ್ಞಾನವು ಆವಶ್ಯಕವಾಗಿರುವಂತೆ. ಅಯಂ ಘಟಃ ಎಂಬ ಜ್ಞಾನಕ್ಕಿಂತ ಪೂರ್ವದಲ್ಲಿ ಘಟ, ಘಟತ್ವಗಳ ಪ್ರತ್ಯೇಕವಾದ ವಿಶಕಲಿತ ಜ್ಞಾನವು ಅವಶ್ಯಕ. ಆದರೆ ಅವೆರಡರ ವಿಶೇಷಣವಿಶೇಷ್ಯಭಾವಜ್ಞಾನವಿರಬಾರದು. ಇಂತಹ ತುರೀಯ ವಿಷಯತೆ ಯುಳ್ಳ ಜ್ಞಾನವನ್ನು ನಿರ್ವಿಕಲ್ಪಕವೆಂದು ಹೇಳುತ್ತಾರೆ.

ಈ ನಿರ್ವಿಕಲ್ಪಕ ಪ್ರತ್ಯಕ್ಷವು ಅತೀಂದ್ರಿಯವಾಗಿರುತ್ತದೆ. ಅಂದರೆ ಈ ನಿರ್ವಿಕಲ್ಪಕ ಪ್ರತ್ಯಕ್ಷದ ಅನುವ್ಯವಸಾಯ (ಮಾನಸಪ್ರತ್ಯಕ್ಷವು) ಬರುವುದಿಲ್ಲ. ನ್ಯಾಯ ವೈಶೇಷಿಕ ಸಿದ್ಧಾಂತದಂತೆ (೧) ಮೊದಲು ನಮಗೆ ನಿರ್ವಿಕಲ್ಪಕಜ್ಞಾನವುಂಟಾಗುತ್ತದೆ. ಆ ಜ್ಞಾನವು—'ಇದಂ ಕಿಂಚಿತ್' ಎಂಬುದಾಗಿ ಬಾಲಮೂಕಾದಿ ವಿಜ್ಞಾನಕ್ಕೆ ಸದೃಶವಾಗಿರುತ್ತದೆ. ಅದರಲ್ಲಿ ವಿಶೇಷಣ, ವಿಶೇಷ್ಯ, ಸಂಸರ್ಗ ಇವು ಮೂರು ವಿಶೇಷಣತ್ವ ವಿಶೇಷ್ಯತ್ವ ಸಂಸರ್ಗತ್ವ ಎಂಬ ಧರ್ಮದಿಂದ ತೋರುವುದಿಲ್ಲ. ಇವುಗಳಿಗಿಂತ ಅತಿರಿಕ್ತವಾದ ನಾಲ್ಕನೆಯ ವಿಷ ಯತಾ ಸಹಿತವಾಗಿ ಕಾಣಿಸುತ್ತವೆ. (೨) ಇದರ ಅನಂತರ ಇದು ಘಟ (ಅಯಂ ಘಟಃ) ಎಂಬ ಸವಿಕಲ್ಪಕ ಜ್ಞಾನ ಉಂಟಾಗುತ್ತದೆ. ಇದರಲ್ಲಿ ಘಟಘಟತ್ವಗಳಿಗೆ ವಿಶೇಷಣ ವಿಶೇಷ್ಯ ಭಾವವು ತೋರುತ್ತದೆ. (೩) ಅದರ ನಂತರ ನಮಗೆ ಸವಿಕಲ್ಪಕ ಜ್ಞಾನ ಉಂಟಾಗುತ್ತದೆ.

ಇವನ್ನೇ ಮಾನಸಪ್ರತ್ಯಕ್ಷ ಅಥವಾ ಅನುವ್ಯವಸಾಯವೆಂದು ಕರೆಯುತ್ತಾರೆ. 'ಘಟಮಹಂ ಜಾನಾಮಿ' ನಾನು ಘಟವನ್ನು ತಿಳಿಯುತ್ತೇನೆ ಎಂದು ಅದರ ಆಕಾರವಿರುತ್ತದೆ.

ಪ್ರತ್ಯಕ್ಷಕ್ಕೆ ಸನ್ನಿಕರ್ಷಗಳು :—ಇಂದ್ರಿಯಗಳು ವಸ್ತುವನ್ನು ತಲುಪಿ ಜ್ಞಾನವನ್ನುಂಟು ಮಾಡುತ್ತವೆ ಎಂಬುದು ನ್ಯಾಯವೈಶೇಷಿಕ ಸಿದ್ಧಾಂತಃ (ಇಂದ್ರಿಯಾಣಾಂ ವಸ್ತುಪ್ರಾಪ್ಯ ಪ್ರಕಾಶಕಾರಿತ್ವನಿಯಮಃ) ಕಣ್ಣು-ತನ್ನ ಕಿರಣಗಳ ಮೂಲಕ ಘಟವಿರುವ ಪ್ರದೇಶವನ್ನು ತಲುಪಿ ಅದರ ಪ್ರತ್ಯಕ್ಷವನ್ನುಂಟುಮಾಡುತ್ತದೆ. ಘ್ರಾಣ ಮುಂತಾದ ಇಂದ್ರಿಯಗಳೂ ತಮ್ಮ ಹತ್ತಿರಕ್ಕೆ ಬಂದ ಗಂಧ ಮುಂತಾದ ವಿಷಯಗಳನ್ನು ತಲುಪಿ ಅವುಗಳ ಜ್ಞಾನವನ್ನು ಉಂಟುಮಾಡಿಕೊಡುತ್ತವೆ. ಹೀಗೆ ಒಂದು ಘಟವನ್ನು ನಾವು ನೋಡುವಾಗ ಆ ಘಟ, ಅದರ ಗುಣ, ಅದರ ಕರ್ಮ, ಘಟತ್ವ ಜಾತಿ. ರೂಪಾದಿಗುಣದಲ್ಲಿರುವ ರೂಪತ್ವಜಾತಿ ಮುಂತಾದವುಗಳ ಪ್ರತ್ಯಕ್ಷವೂ ಬರುತ್ತದೆ. ಕಣ್ಣಿನಿಂದ ಘಟದ ಪ್ರತ್ಯಕ್ಷ ಬರುವಾಗ 'ಸಂಯೋಗ ವೆಂಬ ಸಂಬಂಧವನ್ನು ಘಟ ಮತ್ತು ಚಕ್ಷುಸ್ಸುಗಳಿಗೆ ಹೇಳುತ್ತೇವೆ. ಘಟದ ಗುಣ, ಕರ್ಮ, ಘಟತ್ವಜಾತಿಯ ಪ್ರತ್ಯಕ್ಷಕ್ಕೆ ಸಂಯುಕ್ತ (ಘಟ) ಸಮವಾಯವು ಸನ್ನಿಕರ್ಷ, ಘಟದಲ್ಲಿರುವ ರೂಪಸ್ಪರ್ಶಾದಿಗಳಲ್ಲಿರುವ ರೂಪತ್ವಸ್ಪರ್ಶತ್ವಾದಿ ಜಾತಿ ಪ್ರತ್ಯಕ್ಷಕ್ಕೆ ಸಂಯುಕ್ತ ಸಮವೇತಸಮ ವಾಯವೇ ಸನ್ನಿಕರ್ಷವು. ಇಂದ್ರಿಯ ಸಂಯುಕ್ತ ಘಟ. ಅಲ್ಲಿ ಸಮವೇತ ಅಂದರೆ ಸಮವಾಯ ಸಂಬಂಧದಿಂದ ಇರುವ ವಸ್ತುರೂಪಾದಿಗಳು. ಅಲ್ಲಿ ಸಮವಾಯ ಸಂಬಂಧದಿಂದ ಇರತಕ್ಕ ವಸ್ತುವು ಜಾತಿ. ಶ್ರೋತ್ರದಿಂದ ಶಬ್ದಸಾಕ್ಷಾತ್ಕಾರಕ್ಕೆ ಸಮವಾಯ ಸನ್ನಿಕರ್ಷ. ಕರ್ಣಶಷ್ಕುಲಿ (ಚಕ್ಕುಲಿಯ ಆಕಾರದ ಶ್ರೋತ್ರೇಂದ್ರಿಯಗೋಳಕ) ಯಿಂದ ಅವಚ್ಛಿನ್ನವಾದ ಆಕಾಶವೇ ಶ್ರೋತ್ರ. ಅಲ್ಲಿ ಸಮವಾಯಸಂಬಂಧದಿಂದ ಶಬ್ದವಿದೆ ಆದ್ದರಿಂದ ಇಲ್ಲಿ ಸಮವಾಯವೇ ಸನ್ನಿಕರ್ಷವು. ಶಬ್ದದಲ್ಲಿರುವ ಶಬ್ದತ್ವಾದಿ ಜಾತಿ ಪ್ರತ್ಯಕ್ಷಕ್ಕೆ ಸಮವೇತ ಸಮವಾಯವೇ ಸನ್ನಿಕರ್ಷವು. ಇಲ್ಲಿ ಶ್ರೋತ್ರಸಮವೇತ ಶಬ್ದದ ರೂಪಸಮವಾಯವಾನ್ ಘಟಃ ರೂಪದ ಸಮವಾಯವುಳ್ಳದ್ದು ಘಟ ಎಂಬಲ್ಲಿಯೂ, ಭೂತಲಂ ಘಟಾಭಾವವತ್-ಭೂತಲವು ಘಟಾ ಭಾವವುಳ್ಳದ್ದು ಎಂಬಲ್ಲಿಯೂ ವಿಶೇಷಣವಿಶೇಷ್ಯಭಾವವೇ ಸನ್ನಿಕರ್ಷ. ಇಲ್ಲಿ ಚಕ್ಷುಸ್ಸಂಯುಕ್ತವಾದ ಭೂತಲದಲ್ಲಿ ಘಟಾಭಾವವು ವಿಶೇಷಣವಾದ್ದರಿಂದ ಚಕ್ಷುಸ್ಸಂಯುಕ್ತ ವಿಶೇಷಣತಾ ಸನ್ನಿಕರ್ಷ ವಿದೆ. ಹೀಗೆ (೧) ಸಂಯೋಗ (೨) ಸಂಯುಕ್ತಸಮವಾಯ (೩) ಸಂಯುಕ್ತಸಮವೇತ ಸಮವಾಯ, (೪) ಸಮವಾಯ (೫) ಸಮವೇತಸಮವಾಯ (೬) ಸಂಯುಕ್ತ ವಿಶೇಷ ಣತಾ-ಇತ್ಯಾದಿ —ಒಟ್ಟು ೬ ಸನ್ನಿಕರ್ಷಗಳು.

ಅಲೌಕಿಕ ಪ್ರತ್ಯಕ್ಷ :—ಮೇಲೆ ಹೇಳಿದ ಪ್ರತ್ಯಕ್ಷವೆಲ್ಲವೂ ಲೌಕಿಕ ಪ್ರತ್ಯಕ್ಷವೆಂದು ತಿಳಿಯಬೇಕು ಇಂದ್ರಿಯಕ್ಕೂ ವಸ್ತುವಿಗೂ ಲೌಕಿಕವಾದ ಸನ್ನಿಕರ್ಷದಿಂದ ಈ ಪ್ರತ್ಯಕ್ಷ ಗಳು ಉಂಟಾಗುತ್ತವೆ. ಲೌಕಿಕಪ್ರತ್ಯಕ್ಷವಲ್ಲದೆ ಮೂರು ವಿಧವಾದ ಅಲೌಕಿಕ ಪ್ರತ್ಯಕ್ಷ ಗಳನ್ನೂ, ಅವುಗಳಿಗಾಗಿ ಮೂರು ವಿಧವಾದ ಅಲೌಕಿಕಸನ್ನಿಕರ್ಷಗಳನ್ನೂ ಒಪ್ಪಲಾಗಿದೆ.

(೧) ಯೋಗಜಸನ್ನಿಕರ್ಷ, (೨) ಸಾಮಾನ್ಯಲಕ್ಷಣಾಸನ್ನಿಕರ್ಷ, (೩) ಜ್ಞಾನಲಕ್ಷಣಾಸನ್ನಿಕರ್ಷ ಎಂಬ ಈ ಮೂರು ಸನ್ನಿಕರ್ಷಗಳಲ್ಲಿ ಯೋಗಜಸನ್ನಿಕರ್ಷವು ಯೋಗಿಗಳಿಗೆ ಮಾತ್ರವೇ ಉಂಟಾಗುತ್ತದೆ. ಯೋಗದಿಂದ ಸಂಪಾದಿಸಿದ ಧರ್ಮ ವಿಶೇಷದಿಂದ ಭೂತ, ಭವಿಷ್ಯತ್ ಮತ್ತು ವ್ಯವಹಿತ, ದೂರದೇಶ ಸ್ಥಿತವಾದ ಪದಾರ್ಥಗಳ ಸಾಕ್ಷಾತ್ಕಾರಬರುತ್ತದೆ ಎಂದು ತಾರ್ಕಿಕರು ಒಪ್ಪುತ್ತಾರೆ. ಯೋಗಿಗಳ ಶಕ್ತಿಯನ್ನೂ ವೈದಿಕದಾರ್ಶನಿಕರು ಮಾತ್ರವೇ ಅಲ್ಲ ಬೌದ್ಧದಾರ್ಶನಿಕರೂ ಒಪ್ಪುತ್ತಾರೆ. ಇನ್ನುಳಿದ ಎರಡು ಅಲೌಕಿಕ ಸನ್ನಿಕರ್ಷಗಳು ಸಾಮಾನ್ಯ ವ್ಯಕ್ತಿಗೂ ಉಂಟಾಗುತ್ತವೆ. ಧೂಮವನ್ನು ನೋಡಿ ವಹ್ನಿಯನ್ನು ತಿಳಿಯಲು ಧೂಮವಿದ್ದ ಲ್ಲೆಲ್ಲಾ ವಹ್ನಿ ಇದೆ. ಎಂಬ ವ್ಯಾಪ್ತಿಜ್ಞಾನವು ಆವಶ್ಯಕ. ಎಲ್ಲಾ ದೇಶಕಾಲಗಳಲ್ಲಿರುವ ಧೂಮವಹ್ನಿ ವ್ಯಕ್ತಿಗಳ ಸಾಹಚರ್ಯ ಜ್ಞಾನವು ಸಾಧಾರಣವಾದ ಲೌಕಿಕ ಪ್ರತ್ಯಕ್ಷ ಸಾಮಗ್ರಿ ಯಿಂದ ಸಾಧ್ಯವಿಲ್ಲ. ಇದಕ್ಕಾಗಿ ಧೂಮವನ್ನು ನೋಡಿದಾಗ ಅಲ್ಲಿರುವ ಧೂಮತ್ವಜ್ಞಾನದಿಂದ ಎಲ್ಲಾ ಧೂಮಗಳ ಪ್ರತ್ಯಕ್ಷವೂ ಬಂದಿರುತ್ತದೆ ಅದರಿಂದ ಎಲ್ಲಾ ಧೂಮಗಳಲ್ಲಿಯೂ ವಹಿ ವ್ಯಾಪ್ತಿಜ್ಞಾನವೂ ಬರಲು ಸಾಧ್ಯವಾಗುತ್ತದೆ ಎಂದು ಒಪ್ಪಲಾಗಿದೆ. ಒಂದು ಭೂತಲವು ಘಟವುಳ್ಳದ್ದು ಎಂಬ ಜ್ಞಾನ ಬಂದಾಗ ಘಟವುಳ್ಳ ಎಲ್ಲಾ ಭೂತಲಗಳ ಜ್ಞಾನವು ಸಾಧಾರಣ ವಾಗಿ ಬರುತ್ತದೆ. ಇದೂ ಒಂದು ಸಾಮಾನ್ಯ ಲಕ್ಷಣಾ ಸನ್ನಿಕರ್ಷದಿಂದ ಉಂಟಾಗುವ ಜ್ಞಾನ.

ದೇವದತ್ತನೆಂಬ ಒಬ್ಬ ವ್ಯಕ್ತಿಯನ್ನು ನೋಡಿದಾಗ ನಮಗೆ 'ನಾನು ಹಿಂದೆ ನೋಡಿದ ದೇವದತ್ತನೇ ಇವನು (ಸೋಽಯಂ ದೇವದತ್ತಃ) ಎಂಬ ಜ್ಞಾನವು ಉಂಟಾಗುತ್ತದೆ. ಅಥವಾ ದೂರದಿಂದ ಗಂಧದ ಮರದ ಕಟ್ಟಿಗೆಯನ್ನು ಕಂಡಾಗ ಈ ಚಂದನಖಂಡವು ಸುವಾಸನೆಯುಳ್ಳದ್ದು (ಸುರಭಿ ಚಂದನಖಂಡಃ) ಎಂಬ ಜ್ಞಾನವು ಬರುತ್ತದೆ. ಇಲ್ಲಿ ಹಿಂದೆ ನೋಡಲ್ಪಟ್ಟವನು, ಸುಗಂಧವುಳ್ಳದ್ದು ಎಂಬ ಅಂಶದಲ್ಲಿ ಈ ಜ್ಞಾನವು ಸ್ಮರಣಾತ್ಮಕ–ಉಳಿದ ಅಂಶದಲ್ಲಿ ಪ್ರತ್ಯಕ್ಷಾತ್ಮಕ. ಆದ್ದರಿಂದ ಇದು ಶುದ್ಧ ನಿರ್ವಿಕಲ್ಪಕ ಪ್ರತ್ಯಕ್ಷವಲ್ಲ ಎಂಬ ಬೌದ್ಧರ ಆಕ್ಷೇಪಖಂಡನೆಗಾಗಿ ತಾರ್ಕಿಕರು ಇಲ್ಲಿ ಪೂರ್ವದೇಶಕಾಲಸಂಬಂಧವಿಷಯಕ ಜ್ಞಾನ, ಸೌರಭಸ್ಮರಣೆಗಳನ್ನೂ ಸನ್ನಿಕರ್ಷವೆಂದೇ ಒಪ್ಪಿ ಈ ಎರಡು ಜ್ಞಾನಗಳೂ ಚಾಕ್ಷುಷಪ್ರತ್ಯಕ್ಷ ಗಳೆಂದೇ ಒಪ್ಪಿರುತ್ತಾರೆ. ಇಲ್ಲಿ ಸ್ಮರಣ ಗ್ರಹಣ ರೂಪವಾದ ಎರಡು ಜ್ಞಾನಗಳನ್ನೂ ಒಪ್ಪಿದರೆ, ಭಿನ್ನಭಿನ್ನಕ್ಷಣ ವರ್ತಿಗಳಾದ ಆ ಎರಡು ಜ್ಞಾನಗಳ ವಿಷಯಗಳೂ ಬೇರೆ ಯಾಗುತ್ತವೆ. ಹಾಗೂ ವಸ್ತುವಿನ ಸ್ಥಿರತೆಯು ಸಿದ್ಧಿಸುವುದಿಲ್ಲ. ಇದಕ್ಕಾಗಿಯೇ ತಾರ್ಕಿಕರು ಹಿಂದೆ ನೋಡಲ್ಪಟ್ಟವನು. 'ಭೂತದೇಶಕಾಲವರ್ತಿದರ್ಶನವಿಷಯ' ಎಂಬ ಜ್ಞಾನ, ಸೌರಭದ ಸ್ಮರಣಗಳನ್ನು ಸನ್ನಿಕರ್ಷವೆಂದು ಒಪ್ಪಿ ಇದನ್ನೂ ಒಂದೇ ಚಾಕ್ಷುಷ (ಸ್ಮರಣ) ಜ್ಞಾನ ವೆಂದು ಸಾಧಿಸಿದ್ದಾರೆ.

ಜ್ಞಾನಸ್ವರೂಪ : ಜ್ಞಾನವು ಸ್ವಯಂ ಪ್ರಕಾಶ. ಅಂದರೆ ಉತ್ಪನ್ನವಾದ ಜ್ಞಾನದ ಅನುಭವಕ್ಕಾಗಿ ಬೇರೊಂದು ಜ್ಞಾನದ ಅವಶ್ಯಕತೆಯಿಲ್ಲ. ಪ್ರಕಾಶದ (ಬೆಳಕಿನ) ಪ್ರಕಾಶಕ್ಕೆ

ಪ್ರಕಾಶಾಂತರ ಅವಶ್ಯಕತೆಯು ಹೇಗೆ ಇಲ್ಲವೋ ಹಾಗೆಯೇ ಜ್ಞಾನವು ಸ್ವಯಂ ಪ್ರಕಾಶ ಎಂದು ಬೌದ್ಧರು ಹೇಳುತ್ತಾರೆ. ಪ್ರಾಭಾಕರರೂ ಜ್ಞಾನವು ಸ್ವಯಂಪ್ರಕಾಶವೆಂದು ಹೇಳುತ್ತಾರೆ. ಘಟದ ಪ್ರತ್ಯಕ್ಷದ ಸಮಯದಲ್ಲಿ ಜ್ಞಾನವೂ ತೋರುವುದಾದರೆ ಜ್ಞಾನಕ್ಕಿಂತ ಬೇರೆಯಾದ ಘಟವೇ ಇಲ್ಲವೆಂದಾಗುತ್ತದೆ. ಈ ಯುಕ್ತಿಯನ್ನು ವಿಜ್ಞಾನವಾದಿ ಬೌದ್ಧರು ಅವಲಂಬಿಸುತ್ತಾರೆ. ಇದಕ್ಕಾಗಿ ಬಾಹ್ಯಾರ್ಥವಾದಿಗಳಾದ ನ್ಯಾಯವೈಶೇಷಿಕರು ಇದು ಘಟ ಎಂಬ ಜ್ಞಾನದಲ್ಲಿ ಘಟ ಮಾತ್ರ ತೋರುತ್ತದೆ. ಅನಂತರ 'ಘಟಮಹಂ ಜಾನಾಮಿ' ನಾನು ಘಟವನ್ನು ತಿಳಿಯುತ್ತೇನೆ ಎಂಬ ಅನುವ್ಯವಸಾಯಜ್ಞಾನದಿಂದ ಮೊದಲನೆಯ ಜ್ಞಾನವು ಪ್ರಕಾಶವಾಗುತ್ತದೆ. ಹೀಗೆ ಜ್ಞಾನವು ಪರಪ್ರಕಾಶ್ಯ, ಸ್ವಯಂಪ್ರಕಾಶವಲ್ಲವೆಂದಾಯಿತು. ಹೀಗೆ ಬಾಹ್ಯಾರ್ಥ ಸ್ಥಾಪನೆಗಾಗಿ ತಾರ್ಕಿಕರು ಜ್ಞಾನವನ್ನು ಸ್ವಪ್ರಕಾಶವೆಂದು ಒಪ್ಪಲಿಲ್ಲ.

ನ್ಯಾಯದರ್ಶನದಲ್ಲಿ ಹದಿನಾರು ಪದಾರ್ಥಗಳನ್ನು ಒಪ್ಪಿದ್ದಾರೆ. 'ಪ್ರಮಾಣ, ಪ್ರಮೇಯ, ಸಂಶಯ, ಪ್ರಯೋಜನ. ದೃಷ್ಟಾಂತ, ಸಿದ್ಧಾಂತ, ಅವಯವ,ತರ್ಕ ನಿರ್ಣಯ, ವಾದ' ಜಲ್ಪ, ವಿತಂಡಾ, ಹೇತ್ವಾಭಾಸ, ಛಲ, ಜಾತಿ, ನಿಗ್ರಹಸ್ಥಾನಾನಾಂತತ್ತ್ವಜ್ಞಾನಾತ್ ನಿಃಶ್ರೇಯಸಾಧಿಗಮಃ' ಎಂಬ ಈ ಸೂತ್ರದಲ್ಲಿ ಈ ಹದಿನಾರು ಪದಾರ್ಥಗಳ ತತ್ತ್ವಜ್ಞಾನದಿಂದ ನಿಶ್ರೇಯಸ ಅಂದರೆ ಮೋಕ್ಷವುಂಟಾಗುತ್ತದೆ ಎಂದು ಹೇಳಿದೆ. ನಿಃಶ್ರೇಯಸವೆಂದರೆ ಕೇವಲ ಆಮುಷ್ಮಿಕವಾದ ಮೋಕ್ಷಮಾತ್ರವಲ್ಲ; ಲೌಕಿಕಾಭಿವೃದ್ಧಿಯೂ ನಿಃಶ್ರೇಯಸವೆಂದೇ ಅಂಗೀಕೃತ ವಾಗಿದೆ. (ನಿಶ್ರೇಯಸಂ ಪುನರ್ದೃಷ್ಟಾದೃಷ್ಟಭೇದಾದ್ ದ್ವೇಧಾಭವತಿ-ತತ್ರ ಪ್ರಮಾಣಾದಿ ಪದಾರ್ಥತತ್ತ್ವಜ್ಞಾನಾತ್ ನಿಃಶ್ರೇಯಸಂ ದೃಷ್ಟಂ, ನ ಹಿ ಕಶ್ಚಿತ್ಪದಾರ್ಥಃ ಜ್ಞಾಯಮಾನಃ ಹಾನೋಪಾದಾನೋಪೇಕ್ಷಾ ಬುದ್ಧಿನಿಮಿತ್ತಂ ನ ಭವತೀತಿ। ಏವಂ ಚ ಕೃತ್ವಾ ಸರ್ವೇ ಪದಾರ್ಥಾಃ ಜ್ಞೇಯತಯಾ ಉಪಕ್ಷಿಪ್ಯಂತ ಇತಿ। ಪರಂತು ನಿಶ್ರೇಯಸಂ ಆತ್ಮಾದೇಃ ತತ್ತ್ವಜ್ಞಾನಾದ್ ಭವತಿ-ನ್ಯಾಯವಾರ್ತಿಕ) ಪದಾರ್ಥತತ್ತ್ವ ಜ್ಞಾನದಿಂದ ಮುಕ್ತಿಯು ಹೇಗೆ ಉಂಟಾಗುತ್ತದೆ ಎಂಬ ವಿಷಯವನ್ನು ನ್ಯಾಯದರ್ಶನದ ಎರಡನೆಯ ಸೂತ್ರದಲ್ಲಿಯೇ ಹೇಳಿದ್ದಾರೆ.—ದುಃಖ ಜನ್ಮಪ್ರವೃತ್ತಿದೋಷಮಿಥ್ಯಾಜ್ಞಾನಾನಾಮುತ್ತರೋತ್ತರಾಪಾಯೇ ತದನಂತರಾಪಾಯಾದಪ ವರ್ಗಃ'. ಮಿಥ್ಯಾಜ್ಞಾನವಾಸನೆಯೇ ಸಂಸಾರ. ತತ್ತ್ವಜ್ಞಾನದಿಂದ ಮಿಥ್ಯಾಜ್ಞಾನವಾಸನೆಯು ನಾಶವಾಗುತ್ತದೆ. ತತ್ತ್ವ ಜ್ಞಾನದಿಂದ ಅಹಂಕಾರ ನಿವೃತ್ತಿಯೂ ಆಗಬೇಕು. ಏಕೆಂದರೆ ರಾಗ ದ್ವೇಷ ಮೋಹಗಳೆಂಬ ದೋಷಗಳಿಗೆ ಅಹಂಕಾರವೇ ಮೂಲ. ಈ ಅಹಂಕಾರವು ನಾಶವಾದರೆ ರಾಗಾದಿದೋಷವು ನಾಶವಾಗುತ್ತದೆ. ಆಗ ಧರ್ಮಾಧರ್ಮಗಳೆಂಬ ಪ್ರವೃತ್ತಿಯೂ ನಾಶವಾಗುತ್ತದೆ. ಅವು ನಾಶವಾದರೆ ದೇಹಾಂತರ ಸಂಬಂಧರೂಪವಾದ ಜನ್ಮವು ನಾಶವಾಗಿ ಅದರಿಂದ ಆತ್ಯಂತಿಕ ದುಃಖನಿವೃತ್ತಿ ರೂಪವಾದ ಮೋಕ್ಷವುಂಟಾಗುತ್ತದೆ.

ಮೋಕ್ಷಸ್ವರೂಪ : ಶರೀರ ಆರು ಜ್ಞಾನೇಂದ್ರಿಯಗಳು, ಆರುವಿಧದ ಬುದ್ಧಿಗಳು. ಸುಖ ದುಃಖ ಇವು ಇಪ್ಪತ್ತೊಂದು ದುಃಖಗಳು. ಶರೀರಾದಿ ಸುಖಪರ್ಯಂತವಾದ ವಸ್ತುಗಳೆಲ್ಲವೂ ದುಃಖ ಜನಕವಾದುದರಿಂದ ದುಃಖ ಅವೂ ಹೇಯಗಳು. ದುಃಖವಂತೂ ಸ್ವತಃ ಹೇಯವೇ ಆಗಿದೆ. ಪುನಃ ದುಃಖ ಹುಟ್ಟುವುದಕ್ಕೆ ಕಾರಣವಾದ ದುಃಖಪ್ರಾಗ ಭಾವ ಸಮಾನಕಾಲೀನವಲ್ಲದ ದುಃಖನಿವೃತ್ತಿಯೇ ಮೋಕ್ಷವೆಂದು ತಾರ್ಕಿಕರ ಸಿದ್ಧಾಂತ. ವಿಭುವಾದ ಜೀವಾತ್ಮನು ಅಂತಹ ಮೋಕ್ಷದಲ್ಲಿ ತನ್ನ ಸ್ವಾಭಾವಿಕ ಸ್ಥಿತಿಯಲ್ಲಿರುತ್ತಾನೆ. ಅವನಲ್ಲಿ ವಿಭುತ್ವ, ದ್ರವತ್ವ, ನಿತ್ಯತ್ವ, ನಿರವಯವತ್ವ, ನಾನಾತ್ವ, ಈಶ್ವರಭಿನ್ನತ್ವ ಮುಂತಾದ ನಾನಾ ಧರ್ಮಗಳೊಡನೆ ಅನಂತಕಾಲದವರೆಗೂ ನಿರ್ದುಃಖನಾಗಿರುತ್ತಾನೆ. ಈ ದುಃಖವಿಲ್ಲದ ಸ್ಥಿತಿಯನ್ನೇ ಸ್ವಾಭಾವಿಕವಾದ ಸುಖಾನುಭವವೆಂದು ಹೇಳಬಹುದು. ಹೀಗೆ ದುಃಖಾಭಾವವೇ ಸುಖ. ಭಾವರೂಪವಾದ ಸುಖವು ಮೋಕ್ಷದಲ್ಲಿ ಇಲ್ಲವೆಂದೇ ಸಾಮಾನ್ಯವಾಗಿ ತಾರ್ಕಿಕರ ಸಿದ್ಧಾಂತ. ಜ್ಞಾನ, ಇಚ್ಛಾ, ಪ್ರಯತ್ನ ಮುಂತಾದ ವಿಶೇಷಗಳೂ ಇರುವುದಿಲ್ಲ. ಆದ್ದರಿಂದ ಸಕಲ ವಿಶೇಷ ಗುಣೋಚ್ಛೇದವೇ ಮೋಕ್ಷವೆಂದೂ ಹೇಳಬಹುದು. ಆದರೆ ನ್ಯಾಯಸಾರವೆಂಬ ಗ್ರಂಥದಲ್ಲಿ ಭಾಸರ್ವಜ್ಞನು 'ಮೋಕ್ಷದಲ್ಲಿ ಜೀವರಿಗೆ ನಿತ್ಯಸುಖವು ಅಭಿವ್ಯಕ್ತವಾಗುತ್ತದೆ.' ಎಂದು ಹೇಳುತ್ತಾನೆ. 'ಮೋಕ್ಷದಲ್ಲಿ ಸುಖವಿರಲಿ ಇಲ್ಲದಿರಲಿ ಮೋಕ್ಷಪ್ರಾಪ್ತಿ ಎಂಬುದರಲ್ಲಿ ವಿವಾದವಿಲ್ಲವೆಂದು ಸಿದ್ಧಾಂತ ' ಎಂದು ನ್ಯಾಯಭಾಷ್ಯಕಾರರು ಬರೆಯುತ್ತಾರೆ.

ಈಶ್ವರ : ಮೋಕ್ಷಕ್ಕಾಗಿ ತತ್ತ್ವಜ್ಞಾನ ಪೂರ್ವಕವಾಗಿ ಪರಮೇಶ್ವರನ ಉಪಾಸನೆಯನ್ನು ಮಾಡಬೇಕು. ಪರಮಾತ್ಮನು ಸಕಲ ಕಾರ್ಯಗಳಿಗೂ ಸಾಧಾರಣಕಾರಣನು. ಪರಮೇಶ್ವರನ ಅನುಗ್ರಹವೆಂದರೆ ಅವನು ಎಲ್ಲಾ ಕಾರ್ಯಗಳನ್ನೂ ಮಾಡುತ್ತಾನೆಂದು ತಿಳಿಯುವುದು. ಈಶ್ವರನು ಎಲ್ಲಾ ಕಾರ್ಯಗಳಿಗೂ ನಿಮಿತ್ತಕಾರಣನು. ಪುರುಷಪ್ರಯತ್ನವೂ ಆವಶ್ಯಕ. ಭೂಗೋಳ ಖಗೋಳ ಮುಂತಾದ ಪ್ರಪಂಚಕ್ಕೆ ಉತ್ಪತ್ತಿ ಇರುವುದರಿಂದ ಮನೆ ಮಠ ಮೊದಲಾದ ವುಗಳಿಗೆ ಕರ್ತೃವಿರುವಂತೆ ಇವುಗಳಿಗೂ ಒಬ್ಬ ಕರ್ತೃವಿರಬೇಕು. ಅವನಿಗೆ ತಕ್ಕಜ್ಞಾನ ಇಚ್ಛೆ ಪ್ರಯತ್ನಗಳಿರಬೇಕು. ಅನೇಕ ಕರ್ತೃಗಳನ್ನು ಅಂಗೀಕರಿಸುವುದಕ್ಕಿಂತ ಸರ್ವಶಕ್ತನಾದ ಒಬ್ಬನೇ ಈಶ್ವರನನ್ನು ಅಂಗೀಕರಿಸುವುದು ಒಳ್ಳೆಯದು. ದ್ಯಾವಾಭೂಮೀ ಜನಯನ್ ದೇವ ಏಕಃ' ಎಂಬ ಶ್ರುತಿಯೂ ಈಶ್ವರನು ಒಬ್ಬನೇ ಎಂದು ಹೇಳುತ್ತದೆ.

ಪ್ರತಿಬಧ್ಯ ಪ್ರತಿಬಂಧಕ ಭಾವ ವಿಚಾರ:— ಒಂದು ವಸ್ತುವು ಒಂದು ಕಾರ್ಯವನ್ನು ಮಾಡಬೇಕಾದರೆ ಅದಕ್ಕೆ ಶಕ್ತಿ ಇರಬೇಕು ಶಕ್ತಿಯು ಒಂದು ವಸ್ತು. ಅದು ಪ್ರತಿಯೊಂದು ವಸ್ತುವಿನಲ್ಲಿಯೂ ಇದೆ. ಅದು ನಾಶವಾದರೆ ಕಾರ್ಯವಾಗುವುದಿಲ್ಲ ಬೆಂಕಿಯಲ್ಲಿ ದಹನಶಕ್ತಿ ಬೀಜದಲ್ಲಿ ಅಂಕುರ ಜನನಶಕ್ತಿ ಇರುತ್ತವೆ. ಚಂದ್ರಕಾಂತಮಣಿ, ಔಷಧಿರಸ, ಅಥವಾ ಮಂತ್ರದಿಂದ ಶಕ್ತಿ ನಾಶವಾದಾಗ ಬೆಂಕಿಯು ದಾಹವನ್ನುಂಟುಮಾಡುವುದಿಲ್ಲ. ಇಲಿ ಮೂಸಿದರೆ ಬೀಜವು ಅಂಕುರವನ್ನುಂಟುಮಾಡುವುದಿಲ್ಲ. ಇಲ್ಲೆಲ್ಲಾ ಮೊದಲಿದ್ದ ಶಕ್ತಿ ಪದಾರ್ಥವು ನಾಶ ವಾಯಿತೆಂದು ಮೀಮಾಂಸಕರು ಹೇಳುತ್ತಾರೆ. ಕಾರಣವು ಕಾರ್ಯವನ್ನುಂಟುಮಾಡಬೇಕಾದರೆ

ಅವಕ್ಕೆ ಸಹಕಾರಿ ಸಂಪತ್ತಿಯು ಬೇಕು. ಎಲ್ಲಾ ಸಹಕಾರಿಗಳಿಂದ ಕೂಡಿದ ವ್ಯಾಪಾರ ವಿಶಿಷ್ಟವಾದ ಕಾರಣವಿರುವ ದೆಶೆಯನ್ನೇ ಸಾಮಗ್ರಿಸಂಪತ್ತಿ ಎಂದು ಕರೆಯುತ್ತಾರೆ. ಇದರಲ್ಲಿ ಪ್ರತಿಬಂಧಕಾಭಾವವೂ ಸೇರುತ್ತದೆ. ದಾಹಕ್ಕೆ ಮಣಿ ಮಂತ್ರಾದಿಗಳು ಪ್ರತಿಬಂಧಕ ಅದರ ಅಭಾವ ಕಾರಣ. ಬೀಜದಲ್ಲಿ ಮೂಷಿಕಗಂಧ ಅಂಕುರೋತ್ಪತ್ತಿಗೆ ಪ್ರತಿಬಂಧಕ. ಅದರ ಅಭಾವ ಕಾರಣ. ಶಕ್ತಿಯೆಂಬ ಬೇರೊಂದು ಪದಾರ್ಥವನ್ನು ಒಪ್ಪಿದರೆ ಅವಕ್ಕೆ ಉತ್ಪತ್ತಿ, ವಿನಾಶ, ಕಾಲ, ದೇಶ ಮುಂತಾದ ಎಲ್ಲವನ್ನೂ ಕಲ್ಪಿಸಬೇಕಾಗುತ್ತದೆ, ಮಣಿ ಮುಂತಾದುವುಗಳು ಪ್ರತಿಬಂಧಕ ಎಂಬ ಕಲ್ಪನೆಯಿಂದಲೇ ಎಲ್ಲವೂ ನಿರ್ವಾಹವಾಗುವಾಗ ಬೇರೊಂದು ಪದಾರ್ಥದ ಕಲ್ಪನೆಯು ಅವಶ್ಯಕತೆಯಿಲ್ಲ. ಇದೇ ಲಾಘವಯುಕ್ತಿ. ಹೀಗೆ ತರ್ಕಶಾಸ್ತ್ರದಲ್ಲಿ ಅನೇಕ ಸಂದರ್ಭಗಳಲ್ಲಿ 'ಲಾಘವ' ಎಂಬ ಯುಕ್ತಿಯಿಂದ ನಿರ್ಣಯ ಮಾಡುತ್ತಾರೆ.

ಪ್ರತಿಬಂಧಕವು ಸಾಮಗ್ರಿಯೆಂಬ ಕಾರಣಸಮುದಾಯದಲ್ಲಿ ಪ್ರತಿಬಂಧಕಾಭಾವವೆಂಬ ಒಂದರ ನ್ಯೂನತೆಯನ್ನುಂಟುಮಾಡಿ ಸಾಮಗ್ರೀವೈಕಲ್ಯವನ್ನುಂಟುಮಾಡುತ್ತದೆ. ಯಾವುದರ ಅಭಾವವು ಕಾರಣವೋ ಅದು ಪ್ರತಿಬಂಧಕ. (ಕಾರಣೀಭೂತಾಭಾವಪ್ರತಿಯೋಗಿತ್ವಂ ಪ್ರತಿಬಂಧಕತ್ವಂ). ಕಾರ್ಯವೇ ಪ್ರತಿಬಧ್ಯ ಬಾಹ್ಯವಾದ ದಾಹ, ಅಂಕುರಗಳು ಪ್ರತಿಬಧ್ಯವಾದ ಹಾಗೆಯೇ, ಆಂತರವಾದ ಜ್ಞಾನಗಳಲ್ಲಿಯೂ ಪ್ರತಿಬಧ್ಯಪ್ರತಿಬಂಧಕಭಾವವಿದೆ ಇಲ್ಲಿ ಶತ್ರುವಿಲ್ಲ ಎಂಬ ನಿಶ್ಚಯವಿದ್ದರೆ ಇಲ್ಲಿ ಶತ್ರುವಿದ್ದಾನೆ ಎಂಬ ಬುದ್ಧಿಯು ಬರುವುದಿಲ್ಲ. ಒಂದು ಪ್ರದೇಶದಲ್ಲಿ ಮುಂಗುಸಿಯಿದ್ದರೆ ಅಲ್ಲಿ ಹಾವುಗಳಿರುವುದಿಲ್ಲ. ತತ್ತ್ವಜ್ಞಾನವಿದ್ದರೆ ಮಿಥ್ಯಾಜ್ಞಾನ ವಿರುವುದಿಲ್ಲ. ಹೀಗೆ ಅದು ಇದೆ ಎಂಬ ಜ್ಞಾನವನ್ನು ಕುರಿತು ಅದು ಇಲ್ಲ ಎಂಬ ನಿಶ್ಚಯು ಪ್ರತಿಬಂಧಕ. ಅಂತಹ ನಿಶ್ಚಯದ ಅಭಾವ ಕಾರಣ. (ತದ್ವತ್ತಾಬುದ್ಧಿಂಪ್ರತಿ ತದಭಾವವತ್ತಾ ನಿಶ್ಚಯಃ ಪ್ರತಿಬಂಧಕಃ, ತದಭಾವಃ ಕಾರಣಂ).

ಪ್ರಮಾಣ:—ಇದರ ವಿಚಾರವನ್ನು ಹಿಂದೆಯೇ ನಿರೂಪಿಸಿದೆ. ಯಥಾರ್ಥಜ್ಞಾನಕ್ಕೆ ಕಾರಣವಾದುದೇ ಪ್ರಮಾಣ. ಯಥಾರ್ಥಜ್ಞಾನವನ್ನೇ ಪ್ರಮೆಯೆಂದು ಹೇಳುತ್ತಾರೆ. ಬುದ್ಧಿ, ಉಪಲಬ್ಧಿ, ಜ್ಞಾನಗಳು ಬೇರೆಯೆಂದು ಸಾಂಖ್ಯರು ಹೇಳುತ್ತಾರೆ. ಆದರೆ ಇವೆಲ್ಲವೂ ಒಂದೇ ಅರ್ಥವುಳ್ಳ ಪದಗಳು. ಇದು (ಬುದ್ಧಿಯು) ಆತ್ಮನ ಧರ್ಮ ಎಂದು ತಾರ್ಕಿಕರು ಹೇಳುತ್ತಾರೆ. ಅಯಥಾರ್ಥಾನುಭವವನ್ನೇ ಭ್ರಮ, ಅಪ್ರಮಾ, ಅನ್ಯಥಾಖ್ಯಾತಿ ಎಂದೂ ಹೇಳುತ್ತಾರೆ. ಶುಕ್ತಿಯನ್ನು ರಜತವನ್ನಾಗಿಯೂ, ಹಗ್ಗವನ್ನು ಸರ್ಪವೆಂದೂ, ಮರುಭೂಮಿಯಲ್ಲಿ ಬಿದ್ದ ಸೂರ್ಯನ ಕಿರಣವನ್ನು ನೀರೆಂದೂ ತಿಳಿಯುವುದೇ ಭ್ರಮೆ. ದೋಷದಿಂದ ಎದುರಿಗಿರುವ ವಸ್ತುವು ಚೆನ್ನಾಗಿ ತಿಳಿಯದ ಕಾರಣ, ಸದೃಶವಾದ ವಸ್ತುವಿನ ಸ್ಮರಣೆ ಬಂದು ಇದು ರಜತ, ಇದು ಹಾವು ಇತ್ಯಾದಿ ಜ್ಞಾನಗಳು ಉಂಟಾಗುತ್ತವೆ. ಸಾಂಖ್ಯರು ಅಖ್ಯಾತಿವಾದಿಗಳು. ಖ್ಯಾತಿ ಎಂದರೆ ಭ್ರಾಂತಿ ಅದು ಇಲ್ಲ ಎಂದರ್ಥ. ಭ್ರಮೆ ಎಂಬ ವ್ಯವಹಾರವಿದೆ. ಒಂದು ವಸ್ತುವನ್ನು ಮತ್ತೊಂದು ವಸ್ತುವಾಗಿ

ತಿಳಿಯುವುದು ಎಂಬ ಭ್ರಾಂತಿಯನ್ನು ಎಲ್ಲಿ ಹೇಳುತ್ತೇವೆಯೋ ಅಲ್ಲಿ ಆ ಎರಡು ವಸ್ತುಗಳಿರುವ ವ್ಯತ್ಯಾಸವನ್ನು ತಿಳಿಯಲಿಲ್ಲ ಎಂದು ಅರ್ಥ. ಹಗ್ಗವನ್ನು ಸರ್ಪವನ್ನಾಗಿ ತಿಳಿಯುವುದೇ ಭ್ರಾಂತಿ. ವೇದಾಂತಿಗಳ ಮತದಲ್ಲಿ ಇದೇ ಅಧ್ಯಾಸ. ನ್ಯಾಯ ಮತದಲ್ಲಿ ಇದೇ ಅನ್ಯಥಾ ಖ್ಯಾತಿ.ಸಾಂಖ್ಯರು ಹಗ್ಗಕ್ಕೂ ಸರ್ಪಕ್ಕೂ ವ್ಯತ್ಯಾಸತಿಳಿಯದಿರುವುದನ್ನು ಅಖ್ಯಾತಿ ಎಂದು ಹೇಳುತ್ತಾರೆ ಎದುರಿಗಿರುವ ಒಂದು ವಸ್ತುವಿನಲ್ಲಿ ಮುಖ್ಯವಾಗಿರುವ ಅಂಶವನ್ನು ಗ್ರಹಿಸದೆ ಸಾಧಾರಣವಾದ ಅಂಶವನ್ನು ಗ್ರಹಿಸುವುದೇ ಸಾಂಖ್ಯಮತದಂತೆ ಭ್ರಾಂತಿ. ಎದುರಿಗಿರುವ ವಸ್ತುವಿಗೆ ಸಮಾನವಾದ ಬೇರೊಂದು ವಸ್ತುವಿನ ಸ್ಮರಣೆಯೂ ಬೆರೆತು ಅವೆರಡಕ್ಕೆ ಭೇದಾಗ್ರಹದಿಂದ ಭ್ರಾಂತಿ ಎಂದು ವ್ಯವಹಾರಮಾತ್ರ. ಪ್ರಾಭಾಕರ ಮೀಮಾಂಸಕರೂ ರಾಮಾನುಜೀಯರೂ ಇದೇ ಮಾರ್ಗವನ್ನು ಅನುಸರಿಸಿರುವರು. ಅಸತ್ ಖ್ಯಾತಿವಾದದಲ್ಲಿ ಅಸತ್ ಸತ್ತಾಗಿ ತೋರುತ್ತದೆ. ಅನಿರ್ವಚನೀಯ ಖ್ಯಾತಿವಾದದಲ್ಲಿ ಅನಿರ್ವಚನೀಯವಾದ ಶುಕ್ತಿರಜತವು ಒಂದು ರೀತಿಯ ನಿರ್ವಚನೀಯ ವಾಗಿಯೂ ತೋರುತ್ತದೆ. ಆತ್ಮಖ್ಯಾತಿವಾದದಲ್ಲಿ ಜ್ಞಾನರೂಪನಾದ ಆತ್ಮನು ಬಾಹ್ಯವಾದ ಅನಾತ್ಮ ವಸ್ತುವಿನಂತೆ ಕಾಣಿಸಿಕೊಳ್ಳುವನು. ಇಲ್ಲೆಲ್ಲಾ ಅನ್ಯಥಾಖ್ಯಾತಿಯೂ ಇದ್ದೇ ಇದೆ ಎಂದು ತಾರ್ಕಿಕರ ಅಭಿಪ್ರಾಯ.

ತಾರ್ಕಿಕರ ಮತದಂತೆ ಪ್ರಮಾಣವು ನಾಲ್ಕು ಎಂದು ಹಿಂದೆಯೇ ಹೇಳಿದೆ. ಪ್ರತ್ಯಕ್ಷಾದಿ ನಾಲ್ಕು, ಅರ್ಥಾಪತ್ತಿ, ಅನುಪಲಬ್ಧಿ, ಸಂಭವ, ಐತಿಹ್ಯ, ಲಿಪಿ, ಲೋಕಪ್ರಸಿದ್ಧಿ, ಚೇಷ್ಟೆ, ಪ್ರಾತಿಭ ಎಂದು ಪ್ರಮಾಣವು ಹನ್ನೆರಡು ವಿಧವೆಂದು ಕೆಲವರು ಹೇಳುತ್ತಾರೆ. ಆದರೆ ಇವೆಲ್ಲವೂ ನಾಲ್ಕರಲ್ಲಿಯೇ ಅಂತರ್ಭಾವ ಹೊಂದುತ್ತವೆಯೆಂದು ತಾರ್ಕಿಕರ ಅಭಿಪ್ರಾಯ. ಇವುಗಳಲ್ಲಿ ಸಂಭವವೆಂದರೆ ಬಹಳ ವಸ್ತುಗಳಲ್ಲಿ ಅಲ್ಪವಿದೆಯೆಂಬ ಜ್ಞಾನವು. ನೂರರಲ್ಲಿ ೫೦ ಇದೆ ಎಂಬ ಜ್ಞಾನವು (ಅಲ್ಪ ಪ್ರಮಾಸಾಧನಂ ಬಹುಲಜ್ಞಾನಂ ಸಂಭವಃ–ಯಥಾಶತ ಮಸ್ಯಾಸ್ತೀತಿ ಜ್ಞಾನೇ ಪಂಚಾಶದ್ ಜ್ಞಾನಂ). ಇದು ಅನುಮಾನದಲ್ಲಿಯೇ ಸೇರುತ್ತದೆ. 'ಹೀಗೆಂದು ಹೇಳುತ್ತಾರೆ' ಎಂಬ ಅನಿರ್ದಿಷ್ಟವಕ್ತೃಕವಾದ ಪ್ರವಾದ ಪಾರಂಪರ್ಯವೇ ಐತಿಹ್ಯ — ಈ ಮರದಲ್ಲಿ ಒಂದು ಯಕ್ಷವಿದೆಯಂತೆ–ಎಂಬ ವಾಕ್ಯ. ಇದು ಆಪ್ತವಾಕ್ಯವಾದರೆ ಶಬ್ದ ಪ್ರಮಾಣದಲ್ಲಿ ಸೇರುತ್ತದೆ. ('ಇತಿ ಹೋಚುಃ ಇತ್ಯನಿರ್ದಿಷ್ಟಪ್ರವಕ್ತೃಕಂ ಪ್ರವಾದಪಾರಂ ಪರ್ಯಂ ಐತಿಹ್ಯಂ–ಯಥಾ ಅಸ್ಮಿನ್ ವಟೇಯಕ್ಷಸ್ತಿಷ್ಠತೀತಿ'). ಲಿಪಿಯು ಶಬ್ದಸ್ಮಾರಕ. ಪ್ರತ್ಯೇಕ ಪ್ರಮಾಣವಲ್ಲ. ಲೋಕಪ್ರಸಿದ್ಧಿಯು ಶಬ್ದಪ್ರಮಾಣ. ಚೇಷ್ಟೆಯು ಅನುಮಾನರೂಪವಾಗಿರುತ್ತದೆ. ಪ್ರಾತಿಭಜ್ಞಾನವು ಋಷಿಗಳ ಜ್ಞಾನ. ಅದು ಅಲೌಕಿಕ ಪ್ರತ್ಯಕ್ಷವು.

ಪ್ರತ್ಯಕ್ಷಪ್ರಮಾಣವಿಚಾರವನ್ನು ಹಿಂದೆ ಹೇಳಲಾಗಿದೆ. ಅನುಮಾನ ಪ್ರಮಾಣದ ವಿಷಯದಲ್ಲಿ ಸಾಮಾನ್ಯವಾಗಿ ತಾರ್ಕಿಕರ ಮತ ಹೀಗಿದೆ— ಯುಕ್ತಿ, ಉಪಪತ್ತಿ, ಲಿಂಗ, ಸಾಧನ, ಹೇತು, ಮೊದಲಾದ ಶಬ್ದಗಳಿಂದ ಹೇಳಲ್ಪಡುವ ವಸ್ತುವೇ ಅಥವಾ ಆ ವಸ್ತುವಿನ ಜ್ಞಾನವು ಅನುಮಾನವು. ಇದು ಯುಕ್ತಿಯಾಗಬೇಕಾದರೆ ಇದರಿಂದ ಸಾಧಿಸಲ್ಪಡುವ (ಸಾಧ್ಯವಾದ) ವಹ್ನಿ ಮೊದಲಾದ ವಸ್ತುವಿಗೂ ಇದಕ್ಕೂ ಸ್ವಾಭಾವಿಕ ಸಂಬಂಧ ರೂಪವಾದ ವ್ಯಾಪ್ತಿ ಇರಬೇಕು. ಆ ಸಂಬಂಧವು ಕಾರ್ಯಕಾರಣಭಾವ, ಸಾಮಾನ್ಯವಿಶೇಷಭಾವ,

ಆಧಾರಾಧೇಯಭಾವ, ಉಪಜೀವ್ಯೋಪಜೀವಕಭಾವ, ಉಪಕಾರ್ಯೋಪಕಾರಕಭಾವ,
ಅಂಗಾಂಗಿಭಾವ, ನಾಶ್ಯನಾಶಕಭಾವ ಇತ್ಯಾದಿ ರೂಪವಾಗಿರುತ್ತದೆ. ಇದನ್ನು ನಿಯತ ಸಾಹ
ಚರ್ಯವೆನ್ನುವರು. ಎಲ್ಲೆಲ್ಲಿ ಹೇತುವಿರುತ್ತದೆಯೋ ಅಲ್ಲೆಲ್ಲಾ ಸಾಧ್ಯವಿದೆಯೆಂದು ತಿಳಿಯು
ವುದೇ ನಿಯತಸಾಹಚರ್ಯಜ್ಞಾನ. ಬೌದ್ಧರು ವ್ಯತಿರೇಕ ದೃಷ್ಟಿಯಿಂದ ಇದನ್ನು ಅವಿನಾಭಾವ
ವೆಂದು ವ್ಯವಹರಿಸುತ್ತಾರೆ. ಎಲ್ಲಿ ಸಾಧ್ಯವಿಲ್ಲವೋ ಅಲ್ಲಿ ಹೇತುವಿಲ್ಲದಿರುವುದೇ ಅವಿನಾಭಾವ-
ಇದನ್ನು ವ್ಯತಿರೇಕವ್ಯಾಪ್ತಿಯೆಂದು ತಾರ್ಕಿಕರು ಹೇಳುತ್ತಾರೆ. ವ್ಯಭಿಚಾರಾದರ್ಶನ ಮತ್ತು
ಸಹಚಾರದರ್ಶನದಿಂದ ವ್ಯಾಪ್ತಿಯನ್ನು ಗ್ರಹಿಸಬೇಕು. ಮುಂಗುಸಿಯು ಓಡಾಡುತ್ತಿದ್ದರೆ ಇಲ್ಲಿ
ಸರ್ಪವಿಲ್ಲ ಎಂಬ ಜ್ಞಾನ, ಹೂವಿನ ವಾಸನೆಯಿಂದಲೇ ಇದು ಮಲ್ಲಿಗೆ, ಇದು ಸಂಪಿಗೆ ಎಂದು
ಉಂಟಾಗುವ ಜ್ಞಾನ, ರಾಜನ ವಿಶಿಷ್ಟಪರಿವಾರ ಬಂದಿರುವುದನ್ನು ನೋಡಿ ರಾಜನು ಬಂದಿದ್ದಾನೆ
ಎಂಬ ಜ್ಞಾನ, ಮುಖವಿಕಾಸದಿಂದ ಭೋಜನಜ್ಞಾನ, ಇವೆಲ್ಲವೂ ಅನುಮಾನ ಪ್ರಮಾಣದಿಂದ
ಬರುವ ಅನುಮಿತಿಗಳು. ಕೃಷಿ, ವಾಣಿಜ್ಯ, ಶಿಲ್ಪ, ವಿದ್ಯಾಭ್ಯಾಸ, ವಿಜ್ಞಾನ, ರಾಜ್ಯಭಾರ,
ಪುಣ್ಯಪಾಪಗಳು, ಆತ್ಮ ಮೋಕ್ಷ ಮೊದಲಾದ ಸಕಲ ವಿಷಯಗಳೂ ಅನುಮಾನ ಪ್ರಮಾಣದ
ಪರಿಪಕ್ವವಾದ ಫಲರೂಪವಾಗಿವೆ. ಪ್ರಾಯಃ ಪ್ರಾಣಿಗಳ ವ್ಯವಹಾರಗಳು ಹೆಚ್ಚಿನ ಮಟ್ಟದಲ್ಲಿ
ಅನುಮಾನ ಪ್ರಮಾಣದ ಮೂಲಕವೇ ನಡೆಯುತ್ತವೆ. ಹೇತುವಿಗೆ ಐದು ಧರ್ಮಗಳಿರಬೇಕು.
ಅದು ಪಕ್ಷದಲ್ಲಿರಬೇಕು. ಸಪಕ್ಷ (ದೃಷ್ಟಾಂತ)ದಲ್ಲಿರಬೇಕು. ವಿಪಕ್ಷದಲ್ಲಿ ಇರಬಾರದು.
ಅಬಾಧಿತವಾಗಿರಬೇಕು. ಅಸತ್‌ಪ್ರತಿಪಕ್ಷವಾಗಿರಬೇಕು. (ಪ್ರಸ್ತುತ ಸಾಧ್ಯದ ವಿಪರೀತ ಸಾಧಕ
ವಾದ ಹೇತುವಿರಬಾರದು). ಧೂಮವೆಂಬ ಹೇತುವಿನಲ್ಲಿ ಈ ಐದು ರೂಪಗಳೂ ಇವೆ. ಇಂತಹ
ಸದ್ಧೇತುವಿನಿಂದ ಉಂಟಾಗುವ ಜ್ಞಾನವು ಯಾವಾಗಲೂ ಯಥಾರ್ಥವಾಗಿರುತ್ತದೆ. ಅನ್ವಯ
ವ್ಯತಿರೇಕಿ, ಕೇವಲವ್ಯತಿರೇಕಿ, ಕೇವಲಾನ್ವಯಿ ಎಂದು ಅನುಮಾನವು ಮೂರು ವಿಧ. ಧೂಮ
ಹೇತುವು ಮೊದಲನೆಯದು; ಜೀವಚ್ಛರೀರವು (ಪ್ರಾಣದಿಂದ ಕೂಡಿದ ಶರೀರವು) ಸಾತ್ಮಕ
ವಾಗಿರುತ್ತದೆ. ಎಂಬಲ್ಲಿ ಪ್ರಾಣಾದಿಮತ್ವವೇ ಹೇತುವು. ಇಲ್ಲಿ ಎಲ್ಲಾ ಶರೀರದಲ್ಲಿಯೂ
ಸಾತ್ಮಕತ್ವವನ್ನು ಸಾಧಿಸುವುದರಿಂದ ಆತ್ಮನಿಲ್ಲದಿದ್ದಲ್ಲಿ ಪ್ರಾಣಾದಿಗಳಿಲ್ಲವೆಂದು ವ್ಯತಿರೇಕ
ದೃಷ್ಟಾಂತವನ್ನು ಮಾತ್ರ ಹೇಳಬೇಕಾಗುತ್ತದೆ. ಆದುದರಿಂದ ಇದು ಕೇವಲ ವ್ಯತಿರೇಕಿ.
ಪೃಥಿವಿಯು ಗಂಧವುಳ್ಳದ್ದರಿಂದ ಜಲಾದಿ ಭಿನ್ನವಾಗಿದೆ ಎಂಬುದೂ ಹೀಗೆಯೇ. ಘಟ
ಮುಂತಾದ ಪದಾರ್ಥಗಳು ಅಭಿಧೇಯ (ಶಬ್ದವಾಚ್ಯ)ವಾಗಿವೆ. ಏಕೆಂದರೆ ಅವೆಲ್ಲವೂ ತಿಳಿ
ಯಲ್ಪಡುವ ವಸ್ತುಗಳು ಎಂಬಲ್ಲಿ (ಘಟಃ ಅಭಿಧೇಯಃ ಪ್ರಮೇಯತ್ವಾತ್) ಹೇತುವು ಕೇವಲಾ
ನ್ವಯಿ, ಇಲ್ಲಿ ಸಾಧ್ಯಸಾಧನಗಳ ಅಭಾವವನ್ನು ತೋರಿಸಿ ವ್ಯತಿರೇಕ (ವಿರುದ್ಧ) ದೃಷ್ಟಾಂತ
ಕೊಡಲು ಬರುವುದಿಲ್ಲ. ಯಾವ ಧರ್ಮವನ್ನು ಇಲ್ಲವೆಂದು ಹೇಳಲು ಬರುವುದಿಲ್ಲವೋ ಅದು
ಕೇವಲಾನ್ವಯಿ (ನಿಷೇದ್ಧುಂ ಅಶಕ್ಯತ್ವಂ ಕೇವಲಾನ್ವಯಿತ್ವಂ).

ಅನುಮಾನವನ್ನು ವಿಶೇಷತೋದೃಷ್ಟ ಸಾಮಾನ್ಯತೋದೃಷ್ಟ, ಎಂದೂ ವಿಭಾಗಿಸುವರು.
ಪ್ರತ್ಯಕ್ಷಯೋಗ್ಯವಾದ ವಸ್ತುವನ್ನು ತಿಳಿಸಿ ಕೊಡುವ ಅನುಮಾನವು ದೃಷ್ಟಾನುಮಾನವು.

ಪ್ರತ್ಯಕ್ಷಕ್ಕೆ ಅಯೋಗ್ಯವಾದ ವಿಷಯವನ್ನು ತಿಳಿಸಿಕೊಡುವ ಅನುಮಾನವು ಸಾಮಾನ್ಯತೋ ದೃಷ್ಟಾನುಮಾನವು. ಧೂಮದಿಂದ ಅಗ್ನಿಯನ್ನು ತಿಳಿಯುವುದು ಮೊದಲನೆಯದು. ರೂಪ ಜ್ಞಾನದಿಂದ ಕಣ್ಣಿದೆ ಎಂದು ತಿಳಿಯುವುದು. ಎರಡನೆಯದು. ಕಣ್ಣು ಪ್ರತ್ಯಕ್ಷ ಯೋಗ್ಯವಾದ ವಸ್ತುವಲ್ಲ. ಫಲಾದಿಗಳ ರೂಪದಿಂದ ರಸಾನುಮಾನವೂ, ಪಶುಗಳಲ್ಲಿ ಕೊಂಬುಗಳನ್ನು ನೋಡಿ ಗೊರಸು ಸೀಳಾಗಿದೆ ಎಂದು ತಿಳಿಯುವುದೂ ಸಾಮಾನ್ಯತೋ ದೃಷ್ಟಾನುಮಾನವು.

ಅನುಮಾನವೆಂದರೆ ನಿಶ್ಚಯರೂಪಜ್ಞಾನ, ಸಂಶಯವಲ್ಲ. ಆದರಿಂದ ಬರತಕ್ಕ ಜ್ಞಾನವೂ ನಿಶ್ಚಯರೂಪ. ಅನುಮಾನದಿಂದ ಉಂಟಾಗುವ ಜ್ಞಾನವೂ ನಿಶ್ಚಯರೂಪವಾದುದು. ಅನುಮಾನ, ಉಪಮಾನ, ಶಬ್ದ ಈ ಮೂರು ಪ್ರಮಾಣಗಳನ್ನು ಪರೋಕ್ಷವೆಂದೂ, ಪ್ರತ್ಯಕ್ಷ ವನ್ನು ಅಪರೋಕ್ಷವೆಂದೂ ಹೇಳುತ್ತಾರೆ. ಸಂಶಯಾತ್ಮಕ ಜ್ಞಾನವು ಪ್ರತ್ಯಕ್ಷಸ್ಥಳದಲ್ಲಿಯೇ ಹೊರತು ಪರೋಕ್ಷಾನುಭವಗಳಲ್ಲಿ ಇಲ್ಲ. ದುಷ್ಟಹೇತುವಿನ ಜ್ಞಾನದಿಂದ ಭ್ರಮರೂಪವಾದ ಅನುಮಿತಿ ಬರಬಹುದು. ಈ ಅನುಮಾನ ಪ್ರಮಾಣದಿಂದಲೇ ಅತೀಂದ್ರಿಯವಾದ ಸ್ವರ್ಗ ನರಕ ಪುಣ್ಯ ಪಾಪಾದಿಗಳನ್ನು ಸಾಧಿಸಲು ತಾರ್ಕಿಕರು ಅನುಮಾನಗಳನ್ನು ಉದಾಹರಿಸುತ್ತಾರೆ.

ಅನುಮಾನ ಪ್ರಮಾಣದಲ್ಲಿ ನ್ಯಾಯ ವಾಕ್ಯವನ್ನು ಉಪಯೋಗಿಸುವ ಕ್ರಮವನ್ನು ಹಿಂದೆಯೇ ಹೇಳಲಾಗಿದೆ. ವಾದಕಾಲದಲ್ಲಿ ಇದರ ಉಪಯೋಗ ಬಹಳವಾಗಿದೆ. ವೇದವಾಕ್ಯ ಗಳು ಪುರುಷನ ಬುದ್ಧಿಪೂರ್ವಕವಾಗಿವೆ ಎಂದು ಪ್ರತಿಜ್ಞೆ ಮಾಡಿ ರಚನಾ ವಿಶೇಷರೂಪವಾಗಿ ರುವುದರಿಂದ ಎಂಬ ಹೇತುವನ್ನು ಪ್ರಯೋಗಿಸಿ, ಎಲ್ಲೆಲ್ಲಿ ರಚನಾವಿಶೇಷವಿದೆಯೋ ಅಲ್ಲಲ್ಲಿ ಪುರುಷ ಬುದ್ಧಿಕೃತತ್ವವು ಕಂಡಿದೆ. ಕಾಳಿದಾಸಕಾವ್ಯವೇ ದೃಷ್ಟಾಂತ ಎಂದು ಉದಾಹರಣವನ್ನು ಪ್ರಯೋಗಿಸಿ ವೇದವಾಕ್ಯದಲ್ಲಿಯೂ ರಚನಾವಿಶೇಷವಿದೆ ಎಂದು ಉಪನಯವನ್ನು ಪ್ರದರ್ಶಿಸಿ ಆದುದರಿಂದ ವೇದವಾಕ್ಯಗಳೂ ಪುರುಷ ಬುದ್ಧಿ ಮೂಲಕ ಎಂದು ನಿಗಮನದಿಂದ ಉಪ ಸಂಹರಿಸುತ್ತಾರೆ. ಈ ಐದು ವಾಕ್ಯಗಳಲ್ಲಿ ಪ್ರತಿಜ್ಞೆ ಶಬ್ದ, ಹೇತುವು ಅನುಮಾನ, ಉದಾಹರಣವು ಪ್ರತ್ಯಕ್ಷ. ಉಪನಯ ; ಉಪಮಾನ ; ನಿಗಮನವು ಇವುಗಳ ಸಮಷ್ಟಿರೂಪವು. ಹೀಗೆ ಇಲ್ಲಿ ನಾಲ್ಕು ವಿಧ ಪ್ರಮಾಣಗಳು ಸೇರಿ ಅನುಮಿತಿಯನ್ನು ಉಂಟುಮಾಡಿಕೊಡುತ್ತವೆ. ಈ ವಾಕ್ಯ ಗಳಿಂದ ಶಾಬ್ದಬೋಧ ಉಂಟಾಗಿ ಮಧ್ಯಸ್ಥನಿಗೆ ಪರಾಮರ್ಶವೆಂಬ ಜ್ಞಾನವುಂಟಾಗಿ ಅನುಮಿತಿಯು ಉದಯಿಸುವುದು ಎಂದು ತಾರ್ಕಿಕರ ಸಿದ್ಧಾಂತ.

ಉಪಮಾನ : ಉಪಮಾನ ಪ್ರಮಾಣವು ಪದ ಮತ್ತು ಪದಾರ್ಥಗಳ ವಾಚಕ-ವಾಚ್ಯ ಭಾವಗಳನ್ನು ತಿಳಿಸಿಕೊಡುತ್ತದೆ. ಗ್ರಾಮವಾಸಿಯಾದ ಮನುಷ್ಯನೊಬ್ಬನು ಕೇವಲ ಆರಣ್ಯಕ ವಾದ ಗವಯವೆಂದರೇನೆಂದು ತಿಳಿಯದೆ ಇದ್ದನು. ಒಬ್ಬ ಆರಣ್ಯಕ ಮನುಷ್ಯನು ಗೋಸದೃಶೋ ಗವಯಃ ಗೋವಿಗೆ ಸಮಾನವಾದುದೇ ಗವಯವೆಂದು ಹೇಳಿದನು. ಅನಂತರ ಅವನು ಕಾಡಿಗೆ ಹೋದಾಗ ಗವಯವನ್ನು ನೋಡಿದನು. ಆಗ ಅವನಿಗೆ ಹಿಂದೆ ಕೇಳಿದ

ವಾಕ್ಯದ ಅರ್ಥ ಸ್ಮರಣೆಗೆ ಬಂದು—'ಇದೇ ಗವಯ 'ಗವಯಃ ಗವಯಪದವಾಚ್ಯಃ' ಗೋಸಾದೃಶ್ಯವುಳ್ಳ ಪ್ರಾಣಿಯನ್ನು ಗವಯವೆಂದು ಹೇಳಬೇಕು, ಎಂದು ತಿಳಿಯುತ್ತಾನೆ. ಇದು ಸಾಧರ್ಮ್ಯವೆಂಬ ಸಾದೃಶ್ಯದ ಮೂಲಕ ಬಂದಿರುವ ವಾಚ್ಯವಾಚಕಭಾವಸಂಬಂಧಜ್ಞಾನವೆಂಬ ಉಪಮಿತಿಯು. ಒಂಟೆಯನ್ನು ನೋಡದಿದ್ದ ದಾಕ್ಷಿಣಾತ್ಯನೊಬ್ಬನು ಉತ್ತರ ದೇಶದವನಿಂದ 'ಉದ್ದ ಕತ್ತು, ಜೋಲುತುಟಿಗಳುಳ್ಳ, ಮುಳ್ಳು ಗಿಡಗಳನ್ನು ತಿನ್ನುವ, ಗೋವು ಮುಂತಾದ ಪಶುಗಳಿಗಿಂತ ವಿಲಕ್ಷಣವಾದುದು ಒಂಟೆ' ಎಂದು ಕೇಳಿ, ಉತ್ತರದೇಶದಲ್ಲಿ ಒಂಟೆಯನ್ನು ನೋಡಿದಾಗ ಇದೇ ಒಂಟೆಯೆಂದು ತಿಳಿದು—'ಉಷ್ಟ್ರಃ ಉಷ್ಟ್ರಪದ ವಾಚ್ಯಃ, ಇಂತಹ ಪ್ರಾಣಿಯನ್ನು ಉಷ್ಟ್ರವೆಂದು ಹೇಳಬೇಕು ಎಂದು ತಿಳಿಯುತ್ತಾನೆ. ಇಲ್ಲಿ ಉಷ್ಟ್ರವು ಗೋವಿಸದೃಶ ಎಂಬ ವಾಕ್ಯದಿಂದ ಬಂದಿರುವ ಜ್ಞಾನವೇ ಉಪಮಾನ ಪ್ರಮಾಣ. ಇಂತಹ ಉಪಮಾನ ಪ್ರಮಾಣದಿಂದಲೇ ಅನೇಕ ಗಿಡ ಮೂಲಿಕೆಗಳ ಜ್ಞಾನವಾಗುತ್ತದೆ—ಎಂದು ವೈದ್ಯ ಶಾಸ್ತ್ರದಲ್ಲಿ ಬಹಳವಾಗಿ ಹೇಳಿದೆ.

ಶಬ್ದಪ್ರಮಾಣ :—ಲೌಕಿಕ, ವೈದಿಕ ಶಬ್ದಗಳೆಲ್ಲವೂ ಶಬ್ದಪ್ರಮಾಣವು. ಈ ಶಬ್ದವು ಅನುಮಾನದಲ್ಲಿ ಸೇರುವುದಿಲ್ಲ. ಹೇತುಜ್ಞಾನ ಒಂದು ವ್ಯಾಪ್ತಿಸ್ಮರಣ ಪರಾಮರ್ಶಮೂಲಕ ಅನುಮಾನ ಪ್ರಮಾಣ ಸ್ಥಳದಲ್ಲಿ ಸಾಧ್ಯಜ್ಞಾನವು ಬರುತ್ತದೆ. ವ್ಯುತ್ಪನ್ನರಿಗೆ ಶಬ್ದಜ್ಞಾನ ಬಂದಾಗ ಪದಾರ್ಥಸ್ಮರಣ ಮೂಲಕ ವಾಕ್ಯಾರ್ಥಜ್ಞಾನವು ಬರುತ್ತದೆ. ಮಧ್ಯದಲ್ಲಿ ವ್ಯಾಪ್ತಿ ಸ್ಮರಣ ಪರಾಮರ್ಶಗಳು ಅನುಭವಸಿದ್ಧವಾಗಿಲ್ಲ. ಆದುದರಿಂದ ಶಬ್ದವು ಬೇರೆ ಪ್ರಮಾಣ. ಇಂತಹ ಶಬ್ದ ಪ್ರಮಾಣವು ವಾಕ್ಯರೂಪವಾಗಿರುತ್ತದೆ. ವಾಕ್ಯವೆಂದರೆ ಪದಗಳ ಸಮೂಹ. ಪದವೆಂದರೆ ಒಂದು ಅರ್ಥವನ್ನು ತಿಳಿಸುವ ಶಕ್ತಿಯುಳ್ಳ ಅಕ್ಷರ ಸಮೂಹ, ಅಥವಾ ಅಕ್ಷರ. ರಾಮಃ, ರಾಮ + ಅಃ, ರಾಮನನ್ನು ರಾಮ + ಅನ್ನು ಎಂಬಲ್ಲಿ ರಾಮ, ಅನ್ನು ಎಂದು ಎರಡು ಪದಗಳು, ವ್ಯಾಕರಣದಲ್ಲಿ ಪ್ರಕೃತಿ ಪ್ರತ್ಯಯಗಳು ಸೇರಿ ಪದವೆಂದು ವ್ಯವಹಾರವಿದೆ. (ಸುಪ್ತಿಙಂತಂ ಪದಂ), ಆಪ್ತನಿಂದ ಹೇಳಲ್ಪಟ್ಟ ಇಂತಹ ಪದಗಳ ಸಮುದಾಯವೇ ಶಬ್ದ ಪ್ರಮಾಣ. ಆಪ್ತಿಯುಳ್ಳವನು ಆಪ್ತ. ಆಪ್ತಿಯೆಂದರೆ ವಾಕ್ಯಾರ್ಥ ಸಾಕ್ಷಾತ್ಕಾರ, ಪದಗಳಿಂದ ತಿಳಿಯಲ್ಪಡುವ ಅರ್ಥಗಳು ಒಟ್ಟಾಗಿ ಬುದ್ಧಿಯಲ್ಲಿ ಗೋಚರವಾಗುವುದನ್ನು ವಾಕ್ಯಾರ್ಥವೆಂದು ಹೇಳುತ್ತಾರೆ. ಪದಾರ್ಥಗಳ ಪರಸ್ಪರ ಸಂಬಂಧವು ವಾಕ್ಯದ ಆನುಪೂರ್ವಿಯ ಮಹಿಮೆಯಿಂದ ತೋರುತ್ತದೆ. ಘಟಂ ಎಂಬಲ್ಲಿ ಘಟದಲ್ಲಿರುವ ಕರ್ಮತ್ವ, ಎಂಬ ಅರ್ಥಗಳಲ್ಲಿ ಇರುವ 'ನಿಷ್ಠತ್ವ? ಎಂಬ ಅಂಶವು ಘಟಪದದ ಮುಂದೆ 'ಅಂ'ಪದವಿದ್ದಾಗ ತೋರುತ್ತದೆ. ಹೀಗೆ ಪದಗಳಿಗೆ ಅನ್ವಯಿ (ಸಂಬಂಧ) ಅಂಶದಲ್ಲಿ ಶಕ್ತಿಯಿಲ್ಲ ಎಂದು ಹೇಳುವ ತಾರ್ಕಿಕರನ್ನು ಅಭಿಹಿತಾನ್ವಯವಾದಿ ಎಂದು ಹೇಳುತ್ತಾರೆ. ಪ್ರಾಭಾಕರರು ಅನ್ವಯವೆಂಬ ಸಂಬಂಧವೂ ಪದಶಕ್ತಿಯಿಂದಲೇ ಸಾಮಾನ್ಯತಃ ತೋರುತ್ತದೆಯೆಂದು ಹೇಳುತ್ತಾರೆ. ಇದನ್ನು ಅನ್ವಿತಾಭಿಧಾನವಾದವೆಂದು ಹೇಳುತ್ತಾರೆ. ಪದಾರ್ಥಗಳ ಪ್ರತ್ಯೇಕಜ್ಞಾನವು ಸ್ಮರಣಾತ್ಮಕವಾಗಿರುತ್ತದೆ. ಒಟ್ಟು ಸೇರಿ ಬರುವ ಜ್ಞಾನವು ಅನುಭವಾತ್ಮಕವಾದುದು ಇದನ್ನೇ ಶಾಬ್ದಬೋಧ, ಅನ್ವಯಬೋಧ ಎಂದೂ

ಹೇಳುತ್ತಾರೆ. ಪದಪದಾರ್ಥಗಳ ಸಂಬಂಧಕ್ಕೆ ಶಕ್ತಿ ಎಂದು ಹೆಸರು. ಬೆಂಕಿ ಮುಂತಾದುವು ಗಳಲ್ಲಿರುವ ಶಕ್ತಿಯಂತೆ ಈ ಶಕ್ತಿಯೂ ಅತಿರಿಕ್ತ ಪದಾರ್ಥವೆಂದು ಮೀಮಾಂಸಕರು ಹೇಳುತ್ತಾರೆ. ಈ ಪದವು ಈ ಅರ್ಥವನ್ನು ಕೊಡಲಿ ಎಂಬ ಈಶ್ವರನ ಇಚ್ಛೆಯೇ ಶಕ್ತಿಯೆಂದು ನೈಯಾಯಿಕರು ಹೇಳುತ್ತಾರೆ. ಪದಕ್ಕೂ ಪದಾರ್ಥಕ್ಕೂ ಇರುವ ಸಾಕ್ಷಾತ್‌ಸಂಬಂಧವನ್ನುಶಕ್ತಿಯೆಂದೂ (ಅಭಿಧಾ) ಪರಂಪರೆಯಿಂದ ಆ ಸಂಬಂಧವಿದ್ದರೆ ಅದನ್ನು ಲಕ್ಷಣಾ ಎಂದೂ ಹೇಳುತ್ತಾರೆ. ಶಾಬ್ದಬೋಧಕ್ಕೆ ಆಕಾಂಕ್ಷಾಯೋಗ್ಯತಾ ಸನ್ನಿಧಿಗಳೂ ಕಾರಣ. ಆಕಾಂಕ್ಷೆಯೆಂದರೆ ಪದಗಳು ಯಾವ ಆನುಪೂರ್ವಿ ಯಲ್ಲಿದ್ದರೆ ಶಾಬ್ದಬೋಧವಾಗುತ್ತದೆಯೋ ಅಂತಹ ಅನುಪೂರ್ವಿ. ರಾಮಮ್ ಎಂದೇ ಹೇಳಬೇಕು. 'ಅಂ ರಾಮ'ಅನ್ನಕೂಡದು. ಅರ್ಥಗಳಿಗೆ ಪರಸ್ಪರಾನ್ವಯಕ್ಕೆ ವಿರೋಧವಿಲ್ಲದಿರುವುದೇ ಯೋಗ್ಯತೆ. 'ಜಲೇನ ಸಿಂಚತಿ' ಎಂಬಲ್ಲಿ ಯೋಗ್ಯತೆ ಇದೆ. ವಹ್ನಿನಾ ಸಿಂಚತಿ ಎಂಬಲ್ಲಿ ಯೋಗ್ಯತೆ ಯಿಲ್ಲ. ಕಾಲವಿಳಂಬ ಮಾಡದೆ ಪದಗಳನ್ನು ಅವ್ಯವಧಾನದಿಂದ ಉಚ್ಚರಿಸುವುದೇ ಆಸಕ್ತಿ. ಇವಲ್ಲದೆ ತಾತ್ಪರ್ಯಜ್ಞಾನವೂ ಶಾಬ್ದಭೋಧಕ್ಕೆ ಕಾರಣ. ಆದರೆ ನಾನಾರ್ಥವಾದ ಸೈಂಧವ (ಉಪ್ಪು, ಕುದುರೆ) ಮುಂತಾದ ಪದಪ್ರಯೋಗ ಸ್ಥಳದಲ್ಲಿ ಮಾತ್ರವೇ ತಾತ್ಪರ್ಯಜ್ಞಾನವು ಶಾಬ್ದಬೋದಕ್ಕೆ ಕಾರಣವೆಂದು ಕೆಲವರು ಹೇಳುತ್ತಾರೆ. ತಾತ್ಪರ್ಯವೆಂದರೆ ವಾಕ್ಯವನ್ನು ಹೇಳಿ ದವನ ಅಭಿಪ್ರಾಯ (ವಕ್ತುರಿಚ್ಛಾತು ತಾತ್ಪರ್ಯಂ ಪರಿಕೀರ್ತಿತಂ). ಯಾವ ವಾಕ್ಯವನ್ನು ಯಾವ ಅರ್ಥವಿಷಯಕ ತಾತ್ಪರ್ಯದಿಂದ ಪ್ರಯೋಗಿಸುತ್ತಾರೋ ಅದೇ ಆ ವಾಕ್ಯದ ಅರ್ಥ. ಅದಕ್ಕಿಂತ ಬೇರೆಯಾಗಿ ತೋರುವುದು ವಾಕ್ಯಾರ್ಥವಲ್ಲ. 'ಯತ್ಪರಃ ಶಬ್ದಃ ಸ ಶಬ್ದಾರ್ಥಃ' ಎಂಬ ನ್ಯಾಯವು ಈ ವಿಷಯವನ್ನೇ ಹೇಳುತ್ತದೆ. ವೇದದಲ್ಲಿ ವೇದವಕ್ತೃವಾದ ಈಶ್ವರನ ತಾತ್ಪರ್ಯಜ್ಞಾನವೇ ಕಾರಣ. ಇದರಿಂದ ಪರಮೇಶ್ವರನೇ ವೇದವನ್ನು ಹೇಳಿರಬೇಕೆಂದು ಸಿದ್ಧಿಸುತ್ತದೆ.

ಯೌಗಿಕ, ರೂಢ, ಯೋಗರೂಢ, ಯೌಗಿಕರೂಢ ಎಂದು ಪದಗಳನ್ನು ವಿಭಾಗಿಸುತ್ತಾರೆ ಯೋಗವೆಂದರೆ ಅವಯವಶಕ್ತ್ಯ. ಪಾಚಕಾದಿ ಪದಗಳು ಯೌಗಿಕಗಳು-ಪಚ್ = ಪಾಕ, ಅಕ, ಕರ್ತಾ, ಹೀಗೆ ಅವಯವಗಳಿಗೆ ಬೇರೆ ಬೇರೆ ಅರ್ಥವಿದೆ. ಸಮುದಾಯ ಶಕ್ತಿಯಿಂದ ಭೋದಕ ವಾದ ಪದವು ರೂಢವು. ಮಂಡಪ, ಗೋ, ಆಕಾಶ ಮುಂತಾದ ಶಬ್ದಗಳು ರೂಢಗಳು. ಅವಯವಶಕ್ತಿ, ಸಮುದಾಯಶಕ್ತಿ ಎರಡರಿಂದಲೂ ಅರ್ಥಭೋಧಕವಾದ ಪದಗಳು ಯೋಗರೂಢಗಳು. ಪಂಕಜ, ಜಲಜ ಇತ್ಯಾದಿಗಳು. ಅವಯವಶಕ್ತಿಯಿಂದ ಒಂದರ್ಥ, ಸಮುದಾಯಶಕ್ತಿಯಿಂದ ಮತ್ತೊಂದರ್ಥವನ್ನು ಬೋಧಿಸುವ ಪದಗಳು ಯೌಗಿಕರೂಢಗಳು, 'ಉದ್ಭಿತ್' ಶಬ್ದವು ಉದ್ಭಿನತ್ತಿ ಭೇದಿಸುತ್ತದೆ, ಇತಿ ಉದ್ಭಿತ್ ಎಂಬ ಅವಯವಶಕ್ತಿಯಿಂದ ವೃಕ್ಷ ಪೊದೆ ಮುಂತಾದ್ದನ್ನು ತಿಳಿಸುತ್ತದೆ, ರೂಢಿಯಿಂದ ಉದ್ಭಿತ್ ಎಂಬ ಯಾಗ ವಿಶೇಷವನ್ನು ತಿಳಿಸುತ್ತದೆ.

ನ್ಯಾಯದರ್ಶನದಲ್ಲಿ ಹೇಳಿರುವ ಎರಡನೆಯ ಪದಾರ್ಥವೇ ಪ್ರಮೇಯ. ಅದು-ಆತ್ಮ-ಶರೀರ ಇಂದ್ರಿಯ-ಅರ್ಥ-ಬುದ್ಧಿ, ಮನಸ್ಸು-ಪ್ರವೃತ್ತಿ-ದೋಷ-ಪ್ರೇತ್ಯಭಾವ-ಫಲ-ದುಃಖ-ಅಪವರ್ಗ ಎಂದು ಹನ್ನೆರಡು ವಿಧ. (ಆತ್ಮಶರೀರೇಂದ್ರಿಯಾರ್ಥ ಬುದ್ಧಿಮನಃ ಪ್ರವೃತ್ತಿ ದೋಷಪ್ರೇತ್ಯಭಾವ

ಫಲದುಃಖಾಪವರ್ಗಾಸ್ತು ಪ್ರಮೇಯಂ (ನ್ಯಾ. ಸೂ. ೧-೧-೯). ಇಚ್ಛಾ, ದ್ವೇಷ, ಪ್ರಯತ್ನ ಸುಖ, ದುಃಖ ಜ್ಞಾನಗಳು ಆತ್ಮನನ್ನು ತಿಳಿಸಿಕೊಡುವ ಹೇತುಗಳೆಂದು ಸೂತ್ರದಲ್ಲಿ ಹೇಳಿದೆ. (ಇಚ್ಛಾ ದ್ವೇಷ ಪ್ರಯತ್ನ ಸುಖ ದುಃಖ ಜ್ಞಾನಾನ್ಯಾತ್ಮನೋ (ಲಿಂಗಂ ೧-೧-೧೦). ಇಚ್ಛೆ ಮುಂತಾದ ಗುಣಗಳಿಗೆ ಒಂದು ಆಧಾರವಿರಬೇಕು. ಅದು ದೇಹಾದಿರೂಪವಾಗಿರಲು ಸಾಧ್ಯವಿಲ್ಲ. ಆದುದರಿಂದ ದೇಹಾದಿಭಿನ್ನವಾದ ಇಚ್ಛಾದಿಗಳಿಗೆ ಆಶ್ರಯನಾದ ಆತ್ಮನು ಸಿದ್ಧಿಸುತ್ತಾನೆ. ನಾನು ಸುಖಿಯಾಗಿದ್ದೇನೆ, ನಾನು ದುಃಖಿಯಾಗಿದ್ದೇನೆ ಇತ್ಯಾದಿ ಮಾನಸ ಪ್ರತ್ಯಕ್ಷದಲ್ಲಿ ಆತ್ಮನೂ ತೋರುತ್ತಾನೆ. ಆದರೆ ಸುಖಾದಿಗಳಿಗೆ ಆಶ್ರಯವಾದುದು ದೇಹಾದಿಗಳು ಎಂಬ ಭ್ರಾಂತಿ ಇದ್ದವರಿಗೆ ದೇಹಾದಿಭಿನ್ನವಾದ ಆತ್ಮನನ್ನು ಸಾಧಿಸಿಕೊಡಲು ಅನುಮಾದ ಪ್ರಮಾಣ ವನ್ನು ಆಶ್ರಯಿಸಲಾಗಿದೆ. ಜೀವಾತ್ಮನು ಅಪ್ರತ್ಯಕ್ಷ ಎಂಬ ಮಾತಿಗೆ ಇದೇ ಅಭಿಪ್ರಾಯವು. ತನ್ನ ಆತ್ಮ ತನಗೆ ಪ್ರತ್ಯಕ್ಷವಾದರೂ ಪರದೇಹದಲ್ಲಿಯೂ ಆತ್ಮನನ್ನು ಸಾಧಿಸಲು ಅನುಮಾನ ಪ್ರಮಾಣವನ್ನೇ ಆಶ್ರಯಿಸಬೇಕಾಗಿದೆ.

ಶರೀರವು ಎರಡನೆಯ ಪ್ರಮೇಯವು. ಚೇಷ್ಟೇಂದ್ರಿಯಾರ್ಥಾಶ್ರಯಃ ಶರೀರಂ— ೧-೧-೧೧ ಎಂಬುದಾಗಿ ಶರೀರದ ಲಕ್ಷಣವನ್ನು ಹೇಳಿದ್ದಾರೆ. ಆತ್ಮನ ಪ್ರಯತ್ನದಿಂದ ಶರೀರದಲ್ಲಿ ಯಾವ ಕ್ರಿಯೆಯು ಉತ್ಪನ್ನವಾಗುತ್ತದೆಯೋ ಅದೇ ಚೇಷ್ಟೆ. ಇಂತಹ ಚೇಷ್ಟೆ ಯುಳ್ಳದ್ದೇ ಶರೀರ. ಇದೇ ರೀತಿ ಘ್ರಾಣಾದಿ ಇಂದ್ರಿಯಾಶ್ರಯತ್ವವೂ ಶರೀರಲಕ್ಷಣ. ಸುಖದುಃಖಗಳೆಂಬ ಅರ್ಥಗಳ ಬೋಗವು ಯಾವ ಅವಚ್ಛೇದಕ (ಆಶ್ರಯ)ದ ಮೂಲಕ ಬರುತ್ತದೆಯೋ ಅದೇ ಶರೀರ ಎಂದು ಶರೀರಕ್ಕೆ ಮತ್ತೊಂದು ಲಕ್ಷಣವನ್ನೂ ಹೇಳಲಾಗಿದೆ.

ಮೂರನೆಯ ಪ್ರಮೇಯವು ಇಂದ್ರಿಯ:—೬ನೆಯ ಪ್ರಮೇಯವಾದ ಮನಸ್ಸೂ ಇಂದ್ರಿಯವೇ ಆಗಿದೆ. ಆದರೆ ಮನಸ್ಸಿನ ವಿಷಯದಲ್ಲಿ ವಿಶೇಷ ಜ್ಞಾನಕ್ಕೋಸ್ಕರ ಅದನ್ನು ಪ್ರತ್ಯೇಕಿಸಿ ಹೇಳಲಾಗಿದೆ. ಘ್ರಾಣರಸನ ಚಕ್ಷುಸ್ತ್ವಕ್ ಶ್ರೋತ್ರಾಣೀಂದ್ರಿಯಾಣಿ ಭೂತೇಭ್ಯಃ ೧-೧-೧೨ ಎಂಬ ಸೂತ್ರದಿಂದ ಈ ಪಂಚೇಂದ್ರಿಯಗಳು ಸೂಕ್ಷ್ಮವಾದ ಪಂಚಭೂತಾತ್ಮಕವಾಗಿವೆ ಎಂದು ತಿಳಿದು ಬರುತ್ತದೆ. ಸಾಂಖ್ಯರು ವಾಕ್, ಪಾಣಿ, ಪಾದ, ಪಾಯು, ಉಪಸ್ಥ (ಗುಹ್ಯೇಂದ್ರಿಯ)ಗಳನ್ನು ಕರ್ಮೇಂದ್ರಿಯಗಳೆಂದು ಹೇಳುತ್ತಾರೆ ಆದರೆ ಪ್ರತ್ಯಕ್ಷಾತ್ಮಕ ಜ್ಞಾನಕ್ಕೆ ಸಾಧನವಾದುದನ್ನೇ ಇಲ್ಲಿ ಇಂದ್ರಿಯವೆಂದು ಪರಿಗ್ರಹಿಸಲಾಗಿದೆ. ಹಸ್ತಾದಿಗಳಲ್ಲಿ ಲಾಕ್ಷಣಿಕವಾಗಿ ಇಂದ್ರಿಯ ಪದಪ್ರಯೋಗವನ್ನು ಮಾಡುತ್ತಾರೆ. ಅಸಾಧಾರಣವಾದ ಕಾರ್ಯವನ್ನು ಮಾಡುವ ಮಾತ್ರದಿಂದ ಹಸ್ತಾದಿಗಳನ್ನು ಇಂದ್ರಿಯಗಳೆಂದು ಹೇಳುವುದಾದರೆ ಕಂಠ, ಹೃದಯ, ಆಮಾಶಯ, ಪಕ್ವಾಶಯಗಳನ್ನೂ ಕರ್ಮೇಂದ್ರಿಯಗಳೆಂದು ಹೇಳಬಹುದು. ಇದನ್ನು ಯಾವ ದಾರ್ಶನಿಕರೂ ಒಪ್ಪುವುದಿಲ್ಲ. ಒಂದೊಂದು ಇಂದ್ರಿಯವು ಒಂದೊಂದು ಗುಣವನ್ನೇ ಗ್ರಹಿಸುವುದರಿಂದ ಆ ಇಂದ್ರಿಯವು ಅದೇ ಗುಣವುಳ್ಳ ಭೂತದ (Element) ಸಾರಭಾಗದಿಂದ ನಿರ್ಮಿತವಾಗಿದೆ ಎಂದು ಸಿದ್ಧಪಡಿಸಬಹುದು. ಶ್ರೋತ್ರೇಂದ್ರಿಯವು ಮಾತ್ರ

ಉತ್ಪನ್ನವಾಗುವುದಿಲ್ಲ. ಅದಕ್ಕೆ ಅವಚ್ಛೇದಕವಾದ ಕರ್ಣಶಷ್ಕುಲಿಯು ಉತ್ಪನ್ನವಾಗುವಾಗ ಶ್ರೋತ್ರೇಂದ್ರಿಯವು ಉತ್ಪನ್ನವಾಯಿತು ಎಂದು ವ್ಯವಹಾರ ಮಾತ್ರ. ಶ್ರೋತ್ರವು ಆಕಾಶ ರೂಪವಾದುದರಿಂದ ಅದಕ್ಕೆ ಸ್ವರೂಪತಃ ಉತ್ಪತ್ತಿ ಇಲ್ಲ.

ನಾಲ್ಕನೆಯ ಪ್ರಮೇಯವೇ ಅರ್ಥವು:—ಕ್ರಮವಾಗಿ ಘ್ರಾಣಾದಿ ಪಂಚೇಂದ್ರಿಯಗಳಿಂದ ಗ್ರಹಿಸಲು ಯೋಗ್ಯವಾದ ಗಂಧ, ರಸ, ರೂಪ, ಸ್ಪರ್ಶ, ಶಬ್ದಗಳನ್ನೇ ಅರ್ಥವೆಂದು ಹೇಳುತ್ತಾರೆ.

ಐದನೆಯ ಪ್ರಮೇಯವೇ ಬುದ್ಧಿಯು:—ಬುಧ್ಯತೇ ಅನಯಾ ಇತಿ ಬುದ್ಧಿಃ ಎಂಬ ವ್ಯುತ್ಪತ್ತಿಯಿಂದ ಜ್ಞಾನಕ್ಕೆ ಪರಿಣಾಮಿಕಾರಣವಾದ ಅಂತಃಕರಣವನ್ನೋ, ಅಥವಾ ಮನಸ್ಸನ್ನೋ ಇಲ್ಲಿ ಇಟ್ಟುಕೊಳ್ಳಬಾರದು. ಇಲ್ಲಿ ಪ್ರತ್ಯಕ್ಷಾದಿಜ್ಞಾನವೇ ಬುದ್ಧಿಯು—ಬುದ್ಧಿರುಪಲಬ್ಧಿ ಜ್ಞಾನಮಿತ್ಯನರ್ಥಾಂತರಂ ಎಂಬ ಸೂತ್ರದ ಪ್ರಕಾರ ಬುದ್ಧಿ ಎಂದರೆ ಜ್ಞಾನವೆಂದೇ ಗೌತಮರ ಅಭಿಪ್ರಾಯ.

ಆರನೆಯ ಪ್ರಮೇಯವೇ ಮನಸ್ಸು:—ಸುಖಾದಿ ಪ್ರತ್ಯಕ್ಷಕ್ಕೆ ಕಾರಣವಾದ ಇಂದ್ರಿಯವೇ ಮನಸ್ಸು (ಸುಖಾದ್ಯುಪಲಬ್ಧಿಸಾಧನಮಿಂದ್ರಿಯಂ ಮನಃ). ಮನಸ್ಸಿನ ಅಸ್ತಿತ್ವವನ್ನು ಸಾಧಿಸಲು ಅನೇಕ ಹೇತುಗಳಿದ್ದರೂ ನ್ಯಾಯಶಾಸ್ತ್ರದಲ್ಲಿ ಒಂದು ವಿಶೇಷ ಹೇತುವನ್ನು ಹೇಳಿದ್ದಾರೆ. 'ಯುಗಪಜ್ಜ್ಞಾನಾನುತ್ಪತ್ತಿಃ ಮನಸೋ ಲಿಂಗಂ' ೧–೧–೧೬ ಒಂದೇ ಸಮಯದಲ್ಲಿ ಅನೇಕ ಇಂದ್ರಿಯಗಳಿಂದ ಅನೇಕ ವಿಷಯಗಳ ಪ್ರತ್ಯಕ್ಷವು ಉಂಟಾಗ ದಿರುವುದು ಮನಸ್ಸು ಎಂಬ ಪ್ರಮೇಯದ ಅಸ್ತಿತ್ವಕ್ಕೆ ಸಾಧಕವಾದ ಪ್ರಮಾಣವು. ಯಾವ ಇಂದ್ರಿಯದ ಜತೆಗೆ ಮನಸ್ಸಿನ ಸಂಬಂಧವಿದೆಯೋ ಅದರಿಂದ ಜ್ಞಾನವುಂಟಾಗುತ್ತದೆ. ಇಂತಹ ಮನಸ್ಸನ್ನೂ ಮಧ್ಯಮ ಪರಿಮಾಣ ಉಳ್ಳದ್ದೆಂದು ಒಪ್ಪಿದರೆ ಅದು ಅನಿತ್ಯವಾಗು ತ್ತದೆ, ಆಗ ಜನ್ಮಾಂತರೀಯ ಸಂಸ್ಕಾರಾದಿಗಳಿಂದ ಈ ಜನ್ಮದಲ್ಲಿ ಸ್ಮರಣೆ ಇತ್ಯಾದಿಗಳು ಉಂಟಾಗಲಾರವು. ಮನಸ್ಸು ವಿಭುವಾದರೆ ಎಲ್ಲಾ ಇಂದ್ರಿಯಗಳ ಸಂಯೋಗವೂ ಅದಕ್ಕೆ ಒಂದೇ ಭಾರಿ ಇರುವುದರಿಂದ ಒಂದೇ ಸಮಯದಲ್ಲಿ ಅನೇಕ ಜ್ಞಾನವುಂಟಾಗಬೇಕಾದೀತು. ಅನ್ಯತ್ರಮನಾ ಅಭೂವಂ, ನಾದರ್ಶಂ; ಅನ್ಯತ್ರಮನಾ ಅಭೂವಂ ನಾಶ್ರೌಷಂ; ಮನಸಾ ಹ್ಯೇವ ಪಶ್ಯತಿ, ಮನಸಾ ಶೃಣೋತಿ (ಬೃಹದಾರಣ್ಯಕ ೧–೫–೩)– ಇಲ್ಲಿ ಅನ್ಯತ್ರಮನಾಃ ಎಂಬ ಪದದಿಂದ ಮನಸ್ಸಿನ ಸಂಪರ್ಕವಿಲ್ಲದ ಇಂದ್ರಿಯದಿಂದ ಜ್ಞಾನ ಉಂಟಾಗುವುದಿಲ್ಲ ಎಂದು ತಿಳಿದು ಬರುತ್ತದೆ. ಆದರೂ ಮನಸ್ಸಿನಲ್ಲಿ ಅತ್ಯಧಿಕ ವೇಗವಿರುವುದರಿಂದ ಒಂದೇ ಬಾರಿ ಜ್ಞಾನವುಂಟಾಯಿತೆಂದು ತೋರುತ್ತದೆ. ಉದ್ದವಾದ ಚಕ್ಕುಲಿಯನ್ನು ತಿನ್ನುವಾಗ ದೀರ್ಘಶಷ್ಕುಲೀ ಭಕ್ಷಣಕಾಲೇ) ಪಂಚೇಂದ್ರಿಯಗಳಿಂದಲೂ ಜ್ಞಾನವು ಒಂದೇಬಾರಿ ಉಂಟಾದಂತೆ ಕಾಣುತ್ತದೆ. ಆದರೆ ನೂರು ಕಮಲದ ಹೂವಿನ ದಳಗಳನ್ನು ಒಂದರ ಮೇಲೊಂದರಂತೆ ಇಟ್ಟು ಸೂಜಿಯಿಂದ ಚುಚ್ಚಿ ದರೆ ೧೦೦ ದಳಗಳನ್ನು ಸೂಜಿಯು ಒಂದೇ ಕ್ಷಣದಲ್ಲಿ ಚುಚ್ಚಿತು ಎಂಬ ಭ್ರಾಂತಿಯು ಬರುತ್ತದೆ.

ಅದರಂತೆಯೇ ಯುಗಪಜ್ ಜ್ಞಾನೋತ್ಪತ್ತಿಯಾಯಿತು ಎಂಬ ಅನುಭವವೂ ಭ್ರಾಂತಿಯಿಂದೇ ಹೇಳಬೇಕು. ಒಂದು ಕೊಳ್ಳಿಯನ್ನು ತಿರುಗಿಸುತ್ತಿದ್ದರೆ ಬೆಂಕಿಯು ಒಂದು ಚಕ್ರವು ಕಾಣಿಸುತ್ತದೆ. ಅಲ್ಲಿ ಬೆಂಕಿಯು ಕೊಳ್ಳಿಯ ಚಕ್ರದ ಭ್ರಾಂತಿಯುಂಟಾಗುತ್ತದೆ. ಅದರಂತೆ ಒಂದೇ ಬಾರಿ ಅನೇಕ ಜ್ಞಾನಗಳುಂಟಾದವು ಎಂಬುದೂ ಭ್ರಾಂತಿ. 'ಅಲಾತಚಕ್ರದರ್ಶನವತ್ ತದುಪಲಬ್ಧಿರಾಶು ಸಂಚಾರಾತ್' ೩-೨-೫೮ ಎಂಬ ಸೂತ್ರದಿಂದ ಗೌತಮರು ಇದೇ ವಿಷಯವನ್ನು ಹೇಳಿದ್ದಾರೆ.

ಪ್ರವೃತ್ತಿಯು :—ಏಳನೆಯ ಪ್ರಮೇಯವು ಮನುಷ್ಯರ ಶುಭಾಶುಭಕರ್ಮಗಳೇ ಪ್ರವೃತ್ತಿಗಳು. ಶಾರೀರಿಕ, ವಾಚನಿಕ, ಮಾನಸಿಕವೆಂದು ಅದು ಮೂರು ವಿಧ. 'ಪ್ರವೃತ್ತಿಃ ವಾಗ್ ಬುದ್ಧಿಶರೀರಾರಂಭಃ ೧-೧-೧೭). ಪ್ರವೃತ್ತಿಶಬ್ದಕ್ಕೆ ಶುಬಾಶುಭ ಪುಣ್ಯಪಾಪಗಳೆಂಬ ಅರ್ಥವನ್ನು ಹೇಳಿದ್ದಾರೆ. ಆದರೆ ಅದು ಮುಖ್ಯಾರ್ಥವಲ್ಲ.

ದೋಷವು :—೮ನೆಯ ಪ್ರಮೇಯ-ಜೀವಾತ್ಮನ ರಾಗ ದ್ವೇಷ ಹಾಗೂ ಮೋಹಗಳನ್ನು ದೋಷವೆಂದು ಹೇಳುತ್ತಾರೆ. ಈ ದೋಷಗಳೇ ಹಿಂದೆ ಹೇಳಿದ ಪ್ರವೃತ್ತಿಗೆ ಉತ್ಪಾದಕಗಳು. ಪ್ರವರ್ತನಾಲಕ್ಷಣಾ ದೋಷಾಃ' ೧-೧-೧೮-ಪ್ರವೃತ್ತಿಯನ್ನುಂಟುಮಾಡುವುದೇ ಯಾವುಗಳ ಲಕ್ಷಣವೋ ಅವೇ ದೋಷಗಳು ವಿಷಯಾಸಕ್ತಿರೂಪವಾದ ರಾಗ, ದ್ವೇಷ, ಹಾಗೂ ಮೋಹವು ಜೀವಾತ್ಮನನ್ನು ಶುಭಾಶುಭಕರ್ಮಗಳತ್ತ ಪ್ರವರ್ತಿಸುವಂತೆ ಮಾಡುತ್ತವೆ ಕಾಮ, ಮತ್ಸರ, ಮುಂತಾದ ಅನೇಕ ದೋಷಗಳಿದ್ದರೂ ಅವೆಲ್ಲವೂ ಈ ಮೂರರಲ್ಲಿಯೇ ಸೇರುತ್ತವೆ. 'ತತ್ತ್ರೈರಾಶ್ಯಂರಾಗ ದ್ವೇಷಮೋಹಾರ್ಥಾಂತರಭಾವಾತ್ ೪-೧-೩ ಎಂಬ ಸೂತ್ರದಲ್ಲಿ ಈ ವಿಷಯವನ್ನೇ ಹೇಳುತ್ತಾರೆ. ಇವುಗಳಲ್ಲಿ ಮೋಹವು ಅಧಮವಾದ ದೋಷವು.

ಪ್ರೇತ್ಯಭಾವವು ಒಂಬತ್ತನೆಯ ಪ್ರಮೇಯವು. ಸತ್ತು ಪುನಃ ಹುಟ್ಟುವುದೇ ಪ್ರೇತ್ಯ ಭಾವ. ಧರ್ಮಾಧರ್ಮರೂಪವಾದ ಪ್ರವೃತ್ತಿಯ ಫಲವಾಗಿ ಜೀವಾತ್ಮನಿಗೆ ಪುನರ್ಜನ್ಮ ಉಂಟಾ ಗುತ್ತದೆ. ಧರ್ಮಾಧರ್ಮಗಳೂ ಹಿಂದೆ ಹೇಳಿದ ದೋಷಗಳ ಮೂಲಕವೇ ಉಂಟಾಗುವುದ ರಿಂದ ಜೀವನ ಪುನರ್ಜನ್ಮಕ್ಕೆ ದೋಷಗಳೇ ಕಾರಣವಾಗುತ್ತವೆ. (ಪುನರುತ್ಪತ್ತಿಃ ಪ್ರೇತ್ಯಭಾವಃ ೧-೧-೧೯) ಜೀವಾತ್ಮನು ನಿತ್ಯ. ಅವನಿಗೆ ಉತ್ಪತ್ತಿ ವಿನಾಶಗಳಿಲ್ಲ. ಅನಾದಿಕಾಲದಿಂದಲೂ ಜೀವಾತ್ಮನು ಬಾರಿಬಾರಿಗೂ ಸ್ಥೂಲಶರೀರವನ್ನು ಸ್ವೀಕರಿಸುತ್ತಾನೆ. ಇದೇ ಉತ್ಪತ್ತಿ ; ಜೀವಾ ತ್ಮನು ನಿತ್ಯನಾದುದರಿಂದಲೇ ಅವನಿಗೆ ಪುನರ್ಜನ್ಮ (ಪ್ರೇತ್ಯಭಾವವು) ಸಿದ್ಧಿಸುತ್ತದೆ. (ಆತ್ಮನಿತ್ಯತ್ವೇ ಪ್ರೇತ್ಯಭಾವ ಸಿದ್ಧಿಃ ೪-೧-೧೦). ಆತ್ಮನು ಅನಿತ್ಯನಾದರೆ ಸತ್ತು ಹುಟ್ಟುವವನಾರು ?

ಫಲವು ಹತ್ತನೆಯ ಪ್ರಮೇಯ :—ಇದು ಮುಖ್ಯ, ಗೌಣವೆಂದು ಎರಡು ವಿಧ. ಜೀವಾತ್ಮನು ಮಾಡುವ ಸುಖದುಃಖೋಪಬೋಗಗಳು ಮುಖ್ಯಫಲಗಳು. ಉಪಬೋಗಸಾಧನ ವಾದ ದೇಹೇಂದ್ರಿಯಾದಿಗಳು ಗೌಣಫಲಗಳು. ಜೀವನಿಗೆ ಉಂಟಾಗುವ ಎಲ್ಲಾ ಸುಖದುಃಖೋ

ಪಭೋಗಗಳು ಅವನು ಹಿಂದಿನ ಜನ್ಮದಲ್ಲಿ ಮಾಡಿದ ಧರ್ಮಾಧರ್ಮಗಳಿಂದ ಉಂಟಾಗುತ್ತವೆ. ಆ ಧರ್ಮಾಧರ್ಮಗಳು ರಾಗದ್ವೇಷ ಮೋಹಗಳೆಂಬ ದೋಷಗಳಿಂದ ಉಂಟಾಗುತ್ತವೆ. ಧರ್ಮಾಧರ್ಮರೂಪವಾದ ಪ್ರವೃತ್ತಿ ಮತ್ತು ರಾಗ ದ್ವೇಷಾದಿಗಳಿಂದ ಉತ್ಪನ್ನವಾದ ಪದಾರ್ಥವೆಲ್ಲವೂ ಫಲವು. (ಪ್ರವೃತ್ತಿ-ದೋಷ- ಜನಿತೋಽರ್ಥಃ ಫಲಂ ೧-೧-೨೦) ಧರ್ಮಾಧರ್ಮರೂಪವಾದ ಪ್ರವೃತ್ತಿಯನ್ನು ಕುರಿತು ಹೇಗೋ ಹಾಗೆಯೇ ಸುಖದುಃಖಾದಿಫಲಕ್ಕೂ ರಾಗ ದ್ವೇಷಾದಿಗಳು ಕಾರಣ. ದೋಷಜಲಾರ್ದ್ರವಾದ ಆತ್ಮಕ್ಷೇತ್ರದಲ್ಲಿ ಧರ್ಮಾಧರ್ಮ ಬೀಜಗಳು ಸುಖದುಃಖವೆಂಬ ಫಲವನ್ನು ಉಂಟುಮಾಡುತ್ತವೆ.

ದುಃಖವು ಹನ್ನೊಂದನೆಯ ಪ್ರಮೇಯ :- ದುಃಖದ ಸ್ವರೂಪವನ್ನು ತಿಳಿಯದವನಿಗೆ ಮೋಕ್ಷ ಮಾರ್ಗದ ಕ್ರಮಣದಲ್ಲಿ ಅಧಿಕಾರವೇ ಉಂಟಾಗುವುದಿಲ್ಲ. ಬಾಧನಾ, ಪೀಡಾ, ತಾಪ ಇತ್ಯಾದಿ ಏಕಾರ್ಥವಾಚಕ ಪರ್ಯಾಯ ಪದಗಳಿಂದ ಸೂಚಿತವಾದುದೇ ದುಃಖ (ಬಾಧನಾ ಲಕ್ಷಣ ದುಃಖಂ ೧-೧ ೨೧). ಆಧ್ಯಾತ್ಮಿಕ, ಆಧಿದೈವಿಕ, ಆಧಿಭೌತಿಕವೆಂದು ಈ ದುಃಖವು ಮೂರು ವಿಧ. ಇದನ್ನೇ ತಾಪತ್ರಯವೆಂದು ಹೇಳುತ್ತಾರೆ. ದುಃಖವು ಯಾವಾಗಲೂ ಎಲ್ಲರಿಗೂ ಅಪ್ರಿಯ. ಅದು ಅಪ್ರಿಯ-- ಅನಾನುಕೂಲವೆಂದೇ ಎಲ್ಲರಿಗೂ ಅನುಭವ, 'ಸರ್ವೇಷಾಂ ಪ್ರತಿಕೂಲವೇದನೀಯಂ ದುಃಖಂ' ಎಂದೇ ಅದರ ಲಕ್ಷಣ. ದುಃಖಯುಕ್ತವೂ ದುಃಖವೇ, ಸುಖವಿದ್ದಲ್ಲಿ ದುಃಖವು ಇರುವುದರಿಂದ ಸುಖ ದುಃಖಗಳಿಗೆ ಅವಿನಾಭಾವ ಸಂಬಂಧವಿದೆ. ಆದುದರಿಂದ ಜೀವರ ಸುಖವೂ ದುಃಖಾನುಷಕ್ತವಾದುದರಿಂದ ದುಃಖ ದುಃಖದ ಕಾರಣವಾದ ಶರೀರಾದಿಗಳೂ ದುಃಖ ; ಇಂದ್ರಿಯ ಸಮೂಹ, ಆ ಇಂದ್ರಿಯಗಳಿಂದ ಗ್ರಹಿಸಲು ಯೋಗ್ಯವಾದ ವಿಷಯ ಸಮೂಹ, ಅವುಗಳ ಜ್ಞಾನ ಇವೂ ದುಃಖಸಾಧನ. ದುಃಖಾನುಷಂಗ ಉಳ್ಳವುಗಳಾದುದರಿಂದ ದುಃಖಗಳೇ ಆಗಿವೆ. ಇವನ್ನೆಲ್ಲಾ ಸೇರಿಸಿ ೨೧ ದುಃಖಗಳೆಂದು ಹಿಂದೆಯೇ ಹೇಳಲಾಗಿದೆ. ಇವನ್ನೆಲ್ಲಾ ದುಃಖವೆಂದು ಭಾವಿಸುವುದೂ ಮುಮುಕ್ಷುವಿನ ಸಾಧನೆಯಲ್ಲಿ ಸೇರಿದೆ,

ಅಪವರ್ಗ :— (ಮೋಕ್ಷವು) ಹನ್ನೆರಡನೆಯ ಪ್ರಮೇಯ (ತದತ್ಯಂತ ವಿಮೋಕ್ಷೋಽಪವರ್ಗಃ ೧-೧-೨೨), ಹಿಂದೆಹೇಳಿದ ದುಃಖದ ಆತ್ಯಂತಿಕ ನಿವೃತ್ತಿಯೇ ಅಪವರ್ಗ. ಸುಷುಪ್ತಿ ಕಾಲದಲ್ಲಿಯೂ ಪ್ರಲಯಕಾದಿಗಳಲ್ಲಿಯೂ ದುಃಖನಿವೃತ್ತಿಯಾದರೂ ಅದು ಆತ್ಯಂತಿಕವಲ್ಲ. ಯಾವ ದುಃಖನಿವೃತ್ತಿಯ ಅನಂತರ ಪುನಃ ಎಂದೂ ಜನ್ಮ ಉಂಟಾಗುವುದಿಲ್ಲವೋ, ದುಃಖೋತ್ಪತ್ತಿಯ ಕಾರಣದ ಅಭಾವದಿಂದ ಕೂಡಿದ ದುಃಖನಿವೃತ್ತಿಯೇ ಆತ್ಯಂತಿಕ ದುಃಖನಿವೃತ್ತಿಯು.

ಹೀಗೆ ನ್ಯಾಯದರ್ಶನದಲ್ಲಿ ಮಹರ್ಷಿ ಗೌತಮರು ಆತ್ಮಾದಿ ಅಪವರ್ಗಾಂತವಾದ ೧೨ ಪ್ರಮೇಯಗಳನ್ನು ಹೇಳಿದ್ದಾರೆ. ಮೊದಲನೆಯ ಆತ್ಮ ಮತ್ತು ಕೊನೆಯ ಅಪವರ್ಗ ಇವೆರಡೂ ಉಪಾದೇಯ ಪ್ರಮೇಯಗಳು ಮಧ್ಯದ ಹತ್ತು ಪ್ರಮೇಯಗಳು ಹೇಯ (ತ್ಯಾಜ್ಯಗಳು) ಆತ್ಮನ ಉಚ್ಛೇದವು ಸರ್ವಥಾ ಅಪೇಕ್ಷಣೀಯವಲ್ಲ. ಅಪವರ್ಗವೂ ಎಂದೂ ಹೇಯವಲ್ಲ.

ದ್ರವ್ಯ, ಗುಣ, ಕರ್ಮ, ಸಾಮಾನ್ಯ, ವಿಶೇಷ, ಸಮವಾಯ-(ಅಭಾವ) ಗಳೆಂಬ ಪ್ರಮೇಯಾಂತರವೂ ಇದೆ. ಅದನ್ನೇಕೆ ಹೇಳಲಿಲ್ಲ ಎಂಬ ಆಕ್ಷೇಪವು ಇಲ್ಲಿ ಬರುತ್ತದೆ. ಆದರೆ ಆತ್ಮಾದಿ ಅಪವರ್ಗಾಂತವಾದ ಈ ಹನ್ನೆರಡು ಪ್ರಮೇಯಗಳ ಸಾಕ್ಷಾತ್ಕಾರವು ಸಕಲ ಪದಾರ್ಥ ವಿಷಯಕ ವಾದ ಮಿಥ್ಯಾಜ್ಞಾನವನ್ನು ಹೋಗಲಾಡಿಸಿ ಮುಕ್ತಿಯನ್ನುಂಟುಮಾಡುವುದಕ್ಕೆ ಸಾಕ್ಷಾತ್ ಕಾರಣವಾಗುತ್ತದೆ. ಮುಮುಕ್ಷುಗಳಿಗೆ ಯಾವುದು ಅತಿಶಯವಾಗಿ ತಿಳಿಯಲು ಯೋಗ್ಯವಾಗಿದೆಯೋ ಅದೇ ಪ್ರಮೇಯವು. (ಪ್ರಕರ್ಷೇಣ ಮೇಯಂ ಪ್ರಮೇಯಂ). ಮಹರ್ಷಿಗೌತಮರು ಈ ಅರ್ಥದಲ್ಲಿಯೇ ಆತ್ಮಾದಿ ಅಪವರ್ಗಾಂತವಾದ ಹನ್ನೆರಡು ಪದಾರ್ಥಗಳನ್ನು ಪ್ರಮೇಯವೆಂದು ಹೇಳಿದ್ದಾರೆ. ಪ್ರಮೇಯ ಶಬ್ದವನ್ನು ಆತ್ಮಾದಿ ಅಪವರ್ಗಾಂತ ಪದಾರ್ಥಗಳಲ್ಲಿ ಪಾರಿಭಾಷಿಕವಾಗಿ ನ್ಯಾಯ ದರ್ಶನದಲ್ಲಿ ಬಳಸಲಾಗಿದೆ ಎಂಬುದೇ ನಿಷ್ಕರ್ಷ.

(ಅಸ್ತ್ಯನ್ಯದಪಿ ದ್ರವ್ಯಗುಣಕರ್ಮ ಸಾಮಾನ್ಯವಿಶೇಷ ಸಮವಾಯಾಃ ಪ್ರಮೇಯಂ ತದ್ ಭೇದೇನ ಚ ಅಪರಿಸಂಖ್ಯೇಯಂ। ಅಸ್ಯತು ತತ್ತ್ವಜ್ಞಾನಾದಪವರ್ಗಃ ಮಿಥ್ಯಾಜ್ಞಾನಾತ್ ಸಂಸಾರಃ ಇತ್ಯತಃ ಏತದುಪದಿಷ್ಟಂ ವಿಶೇಷೇಣೇತಿ ವಾತ್ಸ್ಯಾಯನ ಭಾಷ್ಯ ೧-೧-೯)

ಗೌತಮರ ಅನೇಕ ಸೂತ್ರಗಳಿಂದ ಪರಮಾಣು ನಿತ್ಯತಾಅವಯವಿಸಿದ್ಧಿಗಳು ಅವರಿಗೂ ಅಭಿಮತವೆಂದು ತಿಳಿದು ಬರುವುದರಿಂದ ಕಾಣಾದಪ್ರೋಕ್ತವಾದ ದ್ರವ್ಯಾದಿ-ಆರು ಪದಾರ್ಥಗಳು ಗೌತಮರಿಗೂ ಒಪ್ಪಿಗೆಯಾಗಿವೆ ಎಂದು ನಿರ್ಧರಿಸಬಹುದು. ಅಭಾವವೆಂಬ ಪ್ರಮೇಯದ ಚರ್ಚೆಯೂ ಇಲ್ಲಿ ನಡೆದಿದೆ. ಗಂಗೇಶನೇ ಮುಂತಾದ ನವೀನ ನೈಯಾಯಿಕರು ಪ್ರಮಾಣ ವಿಷಯದಲ್ಲಿ ಗೌತಮರ ಮತವನ್ನು ಒಪ್ಪಿದರೂ ದ್ರವ್ಯಾದಿ ಸಪ್ತಪದಾರ್ಥಗಳನ್ನು ವೈಶೇಷಿಕ ರಂತೆಯೇ ಅಂಗೀಕರಿಸುತ್ತಾರೆ. ವಿಶ್ವನಾಥನ್ಯಾಯಪಂಚಾನನು ಸಿದ್ಧಾಂತ ಮುಕ್ತಾವಲೀ ಗ್ರಂಥದಲ್ಲಿ ಹೀಗೆ ಹೇಳುತ್ತಾನೆ-(ಏತೇ ಚ ಪದಾರ್ಥಾಃ ವೈಶೇಷಿಕಪ್ರಸಿದ್ಧಾ ನೈಯಾಯಿಕಾ ನಾಮಪ್ಯವಿರುದ್ಧಾಃ, ಪ್ರತಿಪಾದಿತಂ ಚೈವಮೇವ ಭಾಷ್ಯೇ) —

ನ್ಯಾಯಶಾಸ್ತ್ರದ ಇನ್ನುಳಿದ ಸಂಶಯಾದಿ ೧೪ ಪದಾರ್ಥಗಳ ವಿಚಾರವನ್ನೀಗಮಾಡ ಬೇಕಾಗಿದೆ. ಈ ಸಂಶಯಾದಿ ೧೪ ಪದಾರ್ಥಗಳೇ ನ್ಯಾಯಶಾಸ್ತ್ರದ ಪ್ರಧಾನಪ್ರತಿಪಾದ್ಯ ವಿಷಯಗಳೆಂದು ತಿಳಿಯಬೇಕಾಗಿದೆ. ಬೇರೆ ಯಾವ ಶಾಸ್ತ್ರದಲ್ಲಿಯೂ ಈ ಸಂಶಯಾದಿ ಪದಾರ್ಥಗಳ ಪ್ರತಿಪಾದನೆಯಿಲ್ಲ. ಪ್ರಸ್ಥಾನಭೇದದಿಂದಲೇ ವಿದ್ಯೆ ಅಂದರೆ ಶಾಸ್ತ್ರದಲ್ಲಿ ಭೇದವುಂಟಾಗಲು ಸಾಧ್ಯ. ಆದುದರಿಂದಲೇ ತ್ರಯೀ, ವಾರ್ತಾ, ದಂಡನೀತಿ ಎಂಬ ಮೂರು ವಿದ್ಯೆಗಳ ಜತೆಗೆ ಅವುಗಳಿಗಿಂತ ಭಿನ್ನವಾಗಿ ಆನ್ವೀಕ್ಷಿಕಿಯನ್ನು ಪರಿಗಣಿಸಲಾಗಿದೆ. ಸಂಶಯ-ಇದು ಮೂರನೆಯ ಪದಾರ್ಥ. ನ್ಯಾಯದ ಪೂರ್ವಾಂಗ ನಿಶ್ಚಿತವಾದ ಪದಾರ್ಥದ ವಿಷಯದಲ್ಲಿ ನ್ಯಾಯವು (ಪಂಚಾವಯವ ವಾಕ್ಯವು) ಪ್ರವರ್ತಿಸುವುದಿಲ್ಲ. ಯಾವ ಪದಾರ್ಥ ವಿಷಯದಲ್ಲಿ ಸಂಶಯವಿರುತ್ತದೆಯೋ ಅಲ್ಲಿಯೇ ನ್ಯಾಯದ ಪ್ರವೃತ್ತಿಯುಂಟಾಗುತ್ತದೆ. ವಾದಿ

ಪ್ರತಿವಾದಿಗಳಿಗೆ ತಮ್ಮ ತಮ್ಮ ಸಿದ್ಧಾಂತದ ವಿಷಯದಲ್ಲಿ ಸಂಶಯವಿರುವುದಿಲ್ಲ. ಆದರೆ ಮಧ್ಯಸ್ಥನ ಸಂಶಯವನ್ನು ಹೋಗಲಾಡಿಸುವುದಕ್ಕಾಗಿ ವಾದಿ ಪ್ರತಿವಾದಿಗಳು ಪ್ರತಿಜ್ಞಾದಿ ವಾಕ್ಯಪ್ರಯೋಗಮಾಡಿ ತಮ್ಮ ಪಕ್ಷದ ಸ್ಥಾಪನೆ ಮತ್ತು ಪರಪಕ್ಷದ ಖಂಡನೆಯನ್ನು ಮಾಡುತ್ತಾರೆ. ಮಧ್ಯಸ್ಥನ ಸಂಶಯವೇ ನ್ಯಾಯ ಪ್ರಯೋಗಕ್ಕೆ ಮೂಲ. (ಸಮಾನಾನೇಕಧರ್ಮೋಪಪತ್ತೇಃ ವಿಪ್ರತಿಪತ್ತೇಃ ಉಪಲಬ್ಧ್ಯನುಪಲಬ್ಧ್ಯವ್ಯವಸ್ಥಾತಃ ವಿಶೇಷಾಪೇಕ್ಷೋ ವಿಮರ್ಶಃ ಸಂಶಯಃ ೧–೧–೨೩)—ಈ ಸೂತ್ರದಲ್ಲಿ ವಿಮರ್ಶ ಎಂಬ ಪದದಿಂದ ಸಂಶಯ ಸಾಮಾನ್ಯಲಕ್ಷಣವನ್ನೂ, ಉತ್ಪತ್ತಿಕಾರಣಭೇದದಿಂದ ಅದರ ವಿಭಾಗವನ್ನೂ ಹೇಳಿದೆ. 'ಅನವಧಾರಣಜ್ಞಾನ' ವೇ ಸಂಶಯವು. ವಿಶೇಷ ಧರ್ಮವನ್ನು ಬೇರೆ ಕಡೆ ನೋಡಿದ್ದು, ಎದುರಿಗಿರುವ ಪದಾರ್ಥದಲ್ಲಿ ಸಾಧಾರಣ ಧರ್ಮವನ್ನು ಕಂಡಾಗ ವಿಶೇಷಧರ್ಮಗಳ ಸ್ಮರಣೆ ಬಂದು, ಅನಂತರ ಸಂಶಯ ಉಂಟಾಗುತ್ತದೆ. 'ಸ್ಥಾಣುರ್ವಾ ಪುರುಷೋ ವಾ' ಎಂಬುದು ಊರ್ಧ್ವತ್ವ (ಎತ್ತರವಾಗಿರುವಿಕೆ) ಎಂಬ ಸಾಧಾರಣಧರ್ಮದ ಜ್ಞಾನದಿಂದ ಸ್ಥಾಣುತ್ವಪುರುಷತ್ವ ಕೋಟಿಗಳ ಸ್ಮರಣೆ ಬಂದಾಗ ಉಂಟಾಗುವ ಸಂಶಯ. ಸ್ಥಾಣುರ್ನ ವಾ ಪುರುಷೋ ನ ವಾ ಹೀಗೂ ಸಂಶಯ ಬರುತ್ತದೆ. ಅಯಂ ಸ್ಥಾಣುರ್ನವಾ, ಅಯಂ ಪುರುಷೋ ನ ವಾ ಇವೂ ಸಂಶಯದ ಎರಡು ಪ್ರಕಾರಗಳು. ಭಾಷ್ಯಕಾರಾದಿ ಪ್ರಾಚೀನಾಚಾರ್ಯರು ಭಾವಕೋಟಿಕಸಂಶಯವನ್ನು ಒಪ್ಪುತ್ತಾರೆ. ಸ್ವಪ್ನೋನು, ಮಾಯಾನು, ಮತಿಭ್ರಮೋನು (ಅಭಿಜ್ಞಾನಶಾಕುಂತಲ) ಎಂಬ ಪದ್ಯದಲ್ಲಿಯೂ ; ಕಿಮಿಂದುಃ ಕಿಂ ಪದ್ಮಂ, ಕಿಮು ಮುಕುರಬಿಂಬಂ, ಕಿಮು ಮುಖಂ— ಇತ್ಯಾದಿ ಸ್ಥಳದಲ್ಲಿಯೂ ಭಾವಕೋಟಿಕಸಂಶಯವನ್ನು ವರ್ಣಿಸುತ್ತಾರೆ.

ಶಬ್ದದಲ್ಲಿ ನಿತ್ಯತ್ವ ಅನಿತ್ಯತ್ವಧರ್ಮದ ನಿಶ್ಚಯವಿಲ್ಲದಿದ್ದಾಗ ಶಬ್ದದಲ್ಲಿರುವ ಶಬ್ದತ್ವ ಅಥವಾ ಆಕಾಶವಿಶೇಷಗುಣತ್ವ ಎಂಬ ಧರ್ಮದ ಜ್ಞಾನದಿಂದ 'ಶಬ್ದಃ ನಿತ್ಯೋನ ವಾ' ಶಬ್ದವು ನಿತ್ಯವೇ ಅಲ್ಲವೇ ? ಎಂದು ಸಂಶಯವು ಬರುತ್ತದೆ.

ಶಬ್ದವು ನಿತ್ಯ ಎಂಬ ಮೀಮಾಂಸಕನ ವಾಕ್ಯ, ಶಬ್ದವು ಅನಿತ್ಯ ಎಂಬ ತಾರ್ಕಿಕನ ವಾಕ್ಯ—ಈ ಎರಡನ್ನೂ ಕೇಳಿದಾಗ ಮಧ್ಯಸ್ಥನಿಗೆ ಶಬ್ದವು ನಿತ್ಯವೋ ಅನಿತ್ಯವೋ ಎಂಬ ಸಂಶಯ ಬರುತ್ತದೆ. ಪರಸ್ಪರ ವಿರುದ್ಧವಾದ ಎರಡು ವಿಷಯಗಳನ್ನು ಹೇಳುವ ವಾಕ್ಯವು ವಿಪ್ರತಿಪತ್ತಿ. ಮಧ್ಯಸ್ಥನಿಗೆ ಬಂದ ಸಂಶಯವನ್ನು ಹೋಗಲಾಡಿಸಲು ವಾದಿ ಪ್ರತಿವಾದಿಗಳು ಅನಂತರ ಪಂಚಾವಯವ ವಾಕ್ಯಗಳನ್ನು ಪ್ರಯೋಗಮಾಡಿ ತಮ್ಮ ತಮ್ಮ ಸಿದ್ಧಾಂತವನ್ನು ಕಾಪಾಡಿಕೊಳ್ಳಲು ಪ್ರಯತ್ನಿಸುತ್ತಾರೆ.

ಉಪಲಬ್ಧಿಯ ಅವ್ಯವಸ್ಥೆ, ಅನುಪಲಬ್ಧಿಯ ಅವ್ಯವಸ್ಥೆ—ಇವೆರಡೂ ಪ್ರತ್ಯೇಕವಾಗಿ ಸಂಶಯಕಾರಣಗಳು. ಅವ್ಯವಸ್ಥೆಯೆಂದರೆ ನಿಯಮದ ಅಭಾವ. ಜಲಾಶಯದಲ್ಲಿ ಮೊದಲೇ ಇದ್ದ ಜಲವು ಹತ್ತಿರ ಹೋದಾಗ ಕಾಣಿಸುತ್ತದೆ. ಇಲ್ಲದೇ ಇದ್ದ ಘಟವು ಅನಂತರ

ಉತ್ಪನ್ನವಾಗುತ್ತದೆ, ಮರುಮರೀಚಿಕೆಯಲ್ಲಿ ಇಲ್ಲದೇ ಇದ್ದರೂ ಜಲವಿದ್ದಂತೆ ಕಾಣಿಸುತ್ತದೆ. ಬಾವಿ ತೋಡಿದ ಮೇಲೆ ನೀರು ಸಿಕ್ಕಿದಾಗ ಈ ಜಲವು ಮೊದಲೇ ಇತ್ತೇ ಅಥವಾ ಮೊದಲು ಇಲ್ಲದೇ ಇದ್ದ ಘಟವು ಕುಲಾಲನ ವ್ಯಾಪಾರದಿಂದ ಉಪಲಬ್ಧವಾಗುವಂತೆ ಅನಂತರ ಉತ್ಪನ್ನ ವ್ಯಾಯಿಂತೇ ಎಂಬ ಸಂಶಯುವು ಬರುತ್ತದೆ. ಏಕೆಂದರೆ ಇರತಕ್ಕಂತ ಪದಾರ್ಥಕ್ಕೂ ಇಲ್ಲದೇ ಇರತಕ್ಕ ಪದಾರ್ಥಕ್ಕೂ ಉಪಲಬ್ಧಿ ಇದೆ. ಹೀಗಿಯೇ ವಟ ವೃಕ್ಷದಲ್ಲಿ ಪಿಶಾಚ ಇದೆ ಎಂದು ಕೇಳಿದವನಿಗೆ ಮರದ ಹತ್ತಿರ ಹೋದಾಗ ಪಿಶಾಚವು ಕಾಣಿಸದಿದ್ದರೆ ' ಪಿಶಾಚಃ ವಿದ್ಯಮಾನೋನ ವಾ' ಪಿಶಾಚವು ಇದೆಯೋ ಇಲ್ಲವೇ ಎಂಬ ಸಂಶಯುವು ಬರುತ್ತದೆ ; ಏಕೆಂದರೆ ವಿದ್ಯಮಾನವಾದ ಈಶ್ವರಾದಿಗಳಿಗೂ ಅವಿದ್ಯಮಾನವಾದ ಶಶವಿಷಾಣಾದಿಗಳಿಗೂ ಅನುಪಲಬ್ಧಿಯಿದೆ.

ಪ್ರಯೋಜನವೂ ನ್ಯಾಯುದ ಪೂರ್ವಾಂಗ :—ಏಕೆಂದರೆ ಪ್ರಯೋಜನವಿಲ್ಲದೆ ನ್ಯಾಯುದ ಪ್ರವೃತ್ತಿಯಿಲ್ಲ. ಯಾವ ವಿಷಯುವನ್ನು ಪ್ರಾಪ್ಯ (ಹೊಂದಬೇಕಾದುದು) ಅಥವಾ ತ್ಯಾಜ್ಯ ವೆಂದು ತಿಳಿದು ಅದರ ಪ್ರಾಪ್ತಿ ಅಥವಾ ತ್ಯಾಗಕ್ಕಾಗಿ ಪ್ರಯತ್ನ ಮಾಡುತ್ತಾನೋ ಆ ವಿಷಯುವೇ ಪ್ರಯೋಜನವು ' ಯಮರ್ಥಮಧಿಕೃತ್ಯ ಪ್ರವರ್ತತೇ ತತ್ ಪ್ರಯೋಜನಂ , ೧-೧-೨೪ಇದು ಪ್ರಯೋಜನದ ಲಕ್ಷಣ ತ್ಯಾಜ್ಯ ಪದಾರ್ಥವೂ ಪ್ರವೃತ್ತಿಗೆ ಕಾರಣ. ಪ್ರಯೋಜನವು ಎರಡು ವಿಧ. ಮುಖ್ಯ ಮತ್ತು ಗೌಣ. ಸುಖ ಮತ್ತು ದುಃಖನಿವೃತ್ತಿಗಳು ಮುಖ್ಯ ಪ್ರಯೋಜನಗಳು, ಸುಖೋಪಾಯು ಮತ್ತು ದುಃಖನಿವೃತ್ತ್ಯುಪಾಯುಗಳು ಗೌಣ ಪ್ರಯೋಜನಗಳು.

ದೃಷ್ಟಾಂತ :—ನ್ಯಾಯುಪ್ರಯೋಗದಲ್ಲಿ ಉದಾಹರಣವಾಕ್ಯದಲ್ಲಿ ದೃಷ್ಟಾಂತವನ್ನು ಪ್ರಯೋಗಿಸುತ್ತಾರೆ ದೃಷ್ಟಾಂತದ ಸ್ವರೂಪಜ್ಞಾನವಿಲ್ಲದೆ ಅದನ್ನು ಪ್ರಯೋಗಿಸಲು ಸಾಧ್ಯವಿಲ್ಲ

ಸ್ವಾಭಾವಿಕವಾದ ಅಥವಾ ಶಾಸ್ತ್ರಪರಿಶೀಲನದಿಂದ ಉಂಟಾದ ಬುದ್ಧಿ ಪ್ರಕರ್ಷವನ್ನು ಹೊಂದದೆ ಇರುವವನು ಲೌಕಿಕನು. ಶಾಸ್ತ್ರಪರಿಶೀಲನದಿಂದ ಬುದ್ಧಿ ಪ್ರಕರ್ಷ ಹೊಂದಿದವನು ಪರೀಕ್ಷಕನು ; ಲೌಕಿಕನಿಗೆ ವಿಷಯುವನ್ನು ತಿಳಿಸಿಕೊಡಲು ಸಮರ್ಥನಾದವನು, ಇವರಿಬ್ಬರಿಗೂ ಯಾವ ಪದಾರ್ಥದ ವಿಷಯುದಲ್ಲಿ ಬುದ್ಧಿಯ ಸಾಮ್ಯವಿದೆಯೋ ಅಂತಹ ವಿಷಯುವನ್ನು ದೃಷ್ಟಾಂತವೆಂದು ಹೇಳುತ್ತಾರೆ. (ಲೌಕಿಕ ಪರೀಕ್ಷಕಾಣಾಂ ಯಸ್ಮಿನ್ನರ್ಥೇ ಬುದ್ಧಿ ಸಾಮ್ಯಂ ಸ ದೃಷ್ಟಾಂತಃ ೧-೧-೨೫) ವಾದಿ ಪ್ರತಿವಾದಿಗಳಿಗೆ ಮತವೈಷಮ್ಯ ಇರುವ ವಿಷಯುವೂ ದೃಷ್ಟಾಂತವಾಗುವುದಿಲ್ಲ. ಇಲ್ಲಿ ಲೌಕಿಕ ವ್ಯಕ್ತಿಗಳ ಬುದ್ಧಿಗಮ್ಯಪದಾರ್ಥವೇ ದೃಷ್ಟಾಂತವಾಗ ಬೇಕೆಂಬ ನಿಯುಮವೂ ಇಲ್ಲ. ವೇದಪ್ರಾಮಾಣ್ಯವನ್ನು ಸಾಧಿಸುವಾಗ ಮಂತ್ರಾಯುರ್ವೇದ ಪ್ರಾಮಾಣ್ಯವನ್ನು ದೃಷ್ಟಾಂತವಾಗಿ ಕೊಡುತ್ತಾರೆ. ಮಂತ್ರಪ್ರಾಮಾಣ್ಯ ಮತ್ತು ಆಯುರ್ವೇದ ಪ್ರಾಮಾಣ್ಯವು ಲೌಕಿಕ ಬುದ್ಧಿ ಗಮ್ಯವಲ್ಲ, ಆದರೂ ಲೌಕಿಕರೂ ಒಪ್ಪತಕ್ಕ ವಿಷಯು ಎಂದಿಷ್ಟೇ ಹೇಳಬಹುದು, ಈ ದೃಷ್ಟಾಂತವು ಸಾಧರ್ಮ್ಯದೃಷ್ಟಾಂತ. ವೈಧರ್ಮ್ಯದೃಷ್ಟಾಂತವೆಂದು ಎರಡು ವಿಧ ಪರ್ವತವು ಮಹಾನಸದಂತೆ ವಹ್ನಿಯುಳ್ಳದ್ದು ಎಂಬುದು ಸಾಧರ್ಮ್ಯ ದೃಷ್ಟಾಂತ, ಪರ್ವತವು ಹ್ರದದಂತೆ ವಹ್ನಿರಹಿತವಲ್ಲ ಎಂಬುದು ವೈಧರ್ಮ್ಯ ದೃಷ್ಟಾಂತ.

ಸಿದ್ಧಾಂತ :—ಯಾವುದಾದರೊಂದು ಸಿದ್ಧಾಂತವನ್ನು ಅವಲಂಬಿಸಿಯೇ ಅದರ ಸ್ಥಾಪನೆಗೋಸ್ಕರವಾಗಿ ಒಂದು ದೃಷ್ಟಾಂತವನ್ನಿಟ್ಟುಕೊಂಡು ನ್ಯಾಯ ಪ್ರಯೋಗವನ್ನು ಮಾಡುತ್ತಾರೆ. ಆದ್ದರಿಂದ ಸಿದ್ಧಾಂತವೆಂದರೆ ಯಾವುದು ? ಅದು ಎಷ್ಟು ವಿಧವೆಂದು ಅವಶ್ಯಕವಾಗಿ ತಿಳಿಯಬೇಕಾಗಿದೆ. ಆಯಾಶಾಸ್ತ್ರದಲ್ಲಿ ನಿಶ್ಚಿತವಾದ ಅರ್ಥವೇ ಸಿದ್ಧಾಂತವು ಅದು ನಾಲ್ಕು ವಿಧ. (೧) ಸರ್ವತಂತ್ರಸಿದ್ಧಾಂತ (೨) ಪ್ರತಿತಂತ್ರ ಸಿದ್ಧಾಂತ (೩) ಅಧಿಕರಣ ಸಿದ್ಧಾಂತ (೪) ಅಭ್ಯುಪಗಮಸಿದ್ಧಾಂತ, ಎಲ್ಲಾ ಶಾಸ್ತ್ರಗಳಿಗೂ ಅವಿರೋಧಿಯಾದ ಒಂದು ಶಾಸ್ತ್ರದಲ್ಲಿ ಹೇಳಿರುವ ಸಿದ್ಧಾಂತವೇ ಸರ್ವತಂತ್ರ ಸಿದ್ಧಾಂತ–ಆತ್ಮನು ನಿತ್ಯ, ಚಕ್ಷುರಾದಿಗಳು ಇಂದ್ರಿಯಗಳು, ಆತ್ಮನಿಗೆ ಜ್ಞಾನ ಸಾಧನಗಳು. ಪೃಥಿವ್ಯಾದಿಗಳು ಭೂತಗಳು ಎಂಬ ವಿಷಯವನ್ನು ಪ್ರಾಯಃ ಎಲ್ಲಾ ಆಸ್ತಿಕ ಸಿದ್ಧಾಂತಿಗಳೂ ಒಪ್ಪುತ್ತಾರೆ. ಸಮಾನತಂತ್ರದಲ್ಲಿ (ಶಾಸ್ತ್ರದಲ್ಲಿ) ಒಪ್ಪಿರುವ ಆದರೆ ಬೇರೆ ಶಾಸ್ತ್ರದಲ್ಲಿ ಒಪ್ಪದಿರುವ ಸಿದ್ಧಾಂತವೇ ಪ್ರತಿತಂತ್ರಸಿದ್ಧಾಂತ. ಶಬ್ದವು ಅನಿತ್ಯ ಎಂಬ ನ್ಯಾಯಸಿದ್ಧಾಂತವು ಸಮಾನತಂತ್ರವಾದ ವೈಶೇಷಿಕ ಶಾಸ್ತ್ರಕ್ಕೆ ಸಮ್ಮತ, ಆದರೆ ಮೀಮಾಂಸಕರಿಗೆ ಸಮ್ಮತವಲ್ಲ,

ಯಾವ ವಿಷಯವು ಸಿದ್ಧವಾದರೆ ಮತ್ತೊಂದು ಪ್ರಕೃತ ವಿಷಯವು ಸಿದ್ಧವಾಗುತ್ತದೆಯೊ ಅದು ಅಧಿಕರಣಸಿದ್ಧಾಂತವು, 'ದ್ವ್ಯಣುಕಂ ಸಕರ್ತೃಕಂ ಕಾರ್ಯತ್ವಾತ್ ಘಟವತ್" ಎಂಬಲ್ಲಿ ದ್ವ್ಯಣುಕಕ್ಕೆ ಸಕರ್ತೃಕತ್ವವು ಸಿದ್ಧವಾದರೆ ಅದಕ್ಕೆ ಉಪಾದಾನಕಾರಣವಾದ ಪರಮಾಣುವಿನ ಸಾಕ್ಷಾತ್ಕಾರ ಇತ್ಯಾದಿಗಳು ಸಿದ್ಧವಾಗಿ ಈಶ್ವರನ ಸರ್ವಜ್ಞತ್ವವು ಸಿದ್ಧವಾಗುತ್ತದೆ. ಹೀಗೆಯೇ ಆತ್ಮನು ಇಂದ್ರಿಯಭಿನ್ನನು ಎಂಬ ವಿಷಯ ಸಿದ್ಧವಾಗುವಾಗ ಅನುಷಂಗಿಕವಾಗಿ ಇಂದ್ರಿಯ ನಾನಾತ್ವವೂ ಸಿದ್ಧವಾಗುತ್ತದೆ ಅಭ್ಯುಪಗಮಸಿದ್ಧಾಂತ ಎಂದರೆ ಪ್ರತಿವಾದಿಯು ವಾದಿಯ ಯಾವುದೋಸಿದ್ಧಾಂತವನ್ನು ಪರೀಕ್ಷಿಸದೆ ಒಪ್ಪಿಕೊಳ್ಳುವುದು ಅಭ್ಯುಪಗಮಸಿದ್ಧಾಂತ.ಮೀಮಾಂಸಕರು ಶಬ್ದವನ್ನು ದ್ರವ್ಯ ಮತ್ತು ನಿತ್ಯ ಎಂದು ಹೇಳಿದಾಗ ಪ್ರತಿವಾದಿಯಾದ ನೈಯಾಯಿಕನು ಶಬ್ದವು ದ್ರವ್ಯವಾಗಲಿ ಆದರ ಅದು ನಿತ್ಯವೋ ಅನಿತ್ಯವೋ ಎಂದು ವಿಕಲ್ಪಿಸಿ ದೋಷವನ್ನು ಹೇಳುತ್ತಾನೆ. ಇಲ್ಲಿ ತಾತ್ಕಾಲಿಕವಾದ ಅಭ್ಯುಪಗಮವಾದುದರಿಂದ ಇದು ಅಪಸಿದ್ಧಾಂತವಲ್ಲ ಇದನ್ನು ಸಾಮಾನ್ಯವಾಗಿ ಶಾಸ್ತ್ರದಲ್ಲಿ ಅಭ್ಯುಪೇತ್ಯವಾದ, ಕೃತ್ವಾಚಿಂತಾ, ಎಂದು ಹೇಳುತ್ತಾರೆ.

ಅವಯವ :—ಅವಯವದ ವಿಷಯದಲ್ಲಿ ವಿಷಯಗಳನ್ನು ಹೇಳಿದ್ದಾಗಿದೆ. ನ್ಯಾಯ ಪ್ರಯೋಗದಿಂದ ಸಿದ್ಧಾಂತಿಸುವುದಕ್ಕೆ ಅವಯವಜ್ಞಾನ ಆವಶ್ಯಕ. ಅನುಮಾನವು ಸ್ವಾರ್ಥಾನುಮಾನ ಪರಾರ್ಥಾನುಮಾನವೆಂದು ಎರಡು ವಿಧ. ತನ್ನ ತಿಳುವಳಿಕೆ ಕಾರಣವಾದ ಅನುಮಾನವು ಸ್ವಾರ್ಥಾನುಮಾನವು. ಇಲ್ಲಿ ವಾಕ್ಯಪ್ರಯೋಗದ ಅವಶ್ಯಕತೆಯಿಲ್ಲ, ಇನ್ನೊಬ್ಬನಿಗೆ ತಿಳಿಸಲು ವಾಕ್ಯಪ್ರಯೋಗ ಮಾಡುವುದೇ ಪರಾರ್ಥಾನುಮಾನವು. ಆಗ ಪ್ರಯೋಗಮಾಡುವ ಐದು ವಾಕ್ಯಗಳನ್ನೇ ನ್ಯಾಯವೆಂದೂ. ಅವರ ಒಂದೊಂದು ವಾಕ್ಯವನ್ನೂ ಅವಯವವೆಂದೂ ಹೇಳುತ್ತಾರೆ. ಮೊದಲನೆಯ ಅವಯವವು ಪ್ರತಿಜ್ಞಾ. ಪಕ್ಷವನ್ನು ಸಾಧ್ಯ ವಿಶಿಷ್ಟವನ್ನಾಗಿ

ನಿರ್ದೇಶಿಸುವುದೇ ಪ್ರತಿಜ್ಞೆ. (ಸಾಧ್ಯನಿರ್ದೇಶಃ ಪ್ರತಿಜ್ಞಾ-೧-೧-೩೩). ಶಬ್ದಃ ಅನಿತ್ಯಃ ಎಂಬದು ಪ್ರತಿಜ್ಞೆ. ಅನುಮೇಯವಾದ (ಊಹಿಸಿ ತಿಳಿಯಲ್ಪಡುತ್ತಿರುವ) ವಸ್ತುವಿಗೆ ಜ್ಞಾಪಕವಾದ ವಸ್ತುವನ್ನು ಹೇಳುವ ಶಬ್ದವನ್ನು ಹೇತುತ್ವಬೋಧಕ ವಿಭಕ್ತ್ಯಂತವಾಗಿ ಹೇಳುವುದೇ ಹೇತು. 'ಶಬ್ದಃ ಅನಿತ್ಯಃ' ಶಬ್ದವು ಅನಿತ್ಯ ಎಂಬ ಪ್ರತಿಜ್ಞೆಗೆ 'ಉತ್ಪತ್ತಿಮತ್ವಾತ್' ಹುಟ್ಟುವುದರಿಂದ ಎಂಬುದು ಹೇತುವು. ಯಾವ ವಾಕ್ಯದಿಂದ ಹೇತುಸಾಧ್ಯಗಳ ವ್ಯಾಪ್ಯವ್ಯಾಪಕಭಾವಸಂಬಂಧದ ಜ್ಞಾನವುಂಟಾಗುತ್ತದೆಯೋ ಅದು ಉದಾಹರಣ—ಉತ್ಪತ್ತಿಉಳ್ಳದ್ದೆಲ್ಲವೂ ಅನಿತ್ಯ ಘಟದಂತೆ (ಯೋ ಯಃ ಉತ್ಪತ್ತಿಮಾನ್ ಸೋಽನಿತ್ಯಃ ಯಥಾ ಘಟಃ) ಎಂಬುದು ಉದಾಹರಣ. ಉಪನಯವೆಂದರೆ ದೃಷ್ಟಾಂತದಲ್ಲಿದ್ದಂತೆಯೇ ಪಕ್ಷದಲ್ಲಿಯೂ ಹೇತುವಿದೆಯೆಂದು ಹೇಳುವುದು. 'ತಥಾಚ ಉತ್ಪತ್ತಿಧರ್ಮಕಃ ಶಬ್ದಃ ಘಟದಂತೆಯೇ ಶಬ್ದವೂ ಉತ್ಪತ್ತಿಯುಳ್ಳದ್ದು. ಹೇತುಸಹಿತವಾಗಿ ಪ್ರತಿಜ್ಞಾವಾಕ್ಯವನ್ನ ಪುನಃ ಹೇಳುವುದೇ ನಿಗಮನ-(ಉಪಸಂಹಾರ). (ತಸ್ಮಾದುತ್ಪತ್ತಿಧರ್ಮಕತ್ವಾದನಿತ್ಯಃ ಶಬ್ದಃ) ಉತ್ಪತ್ತಿ ಉಳ್ಳದ್ದರಿಂದ ಶಬ್ದವೂ ಅನಿತ್ಯ. ಅವಯವಗಳ ಸಂಖ್ಯೆಯ ವಿಷಯದಲ್ಲಿ ವಿವಾದವಿದೆ. ಮೀಮಾಂಸಕರು ಪಂಚಾವಯವ ಪ್ರಯೋಗಗಳ ಅವಶ್ಯಕತೆಯಿಲ್ಲ, ಪ್ರತಿಜ್ಞಾದಿ ಮೂರು ಅಥವಾ ಉದಾಹರಣಾದಿ ಮೂರು ಅವಯವಗಳು ಸಾಕು ಎಂದು ಹೇಳುತ್ತಾರೆ. ಬೌದ್ಧರು ಉದಾಹರಣ ಮತ್ತು ಉಪನಯವೆಂಬ ಎರಡೇ ಅವಯವಗಳು ಸಾಕು ಎಂದು ಹೇಳುತ್ತಾರೆ. 'ಅವಯವಗಳ ಸಂಖ್ಯೆಯ ವಿಷಯದಲ್ಲಿ ನಿಯಮವೇ ಇಲ್ಲ. ಕೆಲವು ಸ್ಥಳಗಳಲ್ಲಿ ೫, ಕೆಲವು ಕಡೆ ೩, ಮತ್ತು ಕೆಲವು ಸ್ಥಳಗಳಲ್ಲಿ ೨ ಅವಯವಗಳೇ ಸಾಕು' ಎಂದು ಮತ್ತೆ ಕೆಲವರು ಹೇಳುತ್ತಾರೆ. (ಯತೀಂದ್ರಮತದೀಪಿಕಾ–ಶ್ರೀನಿವಾಸ ವಿರಚಿತ, ಪ್ರಮಾಣ ಪದ್ಧತಿ-ಜಯತೀರ್ಥವಿರಚಿತ). ಆದರೆ ಜಿಗೀಷಾ ಮೂಲಕವಾದ ವ್ಯವಹಾರದಲ್ಲಿ ಪಂಚಾವಯವ ಪ್ರಯೋಗವೇ ಉಚಿತ, ನ್ಯಾಯಸಾರದಲ್ಲಿ ಭಾಸರ್ವಜ್ಞನೂ, ಪ್ರಶಸ್ತಪಾದನೂ ಪಂಚಾವಯವಗಳ ಉಲ್ಲೇಖವನ್ನು ಮಾಡಿದ್ದಾರೆ. ಚರಕಸಂಹಿತೆಯ ವಿಮಾನಸ್ಥಾನವೆಂಬ ಎಂಟನೆಯ ಅಧ್ಯಾಯದಲ್ಲಿ ಪಂಚಾವಯವಗಳನ್ನು ಉದಾಹರಣಸಹಿತವಾಗಿ ಉಲ್ಲೇಖಿಸಿದ್ದಾರೆ. ವಿಷ್ಣುಧರ್ಮೋತ್ತರ ಪುರಾಣದಲ್ಲಿ ಪಂಚಾವಯವಗಳ ಉಲ್ಲೇಖವು ಬಂದಿದೆ. (ಪ್ರತಿಜ್ಞಾಹೇತು ದೃಷ್ಟಾಂತಾವುಪ ಸಂಹಾರ ಏವ ಚ । ತಥಾ ನಿಗಮನಂ ಚೈವ ಪಂಚಾವಯವಮಿಷ್ಯತೇ ॥ ವಿಷ್ಣುಧರ್ಮೋತ್ತರ ೩-೫-೫). ಮಹಾಭಾರತದ ಸಭಾಪರ್ವದಲ್ಲಿ ನಾರದರ ವರ್ಣನ ಪ್ರಸಂಗದಲ್ಲಿಯೂ-ಪಂಚಾವಯವಯುಕ್ತಸ್ಯ ವಾಕ್ಯಸ್ಯ ಗುಣದೋಷವಿತ್(ಸಭಾ-೫-೫) ಎಂಬುದಾಗಿ ಉಲ್ಲೇಖವಿದೆ. ಆದುದರಿಂದ ಈ ಪಂಚಾವಯವವಾದವು ಬಹು ಪ್ರಾಚೀನಕಾಲದಿಂದ ಪ್ರಚಲಿತವಾಗಿದೆ.

**ತರ್ಕ** :–ತರ್ಕಶಬ್ದಕ್ಕೆ ಅನೇಕ ಅರ್ಥಗಳಿವೆ. ಆದರೆ ಇಲ್ಲಿ ಪ್ರಮಾಣಗಳ ಸಹಕಾರಿಯಾದ ಜ್ಞಾನವಿಶೇಷವನ್ನೇ ತರ್ಕವೆಂದು ಹೇಳುತ್ತಾರೆ. ಪಂಚಾವಯವ ಪ್ರಯೋಗರೂಪವಾದ ನ್ಯಾಯದಿಂದ ತತ್ತ್ವನಿರ್ಣಯವುಂಟಾಗಬೇಕಾದರೆ ತರ್ಕವು ಆವಶ್ಯಕ. ಯಾವ ಪದಾರ್ಥದ ತತ್ತ್ವನಿಶ್ಚಯವಾಗಿರುವುದಿಲ್ಲವೋ ಅದರ ತತ್ತ್ವನಿರ್ಣಯಕ್ಕಾಗಿ ಪ್ರಮಾಣದ ಉಪಪತ್ತಿಯನ್ನು

ಊಹಿಸುವುದೇ ತರ್ಕ. (ಅವಿಜ್ಞಾತತತ್ತ್ವೇऽರ್ಥೇ ಕಾರಣೋಪಪತ್ತಿತಃ ತತ್ತ್ವಜ್ಞಾನಾರ್ಥ ಮೂಹಸ್ತರ್ಕಃ ೧-೧-೪೦). ಒಂದು ವಸ್ತುವಿನಲ್ಲಿ ವಿರುದ್ಧವಾದ ಎರಡು ಧರ್ಮಗಳ ವಿಷಯದಲ್ಲಿ ವಿವಾದ ಬಂದಾಗ ಈ ಧರ್ಮವೇ ಇಲ್ಲಿರಲು ಸಾಧ್ಯ ಎಂಬ ಊಹವನ್ನು ಪ್ರಮಾಣ ದಿಂದ ಮಾಡುವುದೇ ತರ್ಕವು. (ಇದು ಮಾನಸಜ್ಞಾನ) ಇದು ಪ್ರಮಾಣವಲ್ಲ. ಪ್ರಮಾಣ ಗಳ ಸಹಕಾರಿ ಮಾತ್ರ. ಆತ್ಮನು ನಿತ್ಯನೋ ಅನಿತ್ಯನೋ ಎಂದು ಸಂದೇಹ ಬಂದಾಗ ಆತ್ಮ ನಿಗೆ ನಿತ್ಯತ್ವವನ್ನು ಹೇಳದಿದ್ದರೆ ಬಂಧ-ಮೋಕ್ಷ ವ್ಯವಸ್ಥೆಯು ಕೂಡಲಾರದು ಎಂಬ ವಿಮರ್ಶಿ ಸುವುದು ತರ್ಕ. ಈ ಪದಾರ್ಥವು ಹೀಗೆ ಇರಬೇಕೆಂದು ಉಲ್ಲೇಖಿಸುವುದೇ ಸಂಭಾವನ ಅದೇ ತರ್ಕ. ಈ ತರ್ಕಕ್ಕೆ ಶಾಸ್ತ್ರಗಳಲ್ಲಿ ಬಹಳ ಪ್ರಾಧಾನ್ಯವನ್ನು ಹೇಳಿದೆ. ಮನುಸ್ಮೃತಿಯಲ್ಲಿ ಆರ್ಷಂ ಧರ್ಮೋಪದೇಶಂ ಚ ವೇದಶಾಸ್ತ್ರಾವಿರೋಧಿನಾ ಯಸ್ತರ್ಕೇಣಾನುಸಂಧತ್ತೇ ಸ ಧರ್ಮಂ ವೇದ ನೇತರಃ ॥ ೨-೧೦೬- ಎಂದು ತರ್ಕದ ಬಗ್ಗೆ ಉದ್ಗಾರವಿದೆ.

ನಿರ್ಣಯ : ತತ್ತ್ವಾವಧಾರಣವೇ ನಿರ್ಣಯವು. ನ್ಯಾಯದರ್ಶನದಲ್ಲಿ ಅವಯವ ಮತ್ತು ತರ್ಕಗಳಿಂದ ಸಿದ್ಧವಾದ ವಸ್ತುನಿಶ್ಚಯವೇ ನಿರ್ಣಯವು. ವಿಮೃಶ್ಯ ಪಕ್ಷಪ್ರತಿಪಕ್ಷಾ ಭ್ಯಾಮರ್ಥಾವಧಾರಣಂ ನಿರ್ಣಯಃ ೧-೧-೪೧. ಸಂಶಯದ ಅನಂತರ ವಾದಿಪ್ರತಿವಾದಿಗಳು ಸ್ವಪಕ್ಷಸ್ಥಾಪನ, ಪರಪಕ್ಷ ಖಂಡನಗಳನ್ನು ಮಾಡುತ್ತಾರೆ. ಆಗ ಮಧ್ಯಸ್ಥನು ವಾದ ಪ್ರತಿವಾದ ಗಳ ಬಲಾಬಲವನ್ನು ನಿರ್ಧರಿಸಿ ಇದಮಿತ್ಥಂ, ಇದಮಿತ್ಥಮೇವ ಎಂದು ನಿರ್ಧಾರವನ್ನು ಮಾಡುತ್ತಾನೆ. ವಾದ ಕಥೆಯಲ್ಲಿ ಕೇವಲ ಅರ್ಥಾವಧಾರಣವನ್ನು ನಿರ್ಣಯವೆಂದು ಹೇಳಬೇಕು.

ವಾದಜಲ್ಪವಿತಂಡಾಃ : ಈ ಮೂರಕ್ಕೂ ಸೇರಿ ಕಥೆ ಎಂದು ಹೆಸರು. (ತಿಸ್ರಃ ಕಥಾ ಭವಂತಿ ವಾದೋ ಜಲ್ಪೋ ವಿತಂಡಾ ಚೇತಿ) ವಾತ್ಸ್ಯಾಯನಭಾಷ್ಯ ೫-೨-೧೯-೨೩. ತಾರ್ಕಿಕ ರಕ್ಷೆಯಲ್ಲಿ ವರದರಾಜನು 'ವಿಚಾರವಿಷಯೋ ನಾನಾವಕ್ತೃಕೋ ವಾಕ್ಯವಿಸ್ತರಃ ಕಥಾ' ಎಂದು ಹೇಳುತ್ತಾನೆ. ವಿಚಾರಣೀಯವಾದ ಒಂದು ವಿಷಯದಲ್ಲಿ ವಾದಿ ಪ್ರತಿವಾದಿಗಳು ನಿಯಮ ಪೂರ್ವಕವಾಗಿ ಉಕ್ತಿಪ್ರತ್ಯುಕ್ತಿಗಳನ್ನು ನಡೆಸುವುದನ್ನೇ ಕಥಾ ಎಂದು ಹೇಳುತ್ತಾರೆ. ಕೇವಲ ತತ್ತ್ವನಿರ್ಣಯಕ್ಕೋಸ್ಕರ ಗುರು ಶಿಷ್ಯರ ವಿಚಾರ ವಿಮರ್ಶೆಯನ್ನು ವಾದ ಎಂದು ಹೇಳುತ್ತಾರೆ. ಇದರಲ್ಲಿ ಜಯಪರಾಜಯವಿಲ್ಲ. ತತ್ತ್ವನಿರ್ಣಯವಾಗುವವರೆಗೂ ಚರ್ಚೆಯು ಮುಂದುವರಿ ಯುತ್ತದೆ. ವಾದಿ ಪ್ರತಿವಾದಿಗಳು ವಿಜಯದ ಇಚ್ಛೆಯಿಂದ ಚರ್ಚೆಯನ್ನು ಮಾಡುವುದು ಜಲ್ಪ ಪ್ರತಿವಾದಿಯು ತನ್ನ ಪಕ್ಷವನ್ನು ಸ್ಥಾಪಿಸದೆ ಪರಪಕ್ಷವನ್ನು ಮಾತ್ರ ಖಂಡಿಸಿದರೆ ಆ ಕಥೆಯು (ವಿಚಾರವು) ವಿತಂಡಾ ಎನಿಸಿಕೊಳ್ಳುತ್ತದೆ. ಆಸ್ತಿಕರಿಗೆ ನಾಸ್ತಿಕದಾರ್ಶನಿಕರೊಡನೆ 'ವಿತಂಡಾ' ಎಂಬ ರೀತಿಯ ಚರ್ಚೆಯೇ ಸಾಮಾನ್ಯವಾಗಿ ನಡೆಯುತ್ತದೆ. (ಸಪ್ರತಿಪಕ್ಷಸ್ಥಾಪನಾ ಹೀನೋ ವಿತಂಡಾ) ಎಂದು ವಿತಂಡಾ ಲಕ್ಷಣವನ್ನು ಹೇಳಿರುತ್ತಾರೆ. ಜಲ್ಪ ವಿತಂಡಾಗಳಲ್ಲಿ ವಾದಿನಿಯಮ, ಪ್ರತಿವಾದಿನಿಯಮ, ಸಭಾಪತಿನಿಯಮ-ಮಧ್ಯಸ್ಥ ಮತ್ತು ಸದಸ್ಯರ ನಿಯಮ ಇಷ್ಟನ್ನು ಮಾಡಿಕೊಳ್ಳಬೇಕು. ವಾದಕಥೆಯಲ್ಲಿ ಸಭೆ, ಮಧ್ಯಸ್ಥ ಮುಂತಾದ್ದು ಬೇಕಾಗಿಲ್ಲ.

ಪರ್ಣಕುಟೀರದಲ್ಲಿ ಅಥವಾ ಯಾವುದಾದರೊಂದು ಮರದ ಕೆಳಗೆ ಗುರುಶಿಷ್ಯರು ಚರ್ಚಿಸುತ್ತಿರಬಹುದು. ಮುಮುಕ್ಷು ವ್ಯಕ್ತಿಯೂ ತತ್ತ್ವನಿರ್ಣಯಕ್ಕಾಗಿಯೂ ಅದರ ದಾರ್ಢ್ಯಕ್ಕಾಗಿಯೂ ಆನ್ವೀಕ್ಷಿಕೀ ವಿದ್ಯೆಯನ್ನು ಅಭ್ಯಸಿಸಬೇಕು. ಅಸೂಯಾರಹಿತರಾದ ಶಿಷ್ಯ, ಗುರು, ಸಹಪಾಠಿ, ಅಥವಾ ಶಾಸ್ತ್ರ ನಿಷ್ಣಾತರಾದ ಇತರರ ಜೊತೆಗೆ ವಾದಕಥೆಯನ್ನು ನಡೆಸಬಹುದು. ಇದನ್ನೇ 'ತದ್ವಿದ್ಯಸಂವಾದ ಅಥವಾ ತದ್ವಿದ್ಯ ಸಂಭಾಷಾ, ಎಂದು ಹೇಳುತ್ತಾರೆ. (ಜ್ಞಾನಗ್ರಹಣಾಭ್ಯಾಸಃ ತದ್ವಿದ್ಯೈಃ ಸಹ ಸಂವಾದಃ। ತಂ ಶಿಷ್ಯ ಗುರು ಸಬ್ರಹ್ಮಚಾರಿ ವಿಶಿಷ್ಟ ಶ್ರೇಯೋರ್ಥಿಭಿಃ ಅಭ್ಯುಪೇಯಾತ್ ನ್ಯಾ. ಸೂ. ೪-೨ ೪೭-೪೮), ಮೂರು ವಿಧ ಕಥೆಗಳಲ್ಲಿ ವಾದವೇ ಸರ್ವಶ್ರೇಷ್ಠ. (ವಾದಃ ಪ್ರವದತಾಮಹಂ, ಗೀತಾ-೧೦-೩೨).

ಹೇತ್ವಾಭಾಸ :—ಅನುಮಾನ ಪ್ರಮಾಣದಲ್ಲಿ ನಿಜವಾದ ಹೇತುವಲ್ಲದೆ ಹೇತುವಿನಂತೆ ತೋರತಕ್ಕದ್ದು ಹೇತ್ವಾಭಾಸ. ಹೇತ್ವಾಭಾಸಜ್ಞಾನವಿಲ್ಲದೆ ಯಾವ ವಿಚಾರ ವಿಮರ್ಶೆಯನ್ನೂ ನಡೆಸಲು ಸಾಧ್ಯವಿಲ್ಲ. ಸವ್ಯಭಿಚಾರವಿರುದ್ಧ ಪ್ರಕರಣಸಮಸಾಧ್ಯಸಮಕಾಲಾತೀತಾಃಹೇತ್ವಾಭಾಸಾಃ ೧-೨-೪ ಎಂಬ ಸೂತ್ರದಲ್ಲಿ ಗೌತಮರು ಸವ್ಯಭಿಚಾರ, ವಿರುದ್ಧ, ಪ್ರಕರಣಸಮ (ಸತ್‌ಪ್ರತಿಕ್ಷ), ಸಾಧ್ಯಸಮ (ಅಸಿದ್ಧ), ಕಾಲಾತೀತ (ಬಾಧಿತ) ಎಂಬುದಾಗಿ ೫ ಹೇತ್ವಾಭಾಸಗಳನ್ನು ಹೇಳಿದ್ದಾರೆ. 'ಹೇತುವದಾಭಾಸಂತೇ ಇತಿ ಹೇತ್ವಾಭಾಸಾಃ ಹೇತುಲಕ್ಷಣಭಾವಾತ್ ಅಹೇತವಃ ಹೇತುಸಾಮಾನ್ಯಾತ್ ಹೇತುವತ್ ಅಭಾಸಮಾನಾಃ' (ನ್ಯಾ. ಭಾ.). ಹೇತುವಿನ ಎಲ್ಲಾ ಲಕ್ಷಣವಿಲ್ಲದೇ ಇದ್ದು ಹೇತುವಿನ ಸಾದೃಶ್ಯದಿಂದ ಕೂಡಿದ್ದೇ ಹೇತ್ವಾಭಾಸ. ಪಕ್ಷಸತ್ತ್ವ, ಸಪಕ್ಷಸತ್ತ್ವ, ವಿಪಕ್ಷಾಸತ್ತ್ವ, ಅಬಾದಿತತ್ತ್ವ, ಅಸತ್ ಪ್ರತಿಪಕ್ಷಿತತ್ವ ಎಂಬ ಐದು ಧರ್ಮವುಳ್ಳದ್ದೇ ಹೇತು. ಪಕ್ಷವೆಂದರೆ ಎಲ್ಲಿ ಸಾಧ್ಯವನ್ನು ಸಾಧಿಸುತ್ತೇವೆಯೋ ಆ ಸ್ಥಳ, (ಪರ್ವತ); ಸಪಕ್ಷವೆಂದರೆ ದೃಷ್ಟಾಂತ, ವಿಪಕ್ಷವೆಂದರೆ ಸಾಧ್ಯ.

ಧರ್ಮವಿಲ್ಲದ ಸ್ಥಳ. ಹೊಗೆಯಿಂದ ಬೆಂಕಿಯನ್ನು ಸಾಧಿಸುವಾಗ ಹ್ರದ (ಮಡು) ಮೇಲೆ ಹೇಳಿದ ಐದು ಧರ್ಮಗಳಲ್ಲಿ ವಿಪಕ್ಷಾಸತ್ತ್ವವಿಲ್ಲದಿದ್ದರೆ (ವಿಪಕ್ಷದಲ್ಲಿ ಹೇತುವಿದ್ದರೆ) ಸವ್ಯಭಿಚಾರ. ಸಪಕ್ಷದಲ್ಲಿ ಹೇತುವಿಲ್ಲದಿದ್ದರೆ ವಿರುದ್ಧ, ಅಸತ್‌ಪ್ರತಿಪಕ್ಷಿತತ್ವವಿಲ್ಲದಿದ್ದರೆ ಪ್ರಕರಣಸಮ, ಪಕ್ಷದಲ್ಲಿ ಹೇತುವಿಲ್ಲದಿದ್ದರೆ ಸಾಧ್ಯಸಮ, ಅಬಾಧಿತತ್ವವಿಲ್ಲದಿದ್ದರೆ ಕಾಲಾತೀತ ಎಂಬ ಹೇತ್ವಾಭಾಸಗಳು ಬರುತ್ತವೆ. ಪರ್ವತೋ ಧೂಮವಾನ್ ವಹ್ನೇಃ ಎಂಬುದು ವ್ಯಭಿಚಾರಸ್ಥಳ. ಶಬ್ದಃ ನಿತ್ಯಃ ಉತ್ಪತ್ತಿಮತ್ತ್ವಾತ್ ಎಂಬುದು ವಿರುದ್ಧ. ಶಬ್ದಃ ಅನಿತ್ಯಃ ನಿತ್ಯಧರ್ಮಾನುಪಲಬ್ಧೇಃ ಎಂದು ಒಬ್ಬನು ಹೇಳಿದರೆ, (ನಿತ್ಯದಲ್ಲಿರುವ ಧರ್ಮವು ಶಬ್ದದಲ್ಲಿ ಇಲ್ಲದ್ದರಿಂದ ಶಬ್ದವು ಅನಿತ್ಯ ಎಂದರೆ) ಮತ್ತೊಬ್ಬನು ಶಬ್ದಃ ಅನಿತ್ಯಃ ಅನಿತ್ಯ ಧರ್ಮಾನುಪಲಬ್ಧೇಃ ಎಂದು ಹೇಳುತ್ತಾನೆ. ಇದೇ ಸತ್‌ಪ್ರತಿಪಕ್ಷ. ಅಸಿದ್ಧಕ್ಕೆ ಉದಾಹರಣೆ—ಛಾಯಾ ದ್ರವ್ಯಂ ಗತಿಮತ್ತ್ವಾತ್ ಎಂಬಲ್ಲಿ ಛಾಯೆಯನ್ನು ಬೆಳಕಿನ ಅಭಾವ-(ತೇಜೋಽಭಾವ)

ಎಂದು ಹೇಳುವುದರಿಂದ ಇಲ್ಲಿ ಹೇತುವು ಪಕ್ಷದಲ್ಲಿಲ್ಲ. ವಹ್ನಿಃ ಅನುಷ್ಣಃ ಪದಾರ್ಥತ್ವಾತ್ ಎಂಬುದು ಬಾಧಿತ.

ಛಲ ಜಾತಿ :—ಜಲ್ಪವಿತಂಡಾಗಳಲ್ಲಿ ಸರಿಯಾದ ಉತ್ತರವನ್ನು ಹೇಳಲು ಸಾಧ್ಯವಾಗದೇ ಇದ್ದಾಗ ವಾದಿ ಅಸದುತ್ತರವನ್ನು ಹೇಳುತ್ತಾನೆ. ಅದೇ ಛಲ. ನೇಪಾಲಾದಾಗತೋಽಯಂ ನವಕಂಬಲವತ್ತ್ವಾತ್ ಎಂದು ಒಬ್ಬನು ಹೇಳಿದರೆ ನವ—ಒಂಭತ್ತು ಎಂಬ ಅರ್ಥವನ್ನಿಟ್ಟುಕೊಂಡು, ಏಕೋಽಸ್ಯ ಕಂಬಲಃ, ಕುತೋ ನವಕಂಬಲಾಃ ಎಂದು ಉತ್ತರ ಹೇಳುವುದು ವಾಕ್ ಛಲ. ಸಂಭವತಿ ಬ್ರಾಹ್ಮಣೇ ವಿದ್ಯಾಸಂಪತ್ ' ಎಂದು ಒಬ್ಬನು ಹೇಳಿದಾಗ, ಬ್ರಾಹ್ಮಣನಲ್ಲೆಲ್ಲಾ ವಿದ್ಯಾಚರಸಂಪತ್ ಇರುತ್ತದೆ ಎಂದರ್ಥವಿಟ್ಟುಕೊಂಡು. ಬ್ರಾಹ್ಮಣಶಿಸು, ವ್ರಾತ್ಯಬ್ರಾಹ್ಮಣನಲ್ಲಿಯೂ ವಿದ್ಯಾ-ಆಚಾರಸಂಪತ್ ಇರಬೇಕಾದಿತು ಎಂದು ಸಾಮಾನ್ಯವಾಗಿ ಹೇಳಿದ ಮಾತಿಗೆ ನಿಯಮಪರವಾಗಿ ಅರ್ಥವನ್ನಿಟ್ಟುಕೊಂಡು ಖಂಡಿಸುವುದು ಸಾಮಾನ್ಯಚ್ಛಲ. ಲಾಕ್ಷಣಿಕ ಶಬ್ದವನ್ನು ಪ್ರಯೋಗಿಸಿದಾಗ ಮುಖ್ಯಾರ್ಥವನ್ನಿಟ್ಟುಕೊಂಡು ದೂಷಿಸುವುದು ಉಪಚಾರಚ್ಛಲ—ಮಂಚಾಃ ಕ್ರೋಶಂತಿ ಮಂಚದಲ್ಲಿದ್ದವರು ಅಳುತ್ತಾರೆ ಎಂಬ ಅರ್ಥ ಈ ವಾಕ್ಯಕ್ಕೆ. ಆದರೆ ಮಂಚ ಶಬ್ದದ ಮುಖ್ಯಾರ್ಥವನ್ನಿಟ್ಟುಕೊಂಡು ಜಡವಾದ ಮಂಚ ಅಳುವುದು ಹೇಗೆ ಸಾಧ್ಯ ಎಂದು ಖಂಡಿಸಿದರೆ ಅದೂ ಛಲ.

ಜಾತಿಯೂ ಅಸದುತ್ತರ :—ಸ್ವವ್ಯಾಘಾತಕ ಉತ್ತರವೇ ಜಾತಿ. ಜಾತಿಯು ೨೪ ಪ್ರಕಾರವಾಗಿದೆ. ಶಬ್ದವು ಅನಿತ್ಯ. ಏಕೆಂದರೆ ಕಾರ್ಯತ್ವ ಅಂದರೆ ಉತ್ಪತ್ತಿ ಇರುವುದರಿಂದ ಘಟದಂತೆ ಎಂಬಲ್ಲಿ, ಶಬ್ದದಲ್ಲಿ ಘಟದ ಸಾಧರ್ಮ್ಯ ಉತ್ಪತ್ತಿಮತ್ತ್ವ ಇದ್ದಂತೆ ಆಕಾಶದ ಸಾಧರ್ಮ್ಯ ಅಮೂರ್ತತ್ವವಿರುವುದರಿಂದ ಶಬ್ದವು ನಿತ್ಯ ಏಕೆ ಆಗಬಾರದು ಎಂದು ಹೇಳುವುದು ಜಾತ್ಯುತ್ತರ. ಏಕೆಂದರೆ ಅಮೂರ್ತತ್ವ ಇದ್ದಲ್ಲಿ ನಿತ್ಯತ್ವ ಇದೆ ಎಂಬ ವ್ಯಾಪ್ತಿಯಿಲ್ಲ. ಅಮೂರ್ತತ್ವವು ನಿತ್ಯತ್ವವ್ಯಭಿಚಾರಿ.

ನಿಗ್ರಹಸ್ಥಾನವು ಗೌತಮರು ಹೇಳಿರುವ ೧೬ನೆಯ ಪದಾರ್ಥ. ನಿಗ್ರಹದ ಸ್ಥಾನ ಅಂದರೆ-ಕಾರಣ. ನಿಗ್ರಹವೆಂದರೆ ಪರಾಜಯ ವಿವಕ್ಷಿತವಾದ ವಿಷಯವನ್ನು ಪ್ರತಿಪಾದಿಸಲು ಅಸಮರ್ಥವಾಗಿರುವಿಕೆ. ಯಾವುದೋ ವಿಷಯದಲ್ಲಿ ವಿಪರೀತಜ್ಞಾನರೂಪವಾದ ಭ್ರಮ ಅಥವಾ ಅಜ್ಞಾನವೇ ನಿಗ್ರಹಸ್ಥಾನಕ್ಕೆ ಮೂಲ. ಈ ನಿಗ್ರಹಸ್ಥಾನಗಳೂ ೨೨ ಇವೆ. ಉದಾಹರಣಕ್ಕಾಗಿ-ಪ್ರತಿಜ್ಞಾಹಾನಿಯು ಒಂದು ನಿಗ್ರಹಸ್ಥಾನ. ಮೊದಲು ಮಾಡಿದ ಪ್ರತಿಜ್ಞೆಗೆ ಒಂದು ದೋಷವನ್ನು ಹೇಳಿದಾಗ ಆ ಪ್ರತಿಜ್ಞೆಯನ್ನು ಬಿಟ್ಟರೆ ಪ್ರತಿಜ್ಞಾಹಾನಿಯು. ಶಬ್ದವು ಅನಿತ್ಯವೆಂದು ಹೇಳಿದಾಗ ಧ್ವನ್ಯಾತ್ಮಕ ಶಬ್ದದಲ್ಲಿ ಅನಿತ್ಯತ್ವವನ್ನು ಒಪ್ಪಿರುವ—ಪ್ರತಿವಾದಿಯು ಸಿದ್ಧಸಾಧನದೋಷವನ್ನು ಹೇಳಿದಾಗ 'ಮಾಸ್ತು ತರ್ಹಿ ಶಬ್ದಃ ಅನಿತ್ಯಃ' ಹಾಗಾದರೆ ಶಬ್ದವು ಅನಿತ್ಯವೆಂದು ಹೇಳುವುದೇ ಇಲ್ಲ, ಎಂದು ವಾದಿಯು ಹೇಳಿದಾಗ—ಪ್ರತಿಜ್ಞಾಹಾನಿ ಎಂಬ ನಿಗ್ರಹಸ್ಥಾನವು ಬರುತ್ತದೆ.

ಹೀಗೆ ನ್ಯಾಯವೈಶೇಷಿಕಶಾಸ್ತ್ರಗಳ ವಿಷಯಗಳನ್ನು ಸಂಕ್ಷೇಪವಾಗಿ ಮೇಲಿನ ಭಾಗದಲ್ಲಿ ಹೇಳಿದ್ದಾಯಿತು. ಈಗ ಎರಡು ಶಾಸ್ತ್ರಗಳ ಮೂಲ, ವಿಕಾಸ, ಗ್ರಂಥಕಾರರು ಮತ್ತು ಗ್ರಂಥಗಳ ಬಗ್ಗೆ ಪರಿಚಯವನ್ನು ಬೆಳಸಿಕೊಳ್ಳಬೇಕಾಗಿದೆ. ನ್ಯಾಯ ವೈಶೇಷಿಕದರ್ಶನಗಳೆರಡರಲ್ಲಿಯೂ ಮತ-ಧರ್ಮೀಯ ಶ್ರದ್ಧೆಗಳು ಇಲ್ಲ. ನಿಷ್ಕೃಷ್ಟವಾದ ವೈಜ್ಞಾನಿಕವಾದ ತರ್ಕ ಮತ್ತು ಪ್ರಮಾಣಗಳು ಆಧಾರದ ಮೇಲೆ ಈ ಶಾಸ್ತ್ರಗಳು ಹೊರಟಿವೆ ನ್ಯಾಯವೆಂದರೆ ನಿಯಮ ನಿಯಮಾವಳಿ, ಅಥವಾ ವಿವಿಧ ವಾದೋಪಯೋಗಿ ಸೂತ್ರಗಳು. ಬೇರೆ ಬೇರೆ ಮತಧರ್ಮ ಶಾಸ್ತ್ರಕಾರರೂ ತಮ್ಮದೇ ಆದ ನ್ಯಾಯಗಳನ್ನು ಹೊಂದಿದ್ದಾರೆ. ಆದರೆ ಈ ಎರಡು ಶಾಸ್ತ್ರಗಳ ನ್ಯಾಯಗಳು ಲೌಕಿಕವಾಗಿವೆ ವಿದ್ವಾಂಸರ ಬಳಕೆಯಲ್ಲಿರುವ ನಿತ್ಯವ್ಯವಹಾರೋಪ ಯೋಗಿ ನಿಯಮಗಳು ಬೇರೆಯೇ ಆಗಿವೆ. ಅವುಗಳನ್ನೂ ಲೌಕಿಕ ನ್ಯಾಯಗಳೆನ್ನು ತ್ತಾರೆ. ಪ್ರಾಚೀನ ಭಾರತದ ವಿದ್ವಜ್ಜೀವನದಲ್ಲಿ ಶಾಸ್ತ್ರಗಳೂ, ವಿದ್ವತ್ಪೂರ್ಣಚರ್ಚೆಗಳೂ ಪ್ರಧಾನಪಾತ್ರವನ್ನು ಹೊಂದಿದ್ದವು. ಉಪನಿಷತ್ತುಗಳಲ್ಲಿಯೂ ಬೌದ್ಧಗ್ರಂಥಗಳಲ್ಲಿಯೂ ಇಂತಹವಾದ ಚರ್ಚೆಗಳನ್ನು ನಾವು ನೋಡಬಹುದು. ಅವುಗಳ ಜತಗೇ ಲೌಕಿಕವಾದ ಒಂದು ವಾದವಿಧಿಯೂ ಶಾಸ್ತ್ರವೂ ಬೆಳದಿರಬೇಕು. ಎಲ್ಲಾ ಶಾಸ್ತ್ರಗಳಿಗೊ ಸಂಬಂಧ ಪಟ್ಟ ಒಂದು ಸಾಧಾರಣವಾದ ಸಮೀಚೀನ ವಿವೇಚನೆ, ತರ್ಕ ಮತ್ತು ವಾದಗಳನ್ನು ಕುರಿತ ಒಂದು ನಿಯಮಾವಳಿಯು ನ್ಯಾಯಶಾಸ್ತ್ರದ ಮೂಲಕ ಬಹಳ ಹಿಂದೆಯೇ ಬೆಳೆದಿರಬೇಕು. ನ್ಯಾಯವೈಶೇಷಿಕ ಶಾಸ್ತ್ರಗಳ ಬೆಳವಣಿಗೆಯಲ್ಲಿ ಬೌದ್ಧ ಮತ್ತು ಜೈನರ ಕೊಡುಗೆಯೂ ಬಹಳ ವಾಗಿದೆ ಎಂಬುದನ್ನು ಗಮನಿಸಬಹದು.

ವೇದ, ಉಪನಿಷತ್ತುಗಳು ಮಹಾಭಾರತ ಮುಂತಾದ ಗ್ರಂಥಗಳಲ್ಲಿ ತರ್ಕಶಾಸ್ತ್ರದ ಮೂಲಭೂತವಾದ ಅಂಶಗಳು ಅಲ್ಲಲ್ಲಿ ಕಂಡರೂ ಅದರ ವ್ಯವಸ್ಥಿತವಾದ ರೂಪವು ಅಕ್ಷಪಾದ ಗೌತಮರಿಂದ ನಮಗೆ ಬಂತೆಂದು ಹೇಳಬಹುದು. ಗೋತಮ ಅಥವಾ ಗೌತಮ ಎಂಬ ವ್ಯಕ್ತಿಯು ಒಬ್ಬನೇ ಎಂಬುದು ಸಾಮಾನ್ಯವಾದ ಅಭಿಪ್ರಾಯ. ಅಕ್ಷಪಾದರ ಸಮಯ ಸುಮಾರು ಕ್ರಿ.ಶ. ೧೫೦ ನ್ಯಾಯಸೂತ್ರಕಾರರು ಅಕ್ಷಪಾದರೆಂದೇ ಉಲ್ಲೇಖವು ನ್ಯಾಯವಾರ್ತಿಕದಲ್ಲಿ ಕಂಡುಬರು ತ್ತದೆ (ಯದಕ್ಷಪಾದಃಪ್ರವರೋ ಮುನೀನಾಂಶಮಾಯ ಶಾಸ್ತ್ರಂ ಜಗತೋಜಗಾದ । ಕುತಾರ್ಕಿಕಾ ಜ್ಞಾನನಿವೃತ್ತಿಹೇತೋಃ ಕರಿಷ್ಯತೇ ತಸ್ಯ ಮಯಾ ನಿಬಂಧಃ ॥ ನ್ಯಾ.ವಾ.) ನ್ಯಾಯಭಾಷ್ಯದಲ್ಲಿ ವಾತ್ಸ್ಯಾಯನನೂ ಹೀಗೆಯೇ ಹೇಳುತ್ತಾನೆ. (ಯೋಽಕ್ಷಪಾದಮೃಷಿಂ ನ್ಯಾಯಃ ಪ್ರತ್ಯ ಭಾದ್ವದತಾಂ ವರಂ। ತಸ್ಯ ವಾತ್ಸ್ಯಾಯನ ಇದಂ ಭಾಷ್ಯಜಾತಮವರ್ತಯತ್-ನ್ಯಾ. ಭಾ) ನ್ಯಾಯವಾರ್ತಿಕ ತಾತ್ಪರ್ಯ ಟೀಕೆಯಲ್ಲಿಯೂ ನ್ಯಾಯಮಂಜರಿಯಲ್ಲಿಯೂ ಅಕ್ಷಪಾದರೇ ನ್ಯಾಯಶಾಸ್ತ್ರ ಪ್ರಣೇತೃಗಳೆಂದು ಹೇಳಿದೆ. (ಅಥ ಭಗವತಾ ಅಕ್ಷಪಾದೇನ ನಿಶ್ಶ್ರೇಯಸ ಹೇತೌ ಶಾಸ್ತ್ರೇ ಪ್ರಣೀತೇ-ನ್ಯಾ.ವಾ. ತಾತ್ಪರ್ಯಟೀಕಾ) (ಅಕ್ಷಪಾದ ಪ್ರಣೀತೋ ಹಿ ವಿತತೋ ನ್ಯಾಯಪಾದಪಃ । ಸಾಂದ್ರಾಮೃತರಸಸ್ಯಂದಫಲಸಂದರ್ಭನಿರ್ಭರಃ ॥ ನ್ಯಾ. ಮಂಜರೀ) ವಿಶ್ವನಾಥನ ನ್ಯಾಯಸೂತ್ರವೃತ್ತಿಯಲ್ಲಿ ನ್ಯಾಯಸೂತ್ರಕಾರರು ಗೋತಮರು

ಎಂದಿದೆ. ಏಷಾ ಮುನಿವರಗೋತಮಸೂತ್ರವೃತ್ತಿಃ ಶ್ರೀವಿಶ್ವನಾಥಕೃತಿನಾ ಸುಗಮಾಲ್ಪ ವರ್ಣಾ । ಶ್ರೀಕೃಷ್ಣಚರಣಾಂಬುಜಚಂಚರೀಕ ಶ್ರೀ ಮಚ್ಛಿರೋಮಣಿವಚಃಪ್ರಚಯೈರಕಾರಿ ॥ ನ್ಯಾ.ಸೂ. ವೃತ್ತಿ)

ಪ್ರಭಾಸಕ್ಷೇತ್ರದಲ್ಲಿ ಸೋಮಶರ್ಮನೆಂಬ ಬ್ರಾಹ್ಮಣನಿಗೆ ನಾಲ್ಕುಮಂದಿ ಮಕ್ಕಳಿದ್ದರೆಂದೂ ಅವರಲ್ಲಿ ಮೊದಲನೆಯವನಾದ ಅಕ್ಷಪಾದನೇ ನ್ಯಾಯಸೂತ್ರ ಪ್ರಣೇತೃವೆಂದೂ ಐತಿಹ್ಯವಿದೆ (ಬ್ರಹ್ಮಾಂಡ ಪುರಾಣ). ಇಷ್ಟಲ್ಲದೆ ಅಕ್ಷಪಾದರ ವಿಷಯದಲ್ಲಿ ಮತ್ತೇನೂ ತಿಳಿದುಬಂದಿಲ್ಲ.

ಅಕ್ಷಪಾದರ ನ್ಯಾಯಸೂತ್ರದಲ್ಲಿ ಐದು ಅಧ್ಯಾಯಗಳಿವೆ. ಅದರಲ್ಲಿ ಮುಖ್ಯವಾಗಿ ಪ್ರಮಾಣ, ಪ್ರಮೇಯ, ವಾದ, ಅವಯವ, ಅನ್ಯಪರೀಕ್ಷಾ ಎಂಬ ಐದು ವಿಷಯಗಳಿವೆ. ಇವುಗಳಲ್ಲಿ ಕೆಲವು ವಿಷಯಗಳು ವೈದಿಕ ಗ್ರಂಥಗಳಲ್ಲಿಯೂ, ಬೌದ್ಧ, ಜೈನಗ್ರಂಥಗಳಲ್ಲಿಯೂ ಕಂಡುಬರುತ್ತವೆ. ಆದರೆ ಅವುಗಳನ್ನು ಕ್ರಮವಾಗಿ ಜೋಡಿಸಿ ಸೂತ್ರರೂಪಕ್ಕೆ ತಂದು ಆಸ್ತಿಕ ದರ್ಶನಗಳಲ್ಲಿ ಸೇರಿಸಿದವರು ಅಕ್ಷಪಾದರು ಮೊದಲು ಹದಿನಾರು ಶಾಸ್ತ್ರಗಳ ಉದ್ದೇಶ (ಹೆಸರನ್ನು ಮಾತ್ರ ಹೇಳುವುದು). ಅನಂತರ ಲಕ್ಷಣ, ಅನಂತರ ಪರೀಕ್ಷೆ ಈ ಕ್ರಮದಿಂದ ಪ್ರಮಾಣಾದಿ ನಿಗ್ರಹಸ್ಥಾನಾಂತವಾದ ಹದಿನಾರು ಪದಾರ್ಥಗಳನ್ನೂ ಅಕ್ಷಪಾದರು ನಿರೂಪಿಸಿದ್ದಾರೆ (ತ್ರಿವಿಧಾ ಚಾಸ್ಯ ಶಾಸ್ತ್ರಸ್ಯ ಪ್ರವೃತ್ತಿಃ ಉದ್ದೇಶೋ ಲಕ್ಷಣಂ ಪರೀಕ್ಷಾಚೇತಿ–ನ್ಯಾ.ಭಾ,೧–೧–೨)

ವಾತ್ಸ್ಯಾಯನ :– (ಕ್ರಿ.ಶ. ೪೦೦) ನ್ಯಾಯ ಸೂತ್ರಗಳ ಮೇಲೆ ಬರೆದಿರುವ ವ್ಯಾಖ್ಯಾನಗಳಲ್ಲಿ ವಾತ್ಸ್ಯಾಯನನ ನ್ಯಾಯಭಾಷ್ಯವೇ ಮೊದಲನೆಯದು. ಉದ್ಯೋತಕರನು ನ್ಯಾಯವಾರ್ತಿಕದಲ್ಲಿ ವಾತ್ಸ್ಯಾಯನನೇ ನ್ಯಾಯಭಾಷ್ಯ ಬರೆದವನೆಂದು ಹೇಳಿದ್ದಾನೆ. (ಯದಕ್ಷಪಾದಪ್ರತಿಮಃ ಭಾಷ್ಯಂ ವಾತ್ಸ್ಯಾಯನೋ ಜಗೌ । ಅಕಾರಿ ಮಹತಸ್ತಸ್ಯ ಭಾರದ್ವಾಜೇನ ವಾರ್ತಿಕಂ ॥ ನ್ಯಾ.ವಾ. ೨ನೇ ಅ. ಕೊನೆಯಭಾಗ), ಇವನಿಗೆ ಪಕ್ಷಿಲಸ್ವಾಮಿ ಎಂದೂ ಹೆಸರು. (ಅಥ ಭಗವತಾ ಅಕ್ಷಪಾದೇನ ನಿಶ್ರ್ಯೇಯಸಹೇತೌ ಶಾಸ್ತ್ರೇಪ್ರಣೀತೇ, ವ್ಯುತ್ಪಾದಿತೇ ಚ ಭಗವತಾ ಪಕ್ಷಿಲಸ್ವಾಮಿನಾ ಕಿಮಪರಮವಶಿಷ್ಯತೇ ಯದರ್ಥಂ ವಾರ್ತಿಕಾರಂಭ ಇತಿ— (ನ್ಯಾಯವಾರ್ತಿಕ ತಾತ್ಪರ್ಯಟೀಕಾ). ಏತೇ. ಕೇಚಿತ್, ಅನ್ಯೇ ಎಂದು ಭಾಷ್ಯದಲ್ಲಿ ಬರುವ ಉಲ್ಲೇಖಗಳಿಂದ ನ್ಯಾಯಭಾಷ್ಯಕಿಂತಲೂ ಹಿಂದೆ ನ್ಯಾಯಸೂತ್ರಗಳಿಗೆ ಸಮಗ್ರವಾಗಿಯೋ, ಅಥವಾ ಸ್ವಲ್ಪ ಭಾಗಕ್ಕೆ ಮಾತ್ರವಾದರೂ ವ್ಯಾಖ್ಯಾನಗಳಿದ್ದುವು ಎಂದು ಊಹಿಸಬಹುದು. ನ್ಯಾಯಸೂತ್ರಕ್ಕೂ ನ್ಯಾಯಭಾಷ್ಯಕ್ಕೂ ಸುಮಾರು ೨ ಶತಮಾನಗಳ ಅಂತರವಿರುವುದರಿಂದ ಸೂತ್ರಗಳ ಅಭಿಪ್ರಾಯವನ್ನು ನ್ಯಾಯಭಾಷ್ಯದಲ್ಲಿಯೂ ಕೆಲವು ಕಡೆ 'ಇದು ಹೀಗೆಯೇ ಸರಿ' ಎಂದು ನಿರ್ಧರವಾಗಿ ಹೇಳಿದಂತೆ ಕಾಣುವುದಿಲ್ಲ, ವಾತ್ಸ್ಯಾಯನನು ಪ್ರಮಾಣಸಮುಚ್ಚಯಕಾರನಾದ ಬೌದ್ಧದಾರ್ಶನಿಕ ದಿಙ್ನಾಗನಿಗಿಂತ (ಕ್ರಿ.ಶ. ೫೦೦) ಮೊದಲು ಇದ್ದನು. ಏಕೆಂದರೆ ದಿಙ್ನಾಗನು ' ಮನಸ್ಸು ಒಂದು ಜ್ಞಾನೇಂದ್ರಿಯ 'ವೆಂಬ ವಾತ್ಸ್ಯಾಯನನ

ನಿಲುವನ್ನು ಟೀಕಿಸುತ್ತಾನೆ. ಮಾಧ್ಯಮಿಕ ಸೂತ್ರ, ಲಂಕಾವತಾರಸೂತ್ರಗಳೆಂಬ ಬೌದ್ಧ
ಗ್ರಂಥಗಳ ಕೆಲವು ಭಾಗಗಳನ್ನು ನ್ಯಾಯಸೂತ್ರಗಳಲ್ಲಿ ಪೂರ್ವಪಕ್ಷಸೂತ್ರವಾಗಿ ವಾತ್ಸ್ಯಾಯನನ
ಕಾಲದಲ್ಲಿ ಸೇರಿಸಿಕೊಂಡಿರುವುದರಿಂದ ಈ ಗ್ರಂಥಗಳ ಅನಂತರದಲ್ಲಿಯೇ ವಾತ್ಸ್ಯಾಯನನು
ಭಾಷ್ಯವನ್ನು ರಚಿಸಿದ್ದಾನೆಂದು ಸಿದ್ಧವಾಗುತ್ತದೆ. ವಾತ್ಸ್ಯಾಯನನು ನ್ಯಾಯಶಾಸ್ತ್ರವನ್ನು
ಹೊಗಳುವಾಗ ಕೌಟಿಲ್ಯನ(ಕ್ರಿ.ಪೂ. ೩೨೨)ಅರ್ಥಶಾಸ್ತ್ರದ ಒಂದು ಶ್ಲೋಕವನ್ನು ಉದ್ಧರಿಸಿದ್ದಾನೆ.
(ಸೇಯಮಾನ್ವೀಕ್ಷಿಕೀ ಪ್ರಮಾಣಾದಿ ಪದಾರ್ಥೈರ್ವಿಭಾವ್ಯಮಾನಾ—ಪ್ರದೀಪಃ ಸರ್ವವಿದ್ಯಾ
ನಾಮುಪಾಯಃ ಸರ್ವಕರ್ಮಣಾಂ । ಆಶ್ರಯಃ ಸರ್ವಧರ್ಮಾಣಾಂ ವಿದ್ಯೋದ್ದೇಶೇ
ಪ್ರಕೀರ್ತಿತಾ ॥ ಅರ್ಥಶಾಸ್ತ್ರ ಅ. ೨) ಅಪಾರ್ಥಕವೆಂಬ ನಿಗ್ರಹಸ್ಥಾನವನ್ನು ವಿವರಿಸುವಾಗ
'ದಶದಾಡಿಮಾನಿ, ಷಡಪೂಪಾಃ ಕುಂಡಮ ಜಾಜಿನಂ ಪಲಲಪಿಂಡಃ' ಎಂಬ ಮಹಾಭಾಷ್ಯ
ವಚನವನ್ನು (ಕ್ರಿ.ಶ. ೧೫೦) ಉದಾಹರಿಸುತ್ತಾನೆ. (ನ್ಯಾ. ಭಾ. ೫.೨-೧೦ ಮಹಾ ಭಾ.
೧-೧-೩). ಹೇಮಚಂದ್ರನು ಅಭಿಧಾನಚಿಂತಾಮಣಿಯಲ್ಲಿ ವಾತ್ಸ್ಯಾಯನನನ್ನು ದ್ರಾಮಿಲ
ಎಂದೂ ಹೆಸರಿಸಿರುವುದರಿಂದ ಇವನು ದ್ರಾವಿಡ ದೇಶದವನೆಂದೂ ಅದರಲ್ಲಿಯೂ ಆಗ ಬೌದ್ಧರ
ಕೇಂದ್ರವಾಗಿದ್ದ ಕಾಂಚಿಯಲ್ಲಿದ್ದನೆಂದೂ ತಿಳಿದುಬರುತ್ತದೆ. 'ಪಕ್ಷಿಲಸ್ವಾಮಿ' ಎಂಬ ಅವನ
ಹೆಸರಿನಲ್ಲಿರುವ ಸ್ವಾಮಿ ಎಂಬ ಶಬ್ದವೂ ಅವನು ದಕ್ಷಿಣದೇಶದವನೆಂಬುದಕ್ಕೆ ಸೂಚಕವಾಗಿದೆ.
ದಿಙ್ನಾಗ (ಕ್ರಿ.ಶ. ೫೦೦), ಧರ್ಮಪಾಲ (ಕಿ.ಶ. ೬೦೦). ಮುಂತಾದ ಬೌದ್ಧಪಂಡಿತರೂ
ಕಾಂಚಿಯಲ್ಲಿಯೇ ಇದ್ದರು.

ವಾತ್ಸ್ಯಾಯನನು ತನ್ನ ಭಾಷ್ಯದಲ್ಲಿ ನಾಗಾರ್ಜುನಮಾಧ್ಯಮಿಕಕಾರಿಕೆಯಲ್ಲಿ (ಕ್ರಿ.ಶ.
೨೫೦-೩೦೦) 'ನ ಸಂಭವಃ ಸ್ವಭಾವಸ್ಯ ಯುಕ್ತಃ ಪ್ರತ್ಯಯಹೇತುಭಿಃ । ಸ್ವಭಾವಃ ಕೃತಕೋ
ನಾಮ ಭವಿಷ್ಯತಿ ಪುನಃ ಕಥಂ ॥ ವಸ್ತುಗಳಿಗೆ ಸ್ವತಃ ಸತ್ತ್ವವಿಲ್ಲ—ಸಾಪೇಕ್ಷವಾದ ಸತ್ತ್ವವಿದೆ.
ದೀರ್ಘತ್ವಹ್ರಸ್ವತ್ವಗಳಿದ್ದಂತೆ. ಅಪೇಕ್ಷೆಯು ಬುದ್ಧಿರೂಪವಾದ್ದರಿಂದ ಎಲ್ಲಾ ವಸ್ತುಗಳಿಗೂ
ಬೌದ್ಧಿಕಸತ್ತ್ವವಿದೆಯೇ ಹೊರತು ಬಾಹ್ಯಸತ್ತ್ವವಿಲ್ಲ ಎನ್ನುತ್ತಾನೆ. ವಾತ್ಸ್ಯಾಯನನು
'ನ ಸ್ವಭಾವಸಿದ್ಧಿರಾಪೇಕ್ಷಿಕತ್ವಾತ್' ಎಂದು ಪೂರ್ವಪಕ್ಷಿಸಿ ವ್ಯಾಹತತ್ವಾದಯುಕ್ತಂ (೪-೧-೩೯,
೪೦) ಎಂದು ಖಂಡಿಸುತ್ತಾನೆ. ಉದ್ದಗಿಡ್ಡವಸ್ತುಗಳಿಗೆ ಸ್ವತಃ ಸತ್ತ್ವವಿಲ್ಲದಿದ್ದರೆ ಬುದ್ಧಿಯು
ಹುಟ್ಟಲು ಹೇಗೆ ಸಾಧ್ಯ ಎಂದು ಆಕ್ಷೇಪಿಸುತ್ತಾನೆ. ಹೀಗೆಯೇ ಮಾಧ್ಯಮಿಕರ ಶೂನ್ಯವಾದದ
ಖಂಡನೆಯನ್ನು ಮಾಡುತ್ತಾನೆ. ಯೋಗಾಚಾರರ ವಿಜ್ಞಾನಕ್ಷಣಿಕವಾದದ ಖಂಡನೆಯೂ ಇಲ್ಲಿ
ಬರುತ್ತದೆ. 'ದಶಾವಯವಾನೇಕೇ ನೈಯಾಯಿಕಾ ಆಚಕ್ಷತೇ'-ಜಿಜ್ಞಾಸಾ, ಸಂಶಯಃ, ಶಕ್ಯ
ಪ್ರಾಪ್ತಿಃ, ಪ್ರಯೋಜನಂ, ಸಂಶಯವ್ಯುದಾಸಃ ಎಂದು ಪ್ರತಿಜ್ಞಾದಿ ೫ನ್ನು ಸೇರಿಸಿ ೧೦ ಅವಯವ
ಗಳನ್ನು ಹೇಳುವವರನ್ನು ಟೀಕಿಸುತ್ತಾನೆ. ಭದ್ರಬಾಹುವೆಂಬ ಜೈನಶಾಸ್ತ್ರಕಾರನ ದಶ ವೈಕಾಲಿಕ
ನಿಯುರ್ಕ್ತಿಯನ್ನು ಇಲ್ಲಿ ವಾತ್ಸ್ಯಾಯನನು ಕಟಾಕ್ಷಿಸುತ್ತಾನೆಂದು ತೋರುತ್ತದೆ. ಈಶ್ವರ ಮತ್ತು
ಮೋಕ್ಷ ವಿಷಯಗಳಲ್ಲಿಯೂ ತನ್ನ ಸ್ವಂತವಾದ ಅನೇಕ ಅಭಿಪ್ರಾಯಗಳನ್ನು ತೋರಿಸಿರುತ್ತಾನೆ.

ಉದ್ಯೋತಕರ :– (ಕ್ರಿ.ಶ. ೬೦೫) ಸುಬಂಧು ಕವಿಯು 'ವಾಸವದತ್ತಾ' ಎಂಬ ತನ್ನ ಆಖ್ಯಾಯಿಕೆಯಲ್ಲಿ 'ನ್ಯಾಯಸ್ಥಿತಿಮಿವ ಉದ್ಯೋತಕರ ಸ್ವರೂಪಾಂ, ಬೌದ್ಧಸಂಗತಿಮಿವ ಅಲಂಕಾರ ಭೂಷಿತಾಂ–ವಾಸವದತ್ತಾಂ ದದರ್ಶ' ಎಂದು ಹೇಳುತ್ತಾನೆ. ಬಾಣಭಟ್ಟನು (ಕ್ರಿ.ಶ. ೬೩೫) ತನ್ನ ಹರ್ಷಚರಿತೆಯಲ್ಲಿ 'ವಾಸವದತ್ತಾ' ಗ್ರಂಥವನ್ನು ಉಲ್ಲೇಖಿಸಿರುವುದರಿಂದ ಸುಬಂಧುವು ಬಾಣಭಟ್ಟನಿಗಿಂತ ಹಿಂದೆಯೇ ಇದ್ದನೆಂದೂ, ಉದ್ಯೋತಕರನು ಕನಿಷ್ಠಪಕ್ಷ ಅವನ ಸಮಕಾಲೀನನಾದರೂ ಆಗಿರಬೇಕೆಂದೂ ನಿರ್ಧರಿಸಬಹುದು. 'ಯದಪಿವಾದವಿಧೌ ಸಾಧ್ಯಾಭಿಧಾನಂ ಪ್ರತಿ ಜ್ಞೇತಿ ಪ್ರತಿಜ್ಞಾಲಕ್ಷಣಮುಕ್ತಂ' ಎಂಬುದಾಗಿ ವಾದವಿಧಿ ಎಂಬ ಗ್ರಂಥವನ್ನು ಉದ್ಯೋತಕರನು ಹೆಸರಿಸುತ್ತಾನೆ. ಆದರೆ ಇದು ಯಾರ ಗ್ರಂಥವೆಂದು ಖಚಿತವಾಗಿ ತಿಳಿದುಬಂದಿಲ್ಲ. ಉದ್ಯೋತಕರನಿಗೆ ಭಾರದ್ವಾಜನೆಂಬ ಗೋತ್ರನಾಮವಿದೆ. ಅವನು ತನ್ನನ್ನು ಪಾಶುಪತಾಚಾರ್ಯ ಎಂದೂ ಕರೆದುಕೊಳ್ಳುತ್ತಾನೆ. (ಇತಿಶ್ರೀ ಪರಮರ್ಷಿ ಭಾರದ್ವಾಜ ಪಾಶುಪತಾಚಾರ್ಯ ಶ್ರೀ ಮದುದ್ಯೋತಕರಕೃತೌ ನ್ಯಾಯವಾರ್ತಿಕೇ ಪಂಚಮೋಽಧ್ಯಾಯಃ – ನ್ಯಾಯವಾರ್ತಿಕ ಉಪಸಂಹಾರ) 'ಏಷ ಪಂಥಾಃ ಸ್ರುಘ್ನಂ ಗಚ್ಛತಿ, (ನ್ಯಾಯವಾರ್ತಿಕ –೧–೩೩) ಈ ವಾಕ್ಯದಿಂದ ಇವನು ನ್ಯಾಯವಾರ್ತಿಕ ಬರೆಯುವಾಗಲಾದರೂ ಸ್ರುಘ್ನ ಎಂಬಲ್ಲಿದ್ದನು ಎಂದು ತಿಳಿಯಬಹುದು. ಸ್ರುಘ್ನವು ಥಾನೇಶ್ವರದಿಂದ ೪೦ ಮೈಲು ಉತ್ತರದಲ್ಲಿದೆ.

ದಿಙ್ನಾಗ, ನಾಗಾರ್ಜುನ ಮುಂತಾದ ಬೌದ್ಧತಾರ್ಕಿಕರನ್ನು ಖಂಡಿಸಲು ತಾನು ನ್ಯಾಯವಾರ್ತಿಕವನ್ನು ಬರೆಯುತ್ತಿದ್ದೇನೆಂದು ಉದ್ಯೋತಕರನೇ ಹೇಳಿಕೊಂಡಿದ್ದಾನೆ (ಯದಕ್ಷಪಾದಃ ಪ್ರವರೋ ಮುನೀನಾಂ ಶಮಾಯ ಶಾಸ್ತ್ರಂ ಜಗತೋ ಜಗಾದ । ಕುತಾರ್ಕಿಕಾಜ್ಞಾನನಿವೃತ್ತಿ ಹೇತುಃ ಕರಿಷ್ಯತೇ ತಸ್ಯ ಮಯಾ ನಿಬಂಧಃ ॥ ನ್ಯಾಯವಾರ್ತಿಕ ಆರಂಭ) ದಿಙ್ನಾಗನನ್ನು ವಾರ್ತಿಕಕಾರನು ತನ್ನ ಗ್ರಂಥದಲ್ಲೆಲ್ಲಾ ಭದಂತ (ಪೂಜ್ಯಬೌದ್ಧಸಂನ್ಯಾಸಿ) ಎಂದು ಹೇಳಿ ಅವನ ಪ್ರತ್ಯಕ್ಷ ಲಕ್ಷಣವನ್ನು ಖಂಡಿಸುತ್ತಾನೆ ಮತ್ತು ಅವನು ಖಂಡಿಸಿದ ಉಪಮಾನಶಬ್ದ ಪ್ರಾಮಾಣ್ಯಗಳನ್ನು ಪುನಃ ಸ್ಥಾಪಿಸುತ್ತಾನೆ. (ಅಹೋ ಪ್ರಮಾಣಾಭಿಜ್ಞತಾ ಭದಂತಸ್ಯ ! ಗವಾ ಗವಯಸಾರೂಪ್ಯಪ್ರತಿಪತ್ತೇಸ್ತು ಸಂಜ್ಞಾಸಂಜ್ಞಿ ಸಂಬಂಧಂ ಪ್ರತಿಪದ್ಯತೇ ! ಇತಿ ಸೂತ್ರಾರ್ಥಃ ನ್ಯಾ. ವಾ. ೧–೧–೬). ಆತ್ಮವನ್ನು ಒಪ್ಪದಿದ್ದರೆ ಬೌದ್ಧದರ್ಶನವು ನಿಷ್ಫಲವಾಗುತ್ತದೆ ಎಂದೂ ಹೇಳುತ್ತಾನೆ. (ನ ಚಾತ್ಮಾನಂ ಅನಭ್ಯುಪಗಚ್ಛತಾತಥಾಗತದರ್ಶನಂ. ಅರ್ಥವತ್ತಾಯಾಂ ವ್ಯವಸ್ಥಾಪಯಿತುಂ ಶಕ್ಯಂ । ನ ಚೇದಂ ವಚನಂ ನಾಸ್ತಿಸರ್ವಾಭಿಸಮಯ ಸೂತ್ರೇ ಅಭಿಧಾನಾತ್ । ತಸ್ಮಾತ್ ನಾಸ್ತಿ ಆತ್ಮೇತಿ ಬ್ರುವಾಣಃ ಸಿದ್ಧಾಂತಂ ಬಾಧತ ಇತಿ ನ್ಯಾ. ವಾ. ೩–೧–೧). ಬೌದ್ಧರಲ್ಲಿ ಪಂಚಸ್ಕಂದಗಳಿಗಿಂತ ಅತಿರಿಕ್ತವಾದ ಆತ್ಮನನ್ನು ಒಪ್ಪಿಕೊಂಡಿದ್ದಾರೆಂಬ ವಿಷಯದಲ್ಲಿ ವಾರ್ತಿಕಕಾರನು ಅವರ ವಾಕ್ಯವನ್ನೇ ಉದಾಹರಿಸುತ್ತಾನೆ– ತಥಾಭಾರಂ ವೋ ಭಿಕ್ಷವೋ ದೇಶಯಿಷ್ಯಾಮಿ. ಭಾರಹಾರಂ ಚ. ಭಾರಃ ಪಂಚಸ್ಕಂಧಾಃ ಭಾರಹಾರಶ್ಚ ಪುದ್ಗಲಃ ಇತಿ. ಯಶ್ಚಾತ್ಮಾ ನಾಸ್ತೀತಿ ಸ ಮಿಥ್ಯಾದೃಷ್ಟಿಕೋ ಭವತೀತಿ ಸೂತ್ರಂ. ನ್ಯಾ. ವಾ. ೩–೧–೧ (ಸಂಯುಕ್ತನಿಕಾಯವೆಂಬ ಪಾಲಿಗ್ರಂಥದಿಂದ ಉದ್ಧೃತ). ಹೀಗೆಯೇ

ವಸುಬಂಧು ಮತ್ತು ನಾಗಾರ್ಜುನರನ್ನೂ ಖಂಡಿಸುತ್ತಾನೆ. ಪ್ರತ್ಯಕ್ಷಲಕ್ಷಣದಲ್ಲಿ ಆರು ವಿಧ ಸನ್ನಿಕರ್ಷಗಳನ್ನು ವರ್ಣಿಸಿರುವುದು. ಸ್ಮೃತ್ಯನುಗೃಹೀತಃ ಲಿಂಗಪರಾಮರ್ಶಃ ಅನುಮಾನಂ ಎಂದು ಅನುಮಾನ ಲಕ್ಷಣ ಹೇಳಿರುವುದು ಅವನ ಗ್ರಂಥದ ವೈಶಿಷ್ಟ್ಯ ಸ್ಫೋಟವಾದದ **ಖಂಡನೆ**, ಅಪೋಹವಾದ ನಿರಾಕರಣೆ, ೨೧ ವಿಧದ ದುಃಖ ನಿರೂಪಣೆಗಳು ಈ ಗ್ರಂಥದಲ್ಲಿ ಬರುವ ಇತರ ವಿಶಿಷ್ಟವಿಷಯಗಳು. ಬೌದ್ಧರ ಅನೇಕ ಮುಖದವಾದಗಳನ್ನು ಖಂಡಿಸುವುದರಲ್ಲಿಯೇ ಉದ್ಯೋತಕರನಿಗೆ ತಾತ್ಪರ್ಯವಿದೆಯೆಂದು ಅವನ ಗ್ರಂಥದಿಂದ ತಿಳಿದು ಬರುತ್ತದೆ.

ವಾಚಸ್ಪತಿಮಿಶ್ರ (ಕ್ರಿ.ಶ.೮೪೧), ಧರ್ಮಕೀರ್ತಿ ಮುಂತಾದ ಬೌದ್ಧ ತಾರ್ಕಿಕರು ವಾತ್ಸ್ಯಾಯನ ಉದ್ಯೋತಕರರ ಗ್ರಂಥಗಳನ್ನು ಖಂಡಿಸಿದಾಗ ವಾಚಸ್ಪತಿ ಮಿಶ್ರರು ವೈದಿಕ ನ್ಯಾಯದ ರಕ್ಷಣೆಗಾಗಿ ನ್ಯಾಯವಾರ್ತಿಕ ತಾತ್ಪರ್ಯಟೀಕಾ ಎಂಬ ಗ್ರಂಥವನ್ನು ಬರೆದರು (ಯದ್ಯಪಿ ಭಾಷ್ಯಕೃತಾಕೃತವ್ಯುತ್ಪಾದನಮೇತತ್ ತಥಾಪಿದಿಙ್ನಾಗಪ್ರಭೃತಿಭಿರ್ವಾರ್ಚೀನೈಃ ಕುಹೇತುಸಂತಮಸಸಮುತ್ಥಾಪನೇನ ಆಚ್ಛಾದಿತಂ ಶಾಸ್ತ್ರಂನ ತತ್ತ್ವನಿರ್ಣಯಾಯ ಪರ್ಯಾಪ್ತಂ ನ್ಯಾ. ವಾ. ತಾತ್ಪರ್ಯಟೀಕಾ)

ವಾಚಸ್ಪತಿ ಮಿಶ್ರರು ಮಿಥಿಲಾನಿವಾಸಿಗಳು (ಉತ್ತರ ಬಿಹಾರ ದರ್ಭಾಂಗದ ಹತ್ತಿರ ಮಿಥಿಲೆ ಇದೆ) ನ್ಯಾಯಸೂತ್ರಗಳಲ್ಲಿ ಪ್ರಕ್ಷೆಪವನ್ನು ಪರಿಹರಿಸಲು ಅವರೇ ರಚಿಸಿದ ನ್ಯಾಯಸೂಚೀ ಬಂಧದ ಕೊನೆಯಲ್ಲಿ ಅವರೇ ಗ್ರಂಥರಚನೆಯ ಕಾಲವನ್ನು ನಿರ್ದೇಶಿಸಿದ್ದಾರೆ. (ನ್ಯಾಯಸೂಚೀನಿಬಂಧೋಽಸಾವಕಾರಿ ವಿದುಷಾಂ ಮುದೇ । ಶ್ರೀವಾಚಸ್ಪತಿಮಿಶ್ರೇಣ ವಸ್ವಂಕವಸು ವತ್ಸರೇ॥ ನ್ಯಾಯಸೂಚೀ ನಿಬಂಧ ಉಪಸಂಹಾರ). ಈ ಸಂವತ್ಸರವು ೮೯೮ ವಿಕ್ರಮ ಸಂವತ್. ಅದು ಕ್ರಿಸ್ತಶಕ ೮೪೧ಕ್ಕೆ ಸರಿಹೋಗುತ್ತದೆ. ಆದರೆ ಶಕವರ್ಷ ಇಟ್ಟುಕೊಂಡರೆ ಕ್ರಿ ಶ ೯೭೬ ಆಗುತ್ತದೆ. ಕ್ರಿ.ಶ. ೧೦೦೦ರಲ್ಲಿದ್ದ ರತ್ನಕೀರ್ತಿ ಎಂಬ ಬೌದ್ಧಪಂಡಿತನು ಅಪೋಹಸಿದ್ಧಿ ಎಂಬ ಗ್ರಂಥದಲ್ಲಿ ವಾಚಸ್ಪತಿಮಿಶ್ರರನ್ನು ಉಲ್ಲೇಖಿಸುತ್ತಾನೆ. ನೃಗನೆಂಬ ರಾಜನು ವಾಚಸ್ಪತಿಮಿಶ್ರರಿಗೆ ಆಶ್ರಯದಾತೃವಾಗಿದ್ದನು. (ನರೇಶ್ವರಾಯಚ್ಚರಿತಾನುಕಾರಂ ಇಚ್ಛಂತಿ ಕರ್ತುಂ ನ ತು ಪಾರಯಂತಿ । ತಸ್ಮಿನ್ ಮಹೀಪೇ ಮಹನೀಯಕೀರ್ತೌ ಶ್ರೀಮನ್ನೃಗೇಽಕಾರಿ ಮಯಾ ನಿಬಂಧಃ ॥ ವಾಚಸ್ಪತಿಮಿಶ್ರವಿರಚಿತ ಭಾಮತೀ) ಈ ನೃಗನಿಗೆ ತ್ರಿಲೋಚನ ಎಂಬವನೇ ಗುರು. ಈ ತ್ರಿಲೋಚನನು ವೈಶೇಷಿಕಶಾಸ್ತ್ರ ಗ್ರಂಥಕರ್ತೃವಾಗಿದ್ದಾನೆ. ಪ್ರತ್ಯಕ್ಷ ಖಂಡದ ಸವಿಕಲ್ಪಕ ನಿರ್ವಿಕಲ್ಪಕಾದಿ ವಿಚಾರವನ್ನು ತ್ರಿಲೋಚನ ಗುರುವಿನಿಂದಲೇ (ನ್ಯಾಯ ವಾರ್ತಿಕಾದಿಗಳಿಂದ ಅಲ್ಲ) ನಾನು ತಿಳಿದೆ ಎಂದು ವಾಚಸ್ಪತಿಮಿಶ್ರರೇ ಹೇಳುತಾರೆ. (ಅಸ್ಮಾಭಿಃ — ತ್ರಿಲೋಚನ ಗುರೂನ್ನೀತಮಾರ್ಗಾನುಗಮನೋನ್ಮುಖೈಃ । ಯಥಾಮಾನಂ ಯಥಾವಸ್ತು ವ್ಯಾಖ್ಯಾತಮಿದ ಮೀದೃಶಂ ॥ ನ್ಯಾಯವಾರ್ತಿಕತಾತ್ಪರ್ಯಟೀಕಾ ೧-೧-೪ ಇವರ ಗುರುವಾದ ತ್ರಿಲೋಚನರ ಗ್ರಂಥವನ್ನು ಅಪೋಹಸಿದ್ಧಿ, ಕ್ಷಣಭಂಗಸಿದ್ಧಿ ಗ್ರಂಥಕರ್ತೃವಾದ ರತ್ನಕೀರ್ತಿಯು (ಕ್ರಿ.ಶ. ೧೦೦೦) ಖಂಡಿಸುತ್ತಾನೆ. (ಯತ್ತು ತ್ರಿಲೋಚನಃ ಅಶ್ವತ್ವ ಗೋತ್ವಾದೀನಾಂ ಸಾಮಾನ್ಯವಿಶೇಷಾಣಾಂ ಸ್ವಾಶ್ರಯೋ ಸಮವಾಯಃ ಸಾಮಾನ್ಯಂ—ಅಪೋಹಸಿದ್ಧಿ—

ತ್ರಿಲೋಚನಸ್ಯಾಪ್ಯಯಂ ಸಂಕ್ಷಿಪ್ತಾರ್ಥಃ, ಕಾರ್ಯಮೇವ ಹಿ ಸಹಕಾರಿಕಾರಣ ಮಪೇಕ್ಷತೇ, ನ ಕಾರ್ಯೋತ್ಪತ್ತಿ ಹೇತುಃ—ಕ್ಷಣಭಂಗಸಿದ್ಧಿ.) ಈ ವಾಚಸ್ಪತಿಮಿಶ್ರರು ನ್ಯಾಯಕಣಿಕಾ ಎಂಬ ಗ್ರಂಥವನ್ನು ಬರೆದಿರುತ್ತಾರೆ. ಇವರು ವೇದಾಂತದಲ್ಲಿ ಶಾಂಕರ ಭಾಷ್ಯಕ್ಕೆ ಭಾಮತೀ ಎಂಬ ಟೀಕೆಯನ್ನು, ಸಾಂಖ್ಯಕಾರಿಕೆಗೆ ಸಾಂಖ್ಯತತ್ತ್ವಕೌಮುದೀ ಎಂಬ ವ್ಯಾಖ್ಯಾನವನ್ನೂ ಬರೆದಿರುತ್ತಾರೆ. ಷಡ್ದರ್ಶನಗಳಲ್ಲಿಯೂ ಗ್ರಂಥವನ್ನು ಬರೆದಿರುವ ಇವರನ್ನು 'ಸರ್ವತಂತ್ರ ಸ್ವತಂತ್ರ' ಎಂದೇ ಗೌರವದಿಂದ ವ್ಯವಹರಿಸಲಾಗುತ್ತಿತ್ತು. ವಾಚಸ್ಪತಿಗಳು ನ್ಯಾಯವಾರ್ತಿಕ ತಾತ್ಪರ್ಯ ಟೀಕೆಯಲ್ಲಿ ದಿಙ್ನಾಗನನ್ನೂ, ಧರ್ಮಕೀರ್ತಿಯನ್ನೂ ಖಂಡಿಸುತ್ತಾರೆ. (ಜಾತಿಯಲ್ಲಿ ಕಾರ್ಯಸಮಜಾತಿಯನ್ನು ವಿವರಿಸುವಾಗ) ಇವರು ತಮ್ಮ ಗ್ರಂಥದಲ್ಲಿ ಆತ್ಮಖ್ಯಾತಿ (ಯೋಗಾಚಾರ ಬೌದ್ಧ), ಅಸತ್‌ಖ್ಯಾತಿ (ಮಾಧ್ಯಮಿಕ ಬೌದ್ಧ), ಅನಿರ್ವಚನೀಯಖ್ಯಾತಿ (ಮಾಯಾವಾದಿ) ಅಖ್ಯಾತಿ (ಪ್ರಾಭಾಕರ), ಅನ್ಯಥಾಖ್ಯಾತಿ (ನ್ಯಾಯ ವೈಶೇಷಿಕ) ಗಳನ್ನು ವಿವರಿಸುತ್ತಾರೆ. ಅವರು ಅನ್ಯಥಾಖ್ಯಾತಿವಾದದಲ್ಲಿ ತನ್ನ ನೈರ್ಭರ್ಯವನ್ನು ತೋರಿಸುತ್ತಾ ಜ್ಞಾನಲಕ್ಷಣಾ (ಸ್ಮರಣಾತ್ಮಕ) ಸನ್ನಿಕರ್ಷದಿಂದ ಶುಕ್ತಿಯಲ್ಲಿ ಇಲ್ಲದೇ ಇಗುವ ರಜತತ್ವವೆಂಬ ಅನ್ಯಾಕಾರದಿಂದ ಶುಕ್ತಿಯ ಖ್ಯಾತಿ ಎಂದರೆ ಜ್ಞಾನವು ಬಾರದಿದ್ದರೆ ಭ್ರಮದಶೆಯಲ್ಲಿ ಅದನ್ನು ಎತ್ತಿಕೊಳ್ಳಲು ನಾವೇಕೆ ಹೋಗುತ್ತೇವೆ ಎಂದು ಕೇಳುತ್ತಾರೆ. ಉಪಾಧಿಕಾರ್ಯಕಾರಣ ಭಾವಗಳನ್ನು ತಮ್ಮದೇ ಆದ ರೀತಿಯಿಂದ ವಿವರಿಸಿ ಬೌದ್ಧ ಜೈನರ ಪ್ರಮಾಣಗ್ರಂಥಗಳನ್ನು ಖಂಡಿಸುತ್ತಾರೆ. (ವೈದಿಕವಾಙ್ಮಯಕರ್ತಾ ಈಶ್ವರ; ಬೌದ್ಧ ಜೈನಾಗಮದ ಕರ್ತೃಗಳು ಬುದ್ಧ, ಋಷಭರು; ಈಶ್ವರನು ಸರ್ವಜ್ಞ ಸರ್ವಕರ್ತ; ಬುದ್ಧಋಷಭರು ಹಾಗಲ್ಲ. ಆದ್ದರಿಂದ ಅಸರ್ವಜ್ಞ, ಅಲ್ಪಶಕ್ತರಾದವರು ಮಾಡಿದ ಗ್ರಂಥಗಳಲ್ಲಿ ನಾವು ಹೇಗೆ ವಿಶ್ವಾಸವಿಡಲು ಸಾಧ್ಯ? ಪ್ರಲಯದಲ್ಲಿ ಬುದ್ಧಜಿನಾಗಮಗಳೂ ನಾಶವಾಗುತ್ತವೆ. ಈಶ್ವರ ಮೂಲಕವಾದ ವೇದವಾಙ್ಮಯ ನಾಶವಾಗುವುದಿಲ್ಲ. (೨-೨-೬೮)

ಉದಯನಾಚಾರ್ಯ: ಕ್ರಿ.ಶ. ೯೮೪. ವಾಚಸ್ಪತಿ ಮಿಶ್ರರ ಗ್ರಂಥವನ್ನು ಪುನಃ ಅನೇಕ ಬೌದ್ಧದಾರ್ಶನಿಕರು ಖಂಡಿಸಿದಾಗ ಮಿಥಿಲೆಯಲ್ಲಿ ಹುಟ್ಟಿದ ಉದಯನಾಚಾರ್ಯನು ನ್ಯಾಯಶಾಸ್ತ್ರವನ್ನು ಎತ್ತಿ ಹಿಡಿಯಲು ನ್ಯಾಯವಾರ್ತಿಕತಾತ್ಪರ್ಯ ಟೀಕಾಪರಿಶುದ್ಧಿ ಎಂಬ ಗ್ರಂಥವನ್ನು ಬರೆದರು. ನ್ಯಾಯಕುಸುಮಾಂಜಲಿ, ಆತ್ಮತತ್ತ್ವವಿವೇಕ, ಕಿರಣಾವಲೀ, ನ್ಯಾಯ ಪರಿಶಿಷ್ಟ ಎಂಬ ಗ್ರಂಥಗಳನ್ನು ಇವರು ಬರೆದಿದ್ದಾರೆ.

ನ್ಯಾಯ ವಾರ್ತಿಕತಾತ್ಪರ್ಯ ಟೀಕಾಪರಿಶುದ್ಧಿ ಗ್ರಂಥದ ಆರಂಭದಲ್ಲಿ ಉದಯನಾಚಾರ್ಯರು ಸರಸ್ವತಿಯನ್ನು ಹೀಗೆ ಪ್ರಾರ್ಥಿಸುತ್ತಾರೆ.

ಮಾತಃ ಸರಸ್ವತಿ ಪುನಃಪುನರೇಷ ನತ್ವಾ
ಬದ್ಧಾಂಜಲಿಃ ಕಿಮಪಿ ವಿಜ್ಞಪಯಾಮ್ಯವೇಹಿ।

ವಾಕ್ಚೇತಸೋರ್ಮಮ ತಥಾಭವ ಸಾವಧಾನಾ

ವಾಚಸ್ಪತೇರ್ವಚಸಿ ನ ಸ್ಖಲತೋ ಯಥೈತೇ ॥ ೧-೧-೧

'ಅಮ್ಮಾ ಸರಸ್ವತಿ', ಈ ನಾನು ಕೈ ಮುಗಿದು ನಮಿಸಿ ಸಣ್ಣ ವಿಜ್ಞಾಪನೆ ಮಾಡುತ್ತಿದ್ದೇನೆ ಗಮನಿಸು ನನ್ನ ಮಾತು ಮನಗಳು ವಾಚಸ್ಪತಿಯ ಮಾತಿನಲ್ಲಿ ಸ್ಖಲನ ಹೊಂದದಂತೆ ಆ ಎರಡರಲ್ಲಿಯೂ "ಸನ್ನಿಧಾನವನ್ನಿಡು." ಇದರಿಂದ ವಾಚಸ್ಪತಿಮಿಶ್ರರ ಮಾತುಗಳ ಗಾಂಭೀರ್ಯವು ಅಸಾಧಾರಣವಾದುದೆಂದು ತಿಳಿದುಬರುತ್ತದೆ. ಉದಯನಾಚಾರ್ಯರಿಗೆ ಉದಯಕರ ಎಂಬ ಹೆಸರಿತ್ತೆಂದೂ ತಿಳಿದು ಬರುತ್ತದೆ. (ಬಹುತರಪರತಂತ್ರಪ್ರಾಂತಧ್ವಾಂತಭೀತ ಸ್ತಿಮಿತ ಪಥಿಕರಕ್ಷಾಸಾರ್ಥವಾಹೇನ ಯತ್ನಾತ್ । ಇದಮುದಯಕರೇಣ ನ್ಯಾಯಲೋಕಾಗಮಾನಾಂ ವ್ಯತಿಹತಿಮವಧೂಯ ವ್ಯಂಜಿತಂ ವರ್ತ್ಮಮುಕ್ತೇಃ ॥ ಆತ್ಮತತ್ತ್ವವಿವೇಕದ ಉಪಸಂಹಾರ) ಉದಯನನನ್ನು ಶಾಸ್ತ್ರಪ್ರಪಂಚದಲ್ಲಿ ಆಚಾರ್ಯ ಎಂದೇ ಕರೆಯುವ ವಾಡಿಕೆಯಿದೆ. ಉದಯನರೇ ಬರೆದಿರುವ ಲಕ್ಷಣಾವಲೀ ಎಂಬ ಗ್ರಂಥದ ಕೊನೆಯಲ್ಲಿ ಹೇಳಿದಂತೆ (ತರ್ಕಾಂಬರಾಂಕ ಪ್ರಮಿತೇಷ್ವತೀತೇಷು ಶಕಾಂತತಃ । ವರ್ಷೇಷೂದಯನಶ್ಚಕ್ರೇ ಸುಬೋಧಾಂ ಲಕ್ಷಣಾವಲೀಂ ॥ ಲಕ್ಷಣಾವಲೀ ಉಪಸಂಹಾರ) ತರ್ಕ=ದರ್ಶನ ಶಾಸ್ತ್ರಗಳು ೬, ಅಂಬರ=೦, ಅಂಕ ೯=೯೦೬ ಶತಸಂವತ್ಸರ ಕ್ರಿ. ಶ. ೯೮೪ ರಲ್ಲಿ ಅವರು ಇದ್ದರೆಂದು ತಿಳಿದು ಬರುತ್ತದೆ. ಮಿಥಿಲಾ ಪ್ರದೇಶವೇ ಇವರ ಜನ್ಮಭೂಮಿ.

ಈಶ್ವರನ ಅಸ್ತಿತ್ವವನ್ನು ಸಾಧಿಸುತ್ತಾ ಇವರು ಅನೇಕ ವಾದಿಗಳನ್ನು ಜಯಿಸಿದರು. ದೇವರು ತನಗೆ ಅನುಕೂಲನಾಗದಿದ್ದಾಗ ಐಶ್ವರ್ಯಮದಮತ್ತೋಽಸಿ ಮಾಮವಜ್ಞಾಯ ವರ್ತಸೇ। ಉಪಸ್ಥಿತೇಷು ಬೌದ್ಧೇಷು ಮದಧೀನಾ ತವ ಸ್ಥಿತಿಃ॥ 'ದೇವ, ಐಶ್ವರ್ಯಮದ ಮತ್ತನಾಗಿ ನನ್ನನು ನೀನು ತಿರಸ್ಕರಿಸಿದೆ. ಆದರೆ ಬೌದ್ಧರು ಬಂದು, ನೀನು ಇಲ್ಲವೆಂದಾಗ ನಿನ್ನ ಸ್ಥಿತಿಯು ನನ್ನ ಅಧೀನವೆಂಬುದನ್ನು ತಿಳಿದುಕೋ' ಎಂದರು.

ಕಲ್ಯಾಣರಕ್ಷಿತ (ಕ್ರಿ.ಶ. ೮೨೯), ಧರ್ಮೋತ್ತರಾಚಾರ್ಯ (ಕಿ.ಶ. ೮೪೭) ಎಂಬ ಇಬ್ಬರು ಬೌದ್ಧದಾರ್ಶನಿಕರ ಗ್ರಂಥಗಳನ್ನು ಉದಯನಾಚಾರ್ಯರು ತಮ್ಮ ಗ್ರಂಥಗಳಲ್ಲಿ ಖಂಡಿಸುತ್ತಾರೆ. ಕಲ್ಯಾಣರಕ್ಷಿತನ ಈಶ್ವರಭಂಗಕಾರಿಕೆಯಲ್ಲಿ ಬಂದಿರುವ ದೂಷಣೆಗಳನ್ನು ಉದಯನಾಚಾರ್ಯರು ನ್ಯಾಯಕುಸುಮಾಂಜಲಿಯಲ್ಲಿ ಖಂಡಿಸಿರುತ್ತಾರೆ. ಆತ್ಮತತ್ತ್ವವಿವೇಕದಲ್ಲಿ ಕಲ್ಯಾಣರಕ್ಷಿತನ ಅನ್ಯಾಪೋಹವಿಚಾರಕಾರಿಕಾ, ಶೃತಿಪರೀಕ್ಷಾ ಗ್ರಂಥಗಳಲ್ಲಿಯೂ ; ಧರ್ಮೋತ್ತರನ ಅಪೋಹನಾಮಪ್ರಕರಣ, ಕ್ಷಣಭಂಗಸಿದ್ಧಿಗ್ರಂಥಗಳಲ್ಲಿ ಹೇಳಿರುವ ಅಪೋಹ (ಅನ್ಯವ್ಯಾವೃತ್ತಿ=ಗೋತ್ವವೆಂದರೆ ಭಾವರೂಪಧರ್ಮವಲ್ಲ. ಅಗೋವ್ಯಾವೃತ್ತಿ=ಗೋವು ಅಲ್ಲದ್ದಕ್ಕಿಂತ ಬೇರೆಯಾಗಿರುವಿಕೆ) ಕ್ಷಣಭಂಗ, ಶ್ರುತ್ಯಪ್ರಾಮಾಣ್ಯಗಳನ್ನು ಖಂಡಿಸಿರುತ್ತಾರೆ.

ನ್ಯಾಯಕುಸುಮಾಂಜಲೀ (ಬೋಗಸೆಯಲ್ಲಿ ತುಂಬಿದ ಹೂವು) ಗ್ರಂಥವು ಉದಯನರಿಗೆ ನ್ಯಾಯಾಚಾರ್ಯ ಎಂಬ ಬಿರುದನ್ನು ತಂದು ಕೊಟ್ಟಿದೆ. ಇದರಲ್ಲಿ ಐದು ಪರಿಚ್ಛೇದಗಳಿವೆ. ಪರಮಾತ್ಮತತ್ತ್ವವನ್ನು ಸ್ವೀಕಾರಮಾಡದೇ ಇರುವ ಸಾಂಖ್ಯ, ಶೂನ್ಯವಾದ, ಚಾರ್ವಾಕವಾದ ವನ್ನು ಖಂಡಿಸಿ, ಅದೃಷ್ಟವನ್ನು ಒಪ್ಪಬೇಕೆಂದು ಸಮರ್ಥಿಸಿರುವರು. (ಸಾಪೇಕ್ಷತ್ವಾದನಾದಿತ್ವಾದ್ ವೈಚಿತ್ರ್ಯಾದ್ ವಿಶ್ವವೃತ್ತಿತಃ ಪ್ರತ್ಯಾತ್ಮನಿಯಮಾದ್ ಭುಕ್ತೇರಸ್ತಿ ಹೇತುರಲೌಕಿಕಃ-ನ್ಯಾ. ಕು ಸ್ತಬಕ ೧.). ಜಗತ್ತಿಗೆ ನಿಮಿತ್ತ ಕಾರಣನಾದ ಈಶ್ವರನ ಅಸ್ತಿತ್ವವನ್ನು ಅನೇಕ ಅನುಮಾನಗಳಿಂದ ಸಮರ್ಥಿಸುತ್ತಾರೆ. (ಕಾರ್ಯಾಯೋಜನಧೃತ್ಯಾದೇಃ ಪದಾತ್ ಪ್ರತ್ಯಯತಃ ಶ್ರುತೇಃ । ವಾಕ್ಯಾತ್ ಸಂಖ್ಯಾವಿಶೇಷಾಚ್ಚ ಸಾಧ್ಯೋ ವಿಶ್ವವಿದವ್ಯಯಃ ।) ಪರಮಾತ್ಮಾಸ್ತಿತ್ವ ಸಮರ್ಥನೆ ಯಲ್ಲಿ-ಸೃಷ್ಟಿಯಪ್ರಯೋಜನ, ದೃಶ್ಯಪ್ರಪಂಚದಲ್ಲಿ ಎದ್ದು ಕಾಣುತ್ತಿರುವ ಭಿನ್ನ ಭಿನ್ನ ಪ್ರಯೋಜ ನಗಳು, ಸೃಷ್ಟಿಯ ಆದರ್ಶ, ಕಾರಣ ವಸ್ತುವಿನ ಸಂಕಲ್ಪ ಪ್ರತೀತಿಗಳು, ಕಾರಣ ಸ್ವರೂಪ ಇವೆಲ್ಲವೂ ಪರಮಾತ್ಮಾಸ್ತಿತ್ವವನ್ನು ಹೇಗೆ ಸಮರ್ಥಿಸುತ್ತವೆ ಎಂಬುದನ್ನು ಪ್ರತಿಭಾಪೂರಿತವಾಗಿ ಹೇಳಿರುತಾರೆ. 'ಸತ್ಪಕ್ಷಪ್ರಸರಃ ಸತಾಂ ಪರಿಮಲಪ್ರೋದ್ಬೋಧಬದ್ಧೋತ್ಸವಃ, ಎಂಬ ಇವರ ಮಂಗಳಶ್ಲೋಕವೇ ಅದ್ಭುತವಾಗಿದೆ. ಕೊನೆಗೆ ಉದಯನರು ಈಶ್ವರನನ್ನು ಪ್ರಾರ್ಥಿಸುವ ಎರಡು ಶ್ಲೋಕಗಳು ಹೀಗಿವೆ.

ಇತ್ಯೇವಂ ಶ್ರುತಿನೀತಿಸಂಪ್ಲವಜಲೈಃ ಭೂಯೋಭಿರಾಕ್ಷಾಲಿತೇ
ಯೇಷಾಂ ನಾಸ್ಪದಮಾದಧಾಸಿ ಹೃದಯೇ ತೇ ಶೈಲಸಾರಾಶಯಾಃ ॥
ಕಿಂತು ಪ್ರಸ್ತುತವಿಪ್ರತೀಪವಿಧಯೋಽಪ್ಯುಚ್ಚೈರ್ಭವಚ್ಚಿಂತಕಾಃ
ಕಾಲೇ ಕಾರುಣಿಕ ತ್ವಯೈವ ಕೃಪಯಾ ತೇ ತಾರಣೀಯಾ ನರಾಃ ॥
ಅಸ್ಮಾಕಂತು ನಿಸರ್ಗಸುಂದರ ಚಿರಾಚ್ಚೇತೋ ನಿಮಗ್ನಂ ತ್ವಯಿ
ತ್ವದ್ಧಾನಂದನಿಧೌ ತಥಾ ಪಿ ತರಲಂ ನಾದ್ಯಾಪಿ ಸಂತೃಪ್ಯತೇ ।
ತನ್ನಾಥ ತ್ವರಿತಂ ವಿಧೇಹಿ ಕರುಣಾಂ ಯೇನ ತ್ವದೇಕಾಗ್ರತಾಂ
ಯಾತೇ ಚೇತಸಿ ನಾಪ್ನುವಾಮ ಶತಶೋ ಯಾಮ್ಯಾಃ ಪುನ
ರ್ಯಾತನಾಃ ॥ ನ್ಯಾ ಕು. ಸ್ತಬಕ ೫.

ದ್ವೈತಸಿದ್ಧಾಂತದ ಪ್ರಸಿದ್ಧ ಟೀಕಾಕಾರರಾದ ಜಯತೀರ್ಥರು ಉದಯನಾಚಾರ್ಯರ ಗ್ರಂಥಗಳಿಂದ ಅದರಲ್ಲಿಯೂ ನ್ಯಾಯಕುಸುಮಾಂಜಲಿಯಿಂದ ವಿಶೇಷಪ್ರಭಾವಿತರಾಗಿದ್ದರೆಂದು ಹೇಳಬಹುದು.

ಆತ್ಮತತ್ತ್ವವಿವೇಕ :—ಇದಕ್ಕೆ ಬೌದ್ಧಾಧಿಕಾರ, ಅಥವಾ ಬೌದ್ಧಧಿಕ್ಕಾರ ವೆಂದೂ ಹೆಸರು. ಇದರಲ್ಲಿ (೧) ಕ್ಷಣಭಂಗ (೨) ಬಾಹ್ಯಾರ್ಥಭಂಗ (೩) ಗುಣಗುಣಿಭೇದಭಂಗ (೪) ಅನುಪಲಂಭ (ಜಗತ್ತುಶೂನ್ಯ) ಎಂಬ ಬೌದ್ಧರ ನಾಲ್ಕು ವಾದಗಳ ಖಂಡನೆಯಿದೆ.

ನಾಲ್ಕು ಪರಿಚ್ಛೇದಗಳಲ್ಲಿ ಈ ವಿಷಯಗಳನ್ನು ಸಮರ್ಥಿಸಿ ಐದನೆಯದರಲ್ಲಿ ನಿತ್ಯಆತ್ಮನನ್ನು ಸಮರ್ಥಿಸಲಾಗಿದೆ.

ಜಯಂತಭಟ್ಟ(ಕ್ರಿ. ಶ. ೧೦ನೇಶತಮಾನ), ಜಯಂತಭಟ್ಟನು ನ್ಯಾಯಸೂತ್ರಗಳ ಮೇಲೆ ಸ್ವತಂತ್ರವಾಗಿ ನ್ಯಾಯಮಂಜರೀ ಎಂಬ ವಿಸ್ತಾರವಾದ ವೃತ್ತಿಯನ್ನು ಬರೆದಿದ್ದಾನೆ. ಪಂಡಿತ ಚಂದ್ರನೆಂಬುವನ ಮಗನಾದ ಈತನು ಕಾಶ್ಮೀರದವನು. ಇವನ ಗ್ರಂಥದಲ್ಲಿ ಮೀಮಾಂಸಕರ ಅನ್ವಿತಾಭಿದಾನಖಂಡನ, ಅಭಿಹಿತಾನ್ವಯವಾದಸಮರ್ಥನ, ಸ್ಫೋಟಖಂಡನ, ವೇದಾಪೌರುಷೇಯತ್ವನಿರಸನ ಮುಂತಾದ ವಿಷಯಗಳು ಬಹಳ ವಿಸ್ತಾರವಾಗಿ ಬಂದಿವೆ. ಮಾಧ್ಯಮಿಕಾದಿ ಎಲ್ಲಾ ಬೌದ್ಧರನ್ನೂ ಇವನು ಖಂಡಿಸುತ್ತಾನೆ. ಜಯಂತನು ಕೆಲವು ಕಡೆ ಹಾಸ್ಯಪೂರ್ಣವಾಗಿಯೂ ಕೆಲವುಕಡೆ ಉಗ್ರವಾಗಿಯೂ ಪ್ರತಿವಾದಿಗಳನ್ನು ಖಂಡಿಸುತ್ತಾನೆ.

ನಾಸ್ತ್ಯಾತ್ಮಾ ಫಲಭೋಗಮಾತ್ರಮಥ ಚ ಸ್ವರ್ಗಾಯ ಚೈತ್ಯಾರ್ಚನಂ
ಸಂಸ್ಕಾರಾಃಕ್ಷಣಿಕಾಃ ಯುಗಸ್ಥಿತಿ ಭೃತಶ್ಚೈತೇ ವಿಹಾರಾಃ ಕೃತಾಃ ।
ಸರ್ವಂ ಶೂನ್ಯಮಿದಂ ವಸೂನಿ ಗುರವೇ ದೇಹೀತಿ ಚಾದಿಶ್ಯತೇ
ಬೌದ್ಧಾನಾಂ ಚರಿತಂ ಕಿಮನ್ಯದಿಯತೀ ದಂಭಸ್ಯಭೂಮಿಃ ಪರಾ ॥

ಆತ್ಮನಿಲ್ಲ, ಎಲ್ಲವೂ ಕ್ಷಣಿಕ ಎಂದು ಹೇಳುವ ನೀವು ಸ್ವರ್ಗಕ್ಕಾಗಿ ಚೈತ್ಯಗಳಲ್ಲಿ ಪೂಜೆ ಮಾಡುತ್ತೀರಿ—ಯುಗಯುಗದವರೆಗೆ ಉಳಿಯಬೇಕೆಂದು ಬೌದ್ಧವಿಹಾರಮಾಡಿಸುತ್ತೀರಿ. ಸರ್ವವೂ ಶೂನ್ಯವೆಂದು ಹೇಳುವ ನೀವು ಗುರುಗಳಿಗೆ ಹಣ ಕೊಡಿರೆಂದು ಶಿಷ್ಯರಿಗೆ ಅಪ್ಪಣೆ ಮಾಡುತ್ತೀರಿ. ಬೌದ್ಧರ ನಡತೆ ವಿಚಿತ್ರ, ದಂಭದ ಪರಮಾವಧಿ. ಈ ಗ್ರಂಥದಲ್ಲಿ ೧೨ ಭಾಗಗಳಿವೆ. ನ್ಯಾಯಶಾಸ್ತ್ರಗ್ರಂಥಗಳಲ್ಲಿ ಇದು ಓದಿಸಿಕೊಂಡುಹೋಗುವ ಗ್ರಂಥ.

## ವೈಶೇಷಿಕ ದರ್ಶನದ ಗ್ರಂಥಕರ್ತೃಗಳು

ಕಣಾದ :—ವೈದಿಕ ದಾರ್ಶನಿಕ ಸಂಪ್ರದಾಯಕ್ರಮದಲ್ಲಿ ಎಲ್ಲಕ್ಕಿಂತ ಪ್ರಾಚೀನವಾದುದು ಸಾಂಖ್ಯ. ಅನಂತರ ಕ್ರಮವಾಗಿ ಯೋಗ, ವೈಶೇಷಿಕ, ಪೂರ್ವಮೀಮಾಂಸಾ, ವೇದಾಂತ, ನ್ಯಾಯ ಸಂಪ್ರದಾಯಗಳು ಬರುತ್ತವೆ. ಸೂತ್ರಗಳ ಕಾಲಕ್ರಮದಲ್ಲಿ ಪ್ರಾಚೀನವಾದುದು ಪೂರ್ವಮೀಮಾಂಸಾ ಸೂತ್ರವಾದರೆ ಅತ್ಯಾಧುನಿಕವಾದುದು ಸಾಂಖ್ಯಸೂತ್ರ. ವೈಶೇಷಿಕ ಸೂತ್ರಗಳು ಹಿಂದೆ ಇದ್ದುವು (ಕ್ರಿ. ಪೂ. ಸುಮಾರು ೭). ವೈಶೇಷಿಕ ಸೂತ್ರಕಾರರು ಕಣಾದರು. ಕಣಭುಕ್, ಕಣಭಕ್ಷ ಎಂಬ ಹೆಸರೂ ಇವರಿಗಿದೆ. ಹೊಲದಲ್ಲಿದ್ದ ಕಾಳುಗಳನ್ನು ಆರಿಸಿ ತಿನ್ನುತ್ತಿದ್ದುದರಿಂದ ಇವರಿಗೆ ಈ ಹೆಸರು ಬಂತೆಂದೂ. ಪರಮಾಣುವಾದವನ್ನು ಆರಂಭಿಸಿದವರಾದುದರಿಂದ ಈ ಹೆಸರು ಬಂತೆಂದೂ ಜನಶ್ರುತಿಗಳಿವೆ. ವೈಶೇಷಿಕ ದರ್ಶನಕ್ಕೆ

ಔಲೂಕ್ಯದರ್ಶನವೆಂದೂ ಹೆಸರಿದೆ. ಇದರಿಂದಾಗಿ ಈ ದರ್ಶನ ಪ್ರವರ್ತಕನು ಉಲೂಕನೆಂಬ ಪ್ರವಾದವೂ ಇದೆ.

ಕಣಾದರ ತಪಸ್ಸಿನಿಂದ ಈಶ್ವರನು ಪ್ರಸನ್ನನಾಗಿ ಉಲೂಕ (ಗೂಬೆ) ರೂಪದಿಂದ ಬಂದು ಕಣಾದನಿಗೆ ದ್ರವ್ಯಾದಿ ಆರು ಪದಾರ್ಥಗಳನ್ನು ಉಪದೇಶಿಸಿದನೆಂದು ಜೈನಲೇಖಕ ರಾಜಶೇಖರನೆಂಬುವನು ಶ್ರೀಧರನ ಕಂದಲಿಗೆ ಬರೆದಿರುವ ಟೀಕೆಯಲ್ಲಿ ಹೇಳಿದ್ದಾನೆ. ಈ ಕಾರಣದಿಂದ ಕಣಾದರ ದರ್ಶನಕ್ಕೆ ಔಲೂಕ್ಯದರ್ಶನವೆಂದು ಹೆಸರಾಯಿತು ಎಂಬುದೂ ಒಂದು ಕಿಂವದಂತಿ. ಕಣಾದನು ಮಹೇಶ್ವರನನ್ನು ಪ್ರಸನ್ನಗೊಳಿಸಿ ಈ ಶಾಸ್ತ್ರವನ್ನು ಪಡೆದನೆಂದು ಪ್ರಶಸ್ತಪಾದನೂ ಹೇಳಿದ್ದಾನೆ. (ಯೋಗಾಚಾರ ವಿಭೂತ್ಯಾ ಯಃ ತೋಷಯಿತ್ವಾ ಮಹೇಶ್ವರಂ। ಚಕ್ರೇ ವೈಶೇಷಿಕಂ ಶಾಸ್ತ್ರಂ ತಸ್ಮೈ ಕಣಭುಜೇ ನಮಃ॥) ಕಣಾದನ ಹೆಸರೇ ಔಲೂಕ್ಯವೆಂದೂ ಕೆಲವೆಡೆ ಕಂಡು ಬರುತ್ತದೆ. (ವೈಶೇಷಿಕೇ ಸ್ಯಾದೌಲೂಕ್ಯಃ—ಅಮರ). ಕಾಶ್ಯಪ ಎಂಬ ಇವನ ಗೋತ್ರದ ಮೇಲಿನ ಹೆಸರೂ ಕೆಲವೆಡೆ ಬಂದಿದೆ.

ಸಾಂಖ್ಯಶಾಸ್ತ್ರಕ್ಕಿಂತ ವಿಶೇಷವು (ಪರಿಣಾಮವಾದಕ್ಕಿಂತ ವಿಲಕ್ಷಣವಾದ ಆರಂಭವಾದವು) ಈ ಶಾಸ್ತ್ರದಲ್ಲಿರುವುದರಿಂದಲೂ, ವಿಶೇಷವೆಂಬ ಪದಾರ್ಥವನ್ನು ಒಪ್ಪಿ ಪರಮಾಣುಗಳಲ್ಲಿ ಭೇದವನ್ನು ಸಾಧಿಸಿದ್ದರಿಂದಲೂ, ಈ ಶಾಸ್ತ್ರಕ್ಕೆ ವೈಶೇಷಿಕ ಶಾಸ್ತ್ರವೆಂಬ ಹೆಸರಾಯಿತೆಂದು ಹೇಳುತ್ತಾರೆ. 'ದ್ವಿತ್ವೇ ಚ ಪಾಕಜೋತ್ಪತ್ತೌ ವಿಭಾಗಜೇ ಚ ವಿಭಾಗಜೇ। ಯಸ್ಯ ನ ಸ್ಖಲಿತಾ ಬುದ್ಧಿಃ ತಂ ವೈ ವೈಶೇಷಿಕಂ ವಿದುಃ'॥ ದ್ವಿತ್ವದ ಉತ್ಪತ್ತಿ ಪಾಕದಿಂದ ರೂಪಾದ್ಯುತ್ಪತ್ತಿ, ವಿಭಾಗದಿಂದ ವಿಭಾಗದ ಉತ್ಪತ್ತಿ ಇವು ಈ ಶಾಸ್ತ್ರದ ವಿಶೇಷಗಳು. ಇವುಗಳನ್ನು ಸರಿಯಾಗಿ ತಿಳಿದವನೇ ವೈಶೇಷಿಕನೆಂದು ಹೇಳುತ್ತಾರೆ.

ವೈಶೇಷಿಕ ಸೂತ್ರಗಳಲ್ಲಿ ೧೦ ಅಧ್ಯಾಯಗಳಿವೆ. ಒಂದೊಂದು ಅಧ್ಯಾಯದಲ್ಲಿಯೂ ೨ ಆಹ್ನಿಕಗಳಿವೆ. ಪದಾರ್ಥಗಳ ಉದ್ದೇಶವಿಭಾಗ, ಸಾಧರ್ಮ್ಯ, ದ್ರವ್ಯಾದಿಲಕ್ಷಣ, ಕಾರ್ಯ ಕಾರಣಭಾವ, ವ್ಯವಸ್ಥಾಪನ, ಸತ್ತಾಗುಣತ್ವ, ಕರ್ಮತ್ವಾದಿ ಸಾಧನವನ್ನು ಮೊದಲನೆಯ ಅಧ್ಯಾಯದಲ್ಲಿಯೂ; ಪೃಥ್ವ್ಯಾದಿಲಕ್ಷಣ, ಈಶ್ವರಾನುಮಾನ, ಕಾಲದಿಕ್‌ನಿರೂಪಣ, ಶಬ್ದ ಪರೀಕ್ಷೆಗಳು ಎರಡನೆಯ ಅಧ್ಯಾಯದಲ್ಲಿಯೂ ಇವೆ. ಆತ್ಮಪರೀಕ್ಷಾ, ಹೇತ್ವಾಭಾಸ, ಪರಾತ್ಮಾನು ಮಾನ, ಮನೋನಿ ರೂಪಣ, ಆತ್ಮಸಾಧಕವಾದ ಲಿಂಗಾಂತರಗಳು, ನಿತ್ಯಜ್ಞಾನಕ್ಕೆ ಆತ್ಮತ್ವ ನಿರಾಕರಣ, ಆತ್ಮನಾನಾತ್ವಗಳು ಮೂರನೆಯ ಅಧ್ಯಾಯದಲ್ಲಿವೆ. ಪರಮಾಣು ವಿಚಾರ, ಶರೀರ ವಿಚಾರಗಳು ನಾಲ್ಕನೆಯ ಅಧ್ಯಾಯದಲ್ಲಿವೆ. ಐದನೆಯ ಅಧ್ಯಾಯದಲ್ಲಿ ಕರ್ಮ ಪರೀಕ್ಷಾ, ತಮಸ್ಸಿಗೆ ತೇಜೋಽಭಾವರೂಪತ್ವಗಳನ್ನು ಹೇಳಿದ್ದಾರೆ ಆರನೆಯ ಅಧ್ಯಾಯದಲ್ಲಿ ವೇದಪ್ರಾಮಾಣ್ಯ ಪರೀಕ್ಷಾ—ಶ್ರಾದ್ಧಾದಿ ವೈದಿಕ ಕರ್ಮಗಳು, ಶುಚ್ಯಶುಚಿವಿಚಾರ, ಮೋಕ್ಷೋ ಪಾಯಗಳು. ಪರಿಮಾಣ ಸಂಖ್ಯಾ ಸಮವಾಯಾದಿಗಳ ಪರೀಕ್ಷೆಯು ಏಳನೆಯ ಅಧ್ಯಾಯ ದಲ್ಲಿಯೂ, ಎಂಟನೆಯ ಅಧ್ಯಾಯದಲ್ಲಿ ಪ್ರತ್ಯಕ್ಷ ಮತ್ತು ಅದಕ್ಕೆ ಕಾರಣವಾದ ಇಂದ್ರಿಯ

ಅರ್ಥಗಳ ನಿರೂಪಣವೂ, ಅಭಾವವಿಚಾರ, ಅಲೌಕಿಕಪ್ರತ್ಯಕ್ಷ, ಲೈಂಗಿಕ, ಸ್ಮೃತಿಸ್ವಪ್ನಾ
ವಿಚಾರಗಳೂ ಒಂಬತ್ತನೆಯ ಅಧ್ಯಾಯದಲ್ಲಿವೆ. ಸುಖದುಃಖವಿಚಾರಗಳು, ವೇದ ಪ್ರಾಮಾಣ್ಯ
ದಾರ್ಢ್ಯಸಂಪಾದನೆಗಳೆಂಬ ವಿಷಯಗಳೂ ಇವೆ.

ವೈಶೇಷಿಕ ಸೂತ್ರಗಳಿಗೆ ರಾವಣಭಾಷ್ಯ—ವೈಶೇಷಿಕ ಸೂತ್ರಗಳಿಗೆ ರಾವಣ ಭಾಷ್ಯವೆಂಬ ಭಾಷ್ಯವಿದೆ. ಉದಯನಾಚಾರ್ಯರ ಕಿರಣಾವಲಿಯಲ್ಲಿ—ಪ್ರಣಮ್ಯ ಹೇತುಮೀಶ್ವರ ಮುನಿಂ ಕಣಾದಮನ್ವತಃ । ಪದಾರ್ಥಧರ್ಮಸಂಗ್ರಹಃ ಪ್ರವಕ್ಷ್ಯತೇ ಮಹೋದಯ ಎಂಬ ಪ್ರಶಸ್ತಪಾದಭಾಷ್ಯದ ಮಂಗಳಶ್ಲೋಕದಲ್ಲಿರುವ 'ಪ್ರವಕ್ಷ್ಯತೇ' ಎಂಬ ಪದಕ್ಕೆ ವ್ಯಾಖ್ಯಾನ ಮಾಡುತ್ತಾ ಹೀಗೆ ಹೇಳುತ್ತಾರೆ—ಸೂತ್ರ, ಭಾಷ್ಯ ಮತ್ತು ಪ್ರಕರಣ ಗ್ರಂಥಗಳಿದ್ದೂ ತನ್ನ ಗ್ರಂಥದಲ್ಲಿ ಪ್ರಕೃಷ್ಟತೆಯನ್ನು ಹೇಳಲು ಇಲ್ಲಿ ಪ್ರವಕ್ಷ್ಯತೇ ಎಂದು ಹೇಳಲಾಗಿದೆ. ಕಿರಣಾವಲೀ ವ್ಯಾಖ್ಯಾಕಾರ ಪದ್ಮನಾಭನು ಇಲ್ಲಿ ಭಾಷ್ಯಪದದಿಂದ ರಾವಣ ಭಾಷ್ಯವು ವಿವಕ್ಷಿತವಾಗಿದೆ ಎಂದಿದ್ದಾನೆ. 'ವೈಶೇಷಿಕರ ಮತಾನುಸಾರವಾಗಿ ಎರಡು ದ್ವ್ಯಣುಕಗಳಿಂದ ಒಂದು ಚತುರಣುಕವು ಉತ್ಪನ್ನವಾಗುತ್ತದೆ' ಎಂದು ಶಾರೀರಕ ಭಾಷ್ಯದಲ್ಲಿ ಶಂಕರಾಚಾರ್ಯರು ಬರೆಯುತ್ತಾರೆ (ಶಾ. ಭಾಷ್ಯ ೨-೨-೧೧). ಪ್ರಶಸ್ತಪಾದರ ಮತಾನುಸಾರವಾಗಿ ಮೂರು ದ್ವ್ಯಣುಕಗಳಿಂದ ಒಂದು ತ್ರ್ಯಣುಕವಾಗುತ್ತದೆ. ಆದ್ದರಿಂದ ಶಂಕರಾಚಾರ್ಯರು ಉಲ್ಲೇಖಿಸಿ ಮತವು ರಾವಣಭಾಷ್ಯದ್ದೆಂದು ರತ್ನಪ್ರಭಾಟೀಕಾಕಾರರು ಹೇಳುತ್ತಾರೆ. ಪ್ರಕಟಾರ್ಥವಿವರ ಣವೆಂಬ ಟೀಕೆಯಲ್ಲಿ ಈ ವಿಷಯವು ಸ್ಪಷ್ಟವಾಗಿದೆಯೆಂದೂ ಹೇಳುತ್ತಾರೆ. ಈಗ ಪ್ರಕಟಾರ್ಥ ವಿವರಣವು ಪ್ರಕಾಶಿತವಾಗಿದೆ. ಅಲ್ಲಿ ಈ ವಿಷಯವಿದೆ.

ಪ್ರಶಸ್ತಪಾದ :—ಪ್ರಶಸ್ತಪಾದರು ವೈಶೇಷಿಕದರ್ಶನದ ಒಂದೊಂದು ಸೂತ್ರವನ್ನೂ ಉದ್ಧರಿಸಿ ಅದಕ್ಕೆ ಪದಶಃ ವ್ಯಾಖ್ಯಾನವನ್ನು ಮಾಡಲಿಲ್ಲ. ವೈಶೇಷಿಕ ಶಾಸ್ತ್ರದ ವಿಷಯದಲ್ಲಿ ಒಂದು ಸ್ವತಂತ್ರವಾದ ನಿಬಂಧವನ್ನೇ ಬರೆದಿದ್ದಾರೆ ಕಣಾದರ ಸೂತ್ರಗಳಲ್ಲಿ ಇಲ್ಲದೆ ಇರುವ ವಿಷಯವನ್ನು ಸಂಗ್ರಹಿಸಿ ಬರೆದ ಇವರ ನಿಬಂಧವು ಅನಂತರದ ವ್ಯಾಖ್ಯಾಕಾರರಿಗೆ ಆದರ್ಶ ಪ್ರಾಯವಾಯಿತು. ಕಣಾದರು ಸಾಮಾನ್ಯ, ವಿಶೇಷ, ಸಮವಾಯಗಳನ್ನು ಮಾನಸವಾದ (ಬುದ್ಧಿ ಸಾಪೇಕ್ಷ) ಪದಾರ್ಥವೆಂದು (ಸಾಮಾನ್ಯಂ ವಿಶೇಷ ಇತಿ ಬುಧ್ಯಪೇಕ್ಷಂ ವೈ. ಸೂ ೧-೨-೩) ಹೇಳಿದರೆ ಪ್ರಶಸ್ತಪಾದರು ಅವುಗಳನ್ನು ಬಾಹ್ಯಾರ್ಥ-'ಸತ್' ಎಂದು ಸ್ಥಾಪಿಸಿದ್ದಾರೆ. ಕಣಾದರು ೧೭ ಗುಣಗಳನ್ನು ಹೇಳಿದ್ದರೆ ಪ್ರಶಸ್ತಪಾದರು ೨೪ ಗುಣಗಳನ್ನು ಹೇಳಿದ್ದಾರೆ. ಅನುಮಾನವನ್ನು ಪ್ರಶಸ್ತಪಾದರು ಹೊಸ ರೀತಿಯಿಂದ ಪ್ರತಿಪಾದಿಸಿದ್ದಾರೆ ಸಜೀವಪದಾರ್ಥಗಳು ಕ್ಷಣಿಕವೆಂದೂ, ಸಂಖ್ಯಾದಿ ಅನೇಕ ಪದಾರ್ಥಗಳೂ ಕ್ಷಣಿಕವೆಂದೂ ಪ್ರಶಸ್ತಪಾದರು ಹೇಳಿರುವುದನ್ನು ನೋಡಿದರೆ ಅವರ ಮೇಲೆ ಬೌದ್ಧರ ಪ್ರಭಾವ ಬಿದ್ದಿದೆಯೆಂದು ತೋರುತ್ತದೆ. ಪರಮಾಣುವಾದದ ಸ್ವರೂಪರೇಖೆ, ಪರಮಾಣು, ದ್ವ್ಯಣುಕ, ತ್ರ್ಯಣುಕಗಳ ತಾರತಮ್ಯ ಇವುಗಳನ್ನು ಪ್ರಥಮತಃ ತಿಳಿಸಿದವರೂ ಪ್ರಶಸ್ತಪಾದರೇ : ಕಣಾದರು ದ್ವ್ಯಣುಕ

ಹೆಸರನ್ನೇ ಎತ್ತಲಿಲ್ಲ ದ್ವ್ಯಣುಕದಲ್ಲಿಯೂ ಅಣು ಪರಿಮಾಣವಿದೆ. ದ್ವ್ಯಣುಕ ಮತ್ತು ತ್ರ್ಯಣುಕದ ಪರಿಮಾಣಗಳು ಪರಮಾಣುಗತದಿತ್ವ, ಮತ್ತು ದ್ವ್ಯಣುಕಗತ ತ್ರಿತ್ವ ಸಂಖ್ಯೆಯಿಂದ ಉಂಟಾಗುತ್ತವೆ ಎಂದು ಮೊದಲು ಹೇಳಿದವರು ಪ್ರಶಸ್ತಪಾದರು. ನಿತ್ಯಪದಾರ್ಥಗಳ ಪರಸ್ಪರ ವ್ಯಾವೃತ್ತಿಜ್ಞಾನಕ್ಕೆ ಹೇತುವಾದ ವಿಶೇಷದ ಈಗ ಸಿದ್ಧವಾಗಿರುವ ಸ್ವರೂಪವನ್ನು ಕಣಾದರಿಗಿಂತ ಭಿನ್ನವಾಗಿ ಹೇಳಿದವರೂ ಪ್ರಶಸ್ತಪಾದರೇ. ವೈದಿಕದರ್ಶನಗಳ ಮತ್ತು ಬೌದ್ಧದರ್ಶನಗಳ ಲೇಖಕರೂ, ಚೀನೀಲೇಖಕರೂ ವೈಶೇಷಿಕ ಸೂತ್ರಗಳನ್ನು ಉಲ್ಲೇಖಿಸದೆ ಪ್ರಶಸ್ತಪಾದರ ಭಾಷ್ಯವನ್ನೇ ಉದ್ಧರಿಸುತ್ತಾರೆ. ಕಂದಲೀ, ಕಿರಣಾವಲೀ, ವ್ಯೋಮವತೀ, ಮೊದಲಾದ ವೈಶೇಷಿಕಶಾಸ್ತ್ರದ ಟೀಕೆಗಳೂ ಪ್ರಶಸ್ತಪಾದರ ಭಾಷ್ಯವನ್ನೇ ಅವಲಂಬಿಸಿವೆ. ಕೇವಲ ಸೂತ್ರಗಳಿಗೆ ಸಿಗುವ ಟೀಕೆಯೆಂದರೆ ೧೫ನೇ ಶತಮಾನದಲ್ಲಿದ್ದ ಶಂಕರಮಿಶ್ರನ ಟೀಕೆಯೊಂದೇ.

ಪ್ರಶಸ್ತಪಾದರು ವಾತ್ಸ್ಯಾಯನರಿಗಿಂತ ಹಿಂದಿನವರೆಂದು ಒಂದು ಅಭಿಪ್ರಾಯ. ಕೆಲವರು ವಾತ್ಸ್ಯಾಯನರೇ ಪ್ರಶಸ್ತಪಾದರಿಗಿಂತ ಹಿಂದಿನವರೆಂದು ಹೇಳುತ್ತಾರೆ. ಪರಮಾರ್ಥ (ಕ್ರಿ.ಶ. ೪೯೯ –೫೬೯), ಧರ್ಮಪಾಲ (೫೩೯–೫೭೦)ರೆಂಬ ಬೌದ್ಧದಾರ್ಶನಿಕರು ಪ್ರಶಸ್ತಪಾದರ ಭಾಷ್ಯವನ್ನು ಖಂಡಿಸುತ್ತಾರೆ. ಇನ್ನೂ ಅನೇಕ ಕಾರಣಗಳಿಂದ ಪ್ರಶಸ್ತಪಾದರ ಕಾಲವು ೬ನೆಯ ಶತಮಾನವೆಂದು ತೀರ್ಮಾನಿಸುತ್ತಾರೆ. ವಾಚಸ್ಪತಿಮಿಶ್ರರು ಪ್ರಶಸ್ತಪಾದರ ಒಂದು ವಾಕ್ಯವನ್ನು 'ಪಾರಮರ್ಷಂ ವಚನಂ' ಎಂದು ಗೌರವದಿಂದ ಉದ್ಧರಿಸುತ್ತಾರೆ. ಅಸತ್ಕಾರ್ಯವಾದ ಶರೀರಗಳಲ್ಲಿ ಪ್ರತಿಕ್ಷಣವಲ್ಲಿಯೂ ಪರಿವರ್ತನ, ಸಂಖ್ಯಾ, ಸಂಯೋಗ, ವಿಭಾಗಾದಿಗಳ ಬಾಹ್ಯಾಸ್ತಿತ್ವ, ಸಂಖ್ಯಾದಿಗಳ ವ್ಯವಸ್ಥಾ ಮುಂತಾದುವುಗಳು ಪ್ರಶಸ್ತಪಾದರ ವಿಶಿಷ್ಟವಾದ ಕೊಡುಗೆಗಳಾಗಿವೆ. ಒಟ್ಟಿನಲ್ಲಿ ವೈಶೇಷಿಕ ಶಾಸ್ತ್ರದ ಪ್ರಚಲಿತವಾದ ಈಗಿನ ದಾರ್ಶನಿಕ ಸ್ವರೂಪವು ಪ್ರಶಸ್ತಪಾದರ ಭಾಷ್ಯದ ಮೂಲಕವೆಂದು ಧಾರಾಳವಾಗಿ ಹೇಳಬಹುದು.

ಶ್ರೀಧರ :—(ಕ್ರಿ. ಶ. ೯೯೧)ವೈಶೇಷಿಕ ಸಂಪ್ರದಾಯದಲ್ಲಿ ಎಲ್ಲಾ ಗ್ರಂಥಗಳಿಗಿಂತಲೂ ಮಹತ್ವಪೂರ್ಣವಾದ ಗ್ರಂಥವು ಶ್ರೀಧರನ 'ನ್ಯಾಯಕಂದಲೀ' ಎಂದು ಹೇಳಬಹುದು— ಗ್ರಂಥದ ಕೊನೆಯಲ್ಲಿ ಅವನೇ ಹೇಳಿದ ಸಂವತ್ ವರ್ಷದ ಪ್ರಕಾರ ಅವನ ಕಾಲ ಕ್ರಿ. ಶ. ೯೯೧. ಅವನು ದಕ್ಷಿಣ ಬಂಗಾಲದ ಭೂರಿಸೃಷ್ಟಿ ಎಂಬ ಗ್ರಾಮದವನು. ಕಂದಲಿಯಲ್ಲಿ ಅವನು ತಾನು ಮಾಡಿದ ಇತರ ಗ್ರಂಥಗಳ ಉಲ್ಲೇಖವನ್ನು ಮಾಡಿದ್ದಾನೆ. ಅದ್ವಯಸಿದ್ಧಿ, ತತ್ತ್ವಪ್ರಬೋಧ, ತತ್ತ್ವಸಂವಾದಿನೀ, ಸಂಗ್ರಹಟೀಕಾ, ಎಂಬ ಗ್ರಂಥಗಳು ಕಂದಲಿಯಲ್ಲಿ ಉಲ್ಲೇಖಿತವಾಗಿವೆ. ಪ್ರಶಸ್ತಪಾದರ ಭಾಷ್ಯಕ್ಕೆ ನ್ಯಾಯಕಂದಲಿಯು ವಿಸ್ತೃತವಾದ ಟೀಕೆಯಾಗಿದೆ. ನ್ಯಾಯಕಂದಲಿಗೆ ವ್ಯೋಮಶಿವಾಚಾರ್ಯನ ವ್ಯೋಮವತೀ ಎಂಬ ಪ್ರಾಚೀನ ಟೀಕೆಯಿದೆ. ಇದರಲ್ಲಿ ಬೌದ್ಧಮತದ ಖಂಡನೆಯು ವಿಪುಲವಾಗಿ ಬಂದಿದೆ.

ನ್ಯಾಯವೈಶೇಷಿಕಶಾಸ್ತ್ರಗಳ ಪೃಥಕ್ತ್ವವು ಕೆಲವು ಸಮಯದವರೆಗೆ ಮುಂದುವರಿಯಿತು. ೯ ರಿಂದ ಹನ್ನೊಂದನೆಯ ಶತಮಾನದವರೆಗಿನ ಗ್ರಂಥಗಳಲ್ಲಿ ಈ ಎರಡು ಸಂಪ್ರದಾಯಗಳು ಒಟ್ಟುಗೂಡುವ ಪ್ರಯತ್ನವು ನಡೆಯಿತು. ೧೦ನೇ ಶತಮಾನದ ಉದಯನರು ಎರಡು ಸಂಪ್ರದಾಯವನ್ನು ಒಂದನ್ನಾಗಿ ಪರಿಗಣಿಸಿ ಎರಡು ಸಂಪ್ರದಾಯಗಳ ಸ್ಫೂರ್ತಿಯಿಂದ ಸ್ವತಂತ್ರ ಗ್ರಂಥಗಳನ್ನು ರಚಿಸಿದರು. ೧೧ನೇ ಶತಮಾನದ ಶಿವಾದಿತ್ಯನು ಪ್ರಶಸ್ತಪಾದರ ಭಾಷ್ಯಕ್ಕೆ ವ್ಯಾಖ್ಯಾನವಾದ ಉದಯನರ ಕಿರಣಾವಳಿಯನ್ನೂ, ನ್ಯಾಯಶಾಸ್ತ್ರಗ್ರಂಥವಾದ ಭಾಸರ್ವಜ್ಞನ ನ್ಯಾಯಸಾರವನ್ನೂ ಉಪಯೋಗಿಸಿಕೊಂಡು ಸಪ್ತಪದಾರ್ಥೀ ಎಂಬ ಗ್ರಂಥವನ್ನು ಬರೆದಿರುವರು. ಈ ಗ್ರಂಥವು ತೋರಿಕೊಟ್ಟ ದಾರಿಯಲ್ಲಿ ಮುಂದುವರಿದು ಅದನ್ನು ಚೆನ್ನಾಗಿ ವಿಸ್ತರಿಸಿ. ಅಲ್ಲಿಯವರೆಗೂ ಪ್ರಾಚೀನತೆಯನ್ನು ಕಾಪಾಡಿಕೊಂಡು ಬಂದಿದ್ದ ತರ್ಕ ಸಂಪ್ರದಾಯಕ್ಕೆ ನವೀನತೆಯನ್ನು ಗಂಗೇಶೋಪಾಧ್ಯಾಯರು ತಂದುಕೊಟ್ಟರು.

ಇವಲ್ಲದೆ ಪ್ರಾಚೀನ ನವೀನನ್ಯಾಯದ ಮಧ್ಯವರ್ತಿ ನ್ಯಾಯಸ್ವರೂಪವೂ ಒಂದು ಬೆಳೆದಿತ್ತು. ಪ್ರಾಚೀನನ್ಯಾಯವು ಬೆಳೆದ ಕಾಲದಲ್ಲಿ ಅದನ್ನು ಪ್ರತಿಭಟಿಸಲು ಜೈನ ಬೌದ್ಧ ತಾರ್ಕಿಕರು ಹೊರಟರು, ಕ್ರಿ. ಪೂ. ೫ನೇ ಶತಮಾನದಲ್ಲಿದ್ದ ಗೌತಮಬುದ್ಧ, ಮಹಾವೀರ ರಿಬ್ಬರೂ ಬೌದ್ಧ, ಜೈನ ಸಿದ್ಧಾಂತಗಳಿಗೆ ಮೂಲ ಪುರುಷರಾಗಿ ಉದಯಿಸಿದ ಮೇಲೆ ಸುಮಾರು ೧೦೦೦ ವರ್ಷಕಾಲ ಆ ಸಿದ್ಧಾಂತದ ಪ್ರಮೇಯವನ್ನು ಪ್ರತಿಪಾದಿಸುವ ಆಚಾರ್ಯರು ಇದ್ದರು. ಅದರಲ್ಲಿ ನ್ಯಾಯ ವೈಶೇಷಿಕದರ್ಶನವನ್ನು ಪ್ರಬಲವಾಗಿ ಪ್ರತಿಭಟಿಸಿದವನು ದಿಙ್ನಾಗನು.

ದಿಙ್ನಾಗ :— (ಕ್ರಿ. ಶ. ೪೫೦-೫೨೦) ನ್ಯಾಯಸೂತ್ರದ ಭಾಷ್ಯವನ್ನು ಪ್ರತಿಭಟಿಸಲು ಹೊರಟ ಬೌದ್ಧ ತಾರ್ಕಿಕ ದಿಙ್ನಾಗನು ನಾಗದತ್ತನೆಂಬುವನಿಂದ ಬೌದ್ಧದೀಕ್ಷೆಯನ್ನು ಪಡೆದು ಹೀನಯಾನದ ಸಂಪ್ರದಾಯದಿಂದ ತ್ರಿಪಿಟಕ ಅಧ್ಯಯನ ಮಾಡಿ ಸ್ವತಂತ್ರಬುದ್ಧಿಯಿಂದ ಬೌದ್ಧ ಪ್ರಮಾಣ ಸಂಗ್ರಾಹಕವಾದ ಪ್ರಮಾಣಸಮುಚ್ಚಯ ಎಂಬ ಗ್ರಂಥವನ್ನು ಬರೆದನು. ಇವನ ವಿದ್ವತ್ತಿಗೆ ಅನುಗುಣವಾಗಿ ಇವನಿಗೆ 'ತರ್ಕಪುಂಗವ' ಎಂಬ ಬಿರುದೂ ಉಂಟಾಯಿತು. ಪ್ರಮಾಣ ಸಮುಚ್ಚಯವು ಕಾರಿಕಾರೂಪದ ಗ್ರಂಥ. ಅದಕ್ಕೆ ಅವನೇ ವೃತ್ತಿಯನ್ನು ಬರೆದಿದ್ದಾನೆ. ಟಿಬೆಟ್ ಭಾಷೆಗೆ ಈ ಗ್ರಂಥವು ಪರಿವರ್ತಿತವಾಗಿದೆ. ಇದರಲ್ಲಿ ಆರು ಅಧ್ಯಾಯಗಳಿವೆ. (೧) ಪ್ರತ್ಯಕ್ಷ (೨) ಸ್ವಾರ್ಥಾನುಮಾನ (೩) ಪರಾರ್ಥಾನುಮಾನ (೪) ಹೇತು-ದೃಷ್ಟಾಂತ (೫) ಅಪೋಹ (೬) ಜಾತಿ ಇವೇ ಆರು ಪರಿಚ್ಛೇದದ ವಿಷಯಗಳು. ಈ ಗ್ರಂಥಕ್ಕೆ ಅನೇಕ ವ್ಯಾಖ್ಯಾನಗಳು ಬಂದಿವೆ.

ಪ್ರತ್ಯಕ್ಷ ಅನುಮಾನ ಎರಡೇ ಪ್ರಮಾಣಗಳು. ಪ್ರತ್ಯಕ್ಷಮನುಮಾನಂ ಚ ಪ್ರಮಾಣಂ ಹಿ ದ್ವಿಲಕ್ಷಣಂ, ಪ್ರಮೇಯಂ ತತ್ಪ್ರಸಿದ್ಧಂ ಹಿ ನ ಪ್ರಮಾಣಾಂತರಂ ಭವೇತ್ ॥

ಅವನ ಪ್ರತ್ಯಕ್ಷ ಲಕ್ಷಣ :— ಪ್ರತ್ಯಕ್ಷಂ ಕಲ್ಪನಾ ಪೋಢಂ ನಾಮಜಾತ್ಯಾದ್ಯಸಂಯುತಂ. ಜ್ಞಾನವಿಷಯವಾದ ಸುಖಾದಿಗಳು ಪ್ರತ್ಯೇಕವಾಗಿಲ್ಲ. ಮನಸ್ಸು ಇಂದ್ರಿಯ ವಲ್ಲ.

ನ ಸುಖಾದಿ ಪ್ರಮೇಯಂ ವಾ ಮನೋ ವಾಸ್ತೀಂದ್ರಿಯಾಂತರಂ ।
ಅನಿಷೇಧಾದುಪಾತ್ತಂ ಚೇದನ್ಯೇಂದ್ರಿಯರುತಂ ವೃಥಾ ॥

ಪರಮಾರ್ಥ, ಧರ್ಮಪಾಲ, ಧರ್ಮಕೀರ್ತಿ, ಶಾಂತರಕ್ಷಿತ, ಕಮಲಶೀಲ, ಕಲ್ಯಾಣರಕ್ಷಿತ, ಧರ್ಮೋತ್ತರ, ಮೋಕ್ಷಾಕರಗುಪ್ತ (ಕ್ರಿ. ಶ. ೧೧೦೦) ಎಂಬ ಅನೇಕ ಬೌದ್ಧ ತಾರ್ಕಿಕರು ಅನೇಕ ಗ್ರಂಥಗಳನ್ನು ಬರೆದು ವಿಶೇಷತಃ ಬೌದ್ಧರ ಪ್ರಮಾಣಗಳನ್ನು ಸಮರ್ಥಿಸಿ ನ್ಯಾಯವೈಶೇಷಿಕ ರನ್ನು ಖಂಡಿಸಿದ್ದಾರೆ.

ಜೈನತರ್ಕ :— ಜೈನತಾರ್ಕಿಕರಲ್ಲಿ ಸಿದ್ಧಸೇನದಿವಾಕರಗುಪ್ತನೇ ಮೊದಲನೆಯವನು. ಇವನ ಕಾಲ (ಕ್ರಿ. ಶ. ೪೮೦–೫೫೦). ನ್ಯಾಯಾವತಾರವು ಇವನ ಗ್ರಂಥ. ಸಮ್ಮತಿತರ್ಕ ಸೂತ್ರವೆಂಬ ಪ್ರಾಕೃತ ತರ್ಕ ಗ್ರಂಥವನ್ನು ಇವನು ಬರೆದಿದ್ದಾನೆ. ಅವನ ಶಬ್ದ ಪ್ರಮಾಣದ ಲಕ್ಷಣ—

ಆಪ್ತೋಪಜ್ಞಂ ಅನುಲ್ಲಂಘ್ಯಂ ಅದೃಷ್ಟೇಷ್ಟ ವಿರೋಧಕಂ ।
ತತ್ತ್ವೋಪದೇಶಕೃತ್ ಸಾರ್ವಂ ಶಾಸ್ತ್ರಂ ಕಾಪಥಘಟ್ಟನಂ ॥

(ನ್ಯಾಯಾವತಾರ ಶ್ಲೋ. ೯) ಜನಭದ್ರಗಣಿಸಿದ್ಧ, ಸೇನಗಣಿ, ಮಾಣಿಕ್ಯನಂದೀ, ಹರಿಭದ್ರಸೂರಿ, ಯಶೋವಿಜಯಗಣಿ (ಕ್ರಿ. ಶ. ೧೬೦೮–೧೬೮೮) ಮುಂತಾದ ಅನೇಕ ತಾರ್ಕಿಕರು ಜೈನತರ್ಕ ಶಾಸ್ತ್ರವನ್ನು ವಿಪುಲವಾಗಿ ಬೆಳೆಸಿದ್ದಾರೆ ವೈದಿಕ ದರ್ಶನಕಾರರ ಪ್ರತಿಭಟನೆಯಿಂದಲೂ, ರಾಜಾ ಶ್ರಯವು ತಪ್ಪಿದ್ದರಿಂದಲೂ ಬೌದ್ಧದಾರ್ಶನಿಕರು ಭಾರತವನ್ನೇ ಬಿಟ್ಟು ಇತರ ದೇಶಗಳಿಗೆ ವಲಸೆಹೋದರು. ಜೈನರು ಮಾತ್ರ ಇಲ್ಲೇ ಇದ್ದುಕೊಂಡು ಇತರ ಸಿದ್ಧಾಂತಗಳನ್ನು ಪ್ರತಿಭಟಿಸಲು ಅಸಮರ್ಥರಾದರೂ ತಮ್ಮ ಸಿದ್ಧಾಂತವನ್ನು ಕಾಪಾಡಿಕೊಂಡು ಇದ್ದರು.

ನವೀನ ನ್ಯಾಯಯುಗ :—ವೈಶೇಷಿಕ ಮತ್ತು ನ್ಯಾಯ ಎಂಬುದಾಗಿ ತರ್ಕಶಾಸ್ತ್ರವನ್ನು ಎರಡು ಶಾಖೆಯಾಗಿ ಇಟ್ಟಿರುವುದು ಅಪಾಯವೆಂದು ಅನಾವಶ್ಯಕವೆಂದು ತೋರಿದ್ದರಿಂದ ಅವೆರಡನ್ನು ಏಕೀಕರಿಸುವ ಕೆಲಸವು ನಡೆಯಿತು, ಪ್ರಾಚೀನ ಪದ್ಧತಿಯನ್ನು ಉಪೇಕ್ಷಿಸಿ ಸ್ವತಂತ್ರವಾಗಿ ಗ್ರಂಥ ಬರೆಯುವ ಕೆಲಸ ನಡೆಯಿತು. ಪ್ರಮಾಣಗಳ ಸ್ವರೂಪವನ್ನೇ ಚೆನ್ನಾಗಿ ವಿಮರ್ಶಿಸಿ ಅದರಿಂದ ಸಿದ್ಧವಾಗುವ ಪ್ರಮೇಯವನ್ನಷ್ಟೇ ಅಂಗೀಕರಿಸಬೇಕೆಂಬ ಉದ್ದೇಶದಿಂದ ಪ್ರಮಾಣ ಗ್ರಂಥವನ್ನು ಬರೆಯುವ ಕಾರ್ಯವೂ ನಡೆಯಿತು. ಸಿದ್ಧಾಂತದಲ್ಲಿ ಚಿಕ್ಕ ಚಿಕ್ಕ ಪ್ರಕರಣ ಗ್ರಂಥಗಳನ್ನು ಬೆಳೆಸಿ ಅವುಗಳಲ್ಲಿ ನಿರ್ದಿಷ್ಟವಾಗಿ ವಿಷಯ ಪರಿಷ್ಕಾರವನ್ನು ಮುಂದಿಟ್ಟು ಪ್ರಮಾಣ ವಿವೇಚನೆಗೆ ಸಹಕಾರ ಕೊಡುವ ಕಾರ್ಯವೂ ಬಹುಮಟ್ಟಿಗೆ ನಡೆಯಿತು.

ಶಾಸ್ತ್ರೈಕದೇಶಸಂಬಂಧ್ಧಂ ಶಾಸ್ತ್ರಕಾರ್ಯಾಂತರೇ ಸ್ಥಿತಂ ।
ಆಹುಃ ಪ್ರಕರಣಂ ನಾಮ ಗ್ರಂಥಭೇದಂ ವಿಪಶ್ಚಿತಃ ॥

ಎಂದು ಪ್ರಕರಣಲಕ್ಷಣವನ್ನು ಹೇಳಲಾಗಿದೆ. ಇದರ ಜತೆಗೇ ಅವಚ್ಛೇದ್ಯಾವಚ್ಛೇದಕ ಭಾವ, ಕಾರ್ಯಕಾರಣಭಾವ, ಪ್ರತಿಯೋಗ್ಯನುಯೋಗಿಭಾವ, ಆಧಾರಾಧೇಯಭಾವ, ವಿಶೇಷ್ಯ ವಿಶೇಷಣಭಾವ, ಉದ್ದೇಶ್ಯವಿಧೇಯಭಾವ, ವ್ಯಾಪ್ಯವ್ಯಾಪಕಭಾವ, ಪ್ರತಿಬಧ್ಯ ಪ್ರತಿಬಂಧಕಭಾವ, ನಿರೂಪ್ಯ ನಿರೂಪಕಭಾವ ಮುಂತಾದ ಅನೇಕ ಪಾರಿಭಾಷಿಕ ಶಬ್ದಗಳನ್ನು ಉಪಯೋಗಿಸಿ ಅತ್ಯಲ್ಪ ವಿಷಯದಿಂದ ಆರಂಭಿಸಿ ಮಹತ್ತ್ವಪೂರ್ಣವಿಷಯದ ವರೆಗೂ ನಿಷ್ಕೃಷ್ಟವಾದ ಪರಿಷ್ಕಾರಗಳನ್ನು ಮಾಡಿ ವಿಷಯಗಳನ್ನು ಮನದಟ್ಟು ಮಾಡಿಕೊಡುವ ಪ್ರವೃತ್ತಿ ಬೆಳೆಯಿತು. ಉದಾಹರಣೆಗೆ ರೂಪರಸಗಂಧಸ್ಪರ್ಶವತೀ ಪೃಥಿವೀ (ವೈ. ಸೂ. ೨೨ ೨೧ ಸೂ೧) ಎಂಬ ಪೃಥಿವೀಲಕ್ಷಣವನ್ನು ಪ್ರಶಸ್ತಪಾದರು ಕ್ಷಿತಾವೇವ ಗಂಧಃ ಎಂದು ಪೃಥಕ್ಕರಿಸಿ ಹೇಳಿದರು. ನವ್ಯ ನ್ಯಾಯದಲ್ಲಿ 'ಗಂಧವತೀ ಪೃಥಿವೀ'– ಎಂದು ಲಕ್ಷಣವನ್ನಿಟ್ಟುಕೊಂಡು ಗಂಧವು ಆಧೇಯ–ಪೃಥಿವಿಯು ಅಧಿಕರಣ, ಗಂಧದಲ್ಲಿ ಆಧೇಯತಾ ಇದೆ, ಪೃಥಿವಿಯಲ್ಲಿ ಅಧಿಕರಣತಾ ಇದೆ. ಇವೆರಡಕ್ಕೆ ನಿರೂಪ್ಯನಿರೂಪಕಭಾವ (ತಿಳಿಸಲ್ಪಡತಕ್ಕಂತಹಂದು ನಿರೂಪ್ಯ —ತಿಳಿಸಿಕೊಡತಕ್ಕಂತಹುದು ನಿರೂಪಕ–ಇವುಗಳ ಸಂಬಂಧ) ಇದೆ. ಹಾಗೂ ಗಂಧನಿಷ್ಠ ಆಧೇಯತಾನಿರೂಪಿತ (ನಿರೂಪ್ಯ) ಅಧಿಕರಣತಾಶ್ರಯತ್ವಂ (ಗಂಧದಲ್ಲಿರುವ ಆಧೇಯತಾದಿಂದ ತಿಳಿಸಲ್ಪಟ್ಟ—ಬೋಧಿತವಾದ ಅಧಿಕರಣತೆಗೆ ಆಶ್ರಯವಾಗಿರುವಿಕೆ ಎಂಬುದೇ ಪೃಥಿವೀ ಲಕ್ಷಣವೆಂದು ಪರಿಷ್ಕರಿಸುತ್ತಾರೆ )

ಇವುಗಳಲ್ಲದೆ ಲಕ್ಷ್ಯ, ಲಕ್ಷ್ಯತಾವಚ್ಛೇದಕ, ಆಧಾರ, ಆಧೇಯತಾವಚ್ಛೇದಕ ಮುಂತಾದ ಧರ್ಮಿಯಲ್ಲಿ ಅನ್ಯೂನಾನತಿರಿಕ್ತವಾಗಿರುವ ಧರ್ಮಗಳನ್ನು ನಿಷ್ಕರ್ಷಿಸಿ ಲಕ್ಷಣ ಪರಿಷ್ಕಾರಗಳನ್ನು ಮಾಡುತ್ತಾರೆ. ಅತಿವ್ಯಾಪ್ತಿ, ಅವ್ಯಾಪ್ತಿ, ಅಸಂಭವ ಎಂಬ ಲಕ್ಷಣದೋಷ ಗಳನ್ನು ಪರಿಹರಿಸುವ ಮುಖ್ಯದೃಷ್ಟಿಯನ್ನಿಟ್ಟುಕೊಂಡು ನಾಲ್ಕಾರುಪದಗಳಿಂದ ಮುಗಿಯುವ ಲಕ್ಷಣಗಳನ್ನು ೪೦೦೦ ಪದಗಳಿಂದ ತಿಳಿಸುವ ಪ್ರಯತ್ನವೂ ಇಲ್ಲಿ ನಡೆಯುತ್ತದೆ. ಪೂರ್ವಪಕ್ಷ ಸಿದ್ಧಾಂತಕ್ರಮದಿಂದ ವಿಷಯ ವಿಚಾರಮಾಡುವ ಕ್ರಮವೂ ನವ್ಯ ನ್ಯಾಯದಲ್ಲಿ ಪರಿಷ್ಕೃತವಾಯಿತು.

ಗಂಗೇಶ ಉಪಾಧ್ಯಾಯ (ಕ್ರಿ.ಶ. ೧೨೦೦)–ನವೀನನ್ಯಾಯಕ್ಕೆ ಇವನೇ ಪ್ರವರ್ತಕನು. ಇವನ ತತ್ತ್ವಚಿಂತಾಮಣಿ ಗ್ರಂಥವು ಹೊಸ ಶೈಲಿಯಿಂದ ಪ್ರಮಾಣ ವಿಚಾರವನ್ನು ಮಾಡಿ ಸೂಕ್ಷ್ಮರೀತಿಯ ವಿಮರ್ಶೆಯಿಂದ ಇತರ ವಾದಿಗಳ ವಾದವನ್ನು ಖಂಡಿಸುತ್ತದೆ. ಇಲ್ಲಿ ನಾಲ್ಕು ಪರಿಚ್ಛೇದಗಳಿವೆ. ಮೊದಲನೆಯ ಪರಿಚ್ಛೇದದ ಆರಂಭದಲ್ಲಿ ಮಂಗಲವಾದವಿದೆ. ಶಿಷ್ಟರೆಲ್ಲರೂ ಮಂಗಲವನ್ನು ಮಾಡುತ್ತಾರೆ. ಆದ್ದರಿಂದ ಎಲ್ಲರೂ ಮಂಗಲವನ್ನು ಮಾಡಬೇಕು. ಈ ಮಂಗಲಕ್ಕೆ ಫಲವೇನು ? ಸಮಾಪ್ತಿಯೇಫಲವೆಂದು ಪ್ರಾಚೀನರೂ, ವಿಘ್ನಧ್ವಂಸವೇ ಫಲವೆಂದು ನವೀನರೂ ಹೇಳುತ್ತಾರೆ. ಆದರೆ ಮಂಗಲಮಾಡಿದ್ದರೂ ಕಾದಂಬರ್ಯಾದಿ ಗ್ರಂಥ

ಗಳಲ್ಲಿ ಸಮಾಪ್ತಿಯಾಗಿಲ್ಲ. ಮಂಗಲ ಮಾಡದಿದ್ದರೂ ನಾಸ್ತಿಕ ಗ್ರಂಥವು ಸಮಾಪ್ತಿಯನ್ನು ಹೊಂದಿರುವುದರಿಂದ ಮಂಗಲಸಮಾಪ್ತಿಗಳಿಗಾಗಲಿ, ಮಂಗಲವಿಘ್ನ ಧ್ವಂಸಗಳಿಗಾಗಲಿ ಕಾರ್ಯ ಕಾರಣ ಭಾವವಿಲ್ಲ. ಕಾರ್ಯಕಾರಣ ಭಾವಕ್ಕೆ ಅನ್ವಯವ್ಯಭಿಚಾರ, ಮತ್ತು ವ್ಯತಿರೇಕ ವ್ಯಭಿ ಚಾರಗಳು ದೋಷ, ಅವು ಇಲ್ಲಿಯೂ ಇವೆ ಎಂದು ಪೂರ್ವಪಕ್ಷಮಾಡಿಕೊಂಡು, ಕಾದಂಬ ರ್ಯಾದಿಗಳಲ್ಲಿ ವಿಘ್ನಗಳು ಹೆಚ್ಚಾಗಿದ್ದುದರಿಂದ ಸಮಾಪ್ತಿಯಾಗಲಿಲ್ಲ. ನಾಸ್ತಿಕನು ಜನ್ಮಾಂತರದಲ್ಲಿ ಮಂಗಲ ಮಾಡಿರುತ್ತಾನೆ. ಅದು ವಿಘ್ನ ಧ್ವಂಸವನ್ನುಂಟುಮಾಡಿರುತ್ತದೆ. ಆದುದರಿಂದ ಸಮಾಪ್ತಿಯಾಗಿದೆ ಎಂದು ಹೇಳಿ ಹಿಂದೆ ಹೇಳಿದ ದೋಷವನ್ನು ಪರಿಹರಿಸುತ್ತಾರೆ.

ಮುಂದೆ ಪ್ರಾಮಾಣ್ಯವಾದ, ಅನ್ಯಥಾಖ್ಯಾತಿ, ಲೌಕಿಕಪ್ರತ್ಯಕ್ಷ, ಅಲೌಕಿಕ ಪ್ರತ್ಯಕ್ಷಗಳನ್ನು ನಿರೂಪಿಸುತ್ತಾರೆ. ಸಮವಾಯವಾದ, ಅನುಪಲಬ್ಧಿಪ್ರಾಮಾಣ್ಯವಾದ, ಅಭಾವವಾದ, ಪ್ರತ್ಯಕ್ಷಕಾರಣವಾದ, ಮನೋಣುತ್ವವಾದ, ಅನುವ್ಯವಸಾಯವಾದ, ನಿರ್ವಿಕಲ್ಪಕವಾದ, ಸವಿಕಲ್ಪಕವಾದ ಎಂಬ ವಾದಗಳ ಜತೆಗೆ ಪ್ರತ್ಯಕ್ಷಖಂಡವು ಮುಗಿಯುತ್ತದೆ.

ಎರಡನೆಯ ಅನುಮಾನಖಂಡದಲ್ಲಿ ಅನುಮಿತಿ ನಿರೂಪಣದ ಅನಂತರ ವ್ಯಾಪ್ತಿಪಂಚಕ (ಪಂಚಲಕ್ಷಣೀ)ನಿರೂಪಣೆ ಮಾಡುತ್ತಾ ನಂದಸೂರಿ, ಅವಂಚಂದ್ರಸೂರಿ ಎಂಬಿಬ್ಬರು ತಾರ್ಕಿಕರು ಕೊಟ್ಟಿರುವ ವ್ಯಾಪ್ತಿಲಕ್ಷಣವನ್ನು ಗಂಗೇಶನು ಖಂಡಿಸುತ್ತಾನೆ. ಇವರಿಬ್ಬರಿಗೆ ಕ್ರಮವಾಗಿ ವ್ಯಾಘ್ರಶಿಶುಕ. ಸಿಂಹಶಿಶುಕ ಎಂಬ ಅಡ್ಡ ಹೆಸರಿತ್ತು. ಅವರ ಲಕ್ಷಣಗಳನ್ನು ಗಂಗೇಶನು ಸಿಂಹ ಲಕ್ಷಣ, ವ್ಯಾಘ್ರಲಕ್ಷಣ ಎಂಬ ಹೆಸರಿನಿಂದ ಅನುವಾದ ಮಾಡಿದ್ದಾನೆ. 'ಒಂದು ವಸ್ತುವು ಇದ್ದರೂ ಅದು ಅನ್ಯಧರ್ಮದಿಂದ (ಅಲ್ಲಿಲ್ಲದಿರುವ ಧರ್ಮದಿಂದ) ಕೂಡಿಕೊಂಡಿಲ್ಲ, ಉದಾ-ಘಟವಿದ್ದರೂ ಅದು ಪಟತ್ವೇನ ಇಲ್ಲ ಎಂಬ ಅಭಾವ, ಇಲ್ಲಿ ಘಟದಲ್ಲಿ ಘಟತ್ವವಿದೆಯೇ ಹೊರತು ಪಟತ್ವವಿಲ್ಲ. ಆದ್ದರಿಂದ ಪಟತ್ವ ಎಂಬ ಧರ್ಮವಿಶಿಷ್ಟವಾಗಿ ಘಟವಿಲ್ಲ ಎಂಬುದಾಗಿ ಹೇಳುವ ಅಭಾವವನ್ನು ವ್ಯಧಿಕರಣಧರ್ಮಾವಚ್ಛಿನ್ನಾಭಾವ ಎಂಬುದಾಗಿ ಕರೆದಿದ್ದಾನೆ. ಈ ಅಭಾವವನ್ನು ಗಂಗೇಶನು ಪ್ರಸ್ತಾಪಿಸಿ ಖಂಡಿಸುತ್ತಾನೆ. ಅದ್ವೈತವೇದಾಂತಿಗಳು ಈ ಅಭಾವವನ್ನು ಅಂಗೀಕರಿಸುತ್ತಾರೆ (ಧರ್ಮರಾಜಾಧ್ವರಿಯ ವೇದಾಂತಪರಿಭಾಷೆಯನ್ನು ನೋಡಿರಿ) ಅನಂತರ ಪೂರ್ವಪಕ್ಷಲಕ್ಷಣ, ಸಿದ್ಧಾಂತ(ವ್ಯಾಪ್ತಿಯ)ಲಕ್ಷಣ, ಸಾಮಾನ್ಯಾಭಾವವಾದ, ವಿಶೇಷವ್ಯಾಪ್ತಿ ವ್ಯಾಪ್ತಿಗ್ರಹೋಪಾಯ, ತರ್ಕ, ಪಕ್ಷತಾ, ಹೇತ್ವಾಭಾಸಗಳನ್ನು ಹೇಳಿ ಈಶ್ವರನನ್ನು ಸಾಧಿಸುತ್ತಾನೆ. ಉಪಮಾನಖಂಡವೆಂಬ ಮೂರನೆಯ ಖಂಡದಲ್ಲಿ ಉಪಮಾನಕ್ಕೆ ಪ್ರತ್ಯೇಕ ಪ್ರಮಾಣತ್ವವನ್ನು ಸಾಧಿಸಿ ಶಬ್ದಖಂಡದಲ್ಲಿ ಶಬ್ದಪ್ರಾಮಾಣ್ಯವಾದ ಆಕಾಂಕ್ಷಾ, ಯೋಗ್ಯತಾದಿಗಳನ್ನು ಶಕ್ತಿ, ಲಕ್ಷಣಾ, ಶಕ್ತಿಗ್ರಹೋಪಾಯ, ಯೌಗಿಕಾದಿಪದ ಭೇದಗಳನ್ನು ನಿರೂಪಿಸಲಾಗಿದೆ. ಸಮಾಸದಲ್ಲಿ ಪ್ರತ್ಯೇಕವಾದ ಶಕ್ತಿಯಿಲ್ಲ. ತಿ-ತಃ-ಅಂತಿ ಇತ್ಯಾದಿ ಆಖ್ಯಾತಗಳು ಯತ್ನವನ್ನು ಹೇಳುತ್ತವೆ, ಕರ್ತೃವನಲ್ಲ. ಉಪಸರ್ಗಗಳು

ಅರ್ಥವಿಶೇಷದ್ಯೋತಕಗಳೇ ಹೊರತು ವಾಚಕಗಳಲ್ಲ ನಾಲ್ಕು ಪ್ರಮಾಣಗಳ ಹೊರತು ಬೇರೆ ಪ್ರಮಾಣಗಳಿಲ್ಲ ಎಂದು ಸಿದ್ಧಾಂತಿಸಿ ಗ್ರಂಥವನ್ನು ಉಪಸಂಹರಿಸಿದ್ದಾನೆ.

ತತ್ತ್ವಚಿಂತಾಮಣಿಗೆ ಲೆಕ್ಕವಿಲ್ಲದಷ್ಟು ವ್ಯಾಖ್ಯಾನಗಳು ಬಂದಿರುವುದರಿಂದ ಅದರ ಜನಪ್ರಿಯತೆಯನ್ನು ಊಹಿಸಬಹುದು.

೧೨ನೆಯ ಶತಮಾನದಲ್ಲಿ ಮಿಥಿಲೆಯಲ್ಲಿ ಪ್ರಾರಂಭವಾದ ನವೀನ ನ್ಯಾಯವು ೧೫ನೆಯ ಶತಮಾನದವರೆಗೂ ಅಲ್ಲಿಯೇ ಬೆಳೆಯಿತು. ೧೬ನೆಯ ಶತಮಾನದಲ್ಲಿ ಅದು ನವದ್ವೀಪದ (ಬಂಗಾಳದ) ಕಡೆಗೆ ತಿರುಗಿತು.

ವರ್ಧಮಾನೋಪಾಧ್ಯಾಯ (ಕ್ರಿ.ಶ. ೧೨೫೦) : ಇವನು ಗಂಗೇಶೋಪಾಧ್ಯಾಯನ ಮಗನು. ತತ್ತ್ವಚಿಂತಾಮಣಿಗೆ ತತ್ತ್ವಚಿಂತಾಮಣಿಪ್ರಕಾಶ, ಉದಯನಾಚಾರ್ಯರ ನ್ಯಾಯ ವಾರ್ತಿಕ ಟೀಕಾ ತಾತ್ಪರ್ಯ ಪರಿಶುದ್ಧಿಗೆ ನ್ಯಾಯನಿಬಂಧಪ್ರಕಾಶ, ನ್ಯಾಯಕುಸುಮಾಂಜಲಿ ಪ್ರಕಾಶ ಮೊದಲಾದ ಅನೇಕ ಗ್ರಂಥಗಳನ್ನು ಬರೆದಿದ್ದಾನೆ.

ಪಕ್ಷಧರಮಿಶ್ರ (ಕ್ರಿ.ಶ. ೧೨೭೫) : ಇವನೇ ಜಯದೇವನು. ತಾನು ಹಿಡಿದ ಪಕ್ಷವನ್ನು ಬಿಡದೆ ಸಾಧಿಸುವುದರಿಂದಲೂ, ಒಂದು ಪಕ್ಷ(**Fort night**) ದವರೆಗೂ ಒಂದೇ ವಿಷಯವನ್ನು ಹಿಡಿದು ವಾದಿಸುವುದರಿಂದಲೂ ಇವನಿಗೆ ಆ ಹೆಸರು ಬಂದಿದೆ. ತತ್ತ್ವಚಿಂತಾಮಣಿಗೆ ಇವನು ಬರೆದಿರುವ ತತ್ತ್ವಚಿಂತಾಮಣ್ಯಾಲೋಕದಲ್ಲಿ ಬಂಗಾಳದ ಲಕ್ಷಣ ಸೇನನ ಕಾಲದವನೆಂದು ಹೇಳಿದ್ದಾನೆ.

ಭಾಸರ್ವಜ್ಞನ (ನ್ಯಾಯಸಾರಕರ್ತೃ) ಅನುಕರಣವು ಇವನಲ್ಲಿ ಕಂಡುಬರುತ್ತದೆ. ಇವನು ಬೌದ್ಧ ಜೈನ ಸಿದ್ಧಾಂತಗಳನ್ನು ಖಂಡಿಸಿರುವನು. ಇವನೇ ಪ್ರಸನ್ನ ರಾಘವ ಎಂಬ ನಾಟಕ ವನ್ನೂ, ಚಂದ್ರಾಲೋಕವನ್ನೂ ಬರೆದಿರುತ್ತಾನೆ. ಶಂಕರಮಿಶ್ರ (ಕ್ರಿ. ಶ. ೧೪೫೦)— ಇವನು ಭವನಾಥಮಿಶ್ರನ ಮಗನು. ಪಂಡಿತವಿಜಯ, ಆತ್ಮತತ್ತ್ವ ವಿವೇಕಕಲ್ಪಲತಾ, ತತ್ತ್ವಚಿಂತಾಮಣಿಮಯೂಖ, ಅಭೇದಧಿಕ್ಕಾರ, ವೈಶೇಷಿಕಸೂತ್ರೋಪಸ್ಕಾರ ಮುಂತಾದ ಅನೇಕ ಗ್ರಂಥಗಳನ್ನು ಬರೆದಿದ್ದಾನೆ. ಇವನ ಕೊನೆಯ ಗ್ರಂಥವು ಕಣಾದನ ಸೂತ್ರಗಳಿಗೆ ನೇರವಾದ ವ್ಯಾಖ್ಯಾನವೆಂದು ಪ್ರಸಿದ್ಧವಾಗಿದೆ.

ನವದ್ವೀಪಶಾಖೆ (ಕ್ರಿ.ಶ. ೧೬೦೦–೧೮೦೦)—ನವದ್ವೀಪ ಶಾಖೆಯು ೧೬, ೧೭ನೆಯ ಶತಮಾನಗಳಲ್ಲಿ ರಘುನಾಥಶಿರೋಮಣಿ, ಮುಂತಾದವರಿಂದ ವಿಸ್ತಾರವಾಗಿ ಬೆಳೆಯಿತು.

ವಾಸುದೇವಸಾರ್ವಭೌಮ ೧೪೫೦–೧೫೨೫ : ಇವನು ಬಂಗಾಳದವನು. ಮಿಥಿಲೆಯಲ್ಲಿ ಮಾತ್ರವೇ ಸೀಮಿತವಾಗಿದ್ದ ನವೀನ ನ್ಯಾಯವನ್ನು ತಾನು ಮಿಥಿಲೆಗೆ ಹೋಗಿ ಪಕ್ಷಧರಮಿಶ್ರನಲ್ಲಿ

ಕಲಿತು ನವದ್ವೀಪದಲ್ಲಿ ಪ್ರಚುರಪಡಿಸಿದನು. ಗ್ರಂಥಗಳನ್ನು ಹೊರತೆಗೆದುಕೊಂಡು ಹೋಗಲು ಬಿಡುತ್ತಿರಲಿಲ್ಲವಾದ್ದರಿಂದ ಇವನು ತತ್ತ್ವಚಿಂತಾಮಣಿಯನ್ನು ಕಂಠಪಾಠ ಮಾಡಿಕೊಂಡು ಬಂದು ನವದ್ವೀಪದಲ್ಲಿ ಶಿಷ್ಯರಿಗೆ ಉಪದೇಶಿಸಿ ಬರೆಸಿದನು. ರಘುನಾಥಶಿರೋಮಣಿ ಮತ್ತು ವೈಷ್ಣವ ಪಂಥದ ಪ್ರವರ್ತಕನಾದ ಚೈತನ್ಯನು ಇವನ ಶಿಷ್ಯರು. ಗಂಗೇಶನ ತತ್ತ್ವಚಿಂತಾಮಣಿಗೆ ಸಾರ್ವಭೌಮನಿರುಕ್ತಿ ಎಂಬ ವ್ಯಾಖ್ಯಾನವನ್ನು ಬರೆದಿರುತ್ತಾನೆ. ಗದಾಧರಭಟ್ಟಾಚಾರ್ಯ ಮುಂತಾದವರು ಸಾರ್ವಭೌಮನ ವ್ಯಾಪ್ತಿಪರಿಷ್ಕಾರ, ಪಕ್ಷತಾ ಮುಂತಾದುವುಗಳನ್ನು ಅಲ್ಲಲ್ಲಿ ಉಲ್ಲೇಖಿಸುತ್ತಾರೆ.

ರಘುನಾಥಶಿರೋಮಣಿ (ಕ್ರಿ.ಶ. ೧೪೭೭–೧೫೪೭) : ನವದ್ವೀಪದಲ್ಲಿಯೇ ಹುಟ್ಟಿದ ಇವನು ವಾಸುದೇವಸಾರ್ವಭೌಮನಲ್ಲಿ ತರ್ಕಶಾಸ್ತ್ರಾಭ್ಯಾಸವನ್ನು ಮಾಡಿದನು. ಮಿಥಿಲೆಗೆ ಹೋಗಿ ಪಕ್ಷಧರಮಿಶ್ರನಲ್ಲಿಯೂ ವ್ಯಾಸಂಗಮಾಡಿ ಪುನಃ ಹಿಂದಿರುಗಿ ನವದ್ವೀಪದಲ್ಲಿ ಒಂದು ಶಾಸ್ತ್ರ ವಿದ್ಯಾಲಯವನ್ನು ತಾನೇ ಸ್ಥಾಪಿಸಿದನು. ಯಶೋವಿಜಯ ಎಂಬ ಪಂಡಿತನು ರಘುನಾಥನ ಬಗ್ಗೆ ಈ ಮಾತನ್ನಾಡಿದ್ದಾನೆ.

ನ್ಯಾಯಾಂಬುಧಿಃ ದೀಧಿತಿಕಾರಯುಕ್ತಿಕಲ್ಲೋಲಕೋಲಾಹಲದುರ್ವಿಗಾಹಃ ।
ತಸ್ಯಾಪಿ ಪಾತುಂ ನ ಪಯಃ ಸಮರ್ಥಾಃ ಕಿಂ ನಾಮ ಧೀಮಂತ್
ಪ್ರತಿಭಾಂಬುವಾಹಃ ॥

ರಘುನಾಥಶಿರೋಮಣಿಯ ಶ್ರೇಷ್ಠ ಕೃತಿ 'ತತ್ತ್ವಚಿಂತಾಮಣಿದೀಧಿತಿ' ಎಂಬ ವ್ಯಾಖ್ಯಾನವು. ಇದರ ಮೇಲೆ ಸುಮಾರು ಹದಿನೆಂಟಕ್ಕೆ ಕಮ್ಮಿ ಇಲ್ಲದಷ್ಟು ವ್ಯಾಖ್ಯಾನಗಳಿವೆ. ತತ್ತ್ವಚಿಂತಾಮಣಿಯ ವಿಸ್ತಾರವಾದ ಭಾಗಗಳನ್ನು ಇವನು ಅರ್ಥಗರ್ಭಿತವಾದ ಕೆಲವೇ ಮಾತುಗಳಿಂದ ವ್ಯಾಖ್ಯಾನಿಸುತ್ತಾನೆ. ಮೂಲಕ್ಕಿಂತಲೂ ಇವನ ಮಾತು ಹೆಚ್ಚು ಸಾರವತ್ತಾದುದು, ಗಾಂಭೀರ್ಯದಿಂದ ಕೂಡಿದುದು ಎಂಬ ಅಭಿಪ್ರಾಯವಿದೆ. (ಲಿಖನ ಸಂಕ್ಷೇಪನಿರ್ಬಂಧೀದೀಧಿತಿಕಾರಃ). ಇವನು ಯುಕ್ತಿ ವಿಚಾರ ಮಾಡುವುದರಲ್ಲಿ ನಿಸ್ಸೀಮನು. ಯುಕ್ತಿಬಲದಿಂದ ಹೊಸ ರೀತಿಯಲ್ಲಿ ವಸ್ತು ನಿರೂಪಣೆ ಮಾಡಲು ಬರುವುದಾದರೆ ಪ್ರಾಚೀನರು ಆಡಿದ ಮಾತನ್ನು ತಪ್ಪೆಂದು ಏಕೆ ಹೇಳಬಾರದು ? ಎಂದು ಕೇಳುತ್ತಾನೆ (ನ ಹಿ ಕಸ್ಯಚಿದ್ ಗ್ರಂಥಕೃತೋ ವಿಪರ್ಯಸ್ತಲೇಖನಂ ಯುಕ್ತಿಬಲಾದ್ ವಸ್ತುಸಿದ್ಧೌ ಬಾಧಕಂ–ದೀಧಿತಿ). ಕೆಲವು ಕಡೆ ತತ್ತ್ವಚಿಂತಾಮಣಿಯ ಭಾಗವು ಹೊಂದುವುದಿಲ್ಲವೆಂದು ಕಂಡಾಗ ಮೂಲಕಾರರ ಅಭಿಪ್ರಾಯವು ಹೀಗಿದೆ ಎಂದು ಹೇಳಿ, ತಾನೇ ಅವರು ಹೇಳದಿರುವ ಪರಿಷ್ಕಾರಗಳನ್ನು ಮಾಡಿ ಮೂಲಯೋಜನೆಯನ್ನೂ ಮಾಡುತ್ತಾನೆ. ನವೀನ ನ್ಯಾಯದಲ್ಲಿ ಮುಂದೆ ಗ್ರಂಥ ನಿರ್ಮಾಣ ಮಾಡುವವರಿಗೆ ಇವನ ದೀಧಿತಿಯು ಮಾರ್ಗದರ್ಶಕವಾದ ಉತ್ತಮ ಕೃತಿಯಾಗಿದೆ.

ಇವನ ಬೌದ್ಧಧಿಕ್ಕಾರಶಿರೋಮಣಿಯು ಆತ್ಮತತ್ತ್ವವಿವೇಕದ ವ್ಯಾಖ್ಯಾನರೂಪ ವಾಗಿದೆ. ಪದಾರ್ಥತತ್ತ್ವನಿರೂಪಣಂ ಎಂಬ ಗ್ರಂಥವು ಪ್ರಾಚೀನ ಪದಾರ್ಥನಿರೂಪಣ ವನ್ನೆಲ್ಲಾ ಖಂಡಿಸಿ ಹೊಸದಾದ ರೀತಿಯಿಂದ ಪದಾರ್ಥಗಳನ್ನು ನಿರೂಪಣೆ ಮಾಡುತ್ತದೆ. ಇಲ್ಲಿ ಯುಕ್ತಿಯಿಂದ ಪದಾರ್ಥಗಳ ಸಂಖ್ಯೆಯನ್ನು ಕಡಿಮೆ ಮಾಡಿದ್ದರೂ ಪ್ರಾಚೀನರ ನಿರೂಪಣ ಕ್ರಮವು ಪ್ರಿಯವಾದಷ್ಟು ಇವನ ಕ್ರಮವು ಜನರಿಗೆ ಹಿಡಿಸಲಿಲ್ಲ. ಕಿರಣಾವಲೀಪ್ರಕಾಶ ದೀಧಿತಿ. ನಞ್ವಾದ, ಆಖ್ಯಾತವಾದ ಮುಂತಾದುವು ಇವನ ಇತರ ಕೃತಿಗಳು.

ಮಥುರಾನಾಥ ತರ್ಕವಾಗೀಶ (ಕ್ರಿ. ಶ. ೧೫೭೦)— ಇವನು ರಾಮತರ್ಕಾಲಂಕಾರನೆಂಬ ತನ್ನ ತಂದೆಯ ಬಳಿಯಲ್ಲಿಯೂ ರಘುನಾಥಶಿರೋಮಣಿಯ ಬಳಿಯಲ್ಲಿಯೂ ತರ್ಕಶಾಸ್ತ್ರ ವ್ಯಾಸಂಗವನ್ನು ಮಾಡಿದನು. ಇವನ ದೀಧಿತಿ ವ್ಯಾಖ್ಯಾನಕ್ಕೆ 'ತತ್ತ್ವಚಿಂತಾಮಣಿ ರಹಸ್ಯ' ಎಂದು ಹೆಸರು. ಆದರೆ ಇದು ಮಾಥುರೀ ಎಂದೇ ಪ್ರಸಿದ್ಧವಾಗಿದೆ. ಬಂಗಾಳದಲ್ಲಿ ಇದನ್ನು 'ಫಕ್ಕಿಕಾ' ಎಂದು ಕರೆಯುತ್ತಾರೆ. ತತ್ತ್ವಚಿಂತಾಮಣ್ಯಾಲೋಕರಹಸ್ಯ, ದೀಧಿತಿರಹಸ್ಯ ಮುಂತಾದ ಅನೇಕ ಗ್ರಂಥಗಳನ್ನು ಇವನು ಬರೆದಿದ್ದಾನೆ. ದೀಧಿತಿಯ ಪ್ರಸಿದ್ಧ ವ್ಯಾಖ್ಯಾನಕಾರರಲ್ಲಿ ಮಥುರಾ ನಾಥನು ಒಬ್ಬನು. ಇವನ ಗ್ರಂಥವು ಇನ್ನೂ ಅನೇಕ ಕಡೆಗಳಲ್ಲಿ ಪ್ರಚಾರದಲ್ಲಿದೆ.

ಜಗದೀಶತರ್ಕಾಲಂಕಾರ (ಕ್ರಿ.ಶ. ೧೬೩೧)—ಇವನು ಭವಾನಂದಸಿದ್ಧಾಂತವಾಗೀಶನೆಂಬ ವನ ಗುರುಕುಲದಲ್ಲಿ ತರ್ಕಶಾಸ್ತ್ರವನ್ನು ಕಲಿತನು. ರಾಮಭದ್ರಸಾರ್ವಭೌಮ ಎಂಬುವನ ಹತ್ತಿರವೂ ಇವನು ವಿದ್ಯಾಭ್ಯಾಸ ಮಾಡಿದನು. ೧) ತತ್ತ್ವಚಿಂತಾಮಣಿದೀಧಿತಿಪ್ರಕಾಶಿಕಾ (ಜಾಗದೀಶೀ) ೨) ತತ್ತ್ವಚಿಂತಾಮಣಿಮಯೂಖ, ೩) ನ್ಯಾಯಾದರ್ಶ (ನ್ಯಾಯಸಾರಾವಲೀ) ೪) ಶಬ್ದಶಕ್ತಿಪ್ರಕಾಶಿಕಾ ೫) ತರ್ಕಾಮೃತ ೬) ದ್ರವ್ಯಭಾಷ್ಯಟೀಕಾ ೭) ನ್ಯಾಯಲೀಲಾವಲಿ ದೀಧಿತಿವ್ಯಾಖ್ಯಾ ಇವು ಇವನ ಗ್ರಂಥಗಳು. ಇವನ ದೀಧಿತಿ ವ್ಯಾಖ್ಯಾನವು ಜಾಗದೀಶೀ ಎಂದು ಪ್ರಸಿದ್ಧವಾಗಿದೆ. ಉತ್ತರಪ್ರದೇಶದಲ್ಲಿ (ಕಾಶೀ ಮುಂತಾದ ಕಡೆ) ಇದು ಹೆಚ್ಚು ಪ್ರಚಾರದಲ್ಲಿದೆ.

ಜಗದೀಶನ ಶಬ್ದಶಕ್ತಿ ಪ್ರಕಾಶಿಕಾ ಗ್ರಂಥವು ತರ್ಕಶಾಸ್ತ್ರದ ದೃಷ್ಟಿಕೋಣದಿಂದ ಶಾಬ್ದ ಬೋಧವನ್ನು ಹೇಳುವ ಕ್ರಮವನ್ನು ತಿಳಿಸುತ್ತದೆ. 'ಗೌರಸ್ತಿ' ಗೋವು ಇದೆ ಎಂಬ ವಾಕ್ಯ ದಿಂದ ಶಾಬ್ದ ಜ್ಞಾನ ಬರುತ್ತದೆ. ಇದು ಅನುಮಾನ ಪ್ರಮಾಣದಿಂದಲೇ ಬರುತ್ತದೆ. ಇದ ಕ್ಕಾಗಿ ಶಬ್ದಪ್ರಮಾಣವನ್ನು ಪ್ರತ್ಯೇಕವಾಗಿ ಒಪ್ಪಬೇಕಾಗಿಲ್ಲ ಎಂಬ ವೈಶೇಷಿಕರ ವಾದವನ್ನು ಇವನು ಖಂಡಿಸುತ್ತಾನೆ. ಇಲ್ಲಿ ಮೀಮಾಂಸಕರ ಮತವನ್ನು ಖಂಡಿಸುತ್ತಾನೆ. ತಾತ್ಪರ್ಯ ಜ್ಞಾನದ ಉಪಯೋಗವನ್ನು ವಿವರಿಸುತ್ತಾನೆ.

ಗದಾಧರ ಭಟ್ಟಾಚಾರ್ಯ (ಕ್ರಿ.ಶ. ೧೬೫೦) :— ಇವನು ಹರಿರಾಮ ತರ್ಕವಾಗೀಶನ ಶಿಷ್ಯನು. ಇವನು ಸ್ವತಂತ್ರವಾಗಿ ಒಂದು ಶಾಸ್ತ್ರ ವಿದ್ಯಾಲಯವನ್ನು ನಡೆಸುತ್ತಿದ್ದನು. ಇವನ

ಶಾಸ್ತ್ರಪ್ರೌಢಿಯು ಅಸಾಧಾರಣವಾಗಿತ್ತು. ನವೀನನ್ಯಾಯ ಪ್ರಪಂಚದಲ್ಲಿ ಇವನು ಪಂಡಿತ ಚಕ್ರವರ್ತಿ ಎಂದು ಭಾವಿಸಲಾಗುತ್ತಿದೆ. ಇವನು ತನಗಿಂತ ಹಿಂದಿನವರ ಎಲ್ಲಾ ವಾದಗಳನ್ನೂ ಅನುವಾದಿಸಿ ಅವರಲ್ಲಿ ದೋಷಗಳನ್ನೂ ಅಸ್ವಾರಸ್ಯಗಳನ್ನೂ ಹೇಳುತ್ತಾನೆ. ನವೀನ ನ್ಯಾಯದಲ್ಲಿ ದೀಧಿತಿಯ ವ್ಯಾಖ್ಯಾನಗಳಲ್ಲಿ ಗದಾಧರ ಭಟ್ಟಾಚಾರ್ಯನ ವ್ಯಾಖ್ಯಾನವೇ ಕೊನೆಯದು. ಅವನ ಮಾತೇ ಕೊನೆಯದು. ಅವನ ವ್ಯಾಖ್ಯಾನಗಳಿಗೆ ಸಾಮಾನ್ಯವಾಗಿ ಗಾದಾಧರೀ ಎಂದೇ ಹೆಸರು. ಅವನ ಗ್ರಂಥಗಳು ಭಾರತದಲ್ಲಿ ಎಲ್ಲಾ ಕಡೆಯಲ್ಲಿಯೂ ತರ್ಕಶಾಸ್ತ್ರಾಭ್ಯಾಸಿಗಳಿಂದ ಉದ್ಗ್ರಂಥಗಳೆಂದು ಮನ್ನಿಸಲ್ಪಟ್ಟಿವೆ. ವಿಶೇಷವಾಗಿ ದಕ್ಷಿಣಾಪಥದ ವಿದ್ಯಾಲಯ, ಗುರುಕುಲಗಳಲ್ಲಿ ಗದಾಧರನ ಗ್ರಂಥಗಳು ಹೆಚ್ಚು ಪ್ರಚಾರದಲ್ಲಿವೆ. ೧) ತತ್ತ್ವಚಿಂತಾಮಣಿದಿಧೀತಿ ಪ್ರಕಾಶಿಕಾ ೨) ತತ್ತ್ವಚಿಂತಾಮಣಿವ್ಯಾಖ್ಯಾ, ೩) ಮುಕ್ತಾವಲೀಟೀಕಾ ೪) ರತ್ನಕೋಶವಾದ ರಹಸ್ಯ ಇವು ಅವನ ಮುಖ್ಯ ಗ್ರಂಥಗಳು. ಇವನು ಅನೇಕವಾದ ಗ್ರಂಥಗಳನ್ನು ಬರೆದಿದ್ದಾನೆ. ೧) ಆಖ್ಯಾತವಾದ, ೨) ಕಾರಕವಾದ, ೩) ನಞ್ವಾದ, ೪) ಮುಕ್ತಿವಾದ, ೫) ವಿಧಿವಾದ, ೬) ವಿಷಯತಾವಾದ, ೭) ವ್ಯುತ್ಪತ್ತಿವಾದ, ೮) ಶಕ್ತಿವಾದಗಳು ಇವುಗಳಲ್ಲಿ ಮುಖ್ಯವಾಗಿವೆ.

'ಶಾಬ್ದಬೋಧೇ ಚೈಕಪದಾರ್ಥೇ ಅಪರಪದಾರ್ಥಸ್ಯ ಸಂಸರ್ಗಃಸಂಸರ್ಗಮರ್ಯಾದಯಾ ಭಾಸತೇ' ಎಂದು ವ್ಯುತ್ಪತ್ತಿವಾದದಲ್ಲಿ ಪ್ರಾರಂಭಿಸಿ ಆಕಾಂಕ್ಷೆಯಿಂದಲೇ ಎರಡು ಪದಾರ್ಥಗಳಿಗೆ ಇರುವ ಸಂಬಂಧವು ತೋರುತ್ತದೆ. ಅನ್ವಯಾಂಶದಲ್ಲಿ (ಎರಡು ಪದಾರ್ಥಗಳ) ಸಂಬಂಧಾಂಶದಲ್ಲಿ ಪದಕ್ಕೆ ಶಕ್ತಿಯನ್ನು ಹೇಳಬೇಕಾಗಿಲ್ಲ ಎಂದು ಹೇಳುತ್ತಾನೆ.

'ಶಕ್ತಿ ಲಕ್ಷಣಾಚಾರ್ಥೇ ಪದವೃತ್ತಿಃ' ಎಂದು ಆರಂಭಿಸಿ ಶಕ್ತಿಸ್ವರೂಪವನ್ನು ವಿವೇಚಿಸುತ್ತಾ ಮೀಮಾಂಸಕರ ಮತ್ತು ವೈಯಾಕರಣರ ಮತಗಳನ್ನು ವಿಮರ್ಶಿಸಿದ್ದಾನೆ. ಪುಷ್ಪವಂತ (ಸೂರ್ಯಚಂದ್ರರು) ಎಂಬ ಪದದ ಅರ್ಥವನ್ನು ಧೇನು, ಆಕಾಶ, ಯತ್, ತತ್, ಏತದ್, ಅಸ್ಮದ್, ಯುಷ್ಮದ್, ಸರ್ವ, ಕಿಂ ಇತ್ಯಾದಿ ಸರ್ವನಾಮಶಬ್ದಗಳ ಅರ್ಥವನ್ನು ವಿಪುಲವಾಗಿ ಚರ್ಚಿಸಿದ್ದಾನೆ.

ಇವನ ಗ್ರಂಥಗಳ ಮೇಲೆ ಕ್ರೋಡಪತ್ರಗಳೆಂಬ ಕೋಟಿಕ್ರಮಗಳು ವಿಪುಲವಾಗಿ ಬೆಳೆದಿವೆ. ಕೂದಲೆಳೆಯನ್ನು ಸಾವಿರಪಾಲುಮಾಡಿ ಸೀಳಿದಂತೆ, ಅತಿಸೂಕ್ಷ್ಮವಾದ ಚರ್ಚೆಯನ್ನು ಬೆಳಸಿ ಪರಿಷ್ಕಾರಗಳನ್ನು ಮಾಡುವ ನವೀನ ತರ್ಕವು ಇಂದಿನ ಸಂಸ್ಕೃತಶಾಸ್ತ್ರಗಳ ಉದ್ಗ್ರಂಥಗಳ ಅಧ್ಯಯನಕ್ಕೆ ಸಹಕಾರಿಯಾಗಿದೆ. ಆದರೂ ನವೀನನ್ಯಾಯದ ಪರಿಷ್ಕಾರಗಳ ಪದಾರ್ಥವಿಮರ್ಶೆಯ ಕಡೆಗೆ ತಿರುಗದೆ ಲಕ್ಷಣಗಳ ವಿವೇಚನೆಯಲ್ಲಿಯೇ ಪರ್ಯವಸಾನ ಹೊಂದುತ್ತದೆ ಎಂಬುದು ಗಮನಾರ್ಹ. ಮಹಾರಾಷ್ಟ್ರ ದೇಶದ ಕೃಷ್ಣಭಟ್ಟನು ಕೃಷ್ಣಂಭಟ್ಟೀಯ ಎಂಬ ಹೆಸರಿನಿಂದಲೂ, ಅದೇ ದೇಶದವನಾದ ರಘುನಾಥಪರ್ವತೆ ಎಂಬುವನೂ ಗಾದಾಧರಿಗೆ ವ್ಯಾಖ್ಯಾನಗಳನ್ನು ಬರೆದಿದ್ದಾರೆ.

ಪ್ರಕರಣಗ್ರಂಥಗಳು :– ತರ್ಕಶಾಸ್ತ್ರದ ಪ್ರಕರಣ ಗ್ರಂಥಗಳು ನಾಲ್ಕು ವಿಧವಾಗಿವೆ. ೧) ನ್ಯಾಯಶಾಸ್ತ್ರದ ಪ್ರಮಾಣ ಭಾಗವನ್ನು ಮಾತ್ರ ಪ್ರಧಾನವಾಗಿ ವಿವೇಚಿಸಿ ಪ್ರಮೇಯಾದಿ ೧೫ ಪದಾರ್ಥಗಳನ್ನು ಗೌಣವಾಗಿ ವಿಚಾರಮಾಡುವ ಗ್ರಂಥಗಳು ೨) ನ್ಯಾಯ ಮತ್ತು ವೈಶೇಷಿಕ ಶಾಸ್ತ್ರದ ಎಲ್ಲಾ ವಿಷಯಗಳನ್ನು ಒಳಗೊಂಡಿರುವ ಪ್ರಕರಣಗ್ರಂಥಗಳು. ೩) ವೈಶೇಷಿಕ ಶಾಸ್ತ್ರದ ೭ ಪದಾರ್ಥಗಳಲ್ಲಿ ನ್ಯಾಯಶಾಸ್ತ್ರದ ೧೬ ಪದಾರ್ಥಗಳನ್ನು ಅಂತರ್ಭಾವ ಮಾಡಿ ಕೊಂಡಿರುವ ಪ್ರಕರಣಗ್ರಂಥಗಳು ೪) ನ್ಯಾಯಶಾಸ್ತ್ರದ ಕೆಲವು ಪದಾರ್ಥಗಳನ್ನೂ ವೈಶೇಷಿಕ ಶಾಸ್ತ್ರದ ಕೆಲವು ಪದಾರ್ಥಗಳನ್ನೂ ವಿವೇಚಿಸುವ ಪ್ರಕರಣಗ್ರಂಥಗಳು.

ಭಾಸರ್ವಜ್ಞ (ಕ್ರಿ.ಶ. ೯೫೦) :– ಇವನು ಕಾಶ್ಮೀರದವನು. ಇವನ ಗ್ರಂಥ ನ್ಯಾಯಸಾರಕ್ಕೆ ೧೮ ಟೀಕೆಗಳಿವೆ (ಭಾಸರ್ವಜ್ಞೋ ನ್ಯಾಯಸಾರತರ್ಕಸೂತ್ರವಿಧಾಯಕಃ। ನ್ಯಾಯಸಾರಾಭಿಧೇ ತರ್ಕೇ ಟೀಕಾ ಅಷ್ಟಾದಶಸ್ಫುಟಾಃ). ಇದರಿಂದ ಈ ಗ್ರಂಥದ ಜನಪ್ರಿಯತೆಯು ತಿಳಿದು ಬರುತ್ತದೆ. ನ್ಯಾಯ ಭೂಷಣವೆಂಬ ಟೀಕೆಯು ಅವುಗಳಲ್ಲಿಯೂ ಅತಿ ಪ್ರಸಿದ್ಧವಾದುದು ಎಂದು ಹೇಳಲಾಗಿದೆ. ರತ್ನಕೀರ್ತಿ ಎಂಬ ಬೌದ್ಧ ಪಂಡಿತನು ನ್ಯಾಯಸಾರದ ಭೂಷಣವನ್ನು ಅಲ್ಲಲ್ಲಿ ಉದ್ಧರಿಸುತ್ತಾನೆ. (ಯಚ್ಚಾತ್ರ ನ್ಯಾಯಭೂಷಣೇನ–ಸೂರ್ಯಾದಿಗ್ರಹಣೇ ತದುಪಕಾರ್ಯಶೇಷವಸ್ತುರಾಶಿ ಗ್ರಹಣಪ್ರಸಂಜನಮುಕ್ತಂತ ಅಭಿಪ್ರಾಯಾನವಗಾಹನಫಲಂ—ರತ್ನಕೀರ್ತಿಯ ಅಪೋಹಸಿದ್ಧಿ.)

ಬೌದ್ಧರ ತರ್ಕದಂತೆಯೇ ವೈದಿಕತರ್ಕವನ್ನು ಬೆಳೆಸಲು ಹೊರಟಿರುವ ಭಾಸರ್ವಜ್ಞನ ನ್ಯಾಯಸಾರಗ್ರಂಥಕ್ಕೆ ಭಾರತೀಯತರ್ಕಶಾಸ್ತ್ರದಲ್ಲಿ ಉತ್ಕೃಷ್ಟಸ್ಥಾನವಿದೆ.

ಭಾಸರ್ವಜ್ಞನು ಪ್ರತ್ಯಕ್ಷ, ಅನುಮಾನ, ಮತ್ತು ಆಗಮ ಎಂಬ ಮೂರು ಪ್ರಮಾಣ ಗಳನ್ನು ಮಾತ್ರವೇ ಪರಿಗ್ರಹಿಸಿ ಉಪಮಾನವನ್ನು ಅನುಮಾನದಲ್ಲಿಯೇ ಅಂತರ್ಭಾವ ಮಾಡಿದ್ದಾನೆ. ಇವನು ಸಾಂಖ್ಯದರ್ಶನ ಮತ್ತು ಜೈನದರ್ಶನಗಳಿಂದ ಪ್ರಭಾವಿತನಾದಂತೆ ಕಾಣುತ್ತಾನೆ ಅಕ್ಷಪಾದನ ನ್ಯಾಯದರ್ಶನದ ವಿಚಾರಸರಣಿಯನ್ನು ಇವನು ಬಿಟ್ಟಿರುವುದು ಸ್ಪಷ್ಟ. ಮೋಕ್ಷದಲ್ಲಿ ನಿತ್ಯಸುಖವನ್ನು ಇವನು ಒಪ್ಪುತ್ತಾನೆ. ಇವನ ಪದಾರ್ಥ ವಿಭಾಗಕ್ರಮವು ಹೀಗಿದೆ–

ಪ್ರಮಾಣ

(ಸಂಶಯ ವಿಪರ್ಯಯರಹಿತ ಪ್ರಮೇಯ ಜ್ಞಾನಸಾಧನ)



ಅನಧ್ಯವಸಿತವನ್ನೂ ಸೇರಿಸಿ ಆರು ಹೇತ್ವಾಭಾಸಗಳನ್ನು ಹೇಳಿದ್ದಾನೆ. ಹೀಗೆ ಪ್ರಧಾನವಾಗಿ ಪ್ರಮಾಣವನ್ನಿಟ್ಟುಕೊಂಡು, ಅಮುಖ್ಯವಾಗಿ ಪ್ರಮೇಯಾದಿಗಳು ಇಲ್ಲಿಯೇ ಸೇರುತ್ತವೆಯೆಂದು ತೋರಿಸಿದ್ದಾನೆ. ಶಿವನ ಜ್ಞಾನದಿಂದ ಮೋಕ್ಷ ಎಂದು ಹೇಳುವ ಇವನು ಕಾಶ್ಮೀರ ಶೈವ ಸಂಪ್ರದಾಯಕ್ಕೆ ಸೇರಿದವನೆಂದು ತೋರುತ್ತದೆ.

ವರದರಾಜ (ಕ್ರಿ.ಶ. ೧೧೫೦) :— ಇವನು ತಾರ್ಕಿಕರಕ್ಷಾ ಎಂಬ ಗ್ರಂಥವನ್ನು ಬರೆದಿದ್ದಾನೆ. ಇದರಲ್ಲಿರುವ ಮೂರು ಪರಿಚ್ಛೇದಗಳಲ್ಲಿ ಮೊದಲನೆಯ ಪರಿಚ್ಛೇದದಲ್ಲಿ ಪ್ರಮಾಣಾದಿ ನ್ಯಾಯಸೂತ್ರೋಕ್ತವಾದ ೧೪ ಪದಾರ್ಥಗಳ ವಿಚಾರವಿದೆ. ಎರಡನೆಯ ಪರಿಚ್ಛೇದವು ಜಾತಿಯನ್ನೂ, ಮೂರನೆಯ ಪರಿಚ್ಛೇದವು ನಿಗ್ರಹಸ್ಥಾನವನ್ನೂ ವಿವರಿಸುತ್ತವೆ. ನ್ಯಾಯ ಸೂತ್ರಾನುಸಾರವಾಗಿ ಆತ್ಮಾದಿ ೧೨ ಪ್ರಮೇಯಗಳನ್ನೂ ದ್ರವ್ಯಾದಿ ಆರು ಪದಾರ್ಥಗಳನ್ನೂ ಪ್ರಮೇಯಗಳೆಂದಿದ್ದಾನೆ ಅವನ ವಿಭಾಗಕ್ರಮವು ಹೀಗಿದೆ—




ವರದರಾಜನು :—'ಅವಿಸಂವಾದಿ ವಿಜ್ಞಾನಂ ಪ್ರಮಾಣಮಿತಿ ಸೌಗತಾಃ' ಎಂಬ ಬೌದ್ಧರ ಪ್ರಮಾಣಲಕ್ಷಣವನ್ನು ಖಂಡಿಸುತ್ತಾನೆ. (ಅವಿಸಂವಾದನಮಿತಿ ತದಸತ್ । ಭೂತ ಭವಿಷ್ಯದ್ವಿಷಯೇಷು ಅನುಮಾನೇಷು ಅವ್ಯಾಪ್ತೇಃ । ತಾ. ರ ೧೪.)

'ವ್ಯಾಪ್ತಿಗ್ರಹಣಸಾಪೇಕ್ಷಂ ಪ್ರಮಿತೇಃ ಸಾಧನಂ ವಿದುಃ ' ಎಂಬ ಅನುಮಾನ ಲಕ್ಷಣ ವನ್ನು ಹೇಳಿ 'ವ್ಯಾಪ್ತಿಃ ಸಂಬಂಧೋ ನಿರುಪಾಧಿಕಃ' ಎಂದು ವ್ಯಾಪ್ತಿಲಕ್ಷಣವನ್ನು ಹೇಳಿರುವನು. ದ್ರವ್ಯಾದಿ ಆರು ಪದಾರ್ಥಗಳನ್ನು ಪ್ರಮೇಯದಲ್ಲಿ ತಾನು ಸೇರಿಸಿರುವುದಕ್ಕೂ ಗೌತಮರು ಬಿಟ್ಟಿರುವುದಕ್ಕೂ ಹೀಗೆ ಕಾರಣವನ್ನು ಕೊಟ್ಟಿರುವನು.

ಮೋಕ್ಷೇ ಸಾಕ್ಷಾದನಂಗತ್ವಾದಕ್ಷಪಾದೈರ್ನಲಕ್ಷಿತಂ ।
ತಂತ್ರಾಂತರಾನುಸಾರೇಣ ಷಟ್ಕಂ ದ್ರವ್ಯಾದಿ ಲಕ್ಷ್ಯತೇ ॥

ಕಾರಿಕಾ ರೂಪವಾಗಿಯೂ ಇರುವ ಇವನ ಗ್ರಂಥವನ್ನು ದರ್ಶನಾಂತರಗಳಲ್ಲಿಯೂ ಉದಾಹರಿಸುತ್ತಾರೆ.

ಕೇಶವಮಿಶ್ರ (ಕ್ರಿ. ಶ. ೧೨೭೫) :— ಇವನು ಮಿಥಿಲೆಯವನು. ಇವನ ಗ್ರಂಥ ತರ್ಕಭಾಷಾ. ಇವನು ನ್ಯಾಯದರ್ಶನೋಕ್ತವಾದ ೧೬ ಪದಾರ್ಥಗಳನ್ನು ವಿವೇಚಿಸಿ, ದ್ರವ್ಯಾದಿ ಗಳನ್ನು ೧೬ ರಲ್ಲಿಯೇ, ಅಂತರ್ಭಾವ ಮಾಡುತ್ತಾನೆ. ಪ್ರಮೇಯಗಳ ೧೨ ಭೇದಗಳಲ್ಲಿ ಅರ್ಥ ವೆಂಬ ಪ್ರಮೇಯದಲ್ಲಿಯೇ ದ್ರವ್ಯಾದಿ ಆರನ್ನು ಅಂತರ್ಭಾವ ಮಾಡುತ್ತಾನೆ. ಈ ಗ್ರಂಥವು ತರ್ಕಶಾಸ್ತ್ರಾಧ್ಯಯನಕ್ಕೆ ಬಹಳ ಉಪಯುಕ್ತವಾಗಿತ್ತೆಂದೂ ಇದಕ್ಕೆ ಬರೆದಿರುವ ೧೪ ವ್ಯಾಖ್ಯಾನ ಗಳಿಂದ ತಿಳಿಯಬಹುದು.

ವಲ್ಲಭಾಚಾರ್ಯ (ಕ್ರಿ.ಶ. ೧೨) :—ಇವನ ಗ್ರಂಥವು ವೈಶೇಷಿಕಾನುಸಾರಿಯಾದ ನ್ಯಾಯ ಲೀಲಾವತಿ. ಇದು ಬಹಳ ಪ್ರೌಢವಾದ ತರ್ಕ ಗ್ರಂಥ. ಇವನ ಪದಾರ್ಥವಿಭಾಗಕ್ರಮವು ಹೀಗಿದೆ—




ಅನ್ನಂಭಟ್ಟ (ಕ್ರಿ.ಶ. ೧೬೨೩) :— ಇವನು ಆಂಧ್ರದೇಶದವನು. ಇವನ ತರ್ಕ ಸಂಗ್ರಹ ಗ್ರಂಥವು ಬಹಳ ಪ್ರಸಿದ್ಧವಾಗಿದೆ. ಬಾಲಕರ ತಿಳುವಳಿಕೆಗಾಗಿ ಬರೆಯಲ್ಪಟ್ಟ ಗ್ರಂಥ ವಿದು ಎಂದು ಅವನು ಹೇಳುತ್ತಾನೆ.

ನಿಧಾಯ ಹೃದಿ ವಿಶ್ವೇಶಂ ವಿಧಾಯಂ ಗುರುವಂದನಂ ।
ಬಾಲಾನಾಂ ಸುಖಬೋಧಾಯ ಕ್ರಿಯತೇ ತರ್ಕಸಂಗ್ರಹಃ ॥

ಇದು ನ್ಯಾಯವೈಶೇಷಿಕ ಶಾಸ್ತ್ರಗಳೆರಡನ್ನೂ ಸೇರಿಸಿ ರಚಿಸಿರುವ ಗ್ರಂಥ.

ಕಣಾದನ್ಯಾಯಮತಯೋಃ ಬಾಲವ್ಯುತ್ಪತ್ತಿಸಿದ್ಧಯೇ
ಅನ್ನಂಭಟ್ಟೇನ ವಿದುಷಾ ರಚಿತಸ್ತರ್ಕ ಸಂಗ್ರಹಃ ॥ ಉಪಸಂಹಾರ.

ಪದಾರ್ಥ ವಿಭಾಗಕ್ರಮ ಹೀಗಿದೆ



ತರ್ಕ ಸಂಗ್ರಹಕ್ಕೆ ದೀಪಿಕಾ ಎಂಬ ಹೆಸರಿನಿಂದ ಅನ್ನಂಭಟ್ಟನೇ ವ್ಯಾಖ್ಯಾನ ಬರೆದಿದ್ದಾನೆ. ಇವನ ತರ್ಕಸಂಗ್ರಹಕ್ಕೂ, ದೀಪಿಕೆಗೂ ೫೦ಕ್ಕೂ ಮಿಕ್ಕು ವ್ಯಾಖ್ಯಾನಗಳಿವೆ. ಅನೇಕ ದೇಶ ಭಾಷೆಗಳಿಗೂ ಇದು ಪರಿವರ್ತಿತವಾಗಿದೆ. ಸಾಮಾನ್ಯವಾಗಿ ತರ್ಕಶಾಸ್ತ್ರಾಭ್ಯಾಸಿಗಳು ತರ್ಕ ಸಂಗ್ರಹವನ್ನು ವ್ಯಾಖ್ಯಾನ ಸಹಿತವಾಗಿ ಓದಿ ಅನಂತರ ಇತರ ಶಾಸ್ತ್ರಾಭ್ಯಾಸವನ್ನು ಮಾಡುವ ಪರಿಪಾಟಿಯಿದೆ.

ವಿಶ್ವನಾಥನ್ಯಾಯಪಂಚಾನನ (ಕ್ರಿ. ಶ. ೧೬೩೪) :— ಇವನು ಭಾಷಾಪರಿಚ್ಛೇದ (ಕಾರಿಕಾವಲೀ) ಎಂಬ ಕಾರಿಕಾ ರೂಪವಾದ ತರ್ಕ ಗ್ರಂಥವನ್ನೂ ಅದಕ್ಕೆ ವ್ಯಾಖ್ಯಾನವಾಗಿ ಮುಕ್ತಾವಲೀ ಎಂಬ ಗ್ರಂಥವನ್ನೂ ಬರೆದಿರುವನು. ಇದಕ್ಕೂ ಅನೇಕ ವ್ಯಾಖ್ಯಾನಗಳಿವೆ. ಹೆಚ್ಚು ಕಡಿಮೆ ತರ್ಕಸಂಗ್ರಹ ಗ್ರಂಥದ ಕ್ರಮದಲ್ಲಿಯೇ ಈತನು ಗ್ರಂಥ ಬರೆದಿದ್ದಾನೆ. ಮುಕ್ತಾವಲಿಯ ವ್ಯಾಖ್ಯಾನಗಳಲ್ಲಿ ಮಹಾದೇವಭಟ್ಟನ ಮುಕ್ತಾವಲೀ ಪ್ರಕಾಶ ಪ್ರಸಿದ್ಧವಾಗಿದೆ. ಅಪೂರ್ಣವಾದ ಈ ವ್ಯಾಖ್ಯೆಯನ್ನು ದಿನಕರಭಟ್ಟನೆಂಬ ಅವನ ಮಗನು ಪೂರ್ತಿಗೊಳಿಸಿ ಪ್ರಕಾಶಿಸಿದನು. ಹೀಗೆ ಮುಕ್ತಾವಲೀಪ್ರಕಾಶವು ದಿನಕರೀಯವೆಂದೇ ಪ್ರಸಿದ್ಧವಾಯಿತು. ಶಿವಾದಿತ್ಯನ ಸಪ್ತ ಪದಾರ್ಥೀ ಎಂಬ ವೈಶೇಷಿಕ ಪ್ರಕರಣವು ಇಲ್ಲಿ ಉಲ್ಲೇಖಾರ್ಹವಾಗಿದೆ.

ಇವಲ್ಲದೆ ಜಗದೀಶತರ್ಕಾಲಂಕಾರನ ತರ್ಕಾಮೃತ, ಲೌಗಾಕ್ಷಿಭಾಸ್ಕರನ ತರ್ಕಕೌಮುದೀ, ಕಾಂಡಭಟ್ಟನ ಪದಾರ್ಥದೀಪಿಕಾ ಎಂಬ ಪ್ರಕರಣ ಗ್ರಂಥಗಳೂ ಇವೆ.

ತರ್ಕಶಾಸ್ತ್ರದ ಕೆಲಕೆಲವು ಗ್ರಂಥಗಳಿಗೆ ಇಂದಿಗೂ ಸಂಸ್ಕೃತದಲ್ಲಿಯೂ ದೇಶಭಾಷೆಯಲ್ಲಿಯೂ ವ್ಯಾಖ್ಯಾನಗಳು ಆಗುತ್ತಲೇ ಇವೆ. ೧೮ನೇ ಶತಮಾನದ ಕೃಷ್ಣಾವಧೂತರೆಂಬುವರು ತರ್ಕ ನವನೀತ ಎಂಬ ಸ್ವತಂತ್ರಪ್ರಕರಣ ಗ್ರಂಥವನ್ನೂ, ಪದಾರ್ಥಸಾಗರ ಎಂಬ ತರ್ಕಸಂಗ್ರಹ ವ್ಯಾಖ್ಯಾನವನ್ನೂ ಬರೆದಿರುತ್ತಾರೆ.

———

## ೪

# ಧರ್ಮಶಾಸ್ತ್ರ

ಭಾರತೀಯ ಸಂಸ್ಕೃತಿಯ ಮೇಲೆ ವ್ಯಾಪಕವೂ, ಗಾಢವೂ ಆದ ಪರಿಣಾಮವನ್ನು ಬೀರಿದ ಶಾಸ್ತ್ರಗಳಲ್ಲೆಲ್ಲಾ ಧರ್ಮಶಾಸ್ತ್ರಕ್ಕೆ ಪ್ರಥಮಸ್ಥಾನ ಸಲ್ಲುತ್ತದೆ. ಇಂದಿನ ಜಾಗತಿಕ ಸಂಸ್ಕೃತಿಗಳಲ್ಲೆಲ್ಲಾ ಪುರಾತನವೂ, ಶತ ಶತಮಾನಗಳಿಂದಲೂ ಇತರ ರಾಜಕೀಯ ಮತ್ತು ಧಾರ್ಮಿಕ ಆಘಾತಗಳಿಂದ ಅವ್ಯಾಹತವೂ ಆಗಿ ನಮ್ಮ ಸಂಸ್ಕೃತಿಯು ಭದ್ರ ಬುನಾದಿಯ ಮೇಲೆ ನಿಲ್ಲುವಂತಾದುದು ಧರ್ಮಶಾಸ್ತ್ರಗಳಿಂದಲೇ ಎಂದರೆ ಉತ್ಪ್ರೇಕ್ಷೆಯಾಗಲಾರದು.

ಮಾನವ ಜೀವನವು ವಿಕಾಸದತ್ತ ಸಾಗಬೇಕಾಗಿದೆ. ಆಹಾರ, ನಿದ್ರೆ, ರಕ್ಷಣೆ, ಮತ್ತು ಸಂತಾನೋತ್ಪತ್ತಿಯೇ ಜೀವನದ ಪರಮೋದ್ದೇಶಗಳಲ್ಲ. ಇವು ಇತರ ಪ್ರಾಣಿಗಳಿಗೂ ಸಾಮಾನ್ಯ. ವಿಚಾರಮತಿಯಾದ ಮಾನವನು ಇವುಗಳನ್ನು ಕೇವಲ ಜೀವನ ನಿರ್ವಹಣೆಯ ಸಾಮಾನ್ಯ ಉದ್ದೇಶಗಳೆಂದು ಬಗೆದು, ಇಂತಹ ಪ್ರವೃತ್ತಿ ಜೀವನದ ಹಿಂದೆ ಅಡಗಿರುವ ಲೌಕಿಕ ವಿಚಾರಧಾರೆಯನ್ನು ವಿಶ್ಲೇಷಿಸಿ ಅರ್ಥಮಾಡಿಕೊಂಡು ಇದು ನಶ್ವರವಾದುದೆಂದು ಮನಗಂಡನು. ಆದ್ದರಿಂದ ಸಮಾಜ ಜೀವಿಯಾದ ಆತನು ಪ್ರತಿಯೊಬ್ಬನ ವ್ಯಕ್ತಿತ್ವ ವಿಕಾಸದ ಜೊತೆ ಜೊತೆಗೆ ಸಮಷ್ಟಿ ವಿಕಾಸವೂ ಸಿದ್ಧಿಸಬೇಕೆಂದು, ಇದಕ್ಕಾಗಿ ಅರ್ಥ ಮತ್ತು ಅದರಿಂದ ಸಿದ್ಧಿಸುವ ಕಾಮ ಇವುಗಳನ್ನು ನಿಯಂತ್ರಿಸಿ ಪರಮ ಪುರುಷಾರ್ಥವಾದ ಮೋಕ್ಷ ಸಾಧನೆಗಾಗಿ ಸಾಕ್ಷಾತ್ಕರಿಸಿಕೊಂಡ ನಿತ್ಯನೂತನ ವಸ್ತುವೇ ಧರ್ಮ.

'ಧರ್ಮ'ವೆಂಬ ಪದಕ್ಕೆ ಯಾವುದಾದರೂ ಪರ್ಯಾಯಪದವಿದ್ದರೆ ಅದು 'ಧರ್ಮ'ವೆಂಬುದೇ. ಇತರ ಭಾಷೆಗಳಿಗೆ ಅದನ್ನು ಅನುವಾದಿಸುವುದು ಅಪಚಾರವಾಗುವುದೆಷ್ಟೋ ಅಷ್ಟೇ ! ಆದರೆ 'ಧರ್ಮ'ವೆಂದರೇನೆಂಬುದನ್ನು ನಮ್ಮ ಪ್ರಾಚೀನರು ನಾನಾ ರೀತಿಯಲ್ಲಿ ನಿರ್ವಚನ ಮಾಡಿದ್ದಾರೆ. 'ಧೃ' ಧಾತುವಿನಿಂದ ಧಾರಣ ಮತ್ತು ಪೋಷಣಾರ್ಥದಲ್ಲಿ 'ಧರ್ಮ' ಎಂಬ ಪದದ ನಿಷ್ಪತ್ತಿ ಮಾಡಬಹುದು. ಧರ್ಮ ಶಬ್ದವು ಪ್ರಪ್ರಥಮವಾಗಿ ಋಗ್ವೇದದಲ್ಲಿ ಕಂಡು ಬರುತ್ತದೆ. ಅಲ್ಲಿ ಧರ್ಮವೆಂದರೆ ಧಾರ್ಮಿಕವಿಧಿ, ವ್ರತ, ಆಚಾರ, ಎಂಬ ಅರ್ಥದಲ್ಲಿ ಹೆಚ್ಚಾಗಿ ಪ್ರಯೋಗವಾಗಿದ್ದರೂ, ಇತರ ಸಂದರ್ಭಗಳಲ್ಲಿ ಧಾರಕ ; ಪೋಷಕ ಎಂಬ ಅರ್ಥಬರುತ್ತದೆ. ಮತ್ತೆ ಕೆಲವು ಸಂದರ್ಭಗಳಲ್ಲಿ ಧರ್ಮಶಬ್ದಕ್ಕೆ ಮತ್ತಷ್ಟು ವ್ಯಾಪಕವಾದ ಅರ್ಥವು ಕಂಡು ಬರುತ್ತದೆ. ಅಂತಿಮವಾಗಿ ತೈತ್ತಿರೀಯ ಉಪನಿಷತ್ತಿನ 'ಧರ್ಮಂಚರ' ಎಂಬ ಶಿಷ್ಯಾನುಶಾಸನ (೧.೧೧,) ಮನುಸ್ಮೃತಿಯ 'ಭಗವನ್, ಸರ್ವವರ್ಣಾನಾಂ ಯಥಾವದನುಪೂರ್ವಶಃ । ಅಂತರ ಪ್ರಭವಾಣಾಂ

ಚ ಧರ್ಮಾನ್ನೋ ವಕ್ತುಮರ್ಹಸಿ॥ " [೧. ೨. ] ಯಾಜ್ಞವಲ್ಕ್ಯ ಸ್ಮೃತಿಯು ''ಯೋಗೀಶ್ವರಂ ಯಾಜ್ಞವಲ್ಕ್ಯಂ ಸಂಪೂಜ್ಯ ಮುನಯೋऽಬ್ರುವನ್ । ವರ್ಣಾಶ್ರಮೇತರಾಣಾಂ ನೋ ಬ್ರೂಹಿ ಧರ್ಮಾನಶೇಷತಃ॥ [೧.೧.] ಮತ್ತು ಪರಾಶರ ಸ್ಮೃತಿಯು 'ಚಾತುರ್ವರ್ಣ್ಯಸಮಾಚಾರಂ ಕಿಂಚಿತ್ ಸಾಧಾರಣಂ ವದ। ಚತುರ್ಣಾಮಪಿ ವರ್ಣಾನಾಂ ಕರ್ತವ್ಯಂ ಧರ್ಮಕೋವಿದೈಃ॥ ' [೧. ೧೭] ಎಂಬ ಉಕ್ತಿಗಳಿಂದ ಅಂದಿನ ಭಾರತೀಯ ಆರ್ಯಸಮಾಜದ ನಾಲ್ಕು ವರ್ಣದವರೂ ಆಶ್ರಮದವರೂ ಅನುಸರಿಸಬೇಕಾಗಿದ್ದ ಆಚಾರಾದಿಗಳಿಗೆ ಧರ್ಮವೆಂದು ಹೆಸರು ಎಂಬುದು ಸ್ಪಷ್ಟವಾಗುತ್ತದೆ.

ಮಹಾಭಾರತ ಅನುಶಾಸನ ಪರ್ವದಲ್ಲಿ ಧರ್ಮದ ವಿವರಣೆಯನ್ನು ಕುರಿತು ಇನ್ನೂ ಕೆಲವು ಉದಾಹರಣೆಗಳನ್ನು ನಾವು ಈ ಸಂದರ್ಭದಲ್ಲಿ ಪರಿಶೀಲಿಸುವುದು ಉಚಿತವಾಗಿದೆ. ಜೈಮಿನಿ ಮತದಲ್ಲಿ ' ಚೋದನಾಲಕ್ಷಣೋऽರ್ಥೋಧರ್ಮಃ '। [ಪೂ. ಮೀ. ಸೂ. ೧.೧.೨.]. ವೈಶೇಷಿಕ ಸೂತ್ರವು " ಅಥಾತೋ ಧರ್ಮಂ ವ್ಯಾಖ್ಯಾಸ್ಯಾಮಃ "। ಯತೋऽಭ್ಯುದಯನಿಃಶ್ರೇಯಸಸಿದ್ಧಿಃ ಸ ಧರ್ಮಃ " । ಎಂದು ಧರ್ಮಕ್ಕೆ ವ್ಯಾಖ್ಯಾನವನ್ನೀಯುತ್ತದೆ. ಇದೇ ರೀತಿ " ಧ್ರಿಯಂತೇ ಅನೇನೇತಿ ಧರ್ಮಃ" "ಧರ್ಮೇ ಸರ್ವಂ ಪ್ರತಿಷ್ಠಿತಂ'', "ಧಾರಣಾತ್ ಧರ್ಮಮಿತ್ಯಾಹುಃ" " ಧರ್ಮೋಧಾರಯತೇ ಪ್ರಜಾಃ " ಮುಂತಾದ ಉಕ್ತಿಗಳೂ ಸಹ ಧರ್ಮದ ವ್ಯಾಪ್ತಿಯನ್ನೂ ಆದರ ಪ್ರಯೋಜನವನ್ನೂ ವಿವರಿಸುತ್ತವೆ.

### ಧರ್ಮದ ಬಗೆಗಳು

ಧರ್ಮಾ ಬಹುವಿಧಾ ಲೋಕೇ ಶ್ರುತಿಭೇದಮುಖೋದ್ಭವಾಃ ।
ದೇಶಧರ್ಮಾಶ್ಚ ದೃಶ್ಯಂತೇ ಕುಲಧರ್ಮಾಸ್ತಥೈವ ಚ ॥
ಜಾತಿಧರ್ಮಾ ವಯೋಧರ್ಮಾ ಗುಣಧರ್ಮಾಶ್ಚ ಶೋಭನೇ ।
ಶರೀರ-ಕಾಲ ಧರ್ಮಾಶ್ಚ ಆಪದ್ಧರ್ಮಾಸ್ತಥೈವ ಚ ॥
ಏತದ್ಧರ್ಮಸ್ಯ ನಾನಾತ್ವಂ ಕ್ರಿಯತೇ ಲೋಕವಾಸಿಭಿಃ।
[ಪರಾಶರ ಧರ್ಮಸಂಹಿತಾ-ಮಾಧವೀಯವೃತ್ತಿ ೧.೧೭]

ಧರ್ಮವು ದೇಶಧರ್ಮ, ಕುಲಧರ್ಮ, ಜಾತಿಧರ್ಮ, ವಯೋ (ಆಶ್ರಮ) ಧರ್ಮ, ಗುಣಧರ್ಮ ಶರೀರ-ಕಾಲಧರ್ಮ, ಮತ್ತು ಆಪದ್ಧರ್ಮ ಎಂಬುದಾಗಿ ನಾನಾ ಪ್ರಕಾರವಾಗಿದೆ. ಮನುಸ್ಮೃತಿಯ ಟೀಕಾಕಾರನಾದ ಗೋವಿಂದರಾಜನೂ ಮತ್ತು ಗೌತಮಧರ್ಮ ಸೂತ್ರದ ಟೀಕಾಕಾರ ಹರದತ್ತನೂ ಸ್ಮೃತಿಕಾರರೂ ಧರ್ಮವನ್ನು ವರ್ಣಧರ್ಮ, ಆಶ್ರಮಧರ್ಮ, ವರ್ಣಾಶ್ರಮಧರ್ಮ, ನೈಮಿತ್ತಿಕ ಧರ್ಮ ಮತ್ತು ಗುಣಧರ್ಮವೆಂದು ಐದು ಬಗೆಯಾಗಿ ಪರಿಗಣಿಸುವರೆಂದು ಹೇಳುತ್ತಾರೆ.

ಸಾಮಾನ್ಯವಾಗಿ ಎಲ್ಲಾ ಧರ್ಮಶಾಸ್ತ್ರಕೃತಿಗಳಲ್ಲೂ ಸಹ ಗ್ರಂಥಾರಂಭದಲ್ಲಿಯೇ ಧರ್ಮದ ಆಕರಗಳು ಅಥವಾ ಪ್ರಮಾಣ (ಸ್ಥಾನ)ಗಳ ಪ್ರಸ್ತಾವ ಬರುತ್ತದೆ. ಈ ಮುಂದಿನ ಕೆಲವು ಉಲ್ಲೇಖಗಳನ್ನು ಗಮನಿಸೋಣ :

" ವೇದೋ ಧರ್ಮ ಮೂಲಂ ।
ತದ್ವಿದಾಂ ಚ ಸ್ಮೃತಿಶೀಲೇ'' ।     ಗೌ. ಧ. ಸೂ. ೧ ೧-೨.

* * * *

ಧರ್ಮಜ್ಞಸಮಯಃ ಪ್ರಮಾಣಂ ।
ವೇದಾಶ್ಚ ।     ಆ.ಧ.ಸೂ. ೧ ೧.೧. ೨-೩.

* * * *

ಉಪದಿಷ್ಟೋ ಧರ್ಮಃ ಪ್ರತಿವೇದಂ ।     ಬೋ.ಧ.ಸೂ. ೧ ೧. ೧.
ಸ್ಮಾರ್ತೋ ದ್ವಿತೀಯಃ । ತೃತೀಯಂ ಶಿಷ್ಟಾಗಮಃ'' ।     ೧ ೧.೩-೪.
ಶ್ರುತಿಸ್ಮೃತಿವಿಹಿತೋ ಧರ್ಮಃ ।
ತದಲಾಭೇ ಶಿಷ್ಟಾಚಾರಃ ಪ್ರಮಾಣಂ ।     ವ.ಧ.ಸೂ. ೧ ೪-೫

* * * *

ಅಥಾತೋ ಧರ್ಮಂ ವ್ಯಾಖ್ಯಾಸ್ಯಾಮಃ ।
ಶ್ರುತಿಪ್ರಮಾಣಕೋ ಧರ್ಮಃ ॥     ಹಾ.ಧ.ಸೂ. (ಮ. ೨ ೧. ಟೀಕೆ).

* * * *

ವೇದೋಽಖಿಲೋ ಧರ್ಮಮೂಲಂ । ಸ್ಮೃತಿಶೀಲೇ ಚ ತದ್ವಿದಾಂ ।
ಆಚಾರಶ್ಚೈವ ಸಾಧೂನಾಮಾತ್ಮನಸ್ತುಷ್ಟಿರೇವ ಚ ॥     ಮ. ೨ ೬
ವೇದಃ ಸ್ಮೃತಿಃ ಸದಾಚಾರಃ ಸ್ವಸ್ಯ ಚ ಪ್ರಿಯಮಾತ್ಮನಃ ।
ಏತಚ್ಚತುರ್ವಿಧಂ ಪ್ರಾಹುಃ ಸಾಕ್ಷಾದ್ಧರ್ಮಸ್ಯ ಲಕ್ಷಣಂ ॥     ಮ. ೨ ೧೨

* * * *

ಶ್ರುತಿಃ ಸ್ಮೃತಿಃ ಸದಾಚಾರಃ ಸ್ವಸ್ಯ ಚ ಪ್ರಿಯಮಾತ್ಮನಃ ।
ಸಮ್ಯಕ್ ಸಂಕಲ್ಪಜಃ ಕಾಮೋ ಧರ್ಮಮೂಲಮಿದಂ ಸ್ಮೃತಂ ॥     ಯಾ. ೧ ೭

ಮೇಲಿನ ಉದಾಹರಣೆಗಳಿಂದ ಧರ್ಮನಿರ್ಣಾಯಕ ಪ್ರಮಾಣವು ವೇದವೆಂಬುದು ಸುಸ್ಪಷ್ಟ ಅದು ಅಪೌರುಷೇಯ ವಾಣಿ. ಯೋಗಸ್ಥರಾದ ಮಹರ್ಷಿಗಳ ಶುದ್ಧ ಚೈತನ್ಯದ ದಿವ್ಯಸ್ಫೂರ್ತಿಯಿಂದ ಹೊಳೆದ ಸತ್ಯವೇ ವೇದ. ಮಹರ್ಷಿಗಳು ಸಾಕ್ಷಾತ್ಕೃತಧರ್ಮರು.[ ಸಾಕ್ಷಾತ್ ಕೃತಧರ್ಮಾಣೋ ಋಷಯೋ ಬಭೂವುಃ–ಯಾಸ್ಕಾಚಾರ್ಯ]. ಆದ್ದರಿಂದ ವೇದವೇ ಧರ್ಮದ ಮೂಲಪ್ರಮಾಣ.

ಆದರೆ ಕಾಲ ಕಳೆದಂತೆಲ್ಲಾ ವೈದಿಕ ಸಂಹಿತೆ–ಬ್ರಾಹ್ಮಣ–ಉಪನಿಷತ್ತುಗಳ ಭಾಷೆ ಲೌಕಿಕ ಸಂಸ್ಕೃತಜ್ಞರಿಗೂ ಇತರರಿಗೂ ದುರ್ಬೋಧವಾಗಿ ವೇದೋಕ್ತಧರ್ಮಸ್ವರೂಪವು ಅಪಗಮಾತೀತವಾಗಿರಬಹುದು. ಆಗ ವೇದಸಮ್ಮತ ಧರ್ಮಮಾರ್ಗಬೋಧಕರ ಅವಶ್ಯಕತೆಯುಂಟಾಗಿ ಧರ್ಮ ಸೂತ್ರಗಳ ಹಾಗೂ ಸ್ಮೃತಿಗಳಉಗಮಕ್ಕೆ ಕಾರಣವಾಯಿತು. "ತಥೈವಧರ್ಮಾನ್ ಸ್ಮರತಿಮನುಃ ಕಲ್ಪಾಂತರೇsನ್ತರೇ [ಪ. ಸ್ಮೃ. ೧. ೨೧] ಮತ್ತು "ಶ್ರುತಿಂ ಪಶ್ಯಂತಿ ಮುನಯಃ ಸ್ಮರಂತಿ ಚ ಯಥಾಸ್ಮೃತಿ" [ಮ. ೨. ೧೫ ಪ್ರಕ್ಷಿಪ್ತ] ಎಂಬಂತೆ ಶ್ರುತಿಗಳ ಸತತಾಭ್ಯಾಸ ಮತ್ತು ಅನುಷ್ಠಾನಗಳಲ್ಲಿ ಬಲ್ಲಿದರಾದ ಋಷಿಗಳು ಶ್ರುತ್ಯುಕ್ತ ಧರ್ಮವನ್ನು ತಮ್ಮ ಸ್ಮೃತಿಪಥಕ್ಕೆ ತಂದುಕೊಂಡು ಧರ್ಮಶಾಸ್ತ್ರವನ್ನು ಉಪದೇಶಿಸುತ್ತಾರೆ. ಅವರ ಸ್ಮೃತಿಗಳು, ಶೀಲ, ಸಮಯ (ಪೌರುಷೇಯೀವ್ಯವಸ್ಥಾ), ಸತ್ಪುರುಷರ ಆಚಾರ ಮತ್ತು ಸಮ್ಯಕ್ ಸಂಕಲ್ಪದಿಂದ ಕೂಡಿರುವ ಸದಾಚಾರ ನಿರತರ ಆತ್ಮಕ್ಕೆ ತೃಪ್ತಿಯಾಗುವ ನಡುವಳಿಕೆ ಇವುಗಳೆಲ್ಲವನ್ನೂ ಸಹಧರ್ಮ ಪ್ರಮಾಣಗಳೆಂದು ಸ್ವೀಕರಿಸಲಾಗಿದೆ.

## ಧರ್ಮಶಾಸ್ತ್ರ ಸಾಹಿತ್ಯದ ಉಗಮ ಮತ್ತು ವಿಕಾಸ

ಇಂದು ಉಪಲಬ್ಧವಾಗಿರುವ ಧರ್ಮಶಾಸ್ತ್ರಕೃತಿಗಳು ಸಾವಿರಾರಿವೆ. ಕನಿಷ್ಠ ಪಕ್ಷ ಸುಮಾರು ಇಪ್ಪತ್ತೈದು ಶತಮಾನಗಳಿಂದಲೂ ನಮ್ಮೀ ಭಾರತದಲ್ಲಿ ಧರ್ಮಶಾಸ್ತ್ರ ಗ್ರಂಥಸೃಷ್ಟಿ ಅವ್ಯಾಹತವಾಗಿ ನಡೆದು ಬಂದಿದೆ, ಪ್ರಾಕೃತಿಕ, ರಾಜಕೀಯ ಹಾಗೂ ಧಾರ್ಮಿಕ ಉತ್ಪಾತಗಳು ಧಾಳಿಗಳು ಮುಂತಾದವುಗಳ ಮಧ್ಯದಲ್ಲೂ, ಲೇಖನ ಕಲೆ, ಸಾಮಗ್ರಿ, ಲಿಖಿತಕೃತಿಗಳ ಸಂರಕ್ಷಣೆ ಇವುಗಳ ಅಭಾವವಿದ್ದಾಗ್ಯೂ ಸಹ ಆಸಕ್ತ ವ್ಯಕ್ತಿಗಳಲ್ಲಿ ಖಾಸಗೀ ಗ್ರಂಥ ಸಂಗ್ರಹಗಳಲ್ಲಿ ಮಠಗಳು, ದೇವಸ್ಥಾನಗಳು, ದೇಶೀಯ ರಾಜಾಸ್ಥಾನಗಳಲ್ಲಿ ಈಗಲೂ ಉಪಲಬ್ಧವಿರುವ ಕೃತಿಗಳ ವಿವರಣಾತ್ಮಕ ಸೂಚಿಯೊಂದನ್ನು ತಯಾರಿಸುವುದೂ ಸಹ ನಿಷ್ಠಾವಂತ ವಿದ್ವಾಂಸರೊಬ್ಬರ ಜೀವಮಾನದಲ್ಲಿ ಅಸಾಧ್ಯವೆನಿಸೀತು.

ರಚನಾಶೈಲಿಯನ್ನು ಆಧರಿಸಿ ಧರ್ಮಶಾಸ್ತ್ರ ಗ್ರಂಥಗಳನ್ನು (೧) ಸೂತ್ರಗಳು, (2) ಸ್ಮೃತಿಗಳು, (೩) ಟೀಕೆ ಮತ್ತು ನಿಬಂಧಗಳೆಂದು ಮೂರು ಮುಖ್ಯ ವಿಭಾಗಗಳನ್ನಾಗಿ ವಿಂಗಡಿಸಿಕೊಳ್ಳ ಬಹುದು. ರಚನೆಯಾದ ಕಾಲದ ದೃಷ್ಟಿಯಿಂದಲೂ ಸಹ ಈ ಮೇಲಿನ ಮೂರು ವಿಭಾಗವು

ಸಮರ್ಥನೀಯವಾಗಿದೆ. ಸಂಸ್ಕೃತ ಸಾಹಿತ್ಯ ಚರಿತ್ರೆಯನ್ನು ಅವಲೋಕನ ಮಾಡಿದಾಗ ಸೂತ್ರಶೈಲಿಯ ಸಾಹಿತ್ಯವು ಕ್ರಿ. ಪೂ. ಐದಾರು ಶತಮಾನಗಳ ಹಿಂದೆ ಪ್ರಾರಂಭವಾಗಿ ಕ್ರಿಸ್ತಶಕೆಯ ಪ್ರಾರಂಭದ ವೇಳೆಗೆ ಮುಕ್ತಾಯವಾಗುತ್ತದೆ. ಅಲ್ಲಿಂದ ಮುಂದೆ ಅನುಷ್ಟುಭ್ ಇತ್ಯಾದಿ ಲೌಕಿಕ ಛಂಧಸ್ಸುಗಳಲ್ಲಿ ಕಾವ್ಯ, ನಾಟಕ, ಗದ್ಯ-ಪದ್ಯಮಿಶ್ರಿತಚಂಪೂ ಮತ್ತು ಗದ್ಯ ಕೃತಿಗಳ ಆವಿರ್ಭಾವವಾಗುತ್ತದೆ. ಇತರ ಶಾಸ್ತ್ರಗಳಲ್ಲಿ ಹೇಗೆ ಟೀಕಾ ಸಾಹಿತ್ಯವು ಕೃತಿ ರಚನೆಯ ಅನಂತರದಲ್ಲಿ ಬರುತ್ತದೋ ಹಾಗೆ ಇಲ್ಲಿಯೂ ಸಹ ಕ್ರಿ. ಶಕೆಯ ಮೊದಲು ಐದಾರು ಶತಮಾನಗಳ ಕಾಲ ಸ್ಮೃತಿ ಗ್ರಂಥಗಳು ; ಅದಾದ ಮೇಲೆ ಸುಮಾರು ಆರು–ಏಳನೆಯ ಶತಮಾನದಿಂದ ಇತ್ತೀಚಿನವರೆಗೂ ಸೂತ್ರಗಳು ಮತ್ತು ಸ್ಮೃತಿಗಳ ಮೇಲೆ ಟೀಕೆಗಳು ಧರ್ಮಶಾಸ್ತ್ರ ಸಂಗ್ರಹಗಳು, ಕೈಪಿಡಿಗಳು, ಕೆಲವು ವೇಳೆ ಯಾವುದೋ ಒಂದು ವಿಷಯವನ್ನು ಕುರಿತ ಸವಿವರ ವಿವೇಚನೆ, ಇವುಗಳಿಂದ ಕೂಡಿದ ನಿಬಂಧ ಗ್ರಂಥಗಳು ರಚಿತವಾಗಿವೆ. ಆದರೆ ಈ ರೀತಿಯ ಕೇವಲ ಶೈಲಿ ಅಥವಾ ರಚನಾಕಾಲಗಳ ಆಧಾರದ ಮೇಲೆ ಯಾವ ಒಂದು ನಿರ್ಣಯಕ್ಕೆ ಬಂದರೂ ಅವ್ಯಾಪ್ತಿ–ಅತಿವ್ಯಾಪ್ತಿ ದೋಷಕ್ಕೆ ಅವಕಾಶವಿರುವುದರಿಂದ ಮೇಲೆ ಸೂಚಿಸಿರುವ ವಿಂಗಡಣೆ ಕೇವಲ ದಿಗ್ದರ್ಶಕ.

ಧರ್ಮಶಾಸ್ತ್ರ ಗ್ರಂಥಗಳು ಮೊದ ಮೊದಲು ಧರ್ಮಪ್ರಚಾರಯೋಗ್ಯ ದೇಶ (ಪ್ರದೇಶ)ವನ್ನು ತಿಳಿಸುತ್ತವೆ. ಮನುಸ್ಮೃತಿಯು [೨೧.೭, ೧೯.೨೧.೨೨] ಸರಸ್ವತೀ, ದೃಷದ್ವತೀ ಈ ಎರಡು ಜೀವನದಿಗಳ ಮಧ್ಯದಲ್ಲಿದ್ದ ಪ್ರದೇಶಕ್ಕೆ ಬ್ರಹ್ಮಾವರ್ತವೆಂದೂ, ಕುರುಕ್ಷೇತ್ರ–ಮತ್ಸ್ಯ-ಪಾಂಚಾಲ-ಶೂರಸೇನಗಳು ಸೇರಿದ್ದ ಭಾಗಕ್ಕೆ ಬ್ರಹ್ಮರ್ಷಿದೇಶವೆಂದೂ, ಹಿಮವದ್ ವಿಂಧ್ಯಗಳ ಮಧ್ಯೆ ಕುರುಕ್ಷೇತ್ರ (ವಿನಶನ) ಕ್ಕೆ ಪೂರ್ವ ಮತ್ತು ಪ್ರಯಾಗಕ್ಕೆ ಪಶ್ಚಿಮಕ್ಕಿದ್ದ ಪ್ರಾಂತ್ಯಕ್ಕೆ ಮಧ್ಯದೇಶವೆಂದೂ, ಪೂರ್ವಪಶ್ಚಿಮ ಸಮುದ್ರಗಳ ಹಾಗೂ ಹಿಮವದ್ ವಿಂಧ್ಯ ಗಿರಿಗಳ ಮಧ್ಯೆ ಇದ್ದ ವಿಶಾಲ ಭಾಗಕ್ಕೆ [ಮೇಲಿನವುಗಳೂ ಸೇರಿಕೊಂಡು] ಆರ್ಯಾವರ್ತವೆಂದೂ, ಇವುಗಳಲ್ಲಿ ಪೂರ್ವ ಪೂರ್ವವೂ ಉತ್ತರೋತ್ತರ ದೇಶಕ್ಕಿಂತ ಧರ್ಮಾನುಷ್ಠಾನಕ್ಕೆ ಪ್ರಶಸ್ತವೆಂದೂ, ತಿಳಿಸುತ್ತದೆ. [ಬ್ರಹ್ಮಾವರ್ತಃ ಪರೋದೇಶಃ ಋಷಿ ದೇಶಸ್ತ್ವನಂತರಃ] ಮಧ್ಯದೇಶಸ್ತತೋ ನ್ಯೂನ ಆರ್ಯಾವರ್ತಸ್ತತಃ ಪರಃ ॥ ಸುಮಂತು—ದೇವಣಭಟ್ಟನ ಸ್ಮೃತಿ ಚಂದ್ರಿಕೆಯಿಂದ ಉದ್ಧೃತ. ಘಾರ್‌ಪುರೆ ಸಂ. ೧೯೧೮. ಬೊಂಬಾಯಿ ಪು. ೭] ಮುಖ್ಯವಾಗಿ ಕೃಷ್ಣಮೃಗ ಚಲಿಸುವನಾಡು ಯಾಜ್ಞಿಕ [ಯಜ್ಞಾರ್ಹ–ಯಜ್ಞೀಕರಿಸುವ] ನಾಡು. ಅಲ್ಲಿ ಪ್ರಚಲಿತವಾಗಿದ್ದ ಧರ್ಮವನ್ನು ತಿಳಿದುಕೊಳ್ಳಿ "ಯಸ್ಮಿನ್ ದೇಶೇ ಮೃಗಃ ಕೃಷ್ಣಸ್ತಸ್ಮಿನ್ ಧರ್ಮಾನ್ನಿಬೋಧತ" (ಯಾ. ಸ್ಮೃ. ೧೨.) ಎಂದು ಯಾಜ್ಞವಲ್ಕ್ಯನು 'ಮಿಥಿಲಾಸ್ಥ'ನಾಗಿ ಘೋಷಿಸುತ್ತಾನೆ, ಪುರಾಣಗಳಲ್ಲಿ "ಗಂಗೆ ಹರಿಯುವ ನಾಡು ತಪೋವನ, ಸಿದ್ಧಕ್ಷೇತ್ರ, ಇದು ಧಾರ್ಮಿಕದ್ವಿಜರಿಗೆ ಆವಾಸಾರ್ಹವೆಂದೂ ಈಗಿನ ಗುಜರಾತ್ (ಸುರಾಷ್ಟ್ರ), ನೈರುತ್ಯ ರಾಜಾಸ್ಥಾನ (ಆನರ್ತ), ಪಶ್ಚಿಮ ಪಾಕಿಸ್ಥಾನ (ಸಿಂಧು) ಸೌವೀರ, ಪೂರ್ವ–ಪಶ್ಚಿಮ ಬಂಗಾಳ (ಅಂಗ–ವಂಗ), ಒರಿಸ್ಸಾ

(ಕಳಿಂಗ) ಮತ್ತು ದಕ್ಷಿಣಾಪಥ (ಆಂಧ್ರ, ಕರ್ನಾಟಕ, ಮಹಾರಾಷ್ಟ್ರ) ಇವುಗಳು ವರ್ಜ್ಯದೇಶಗಳೆಂದೂ ತಿಳಿದು ಬರುತ್ತದೆ. ಆದರೆ ಆಪಸ್ತಂಭ ಬೋಧಾಯನರಂತಹ ಪುರಾತನ ಧರ್ಮಸೂತ್ರಕಾರರು ದಕ್ಷಿಣಾಪಥನಿವಾಸಿಗಳೆಂದು ವಿಮರ್ಶಕರ ಅಭಿಪ್ರಾಯವಾಗಿದೆ, [ಹಿ. ಧ. ೨. ೨೦–೪೬]. ಪ್ರಸಿದ್ಧ ಭಾಷ್ಯಕಾರರಾದ ವಿಶ್ವರೂಪ (ಸುರೇಶ್ವರಾಚಾರ್ಯ?), ವಿಜ್ಞಾನೇಶ್ವರ, ಮಾಧವಾಚಾರ್ಯ ಮುಂತಾದವರು ದಕ್ಷಿಣಾಪಥದವರು. ದೇವಗಿರಿ ರಾಜನಿಗೆ ಮಂತ್ರಿಯಾಗಿದ್ದ, ಹೇಮಾದ್ರಿ, ದೇವಣ್ಣಭಟ್ಟ, ಸರಸ್ವತಿ ವಿಲಾಸದ ಕರ್ತೃವಾದ ಪ್ರತಾಪರುದ್ರ ಇವರೆಲ್ಲರೂ ದಕ್ಷಿಣದ ಸಂಪ್ರಸಿದ್ಧ ನಿಬಂಧಕಾರರು. ಇದೇ ರೀತಿ ಅಸ್ಸಾಂ (ಕಾಮರೂಪ) ಪ್ರಾಂತ್ಯದಲ್ಲಿ ಪೀತಾಂಬರ ಸಿದ್ಧಾಂತವಾಗೀಶ, ಶಂಭುನಾಥಸಿದ್ಧಾಂತವಾಗೀಶ ಎಂಬುವರು ಪ್ರಸಿದ್ಧ ನಿಬಂಧಕಾರರು. ವಂಗರಾಜ್ಯದಲ್ಲಂತೂ ನಿಬಂಧಕಾರರ ಒಂದು ಪೀಳಿಗೆಯೇ ಸೃಷ್ಟಿಯಾಯಿತು. ಅವರಲ್ಲಿ ಭವದೇವಭಟ್ಟ, ಜೀಮೂತವಾಹನ, ಅನಿರುದ್ಧಭಟ್ಟ, ಹಲಾಯುಧ, ಶೂಲಪಾಣಿ, ಶ್ರೀನಾಥ, ರಘುನಂದನ ಮುಂತಾದವರು ಸುಪ್ರಸಿದ್ಧರು. ಏವಂ ಚ, ಆರ್ಯಾವರ್ತದಿಂದ ಹೊರತಾದ ಪ್ರಾಂತ್ಯಗಳಲ್ಲೂ ಸಹ ಆರ್ಯ ವೈದಿಕ ಧರ್ಮವು ವ್ಯಾಪಿಸಿ ಪ್ರಾಂತೀಯ ಆಚಾರಗಳಿಗೆ ಧಾರ್ಮಿಕ ಮನ್ನಣೆಯು ಕಾಲಾನುಕ್ರಮದಲ್ಲಿ ಲಬ್ಧವಾಗಿದೆ. ಈ ಸಂದರ್ಭದಲ್ಲಿ ಶಂಕರ, ರಾಮಾನುಜ, ಮಧ್ವ, ನಿಂಬಾರ್ಕ ಮತ್ತು ವಲ್ಲಭರಾದಿ ಪಂಚವೇದಾಂತ ಪ್ರವರ್ತಕರು ದಾಕ್ಷಿಣಾತ್ಯರೆಂಬುದನ್ನು ಸ್ಮರಿಸಿಕೊಂಡರೆ ಅಪ್ರಕೃತವಾಗಲಾರದು. ಅವರೆಲ್ಲರೂ ಧರ್ಮ ಸಂಸ್ಥಾಪನಕ್ಕಾಗಿ ತಪಸ್ಸುಗೈದ ಮಹಾಮಹಿಮರು.

ಹೀಗೆ ಕಾಲಾನುಕ್ರಮದಲ್ಲಿ ಭಾರತದ ಎಲ್ಲಾ ಭಾಗಗಳಲ್ಲೂ ಧರ್ಮಶಾಸ್ತ್ರಕಾರರ ಉದಯವಾಗುತ್ತಾ ಬಂದಿದೆ.

## ಧರ್ಮಶಾಸ್ತ್ರ ಪ್ರಮೇಯಗಳು

ಧರ್ಮಶಾಸ್ತ್ರಗಳಲ್ಲಿ ಸಾಮಾನ್ಯವಾಗಿ ಆಚಾರ. ವ್ಯವಹಾರ ಮತ್ತು ಪ್ರಾಯಶ್ಚಿತ್ತ ಎಂಬ ಮೂರು ಮುಖ್ಯ ವಿಷಯಭೇದಗಳನ್ನು ಕಾಣುತ್ತೇವೆ. ವೇದಗಳಲ್ಲಿ ಬೀಜರೂಪದಲ್ಲಿದ್ದು ಹರಡಿ ಹೋಗಿರುವ ಈ ಅಂಶಗಳು ಧರ್ಮ ಸೂತ್ರಗಳಲ್ಲಿ ಸ್ವಸ್ವರೂಪಿನಲ್ಲಿವೆ ಎನ್ನಬಹುದು ಮನು, ಯಾಜ್ಞವಲ್ಕ್ಯ, ನಾರದ ಮತ್ತು ಪರಾಶರ ಸ್ಮೃತಿಗಳಲ್ಲಿ ಶಾಸ್ತ್ರೀಯವಾದ ವಿಷಯ ವಿಭಾಗವಿದ್ದು ಪ್ರತಿಭಾಗವೂ ಸಹ ಮುಂದಿನ ವ್ಯಾಖ್ಯಾನಕಾರರ ಕೃತಿಗಳಲ್ಲಿ ಪ್ರಕರಣಗಳಾಗಿ ವಿಭಜಿಸಲ್ಪಟ್ಟು ವಿಷಯಗ್ರಹಣ ಸುಲಭಸಾಧ್ಯವಾಗುತ್ತದೆ. ಹೀಗೆ ವೇದಗಳಲ್ಲಿ ಬೀಜರೂಪಿಯಾಗಿರುವ ಧರ್ಮಶಾಸ್ತ್ರ ಪ್ರಮೇಯಂಗಳು ಸೂತ್ರಗಳಲ್ಲಿ ಸಸ್ಯಗಳಂತೆ ಉಪಬೃಂಹಿತವಾಗಿ ಈ ಸ್ಮೃತಿಗಳಲ್ಲಿ ಪುಷ್ಪಫಲರೂಪಿ ಮಹಾವೃಕ್ಷವಾಗಿ ದೃಗ್ಗೋಚರವಾಗುತ್ತವೆ.

ಆಚಾರ:— ಆಚಾರವೆಂದರೆ ಶ್ರುತಿ ಸ್ಮೃತಿಪ್ರೋಕ್ತವಾದ ಶಾಸ್ತ್ರೀಯ ನಡವಳಿಕೆ (Ceremonial Conduct), ವ್ಯಕ್ತಿಜೀವನ, ಗೃಹಜೀವನ ಮತ್ತು ಸಾಮಾಜಿಕಜೀವನ

ದಲ್ಲಿ ಅನುಸರಿಸಬೇಕಾದ ನೀತಿ-ನಿಯಮಗಳು ಇದರಲ್ಲಿ ಮಾನವನು ಹುಟ್ಟಿದಂದಿನಿಂದ ಅವಸಾನ ದವರೆಗೆ ಅನುಸರಿಸಬೇಕಾದ ಸಂಸ್ಕಾರಗಳು, ಆಯಾಸಂಸ್ಕಾರಾನಂತರ ಅವಧಿಯಲ್ಲಿ ವ್ಯಕ್ತಿ ಯೊಬ್ಬ ನಡೆದುಕೊಳ್ಳಬೇಕಾದ ನಿಯಮಗಳು ವಿವರಿಸಲ್ಪಟ್ಟಿವೆ.

ಆಚಾರಃ ಪರಮೋ ಧರ್ಮಃ ಶ್ರುತ್ಯುಕ್ತಃ ಸ್ಮಾರ್ತ ಏವ ಚ । ಮನು.೧, ೧೦೮(a)

ಆಚಾರಃ ಪರಮೋ ಧರ್ಮಃ ಸರ್ವೇಷಾಮಿತಿ ನಿಶ್ಚಯಃ ॥ ವಸಿಷ್ಠ ೬, ೧.

ಚತುರ್ಣಾಮಪಿ ವರ್ಣಾನಾಮಾಚಾರೋ ಧರ್ಮಪಾಲಕಃ ॥ ಪರಾಶರ. ೧.೩೭.(a)

ಆಚಾರಹೀನನಾದವನು ಷಡಂಗಸಮೇತವಾದ ವೇದವನ್ನು ಓದಿದರೂ ಫಲವಿಲ್ಲ, ಆಚಾರಯುಕ್ತನಾಗಿದ್ದರೆ ಮಾತ್ರ ಸಂಪೂರ್ಣಫಲ. [ಮನು. ೧.೧೦೮ ಮತ್ತು ವಸಿಷ್ಠ ೬.೨.(ಎ).] ಎಲ್ಲ ತಪಸ್ಸಿಗೂ ಆಚಾರವೇ ಆಧಾರ. ಸದಾಚಾರವೇ ಧರ್ಮದ ಮೂಲ. ಆಚಾರದಿಂದ ಆಯುಷ್ಯ. ಇಷ್ಟಾರ್ಥಸಿದ್ಧಿ ಮತ್ತು ಅಕ್ಷಯವಾದ ಐಶ್ವರ್ಯಗಳು ಲಭಿಸುತ್ತವೆ. ಅದು ಅಶುಭವನ್ನು ನಾಶ ಪಡಿಸುತ್ತದೆ [ಮನು-೪-೧೫೫-೫೭ ; ವಸಿಷ್ಠ ೬.೬]. ದುರಾಚಾರಿಯು ಲೋಕದಲ್ಲಿ ನಿಂದಿತ ನಾಗುತ್ತಾನೆ ; ದುಃಖಭಾಗಿಯಾಗಿ, ಸತತವ್ಯಾಧಿಗ್ರಸ್ತನಾಗಿ ಅಲ್ಪಾಯುವಾಗುತ್ತಾನೆ. [ಮನು ೪. ೧೫೭] "ನಾವೇನೋ ಧರ್ಮ ಮಾರ್ಗವನ್ನು ಅನುಸರಿಸುತ್ತೇವೆ. ಆದರೆ ಅದರ ಫಲವೇನು ? ದುಃಖ, ಬಡತನ ಅಷ್ಟೆ ? ಅಲ್ಲಿ ನೋಡಿ ಅವರು ಕಳ್ಳರು, ಸುಳ್ಳರು, ಮೋಸಗಾರರು, ಸುಳ್ಳೇ ಅವರ ಸಂಪತ್ತು. ಪ್ರತಿದಿನ ಮಾಡುವುದು ಹಿಂಸೆ. ಆದರೆ ಅವರ ಸುಖವೆಷ್ಟು ? ಮಜಾ ವೆಷ್ಟು ? ಅವರಿಗೆ ಏನೂ ಕೇಡೇ ಇಲ್ಲ" ಎಂದು ಕೇಳುವ ಜನರಿಗೆ ಮನುವೇ—

ನಾಧರ್ಮಶ್ಚರಿತೋ ಲೋಕೇ ಸದ್ಯಃ ಫಲತಿ ಗೌರಿವ ।
ಶನೈರಾವರ್ತಮಾನಸ್ತು ಕರ್ತುರ್ಮೂಲಾನಿ ಕೃಂತತಿ ॥
ಯದಿ ನಾತ್ಮನಿ ಪುತ್ರೇಷು ನ ಚೇತ್ಪೌತ್ರೇಷು ನಪ್ತೃಷು ।
ನ ತ್ವೇವ ತು ಕೃತೋ ಧರ್ಮಃ ಕರ್ತುರ್ಭವತಿ ನಿಷ್ಫಲಃ ॥
ಅಧರ್ಮೇಣೈಧತೇ ತಾವತ್ತತೋ ಭದ್ರಾಣಿ ಪಶ್ಯತಿ ।
ತತಃ ಸಪತ್ನಾನ್ ಜಯತಿ ಸಮೂಲಸ್ತು ವಿನಶ್ಯತಿ ॥ [೪. ೧೭೭-೪]

ಎಂದು ಉತ್ತರಿಸಿದ್ದಾನೆ.

ಸದಾಚಾರಿಯು ಒಂದು ಕಾಲಕ್ಕೆ ಸರ್ವಲಕ್ಷಣ ಸಂಪನ್ನನಲ್ಲದಿದ್ದರೂ ಸಹ ಶ್ರದ್ಧೆಯಿಂದ ಅನಸೂಯನಾಗಿ ವರ್ತಿಸಿದರೆ ಅವನು ಒಂದು ನೂರು ವರ್ಷ ಜೀವಿಸಿರುವನು. ತನ್ನ ಕೈಯಲ್ಲಾ ಗದ ಕರ್ಮಕ್ಕೆ ಕೈಹಚ್ಚದೆ ಆಗುವ ಕೆಲಸ (ಸ್ವಧರ್ಮವನ್ನು) ಮಾಡಬೇಕು. ೪. ೧೫೮.೧೫೯.

"ಸರ್ವಂ ಪರವಶಂ ದುಃಖಂ ಸರ್ವಮಾತ್ಮವಶಂ ಸುಖಂ". ಆದ್ದರಿಂದ ಇದನ್ನು ತಿಳಿದುವರ್ತಿಸಿದರೆ ಸುಖದುಃಖಗಳು ಅವನಲು ಬದಲಾಗುವುದಿಲ್ಲ.

ಆಚಾರ ಕಾಂಡದಲ್ಲಿ ಹೇಳಿರುವ ಪ್ರಮುಖ ವಿಷಯಗಳು :—ವರ್ಣಧರ್ಮ, ಆಶ್ರಮಧರ್ಮ, ಹಾಗೂ ಇವುಗಳಿಗೆ ಅನ್ವಯವಾಗುವ ಸಂಸ್ಕಾರಗಳು.

ವರ್ಣವ್ಯವಸ್ಥೆ :—ಎಲ್ಲ ಧರ್ಮಶಾಸ್ತ್ರಗ್ರಂಥಗಳಲ್ಲೂ ಸಹ ನಾಲ್ಕು ವರ್ಣಗಳ ಪ್ರಸ್ತಾವ ಬರುತ್ತದೆ. "ಚತ್ವಾರೊ ವರ್ಣಾಃ ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರಾಃ", ಆದರೆ ಋಗ್ವೇದದಲ್ಲಿ "ಬ್ರಾಹ್ಮಣೋಽಸ್ಯ ಮುಖಮಾಸೀತ್, ಬಾಹೂ ರಾಜನ್ಯ ಕೃತಃ । ಊರೂ ತದಸ್ಯ ಯದ್ವೈಶ್ಯಃ ಪದ್ಭ್ಯಾಂ ಶೂದ್ರೋ ಅಜಾಯಂತ" [೧. ೯೦. ೧೨] ಇಲ್ಲಿ ವರ್ಣಪದ ಪ್ರಯೋಗವಿಲ್ಲ. ವಿರಾಟ್ ಪುರುಷನ ನಾಲ್ಕು ಅಂಗಗಳಿಗೆ ಈ ನಾಲ್ಕನ್ನು 'ಆರೋಪ' ಮಾಡಿದೆ. 'ಪದ್‌ಭ್ಯಾಂ ಶೂದ್ರೋ ಅಜಾಯತ' ಎಂಬಲ್ಲಿ 'ಜನ್ಮ' ಜಾತಿ ವಾಚಕ ಧಾತುವಿದೆ. ಮೂಲತಃ ಆರ್ಯರೆಲ್ಲರೂ 'ಒಂದೇ' ಆಗಿದ್ದರು. ಈ ಅಭಿಪ್ರಾಯವನ್ನು ಮಹಾಭಾರತ ವನಪರ್ವವು 'ನ ವಿಶೇಷೋಽಸ್ತಿ ವರ್ಣಾನಾಂ ಸರ್ವಂ ಬ್ರಾಹ್ಮಮಿದಂ ಜಗತ್ । ಬ್ರಹ್ಮಣಾಪೂರ್ವಸೃಷ್ಟಂ ಹಿ ಕರ್ಮಭಿಃ ವರ್ಣತಾಂ ಗತಃ' ॥ ಎಂದು ಸಮರ್ಥಿಸುತ್ತದೆ. ಅನೇಕ ಗ್ರಂಥಗಳಲ್ಲಿ ಆರ್ಯರು ತ್ರಿವರ್ಣಿಕರು ಎಂಬ ಮಾತು ಬರುತ್ತದೆ. ಆರ್ಯರ ಮತ್ತೊಂದು ಶಾಖೆಯಾದ ಪುರಾತನ ಇರಾನಿನ ಜನರಲ್ಲಿ ನಾಲ್ಕುವಿಧ ವಿಂಗಡಣೆಯು ಕಂಡು ಬರುತ್ತದೆ. ಆದರೆ ಬ್ರಾಹ್ಮಣ ಮತ್ತು 'ಕ್ಷತ್ರಿಯ' ಎಂಬ ಪದಗಳು ವೃತ್ತಿವಾಚಕಗಳು. ಬ್ರಹ್ಮನ್ ಮತ್ತು ಕ್ಷತ್ರಗಳ ಲಕ್ಷಣದಲ್ಲಿ ಸೇರಿದ ಎಲ್ಲರನ್ನೂ ಬೇರ್ಪಡಿಸಿದ ಮೇಲೆ ಉಳಿದ ಆರ್ಯರ ನಾಮಧೇಯ 'ವಿಶ್' ವೇದದಲ್ಲಿ, ರಾಜ 'ವಿಶ್‌ಪತಿ'. ಮಹಾಭಾರತದಲ್ಲಿ ರಾಜನನ್ನು 'ವಿಶಾಂಪತೇ' ಎಂಬುದಾಗಿ ಹಲವಾರು ಸಾರಿ ನಿರ್ದೇಶಿಸಲಾಗಿದೆ. ಆದ್ದರಿಂದ ಆರ್ಯರು ಬ್ರಾಹ್ಮಣ, ಕ್ಷತ್ರಿಯ ಮತ್ತು 'ವೈಶ್ಯ' ರಾಗಿ ವರ್ಗೀಕೃತವಾಗಿದ್ದರು. ವಸ್ತುತಃ ನಾಲ್ಕನೆಯ 'ಶೂದ್ರ' ಎಂಬುದು ಮೂಲ ಆರ್ಯ ಜನಾಂಗಕ್ಕೆ ಹೊರಗಿದ್ದವರ ಹೆಸರು [ಯು.ಭಾ.ಸಂ ೨–೨೪೯].

ಮೇಲಿನ ಮಹಾಭಾರತದ ಉಕ್ತಿ ಮತ್ತು 'ಚಾತುರ್ವರ್ಣ್ಯಂಮಯಾ ಸೃಷ್ಟಂ ಗುಣ ಕರ್ಮವಿಭಾಗಶಃ' ಎಂಬ ಗೀತಾವಚನವು ವರ್ಣವ್ಯವಸ್ಥೆಯು ಮೊದಲು ಯಾವ ರೀತಿಯಲ್ಲೂ ನಿಷ್ಠುರವಾಗಿರಲಿಲ್ಲ ಎಂಬುದನ್ನು ಸೂಚಿಸುತ್ತವೆ. ಹುಟ್ಟುವಾಗ ಎಲ್ಲರೂ ಶೂದ್ರರೇ. 'ಅಶ್ರೋತ್ರಿಯಾ ಅನನುವಾಕ್ಯ, ಅನಗ್ನಯೋ ವಾ ಶೂದ್ರಸಧರ್ಮಾಣೋ ಭವಂತಿ ।

ವಸಿಷ್ಠ ೨. ೧. ಮನುಸ್ಮೃತಿಯು—

ಯೋಽನಧೀತ್ಯ ದ್ವಿಜೋ ವೇದಮನ್ಯತ್ರ ಕುರುತೇ ಶ್ರಮಂ ।
ಸ ಜೀವನ್ನೇವ ಶೂದ್ರತ್ವಮಾಶು ಗಚ್ಛತಿ ಸಾನ್ವಯಃ ॥ ೨. ೧೬೮.

ಎಂದು ಎಚ್ಚರಿಸುತ್ತದೆ. ಹಾಲು ಮಾರುವ ಬ್ರಾಹ್ಮಣ ಮೂರೇ ದಿನಕ್ಕೆ ಶೂದ್ರನಾಗುತ್ತಾನೆ [ವಸಿಷ್ಠ ೨. ೨೭] ಮಹಾನಸದಲ್ಲಿ ಶೂದ್ರರು ಆರ್ಯಾಧಿಷ್ಠಿತರಾಗಿ ಆಹಾರಾದಿಗಳನ್ನು ಸಿದ್ಧಪಡಿಸಲು 'ಸಂಸ್ಕರ್ತಾರಃ' ಅವಕಾಶ ವಿರುವುದನ್ನು ಗಮನಿಸಿದಾಗ ಮೊದ ಮೊದಲು ಈ ವರ್ಣವ್ಯವಸ್ಥೆ ಮೇಲೆ ಹೇಳಿದಂತೆ ಅತಿ ನಿಷ್ಠುರವಾಗಿರಲಿಲ್ಲವೆನ್ನಬೇಕಾಗುತ್ತದೆ. ಈ ವಿಚಾರದಲ್ಲಿ ಮನುಸ್ಮೃತಿಯ ವಚನಗಳು ಹೇರಳವಾಗಿವೆ.

'ಶೂದ್ರೋ ಬ್ರಾಹ್ಮಣತಾಮೇತಿ ಬ್ರಾಹ್ಮಣಶ್ಚೈತಿ ಶೂದ್ರತಾಂ । ೧೦.೬೫.
ಕ್ಷತ್ರಿಯಾಜ್ಜಾತಮೇವಂ ತು ವಿದ್ಯಾದ್ವೈಶ್ಯಾತ್ತಥೈವ ಚ ॥

ಈ ಬದಲಾವಣೆ ನಿಧಾನಗತಿಯದಾದರೂ ಧರ್ಮಾವಿರುದ್ಧ. ೧೦.೬೪.

ವೇದಮಂತ್ರಗಳು ಸಂಹಿತಾರೂಪಕ್ಕೆ ಇನ್ನೂ ಬಾರದ ಕಾಲವೊಂದನ್ನು ನಾವು ಊಹಿಸಿಕೊಳ್ಳಲಡ್ಡಿಯಿಲ್ಲ. ಆಗ ಯಾವ ಜಾತಿಯೂ ಇರದೆ ಎಲ್ಲರೂ (ಬ್ರಹ್ಮನಿಂದ ಜನಿಸಿದುದರಿಂದ) ಬ್ರಾಹ್ಮಣರಾಗಿದ್ದ ಕಾಲವೊಂದಿತ್ತು ಎಂದು ಮಹಾಭಾರತ ಹೇಳುವಾಗ ಈ ಊಹೆಗೆ ಸಮರ್ಥನೆ ಸಿಗುತ್ತದೆ. ಗೋತ್ರಪ್ರವರಗಳನ್ನು ಪರಿಶೀಲಿಸಿದಾಗಲೂ ಇದು ಇರಬಹುದೆನಿಸುತ್ತದೆ. ಭಾರ್ಗವನೊಡನೆ ಮಿತ್ರಯು, ಶುಂಕ, ವೇನ ವೀತಹವ್ಯ ಸೇರಿದಂತೆ (ಇವರು (ಕ್ಷತ್ರಿಯರು), ಅಂಗಿ ರಸನೊಡನೆ ಹಾರೀತ, ಕಣ್ವ, ಮುದ್ಗಲ, ರಥೀಕರ, ಸಂಕೃತಿ, ವಿಷ್ಣುವೃದ್ಧ ಈ ಕ್ಷತ್ರಿಯರು ಸೇರಿದರು. ಇಷ್ಟು ಈಗ ವೇದ್ಯವಾಯಿತು : ಒಂದೇ ಪಂಗಡವಾಗಿದ್ದ ಆರ್ಯರು ಎರಡಾಗಿ ಬ್ರಾಹ್ಮಣ ಕ್ಷತ್ರಿಯರಾದರು. ಒಂದು ವರ್ಣದಿಂದ ಮತ್ತೊಂದು ವರ್ಣಕ್ಕೆ ಹೋಗಲು ಅವಕಾಶವಿತ್ತು. ವರ್ಣಗಳು ಜಾತಿಗಳಾಗಿರಲಿಲ್ಲ. ಆಮೇಲೆ, ಈ ಮೊದಲೇ ಹೇಳಿದಂತೆ ಮೂರು ಪಂಗಡಗಳಾದವು. ಕೊನೆಗೆ ಆರ್ಯೇತರರನ್ನು ಸೇರಿಸಬೇಕಾಗಿ ಬಂತು. ನಾಲ್ಕು ಪಂಗಡಗಳಾದವು.

ಈತನಕ ಆರ್ಯಸಮಾಜವು ಪಿತೃ (ಬೀಜ) ಪ್ರಧಾನವಾಗಿತ್ತು. ತಾಯಿಯಿಂದು ಬೇಕಾದರೂ ಆಗಿರಬಹುದು. ತಾಯಿ (ಕ್ಷೇತ್ರ) ಪ್ರಧಾವಲ್ಲ. ವಸಿಷ್ಠ, ಪರಾಶರ, ವ್ಯಾಸ. ಇವರೆಲ್ಲರ ಜನ್ಮವನ್ನು ಪರಿಶೀಲಿಸಬಹುದು. ಲೋಪಾಮುದ್ರೆ, ಸತ್ಯವತಿ, ಮಹಿದಾಸನ ತಾಯಿ ಇತರಾ ಹೀಗೆ ಹತ್ತಾರು ಉದಾಹರಣೆಗಳನ್ನೀಯಬಹುದು. ತಾಯಿ (ಕ್ಷೇತ್ರ) ಯಾರೇ ಆಗಿದ್ದರೂ ಪುತ್ರ ಮಾತ್ರ ತಂದೆಯ ಅಂಶವೂ ಹೌದು. ವಂಶವೂ ಹೌದು-ಆದರೆ ಬರುಬರುತ್ತಾ ಮನುವಿನಲ್ಲಿ ಕಾಣುವಂತೆ ಆರ್ಯ ಸಮಾಜವು ಮಾತೃ (ಕ್ಷೇತ್ರ) ಪ್ರಾಧಾನವಾಯಿತು. ಸಮಾಜವು ಕ್ಷೇತ್ರವನ್ನು ಎಚ್ಚರಿಕೆಯಿಂದ ಕಾಯ ಬೇಕಾಯಿತು. 'ಹುಟ್ಟಿದ ಕರುಗಳೆಲ್ಲವೂ ಹಸುವಿನವುಗಳೇ, ವೃಷಭನಿಗೆ ವೃಥಾ ವರ್ಷಣವಷ್ಟೆ' ಎಂದು ವಸಿಷ್ಠ ಹೇಳಿರುವುದನ್ನು ಇಲ್ಲಿಸ್ಮರಿಸಬಹುದು. 'ಯದ್ಯನ್ಯ ಗೋಷು ವೃಷಭೋ ವತ್ಸಾನಾಂ ಜನಯೇಚ್ಛತಂ । ಗೋಮಿನಾಮೇವ ತೇ ವತ್ಸಾ

ಮೋಘಂಸ್ಯಂದಿತ ಮಾರ್ಷಭಂ ॥ [ವಸಿಷ್ಠ. ೧೭. ೮.] ವರ್ಣಹೋಗಿ ಜಾತಿ (ಜನ್ಮ) ರೂಪು ತಳೆದ ದಾರಿಯನ್ನು ಹೀಗೆ ಗುರುತಿಸಬಹುದು. ವರ್ಣಸಾಂಕರ್ಯ 'ಸಂಕರೋ ನರಕಾಯೈವ' ನಿಕೃಷ್ಟವಾಗಿ ಕಂಡು ಬಂದಿತು. ಆದರೆ ಸಮಾಜದಲ್ಲಿ ಉತ್ತಮ ಸಂಸ್ಕೃತಿ ಉತ್ತಮ ಆದರ್ಶವನ್ನು ಕಾಪಾಡುವಲ್ಲಿ ಬೀಜ ಪಾರಿಶುಧ್ಯವೂ ಮುಖ್ಯವೆಂಬುದನ್ನು ನಾವು ಮರೆಯುವಂತಿಲ್ಲ.

ವರ್ಣ ವಿಭಜನೆಯ ಉದ್ದೇಶ ಆರ್ಥಿಕವಾಗಿ ಘನವಾದುದು-ಲೋಕದ ಅಭಿವೃದ್ಧಿಗಾಗಿ ಕಾರ್ಯವಿಭಜನೆ ಅಗತ್ಯವಿತ್ತು.

ಲೋಕಾನಾಂ ವಿವೃಧ್ಯರ್ಥಂ ಮುಖಬಾಹೂರುಪಾದತಃ ।

ಬ್ರಾಹ್ಮಣಂ ಕ್ಷತ್ರಿಯಂ ವೈಶ್ಯಂ ಶೂದ್ರಂ ಚ ನಿರವರ್ತಯತ್ ॥ ೧.೩೧.

ವರ್ಣವ್ಯವಸ್ಥೆ ಸಹಕಾರದಿಂದ ಸಾಧ್ಯವಾಗುವ ವ್ಯವಸ್ಥೆ. ಈ ಲೋಕದ ಗುರಿ ಸ್ಪರ್ಧಾತ್ಮಕವಾದ ಜೀವನ. ಇವುಗಳನ್ನವಲಂಬಿಸಿದ ಈಗಿನ ಜಾತಿ (ವರ್ಗ) ಗಳಂತಿರಲಿಲ್ಲ. ಇದು ವಾದ್ಯವೃಂದದ ಸ್ವರಮೇಳವು ವಿವಿಧ ಬಗೆಯ ವಾದ್ಯಗಳಿಗೆ ಅನುಗುಣವಾಗಿರುವ ಆದರೂ ಪರಸ್ಪರ ಸಹಕಾರಿಯಾದ ಸ್ವರ ಸಂಯೋಜನೆ ಹೊಂದಿರುವಂತಿತ್ತು ಈ ವರ್ಣವ್ಯವಸ್ಥೆ. ಪ್ರತಿಯೊಂದು ಅಂಗಕ್ಕೂ ಆದರದರ ಮಹತ್ವವಿತ್ತು. ಸಮಗ್ರಕಲಾಮಯತೆಗಳಲ್ಲಿ ಎಲ್ಲರೂ ಸಮಭಾಗಿಗಳು. ಎಲ್ಲರಿಗೂ ಸಮಪಾಲು. ವರ್ಣಗಳಲ್ಲಿ ತರತಮಭಾವವಿದ್ದರೂ ಈಗಿನ ಚುನಾವಣೆಯ ಯುಗದಲ್ಲಿ ಪ್ರತಿಪಾದಿಸಲಾಗುತ್ತಿರುವ ಅಂದರೆ ಎಲ್ಲರನ್ನೂ ಒಂದೇ ಮಟ್ಟಕ್ಕೆ (ನೆಲಸಮಮಾಡಿದಂತೆ_ಉಬ್ಬಾಗಿರುವುದನ್ನು ಹಳ್ಳಕ್ಕೆ ಹಾಕಿ) ಒಯ್ಯುವ ದೃಷ್ಟಿ ಕೋನ ಆಗಿರ ಲಿಲ್ಲ. ಎಲ್ಲರನ್ನೂ ಮೇಲಕ್ಕೆತ್ತುವ ಮನೋಭಾವ ಅಂದಿನ ಯುಗಧರ್ಮ. ಕ್ಷತ್ರಿಯವರ್ಣದ ತತ್ತ್ವದರ್ಶಿಗಳಿಗೆ (ರೈಕ್ವ, ಜನಕ, ಇತ್ಯಾದಿ), ವಿದುರನಿಗೆ, ತುಲಾಧಾರನಂತಹ ವೈಶ್ಯನಿಗೆ, ಪುರಾಣ ಇತಿಹಾಸಕಾಲದ ಶೂದ್ರವರ್ಣದ ಬ್ರಹ್ಮಜ್ಞಾನಿಗಳಿಗೆ (ಶ್ರೀವೈಷ್ಣವ, ಆಳ್ವಾರರು ಹಾಗೂ ಶೈವ ಸನಾತನರು), ಮಧ್ಯಯುಗದ ಕೆಳಗಿನ ವರ್ಣದ ಸಂತರಿಗೆ ಬ್ರಾಹ್ಮಣರಾದಿಯಾಗಿ ಎಲ್ಲರೂ ಮನ್ನಣೆ ಗೌರವಗಳನ್ನು ನೀಡುತ್ತಿದ್ದರು. ಉಚ್ಚ ಆಚಾರ ಕರ್ಮಗಳಿಂದ ಮುಂಬರುವ ಜನ್ಮಗಳಲ್ಲಿ ಉಚ್ಚವರ್ಣ ಪ್ರಾಪ್ತಿಯಾಗುವುದೆಂಬ ಉತ್ತೇಜನವನ್ನು ವರ್ಣವ್ಯವಸ್ಥೆಯು ಒದಗಿಸುತ್ತಿತ್ತು.

ವರ್ಣವ್ಯವಸ್ಥೆ ಜಾತಿವ್ಯವಸ್ಥೆಯಾಗಲು ಯಾರು ಕಾರಣ ? ನಾಲ್ಕು ಇದ್ದದ್ದು ನಲವತ್ತು ನಾನೂರು. ನಾಲ್ಕು ಸಾವಿರವೇಕಾಯಿತು ? ಜಾತಿಯು ಭಾರತದಲ್ಲಿ (ಹಿಂದೂ ಭಾರತ) ಮಾತ್ರ ಇರುವ, ಪ್ರಪಂಚದ ಇನ್ನೆಲ್ಲೂ ಇರದ ಒಂದು ವಿಲಕ್ಷಣ ಸಮಸ್ಯಾತ್ಮಕ ಸಂಸ್ಥೆ ಎಂದು ಸಮಾಜ ಶಾಸ್ತ್ರಿಗಳು ಉದ್ಗಾರವೆತ್ತುತ್ತಾರೆ. ಇದಕ್ಕೆ ಮನುವು ಕಾರಣವೆಂದು ಅವನತ್ತ ಬೆರಳು ಮಾಡು ತ್ತಾರೆ. ಆದರೆ ಧರ್ಮಶಾಸ್ತ್ರವನ್ನು ಕೂಲಂಕುಷವಾಗಿ ಅಭ್ಯಾಸ ಮಾಡಿದವರಾರೂ ಈ ಮಾತನ್ನು

ಒಪ್ಪಲಾರರು. ಈ ಬಗೆಗೆ ಜೆ. ಎಚ್. ಹಟನ್, ಸಿಡ್ನಿ, ಲೋಸೆಡ್‌ವಿರ್ ಮುಂತಾದವರ ಅಭಿಪ್ರಾಯ ಕೇಳೋಣ. ಶತಮಾನಗಳವರೆಗೆ ಸಾಗಿ ಬಂದ ರಾಜಕೀಯ ಆಘಾತಗಳನ್ನು ನಿಸರ್ಗದ ವಿಪ್ಲವಗಳನ್ನು ಭಾರತೀಯಸಮಾಜವು ಮೆಟ್ಟಿನಿಲ್ಲಿಸಲು ನೆರವಾದ ಮೂಲಭೂತ ದೃಢತೆ ತೃಪ್ತಿಗಳಿಗೆ ಜಾತಿಯು (ವರ್ಣ) ಮುಖ್ಯ ಕಾರಣ ಮನುಷ್ಯರನ್ನು ಸಾಮಾಜಿಕ ಮಾತ್ಸರ್ಯವೆಂಬ ವಿಷಜಂತುವಿನಿಂದ, ಈಡೇರದ ಆಕಾಂಕ್ಷೆಗಳಿಂದ ಬಾಳಿನುದ್ದಕ್ಕೂ ಕಾಪಾಡುತ್ತಿದೆ. ಇದೊಂದು ಅದ್ಭುತವಾದ ಶೋಧ ಅರಾಜಕತೆ ಹಾಗೂ ಔದ್ಯೋಗಿಕ ಸ್ಪರ್ಧಾತ್ಮಕ ಜೀವನದ ಅಪಾಯಗಳಿಂದ ಹಿಂದೂ ಸಮಾಜವನ್ನು ಅನೇಕ ಶತಮಾನಗಳಿಂದಲೂ ರಕ್ಷಿಸಿದ ಒಂದು ತರಹ ಸಮಾಜವಾದ '(Socialism) ಆಗಿದೆ. ರಾಜಕೀಯಶಾಸನದಿಂದ ಸ್ವತಂತ್ರವಾದ, ಒತ್ತಾಯಕ್ಕಿಂತ ಹೆಚ್ಚು ಶಕ್ತಿಯುತವಾದ ತಳಹದಿಯ ಮೇಲೆ ನಿಂತ ಸಾಮಾಜಿಕ ಪದ್ಧತಿಯೆಂದರೆ ಇದೊಂದೆ' ಈ ಮಾತುಗಳು ಹಿಂದೂಗಳಲ್ಲದವರ ಲೇಖನಿಗಳಿಂದ ಹರಿದವುಗಳು.

ಜಾತಿಯ ವಿಲಕ್ಷಣತೆಯನ್ನು ಇಲ್ಲವೆನ್ನಲಾಗುವುದಿಲ್ಲ. ಜಾತಿಜಾತಿಗಳ ಜಗಳ, ಜಂಜಾಟಗಳು ಪರಂಪರೆಯಿಂದ ರೂಪಗೊಂಡವುಗಳು, ಧರ್ಮಶಾಸ್ತ್ರಕಾರರು ಸಮಾಜವನ್ನು ಹೋಳು ಹೋಳಾಗಿ ಸೀಳಲಿಲ್ಲ ಬಿಡಿಬಿಡಿಯಾಗಿ ಬಿಸುಡಲಿಲ್ಲ. ತದ್ವಿರುದ್ಧವಾಗಿ ಅವ್ಯವಸ್ಥೆಯಲ್ಲಿದ್ದುದಕ್ಕೆ ಒಂದು ವ್ಯವಸ್ಥೆಯನ್ನೀಯಲು ಪ್ರಯತ್ನಿಸಿದರು.

ಆಶ್ರಮವ್ಯವಸ್ಥೆ :—ಜನಾಂಗವನ್ನು ವರ್ಣಗಳಾಗಿ ವಿಂಗಡಿಸಿದ ಮೇಲೆ ಆಯಾ ವರ್ಣಗಳಿಗೆ ತಕ್ಕಂತೆ, ಅವರವರ ಮಾನಸಿಕ ಸಿದ್ಧತೆ-ಅಗತ್ಯಗಳಿಗೆ ತಕ್ಕಂತೆ ಕರ್ತವ್ಯ-ಧರ್ಮಗಳನ್ನು ನಿರೂಪಿಸಬೇಕಾಯಿತು. ಇದಕ್ಕಾಗಿ ಮಾನವ ಜೀವನ ಕಾಲವನ್ನು ಇಪ್ಪತ್ತೈದು ವರ್ಷಗಳಂತೆ ನಾಲ್ಕಾಗಿ ವಿಭಜಿಸಿ ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ ಮತ್ತು ಸನ್ಯಾಸಗಳೆಂಬ ನಾಲ್ಕು ಆಶ್ರಮಗಳ ವ್ಯವಸ್ಥೆ ರೂಪಗೊಂಡಿತು ಆಶ್ರಮವೆಂಬ ಶಬ್ದವೇ ಈ ವ್ಯವಸ್ಥೆಯ ಗಾಢತೆಯನ್ನೂ ತೂಕವನ್ನೂ ತಿಳಿಸುತ್ತದೆ, ಈ ಆಶ್ರಮಗಳಿಗೆ ಪರಸ್ಪರ ಸಂಬಂಧವಿದೆ. ಉಪನಯನ ಮತ್ತು ಗುರೂಪಸದನ (ಗುರುವನ್ನು ಸಮೀಪಿಸುವುದು) ಆಗುವ ತನಕ ಬಾಲ್ಯಾವಸ್ಥೆ. ಆಶ್ರಮಗಳ ಧರ್ಮ-ಪ್ರಾರಂಭವಾಗುವುದು ವಸ್ತುತಃ ಉಪನಯನ ಸಂಸ್ಕಾರವಾದ ಮೇಲೆ ಮಾತ್ರ.

ಬ್ರಹ್ಮಚರ್ಯ:—(ವಿದ್ಯಾರ್ಥಿಜೀವನ) ಬ್ರಹ್ಮಚರ್ಯಾಶ್ರಮ ಬಹು ಮುಖ್ಯವಾದ ಹಂತ. ಸಮಾಜದ ಭಾರವೆಲ್ಲವನ್ನೂ ಹೊರುವ ಸತ್ಪ್ರಜೆಯಾದ ಗೃಹಸ್ಥನಾಗಬೇಕಾದರೆ ಅದರ ಪೂರ್ವ ಸಿದ್ಧತೆ, ಇಲ್ಲಿ ಆಗಬೇಕು. ಬ್ರಹ್ಮಚರ್ಯವೆಂಬ ಶಬ್ದಕ್ಕೆ ವೇದ(ಬ್ರಹ್ಮ)ಗಳ ಅಧ್ಯಯನ ಮತ್ತು ಅದರ ಅವಶ್ಯ ಅನುಷಂಗವಾದ ಜಿತೇಂದ್ರಿಯತ್ವ. ವ್ಯಕ್ತಿಯೊಬ್ಬನನ್ನು ಭೌತಿಕ, ಬೌದ್ಧಿಕ ಹಾಗೂ ಆಧ್ಯಾತ್ಮಿಕ ಕ್ಷೇತ್ರಗಳಲ್ಲಿ ಬೆಳೆಸಲು ಈ ಮೇಲಿನವು ಅಗತ್ಯವಾಗಿದ್ದವು ಪ್ರತಿಯೊಂದು ಧರ್ಮ-ಸೂತ್ರ ಮತ್ತು ಸ್ಮೃತಿಯಲ್ಲಿಯೂ ಈ ಬಗೆಗೆ ವಿಸ್ತಾರವೂ ವೈಜ್ಞಾನಿಕವೂ ಆದ ದಿಗ್ದರ್ಶನವಿದೆ. ಪ್ರಾತರ್ ವಿಧಿಗಳು, ಸ್ನಾನ, ಗಾಯತ್ರೀಜಪ, ದಿನಕ್ಕೆರಡುಬಾರಿ ಅಗ್ನಿಕಾರ್ಯ,

ಗೃಹಸ್ಥರಿಂದ ಭಿಕ್ಷಾನ್ನ, ಮಿತಹಾರ, ಮಿತವಾಕ್, ಮಿತವಿಹಾರ, ಸ್ವಾಭಿಮಾನ ಶೂನ್ಯತೆ, ವಿನಯಂದ ವಶೀಕರಣ, ಆಚಾರ್ಯಸೇವೆ ಮತ್ತು ಅವನಲ್ಲಿ ಭಕ್ತಿ, ಇತ್ಯಾದಿಗಳ ಮಧುರ ಸಂಮೇಳವನ್ನುಂಟು ಮಾಡಿಕೊಂಡು ಮೂವತ್ತಾರುವರ್ಷ ಅಥವಾ ಇಪ್ಪತ್ತನಾಲ್ಕುವರ್ಷ, ಕಡೆಗೆ ಹನ್ನೆರಡುವರ್ಷ, ವೇದಗ್ರಹಣವಾಗುವತನಕ ಗುರುವಿನಲ್ಲಿ ತ್ರೈವೇದಿಕ ವ್ರತಚರ್ಯೆ ಮಾಡಬೇಕಿತ್ತು. ಮೂರು, ಅಥವಾ ಎರಡು ಕನಿಷ್ಟಪಕ್ಷ ಒಂದು ವೇದವನ್ನಾದರೂ ಯಥಾವತ್ತಾಗಿ ಅಭ್ಯಸಿಸಿ ಅವಿಪ್ಲುತ ಬ್ರಹ್ಮಚರ್ಯನಾಗಿ, ಗುರುವಿನ ಆಜ್ಞೆಪಡೆದು ಮತ್ತೆ ತನ್ನ ತಾಯಿ ತಂದೆಯರಲ್ಲಿಗೆ ಹಿಂತಿರುಗುವುದೇ ಬ್ರಹ್ಮಚರ್ಯವ್ರತ.

ಷಟ್‌ತ್ರಿಂ ಶದಾಬ್ದಿಕಂ ಚರ್ಯಂ ಗುರೌ ತ್ರೈವೇದಿಕಂ ವ್ರತಂ, ।
ತದರ್ಧಿಕಂ ಪಾದಿಕಂ ವಾ ಗ್ರಹಣಾಂತಿಕಮೇವ ವಾ. ॥
ವೇದಾನಧೀತ್ಯ ವೇದೌ ವಾ ವೇದಂ ವಾಪಿ ಯಥಾಕ್ರಮಂ ।
ಅವಿಪ್ಲುತಬ್ರಹ್ಮಚರ್ಯೋ ಗೃಹಸ್ಥಾಶ್ರಮಮಾಸೇತ್ ॥ ಮನು ೩. ೧ ೨

ಗುರು–ಜ್ಞಾನದಾತೃವಾದ ತಂದೆ. ಆತನ ಅಪ್ಪಣೆ ಪಡೆದು ಹಿಂತಿರುಗುವ ಗುರುತಿಗಾಗಿ ಸಮಾವರ್ತನ ಸ್ನಾನಮಾಡಿ ಬ್ರಹ್ಮಚಾರಿಯು ಸ್ನಾತಕನಾಗಬೇಕು. ಇಂತಹ ವಿದ್ಯಾಭ್ಯಾಸ ಅಂದಿನ ಗುರುಕುಲಗಳಲ್ಲಿ ಮಾತ್ರ ಸಾಧ್ಯ. ಇಂದಿನ 'ಕಿರುಕುಳ'ಗಳಲ್ಲ. ಇಂದಿನ 'ಬ್ರಹ್ಮಚಾರಿ' ಕಾಟಾಚಾರಿ.

ಗೃಹಸ್ಥಾಶ್ರಮ :— ಸಕಲ ಆಶ್ರಮಗಳಲ್ಲೆಲ್ಲಾ ಅತಿಮುಖ್ಯ ಆಶ್ರಮವಿದು. ಗೃಹಸ್ಥಾಶ್ರಮಿಯೇ ಸಮಾಜದ ಆಧಾರಸ್ತಂಭ. ಬ್ರಹ್ಮಚಾರಿ, ವಾನಪ್ರಸ್ಥ ಮತ್ತು ಸಂನ್ಯಾಸಿಗೆ ಅನ್ನದಾತ ಗೃಹಸ್ಥ.

ಗೃಹಸ್ಥ ಏವ ಯಜತೇ ಗೃಹಸ್ಥಸ್ತಪ್ಯತೇ ತಪಃ ।
ಚತುರ್ಣಾಮಾಶ್ರಮಾಣಾಂ ತು ಗೃಹಸ್ಥಶ್ಚ ವಿಶಿಷ್ಯತೇ ॥ ವಶಿಷ್ಠ ೮. ೧೪.

ಆತನು ಪ್ರತಿನಿತ್ಯ ಬ್ರಾಹ್ಮೀ ಮುಹೂರ್ತದಲ್ಲೆದ್ದು ಧರ್ಮ ಮತ್ತು ಅರ್ಥಗಳನ್ನು ಅನುಚಿಂತನ ಮಾಡಬೇಕು. ತರುವಾಯ ನಿತ್ಯವಿಧಿಗಳನ್ನು ಮಾಡಿ ಸಂಧ್ಯಾದಿಗಳನ್ನು ಆಚರಿಸಬೇಕು. ಋಷಿಗಳ ದೀರ್ಘಕಾಲ ಸಂಧ್ಯಾವಿದಿಗಳನ್ನು ಆಚರಿಸಿ ದೀರ್ಘಾಯುಗಳಾದರು [ಮನು ೪. ೯೨–೯೪]

ಗೃಹಸ್ಥರು ಸಂಧ್ಯಾ ಸ್ನಾನ ಮುಂತಾದ ಷಟ್‌ಕರ್ಮ ಮಾಡತಕ್ಕದ್ದು.

ಸಂಧ್ಯಾಸ್ನಾನಂ ಜಪೋ ಹೋಮೋ ದೇವತಾನಾಂ ಚ ಪೂಜನಂ ।
ಆತಿಥ್ಯಂ ವೈಶ್ವದೇವಶ್ಚ ಷಟ್ ಕರ್ಮಾಣಿ ದಿನೇ ದಿನೇ ॥

ತಾನೂ ಊಟ ಮಾಡುವ ಮೊದಲು ಅರೆಗಳಿಗೆ–ಅವರು ಯಾವುದೇ ಜಾತಿಗೆ ಸೇರಿರಲಿ ಶೂದ್ರ–ಶ್ವಪಚ–ಚಂಡಾಲರಿರಲಿ–ಅವರಿಗೆ ಅಂತೆಯೇ ತನ್ನ ಆಳುಗಳು ಸಾಕುಪ್ರಾಣಿಗಳು ಎಲ್ಲರಿಗೂ ಭೋಜನ ಮಾಡಿಸಬೇಕಿತ್ತು. ಇದೇ ಅಭಿಪ್ರಾಯವನ್ನು ಮತ್ತಷ್ಟು ಸ್ಪಷ್ಟಪಡಿಸುತ್ತದೆ; ಪಂಚಮಹಾಯಜ್ಞ ವಿಧಿ–ಅಧ್ಯಾಪನ, ಪಿತೃತರ್ಪಣ, ಹೋಮ, ಬಲಿ (ಪ್ರಾಣಿಗಳಿಗೆ ಅನ್ನ) ಮತ್ತು ಅತಿಥಿಪೂಜೆ;

ಅಧ್ಯಾಪನಂ ಬ್ರಹ್ಮಯಜ್ಞಃ, ಪಿತೃಯಜ್ಞಸ್ತು ತರ್ಪಣಂ ॥
ಹೋಮೋ ದೈವೋ ಬಲಿರ್ಭೌತೋಽನ್ಯಯಜ್ಞೋಽತಿಥಿಪೂಜನಂ ॥ ಮನು ೩. ೭೦

ಈ ಐದು ಯಜ್ಞಗಳು ಗೃಹಸ್ಥ ಮಾಡಿಕೊಳ್ಳುವ ಸ್ವೋದರ ಪೋಷಣೆಯ ದೋಷವನ್ನು ನಾಶಪಡಿಸುತ್ತವೆ. 'ಕೇವಲಾಘೋ ಭವತಿ ಕೇವಲಾದೀ'—ಒಬ್ಬನೇ ಉಣ್ಣುವವನು ಆ ಸ್ವಾರ್ಥದ ಪಾಪವನ್ನೂ ಅವನೇ ಉಣ್ಣಬೇಕಾಗುತ್ತದೆ ಎಂಬುದು ಉಪನಿಷತ್ ಸೂಕ್ತಿ. ಇಷ್ಟಲ್ಲದೆ ಆತನ ಆಹಾರ, ವಿಹಾರ, ಲೈಂಗಿಕ ಜೀವನ, ಪಿತೃವಾಗಿ ಮಾಡತಕ್ಕ ಕರ್ತವ್ಯ ಅಂದರೆ ಸಂಸ್ಕಾರಾದಿಗಳು, ಶುದ್ಧಿಕರ್ಮಗಳು, ಭಕ್ಷ್ಯಾಭಕ್ಷ್ಯವಿವೇಚನೆ, ತನ್ನ ಜೀವನಕ್ಕಾಗಿ ಯಜನ ಯಾಜನ, ಅಧ್ಯಯನ–ಅಧ್ಯಾಪನ, ದಾನ-ಪ್ರತಿಗ್ರಹ ಇವೆಲ್ಲವೂ ಸಹ ಗೃಹಸ್ಥಧರ್ಮಗಳು, ಹೀಗೆ ವಿಹಿತ ಕರ್ಮಗಳನ್ನು ಮಾಡುತ್ತಾ ನಿಷಿದ್ಧಕರ್ಮಗಳನ್ನು ದೂರೀಕರಿಸುತ್ತಾ ಐವತ್ತು ವರ್ಷ ಆಯುವಾದಾಗ ಆತನು ಸಪತ್ನೀಕನಾಗಿಯೋ ಅಪತ್ನೀಕನಾಗಿಯೋ ವಾನಪ್ರಸ್ಥನಾಗ ಬೇಕಿತ್ತು. ಈ ವೇಳೆಗೆ ಪಿತೃಋಣ ಪರಿಹಾರಕ್ಕಾಗಿ 'ಪ್ರಜಾತಂತುಂ ಮಾ ವ್ಯವಚ್ಛೇತ್ಸೀಃ' ಎಂಬ ಉಪನಿಷಚ್ಛಿಷ್ಯಾನು ಶಾಸನದಂತೆ ಪುತ್ರನೊಬ್ಬನಿಗೆ ಜನ್ಮವಿತ್ತು ಆತನು ಗೃಹಸ್ಥಧರ್ಮ ಸ್ವೀಕರಿಸು ವಂತೆಯೂ ಮಾಡಿಹೋಗಬೇಕಿತ್ತು.

ವಾನಪ್ರಸ್ಥ :—ದೇವಋಣ, ಋಷಿಋಣ, ಪಿತೃಋಣಗಳನ್ನು ಕ್ರಮವಾಗಿ ಯಜನ, ಯಾಜನ, ಅಧ್ಯಯನ,–ಅಧ್ಯಾಪನ, ಮತ್ತು ಪುತ್ರಪ್ರಜನನಗಳಿಂದ ತೀರಿಸಿ ಮುಖದ ಮೇಲೆ ಸುಕ್ಕು, ತಲೆಯಲ್ಲಿ ನೆರೆಗೂದಲು, ಮಗನಿಗೆ ಮಗ ಇವುಗಳನ್ನು ಕಂಡಾಗ ಜಟಾಧಾರಿಯಾಗಿ ಚೀರ–ಅಜಿನಗಳನ್ನು ತೊಟ್ಟುಕೊಂಡು ವಾನಪ್ರಸ್ಥ (ಕಾಡಿಗೆ ಹೋದವ) ನಾಗಬೇಕು. ಹೋಗುವಾಗ ತಾನು ಹೊತ್ತಿಸಿ ಉಳಿಸಿಕೊಂಡು ಬಂದಿದ್ದ ಆವಸಥಾಗ್ನಿಯನ್ನು ಸಂಗಡ ಒಯ್ದು ಕಾಡಿನಲ್ಲಿ ಅದನ್ನು ತನ್ನೊಡನೆ ಇಟ್ಟುಕೊಳ್ಳಬೇಕು. ವನ್ಯಫಲ, ಮೂಲ, ಕಾಂಡಗಳನ್ನು ತಾನೂ

ಸೇವಿಸಿ ಬಂದ ಅತಿಥಿಗಳಿಗೂ ಸಹ ಅವುಗಳನ್ನೇ ಇತ್ತು ಜೀವಿಸಬೇಕು. ಪ್ರತಿ ದಿನ ತ್ರಿಷವಣ (ಮೂರುಸಾರಿ ಸ್ನಾನ) ತ್ರಿಸಂಧ್ಯಾಜಪ, ಬರಿ ನೆಲದ ಮೇಲೆ ಶಯನ, ಬೇಸಗೆಯಲ್ಲಿ ಪಂಚಾಗ್ನಿ ತಪಸ್ಸು, ವರ್ಷಾಕಾಲದಲ್ಲಿ ತೆರೆದ ಪ್ರದೇಶ (ಮರೆಯಿರಕೂಡದು), ಛಳಿಗಾಲದಲ್ಲಿ ತೇವದ ನಾರು ಮಡಿ, ಇತ್ಯಾದಿ ಆತನ ಧರ್ಮಗಳು. ಭಿಕ್ಷಾಟನೆ ಮಾಡಬೇಕಾಗಿ ಬಂದಾಗ ಅಂತಹವರಿಂದಲೇ ಅದು ಅಂಗೀಕೃತ. ಅಥವಾ ಇತರ ವನವಾಸಿಗಳಿಂದ ಪಡೆಯಬಹುದಿತ್ತು. ಈ ರೀತಿ ಶೀತೋಷ್ಣ ಸುಖದುಃಖಾದಿಗಳಲ್ಲಿ ಸಮಬುದ್ಧಿಯನ್ನು ಸಾಧಿಸಿ ದಿನದಿಂದ ದಿನಕ್ಕೆ ಹಂತದಿಂದ ಹಂತಕ್ಕೆ ತನ್ನ ತಪಶ್ಶಕ್ತಿಯನ್ನು ಹೆಚ್ಚಿಸಿಕೊಂಡು ಆತ್ಮಸಿದ್ಧಿಗಾಗಿ ಶ್ರುತಿಗಳ ಮತ್ತು ಉಪನಿಷತ್ತುಗಳ ಅಭ್ಯಾಸವನ್ನು ಮುಂದುವರಿಸಬೇಕು. ಹೀಗಿರುವ ಜೀವನದಲ್ಲಿ ಯಾವುದಾದರೂ ರೋಗವು ಉಲ್ಬಣಿಸಿದರೆ ಕೇವಲ ಜಲವಾಯು ಆಹಾರನಾಗಿ ಶರೀರ ಬೀಳುವತನಕ ದಕ್ಷಿಣದತ್ತ ಸಾಗುತ್ತಿರಬೇಕು. ಈ ರೀತಿಯ ಮಹರ್ಷಿ–ಆಚಾರಗಳಿಂದ ಬದುಕುತ್ತಾ ವೀತಶೋಕಭಯನಾಗಿ ವಿಪ್ರನು ಬ್ರಹ್ಮಲೋಕ ಪೂಜಿತನಾಗುತ್ತಾನೆ. [ಮನು ೬–೧–೩೨] [ವಸಿಷ್ಠ. ೯]

ಸಂನ್ಯಾಸಾಶ್ರಮ :—ವಾನಪ್ರಸ್ಥವು ವಸ್ತುತಃ ಸಂನ್ಯಾಸವೇ. ಆದರೆ ವ್ಯಕ್ತಿ ಅಲ್ಲಿ ಜಟಿಲ (ಜಟಾಧಾರಿ), ಇಲ್ಲಿ ಮುಂಡನ ಮಾಡಿಸಿಕೊಂಡವನು. ಅಲ್ಲಿಯ ಸಾಧನೆಯೆಲ್ಲವೂ ಇಲ್ಲಿಯ ಸಿದ್ಧಿಗಾಗಿ.

ವನೇಷು ಚ ವಿಹೃತ್ಯೈವಂ ತೃತೀಯಂ ಭಾಗಮಾಯುಷಃ ।
ಚತುರ್ಥಮಾಯುಷೋ ಭಾಗಂ ತ್ಯಕ್ತ್ವಾ ಸಂಗಾನ್ ಪರಿವ್ರಜೇತ್ ॥

ಮುಂಡನೂ, ನಿರಹಂಕಾರನೂ, ಅಪರಿಗ್ರಹವುಳ್ಳವನೂ [ವಸಿಷ್ಠ ೧೦.೬] ಆಗಿ ಪೂರ್ವ ನೇಮಕವಿಲ್ಲದೆ ಹೊಗೆಯಡಗಿದ ಹಾಗೂ ಒನಕೆ ಶಬ್ದ ತೆಪ್ಪಗಾದ ಏಳು ಮನೆಯಲ್ಲಿ ಭಿಕ್ಷಾಟನ ಮಾಡಿ ಜೀವಿಸುತ್ತಾನೆ. ಈ ಪರಿವ್ರಾಜಕ ಚರ್ಮವೋ, ದನಗಳು ತಿನ್ನುವಾಗ ಕಿತ್ತು ಬಿಸುಟ ಹುಲ್ಲೋ ಅವನ ಬಟ್ಟೆ–ಕೌಪೀನ ವೊಂದಿದ್ದರೂ ಸಾಕು (ವಸಿಷ್ಟ ೧೦–೯–೧೦) ಹಾಳುಮನೆ, ಊರ ಹೊರಗಿನ ದೇಗುಲ ಯಾವುದೂ ಇಲ್ಲದಿದ್ದರೆ ಒಂದು ಮರದ ಬುಡವೇ ವಸತಿ ಹುಚ್ಚ ನಲ್ಲದೆ ಹುಚ್ಚನಂತೆ ಕಾಣುತ್ತಾನೆ. ಲೋಗರ ಕಂಗಳಿಗೆ, ಮನಸ್ಸಿನಲ್ಲೇ ಜ್ಞಾನಾಧಿಗಮ ನಿರಂತರವಾಗಿ ಅತೀವ ತೀಕ್ಷ್ಣವೇಗದಿಂದ ನಡೆಯುತ್ತಿರುತ್ತದೆ. ಈಗಿನ 'ಸಂನ್ಯಾಸಮನ್ಯ'ರಂತೆ ಶಾಸ್ತ್ರ, ಶಕುನ ಹೇಳಿ ಕಾಸುವಸೂಲಿ ಮಾಡುವವನಲ್ಲ ಈತ. (ಮನು ೫–೫೦) ಪ್ರಾಣಿದಯೆ ತನ್ನ ಪರಾಕಾಷ್ಠೆಗೇರಿರುತ್ತದೆ. ಈ ಮಹಾತ್ಮನು ಕಣ್ಣಿಟ್ಟು ಕಾಲು ಹಾಕುತ್ತಾನೆ. ಶೋಧಿಸಿಕೊಂಡು ನೀರು ಕುಡಿಯುತ್ತಾನೆ. ಸತ್ಯವೇ ಶಬ್ದರೂಪವಾಗಿ ಮೈದಳೆದು ಹೊರಡುತ್ತದೆ.

ಸಂನ್ಯಾಸಿಯ ಧರ್ಮವರ್ಣನೆ ದ್ವಂದ್ವಾತೀತ ಜ್ಞಾನ–ಘನ ಕಾವ್ಯವಾಹಿನಿಯಾಗಿ ಮಾನಸ್ಮೃತಿಯಲ್ಲಿ ಹರಿಯುತ್ತದೆ. [೬ ೩೨–೯೭]

ನ ಕುಟ್ಯಾಂ ನೋದರೇ ಸಂಗೋ ನಚೈಲೇ ನ ತ್ರಿಪುಷ್ಕರೇ ।

ನಾಗಾರೇ ನಾಸನೇ ನಾನ್ನೇ ಯಸ್ಯ ವೈ ಮೋಕ್ಷವಿತ್ತು ಸಃ ॥ ವಸಿಷ್ಠ ೧೦-೨೩

ಅರಣ್ಯ ನಿತ್ಯಸ್ಯ ಜಿತೇಂದ್ರಿಯಸ್ಯ ಸರ್ವೇಂದ್ರಿಯ ಪ್ರೀತಿನಿವರ್ತಕಸ್ಯ ।

ಅಧ್ಯಾತ್ಮ ಚಿಂತಾಗ ಮಾನಸಸ್ಯ ಧ್ರುವಾ ಹ್ಯನಾವೃತ್ತಿರುಪೇಕ್ಷಕಸ್ಯ ॥

ವಸಿಷ್ಠ ೧೦. ೧೭

ಸರ್ವಸಂಗಿಯಾಗಿ ನಿಸ್ಸಂಗನಾಗುವ, ಸರ್ವಾನುರಕ್ತನಾಗಿ ವಿರಕ್ತನಾಗುವ, ಸರ್ವಾಲಿಪ್ತನಾಗಿ ನಿರ್ಲಿಪ್ತನಾಗುವ, ಸಕಲ, ಸಮೃದ್ಧಿಯಲ್ಲಿ ಅಕಿಂಚನನಾಗುವ, ಜನ್ಮಿಯಾಗಿ ಜನ್ಮಾತೀತನಾಗುವ ಈ ದೈವೀಸಂನ್ಯಾಸ ಕಲ್ಪನೆ ಭಾರತೀಯರಿಗೆ ಮಾತ್ರ ಸಾಧ್ಯವಾದುದೆಂಬುದೇ ಧರ್ಮಶಾಸ್ತ್ರಗಳ ತಿರುಳು. ಅದೇ ಅವುಗಳ ಚರಮ ಧ್ಯೇಯ.

ಸಂಸ್ಕಾರಗಳು :– ಈ ಮೇಲೆ ನಿರೂಪಿಸಿದಂತೆ ಮಾನವ ಜೀವನವನ್ನು ಒಂದು ವೈಜ್ಞಾನಿಕ ವ್ಯವಸ್ಥೆಗೆ ಒಳಪಡಿಸಿ, ಕಲ್ಲಿನಲ್ಲಿ ಹೂಗಡೆದಂತೆ ಪ್ರಾಣಿಗಳಲ್ಲಿ ಒಂದಾದ ಮಾನವ ಪ್ರಾಣಿಯನ್ನು ದೈವೀಶಕ್ತಿಯನ್ನಾಗಿ ಪರಿವರ್ತನೆ ಮಾಡುವ ಅದ್ಭುತ ಭಾವನೆಯೇ ಸಂಸ್ಕಾರಗಳ ಹಿನ್ನೆಲೆ.

ಸಂಸ್ಕಾರವೆಂದರೆ 'ಯಜ್ಞಾಹುತಿಯ ಪ್ರೋಕ್ಷಣೆ ಮುಂತಾದ ಕರ್ಮದಿಂದುದಿಸುವ ಗುಣಧರ್ಮ' ವೆಂದುಮೀಮಾಂಸಕರೂ, "ಶರೀರಪ್ರವೃತ್ತಿಯಿಂದುದಿಸಿದ ಆತ್ಮದ ಒಂದು ಕೃತಕಗುಣಧರ್ಮ" ವೆಂದು ಅದ್ವೈತಿಗಳೂ, ಅನುಭವಗಳಾಗಿರುವ ಸ್ವಯಂಪುನರುತ್ಪತ್ತಿಶಕ್ತಿ ಅಥವಾ ಸಾಮರ್ಥ್ಯವೆಂದು ನೈಯಾಯಿಕರೂ ಅರ್ಥಮಾಡುತ್ತಾರೆ. [ಯು. ಭಾ. ನಂ. ೨-೨೮೦] ಸಂಸ್ಕಾರವೆಂಬ ಪದವನ್ನು ಶಿಕ್ಷಣ, ಶಿಷ್ಟಾಚಾರ, ಗುಣವರ್ಧನ, ಜ್ಞಾನಸಂಚಯಕ್ಕೆ ಕಾರಣವಾದ ಕ್ರಿಯಾಪ್ರವೃತ್ತಿ, ವಿಧಿ, ಆಚಾರ, ದೀಕ್ಷೆ, ಮುಂತಾದ ಅರ್ಥಗಳಲ್ಲಿ ಬಳಸಿ, ಹಿಂದೂ ಸಂಸ್ಕಾರಗಳು ಕೇವಲ ಸಾಂಪ್ರದಾಯಿಕವಾದ ಶಾರೀರಕ ಶುದ್ಧಿಯೊಂದನ್ನೇ ಗುರಿಯಾಗಿಟ್ಟು ಕೊಳ್ಳದೆ, ಪರಿಗ್ರಾಹಕನಲ್ಲಿ ಒಂದು ವಿಶಿಷ್ಟ ಅರ್ಹತೆಯುನ್ನುಂಟುಮಾಡಿ ಅವನ ಪೂರ್ಣ ವ್ಯಕ್ತಿತ್ವವನ್ನು ಪವಿತ್ರಗೊಳಿಸಿ ನೈಪುಣ್ಯ ಮತ್ತು ಶಿಷ್ಟಾಚಾರಕ್ಕೆ ಕಾರಣವಾಗುತ್ತವೆಂಬುದನ್ನು ತೋರಿಸಲಾಗಿದೆ.

ಸಂಸ್ಕಾರಗಳ ವಿಚಾರ ಮೊಟ್ಟ ಮೊದಲು ಗೃಹ್ಯಸೂತ್ರಗಳಲ್ಲಿ ಕ್ರಮಬದ್ಧ ಆಲೋಚನೆಯಾಗಿ ಕಂಡು ಬರುತ್ತದೆ. ಅಲ್ಲಿಯ ಸಂಸ್ಕಾರಗಳು ಧರ್ಮ ಸೂತ್ರಗಳಲ್ಲಿ ಕಾರ್ಯಪ್ರವೃತ್ತವಾಗುತ್ತವೆ. ಅಂದರೆ ಸಂಸ್ಕೃತ ವ್ಯಕ್ತಿಯ ಧರ್ಮಾಚರಣೆಯ ಉಪದೇಶ ಇಲ್ಲಿ ಮೊದಲಾಗುತ್ತದೆ.

ಸಂಸ್ಕಾರಗಳ ಸಂಖ್ಯೆಯಲ್ಲಿ ಏಕ ರೂಪತೆಯಿಲ್ಲ. ಮನುಸ್ಮೃತಿಯು ಸಂಸ್ಕಾರಗಳ ಒಟ್ಟು ಸಂಖ್ಯೆಯನ್ನೀಯುವುದಿಲ್ಲ. ಗೌತಮ ಹೇಳಿದ್ದು ನಾಲ್ವತ್ತು ಆದರೆ ಮುಖ್ಯ ಸಂಸ್ಕಾರಗಳು ಹದಿನಾರು ಎನ್ನಬಹುದು.

ಸಂಸ್ಕಾರಗಳು ಸರ್ವವರ್ಣದವರಿಗೂ ಅನ್ವಯವಾಗಬಹುದು. ಆದರೆ ಎಲ್ಲಾ ಸಂಸ್ಕಾರಗಳೂ ಎಲ್ಲರಿಗೂ ಅನ್ವಯವಾಗುವಂತಿಲ್ಲ. ಅನ್ವಯದಲ್ಲೂ ವೈವಿಧ್ಯವಿದೆ. ಸಾಮಾನ್ಯವಾಗಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರಿಗೆ 'ದ್ವಿಜ' ರೆಂಬ ಹೆಸರಿದೆ. ಇವರೇ ಮೂಲ ಆರ್ಯರೆಂಬುದನ್ನು ಮತ್ತೊಮ್ಮೆ ಸ್ಮರಿಸಬೇಕು, ನಾಲ್ಕನೆಯ ವರ್ಣದರಿಗೆ 'ಏಕಜಾತಿ' ಎಂಬ ಹೆಸರುಂಟು— ಆದರೆ ಸಂಸ್ಕಾರಜನ್ಯದ್ವಿಜತ್ವ ಲಾಭವಿಲ್ಲ. ಮನುಸ್ಮೃತಿಯು ಮಾತ್ರ ಈ ವಿಚಾರದಲ್ಲಿ ಉದಾರ ಮನೋಭಾವ ತಳೆದಿದೆ [೧೦=೧೨೭] "ಶೂದ್ರನು ಪುಣ್ಯವನ್ನು ಸಂಪಾದಿಸಬೇಕಾದರೆ ದ್ವಿಜವರ್ಗವನ್ನು ಅನುಸರಿಸಬೇಕು. ಮಂತ್ರವಿಲ್ಲದೆ ಆತನು ನಿತ್ಯದ ಮಹಾಯಜ್ಞ ಮುಂತಾದುವುಗಳನ್ನು ಮಾಡಬಹುದು. ಮಂತ್ರವಿಲ್ಲದೆ ಮಾಡುವುದರಿಂದ ಅವುಗಳ ಫಲದಿಂದ ವಂಚಿತರಾಗಬೇಕೆಂದು ಅರ್ಥವಲ್ಲ. ಏಕೆಂದರೆ ಮೇಲಿನ ಮೂರು ವರ್ಣದ ಸ್ತ್ರೀಯರೂ ಕೂಡ ಈ ಕರ್ಮ (ಯಜ್ಞ) ಗಳನ್ನು ಮಂತ್ರರಹಿತರಾಗಿ ಆಚರಿಸುತ್ತಾರೆ. ಅನೇಕ ಸ್ಮೃತಿಕಾರರು ಶೂದ್ರರಿಗೆ ಮಂತ್ರರಹಿತ ಸಂಸ್ಕಾರಗಳ ಅನುಮತಿಯನ್ನು ನೀಡಿದ್ದಾರೆ, ವ್ಯಾಸನು ಹತ್ತು ಸಂಸ್ಕಾರಗಳನ್ನೂ ಇನ್ನಿತರರು ಇನ್ನೂ ಹೆಚ್ಚು ಸಂಸ್ಕಾರಗಳನ್ನೂ ಶೂದ್ರರಿಗೆ ಅನ್ವಯಿಸುತ್ತಾರೆ. ಶೂದ್ರಕಮಲಾಕರದಂತಹ ಗ್ರಂಥಗಳಲ್ಲಿ ಶೂದ್ರರ ಸಂಸ್ಕಾರಗಳ ಬಗೆಗೆ ಸ್ವಾರಸ್ಯಕರ ವಿವರಗಳನ್ನು ಕಾಣಬಹುದು.

ಸಂಸ್ಕಾರಗಳನ್ನು ಜನನಪೂರ್ವ, ಜನನಾನಂತರ ಉಪನಯನದ ತನಕ, ಉಪನಯನಾನಂತರ ಗೃಹಸ್ಥದೆಶೆಯ ಸಂಸ್ಕಾರಗಳು ಮತ್ತು ಮರಣೋತ್ತರ ಸಂಸ್ಕಾರಗಳೆಂದು ಸ್ಥೂಲವಾಗಿ ವಿಭಾಗಿಸಿಕೊಳ್ಳಬಹುದು. ಮುಖ್ಯ ಹದಿನಾರು ಸಂಸ್ಕಾರಗಳು ಈ ಮುಂದಿನಂತಿವೆ.

೧. (1) ಗರ್ಭಾಧಾನ, (2) ಪುಂಸವನ, ಸೀಮಂತೋನ್ನಯನ.

೨. (1) ಜಾತಕರ್ಮ, (2) ನಾಮಕರಣ, (3) ನಿಷ್ಕ್ರಮಣ, (4) ಅನ್ನಪ್ರಾಶನ, (5) ಚೂಡಾಕರಣ, (6) ಕರ್ಣವೇಧ, (7) ವಿದ್ಯಾರಂಭ ಅಥವಾ ಅಕ್ಷರಾರಂಭ.

೩. (1) ಉಪನಯನ, (2) ವೇದಾರಂಭ, (3) ಕೇಶಾಂತ, (4) ಸಮಾವರ್ತನ.

೪. (1) ವಿವಾಹ, [ಇಲ್ಲಿ ದೈನಂದಿನ ಷಟ್ ಕರ್ಮಗಳು], ಅವರವರ ವೃತ್ತಿಗಳು

೫. ಅಂತ್ಯೇಷ್ಟಿ-ಶ್ರಾದ್ಧ ಮತ್ತು ತತ್ ಸಂಬದ್ಧ ವಿಧಿಗಳು.

ಸಂಸ್ಕಾರಗಳ ಉದ್ದೇಶ ಮತ್ತು ಪರಮ ಪ್ರಯೋಜನವನ್ನು ಮನುವಾಕ್ಯಗಳಲ್ಲೇ ಉದಾಹರಿಸೋಣ :—

ವೈದಿಕೈಃ ಕರ್ಮಭಿಃ ಪುಣ್ಯೈರ್ನಿಷೇಕಾದಿ ರ್ದ್ವಿಜನ್ಮನಾಮ್ ।
ಕಾರ್ಯಃ ಶರೀರಸಂಸ್ಕಾರಃ ಪಾವನಃ ಪ್ರೇತ್ಯ ಚೇಹ ಚ ॥

ಗಾರ್ಭೈರ್ಹೋಮೈರ್ಜಾತಕರ್ಮ ಚೌಡಮೌಂಜೀನಿಬಂಧನೈಃ ।
ಬೈಜಿಕಂ ಗಾರ್ಭಿಕಂ ಚೈನೋ ದ್ವಿಜಾನಾಮಪಮೃಜ್ಯತೇ ॥
ಸ್ವಾಧ್ಯಾಯೇನ ವ್ರತೈರ್ಹೋಮೈಸ್ತ್ರೈವಿದ್ಯೇನೇಜ್ಯಯಾ ಸುತೈಃ ।
ಮಹಾಯಜ್ಞೈಶ್ಚ ಯಜ್ಞೈಶ್ಚ ಬ್ರಾಹ್ಮೀಯಂ ಕ್ರಿಯತೇ ತನುಃ ॥

ಮನು ೨. ೨೭, ೨೮.

ಸಂಸ್ಕಾರಗಳಲ್ಲಿ ದ್ವಿಜರಲ್ಲಿ ಉಪನಯನ, ವಿವಾಹ ಮತ್ತು ಅಂತ್ಯೇಷ್ಟಿಗಳು ಬಹು ಮುಖ್ಯವಾಗಿವೆ. ಏಕಜಾತರಲ್ಲಿ ವಿವಾಹ ಮತ್ತು ಅಂತ್ಯಕರ್ಮಗಳು ಅಷ್ಟೇ ಪ್ರಧಾನವಾಗಿವೆ.

ಹಿಂದೆ ಅನುಲೋಮವಿವಾಹಗಳು ಪ್ರಚಾರದಲ್ಲಿದ್ದು ಪ್ರತಿಲೋಮವಿವಾಹಗಳು ನಿಷಿದ್ಧವಾಗಿದ್ದವು. ನಿಯೋಗವೆಂಬ ಆಪತ್ಕಾಲದ ಪುತ್ರಪ್ರಜನನ ಪದ್ಧತಿಗೆ ವಿರೋಧ ಸಹಮತ ಅಲ್ಲಲ್ಲಿ ಕಂಡುಬರುತ್ತದೆ.

ವೃತ್ತಿಗಳು :—ವಿವಿಧ ವರ್ಣಗಳವರ ವೃತ್ತಿಗಳನ್ನು ಕುರಿತು ಧರ್ಮಶಾಸ್ತ್ರಗಳಲ್ಲಿ ವಿವರಣೆಯಿದೆ. ಬ್ರಾಹ್ಮಣನಿಗೆ ಯಜನ, ಯಾಜನ, ಅಧ್ಯಯನ–ಅಧ್ಯಾಪನ, ದಾನ-ಪ್ರತಿಗ್ರಹಗಳು ಮುಖ್ಯ ವೃತ್ತಿಗಳು. [ಮನು ೧ ೮೮ ; ೧೦ ೭೫] ಪರಾಶರರು 'ಷಟ್ಕರ್ಮಸಹಿತನಾದ ವಿಪ್ರನು ಕೃಷಿ ಕರ್ಮವನ್ನು ಮಾಡಬಹುದು ೨.೨ ; ಅವನು ತಾನೇ ನೆಲವನ್ನು ಉತ್ತು ಹದಮಾಡಿ ತಾನೇ ಸಂಪಾದಿಸಿದ ಬೀಜಗಳನ್ನು ಬಿತ್ತಿ ಪಂಚಯಜ್ಞಗಳನ್ನು ಆಚರಿಸಬೇಕು [೨.೬.] ಆದರೆ ಸಾಮಾನ್ಯ ಸಂದರ್ಭದಲ್ಲಿ ವಿಪ್ರನು ತನಗೆ ವಿಹಿತ ಕರ್ಮಗಳನ್ನೇ ಮಾಡಬೇಕು. ಹಾಗಲ್ಲದೆ ಇತರರಿಗೆ ವಿಹಿತವಾದ ಕರ್ಮ (ಕೃಷ್ಯಾದಿ) ಗಳಿಗೆ ತೊಡಗಿದರೆ ಮಹಾದೋಷವೇ ಪ್ರಾಪ್ತವಾಗುವುದು' ಎಂದಿದ್ದಾರೆ. [೨.೮]

ಕ್ಷತ್ರಿಯ ಧರ್ಮವೇ ರಾಜಧರ್ಮ. ಈ ವಿಚಾರವನ್ನು ವ್ಯವಹಾರ ಕಾಂಡದಲ್ಲಿ ಪರಿಶೀಲಿಸಬೇಕಾಗುತ್ತದೆ.

ವೈಶ್ಯರಿಗೆ 'ಕೃಷಿ ಗೋರಕ್ಷ್ಯ ವಾಣಿಜ್ಯಂ ವೈಶ್ಯಕರ್ಮ ಸ್ವಭಾವಜಂ' ಎಂದು ಗೀತೆ ಹೇಳಿದರೆ, ಪರಾಶರರು 'ಲಾಭಕರ್ಮ ತಥಾ ರತ್ನಂ ಗವಾಂ ಚ ಪರಿಪಾಲನಂ । ಕೃಷಿಕರ್ಮ ಚ ವಾಣಿಜ್ಯಂ ವೈಶ್ಯವೃತ್ತಿರುದಾಹೃತಾ ॥ [೨.೬೩]' ಎಂದು ಮತ್ತೆ ಕೆಲಸವನ್ನು ಹೆಚ್ಚಿಸಿದ್ದಾರೆ.

ಶೂದ್ರನಿಗೆ 'ಶುಶ್ರೂಷಾ ಶೂದ್ರಸ್ಯ', ಮತ್ತು 'ಪರಿಚರ್ಯಾತ್ಮಕಂ ಕರ್ಮ'ವೆಂಬುದಾಗಿ ಧರ್ಮಶಾಸ್ತ್ರ, ಭಗವದ್ಗೀತಾದಿಗಳಲ್ಲಿ ವಿಹಿತವಾಗಿರುವುದಕ್ಕೆ ಪರಾಶರರು ಲವಣ, ದಧಿ, ತೈಲ, ತಕ್ರ, ಘೃತ, ಕ್ಷೀರ ಮುಂತಾದುವನ್ನು ವಿಕ್ರಯ ಮಾಡಬಹುದೆಂದೂ ಸೇರಿಸಿದ್ದಾರೆ. ಕೌಟಿಲ್ಯನ ಅರ್ಥಶಾಸ್ತ್ರದ ಕಾಲಕ್ಕೆ ಶೂದ್ರನು ವಾರ್ತಾ ಎಂದರೆ ವ್ಯವಸಾಯ, ಕೈಗಾರಿಕೆ ಮತ್ತು ವ್ಯಾಪಾರ

ಗಳನ್ನು ಮಾಡಬಹುದಲ್ಲದೆ 'ಕಾರುಕುಶೀಲನ' ಕರ್ಮಗಳನ್ನೂ ಸಹ ಮಾಡಬಹುದೆಂದು ನಿರೂಪಿಸಲಾಗಿದೆ. ಹೀಗೆ ಆಯಾ ವರ್ಣೀಯರಿಗೆ ಉತ್ತಮವಾಗಿದ್ದ ಕರ್ಮಗಳು ಕಾಲಕಾಲಕ್ಕೆ ಮಾರ್ಪಡುತ್ತಾ ಬಂದಿವೆ. ಇತ್ತೀಚಿನ ದಿನಗಳಲ್ಲಿ ಆಧುನಿಕ ನ್ಯಾಯವು ಎಲ್ಲರಿಗೂ ಎಲ್ಲ ಕರ್ಮಗಳ ಹಕ್ಕನ್ನು ಕೊಡುವುದು ಶಾಸನ ಬದ್ಧವಾಗುತ್ತಿದೆ.

ಧರ್ಮಶಾಸ್ತ್ರವಿಹಿತ ವಿಧಿಗಳನ್ನು ಆಚರಿಸಲು ಮೊದಲು ಧರ್ಮಶಾಸ್ತ್ರಗಳೇ ಘೋಷಿಸಿದ್ದ ದೇಶವು ವ್ಯಾಪಕವಾಗುತ್ತಾ ಬಂದು ಕೊನೆಗೆ ಸಮುದ್ರಯಾನ ಮಾಡಬಾರದು-ಸಮುದ್ರದಾಚೆ ಯಲ್ಲಿ ಈ ಕರ್ಮಾನುಷ್ಠಾನಕ್ಕೆ ಯೋಗ್ಯ ಸನ್ನಿವೇಶವೊದಗಲಾರದೆಂದೂ-ಆದರೂ ಹಾಗಾದ ಪಕ್ಷಕ್ಕೆ ಸೇತುದರ್ಶನವು ಆ ಪಾಪಪರಿಹರಿಸುವುದೆಂದೂ ವಿನಾಯಿತಿಯು ಕಲ್ಪಿತವಾಯಿತು.

## ವ್ಯವಹಾರ

ಸ್ಮೃತ್ಯುಕ್ತ ಧರ್ಮಗಳಲ್ಲಿ ವ್ಯವಹಾರಭಾಗವು ಆಚಾರಕಾಂಡದೊಳಗೆ ಪ್ರಮುಖವಾದುದು. ಲೌಕಿಕ ವ್ಯವಹಾರಕ್ಕಂತೂ ಅದಕ್ಕೇ ಬಹು ಮುಖ್ಯ. ಈ ಮೊದಲು ತಿಳಿಸಿದಂತೆ ಜನಸಾಮಾನ್ಯ ರನ್ನು ತಹಬಂದಿಯಲ್ಲಿಟ್ಟುಕೊಳ್ಳಲು 'ದಂಡಧರ' ನಾದ ರಾಜನೇ ಯೋಗ್ಯ ವ್ಯಕ್ತಿ. ಆದ್ದರಿಂದ ರಾಜಧರ್ಮ ಹೇಳುವುದೆಂದರೆ ವ್ಯವಹಾರಧರ್ಮ ವಿವರಣೆ ಎಂತಲೇ ಅರ್ಥ. ಮನುಧರ್ಮ ಶಾಸ್ತ್ರದ ಏಳು ಮತ್ತು ಎಂಟನೆಯ ಅಧ್ಯಾಯಗಳಲ್ಲಿ ಬಹಳ ವಿವರವಾಗಿ ರಾಜಧರ್ಮದ ನಿರೂಪಣೆಯಿದೆ.

ಯಾಜ್ಞವಲ್ಕ್ಯ ಸ್ಮೃತಿಯ ವ್ಯವಹಾರ ಕಾಂಡದ ಪ್ರಥಮ ಶ್ಲೋಕವಿದು–

ವ್ಯವಹಾರಾನ್ ನೃಪಃ ಪಶ್ಯೇತ್ ವಿದ್ವದ್ಭಿಃ ಬ್ರಾಹ್ಮಣೈಃ ಸಹ ।
ಧರ್ಮಶಾಸ್ತ್ರಾನುಸಾರೇಣ ಕ್ರೋಧಲೋಭವಿವರ್ಜಿತಃ ॥

ಸ್ಮೃತಿಗಳ ಪ್ರಕಾರ ನ್ಯಾಯದಾನವನ್ನು ರಾಜ ಮಾಡಬೇಕಾಗಿತ್ತು. ಆದರೆ ನ್ಯಾಯ ನಿರ್ಣಯಕ್ಕೆ ವೇದ ಧರ್ಮಶಾಸ್ತ್ರ ಪಾರಂಗತರೂ ಸತ್ಯವಾದಿಗಳೂ ನಿಷ್ಪಕ್ಷ ಪಾತಿಗಳೂ ಆದ ವಿದ್ವಜ್ಜನರ ಪರಿಷತ್ತು ಇರುತ್ತಿತ್ತು. ಇದರ ಸದಸ್ಯ ಸಂಖ್ಯೆಯಲ್ಲಿ ವಿವಿಧ ಅಭಿಪ್ರಾಯಗಳಿವೆ. [ಮಿತಾಕ್ಷರಾ. ಯಾಜ್ಞವಲ್ಕ್ಯ. ೨. ೨.] ರಾಜನು ಗೌರವಸ್ಥರೂ, ಐಶ್ವರ್ಯವಂತರೂ, ಮತ್ತು ಉತ್ತಮ ಮನೆತನದವರೂ ಆದ ವೃದ್ಧ ವ್ಯಾಪಾರಿಗಳನ್ನು ನ್ಯಾಯಕ್ಕೆ ಆಹ್ವಾನಿಸಬೇಕೆಂದು ಕಾತ್ಯಾಯನನು ಹೇಳಿದ್ದಾನೆ. ರಾಜನು ತನ್ನ ಗೈರುಹಾಜರಿಯಲ್ಲಿ ಒಬ್ಬ ನ್ಯಾಯಾಧೀಶನನ್ನು ನೇಮಿಸಬಹುದಾಗಿತ್ತು. ಸಣ್ಣ ಪುಟ್ಟ ಗ್ರಾಮಗಳಲ್ಲಿ ರಾಜನಿಂದ ನೇಮಿಸಲ್ಪಟ್ಟ ನ್ಯಾಯಧೀಶ ರಿರುತ್ತಿದ್ದರು. ಇದಲ್ಲದೆ ಮಂಡಲಿಗಳ ಅಭಿಪ್ರಾಯಾನುಸಾರ ರಚಿತವಾದ ಪೂಗ, ಶ್ರೇಣಿ, ಕುಲ ಎಂಬ ವಿಚಾರ ಸಮಿತಿಗಳ ಕಾರ್ಯಗಳನ್ನು ಪರಿಶೀಲಿಸುತ್ತಿತ್ತು. ಆಗ ಸಿವಿಲ್ ಮತ್ತು ಕ್ರಿಮಿನಲ್ ನ್ಯಾಯಾಲಯಗಳು ಒಂದೇ ಆಗಿದ್ದುವು. ಪ್ರತಿಯೊಂದು ನ್ಯಾಯಾಲಯದಲ್ಲಿ ಗಣಕ, ಲೇಖಕ

ಮತ್ತು ಸಾಧ್ಯಪಾಲಿ ಎಂಬ ಮೂವರು ಅಧಿಕಾರಿಗಳನ್ನು ನೇಮಿಸಲಾಗಿತ್ತು. ಪ್ರತಿಯೊಂದು ವ್ಯವಹಾರ ನಿರ್ಣಯವೂ ನಾಲ್ಕು ಹಂತಗಳನ್ನು ಹಾಯ್ದು ಮುಂದುವರಿಯ ಬೇಕಾಗಿತ್ತು. ಈಗಿನ ವ್ಯವಹಾರದಲ್ಲಿ ವಾದಿ, ಪ್ರತಿವಾದಿ, ಸಾಕ್ಷಿ ವಿಚಾರಣೆ ಮತ್ತು ತೀರ್ಮಾನವೆಂದು ಹೇಳ ಬಹುದಾದ ಪ್ರತಿಜ್ಞಾ, (Complant), ಉತ್ತರ(writtein statement), ಸಂಶಯ ಹೇತು ಪರಾಮರ್ಶ (Weighing of evidence) ಮತ್ತು ನಿರ್ಣಯ ಪ್ರಮಾಣ (Final conclusion) ಎಂದು ವಿಭಾಗಿಸಲ್ಪಟ್ಟಿದ್ದವು.

ಪ್ರಮಾಣವು ದ್ವಿವಿಧ, ಮಾನುಷ (Human) ಮತ್ತು ದೈವಿಕ D(ivine). ಮಾನುಷ ಪ್ರಮಾಣವು ದೊರೆಯದಿದ್ದ ಪಕ್ಷಕ್ಕೆ ದೈವಿಕ ಪ್ರಮಾಣವನ್ನು ಪಡೆಯುತ್ತಿದ್ದರು.

ವ್ಯವಹಾರವು ಹದಿನೆಂಟು ಬಗೆಯಂದು (ಅಷ್ಟಾದಶವ್ಯವಹಾರ ಪದಾನಿ—೧) ಋಣಾ ದಾನ (Debt) ೨) ನಿಕ್ಷೇಪ (Bailment) ೩ ಅಸ್ವಾಮಿವಿಕ್ರಯಃ (Selling property without title ೪) ಸಂಭೂಯ ಸಮುತ್ಥಾನ. (Partnership) ೫) ದತ್ತ-ಅನಪಾಕರ್ಮ–[Nondelivery of gift] ೬) ವೇತನಾದಾನ (Nonpayment of wages) ೭) ಸಂವಿದ್‌ವ್ಯತಿಕ್ರಮ [Breach of contract ಒಪ್ಪಂದವನ್ನು ಮುರಿಯುವುದು] ೮–ಕ್ರಯ ವಿಕ್ರಯ Sale and purchase ೯. ಸ್ವಾಮಿಪಾಲ ವಿವಾದ (Dispute between Master and Servant) ೧೦. ಸೀಮಾ ವಿವಾದ (Boundary dispute) ೧೧. ದಂಡಪಾರುಷ್ಯ (Assault) ೧೨. ವಾಕ್ ಪಾರುಷ್ಯ (Libel) ೧೩. ಸ್ತೇಯ (Theft) ೧೪. ಸಾಹಸ (Voilence) ೧೫. ಸ್ತ್ರೀ ಸಂಗ್ರಹಣ (Abduction) ೧೬. ಸ್ತ್ರೀಪುಂಧರ್ಮ (ಪತಿಪತ್ನೀ ವ್ಯವಹಾರ) Relation between Husbuad and wife) ೧೭. ವಿಭಾಗ Partition and Succession ಆಸ್ತಿವಿಭಾಗ ಮತ್ತು ಉತ್ತರಾಧಿಕಾರ) ೧೮. ದ್ಯೂತ ಸಮಾಹ್ವಯ (Gambling) [ಮನು ೮.೪.೭. ಯಜ್ಞವಲ್ಕ್ಯ–೨ಃ ಪ್ರಕರಣ ೭–೨೪]

ವ್ಯವಹಾರ ಕಾಂಡವು ಭಾರತೀಯ 'ನ್ಯಾಯಂದಾನ'ದ ಉಗಮ ಮತ್ತು ವಿಕಾಸದ ಬಗೆಗೆ ಸಂಪೂರ್ಣ ಮಾಹಿತಿಯನ್ನೀಯುತ್ತದೆ. ಇಂದಿನ ಸಿವಿಲ್ ನ್ಯಾಯಾಸ್ಥಾನಗಳಲ್ಲಿ ಜರುಗುವ ನಾಯ್ಯದಾನದ ಪದ್ಧತಿಗೂ ನಮ್ಮ ಪ್ರಾಚೀನ ಭಾರತದ ನ್ಯಾಯಂದಾನ ಪದ್ಧತಿಗೂ ತುಂಬಾ ಹೋಲಿಕೆಯಿದೆ. ಎಂದರೆ ನಮ್ಮ ಧರ್ಮಶಾಸ್ತ್ರಕಾರರು ಎಷ್ಟರ ಮಟ್ಟಿನ ದೂರದೃಷ್ಟಿ ಮತ್ತು ವೈಜ್ಞಾನಿಕ ಮನೋಭಾವವುಳ್ಳವರೆಂಬುದನ್ನು ನಾವು ಮನಗಾಣಬಹುದು. ಇಂದಿನ 'Hindu code' ಅಥವಾ Hindu Law ಓದುವವರು ಭಾರತೀಯ ನ್ಯಾಯಾಂಗದ ಉಗಮ ವಿಕಾಸಗಳನ್ನು ಧರ್ಮಶಾಸ್ತ್ರ ಗ್ರಂಥಗಳಲ್ಲಿ ಕಾಣಬಹುದು. ವಾಕ್ ಪಾರುಷ್ಯ, ದಂಡಪಾರುಷ್ಯ,

ಸ್ತೇಯ ಮತ್ತು ಸ್ತ್ರೀಸಂಗ್ರಹಣ ಎಂಬ ನಾಲ್ಕು ಭಾಗಗಳು ಭಾರತೀಯ ಅಪರಾಧಶಾಸ್ತ್ರ (Criminology)ವನ್ನು ಅಭ್ಯಸಿಸುವವರಿಗೆ ಅತ್ಯಮೂಲ್ಯವಾದ ಮಾಹಿತಿಯನ್ನೀಯುತ್ತೇವೆ.

ಪ್ರಾಯಶ್ಚಿತ್ತ :—ಪ್ರಾಯಶ್ಚಿತ್ತ ಎಂದರೆ ಪಶ್ಚಾತ್ತಾಪವನ್ನು ಹೊಂದಿದ ಮನಸ್ಸು ಎಂದರ್ಥ.

ಪ್ರಾಯೋ ನಾಮ ತಪ- ಪ್ರೋಕ್ತಂ ಚಿತ್ತಂ ನಿಶ್ಚಯಂ ಉಚ್ಯತೇ ।

ತಪೋನಿಶ್ಚಯಸಂಯುಕ್ತಂ ಪ್ರಾಯಶ್ಚಿತ್ತಮಿತಿಸ್ಮೃತಂ ॥ ಮನು ೧೧. ೪೪

ವ್ಯಕ್ತಿಯೊಬ್ಬನು ತನ್ನ ವಯಸ್ಸು, ಕೌಟುಂಬಿಕ ಹಾಗೂ ಸಾಮಾಜಿಕಸ್ಥಾನವನ್ನರಿತ ಕೊಂಡು ತನಗೆ ವಿಧಿಸಿರುವ ಕರ್ಮಗಳನ್ನು ಔದಾಸೀನ್ಯದಿಂದ ತ್ಯಜಿಸುವುದು ; ಮಾಡಬಾರದ ಕೆಲಸವನ್ನು ಬೇಕಂತಲೇ ಮಾಡುವುದು ; ಹಾಗೂ ಇಂದ್ರಿಯ ಚಾಪಲ್ಯಕ್ಕೆ ಒಳಗಾಗಿ ಇಂತಹ ಕೆಲಸಗಳನ್ನು ಮಾಡುವುದು ; ಇಂತಹ ತಪ್ಪುಗಳನ್ನು ಸಮಾಜವಾಗಲೀ ರಾಜನಾಗಲೀ ಶಿಕ್ಷಿಸದೆ ಹೋಗಬಹುದು. ಕೆಲವು ವೇಳೆ ಇವು ಗೋಪ್ಯವಾಗಿ ನಡೆಯಬಹುದು. ಆದ್ದರಿಂದ ಇಂತಹ ವ್ಯಕ್ತಿಯೊಬ್ಬನಿಗೆ ಆತ್ಮಶುದ್ಧಿಗಾಗಿ ಹೇಳಿರುವ ವಿಧಿಗಳೇ ಪ್ರಾಯಶ್ಚಿತ್ತಗಳು. ಆದ್ದರಿಂದ ಮನುಸ್ಮೃತಿ ಮತ್ತು ಯಾಜ್ಞವಲ್ಕ್ಯ ಸ್ಮೃತಿಗಳಲ್ಲಿ, ಗೌತಮ, ಬೋಧಾಯನ, ಆಪಸ್ತಂಭ. ವಸಿಷ್ಠಧರ್ಮಸೂತ್ರಗಳಲ್ಲೂ ಸಹ ಈ ವಿಚಾರವನ್ನು ವಿವರಿಸಲಾಗಿದೆ. ಧರ್ಮಸೂತ್ರ ಮತ್ತು ಸ್ಮೃತಿಗಳಲ್ಲಿ ಇದೇ ಒಂದು ವಿಶಿಷ್ಟಕಾಂಡ. ಭಾಗ ಅಥವಾ ಅಧ್ಯಾಯ.

ಪಾತಕಗಳಲ್ಲಿ ಬ್ರಹ್ಮಹತ್ಯೆ, ಸುರಾಪಾನ, ಸ್ತೇಯ, ಗುರುತಲ್ಪಗಮನ ಇವುಗಳು ಮಹಾ ಪಾತಕಗಳು. ಇಂತಹ ಪಾತಕಿಗಳ ಸಹವಾಸ ಮಾಡುವವನೂ ಮಹಾ ಪಾತಕಿಯಾಗುತ್ತಾನೆ. ಇಂತಹವರಿಗೆ ವಿಧಿಸಿರುವ ಶಿಕ್ಷೆ ಹೇಳಲೂ ಭಯಂಕರವಾಗಿವೆ, ಯಾಜ್ಞವಲ್ಕ್ಯಸ್ಮೃತಿಯಲ್ಲಿ ಇಂತಹವರಿಗೆ ಇಪ್ಪತ್ತೊಂದು ವಿಧವಾದ ನರಕಗಳನ್ನು ಹೇಳಲಾಗಿದೆ. ಇಂತಹ ನರಕಯಾತನೆ ಭಯದಿಂದಲಾದರೂ ಮಾನವನು ತನ್ನ ಇಂದ್ರಿಯಗಳ ಮೇಲೆ ಕಡಿವಾಣ ಹಾಕ ಬೇಕಾಗುತ್ತದೆ.

ಪ್ರಾಯಶ್ಚಿತ್ತಗಳಲ್ಲಿ ದೈಹಿಕ ಪ್ರಾಯಶ್ಚಿತ್ತಗಳಲ್ಲದೆ ಜಪ,ತಪಾದಿಗಳು,ಕೃಚ್ಛ್ರ, ಅತಿಕೃಚ್ಛ್ರ. ಪರಾಕ, ಚಾಂದ್ರಾಯಣ ಮುಂತಾದುವನ್ನು ಹೇಳಲಾಗಿದೆ. ಇವುಗಳು ಅಷ್ಟು ಕ್ರೂರವಲ್ಲ ವಾದರೂ ಆಚರಿಸುವುದು ಕಷ್ಟಸಾಧ್ಯವಾಗುತ್ತದೆ. ಪ್ರಾಣದಂಡನೆಯೇ ಪರಮಗುರಿಯಾಗಿರದ, ವ್ಯಕ್ತಿಯೊಬ್ಬನು ತಾನೇ ತನ್ನ ತಪ್ಪನ್ನು ತಿಳಿದುಕೊಂಡು ಉಪವಾಸಾದಿಗಳಿಂದ ಆತ್ಮಶುದ್ಧಿ ಮಾಡಿಕೊಳ್ಳುವ ಈ ವಿಧದ ದಂಡನೆ. ಮರಣದಂಡನೆಯನ್ನು ಯಾವ ಸಂದರ್ಭದಲ್ಲೇ ಆಗಲಿ ವಜಾ ಮಾಡಬೇಕೆನ್ನುವ ಆಧುನಿಕ ಧೋರಣೆಗೆ ನಮ್ಮ ಪ್ರಾಚೀನರಿತ್ತ ವೈಜ್ಞಾನಿಕ ಉತ್ತರ ರೂಪವಾಗಿದೆ.

ನಿಬಂಧಗಳಲ್ಲಿ ಅದರಲ್ಲಿಯೂ ಮುಖ್ಯವಾಗಿ ಭವದೇವಭಟ್ಟನ "ಪ್ರಾಯಶ್ಚಿತ್ತಪ್ರಕರಣ, ಶೂಲಪಾಣಿಯ 'ಪ್ರಾಯಶ್ಚಿತ್ತವಿವೇಕ', ರಘುನಂದನನ ಕೃತಿಗಳಲ್ಲಿ ಮಹಾಪಾತಕಗಳು, ಉಪಪಾತಕಗಳು ಮುಂತಾದವುಗಳ ವೈಜ್ಞಾನಿಕ ವಿವೇಚನೆಯಿದೆ. ಹತ್ಯೆ, ಅಭಕ್ಷ್ಯಭಕ್ಷಣ, ಅಗಮ್ಯಗಮನ (ವ್ಯಭಿಚಾರ) ಇತ್ಯಾದಿಗಳ ವಿವರ ಇವುಗಳಲ್ಲಿದೆ. ವ್ಯಕ್ತಿಯ ವಯಸ್ಸು, ಸಮಾಜದಲ್ಲಿ ಸ್ಥಾನ, ಕಂಡು ಮಾಡಿದ್ದೇ ಅಥವಾ ಕಾಣದೆ ಮಾಡಿದ್ದೇ ಎಂಬುವನ್ನು ಪರಿಶೀಲಿಸಿ ಹೆಂಗಸು ಮಕ್ಕಳು ಮುಂತಾದವರು ಮಾಡಿದ್ದರೆ, ಶಿಕ್ಷೆಯನ್ನು ಅರ್ಧಕ್ಕೆ ಇಳಿಸಿ, ಪ್ರಾಯಶ್ಚಿತ್ತವನ್ನು ವಿಧಿಸಲಾಗಿದೆ.

ಪ್ರಾಯಶ್ಚಿತ್ತವನ್ನು ಕುರಿತು ನೂರಾರು ನಿಬಂಧಗಳು ರಚಿತವಾಗಿ, ಕೆಲವು ಮುದ್ರಿತವಾಗಿ ಇತ್ತೀಚಿನವರೆಗೂ ಪ್ರಚಾರದಲ್ಲಿದ್ದವು. ಮಾನವ ಕಂಡೋ ಕಾಣದೆಯೋ ತನ್ನ ದೈನಂದಿನ ಕರ್ತವ್ಯಗಳಲ್ಲಿ ಲೋಪ ಮಾಡುತ್ತಿರುತ್ತಾನೆ. ಆದ್ದರಿಂದ ಪ್ರತಿಯೊಂದಕ್ಕೂ ಸಹ ಪ್ರಾಯಶ್ಚಿತ್ತವನ್ನು ಸ್ವ ಇಚ್ಛೆಯಿಂದ ಮಾಡಿಕೊಳ್ಳುವುದು ಆತ್ಮಶುದ್ಧಿಯ ಅತ್ಯುತ್ತಮ ಮಾರ್ಗ.

ಹೀಗೆ ಧರ್ಮಶಾಸ್ತ್ರಗಳಲ್ಲಿ ಆಚಾರ,ವ್ಯವಹಾರ ಮತ್ತು ಪ್ರಾಯಶ್ಚಿತ್ತಗಳೆಂಬ ಮೂರು ಮುಖ್ಯ ಭಾಗಗಳು ನಿರೂಪಿತವಾಗಿವೆ. ಪ್ರತಿಯೊಂದು ಭಾಗದಲ್ಲೂ ಸಂಪೂರ್ಣ ವಿವರಗಳಿವೆ. ಇವುಗಳಲ್ಲಿ ಧರ್ಮವೆಂದರೇನು, ಯಾರು ಧರ್ಮಜ್ಞರು ಧರ್ಮವನ್ನು ಏಕೆ ಆಚರಿಸಬೇಕು, ಹೇಗೆ ಆಚರಿಸಬೇಕು, ಬ್ರಹ್ಮಚಾರಿಯ ಕರ್ತವ್ಯಗಳು, ಅನಧ್ಯಯನ, ಸ್ನಾತಕನ ಧರ್ಮ, ಗೃಹಸ್ಥನ ಕರ್ಮ, ಪಂಚಯಜ್ಞಗಳು, ಷಟ್ಕರ್ಮಗಳು, ದಾನ, ಭಕ್ಷ್ಯಾಭಕ್ಷ್ಯವಿವೇಚನೆ ವಸ್ತುಶುದ್ಧಿ, ಆಶೌಚ, ಶ್ರಾದ್ಧ, ಸ್ತ್ರೀಧರ್ಮ, ರಾಜಧರ್ಮ, ವ್ಯವಹಾರ ಮತ್ತು ಅದರ ನಾನಾ ಉಪವಿಭಾಗಗಳು ಆಪದ್ಧರ್ಮ ಆತ್ಮನಿಗ್ರಹ, ಮೋಕ್ಷಸಾಧನೆಯ ಉಪಾಯ, ಪ್ರಾಯಶ್ಚಿತ್ತ, ಶಾಂತಿಕರ್ಮ ಮುಂತಾದುವುಗಳು ಮುಖ್ಯವಾದವುಗಳು.

ಆಚಾರ ವ್ಯವಹಾರವೇ ಒಂದು ಜನಾಂಗದ ಸಂಸ್ಕೃತಿ ; ರಾಜರುಗಳು, ಅವರು ಮಾಡಿದ ಯುದ್ಧಗಳು ಮತ್ತು ಇಸವಿಗಳಲ್ಲ. ಧರ್ಮಶಾಸ್ತ್ರ ಸಾಹಿತ್ಯವು ನಿಜಕ್ಕೂ ಭಾರತೀಯ ಸಂಸ್ಕೃತಿಯ ನೈಜ ಜೀವಂತ ಚಿತ್ರವನ್ನೀಯುವ ಚಿರಂತನ ಸಾಕ್ಷ್ಯವಾಗಿದೆ. ಅವುಗಳ ಅಧ್ಯಯನ, ಅಧ್ಯಾಪನ, ಪರಿಶೀಲನ ಪ್ರತಿಯೊಬ್ಬ ಭಾರತೀಯನ ಮತ್ತು ಇತಿಹಾಸಕಾರನ ಹೆಮ್ಮೆಯ ವಿಷಯವಾಗಬೇಕು.

ಸಾಮಾನ್ಯನೀತಿ :—ಇಲ್ಲಿಯ ತನಕ ನಾವು ವರ್ಣಗಳಿಗೆ, ಆಶ್ರಮಗಳಿಗೆ ಆಚಾರಾದಿಗಳನ್ನು ಧರ್ಮಶಾಸ್ತ್ರವು ಬೋಧಿಸುತ್ತದೆ ಎಂಬುದನ್ನು ಸ್ಥೂಲವಾಗಿಯಾದರೂ ತಿಳಿದುದಾಯಿತು. ಅವುಗಳೆಲ್ಲವೂ ವಿಶಿಷ್ಟ ಸಂದರ್ಭಗಳಲ್ಲಿ ವಿಶಿಷ್ಟ ವ್ಯಕ್ತಿಗಳಿಗೆ ಕಾಲ ದೇಶವನ್ನು ಕುರಿತು ಹೇಳಿದವುಗಳು. ಆದರೆ ಧರ್ಮಶಾಸ್ತ್ರವು ಎಲ್ಲರೂ ಯಾವಾಗಲೂ ಅನುಸರಿಸಬೇಕಾದ ಸಾಮಾನ್ಯಧರ್ಮ ಅಥವಾ

ಸಾಮಾನ್ಯ ನೀತಿ (Ethics)ಯನ್ನೂ ತಿಳಿಸುತ್ತದೆ. ಆ ವಿಚಾರವನ್ನು ಅತಿ ಸಂಕ್ಷೇಪವಾಗಿ ಇಲ್ಲಿ ಸೂಚಿಸಲಾಗಿದೆ.

ಇದ್ದದ್ದನ್ನು ಇದ್ದಂತೆಯೇ ಹೇಳುವ ಧೈರ್ಯ ಎಲ್ಲರಿಗೂ ಇರಬೇಕು. ಇರುವುದು ಎಂದರೆ ಸತ್. ಅದರ ಭಾವ ಸತ್ಯ. ಅದೇ ಋತ. ವಿರುದ್ಧವಾದುದು ಅಸತ್ಯ–ಅನೃತ. ಶಿಷ್ಯಾನುಶಾಸನದಲ್ಲಿ ಸತ್ಯಂ ವದ–ಸತ್ಯವನ್ನು ಹೇಳು ಎಂದು ಆಚಾರ್ಯನು ಸ್ನಾತಕನಿಗೆ ಬೀಳ್ಕೊಡುವ ದಿನ ಹೇಳಿ ಕಳುಹಿಸುತ್ತಾನೆ. ಅದೆಂತಹ ಸನ್ನಿವೇಶ

ಮಾನವ ಸುಳ್ಳನ್ನು ಹೇಳಿದರೆ ಅಪವಿತ್ರನಾಗುತ್ತಾನೆ. ಅಮೇಧ್ಯೋ ವೈ ಪುರುಷೋಯದ ನೃತಂ ವದತಿ । ಸವೈಸತ್ಯಮೇವ ವದೇತ್ (ಶತಪಥ ಬ್ರಾಹ್ಮಣ. ೧.೧.೧.೧. ಮತ್ತು ೧.೧.೧.೫.] ಮುಂಡಕೋಪನಿಷತ್ತು ಸತ್ಯಮೇವ ಜಯತೇ ನಾನೃತಂ ಎನ್ನುತ್ತದೆ. ಆದ್ದರಿಂದ ಸತ್ಯ ಮೊಟ್ಟ ಮೊದಲ ಸಾಮಾನ್ಯ ನೀತಿ. ಆದರೆ ಯಾವಾಗಲೂ ಸತ್ಯ ಹೇಳುತ್ತಿದ್ದವನು ಒಮ್ಮೆಯಾದರೂ ಯಾರಿಗಾದರೂ ಅಪ್ರಿಯನಾಗಬೇಕಾದೀತು. ಅದಕ್ಕಾಗಿ ಮನುವು [೪.೧೩೮]

ಸತ್ಯಂ ಬ್ರೂಯಾದ್ ಪ್ರಿಯಂ ಬ್ರೂಯಾತ್ ನ ಬ್ರೂಯಾತ್ ಸತ್ಯಮಪ್ರಿಯಂ ।
ಪ್ರಿಯಂ ಚ ನಾನೃತಂ ಬ್ರೂಯಾತ್ ಏಷ ಧರ್ಮಃ ಸನಾತನಃ ॥

ಎಂದು ತಿಳಿಸಿದ್ದಾನೆ.

ಧರ್ಮಂ ಚರತ ನಾಧರ್ಮಂ ಸತ್ಯಂ ವದತ ನಾನೃತಂ । ಗೌ.೩.೧
ತಸ್ಮಾತ್ ಸತ್ಯಂ ವದಂತಮಾಹುರ್ ಧರ್ಮಂ ವದತೀತಿ
ಧರ್ಮಂ ವಾ ವದಂತಂ ಸತ್ಯಂ ವದತೀತಿ ॥ ಬೃ.ಅ.ಉ.೧.೪೪

ಹೀಗೆ ಸತ್ಯವೇ ಧರ್ಮ ; ಧರ್ಮವೇ ಸತ್ಯ.

ದಯೆ ಮಾನವನಿಗೆ ಅತಿ ಮುಖ್ಯ ಗುಣವಾಗಿರಬೇಕು. ಬೃಹದಾರಣ್ಯಕವು 'ತಸ್ಮಾದೇ ತತ್ ತ್ರಯಂ ಶಿಕ್ಷೇತ್', ದಮಂ, ದಾನಂ, ದಯಾಮಿತಿ. 'ದಯೆಯಿಲ್ಲದಾ ಧರ್ಮವಾವುದಯ್ಯ' ಎಂಬ ಬಸವೇಶ್ವರರ ಉಕ್ತಿಯನ್ನು ಇಲ್ಲಿ ಜ್ಞಾಪಿಸಿಕೊಳ್ಳುವುದು. 'ಸರ್ವಭೂತದಯೆ' ನಮ್ಮ ಸಹಜ ಗುಣವಾಗಬೇಕು. ಮಹಾಭಾರತ ಶಾಂತಿ ಪರ್ವದಲ್ಲಿ [೧೬೨ ೨೧] 'ಅದ್ರೋಹಃ ಸರ್ವಭೂತೇಷು ಕರ್ಮಣಾ ಮನಸಾ ಗಿರಾ! ಅನುಗ್ರಹಶ್ಚ ದಾನಂ ಚ ಸತಾಂ ಧರ್ಮಃ 'ಸನಾತನ'ಃ ಎಂಬ ಉಕ್ತಿಯೂ (ಅದ್ರೋಹಃ) ಇದನ್ನೇ ಪುಷ್ಟೀಕರಿಸುತ್ತದೆ. ವಸಿಷ್ಠನು (೪.೪) ಸರ್ವೇಷಾಂ ಸತ್ಯಮಕ್ರೋಧೋ ದಾನಮಹಿಂಸಾ ಪ್ರಜನನಂ ಚ ॥ ಎಂದು ಸಕಲರಿಗೂ ಸಹ ಸತ್ಯ, ಶಾಂತಿ, ದಾನ, ಅಹಿಂಸೆಯನ್ನು ಬೋಧಿಸಿದ್ದಾನೆ.

ಇದನ್ನು ಸಾಧಿಸಲು ಇಂದ್ರಿಯ ನಿಗ್ರಹಬೇಕು. ನಮ್ಮ ಚಿತ್ತಚಾಂಚಲ್ಯವನ್ನು ನಾವು ನಿಗ್ರಹಿಸಬೇಕು. ಸಹನೆ, ಖಂಜುತೆ ನಮ್ಮದಾಗಬೇಕು. ನಮ್ಮ ವ್ಯೈಮನಗಳು ಶುದ್ಧವಾಗಿರ ಬೇಕು.

ಅಹಿಂಸಾ ಸತ್ಯಮಸ್ತೇಯಂ ಶೌಚಮಿಂದ್ರಿಯಸಂಯಮಃ ।

ದಯಃ ಕ್ಷಮಾರ್ಜವಂ ದಾನಂ ಸರ್ವೇಷಾಂ ಧರ್ಮಸಾಧನಂ ॥ ಯ. ಸ್ಮ. ೩ ೬೬.

ಮನುವು ಇದನ್ನು ಮೊದಲೇ ಒತ್ತಿ ಹೇಳಿದ್ದಾನೆ—

ಅಹಿಂಸಾ ಸತ್ಯಮಸ್ತೇಯಂ ಶೌಚಮಿಂದ್ರಿಯನಿಗ್ರಹಃ

ಏತಂ ಸಾಮಾಸಿಕಂ ಧರ್ಮಂ ಚಾತುರ್ವರ್ಣ್ಯೇಽಬ್ರವೀನ್ಮನುಃ ೧೦.೬೩.

ಮತ್ತೊಂದು ಕಡೆ ಹತ್ತು ವಿಧವಾಗಿದೆ ಧರ್ಮವೆನ್ನುವುದು, ೬.೯೨—

ಧೃತಿಃ ಕ್ಷಮಾ ದಮೋಽಸ್ತೇಯಂ ಶೌಚಮಿಂದ್ರಿಯನಿಗ್ರಹಃ ।

ಹ್ರೀಃ ವಿದ್ಯಾ ಸತ್ಯಮಕ್ರೋಧೋ ದಶಕಂ ಧರ್ಮಲಕ್ಷಣಂ ॥

ಮುಖ್ಯವಾಗಿ ಒಂದೇ ಮಾತಿನಲ್ಲಿ ದೇವಲ ಘೋಷಿಸಿದ್ದಾನೆ ; ಅದೇ ಧರ್ಮಸರ್ವಸ್ವ—

ಶ್ರೂಯತಾಂ ಧರ್ಮಸರ್ವಸ್ವಂ ಶ್ರುತ್ವಾ ಚೈವಾವಧಾರ್ಯತಾಮ್ ।

ಆತ್ಮನಃ ಪ್ರತಿಕೂಲಾನಿ ಪರೇಷಾಂ ನ ಸಮಾಚರೇತ್ ॥

ಇದಕ್ಕೆ 'ಪರೋಪಕಾರಃ ಪುಣ್ಯಾಯ ಪಾಪಾಯ ಪರಪೀಡನಂ ॥

ಎಂಬುದು ಸಂವಾದಿಯಾಗಿದೆ.

## ಧರ್ಮಶಾಸ್ತ್ರಸಾಹಿತ್ಯ

### (೧) ಧರ್ಮಸೂತ್ರಗಳು

ಧರ್ಮಸೂತ್ರಗಳ ಶೈಲಿ ಅಲ್ಪಾಕ್ಷರಪ್ರಧಾನ ಗದ್ಯ, ಗೌತಮ ಧರ್ಮಸೂತ್ರವು ಪೂರ್ಣಾಗದ್ಯಮಯ ಸೂತ್ರರೂಪದಲ್ಲಿದೆ. ಒಂದೆರಡು ಸೂತ್ರಗಳು ಅನುಷ್ಟುಭ್ ಶ್ಲೋಕಾರ್ಧ ಗಳಂತೆ ಕಂಡುಬರುತ್ತವೆ. ಆದರೆ ಭೌಧಾಯನ, ಆಪಸ್ತಂಬಾದಿಗಳಲ್ಲಿ ಅಲ್ಲಲ್ಲಿ ಪದ್ಯಗಳಿವೆ. ವಸಿಷ್ಠ ಮತ್ತು ವಿಷ್ಣುಧರ್ಮಸೂತ್ರಗಳಂತೂ ಪದ್ಯಸಂಖ್ಯೆಯನ್ನು ಪರಿಗಣಿಸಿದಾಗ ಸ್ಮೃತಿಗಳಂತೆ ಭಾಸವಾಗುತ್ತವೆ. ಗದ್ಯಮಯಸೂತ್ರಗಳ ಭಾಷೆ ಪುರಾತನರೂಪಗಳನ್ನು ಒಳಗೊಂಡಿದೆ. ಕೆಲವು ಸಂದರ್ಭಗಳಲ್ಲಿ ಪಾಣಿನಿಯ ವ್ಯಾಕರಣಕ್ಕೆ ವಿರುದ್ಧವಾದ ರೂಪಗಳು ಪ್ರಯೋಗಿಸಲ್ಪಟ್ಟಿವೆ.

ವಿಷಯ ವಿಂಗಡಣೆಯಲ್ಲಿ ಗೃಹ್ಯಸೂತ್ರಗಳಿಗೂ ಧರ್ಮಸೂತ್ರಗಳಿಗೂ ಹೆಚ್ಚು ಸಾಮೀಪ್ಯವಿದೆ. ಆದರೂ ವೈಜ್ಞಾನಿಕ ರೀತಿಯ ವಿಷಯ ವಿಭಜನೆ ಕಂಡುಬರುವುದಿಲ್ಲ. ಕಾಲದ ದೃಷ್ಟಿಯಿಂದಲೂ ಸಹ ಗೌತಮ, ಬೌಧಾಯನ, ಆಪಸ್ತಂಬಾದಿ ಧರ್ಮಸೂತ್ರಗಳು ಕ್ರಿ. ಪೂ. ೬೦೦ ರಿಂದ ೩೦೦ರ ಮಧ್ಯೆ ರಚಿತ ವಾದವುಗಳಾಗಿವೆ.

ಗೌತಮಧರ್ಮಸೂತ್ರ (ಕ್ರಿ. ಪೂ. ೬೦೦–೪೦೦) :— ಸಂಪೂರ್ಣವಾಗಿ ಗದ್ಯಮಯ ಸೂತ್ರಶೈಲಿಯ ಇದರಲ್ಲಿ ೨೮ ಅಧ್ಯಾಯಗಳೂ ೧೦೦೬ ಸೂತ್ರಗಳೂ ಇವೆ. ಧರ್ಮಸೂತ್ರ ಗ್ರಂಥಗಳಲ್ಲೆಲ್ಲಾ ಇದೇ ಪುರಾತನತಮವೆಂದು ಡಾ. ಪಿ. ವಿ. ಕಾಣೆಯವರ ಅಭಿಪ್ರಾಯ (ಹಿ. ಧ. ೨. ಪು. ೧೯). ಮೊದಲ ಸೂತ್ರ 'ವೇದೋ ಧರ್ಮಮೂಲಂ' ; ಕಟ್ಟಕಡೆಯ ಸೂತ್ರ "ಇತಿಧರ್ಮೋ ಧರ್ಮಃ' (೨೮–೫೫).

ಗೌತಮ ಧರ್ಮಸೂತ್ರದ ವಿಷಯಗಳನ್ನು ಈ ಮುಂದಿನಂತೆ ಸಂಗ್ರಹಿಸಬಹುದು. ೧. ಧರ್ಮದ ಆಕರಗಳು, ಉಪನಯನ, ಬ್ರಹ್ಮಚಾರಿವೇಷ, ಆಚಮನ ಮಂತ್ರ, ಶೌಚವಿಧಿ, ಗುರೂಪಸದನ, ಅಧ್ಯಯನಾರಂಭ, ಅನಧ್ಯಾಯ ೨, ಅನುಪನೀತಧರ್ಮ, ಉಪನೀತಧರ್ಮ, ಸಂಧ್ಯೋಪಾಸನ, ಶಿಷ್ಯಶಾಸನ, ಬ್ರಹ್ಮಚರ್ಯಕಾಲ, ಗುರುದಕ್ಷಿಣೆ, ಆಚಾರ್ಯಪ್ರಶಂಸೆ, ೩, ನಾಲ್ಕು ಆಶ್ರಮಗಳು, ನೈಷ್ಠಿಕಬ್ರಹ್ಮಚಾರಿ,ಭಿಕ್ಷು, ವೈಖಾನಸ. ೪. ಗೃಹಸ್ಥ, ವಿವಾಹ, ಎಂಟು ವಿವಾಹ ಭೇದಗಳು, ಸಂಕರಜಾತಿಗಳು. ೫. ಋತುಕಾಲದಲ್ಲಿ ಪತ್ನೀಗಮನ, ಪಂಚಮಹಾಯಜ್ಞಗಳು ದಾನಪ್ರಕರಣ, ಮಧುಪರ್ಕ, ಅತಿಥಿಪೂಜೆ. ೬. ಅಭಿವಾದನ, ಅಭ್ಯುತ್ಥಾನ, ಸಂಮಾನನ, ಪಥದಾನ(ಪ್ರಯಾಣನಿಯಮ). ೭. ಬ್ರಾಹ್ಮಣರ ವೃತ್ತಿಧರ್ಮ, ಆಪದ್ಧರ್ಮ, ದ್ರವ್ಯವಿನಿಮಯ. ೮. ಬ್ರಾಹ್ಮಣಪ್ರಶಂಸೆ, ನಾಲ್ವತ್ತು ಸಂಸ್ಕಾರಗಳು, ಅಷ್ಟ ಆತ್ಮಗುಣಗಳು. ೯. ಸ್ನಾತಕವ್ರತ. ೧೦. ಕ್ಷತ್ರಿಯಧರ್ಮ ಕರ–ಶುಲ್ಕನಿಯಮ, ವೈಶ್ಯಧರ್ಮ, ಶೂದ್ರಧರ್ಮ. ೧೧. ರಾಜಧರ್ಮ, ರಾಜಪುರೋಹಿತ ಲಕ್ಷಣ. ೧೨. ಸಾಹಸ (ಅತಿಕ್ರಮಣ), ಸಹಾಸನ, ವಾಕ್‌ಪಾರುಷ್ಯ, ಸ್ತೇಯ, ವ್ಯಭಿಚಾರ ಇತ್ಯಾದಿಗಳಿಗೆ ವರ್ಣಾನುಕ್ರಮದಲ್ಲಿ ದಂಡ (ಶಿಕ್ಷೆ), ವೃದ್ಧಿ (ಬಡ್ಡಿ) ವ್ಯವಸ್ಥೆ, ಉಪಭೋಗವ್ಯವಸ್ಥೆ, ಋಣಾಪಾಕರಣ (ಸಾಲತೀರ್ವೆ), ಸುವರ್ಣಸ್ತೇಯಕ್ಕೆ ಶಿಕ್ಷೆ. ೧೩. ಸಾಕ್ಷಿ ಪ್ರಕರಣ, ಶಪಥ (ಪ್ರಮಾಣ ಪೂರ್ವಕ ಹೇಳಿಕೆ), ಸಾಕ್ಷಿದೋಷ, ಪ್ರಾಡ್‌ವಿವಾಕ (ಧರ್ಮಾಧಿಕಾರಿ–ನ್ಯಾಯಮೂರ್ತಿ), ಕರ್ತವ್ಯ. ೧೪. ಆಶೌಚಪ್ರಕರಣ, ಆಶೌಚನಿಯಮ ೧೫. ಪಂಚವಿಧ ಶ್ರಾದ್ಧ–ನಿಯಂತ್ರಣಾರ್ಹ ಬ್ರಾಹ್ಮಣರು. ೧೬. ಉಪಾಕರ್ಮ, ಅನಧ್ಯಾಯ. ೧೭. ಭಕ್ಷ್ಯಾಭಕ್ಷ್ಯ ವಿವೇಕ. ೧೮. ಸ್ತ್ರೀಧರ್ಮ, ನಿಯೋಗ, ನಿಯೋಗದಿಂದ ಹುಟ್ಟಿದ ಪುತ್ರವಿಷಯಕ ನಿಯಮ, ಸ್ವಯಂವರ, ಕನ್ಯಾದಾನ ಕಾಲ. ೧೯. ಪ್ರಾಯಶ್ಚಿತ್ತಮೀಮಾಂಸೆ, ಜಪ–ತಪ–ದಾನ ಸ್ವರೂಪ, ಕಾಲ ಇತ್ಯಾದಿ. ೨೦. ಪತಿತರನ್ನು ತ್ಯಜಿಸುವುದು. ೨೧. ವಿವಿಧ ಪ್ರಕಾರದ ಪತಿತರು, ಮಹಾಪಾತಕ, ಉಪಪಾತಕ ಬ್ರಹ್ಮಹತ್ಯೆ, ಗುರುತಲ್ಪಗಮನ, ಅಗಮ್ಯಾಗಮನ, ಕ್ಷತ್ರಿಯ–ವೈಶ್ಯ–ಶೂದ್ರಾದಿಗಳ ವಧೆ, ಗೋಹತ್ಯೆ, ಅಯಾಜ್ಯಯಾಜನ ಇತ್ಯಾದಿಗಳಿಗೆ ಪ್ರಾಯಶ್ಚಿತ್ತ.

೨೩. ಸುರಾಪಾನ, ಅಮೇಧ್ಯಪಾನ, ವ್ಯಭಿಚಾರ, ಆಕ್ರೋಶ, ಅನೃತಾದಿಗಳಿಗೆ ಪ್ರಾಯಶ್ಚಿತ್ತ. ೨೪-೨೫. ಮಹಾಪಾತಕ ಮತ್ತು ಉಪಪಾತಕಗಳಿಗೆ ರಹಸ್ಯಪ್ರಾಯಶ್ಚಿತ್ತ. ೨೬. ಕೃಚ್ಛ್ರ ಮತ್ತು ಅತಿಕೃಚ್ಛ್ರವ್ರತ, ಚಾಂದ್ರಾಯಣವ್ರತ. ೨೮. ದಾಯವಿಭಾಗ-ಜ್ಯೇಷ್ಠಾಂಶ, ಸ್ತ್ರೀಧನ, ಸ್ವಾರ್ಜಿತವಿಭಾಗ, ದ್ವಾದಶಪುತ್ರರು, ಪರಿಷತ್ (ನ್ಯಾಯ ನಿರ್ಣಯ ಸಭೆ), ಧರ್ಮವಿದರಿಗೆ ಫಲಶ್ರುತಿ.

ಮೇಲಿನ ವಿಷಯ ಸಂಗ್ರಹವು ಮುಂದೆ ಸ್ಮೃತಿಗಳಲ್ಲಿ ವೈಜ್ಞಾನಿಕವಾಗಿ ವಿಂಗಡಿಸಲ್ಪಟ್ಟಿರುವ ಆಚಾರ, ವ್ಯವಹಾರ ಮತ್ತು ಪ್ರಾಯಶ್ಚಿತ್ತ ವಿಷಯಗಳನ್ನು ಒಳಗೊಂಡಿದ್ದರೂ ಸಹ ವಿಂಗಡಣೆ ಪರಿಷ್ಕೃತವಾಗಿಲ್ಲ. ಸಾಮಾನ್ಯವಾಗಿ ಧರ್ಮಶಾಸ್ತ್ರಕಾರರು ತಮ್ಮ ಪೂರ್ವದ ಧರ್ಮ ಪ್ರತಿಪಾದಕರನ್ನು ಸ್ಮರಿಸಿ ಹೆಸರಿಸುತ್ತಾರೆ. ಆದರೆ ಗೌತಮಧರ್ಮಸೂತ್ರದಲ್ಲಿ ಮನುವಿನ ಹೆಸರು ಮಾತ್ರ ಉಲ್ಲಿಖಿತವಾಗಿದೆ. 'ಏಕೇ' (ಕೆಲವರು), 'ಇತ್ಯಾಚಾರ್ಯಾಃ' ಎಂಬುದಾಗಿ ಇತರ ಧರ್ಮಶಾಸ್ತ್ರಕಾರರ ಅಭಿಪ್ರಾಯಗಳನ್ನು ಗೌತಮನು ಉದಾಹರಿಸಿದ್ದರೂ ಸಹ ಇವರು ಯಾರು ಎಂಬುದು ಗೊತ್ತಾಗುವುದಿಲ್ಲ. ಗೌತಮನು ಉತಥ್ಯನ ಮಗನೆಂದು ಮನುಸ್ಮೃತಿಯು (೩.೧೬) ತಿಳಿಸುತ್ತದೆ. ಹರದತ್ತನು ಈ ಸೂತ್ರಕ್ಕೆ ಮಿತಾಕ್ಷರಾ ಎಂಬ ವೃತ್ತಿಯನ್ನು ರಚಿಸಿದ್ದಾನೆ. ಮಸ್ಕರಿಯ ಭಾಷ್ಯವೂ ಪ್ರಕಾಶಿತವಾಗಿದೆ. ಅಸಹಾಯನು ರಚಿಸಿದ್ದ ಭಾಷ್ಯ ಉಪಲಬ್ಧವಾಗಿಲ್ಲ.

## ಬೋಧಾಯನ ಧರ್ಮಸೂತ್ರ (ಕ್ರಿ.ಪೂ. ೫೦೦-೨೦೦)

ಈ ಸೂತ್ರವು ಬೋಧಾಯನ ಧರ್ಮಸೂತ್ರವೆಂದೂ ಪ್ರಸಿದ್ಧಿಯಾಗಿದೆ. ಇದರಲ್ಲಿ ನಾಲ್ಕು ಪ್ರಶ್ನಗಳು, ಮೂವತ್ತೊಂಬತ್ತು ಅಧ್ಯಾಯಗಳು ಮತ್ತು ೧೨೫೯ ಸೂತ್ರ (ಗದ್ಯ-ಪದ್ಯ ಮಿಶ್ರ) ಗಳೂ ಇವೆ. ಈಗ ಉಪಲಬ್ಧವಿರುವ ಗ್ರಂಥದ ನಾಲ್ಕನೆಯ ಪ್ರಶ್ನಭಾಗವು ಪ್ರಕ್ಷಿಪ್ತವಾಗಿರ ಬಹುದೆನ್ನಲಾಗಿದೆ. [ಹಿ. ಧ. ೨. ಪು. ೨೩]. ಗ್ರಂಥವು ಮೊದಮೊದಲು ಗದ್ಯಮಯ ಸೂತ್ರ ಮತ್ತುಛಂದೋಮಯ ಸೂತ್ರಗಳ ಹಿತಮಿತ ಮಿಶ್ರಣದಿಂದ ಪ್ರಾರಂಭವಾದರೂ ಉತ್ತರೋತ್ತರ ಪದ್ಯಗಳೇ ಹೇರಳವಾಗಿವೆ. ಗ್ರಂಥಬಂಧದಲ್ಲಿ ಶೈಥಿಲ್ಯವಿದೆಯೆಂದು ಭಾಷ್ಯಕಾರ ಗೋವಿಂದಸ್ವಾಮಿಯೇ 'ನನು ದ್ವಿಜಾತಿಷು ಸ್ವಕರ್ಮಸ್ಥೇಷು ಇತಿ ಸೂತ್ರಯಿತವ್ಯೇ ಕಿಮಿತಿ ಸೂತ್ರದ್ವಯಾರಂಭಃ ! ಸತ್ಯಂ, ಅಯಂ ಹ್ಯಾಚಾರ್ಯೋನಾತೀವ ಗ್ರಂಥಲಾಘವಾಭಿಪ್ರಾಯೋ ಭವತಿ' ಎಂದು ಟೀಕಿಸುತ್ತಾನೆ. ಬೌಧಾಯನನು ದಾಕ್ಷಿಣಾತ್ಯನೆಂಬ ಅಭಿಪ್ರಾಯಕ್ಕೆ ಹೆಚ್ಚು ಸಮರ್ಥನೆ ದೊರೆಯುತ್ತದೆ.

ಈ ಧರ್ಮ ಸೂತ್ರದ ವಿಷಯವನ್ನು ಈ ಮುಂದಿನಂತೆ ಸಂಗ್ರಹಿಸಬಹುದು. ಪ್ರಥಮ ಪ್ರಶ್ನ ಅಧ್ಯಾಯ ೧. ಧರ್ಮದ ಆಕರಗಳು, ಶಿಷ್ಯರು, ಪರಿಷತ್ ಉತ್ತರ ಮತ್ತು ದಕ್ಷಿಣ ಭಾರತದ ಪದ್ಧತಿಗಳ ಭೇದ. ಶಿಷ್ಟ ದೇಶಗಳು, ಮ್ಲೇಚ್ಛ ದೇಶಗಳು ಮತ್ತು ಅಲ್ಲಿಗೆ ಹೋದವರಿಗೆ

ಪ್ರಾಯಶ್ಚಿತ್ತ. ೨. ಬ್ರಹ್ಮಚರ್ಯ, ಉಪನಯನ, ಬ್ರಹ್ಮಚಾರಿಧರ್ಮ ಪ್ರಶಂಸೆ. ೩. ಸ್ನಾತಕ ಧರ್ಮ. ೪. ಕಮಂಡಲುಚರ್ಯೆ. ೫. ಅಂತಶ್ಶುದ್ಧಿ, ಬಹಿಃಶುದ್ಧಿ, ಆಚಮನ, ದ್ರವ್ಯಶುದ್ಧಿ, ಅಶೌಚ, ನಾಯಿ ಮುಟ್ಟಿದ್ದಕ್ಕೆ ಶುದ್ಧಿ, ಭಕ್ಷ್ಯಾಭಕ್ಷ್ಯವಿಚಾರ. ೬. ಕ್ರತ್ವರ್ಥಶುದ್ಧಿ. ೭. ಕ್ರತ್ವರ್ಥ ವಿಶೇಷ. ೮. ವರ್ಣವ್ಯವಸ್ಥೆ. ೯. ಮಿಶ್ರಜಾತಿಗಳು. ೧೦. ರಾಜಧರ್ಮ. ೧೧. ವಿವಾಹ, ಅನಧ್ಯಾಯ.

ದ್ವಿತೀಯ ಪ್ರಶ್ನ. ಅಧ್ಯಾಯ ೧. ಮಹಾಪಾತಕ ಪ್ರಾಯಶ್ಚಿತ್ತ, ಬ್ರಹ್ಮಚರ್ಯಾತಿಕ್ರಮ ಪ್ರಾಯಶ್ಚಿತ್ತ, ಸಗೋತ್ರವಿವಾಹದೋಷ ಜ್ಯೇಷ್ಠನಿಗಿಂತ ಪೂರ್ವವಿವಾಹಪ್ರಾಯಶ್ಚಿತ್ತ, ಪತನೀಯ ಕರ್ಮಗಳು, ಉಪಪಾತಕಗಳು, ಅಶುಚಿಕರ ಆಚಾರಗಳು, ಪರಾಕ. ಕೃಚ್ಛ್ರ ಮತ್ತು ಅತಿ ಕೃಚ್ಛ್ರಪ್ರಾಯಶ್ಚಿತ್ತ ವಿವರಣೆ. ೨. ಗೃಹಸ್ಥಧರ್ಮ, ದಾಯವಿಭಾಗ, ಜ್ಯೇಷ್ಠಾಂಶ, ಪುತ್ರ ಪ್ರಕಾರಗಳು, ಸ್ತ್ರೀಪಾರತಂತ್ರ್ಯ ಅಗಮ್ಯಗಮನಕ್ಕೆ ಪ್ರಾಯಶ್ಚಿತ್ತ, ನಿಯೋಗ, ಆಪದ್ಧರ್ಮ. ೩. ಗೃಹಸ್ಥ ನಿಯಮಗಳು, ಸ್ನಾನ, ಆಚಮನ, ವೈಶ್ವದೇವ, ಬಲಿಹರಣ, ಗ್ರಾಮವಾಸ, ನಗರ ನಿಷೇಧ. ೪. ಸಂಧ್ಯೋಪಾಸನವಿಧಿ. ೫. ಸ್ನಾನವಿಧಿ, ದೇವರ್ಷಿಪಿತೃತರ್ಪಣ. ೬. ಪಂಚ ಮಹಾಯಜ್ಞಗಳು, ಆಶ್ರಮಗಳು, ಏಕಾಶ್ರಮ ವಿಚಾರ. ೭. ಭೋಜನವಿಧಿ. ೮. ಶ್ರಾದ್ಧ ಪ್ರಕರಣ. ೯. ಪ್ರಜಾಕಾಮೋಪದೇಶ–ಪುತ್ರಪ್ರಶಂಸೆ. ೧೦. ಸಂನ್ಯಾಸವಿಧಿ ತೃತೀಯ ಪ್ರಶ್ನೆ. ಅಧ್ಯಾಯ ೧. ಗೃಹಸ್ಥ ಭೇದಗಳು. ಶಾಲೀನ ಮತ್ತು ಯಾಯಾವರ : ಮತ್ತು ೨. ಅವರ ವೃತ್ತಿಗಳು ಷಟ್–ನಿವರ್ತನೀ. ೩. ವಾನಪ್ರಸ್ಥಭೇದ ಮತ್ತು ವೈಖಾನಸರ ದೀಕ್ಷೆಗಳು ೪. ಬ್ರಹ್ಮಚಾರಿ ಮತ್ತು ಗೃಹಸ್ಥಧರ್ಮಾತಿಕ್ರಮಣ ಪ್ರಾಯಶ್ಚಿತ್ತಗಳು. ೫. ಅಘಮರ್ಷಣ ಮಂತ್ರಪ್ರಯೋಗ. ೬. ಪಾಪನಿಬರ್ಹಣ (ಪರಿಹಾರ)ಕ್ಕಾಗಿ ಪ್ರಸೃತಯಾವಕವ್ರತ. ೭. ಅದೇ ಉದ್ದೇಶದ ಕೂಷ್ಮಾಂಡಹೋಮ, ಮತ್ತು ೮. ಚಾಂದ್ರಾಯಣವ್ರತ–ಫಲಶ್ರುತಿ ೯. ಅಶನವಿಲ್ಲದ ವೇದಪಾರಾಯಣವ್ರತ,–ಫಲಶ್ರುತಿ. ೧೦. ಯಾಪ್ಯಕರ್ಮಗಳು–ಅವುಗಳಿಂದ ಪುರುಷನಿಗೆ ಪಾಪ ಲೇಪ. ಪಾಪನಿಷ್ಕ್ರಯಣ ಜಪ-ತಪ-ಹೋಮ–ಉಪವಾಸ–ದಾನಗಳಿಂದ.

ನಾಲ್ಕನೆಯ ಪ್ರಶ್ನೆ, ಅಧ್ಯಾಯ ೧. ಅಭಕ್ಷ್ಯ ಭಕ್ಷಣ–ಅಪಾನಪಾನ ದೋಷಕ್ಕೆ ಪ್ರಾಯಶ್ಚಿತ್ತಗಳು. ೨. ಪಾತಕ (ದೋಷ) ಪರಿಹಾರಕ್ಕೆ ಪ್ರಾಣಾಯಾಮ ಮತ್ತು ಅಘಮರ್ಷಣ ಪ್ರಯೋಗ, ಪ್ರಾಣಾಯಾಮ, ಸರ್ವದೋಷೋಪಘಾತಕ. ೩. ರಹಸ್ಯ ಪ್ರಾಯಶ್ಚಿತ್ತಗಳು. ೪. ಪಾಪಮೋಚನಕ್ಕೆ ವೇದಮಂತ್ರಗಳು. ೫. ಜಪ, ಹೋಮ, ಇಷ್ಟಿ, ಯಂತ್ರ, ಇವುಗಳಿಂದ ಇಷ್ಟಸಿದ್ಧಿ, ಕೃಚ್ಛ್ರ, ಅತಿಕೃಚ್ಛ್ರ, ಸಾಂತಪನ, ಪರಾಕ ಮತ್ತು ಚಾಂದ್ರಾಯಣವ್ರತಗಳು. ಫಲಶ್ರುತಿ, ೬. ಪವಿತ್ರ ವೇದಮಂತ್ರಗಳ ಜಪ, ಪಾಪನಾಶಕ ಇಷ್ಟಿಗಳು. ೭. ಯಂತ್ರಪ್ರಶಂಸೆ, ಹೋಮಗಳಲ್ಲಿ ಪ್ರಯುಕ್ತವಾದ ವೈದಿಕಮಂತ್ರಯೋಜನೆ. ೮. ಅತಿಲೋಭದಿಂದ ಈ ಕ್ರಿಯೆ ಮಾಡುವವರಿಗೆ ಶಾಸ್ತಿ.

ಈ ಧರ್ಮಸೂತ್ರವನ್ನು ಪಠಿಸುವವರಿಗೆ ಗ್ರಂಥಪ್ರಾಂತ್ಯವನ್ನು ಪಠಿಸುವಾಗ ಪುರಾಣಗ್ರಂಥವೊಂದನ್ನು ಓದಿದ ಅನುಭವವಾಗುತ್ತದೆ. ಈ ಮಾತು ಅದರ ಶೈಲಿ ಮತ್ತು ಅಂತಿಮ ಅಧ್ಯಾಯಗಳ ವಿಷಯ ಪ್ರತಿಪಾದನೆಯನ್ನು ಕುರಿತಾಡಿದುದು. ಇಲ್ಲಿಯ ಪ್ರಪ್ರಥಮಸೂತ್ರ—

ಉಪದಿಷ್ಟೋ ಧರ್ಮಃ ಪ್ರತಿವೇದಂ ।

ಅಂತಿಮ ಸೂತ್ರಶ್ಲೋಕ

ದಶಾವರಂ ತಥಾ ಹೋಮಃ ಸರ್ಪಿಷಾ ಸವನತ್ರಯಂ ।

ಪೂರ್ವಸೇವಾ ಭವೇದೇಷಾ ಮಂತ್ರಾಣಾಂ ಕರ್ಮಸಾಧನೇ ॥

॥ ಮಂತ್ರಾಣಾಂ ಕರ್ಮ ಸಾಧನ ಇತಿ ॥

ಈ ಸೂತ್ರದ ಇತರ ಹಸ್ತಪ್ರತಿಯೊಂದರಲ್ಲಿ ಮೊದಲೆರಡು ಪ್ರಶ್ನೆಗಳನ್ನು 'ಕಂಡಿಕ' ಗಳನ್ನಾಗಿಯೂ, ಉಳಿದ ಎರಡು ಪ್ರಶ್ನೆಗಳನ್ನು ಅಧ್ಯಾಯಗಳನ್ನಾಗಿಯೂ ವಿಭಜಿಸಲಾಗಿದೆ. (ಹಿ. ಧ. ೨ —೨೩). ಶೈಲಿ, ಪದ-ಪದಪುಂಜಗಳು, ಸೂತ್ರಗಳು, ಶ್ಲೋಕಗಳು ಮುಂತಾದ ವಿಚಾರದಲ್ಲಿ ಗೌತಮಧರ್ಮಸೂತ್ರ ಮತ್ತು ವಿಷ್ಣುಧರ್ಮಸೂತ್ರಕ್ಕೂ ಇದಕ್ಕೂ ಹೋಲಿಕೆಯಿದ್ದು ಈ ವಿಚಾರದಲ್ಲಿ ವಿನಿಮಯ ನಡೆದಿದೆಯೆಂದು ಡಾ॥ ಜಾಲಿ ಮತ್ತು ಡಾ॥ ಪಿ. ವಿ. ಕಾಣೆಯವರು ತಿಳಿಸುತ್ತಾರೆ ಭಾಷೆ ಪುರಾತನವಾಗಿದ್ದು ಕೆಲವು ಅಪಾಣಿನೀಯ ಪ್ರಯೋಗಗಳಿವೆ ಮನು, ಗೌತಮ, ಔಪ ಜಂಘನಿ, ಕಶ್ಯಪ (ಕಾಶ್ಯಪ), ಪ್ರಜಾಪತಿ. ಮೌದ್ಗಲ್ಯ. ಮತ್ತು ವೈಖಾನಸ (ಶಾಸ್ತ್ರ), ಅಸುರ ಕಪಿಲ, ಭಾಲ್ಲವಿಗಳು ಇವರ ಉಲ್ಲೇಖಗಳಲ್ಲದೆ "ಇತಿ ಭಗವಾನ್ ಬೋಧಾಯನಃ, ಇತ್ಯಾಹ ಬೋಧಾಯನಃ'' ಎಂಬ ಉಕ್ತಿಗಳೂ ಇವೆ. ಆದ್ದರಿಂದ ಇದನ್ನು ಬೋಧಾಯನಶಿಷ್ಯ (ಬೌಧಯನ) ಪ್ರಚುರಪಡಿಸಿದನೆನ್ನಲು ಅವಕಾಶವಿದೆ.

ವಿಷಯ ವಿಂಗಡಣೆಯ ಕ್ರಮದ ಬಗೆಗೆ ಎರಡು ಮಾತು ಹೇಳುವುದು ಸೂಕ್ತವೆನಿಸುತ್ತದೆ ಮೊದಲೇ ಹೇಳಿದಂತೆ ವಿಷಯಪ್ರತಿಪಾದನೆಯಲ್ಲಿ ಪುನರುಕ್ತಿ ಕಂಡುಬರುವುದಲ್ಲದೆ ಒಂದೊಂದಕ್ಕೆ ತರ್ಕಬದ್ಧ ಸಂಬಂಧವಿಲ್ಲ. ಗೌತಮಧರ್ಮಸೂತ್ರದಲ್ಲಿ ಕಂಡುಬರುವ ಸಮರ್ಪಕ ಕ್ರಮವೂ ಇಲ್ಲ. ಪ್ರಾಯಶ್ಚಿತ್ತನಿಯಮಗಳ ಮಧ್ಯೆ ದಾಯಭಾಗವಿಷಯ ಬರುತ್ತದೆ. ಅಷ್ಟವಿಧವಿವಾಹ ಮತ್ತು ಕನ್ಯಾವಿಕ್ರಯನಿಷೇಧವಾದ ಕೂಡಲೇ ಅನಧ್ಯಯನದ ವಿಷಯ ಬರುತ್ತದೆ. ಸ್ನಾತಕನಿಯಮ ದ್ವಿರುಕ್ತವಾಗಿದೆ. 'ಅಥಾಪ್ಯುದಾಹರಂತಿ' ಎಂದು ಪ್ರಾರಂಭಿಸಿ ತೊಂಬತ್ತು ಪದ್ಯಗಳನ್ನೂ, ಹಾಗೆಯೇ ಸುಮಾರು ಎರಡು ನೂರು ಪದ್ಯಗಳನ್ನೂ ನಾವಿಲ್ಲಿ ಕಾಣಬಹುದು. ವಂಶಸ್ಥ ಮತ್ತು ಉಪಜಾತಿ ವೃತ್ತದ ಪದ್ಯಗಳೂ ಇಲ್ಲಿವೆ—

ಆಪಸ್ತಂಬನು (ಮುಂದೆ ನೋಡಿ) ಔರಸಪುತ್ರವಿಚಾರಮಾತ್ರ ತಿಳಿಸುತ್ತಾನೆ. ವಿವಾಹದಲ್ಲಿ ಆರು ವಿಧ. ಜ್ಯೇಷ್ಠಪುತ್ರನಿಗೆ ಜ್ಯೇಷ್ಠಾಂಶ (ಹೆಚ್ಚಿಗೆ) ಇಲ್ಲ. ನಿಯೋಗಕ್ಕೆ ಅವಕಾಶವಿಲ್ಲ. ರಥಕಾರನಿಗೆ ಉಪನಯನದ ಹಕ್ಕಿಲ್ಲ. ಗೌತಮ ಮತ್ತು ಬೌಧಾಯನರ ಪ್ರಕಾರ ವಿವಾಹ ಅಷ್ಟವಿಧವಾಗಿದೆ. ಔರಸಪುತ್ರರಲ್ಲದೆ ಇತರ ಪುತ್ರರ ವಿಚಾರ ಅವರಲ್ಲಿ ಕಂಡುಬರುತ್ತದೆ. ಬೌಧಾಯನ ಮತದಲ್ಲಿ ಜ್ಯೇಷ್ಠಪುತ್ರನಿಗೆ ಹೆಚ್ಚಿಗೆ ದಾಯಭಾಗವುಂಟು. ರಥಕಾರನಿಗೆ ಉಪನಯನದ ಅವಕಾಶವಿದೆ. ಈ ಇಬ್ಬರು ಧರ್ಮಸೂತ್ರಕಾರರು ನಿಯೋಗವನ್ನು ಒಪ್ಪುತ್ತಾರೆ—ಬೌಧಾಯನ ಹೇಳುವಂತೆ ರಂಗೋಪಜೀವನ, (ನಟನ ಕೆಲಸ), ನಾಟ್ಯಾಚಾರ್ಯರ ಕೆಲಸ ಪಾಪಕರ. (೨—೧,೪೪)

## ಆಪಸ್ತಂಬಧರ್ಮಸೂತ್ರ (ಕ್ರಿ. ಶ. ೬೦೦—೩೦೦)

ಇದು ಕೃಷ್ಣಯಜುರ್ವೇದ ತೈತ್ತಿರೀಯಶಾಖೆಗೆ ಸೇರಿದ ಆಪಸ್ತಂಬಕಲ್ಪಸೂತ್ರದ ೨೮—೨೯ನೆಯ ಪ್ರಶ್ನೆ. ಪ್ರಥಮಪ್ರಶ್ನದಲ್ಲಿ ಹನ್ನೊಂದು ಪಟಲಗಳು ೩೨ ಕಂಡಿಕೆಗಳೂ, ದ್ವಿತೀಯ ಪ್ರಶ್ನೆದಲ್ಲಿ ಹನ್ನೊಂದು ಪಟಲಗಳು ೨೯ ಕಂಡಿಕೆಗಳೂ ಇವೆ. ಒಟ್ಟು ೧೪೧೬ ಸೂತ್ರಗಳಿವೆ (ಮೈಸೂರಿನ ಮುದ್ರಣ).

ಸೂತ್ರಗಳು ಗದ್ಯರೂಪವಾಗಿದ್ದು ಅಲ್ಲಲ್ಲಿ ಅಪಾಣಿನೀಯ ಪ್ರಯೋಗಗಳಿವೆ. ಈ ಮೇಲೆ ಗೌತಮ ಮತ್ತು ಬೌಧಾಯನ ಧರ್ಮಸೂತ್ರಗಳಲ್ಲಿ ಹೇಳಿದ ವಿಷಯಗಳೇ ಈ ಧರ್ಮ ಸೂತ್ರದ ವಿಷಯಗಳು. ಆಪಸ್ತಂಬನು ದಕ್ಷಿಣ ಭಾರತೀಯನೆಂದೂ, ಈಗಿನ ಆಂಧ್ರ ಪ್ರದೇಶದ ಗೋದಾವರೀ ಜಿಲ್ಲೆಯವನಾಗಿದ್ದಿರಬಹುದೆಂದೂ ಊಹಿಸಲಾಗಿದೆ. ಕ್ರಿ.ಶ. ಇತ್ತೀಚಿನವರೆಗಿನ ಸಕಲಧರ್ಮಶಾಸ್ತ್ರ ಲೇಖಕರೂ ಈತನ ಕೃತಿಯನ್ನು ಪ್ರಮಾಣವನ್ನಾಗಿ ಸ್ವೀಕರಿಸಿರುತ್ತಾರೆ.

'ಸಮಯಾಚಾರಿಕಾನ್ ಧರ್ಮಾನ್ ವ್ಯಾಖ್ಯಾಸ್ಯಾಮಃ' ಎಂದು ಪ್ರಾರಂಭವಾಗುವ ಕೃತಿಯ 'ಧರ್ಮಜ್ಞರ ಸಮಯ'ವೇ ಪ್ರಮಾಣವೆನ್ನುತ್ತದೆ. [ಧರ್ಮಜ್ಞಾ ಯೇ ಮನ್ವಾದಯಃ ಎಂದು ಹರದತ್ತನ ಉಜ್ವಲ ವ್ಯಾಖ್ಯಾನ]. ಆಚಾರ್ಯ ಶಬ್ದಕ್ಕೆ ನಿರ್ವಚನ—ಯಸ್ಮಾದ್ಧರ್ಮಾನಾಚಿನೋತಿ ಸ ಆಚಾರ್ಯಃ—ಇದು ಯಾಸ್ಕನ 'ಅಸ್ಮಾದ್ಧರ್ಮಾನಾಚಿನೋತೀತ್ಯಾಚಾರ್ಯಃ' [೧ ೧] ಎಂಬುದಕ್ಕೆ ಸಂವಾದಿಯಾಗಿದೆ.

ಮಾನವನು—ಹೃಷ್ಟೋದರ್ಪತಿ । ದೃಪ್ತೋ ಧರ್ಮಮತಿಕ್ರಾಮತಿ । ಧರ್ಮಾತಿಕ್ರಮೇ ಪುನರ್ನರಕಃ (೧ ೧೩—೪).

ಧರ್ಮಾಚರಣೆಯ ಅತ್ಯಂತಿಕ ಧ್ಯೇಯ ಆತ್ಮಸಾಕ್ಷಾತ್ಕಾರ—ಲೌಕಿಕ ದೃಷ್ಟಿಯಿಂದ ಅಲ್ಲ. ನೇಮಂ ಲೌಕಿಕಮರ್ಥಂ ಪುರಸ್ಕೃತ್ಯ ಧರ್ಮಾನ್‌ಶ್ಚರೇತ್ (೧. ೨೦—೧). ಸಜ್ಜನರು

ಪ್ರಶಂಸಿಸುವುದೇ ಧರ್ಮ. ನಿಂದಿಸುವುದೇ ಅಧರ್ಮ. ಯತ್ತ್ವಾರ್ಯಾಃ ಕ್ರಿಯಮಾಣಂ ಪ್ರಶಂಸಂತಿ ಸ ಧರ್ಮೋಯದ್ಗರ್ಹಂತೇ ಸೋಽಧರ್ಮಃ (೧. ೨೦-೩)

ಆಪಸ್ತಂಬನು ಕಣ್ವ, ಕುಣಿಕ, ಕುತ್ಸ, ಪೌಷ್ಕಾರಸಾದಿ, ಹಾರೀತ ಇವರನ್ನು ಉಲ್ಲೇಖಿಸುತ್ತಾನೆ. ಈತನಿಗೂ ಬೋಧಾಯನನಿಗೂ ಅನೇಕ ಸೂತ್ರಗಳಲ್ಲಿ ಸಾಮ್ಯವಿದೆ. ಶಾಬರಭಾಷ್ಯ, ಶಂಕರಾಚಾರ್ಯ, ವಿಶ್ವರೂಪ. ಮೇಧಾತಿಥಿ. ಮಿತಾಕ್ಷರ ಇತ್ಯಾದಿಗಳು ಆಪಸ್ತಂಬನಿಂದ ಉಲ್ಲೇಖಗಳನ್ನೀಯುತ್ತಾರೆ.

ಹಿರಣ್ಯಕೇಶಿಧರ್ಮಸೂತ್ರ—ಇದು ಹಿರಣ್ಯಕೇಶಿ ಕಲ್ಪಸೂತ್ರದ ೨೬-೨೭ನೆಯ ಪ್ರಶ್ನಭಾಗ. ಇದೊಂದು ಸ್ವತಂತ್ರಕೃತಿಯೆನ್ನುವುದಕ್ಕಿಂತ ಆಪಸ್ತಂಬ ಧರ್ಮಸೂತ್ರದ ಪುನಃ ಪಾಠವೆನ್ನಬೇಕು. (ಹಿ. ಧ. ಶಾ. ೧. ೪೭) ಇದಕ್ಕಿರುವ ಮಹಾದೇವನ ಉಜ್ಜ್ವಲಾ ಎಂಬ ವ್ಯಾಖ್ಯಾನವೂ ಹರದತ್ತರ 'ಉಜ್ಜ್ವಲಾ' ಎನ್ನಬೇಕಾಗುತ್ತದೆ. ಸ್ಮೃತಿಗಳಿಂದ ಅನೇಕ ಉಲ್ಲೇಖಗಳನ್ನು ಮಾಡಲಾಗಿದೆ.

ವಸಿಷ್ಠ ಧರ್ಮಸೂತ್ರ—ಇದರಲ್ಲಿ ಮೂವತ್ತು ಅಧ್ಯಾಯಗಳಿವೆ. ವಿಷಯ ಪ್ರತಿ ಪಾದನೆಯಲ್ಲಿ ಈ ಹಿಂದಿನ ಧರ್ಮಸೂತ್ರಗಳಂತೆ ಕ್ರಮವಿಲ್ಲ. ೧) ಧರ್ಮ, ಆರ್ಯಾವರ್ತ, ಮಹಾಪಾತಕಗಳು, ಆರುವಿಧ ವಿವಾಹಗಳು, ೨) ನಾಲ್ಕು ವರ್ಗಗಳು ಆಚಾರ್ಯ ಪ್ರಶಂಸೆ, ವರ್ಣಗಳ ವೃತ್ತಿಗಳು, ಆಪದ್ಧರ್ಮ. ೩) ವೇದಬಾಹಿರಬ್ರಾಹ್ಮಣ, ಆತತಾಯಿಗಳು, ಪಂಕ್ತಿ ಪಾವನರು, ಪರಿಷತ್, ಆಚಮನ, ಶೌಚ ಇತ್ಯಾದಿಯಾಗಿ ನೀವು ಮೇಲೆ ತಿಳಿದಿರುವ ಪ್ರಮುಖಸೂತ್ರಗಳ ವಿಷಯಂಗಳೇ ಆಗಿದ್ದರೂ ಇಲ್ಲಿ ಬೇರೆ ಕ್ರಮದಲ್ಲಿ ಪ್ರಸ್ತಾವಿಸಲಾಗಿದೆ.

ಗದ್ಯರೂಪ ಸೂತ್ರಗಳ ಮಧ್ಯೆ ನಾನಾ ಛಂದಸ್ಸಿನ ಪದ್ಯಗಳಿವೆ. ಆಚಾರ, ವ್ಯವಹಾರ, ಪ್ರಾಯಶ್ಚಿತ್ತ ವಿಭಾಗಗಳು ಮೂರನ್ನು ಇಲ್ಲಿ ಸ್ಪಷ್ಟವಾಗಿ ಗುರುತಿಸಬಹುದು. ಗೌತಮ ಧರ್ಮಸೂತ್ರದ ಅನೇಕ ಸೂತ್ರಗಳು ಇಲ್ಲಿವೆ. ಶ್ಲೋಕರೂಪದ ಸೂತ್ರಗಳು ಇಲ್ಲಿರುವುದರಿಂದ ಇದರ ಕಾಲವೂ ಇತ್ತೀಚಿನದು.

ಮಿತಾಕ್ಷರದಲ್ಲಿ ಈ ಸೂತ್ರದ ಉಲ್ಲೇಖಗಳಿವೆ. ಮೇಧಾತಿಥಿ, ವಿಶ್ವರೂಪ, ಇತ್ಯಾದಿಗಳೂ ಈ ಸೂತ್ರದಿಂದ ಉಲ್ಲೇಖಗಳನ್ನೀಯುತ್ತಾರೆ. ವೃದ್ಧ ವಸಿಷ್ಠ, ಜ್ಯೋತಿರ್‌ವಸಿಷ್ಠ ಎಂಬ ಇತರ ಕೃತಿಗಳಿವೆ.

ವಿಷ್ಣುಧರ್ಮಸೂತ್ರ :—ಇದನ್ನು ವಿಷ್ಣುಸ್ಮೃತಿ ಎಂದು ಕರೆಯಲಾಗಿದೆ. ನೂರು ಭಾಗಗಳಿರುವ ಇದು ವಿಷ್ಣು-ಭೂದೇವಿಯರ ಸಂವಾದ ರೂಪದಲ್ಲಿದೆ. ಈ ವಿಚಾರದಲ್ಲಿ ಇದು ಇತರ ಸ್ಮೃತಿಗಳಿಗೆ ಸಂವಾದಿಯಾಗಿದೆ, ಗದ್ಯಪದ್ಯಾತ್ಮಕವಾಗಿರುವ ಇದರಲ್ಲಿ ಮೇಲೆ ಹೇಳಿದ

ಸೂತ್ರಗಳ ವಿಷಯಂಗಳೇ. ಪ್ರತಿಷ್ಠಾ (ಭಾವಿ, ಕೆರೆ, ಕೊಳ ಇತ್ಯಾದಿ), ಮಾನವ ಶರೀರದ ಭಾಗಗಳು (೯೬–೯೭), ಭೂದೇವಿ ಲಕ್ಷ್ಮೀದೇವಿಯರಿಂದ ವಾಸುದೇವ ಪ್ರಶಸ್ತಿ (೯೮–೯೯) ಮತ್ತು ಫಲಶ್ರುತಿ (೧೦೦), ಇವು ಈ ಸೂತ್ರದ ವೈಶಿಷ್ಟ್ಯಗಳು. ಕೆಲವು ವಿಚಾರಗಳಲ್ಲಿ ಇದಕ್ಕೂ ವಶಿಷ್ಠ ಧರ್ಮಸೂತ್ರಕ್ಕೂ ಸಾಮ್ಯವಿದೆ. ಮನುಸ್ಮೃತಿ ಮತ್ತು ಯಾಜ್ಞವಲ್ಕ್ಯಸ್ಮೃತಿಗಳಿಂದ ಇದು ಅನೇಕ ಉಲ್ಲೇಖಗಳನ್ನೀಯುತ್ತದೆ.

ಇತರ ಧರ್ಮಸೂತ್ರಗಳು :—ಹಾರೀತ, ಶಂಖ–ಲಿಖಿತ, ವೈಖಾನಸ, ಅತ್ರಿ, ಉಶನಸ್ ಕಣ್ವ, ಕಶ್ಯಪ, ಗಾರ್ಗ್ಯ, ಚ್ಯವನ, ದೇವಲ, ಸ್ಮೃತೀನಸಿ, ಬುಧ, ಬೃಹಸ್ಪತಿ, ಭರದ್ವಾಜ, ಶಾತಾತಪ, ಸುಮಂತು. ಇತ್ಯಾದಿಗಳಿಂದಲೂ ಸಹ ಧರ್ಮಸೂತ್ರಗಳು ರಚಿತವಾಗಿವೆ ಕೆಲವು ಉಪಲಬ್ಧವಿಲ್ಲ.

## ೨) ಸ್ಮೃತಿಗಳು

ವೇದಾದಿಗಳಲ್ಲಿ ಪ್ರೋಕ್ತವಾದ ಧರ್ಮಸೂಕ್ಷ್ಮಗಳನ್ನು ಧರ್ಮಜ್ಞರಾದ ಮನ್ವಾದಿಗಳು ಸ್ಮೃತಿರೂಪದಿಂದ ತಿಳಿಸಿರುತ್ತಾರೆ. ‘ಅನುಭೂತ ವಿಷಯಾ ಸಂಪ್ರಮೋಷಃ ಸ್ಮೃತಿಃ’— ಎಂಬಂತೆ ಅವರೆಲ್ಲರೂ ಧರ್ಮವನ್ನು ಮೈಗೂಡಿಸಿಕೊಂಡವರು. ಅವರ ಆಚಾರ–ವಿಚಾರಗಳೂ ಧರ್ಮಾನುಗತಿಕವಾಗಿಯೇ ಇದ್ದುವು. ಈ ಮೊದಲು ಸೂತ್ರಗಳಲ್ಲಿ ತಿಳಿಸಿದ ಧರ್ಮವಿಚಾರಗಳು ಸ್ಮೃತಿಗಳಲ್ಲಿ ಇನ್ನೂ ಸ್ಪಷ್ಟವಾಗಿಯೂ ಕ್ರಮಬದ್ಧವಾಗಿಯೂ ಹೆಚ್ಚು ಆಪ್ಯಾಯಮಾನವಾಗಿಯೂ ವಿವರಗೊಂಡಿವೆ. ಸ್ಮೃತಿಗಳಲ್ಲಿ ಒಂದು ರೀತಿಯ ಸಂವಾದದ ರೂಪದಿಂದ ವಿಷಯಪ್ರತಿಪಾದನೆಯಾಗುತ್ತದೆ. ಶಿಷ್ಯರು–ಭಾರ್ಗವ, ವ್ಯಾಸ ಇತ್ಯಾದಿಗಳು–ಮನು, ಪರಾಶರಾದಿಗಳನ್ನು ಧರ್ಮದ ಉಪಬೃಂಹಣೆಗಾಗಿ ಪ್ರಾರ್ಥಿಸುತ್ತಾರೆ. ಅಂತೆಯೇ ಅವರು ವಿವರಿಸುತ್ತಾರೆ. ಸ್ಮೃತಿಗಳು ಪದ್ಯರೂಪದಲ್ಲಿವೆ. ಆದರೆ ಕೆಲವು ಕೇವಲ ಗದ್ಯದಲ್ಲಿ, ಕೆಲವು ಮಿಶ್ರರೂಪದಲ್ಲೂ ಇವೆ.

ಮನುಸ್ಮೃತಿ (ಕ್ರಿ. ಪೂ. ೨೦೦) :—ಇದು ಇರುವ ಸ್ಮೃತಿಗಳಲ್ಲೆಲ್ಲಾ ಸುಪ್ರಸಿದ್ಧವಾದುದು. ಒಟ್ಟು ಹನ್ನೆರಡು ಅಧ್ಯಾಯಗಳಿರುವ ಇದರಲ್ಲಿ ೨೬೮೪ ಶ್ಲೋಕಗಳಿವೆ. ಮೊದಲ ಏಳು ಅಧ್ಯಾಯಗಳು ಆಚಾರವನ್ನೂ, ೮-೧೦ನೆಯ ಅಧ್ಯಾಯಗಳು ವ್ಯವಹಾರವನ್ನೂ, ಉಳಿದ ಎರಡು ಪ್ರಾಯಶ್ಚಿತ್ತವನ್ನೂ ವಿವರಿಸುತ್ತವೆ.

ಏಕಾಗ್ರನಾಗಿ ಆಸೀನನಾಗಿದ್ದ ಮನುವಿನ ಹತ್ತಿರ ಋಷಿಗಳು ಬಂದು,

ಭಗವನ್, ಸರ್ವವರ್ಣಾನಾಂ ಯಥಾವದನುಪೂರ್ವಶಃ ।
ಅಂತರ ಪ್ರಭವಾಣಾಂ ಚ ಧರ್ಮಾನ್ನೋ ವಕ್ತುಮರ್ಹಸಿ ॥

ಎಂದು ಕೇಳಿಕೊಳ್ಳುತ್ತಾರೆ.

ಮನುವು ಋಷಿಪ್ರಾರ್ಥನೆಯನ್ನು ಮನ್ನಿಸಿ ಧರ್ಮವನ್ನು ವಿವರಿಸುತ್ತಾನೆ. ಅದೆ ಕ್ರಮದಲ್ಲಿ

ಯಥೇದಮುಕ್ತವಾನ್ ಶಾಸ್ತ್ರಂ ಪುರಾ ಪೃಷ್ಟೋ ಮನುರ್ಮಯಾ ।
ತಥೇದಂ ಯೂಯಮಪ್ಯದ್ಯ ಮತ್ಸಕಾಶಾನ್ನಿಬೋಧತ ॥ ೧. ೧೧೯

ಎಂಬುದಾಗಿ ಭಾರ್ಗವನು (ಭೃಗುಪ್ರೋಕ್ತ) ಮನುಪ್ರೋಕ್ತ ಧರ್ಮವನ್ನು ವರ್ಣಿಸಿದ್ದಾನೆ.

ಆಚಾರಭಾಗದಲ್ಲಿ ಜಗದುತ್ಪತ್ತಿ, ಜೀವೋತ್ಪತ್ತಿ, ಧರ್ಮಲಕ್ಷಣ, ಧರ್ಮಪ್ರಮಾಣ, ಸಂಸ್ಕಾರ, ಆಶ್ರಮ ಧರ್ಮ, ಅತಿಥಿಸತ್ಕಾರ, ಸೋಮಯಾಗ, ಪ್ರಯಾಣನಿಯಮ, ಆಚಾರ ಪ್ರಶಂಸೆ, ಶ್ರಾದ್ಧವಿಚಾರ–ಆಹಾರಾದಿಗಳು, ವಾನಪ್ರಸ್ಥ ಪರಿವ್ರಾಜಕ ನಿಯಮಗಳು ಮೂರ್ತಿ, ರಾಜಧರ್ಮ ಇತ್ಯಾದಿಗಳೂ,

ವ್ಯವಹಾರಭಾಗದಲ್ಲಿ ಅಷ್ಟಾದಶ ವಿವಾದಗಳು, ಸಭೆ (ಪರಿಷತ್), ಸಭಾಸದರು, ಸಾಕ್ಷ್ಯ, ಸಪ್ತಪದಿ, ದ್ವಿಜಾದಿಗಳ ಶಾಸ್ತ್ರಗ್ರಹಣ ವಿಚಾರ, ಸ್ತ್ರೀಪುಂಧರ್ಮ, ನಿಯೋಗ, ದಾಯವಿಭಾಗ, ಅನಧ್ಯಯನ, ವರ್ಣಸಂಕರನಿಂದೆ, ಆಪದ್ಧರ್ಮಗಳೂ,

ಪ್ರಾಯಶ್ಚಿತ ವಿಭಾಗದಲ್ಲಿ ಪಂಚಮಹಾಪಾತಕಗಳು, ಪ್ರಾಯಶ್ಚಿತ್ತ (ದಂಡನೆ)ಗಳು, ವ್ಯಭಿಚಾರಿ ಸ್ತ್ರೀಯರಿಗೆ ಪ್ರಾಯಶ್ಚಿತ್ತ, ರಹಸ್ಯಪ್ರಾಯಶ್ಚಿತ್ತ, ಶುಭಾಶುಭ ಕರ್ಮಫಲ, ವೇದಬಾಹ್ಯಸ್ಮೃತಿನಿಂದಾ, ಆಪದ್ಧರ್ಮ ಇತ್ಯಾದಿಗಳೂ ವರ್ಣಿಸಲ್ಪಟ್ಟಿವೆ.

ಮನುವಿನ ಕಾಲ ಅನಾದಿ ಎನ್ನಬೇಕಾಗುತ್ತದೆ. 'ಯದ್ವೈ ಕಿಂಚ ಮನುರವದತ್ ತದ್ಭೇಷಜಂ'. (ತೈ. ಸಂ. ೨. ೨-೧೦-೨) ಎಂಬುದಾಗಿ ವೇದದಲ್ಲಿದೆ. ಶತಪಥಬ್ರಾಹ್ಮಣ ದಲ್ಲಿ ಮನು ಮತ್ತು ಜಲಪ್ರಳಯದ ವಿಚಾರವಿದೆ. ಇದಲ್ಲದೆ ಗೌತಮ, ಆಪಸ್ತಂಬ, ವಸಿಷ್ಠ ಇತ್ಯಾದಿಗಳ ಕೃತಿಗಳಲ್ಲಿ ಮನುವಿನ ಉಲ್ಲೇಖಗಳಿವೆ. ಮನುಸ್ಮೃತಿಯೇ (ಮೂಲದಲ್ಲಿ ಪ್ರೋಕ್ತವಾದಂತೆ) ಸಕಲ ಧರ್ಮಶಾಸ್ತ್ರಗಳಿಗೆಲ್ಲಾ ಪ್ರಪ್ರಥಮವೆನ್ನಬೇಕಾಗುತ್ತದೆ—ಈಗ ನಮಗೆ ಉಪಲಬ್ಧವಿರುವ ಮಾನವ ಧರ್ಮಶಾಸ್ತ್ರವು ಮೂಲದಪ್ರತಿಕೃತಿ ಎನ್ನಬಹುದು. ಮನುಸ್ಮೃತಿಗಿರುವ ಅನೇಕ ವ್ಯಾಖ್ಯಾನಗಳಲ್ಲಿ ಗೋವಿಂದರಾಜ, ಮೇಧಾತಿಥಿ ಮತ್ತು ಕುಲ್ಲೂಕ ಇವರುಗಳ ಕೃತಿಗಳು ಮುಖ್ಯವಾದವು—

ಯಾಜ್ಞವಲ್ಕ್ಯ ಸ್ಮೃತಿ (ಕ್ರಿ. ಶ. ೨೦೦) : ಧರ್ಮಶಾಸ್ತ್ರಸಾಹಿತ್ಯರಾಶಿಯಲ್ಲಿ ಮನುಸ್ಮೃತಿಯನ್ನು ಬಿಟ್ಟರೆ ಯಾಜ್ಞವಲ್ಕ್ಯಸ್ಮೃತಿಗೆ ಪ್ರಾಶಸ್ತ್ಯ 'ಮಿತಾಕ್ಷರಾ'ವು ಹೇಳುವಂತೆ "ಯಾಜ್ಞವಲ್ಕ್ಯಶಿಷ್ಯಂ ಕಶ್ಚಿತ್ ಪ್ರಶ್ನೋತ್ತರರೂಪಂ ಯಾಜ್ಞವಲ್ಕ್ಯಪ್ರಣೀತಂ ಧರ್ಮಶಾಸ್ತ್ರಂ ಸಂಕ್ಷಿಪ್ಯ ಕಥಯಾಮಾಸ" ಎಂಬುದನ್ನು ಒಪ್ಪಬೇಕಾಗುತ್ತದೆ. ಇದರಲ್ಲಿ ಆಚಾರ, ವ್ಯವಹಾರ ಮತ್ತು ಪ್ರಾಯಶ್ಚಿತ್ತವೆಂಬ ಮೂರು ಅಧ್ಯಾಯ (ಕಾಂಡ) ಗಳಿವೆ. ಒಟ್ಟು ೧೦೧೦

ಶ್ಲೋಕಗಳಿವೆ. ಈ ಸ್ಮೃತಿಗೆ ವಿಶ್ವರೂಪ (ಕ್ರಿ.ಶ. ೮೦೦), ವಿಜ್ಞಾನೇಶ್ವರ (೧೦೭೦—೧೧೦೦), ಅಪರಾರ್ಕ (೧೧೦೦-೧೨೦೦), ಶೂಲಪಾಣಿ, ಮಿತ್ರಮಿಶ್ರ ಇತ್ಯಾದಿಗಳ ವ್ಯಾಖ್ಯಾನಗಳಿವೆ. ಮನುಸ್ಮೃತಿಯಲ್ಲಿ ಬರುವ ವಿಷಯಗಳೇ ಇಲ್ಲಿಯೂ ಕಂಡುಬಂದರೂ ಸಹ ವಿಷಯ ವಿಂಗಡಣೆಯಲ್ಲಿ ಹೆಚ್ಚು ವೈಜ್ಞಾನಿಕತೆ ಇದೆ ; ಸಂಕ್ಷೇಪವಿದೆ. ಪುನರುಕ್ತಿಗಳು ಕಡಿಮೆ. ಈ ಎರಡು ಸ್ಮೃತಿಗಳಲ್ಲೂ ಅನೇಕ ಶ್ಲೋಕಗಳು, ಪದಪುಂಜಗಳು ಉಭಯಸಾಮಾನ್ಯವಾಗಿವೆ. ಮನುವಿನಲ್ಲಿಲ್ಲದ ವಿನಾಯಕಕಲ್ಪ, ಮತ್ತು ಗ್ರಹಶಾಂತಿಗಳು ಇಲ್ಲಿವೆ. ಅಲ್ಲಿ ಅಗ್ನಿದಿವ್ಯ ಮತ್ತು ಜಲದಿವ್ಯಗಳು ಮಾತ್ರ ಇದ್ದರೆ, ಇಲ್ಲಿ ಪಂಚವಿಧ ದಿವ್ಯಗಳ (divine proof) ಸಂಪೂರ್ಣ ವಿವರಣೆಯಿದೆ. ಅಲ್ಲಿಯ ಸೃಷ್ಟಿವಿಚಾರ ಇಲ್ಲಿಲ್ಲ. ಆಯುರ್ವೇದವಿಚಾರ ಇಲ್ಲಿ ಹೆಚ್ಚಿನದು.

ಮಿಥಿಲಾಸ್ಥನಾಗಿದ್ದ ಯಾಜ್ಞವಲ್ಕ್ಯನನ್ನು ಮುನಿಗಳು ಧರ್ಮೋಪದೇಶಮಾಡಬೇಕೆಂದು ಕೇಳಿಕೊಂಡರೆಂದೂ, ಆತನು ಹಾಗೆಯೇ ಮಾಡಿದನೆಂದೂ ಮನುಸ್ಮೃತಿಯ ರೀತಿಯಲ್ಲಿ ಕೃತಿ ಪ್ರಾರಂಭವಾಗುತ್ತದೆ. ಮೊದಲನೆಯ ಕಾಂಡದಲ್ಲಿ ೧೩ ಪ್ರಕರಣಗಳೂ, ಎರಡನೆಯದರಲ್ಲಿ ೨೫ ಮತ್ತು ಕಡೆಯದರಲ್ಲಿ ಆರು ಪ್ರಕರಣಗಳಿವೆ.

ಪರಾಶರಸ್ಮೃತಿ (ಕಿ.ಶ. ೧೦೦-೫೦೦)—ಪ್ರಾಮುಖ್ಯದಲ್ಲಿ ಇದಕ್ಕೆ ಮೂರನೆಯ ಸ್ಥಾನವನ್ನೀಯ ಬೇಕಾಗುತ್ತದೆ. ಕಲಿಯುಗಕ್ಕೆ ಇದು ಪ್ರಮಾಣಭೂತವಾದ ಧರ್ಮಶಾಸ್ತ್ರಗ್ರಂಥವೆಂದು ಗ್ರಂಥವೇ ಹೇಳಿಕೊಳ್ಳುತ್ತದೆ—(೧. ೨೪).

ಕೃತೇ ತು ಮಾನವಾ ಧರ್ಮಾಸ್ತ್ರೇತಾಯಾಂ ಗೌತಮಾಃ ಸ್ಮೃತಾಃ ।
ದ್ವಾಪರೇ ಶಂಖಲಿಖಿತಾಃ ಕಲೌ ಪಾರಾಶರಾಃ ಸ್ಮೃತಾಃ ॥

ಇವರಲ್ಲಿ ೧೨ ಅಧ್ಯಾಯಗಳು ೫೯೩ ಪದ್ಯಗಳು—ಇಲ್ಲಿ ಆಚಾರ ಮತ್ತು ಪ್ರಾಯಶ್ಚಿತ್ತ ಕಾಂಡಗಳು ಮಾತ್ರ ಇವೆ. ರಾಜಧರ್ಮ ಕುರಿತ ಒಂದೇ ಶ್ಲೋಕದ ಆಧಾರದ ಮೇಲೆ ಈ ಸ್ಮೃತಿಯ ವ್ಯಾಖ್ಯಾಕಾರರಾದ ಮಾಧವರು 'ವ್ಯವಹಾರಭಾಗ'ವನ್ನು ಪೂರ್ಣಗೊಳಿಸಿದ್ದಾರೆ.

ಆಚಾರಭಾಗದಲ್ಲಿ ಚಾತುರ್ವರ್ಣ್ಯದವರ ಧರ್ಮ, ಚತುರಾಶ್ರಮಧರ್ಮ, ಮತ್ತು ಶ್ರಾದ್ಧ ಸೂತಕ ವಿಚಾರಗಳಿವೆ. ಪ್ರಾಯಶ್ಚಿತ್ತಭಾಗದಲ್ಲಿ ಪ್ರಾಯಶ್ಚಿತ್ತ (ದಂಡನೆ)ಗಳು, ದ್ರವ್ಯಶುದ್ಧಿ, ತರ್ಪಣ, ಉಪಪಾತಕಗಳು ಇತ್ಯಾದಿ ವಿಚಾರಗಳಿವೆ. ಈ ಸ್ಮೃತಿಯು ಅನೇಕ ಕಡೆ ಮನುಸ್ಮೃತಿಯನ್ನು ಉಲ್ಲೇಖಿಸಿ ಸಮರ್ಥಿಸುತ್ತದೆ. ಬೌಧಾಯನ, ಉಶನಸ್, ಶಂಖ, ಲಿಖಿತ ಇತ್ಯಾದಿಗಳ ಉಲ್ಲೇಖವೂ ಅಲ್ಲಲ್ಲಿ ಬರುತ್ತದೆ. ಪುತ್ರರು ನಾಲ್ಕುವಿಧ. (ಔರಸ, ಕ್ಷೇತ್ರಜ, ದತ್ತ, ಕೃತ್ರಿಮ). ಸತೀ (ಸಹಗಮನ) ಪದ್ಧತಿಯ ಪ್ರಶಂಸೆ, ಶತ್ರುವಿನ

ಆಕ್ರಮಣ ಕಾಲ ಮತ್ತು ಉಲ್ಬಣರೋಗ ಬಂದಾಗ ಆತ್ಮರಕ್ಷಣೆಯೇ ಪ್ರಧಾನ, ಆಮೇಲೆ ಧರ್ಮಾಚರಣೆಗೆ ಇತ್ಯಾದಿ ಈ ಸ್ಮೃತಿಯ ವೈಶಿಷ್ಟ್ಯ.

ನಾರದಸ್ಮೃತಿ (ಕ್ರಿ.ಶ. ೧೦೦-೩೦೦) :—೧೮ ಅಧ್ಯಾಯಗಳೂ ೧೦೨೮ ಶ್ಲೋಕಗಳೂ ಇರುವ ಇದರಲ್ಲಿ ವ್ಯವಹಾರವೇ ಮುಖ್ಯ ವಿಷಯ. ಭಾರತೀಯ ಕಾನೂನು ವ್ಯವಹಾರದ ಅಭ್ಯಾಸಗಳಿಗೆ ಇದು ಮುಖ್ಯವಾದ ಕೃತಿ. ಹದಿನೆಂಟು ವ್ಯವಹಾರ ವಿಚಾರಗಳಿಗೆ ತಕ್ಕಂತೆ ಅಧ್ಯಾಯ ಭಾಗವಿದೆ. ಈ ವಿಚಾರದಲ್ಲಿ ಹೆಚ್ಚು ವ್ಯವಸ್ಥೆ, ತಲಸ್ಪರ್ಶತೆ ಕಂಡು ಬರುತ್ತದೆ. ವಿಶ್ವರೂಪ, ಮೇಧಾತಿಥಿ ಮುಂತಾದವರು ಈ ಸ್ಮೃತಿಯನ್ನು ಉಲ್ಲೇಖಿಸಿದ್ದಾರೆ.

ಈ ಮೇಲಿನ ಪ್ರಮುಖ ಸ್ಮೃತಿಗಳಲ್ಲದೆ ಗೌತಮ, ಬೃಹಸ್ಮೃತಿ, ಕಾತ್ಯಾಯನ, ಅಂಗೀರಸ, ದಕ್ಷ, ಯಮ, ಲೋಗಾಕ್ಷಿ, ವಿಶ್ವಾಮಿತ್ರ, ಪ್ರಜಾಪತಿ, ಪುಲಸ್ತ್ಯ, ಪಿತಾಮಹ, ವ್ಯಾಸ, ಸಂವರ್ತ, ಹಾರೀತ, ಅತ್ರಿ, ಮಾರೀಚಿ, ದೇವಲ, ಗೋಭಿಲ, ವಸಿಷ್ಠ, ಶಾತಾತಪ, ಶಮಿ, ಲಿಖಿತ, ಶಂಖಲಿಖಿತ ಇತ್ಯಾದಿಗಳಿಂದ ಇದೇ ಹೆಸರುಗಳಿಗೆ ವೃದ್ಧ, ಲಘು, ಬೃಹದ್ ಎಂಬ ವಿಶೇಷಣ ಸೇರಿದ (ಕೆಲವರಿಗೆ ಮಾತ್ರ) ಕರ್ತೃಗಳಿಗೆ ಆರೋಪಿತವಾದ ಸ್ಮೃತಿಗಳು ಇವೆ. ಅವುಗಳೆಲ್ಲದರ ವಿವರ ಇಲ್ಲಿ ಅಪ್ರಕೃತ ಎಷ್ಟೋ ಸ್ಮೃತಿಗಳನ್ನು ಇತರರ ಉಲ್ಲೇಖಗಳಿಂದ ಕೂಡಿಸಿ ಜೋಡಿಸಿ ಅವರವರ ಹೆಸರಿಗೆ ಆರೋಪಿಸಲಾಗಿದೆ.

## ೩. ವ್ಯಾಖ್ಯಾನಗಳು ಮತ್ತು ನಿಬಂಧಗಳು.

ಧಾರ್ಮಿಕ ವಿಷಯಗಳಲ್ಲಿ ಮನು, ಯಾಜ್ಞವಲ್ಕ್ಯ ಮುಂತಾದವರ ಪುರಾತನವೂ ಪ್ರೌಢವೂ ಆದ ಸ್ಮೃತಿಗ್ರಂಥಗಳು ಅಖಿಲಭಾರತೀಯ ಮನ್ನಣೆಯನ್ನು ಪಡೆದವು (ಯು. ಭಾ. ಸಂ. ೨ ೨೬೯). ಆದುದರಿಂದ ಇವುಗಳನ್ನು ಜನಸಾಮಾನ್ಯರಿಗೆ ಅರ್ಥವಾಗುವ ರೀತಿಯಲ್ಲಿ ವಿಭಿನ್ನ ಕಾಲ ದೇಶಗಳಿಗೆ ಸೇರಿದ ಪಂಡಿತರು ತುಲನಾತ್ಮಕವಾಗಿ ಅಭ್ಯಸಿಸಿ ವ್ಯಾಖ್ಯಾನಗಳನ್ನು ರಚಿಸಿದರು. ಮತ್ತೆ ಕೆಲವರು ತಮಗಿಂತಲೂ ಹಿಂದಿನ ಸೂತ್ರಕಾರರು ಮತ್ತು ಸ್ಮೃತಿಕಾರರ ಅಧಿಕಾರಿಕ ಉಲ್ಲೇಖಗಳಲ್ಲದೆ ವ್ಯಾಖ್ಯಾನಕಾರರ ಅಭಿಪ್ರಾಯಗಳನ್ನೂ ಸಹ ಕ್ರೋಡೀಕರಿಸಿ ಕೆಲವು ವೇಳೆ ಧರ್ಮಶಾಸ್ತ್ರದ ಪ್ರಮೇಯಗಳೆಲ್ಲವನ್ನೂ ಕೆಲವು ವೇಳೆ ಕೆಲವು ವಿಷಯಗಳನ್ನು ಮಾತ್ರ—ಪರಿಗ್ರಹಿಸಿ ಸವಿಸ್ತರವಾದ 'ವಿವೇಚನೆ'ಗಳನ್ನು ರಚಿಸಿದರು. ಇವುಗಳನ್ನು ನಿಬಂಧಗಳೆಂದು ಕರೆಯಲಾಗಿದೆ. ವಿದ್ವತ್ತು ಹಾಗೂ ಮನ್ನಣೆಯ ದೃಷ್ಟಿಯಿಂದ ಪ್ರಸಿದ್ಧವಾಗಿರುವ ಕೆಲವು ವ್ಯಾಖ್ಯಾನಗಳನ್ನೂ ನಿಬಂಧಗಳನ್ನೂ ಈ ಮುಂದೆ ಸಂಗ್ರಹಿಸಿ ಕೊಡಲಾಗಿದೆ.

ಅಸಹಾಯ :—(ಕ್ರಿ.ಶ.ಸಂ. ೬೦೦-೭೫೦) ಈತನು ಗೌತಮ, ಮನು ಮತ್ತು ನಾರದರ ಕೃತಿಗಳಿಗೆ ಭಾಷ್ಯಗಳನ್ನು ರಚಿಸಿದ್ದನೆಂಬುದು ವಿಶ್ವರೂಪ, ಮೇಧಾತಿಥಿ, ಅನಿರುದ್ಧ ಮುಂತಾದವರ

ಉಲ್ಲೇಖಗಳಿಂದ ತಿಳಿದು ಬರುತ್ತದೆ. ಯಾವುದೂ ಸಹ ಮೂಲ ರೂಪದಲ್ಲಿ ಉಪಲಬ್ಧವಾಗಿಲ್ಲದಿದ್ದರೂ ಸಹ ಈತನೇ ಎಲ್ಲಾ ವ್ಯಾಖ್ಯಾನಕಾರ-ನಿಬಂಧಕಾರರಿಗಿಂತ ಪುರಾತನನೆಂಬ ಮನ್ನಣೆಗಾಗಿ ಇವನ ಹೆಸರನ್ನು ಮೊದಲು ಸೂಚಿಸುವುದು ಉಚಿತ. ಈತನ ನಾರದ ಭಾಷ್ಯದ ಕೆಲವು ಭಾಗಗಳು ಮಾತ್ರ ಉಳಿದುಕೊಂಡಿದ್ದು ಕಲ್ಯಾಣ ಭಟ್ಟನೆಂಬುವವನಿಂದ ತೀವ್ರತರವಾಗಿ ಪರಿಷ್ಕರಿಸಲ್ಪಟ್ಟಿವೆ. ವ್ಯವಹಾರಕಾಂಡಕ್ಕೆ ಸೇರಿದ ಅಷ್ಟಾದಶ ವ್ಯವಹಾರಪದ (ಸ್ಥಾನ) ಗಳಲ್ಲಿ ಐದನೆಯದಾದ ಅಭ್ಯುಪೇತ್ಯ-ಅಶುಶ್ರೂಷಾ (ಒಪ್ಪಿಕೊಂಡ ಕೆಲಸ ಮಾಡದಿರುವುದು) ಎಂಬ ಪ್ರಕರಣದ ಇಪ್ಪತ್ತೊಂದನೆಯ ಶ್ಲೋಕದವರೆಗೆ ಮಾತ್ರ ಇಂದು ನಮಗೆ ದೊರೆಯುತ್ತದೆ. ಅಸಹಾಯನ ಕೆಲವು ನಿರ್ಣಯಗಳು ಅನಿರುದ್ಧನ ಹಾರಲತಾ, ಚಂಡೇಶ್ವರನ ವಿವಾದರತ್ನಾಕರ ಮತ್ತು ಮುಖ್ಯವಾಗಿ ಪ್ರತಾಪರುದ್ರ ದೇವನ ಸರಸ್ವತೀವಿಲಾಸ ಮುಂತಾದ ಕೃತಿಗಳಲ್ಲಿ ಉಳಿದುಕೊಂಡಿವೆ. ಭಾರತೀಯ ನ್ಯಾಯ (ವ್ಯವಹಾರ) ನಿರ್ಣಯವನ್ನು ಕ್ರಮಬದ್ಧ ವ್ಯವಸ್ಥೆಯ ರೂಪಕ್ಕೆ ತಂದವರಲ್ಲಿ ಅಸಹಾಯನೇ ಪ್ರಪ್ರಥಮನೆನ್ನಬಹುದು (ಯ.ಭಾ.ಸ. ೨-೨೭೦ ; ಹಿ.ಧ.ಶಾ. ೧-೨೪೭-೫೧).

ವಿಶ್ವರೂಪ (ಕ್ರಿ.ಶ. ೮೫೦) :— ಈತನು ಯಾಜ್ಞವಲ್ಕ್ಯ ಸ್ಮೃತಿಗೆ ಬಾಲಕ್ರೀಡಾ ಎಂಬ ವ್ಯಾಖ್ಯಾನವನ್ನು ರಚಿಸಿದ್ದಾನೆ. ವ್ಯವಹಾರ ಕಾಂಡಕ್ಕೆ ಸೇರಿದ ವ್ಯಾಖ್ಯಾನವು ಮುದ್ರಿತವಾಗಿ ಅಸಂಪೂರ್ಣವಾಗಿದ್ದರೂ, ಆಚಾರ ಮತ್ತು ಪ್ರಾಯಶ್ಚಿತ್ತ ಕಾಂಡಗಳ ಭಾಗವು ವಿಸ್ತರವಾಗಿದ್ದು ವಿಜ್ಞಾನೇಶ್ವರ 'ಮಿತಾಕ್ಷರಾ'ಕ್ಕೆ ಸಮಾನವಾಗಿದೆ. ಮೀಮಾಂಸಾಶಾಸ್ತ್ರದಲ್ಲಿ ಸಿದ್ಧಹಸ್ತನಾಗಿದ್ದ ಈತನು ಶಾಂಕರಾದ್ವೈತದಲ್ಲಿ ವಿಶೇಷ ಬಲವನ್ನು ಪ್ರದರ್ಶಿಸಿರುವುದಲ್ಲದೆ ಶಾಂಕರಕೃತಿಗಳಿಂದ ವಿಪುಲ ಉಲ್ಲೇಖಗಳನ್ನು ಕೊಡುತ್ತಾನೆ. ಶೈಲಿಯೂ ಸಹ ಶಂಕರರ ಶೈಲಿಯಂತೆ ಸರಳವೂ ಅಷ್ಟು ಪ್ರಖರವೂ ಆಗಿದೆ. ವೈದಿಕ ಗ್ರಂಥಗಳಿಂದಲೂ, ಸೂತ್ರ ಮತ್ತು ಸ್ಮೃತಿಗ್ರಂಥಗಳಿಂದಲೂ ಸಹ ಹೇರಳವಾಗಿ ಈತನು ಉದಾಹರಣೆಗಳನ್ನೀಯುತ್ತಾನೆ. ಮೂವತ್ತಕ್ಕಿಂತಲೂ ಹೆಚ್ಚು ಜನ ಸೂತ್ರಕಾರರನ್ನೂ ಸ್ಮೃತಿಕಾರರನ್ನೂ ಹೆಸರಿಸಿದ್ದಾನೆ. ವ್ಯಾಖ್ಯಾನಕಾರರಲ್ಲಿ ಅಸಹಾಯನ ಹೆಸರು ಮಾತ್ರ ಕಂಡು ಬರುತ್ತದೆ. ಬೃಹಸ್ಪತಿ, ಉಶನಸ್ ಮತ್ತು ವಿಶಾಲಾಕ್ಷರೆಂಬ ಪ್ರಸಿದ್ಧ ಅರ್ಥಶಾಸ್ತ್ರಕಾರರ ಉಲ್ಲೇಖವಿದ್ದರೂ ಸಹ ಕೌಟಿಲ್ಯನ ಹೆಸರನ್ನು ಈತನು ಸೂಚಿಸಿರುವುದಿಲ್ಲ. ಕುಮಾರಿಲರ ಶ್ಲೋಕ ವಾರ್ತಿಕದ ಉಲ್ಲೇಖವು ಈತನ ಕಾಲನಿರ್ಣಯಕ್ಕೆ ಸಹಾಯಕವಾಗಿದೆ. ಮುಂದಿನ ನಿಬಂಧಕಾರರಾಗಿ ಜೀಮೂತವಾಹನ, ದೇವಣ್ಣಭಟ್ಟ, ಅನಿರುದ್ಧ, ಪ್ರತಾಪರುದ್ರ ದೇವ, ವಿಜ್ಞಾನೇಶ್ವರ, ಹೇಮಾದ್ರಿ ಮುಂತಾದವರು ವಿಶ್ವರೂಪನನ್ನು ಉಲ್ಲೇಖಿಸಿದ್ದಾರೆ. ಕೆಲವರು ವಿಮರ್ಶಕರು ಈತನನ್ನು ಸುಪ್ರಸಿದ್ಧ ಶಾಂಕರ ಪಂಥದ 'ಸುರೇಶ್ವರ'ನೆಂತಲೂ, ಕೆಲವರು ಉಂಬೇಕ [ಭವಭೂತಿ] ಎಂತಲೂ ಗುರುತಿಸಲು ಪ್ರಯತ್ನಿಸಿದ್ದಾರೆ. ಆದರೆ ಇದು ಖಚಿತಾಭಿಪ್ರಾಯವಲ್ಲ.

ಶ್ರಾದ್ಧವನ್ನು ಕುರಿತು ಈತನ ಗ್ರಂಥಭಾಗವು ಸವಿಸ್ತರವೂ ಸ್ವಸಂಪೂರ್ಣವೂ ಆಗಿದ್ದು ಒಂದು ಪ್ರತ್ಯೇಕ ಕೃತಿಯೆಂದು ಭಾವಿಸಲ್ಪಟ್ಟಿದೆ. 'ವಿಶ್ವರೂಪ' ಎಂಬ ಹೆಸರಿನ ಮತ್ತೊಬ್ಬನು ವಿಶ್ವರೂಪ ನಿಬಂಧ' ವೊಂದನ್ನು ರಚಿಸಿದ್ದಾನೆ. (ಕ್ರಿ.ಶ. ೧೨೦೦)

ದಾಯವಿಭಾಗವನ್ನು ಕುರಿತ ಚರ್ಚೆಯಲ್ಲಿ ವಿಶ್ವರೂಪನಿಗೂ ವಿಜ್ಞಾನೇಶ್ವರನಿಗೂ ಅನೇಕ ಕಡೆ ಭಿನ್ನಾಭಿಪ್ರಾಯಗಳಿವೆ.

ಮೇಧಾತಿಥಿ [ಕ್ರಿ. ಶ. ೮೨೫-೯೦೦] :— ಈಗ ಉಪಲಬ್ಧವಿರುವ ಮನುಸ್ಮೃತಿಯ ಭಾಷ್ಯಗಳಲ್ಲೆಲ್ಲಾ ಈತನ ಭಾಷ್ಯವೇ ಪುರಾತನವಾದುದು. ವಿದ್ವತ್ಪೂರ್ಣವೂ ಸವಿಸ್ತರವೂ ಆದ ಈ ಭಾಷ್ಯದಲ್ಲಿ ಜೈಮಿನೀಯ ಮೀಮಾಂಸಾಶಾಸ್ತ್ರದ ವಿಧಿ-ಅರ್ಥವಾದ-ಪ್ರಕ್ರಿಯೆಗಳನ್ನು ಹೇರಳವಾಗಿ ಕಾಣಬಹುದು. ಈತನ ತಂದೆಯ ಹೆಸರು ವೀರಸ್ವಾಮಿ ಎಂತಲೂ, ಹಾಗೂ ಕಾಶ್ಮೀರವು ಇವನ ನಿವಾಸಭೂಮಿಯೆಂತಲೂ ವಿಮರ್ಶಕರು ಅಭಿಪ್ರಾಯಪಟ್ಟಿದ್ದಾರೆ. ಸ್ಮೃತಿಗಳನ್ನಲ್ಲದೆ ಮೇಧಾತಿಥಿಯು ಅಸಹಾಯ, ಭರ್ತೃಯಜ್ಞ, ಸಾಂಖ್ಯಕಾರಿಕಾ, ವಾಕ್ಯ ಪದೀಯ, ಕುಮಾರಿಲ ಮತ್ತು ಮಿಶ್ರ (ವಾಚಸ್ಪತಿ ಮಿಶ್ರ ?) ಇವರ ಉಲ್ಲೇಖಗಳನ್ನು ಕೊಡುತ್ತಾನೆ. ಈತನ ಹೆಸರನ್ನು ಕುಲ್ಲೂಕ, ಹೇಮಾದ್ರಿ ಇವರುಗಳು ಉಲ್ಲೇಖಿಸಿದ್ದಾರೆ.

ಮೇಧಾತಿಥಿಯ ಭಾಷ್ಯ "ಧರ್ಮದ ಎಲ್ಲ ಭಾಗಗಳನ್ನು ಕುರಿತ ಮಾಹಿತಿಗೆ ಒಂದು ಗಣಿ ಎನ್ನಬಹುದು" ಯು.ಭಾ.ಸ. ೨. ೨೭೦. ಈತನ ಸ್ಮೃತಿ ವಿವೇಕವೆಂಬ ಮತ್ತೊಂದು ಕೃತಿಯು "ಭಾರತೀಯ ಕಾನೂನಿನ ಅತ್ಯಂತ ವ್ಯವಸ್ಥಿತವಾದ ಸಾರ ಸಂಗ್ರಹ" ವೆಂದು ಇತರ ಉಲ್ಲೇಖ ಗಳಿಂದ ಕಂಡುಬರುತ್ತದೆ. ಆದರೆ ಈ ಗ್ರಂಥ ಉಪಲಬ್ಧವಿಲ್ಲ.

ಗೋವಿಂದರಾಜ ಕ್ರಿ ಶ. ೧೦೫೦-೧೧೦೦ :— 'ಮನುಟೀಕೆ' ಮತ್ತು 'ಸ್ಮೃತಿಮಂಜರಿ' ಎಂಬಿವು ಈತನ ಕೃತಿಗಳು. ಗಂಗಾತಟವಾಸಿ ನಾರಾಯಣನ ಮಗ ಮಾಧವಭಟ್ಟ ಈತನ ತಂದೆ. ತನ್ನ ಹಿಂದಿನ ಭಾಷ್ಯಕಾರ ಮೇಧಾತಿಥಿಯ ಹೆಸರನ್ನು ಈತ ಬೇಕೆಂತಲೇ ಹೇಳಿಲ್ಲವೆಂಬುದು ಕಂಡುಬರುತ್ತದೆ. ಮಿತಾಕ್ಷರವು ಮೇಧಾತಿಥಿಯ ಹೆಸರನ್ನು ಹೇಳಿ ಈತನನ್ನು ಕಡೆಗಣಿಸುತ್ತದೆ. ಆದರೆ ಅನಿರುದ್ಧ (ಹಾರಲತಾ), ಜೀಮೂತವಾಹನ (ಕಾಲವಿವೇಕ) ಇವರಿಗೆ ಗೋವಿಂದ ರಾಜಕೃತಿ ಬಹು ಪ್ರಸಿದ್ಧ ಪ್ರಮಾಣ. ಕುಲ್ಲೂಕಭಟ್ಟನು ನೂರಾರು ಸಾರಿ ಈತನ ಉಲ್ಲೇಖ ಮಾಡಿ ಹೀಯಾಳಿಸುತ್ತಾನೆ.

ವಿಜ್ಞಾನೇಶ್ವರ [ಕ್ರಿ ಶ. ೧೦೭೦, ೧೧೦೦] :—ಯಾಜ್ಞವಲ್ಕ್ಯ ಸ್ಮೃತಿಯನ್ನು ಕುರಿತ ಈತನ 'ಮಿತಾಕ್ಷರಾ' ಎಂಬ ಕೃತಿಯು ಹಿಂದೂ ಧರ್ಮಶಾಸ್ತ್ರ-ಸಾಹಿತ್ಯಾ ಕಾಶದಲ್ಲಿ ಒಂದು ಧ್ರುವ. ತಾರೆಯಂತಿದೆ. ವ್ಯಾಕರಣಶಾಸ್ತ್ರದಲ್ಲಿ ಪಾತಂಜಲ ಮಹಾಭಾಷ್ಯ ಅಥವಾ ಅಲಂಕಾರಶಾಸ್ತ್ರದಲ್ಲಿ

ಮಮ್ಮಟನ ಕಾವ್ಯಪ್ರಕಾಶ ಇವುಗಳಿಗಿರುವ ಮನ್ನಣೆ ಧರ್ಮಶಾಸ್ತ್ರ ಸಾಹಿತ್ಯದಲ್ಲಿ 'ಮಿತಾಕ್ಷರಾ'ಕ್ಕೆ ಲಭ್ಯವಾಗಿದೆ [ಹಿ. ಧ. ೧ ೨೮೭]. ಕೆಲವು ಹಸ್ತಪ್ರತಿಗಳಲ್ಲಿ ಇದನ್ನು 'ಋಜುಮಿತಾಕ್ಷರಾ' 'ಪ್ರಮಿತಾಕ್ಷರಾ'ವೆಂದೂ ಕರೆಯಲಾಗಿದೆ. [ಇತಿ ಯಜ್ಞವಲ್ಕ್ಯ ಮುನಿಶಾಸ್ತ್ರಗತಾ ವಿವೃತಿರ್ನ ಕಸ್ಯ ವಿಹಿತಾ ವಿದುಷಃ। ಪ್ರಮಿತಾಕ್ಷರಾಪಿ ವಿಪುಲಾರ್ಥವತೀ ಪರಿಷಿಂಚತಿ ಶ್ರವಣಯೋರಮೃತಂ ॥ ಗಂಭೀರಾಭಿಃ ಪ್ರಸನ್ನಾಭಿರ್ವಾಗ್ಭಿರ್ನ್ಯಸ್ತಾ ಮಿತಾಕ್ಷರಾ । ಅನಲ್ಪಾರ್ಥಾಭಿರಲ್ಪಾಭಿರ್ವಿವೃತಿರ್ವಿಹಿತಾ ಮಯಾ ॥ ಸಮಾಪ್ತಿ ಶ್ಲೋಕ ೨-೩].

ವಿಜ್ಞಾನೇಶ್ವರ :—ಮೂರು ಅಧ್ಯಾಯಗಳ ಯಾಜ್ಞವಲ್ಕ್ಯ ಸ್ಮೃತಿಯನ್ನು ಕ್ರಮವಾಗಿ ೧೩,೨೫, ಮತ್ತು ಐದು ಪ್ರಕರಣಗಳನ್ನಾಗಿ ವಿಷಯಕ್ಕೆ ತಕ್ಕಂತೆ ವಿಂಗಡಿಸಿಕೊಂಡಿದ್ದಾನೆ. ಮೂಲ ಶ್ಲೋಕಗಳ ವಿಷಯಪುಷ್ಟಿಗಾಗಿ ವೈದಿಕ ಪೌರಾಣಿಕ ಉಲ್ಲೇಖಗಳನ್ನಲ್ಲದೆ ಯಾಸ್ಕ, ಪಾಣಿನಿ, ಭರತ, ಪತಂಜಲಿ (ಯೋಗ) ಅಮರ ಮತ್ತು ಪ್ರಭಾಕರ (ಗುರು) ಇವರ ಕೃತಿಗಳಿಂದ ಉದಾಹರಣೆಗಳನ್ನು ಕೊಡುತ್ತಾನೆ. ಎಂಬತ್ತಕ್ಕಿಂತಲೂ ಹೆಚ್ಚು ಜನ ಸ್ಮೃತಿಕಾರರು, ಅಸಹಾಯ, ವಿಶ್ವರೂಪ, ಮೇಧಾತಿಥಿ, ಶ್ರೀಕರ, ಭಾರುಚಿ ಮತ್ತು ಭೋಜದೇವ ಈ ಆರುಜನ ನಿಬಂಧಕಾರರು, ಹೀಗೆ ತನ್ನ ಹಿಂದಿನ ಸುಮಾರು ಎರಡು ಸಹಸ್ರವರ್ಷಗಳ ಧರ್ಮಶಾಸ್ತ್ರ ವಿವೇಚನೆಯ ಸಾರಸರ್ವಸ್ವವನ್ನು ಪ್ರತಿನಿಧಿಸುತ್ತಿರುವ ಈ ಮಹಾಕೃತಿಯ ಮುಂದೆ ಬೆಳಕನ್ನು ಕಂಡ ಅನೇಕ ನಿಬಂಧಗಳಿಗೆ ಎಷ್ಟುಮೊಗೆದರೂ ಬತ್ತದ ಬುಗ್ಗೆಯಂತಾಯಿತು. ವಿಶ್ವರೂಪ, ಶೂಲಪಾಣಿ, ಅಪರಾರ್ಕ ಮತ್ತು ಮಿತ್ರಮಿಶ್ರ ಇವರುಗಳೂ ಸಹ ಯಾಜ್ಞವಲ್ಕ್ಯ ಸ್ಮೃತಿಗೆ ವ್ಯಾಖ್ಯಾನಗಳನ್ನು ರಚಿಸಿದರೂ ಯಾವುದೂ ಸಹ ಈತನ ವ್ಯಾಖ್ಯಾನಕ್ಕೆ ಹೆಗಲೆಣೆಯಾಗಿ ನಿಲ್ಲದಾಯಿತು. ಆಂಗ್ಲ ಆಡಳಿತ ಕಾಲದಲ್ಲಿ ಬಂಗಾಳವನ್ನುಳಿದು ಮಿಕ್ಕೆಲ್ಲ ಭಾಗಗಳಲ್ಲೂ ಹಿಂದೂ ನ್ಯಾಯದಾನನಿರ್ವಹಣೆಯಲ್ಲಿ ಪರಮಾಧಿಕಾರಸ್ಥಾನ ಈ ಗ್ರಂಥಕ್ಕೆ ಲಭಿಸಿತು. ವಸ್ತುತಃ ಇದು ಯಾಜ್ಞವಲ್ಕ್ಯಸ್ಮೃತಿಯ ವ್ಯಾಖ್ಯಾನವಾಗಿದ್ದರೂ ಧರ್ಮಶಾಸ್ತ್ರಗಳ ನಾನಾ ವಿಚಾರಗಳನ್ನೂ, ಅಭಿಪ್ರಾಯಗಳನ್ನೂ ಉಲ್ಲೇಖಿಸಿ, ವಿವೇಚಿಸಿ, ಉಚಿತ ವಿದ್ದೆಡೆ ಮೀಮಾಂಸಾಶಾಸ್ತ್ರ ಪ್ರಕ್ರಿಯೆಯನ್ನು ಅನ್ವಯಿಸಿ ಎಲ್ಲಾ ಅಭಿಪ್ರಾಯಗಳಿಗೂ ಒಂದು ಸಮನ್ವಯವನ್ನು ರೂಪಿಸಿ ಮುಂದಿನ ನಿಬಂಧಕಾರರಿಗೆ ಒಂದು ಕೈದೀವಿಗೆಯಾಯಿತು. ವಿಶ್ವೇಶ್ವರ, ನಂದಪಂಡಿತ ಮತ್ತು ಬಾಲಂಭಟ್ಟ ಇವರು 'ಮಿತಾಕ್ಷರಾ' ದ ವೃತ್ತಿಕಾರರಲ್ಲಿ ಪ್ರಸಿದ್ಧರು.

ವಿಜ್ಞಾನೇಶ್ವರನ ವೈಯಕ್ತಿಕ ವಿಷಯಗಳು ಅಷ್ಟಾಗಿ ತಿಳಿದುಬಂದಿಲ್ಲ. ಅವನ 'ಮಿತಾಕ್ಷರಾ ವ್ಯಾಖ್ಯಾನದ ಉಪಸಂಹಾರ ಪದ್ಯಗಳಲ್ಲಿ ತಾನು ಉತ್ತಮನ ಶಿಷ್ಯನಾದ ವಿಜ್ಞಾನೇಶ್ವರಯೋಗಿ, ತತ್ತ್ವವಿಜ್ಞಾನನಾಥ ; ತನ್ನ ಆಶ್ರಯದಾತ ವಿಕ್ರಮಾದಿತ್ಯ ದೇವ ; ಆತನ ರಾಜಧಾನಿ (ಪುರ) 'ಕಲ್ಯಾಣ' ವೆಂದೂ ತಿಳಿಸಿದ್ದಾನೆ. ಈ ರಾಜನೇ ಕ್ರಿ.ಶ. ೧೦೧೬ರಿಂದ೧೧೨೭ರ ತನಕ ಕಲ್ಯಾಣಿಯಲ್ಲಿ ರಾಜ್ಯವಾಳಿದ ಚಾಲುಕ್ಯ- ವಿಕ್ರಮಾದಿತ್ಯ. ಹೀಗೆ ಮೀಮಾಂಸಾಶಾಸ್ತ್ರದಲ್ಲಿ ತಲಸ್ಪರ್ಶಿಯಾದ ಪಾಂಡಿತ್ಯ, ವಿಭಿನ್ನರೀತಿಯ ಕಾನೂನುಗಳ ತೀರ್ಪಿನ ಸಂಶ್ಲೇಷಣೆಯಲ್ಲಿ ಸೂಕ್ಷ್ಮ

ವಿವೇಚನಾಶಕ್ತಿ, ಪರಮಹಂಸನಂತಹ ವಿರಕ್ತ, ಅತ್ಯಂತ ಪ್ರಭಾವಯುತನಾದ ರಾಜನ ಆಶ್ರಯ ಇವೆಲ್ಲವೂ ಸೇರಿ ವಿಜ್ಞಾನೇಶ್ವರನಿಗೆ ಅನುಪಮ ವಿಖ್ಯಾತಿಯನ್ನು ತಂದಿತ್ತವು, ಇದನ್ನು—

ನಾಸೀದಸ್ತಿ ಭವಿಷ್ಯತಿ ಕ್ಷಿತಿತಲೇ ಕಲ್ಯಾಣ ಕಲ್ಪಂ ಪುರಂ,

ನೋ ದೃಷ್ಟಃ ಶ್ರುತ ಏವ ವಾ ಕ್ಷಿತಿಪತಿಃ ಶ್ರೀ ವಿಕ್ರಮಾರ್ಕೋಪಮಃ ।

ವಿಜ್ಞಾನೇಶ್ವರ ಪಂಡಿತೋ ನ ಭಜತೇ ಕಿಂ ಚಾನ್ಯದನ್ಯೋಪಮ

ಶ್ಚಾಕಲ್ಪಂ ಸ್ಥಿರಮಸ್ತು ಕಲ್ಪಲತಿಕಾಕಲ್ಪಂ ತದೇತ್ರಯಂ ॥

ಎಂಬ ಪರಿಸಮಾಪ್ತಿ ಪದ್ಯ (೪)ವು ಸಮರ್ಥಿಸುತ್ತದೆ.

ನಿಯೋಗ, ದಾಯವಿಭಾಗ, ಮುಂತಾದ ಕೆಲವು ವಿಚಾರಗಳಲ್ಲಿ ವಿಶ್ವರೂಪನಿಗೂ ವಿಜ್ಞಾನೇಶ್ವರನಿಗೂ ಕೆಲವು ಅಭಿಪ್ರಾಯ ಭೇದಗಳನ್ನು ನಾವು ಕಾಣಬಹುದು.

ಲಕ್ಷ್ಮೀಧರ (ಕ್ರಿ. ಶ. ೧೧೩೦) :—ಈತನ ಕೃತಿ ಕೃತ್ಯಕಲ್ಪತರು ಅಥವಾ ಕಲ್ಪತರು. ಕೆಲವರು ನಿಬಂಧಕಾರರು ಕಲ್ಪದ್ರುಮ, ಕಲ್ಪವೃಕ್ಷವೆಂದೂ ಇದನ್ನು ಹೆಸರಿಸಿದ್ದಾರೆ. ಒಂದು ಕಾಲದಲ್ಲಿ ಮಿಥಿಲಾ, ಬಂಗಾಳ ಮತ್ತು ಇತರ ಔತ್ತರೇಯ ಪ್ರಾಂತಗಳಲ್ಲೆಲ್ಲಾ ತನ್ನ ಪ್ರಭಾವವನ್ನು ಪರಿಣಾಮಕಾರಕವಾಗಿ ಬೀಸಿದ್ದ ಈ ಕೃತಿಯ ಸಂಪೂರ್ಣ ಹಸ್ತ ಪ್ರತಿಗಳೂ ಇಂದು ನಮಗೆ ಲಬ್ಧವಾಗಿಲ್ಲ.

ಈ ನಿಬಂಧದಲ್ಲಿ ಹದಿನಾಲ್ಕು ಕಾಂಡಗಳಿದ್ದು 'ಮಿತಾಕ್ಷರಾ'ಕ್ಕಿಂತಲೂ ಬೃಹತ್ತಾಗಿದ್ದಂತೆ ಕಂಡು ಬಂದರೂ ಅದರ ವೈದುಷ್ಯ, ವಿಷಯ ಸಂಶ್ಲೇಷಣಾಶಕ್ತಿ, ನಿರ್ವಚನದಲ್ಲಿ ಧೀಮಂತ್ತೆ, ತೀಕ್ಷ್ಣ ವೈಚಾರಿಕತೆಗಳು ಇಲ್ಲಿಲ್ಲ. ಇಲ್ಲಿ ಸಾಮಾನ್ಯವಾಗಿ ಸ್ಮೃತಿಗಳು, ರಾಮಾಯಣ, ಮಹಾಭಾರತ ಮತ್ತು ಪುರಾಣಗಳ ಉಲ್ಲೇಖನಗಳಿವೆ. ವ್ಯವಹಾರ ಕಾಂಡದಲ್ಲಿ ಮೇಧಾತಿಥಿ, ಪ್ರಕಾಶ (?) ಪಾರಿಜಾತ (?) ಮಿತಾಕ್ಷರಾ, ಕಾಮಧೇನು, ಹಲಾಯುಧ (?)ಮುಂತಾದವರನ್ನು ಉಲ್ಲೇಖಿಸಲಾಗಿದೆ. ಮಿಥಿಲಾಸಂಪ್ರದಾಯದ ಚಂಡೇಶ್ವರ (ವಿವಾದ ರತ್ನಾಕರ), ಹೇಮಾದ್ರಿ, ಮಿತ್ರ ಮಿಶ್ರ (ವೀರಮಿತ್ರೋದಯ), ನಂದಪಡಿತ (ದತ್ತಕಮೀಮಾಂಸಾ) ಮುಂತಾದವರು ಕಲ್ಪತರುವನ್ನು ಉಲ್ಲೇಖಿಸಿರುವುದು ಇದರ ಜನಪ್ರಿಯತೆಗೆ ಸಮರ್ಥನೆಯಾಗಿದೆ.

ಜೀಮೂತವಾಹನ (ಕ್ರಿ. ಶ. ೧೦೯೦–೧೧೩೦):–ವಂಗ ದೇಶದ ಸುಪ್ರಸಿದ್ಧ ನಿಬಂಧಕಾರ ತ್ರಯರಲ್ಲಿ ಈತನು ಪ್ರಥಮ. ಶೂಲಪಾಣಿ ಮತ್ತು ರಘುನಂದರೇ ಇನ್ನಿಬ್ಬರು. ಜೀಮೂತವಾಹನನು 'ಧರ್ಮರತ್ನ'ವೆಂಬ ಬೃಹದ್‌ಗ್ರಂಥಕ್ಕೆ ರೂಪರೇಷೆಗಳನ್ನು ಹಾಕಿಕೊಂಡಿದ್ದನೆಂದೂ ಪ್ರಸ್ತುತ ಲಭ್ಯವಿರುವ 'ಕಾಲವಿವೇಕ', 'ವ್ಯವಹಾರಮಾತೃಕಾ' ಮತ್ತು

ದಾಯಭಾಗ ಎಂಬ ಕೃತಿಗಳು ಆ ಗ್ರಂಥದ ಮೂರು ಭಾಗಗಳಿಂದೂ ಹೇಳಲಾಗಿದೆ. (ಯು.ಭಾ. ಸಂ. ೨. ಪು. ೨೭೨).

ಕಾಲವಿವೇಕವು ಧಾರ್ಮಿಕವ್ರತ ಮತ್ತು ಕ್ರಿಯೆಗಳಿಗೆ ಉಚಿತವಾದ ಸಂವತ್ಸರ, ಮಾಸ, ತಿಥಿ, ಚಾಂದ್ರ ಮತ್ತು ಸೌರಮಾಸಗಳು ಮತ್ತು ಆಗ ಮಾಡತಕ್ಕ ವ್ರತ, ವಿಧಿ ಇತ್ಯಾದಿ, ಉತ್ಸರ್ಜನ ಮತ್ತು ಉಪಾಕರ್ಮ, ಅಗಸ್ತ್ಯೋದಯ, ವಿಷ್ಣುವಿನ ಯೋಗ ನಿದ್ರಾಕಾಲ, ದುರ್ಗೋತ್ಸವದ ಕಾಲ ಇತ್ಯಾದಿಗಳನ್ನು ತಿಳಿಸುತ್ತದೆ. ಈ ಗ್ರಂಥದಲ್ಲಿ ಜೀಮೂತವಾಹನನು ತನ್ನ ಹಿಂದಿನ ನಿಬಂಧಕಾರರಾದ ಜಿತೇಂದ್ರಿಯ, ಶಂಖಧರ, ಅಂಧೂಕ, ಸಂಭ್ರಮ, ಹರಿವಂಶ, ಧವಲ, ಯೋಗ್ಲೋಕ. ಅಮರ, ಉತ್ಪಲ, ಗೋವಿಂದರಾಜ, ಭೋಜದೇವ—(ಧಾರೇಶ್ವರ), ವಿಶ್ವರೂಪ ಇತ್ಯಾದಿಗಳಲ್ಲದೆ ಅನೇಕ ಸ್ಮೃತಿ, ಪುರಾಣಗಳನ್ನೂ ವರಾಹಮಿಹಿರ, ಬ್ರಹ್ಮಗುಪ್ತಾದಿ ಜ್ಯೋತಿಷಕಾರರನ್ನೂ ಹೆಸರಿಸಿದ್ದಾನೆ.

ವ್ಯವಹಾರಮಾತೃಕೆಯು ಅಷ್ಟಾದಶವ್ಯವಹಾರ ವಿಷಯಗಳನ್ನು ತಿಳಿಸುವ ಗ್ರಂಥದಿವ್ಯಗಳ ವಿಷಯಮಾತ್ರ ಇಲ್ಲಿ ಬರುವುದಿಲ್ಲ. ಇಲ್ಲಿಯೂ ಸಹ ಸುಮಾರು ಇಪ್ಪತ್ತುಜನ ಸ್ಮೃತಿಕಾರರು—ಮುಖ್ಯವಾಗಿ ಕಾತ್ಯಾಯನ, ಬೃಹಸ್ಪತಿ ಮತ್ತು ನಾರದ–ಇವರುಗಳ ಉಲ್ಲೇಖವಿದೆ. ಕಾಲ ವಿವೇಕದಲ್ಲಿ ಹೆಸರಿಸಿರುವ ಪೂರ್ವನಿಬಂಧಕಾರರ ಉಲ್ಲೇಖಗಳು ಹೆಚ್ಚು ಕಡಿಮೆ ಇಲ್ಲಿಯೂ ಇವೆ. ವಂಗನಾಡಿನಲ್ಲಿ ನ್ಯಾಯ ತೀರ್ಮಾನ ಕ್ರಮವನ್ನು ಕುರಿತು ಅತ್ಯಂತ ಪ್ರಾಚೀನವೂ ವಿಸ್ತಾರವೂ ಆದ ಕೃತಿ ಇದು. ಈ ವಿಷಯವನ್ನು ಕುರಿತು ನಿಖರವಾದ, ನೇರ ನಿರೂಪಣೆಯ ಹಾಗೂ ಅಂದಿನ ಕಾಲಕ್ಕೆ ಭಾಷಾಸೌಂದರ್ಯವುಳ್ಳ ಕೃತಿ.

ದಾಯಭಾಗವು ಜೀಮೂತವಾಹನ ಮೇರುಕೃತಿ. ಆಸ್ತಿವಿಭಾಗ, ಸ್ತ್ರೀಧನ ಪಾಲುಗಾರಿಕೆ ಮುಂತಾದ ವಿಚಾರಗಳಲ್ಲಿ ಆಂಗ್ಲರ ಆಡಳಿತೆಯ ಕಾಲದಲ್ಲೂ ಸಹ ಇದು ಅತ್ಯಂತ ಪ್ರಾಮಾಣಿಕ ಕೃತಿ. ಕೆಲವು ವಿಚಾರಗಳಲ್ಲಿ 'ದಾಯಭಾಗ'ಕ್ಕೂ 'ಮಿತಾಕ್ಷರಾ'ಕ್ಕೂ ಅಭಿಪ್ರಾಯಭೇದಗಳಿದ್ದರೂ ಸಹ ಪಾಲುಗಾರಿಕೆಯ ಮಾಲೀಕತ್ವ, ವಂಶ ಪಾರಂಪರ್ಯವಾದ ಹಕ್ಕುಬಾಧ್ಯತೆಗಳಲ್ಲಿ ಆಧ್ಯಾತ್ಮಿಕ ಉನ್ನತಿಯೇ ತೋರ್ಬೆರಳು ಎಂಬ ವಿಚಾರದಲ್ಲಿ ವಿಚಿತ್ರವೂ ಬಹು ಧೈರ್ಯದಿಂದ ಕೂಡಿದ್ದೂ ಆದ ಸಿದ್ಧಾಂತಗಳನ್ನುಮಾಡಿ ಈತನು ವಂಗ ಸಂಪ್ರದಾಯನಿಬಂಧಕಾರರಲ್ಲಿ ಸುಧಾರಕನೆಂಬ ಹೆಸರುಗಳಿಸಿಕೊಂಡಿದ್ದಾನೆ. ಈ ಕೃತಿಗೆ ಹನ್ನೆರಡುಕ್ಕೂ ಮೀರಿ ವ್ಯಾಖ್ಯಾನಗ್ರಂಥಗಳಿವೆಯೆಂದರೆ. ಇದರ ಲೋಕಪ್ರಸಿದ್ಧಿ ಅರ್ಥವಾಗುತ್ತದೆ. ರಘುನಂದನ ಮತ್ತು ಆತನ ಗುರುವಾದ ಶ್ರೀನಾಥಆಚಾರಚೂಡಾಮಣಿ ಇವರುಗಳ ವ್ಯಾಖ್ಯಾನಗಳು ಇವುಗಳಲ್ಲಿ ಪ್ರಸಿದ್ಧವಾದವುಗಳು.

ಜೀಮೂತವಾಹನನು ಬಂಗಾಳದ ರಾಢಾ ಜಿಲ್ಲೆಯ ಪಾರಿಭದ್ರವಂಶೀಯ ಮಹಾ ಮಹೋಪಾಧ್ಯಾಯನೆಂದೂ ವಿಷ್ವಕ್‌ಸೇನ ಮಹಾರಾಜನ ಪ್ರಾಡ್ವಿವಾಕನಾಗಿದ್ದನೆಂದೂ ತಿಳಿದು ಬಂದಿದೆ.

ಅಪರಾರ್ಕ (ಕ್ರಿ. ಶ. ೧೧೦೦–೧೧೩೦) :—ಯಾಜ್ಞವಲ್ಕ್ಯೀಯ ಧರ್ಮಶಾಸ್ತ್ರ ನಿಬಂಧ ವೆಂಬುದು ಈತನ ಕೃತಿ. ಇದು 'ಮಿತಾಕ್ಷರಾ'ದಂತೆ ಮೇಲ್ಕಂಡ ಸ್ಮೃತಿಯ ವ್ಯಾಖಾನ ವಾದರೂ ಸಹ ಗೃಹ್ಯ ಮತ್ತು ಧರ್ಮಸೂತ್ರಗಳು. ಸ್ಮೃತಿಗಳು, ಎಲ್ಲಾ ಪುರಾಣಗಳು ಮುಂತಾದವುಗಳಿಂದ ಉಚಿತ ಉಲ್ಲೇಖಗಳಿಂದಲೂ, ಅಲ್ಲಲ್ಲಿ ದೀರ್ಘ ವಿವರಗಳಿಂದಲೂ ಕೂಡಿ ಅದಕ್ಕಿಂತ ವಿಸ್ತೃತ ಗ್ರಂಥವಾಗಿದೆ. ಆದರೆ ತನ್ನ ಹಿಂದಿನ ನಿಬಂಧಕಾರರ ಹೆಸರು ಹೇಳುವುದರಲ್ಲಿ ಸಂಕೋಚ ಕಂಡುಬರುತ್ತದೆ. ಗಾತ್ರದಲ್ಲಿ ಮಿತಾಕ್ಷರಾಕ್ಕಿಂತ ದೊಡ್ಡದಾದರೂ ಅದರ ವಿದ್ವತ್‌ಪ್ರೌಢಿ, ವಿವೇಚನಾಸರಳತೆ, ವಾದಸೂಕ್ಷ್ಮತೆ ಇಲ್ಲಿ ಕಂಡುಬರುವುದಿಲ್ಲ. ಅಪರಾರ್ಕನು ಶಿಲಾಹಾರ ವಂಶದ ಜೀಮೂತವಾಹನರಾಜನ ಪೀಳಿಗೆಯವನು. ಕೊಂಕಣದಲ್ಲಿ ಈತನು ಆಳುತ್ತಿದ್ದನೆಂಬುದು ಶಾಸನಗಳಿಂದ ತಿಳಿದುಬರುತ್ತದೆ.

ಅನಿರುದ್ಧಭಟ್ಟ (ಕ್ರಿ. ಶ. ೧೧೩೦–೧೨೦೧) :— ಬಂಗಾಳದ ಬಲ್ಲಾಳ ಸೇನರಾಜನ ಗುರುವೂ, ಧರ್ಮಾಧಿಕಾರಿಯೂ ಆಗಿದ್ದ ಈತನ ಕೃತಿಗಳು ಹಾರಲತಾ ಮತ್ತು ಪಿತೃದಯಿತಾ. ಮೊದಲನೆಯದು ಸೂತಕ ಮತ್ತು ಶಾವಾಶೌಚಗಳು. ಮೈಲಿಗೆಯ ಕಾಲದಲ್ಲಿ ವಿಹಿತ ಮತ್ತು ನಿಷಿದ್ಧ ಕರ್ಮಗಳು, ಉತ್ತರಕ್ರಿಯೆ, ಅಧಿಕಾರಿಗಳು ಇತ್ಯಾದಿ ವಿಚಾರಗಳನ್ನು ; ಎರಡನೆಯ 'ಪಿತೃದಯಿತಾ' ಎಂಬುದು ಸಾಮವೇದಿಗಳ ಸಾಮಾನ್ಯ ಕರ್ಮಾಂತರವಿಚಾರವನ್ನು ತಿಳಿಸುತ್ತವೆ. ಇತರ ನಿಬಂಧಕಾರರಂತೆ ಈತನೂ ಸ್ಮೃತಿವ್ಯಾಖ್ಯಾನಗಳನ್ನು ಅಸಹಾಯ, ಕಾಮಧೇನು, ಗೋವಿಂದರಾಜ, ಭೋಜದೇವ, ವಿಶ್ವರೂಪ, ಶಂಖಧರಾದಿ ನಿಬಂಧಕಾರರನ್ನು ಉಲ್ಲೇಖಿಸಿದ್ದಾನೆ. ಅಲ್ಲದೆ ರುದ್ರಧರ (ಶುದ್ಧಿವಿವೇಕ), ಗೋವಿಂದಾನಂದ (ಶ್ರಾದ್ಧಕ್ರಿಯಾ ಕೌಮುದೀ), ರಘುನಂದನ (ಆಹ್ನಿಕತತ್ತ್ವ ಮತ್ತು ಶುದ್ಧಿತತ್ತ್ವ) ಮುಂತಾದವರು ಅನಿರುದ್ಧನನ್ನು ಪೂರ್ವಪ್ರಮಾಣವಾಗಿ ಅಂಗೀಕರಿಸಿದ್ದಾರೆ ಈತನು ಮೇಲೆ ಹೇಳಿದ ಬಲ್ಲಾಳಸೇನರಾಜವಿರಚಿತ 'ದಾನಸಾಗರ' ವೆಂಬ ಗ್ರಂಥರಚನೆಗೆ ಮಾರ್ಗದರ್ಶನ ಮಾಡಿದನು (ಕ್ರಿ. ಶ. ೧೧೭೮).

ಬಲ್ಲಾಳಸೇನ (ಕ್ರಿ. ಶ. ೧೧೫೦–೧೨೦೦) :—ಬಂಗಾಳದ ಪ್ರಸಿದ್ಧನಾದ ಈ ದೊರೆಯು ಆಚಾರಸಾಗರ, ದಾನಸಾಗರ, ಪ್ರತಿಷ್ಠಾಸಾಗರ ಮತ್ತು ಅಧ್ಭುತಸಾಗರ ಎಂಬ ಕೃತಿಗಳನ್ನು ರಚಿಸಿದ್ದಾನೆ. ಈತನ ಧರ್ಮಾಧಿಕಾರಿ ಅನಿರುದ್ಧಭಟ್ಟ ಮತ್ತು ಇತರರ ದಿಗ್‌ದರ್ಶನದಲ್ಲಿ ರಚಿಸಿದನೆನ್ನಲಾಗಿದೆ. ಆಚಾರಸಾಗರವನ್ನು ವೇದಾಚಾರ್ಯನ ಸ್ಮೃತಿರತ್ನಾಕರ ಮತ್ತು ವಿಶ್ವೇಶ್ವರಭಟ್ಟನ ಮದನಪಾರಿಜಾತದಲ್ಲಿ ಉಲ್ಲೇಖಿಸಲಾಗಿದೆ, ದಾನಸಾಗರವು ಹದಿನಾರು ವಿಧ ದಾನಗಳನ್ನೂ ಇತರ ದಾನಗಳನ್ನೂ ವಿವರಿಸುತ್ತದೆ. ಇದು ಪುರಾಣಗಳನ್ನು

ಉಲ್ಲೇಖಿಸುವುದರಿಂದ ಪುರಾಣಗಳ ಗ್ರಂಥಪರಿಶೀಲನೆಗೆ ಸಹಾಯಕವಾಗಿದೆ. ಪ್ರತಿಷ್ಠಾಸಾಗರದಲ್ಲಿ ದೇವಾಲಯ, ವಾಪಿ, ಕೂಪ, ತಟಾಕಾದಿಗಳ ಸ್ಥಾಪನೆಯ ವಿಚಾರಗಳಿವೆ. ಅದ್ಭುತ ಸಾಗರವು ದೈವೀ ಉತ್ಪಾತಗಳು, ಆ ಕಾಲದಲ್ಲಿ ಮಾಡತಕ್ಕ ಕ್ರಿಯೆಗಳ ಬಗೆಯನ್ನು ವಿವರಿಸುವುದಾಗಿದ್ದು ಅಪೂರ್ಣವಾಗಿದ್ದುದನ್ನು ಆತನ ಮಗ ಲಕ್ಷ್ಮಣಸೇನನು ಪೂರ್ತಿಮಾಡಿದನು. ಚಂಡೇಶ್ವರ (ದಾನರತ್ನಾಕರಾ) ಕಮಲಾಕರಭಟ್ಟ (ನಿರ್ಣಯ ಸಿಂಧು) ಇವರು ಪ್ರತಿಷ್ಠಾ ಸಾಗರವನ್ನು ಉಲ್ಲೇಖಿಸಿದ್ದಾರೆ.

ದೇವಣ್ಣಭಟ್ಟ [ಕ್ರಿ. ಶ. ೧೧೫೦–೧೧೭೫] :—ದಾಕ್ಷಿಣಾತ್ಯ ನಿಬಂಧಕಾರರಲ್ಲಿ ಈತನು ಮತ್ತೊಬ್ಬ ಪ್ರಸಿದ್ಧವ್ಯಕ್ತಿ. ಮಿತಾಕ್ಷರಾವನ್ನು ಬಿಟ್ಟರೆ ಪ್ರಾಯಶಃ ಇವನಿಗೆ ಜನಮನ್ನಣೆ ಹೆಚ್ಚು ದೊರೆತಿದೆಯೆನ್ನಬಹುದು, ಸಂಸ್ಕಾರ, ಆಹ್ನಿಕ, ವ್ಯವಹಾರ, ಶ್ರಾದ್ಧ ಮತ್ತು ಆಶೌಚಗಳೆಂಬ ಪಂಚಕಾಂಡಗಳುಳ್ಳ ಈತನ ಕೃತಿ 'ಸ್ಮೃತಿಚಂದ್ರಿಕಾ' ಗಾತ್ರದಲ್ಲಿ ಮಿತಾಕ್ಷರಾಕ್ಕೆ ಎರಡರಷ್ಟಿದೆ—"ಸರ್ವಲೋಕಹಿತಾರ್ಥಾಯ ಕ್ರಿಯತೇ ಸ್ಮೃತಿಚಂದ್ರಿಕಾ । ಸ್ವಾಭಿಪ್ರಾಯೇಣ ಹಿ ಮಯಾ ನ ಕಿಂಚಿದಿಹ ಲಿಖ್ಯತೇ" ಎಂದು ಪೀಠಿಕೆ ಹಾಕಿಕೊಂಡಿರುವ ಈತನು ನಾನಾ ಸ್ಮೃತಿಗ್ರಂಥಗಳಿಂದಲೂ, ಪೂರ್ವನಿಬಂಧಕಾರರಾದ ವಿಶ್ವರೂಪ, ಮೇಧಾತಿಥಿ, ಭೋಜ, ವಿಜ್ಞಾನೇಶ್ವರ, ಅಪರಾರ್ಕ, ಶ್ರೀಧರಾಚಾರ್ಯ (ಸ್ಮೃತ್ಯರ್ಥಸಾರ) ಇವರುಗಳಿಂದಲೂ ತ್ರಿಕಾಂಡಿ (ಅಮರ ?), ವೈಜಯಂತೀ (ಕೋಶ) ಗಳಿಂದಲೂ ಉಚಿತ ಉಲ್ಲೇಖಗಳನ್ನು ಕೊಡುತ್ತಾನೆ, ಕಾತ್ಯಾಯನ, ಬೃಹಸ್ಪತಿ ಇವರ ಸ್ಮೃತಿಗಳಿಂದ ಸುಮಾರು ಐದುನೂರರಷ್ಟು ಶ್ಲೋಕಗಳನ್ನು ಉಲ್ಲೇಖಿಸಿರುವುದರಿಂದ ಆ ಸ್ಮೃತಿಗಳ ಗ್ರಂಥ ಸಂಪಾದನೆಗೆ ಸಹಾಯ ದೊರೆಯುತ್ತದೆ.

ದೇವಣ್ಣನು ವಿಜ್ಞಾನೇಶ್ವರನನ್ನು ಗೌರವದಿಂದ ಉದ್ಧರಿಸಿದರೂ ಸಹ 'ದಾಯ' ಶಬ್ದ ನಿರ್ವಚನ, ಪಿತ್ರಾರ್ಜಿತ ಆಸ್ತಿ ವಿಭಾಗದಲ್ಲಿ ಪುತ್ರರಿಗೆ ತಾರತಮ್ಯ, ದಿವಗಂತ ಪುತ್ರನ ಆಸ್ತಿಗೆ ತಂದೆ ಮಾತ್ರ ಹಕ್ಕುದಾರ ಎಂಬ ಆತನ ಅಭಿಪ್ರಾಯ, ಈ ವಿಚಾರಗಳಲ್ಲಿ ವಿರೋಧವ್ಯಕ್ತ ಪಡಿಸಿದ್ದಾನೆ. ದಾಯಂದ ಹಕ್ಕಿಗೆ ಅಪುತ್ರವತಿ ಮಗಳಿಗಿಂತ ಪುತ್ರವತಿ ಮಗಳಿಗೆ ಪ್ರಾಶಸ್ತ್ಯ ವನ್ನಿತ್ತಿದ್ದಾನೆ. ಹೇಮಾದ್ರಿ, ಪ್ರತಾಪರುದ್ರ '(ಸರಸ್ವತೀವಿಲಾಸ)' ಮಿತ್ರಮಿಶ್ರ (ವೀರಮಿತ್ರೋದಯ) ಇವರುಗಳು ಸ್ಮೃತಿ ಚಂದ್ರಿಕೆಯಿಂದ ಅನೇಕ ಉಲ್ಲೇಖ ಗಳನ್ನಿಯುತ್ತಾರೆ.

ಕೇಶವಾದಿತ್ಯಭಟ್ಟಸೋಮಯಾಜಿಯ ಪುತ್ರನಾದ ದೇವಣ್ಣಭಟ್ಟನ ಹೆಸರು ಕೆಲವು ಹಸ್ತಪ್ರತಿಗಳಲ್ಲಿ ದೇವಣ, ದೇವಗಣ, ದೇವಾನಂದ ಎಂಬುದಾಗಿ ಕಂಡುಬರುತ್ತದೆ. ಸ್ಮೃತಿಚಂದ್ರಿಕ ಎಂಬ ಹೆಸರಿನ ಇತರರ ಅಪ್ರಸಿದ್ಧ ಎರಡು ಮೂರು ಕೃತಿಗಳಿವೆ.

ಹರದತ್ತ (ಕ್ರಿ. ಶ. ಸ. ೧೧೦೦–೧೩೦೦ರ ಮಧ್ಯೆ) : ಈತನು ಸುಪ್ರಸಿದ್ಧ ಧರ್ಮಶಾಸ್ತ್ರ ಭಾಷ್ಯಕಾರ. ಆಪಸ್ತಂಬೀಯ ಮಂತ್ರಪಾಠಕ್ಕೆ ವೃತ್ತಿ, ಗೃಹ್ಯಸೂತ್ರಕ್ಕೆ ಅನಾಕುಲಾ ಎಂಬ ವೃತ್ತಿ, ಧರ್ಮಸೂತ್ರಕ್ಕೆ ಉಜ್ಜ್ವಲಾ ಎಂಬ ವೃತ್ತಿ, ಆಶ್ವಲಾಯನಗೃಹ್ಯ ಸೂತ್ರಕ್ಕೆ ಅನಾವಿಲಾ ಎಂಬ ವೃತ್ತಿ, ಗೌತಮಧರ್ಮಸೂತ್ರಕ್ಕೆ ಮಿತಾಕ್ಷರಾ ಎಂಬ ವೃತ್ತಿ ಈತನ ಕೃತಿಗಳು. ಇವುಗಳೆಲ್ಲವೂ ಸಹ ಆದರ್ಶಪ್ರಾಯವಾಗಿವೆ. ಅನೇಕ ಸ್ಮೃತಿ ಮತ್ತು ಪುರಾಣಾದಿಗಳಿಂದ ಉಲ್ಲೇಖಗಳನ್ನು ಈಯುವ ಈತನು ಯಾವ ಭಾಷ್ಯಕಾರ ನನ್ನಾಗಲೀ ನಿಬಂಧಕಾರನನ್ನಾಗಲೀ ಹೆಸರಿಸುವುದಿಲ್ಲ. ಆಪಸ್ತಂಬ ಮತ್ತು ಗೌತಮರ ಕೃತಿಗಳಲ್ಲಿ ಪಾಣಿನೀಯ ಪ್ರಯೋಗಗಳನ್ನು ತೋರಿಸಿ ತನಗೆ ಅಭಿಮತವಿರುವ ಪಾಠಗಳನ್ನು ಕೊಡುತ್ತಾನೆ. 'ಪದಮಂಜರಿ' ಎಂಬ ಕಾಶಿಕಾವೃತ್ತಿಯನ್ನು ಬರೆದವನು ಈತನಿರಬಹುದೆಂಬ ವಿಚಾರವನ್ನು ಡಾ॥ ಪಿ. ವಿ. ಕಾಣೆಯವರು (ಹಿ.ಧ.೧. ೩೩೧) ತಿಳಿಸುತ್ತಾರೆ. ಮಾಧವೀಯ–ಧಾತುವೃತ್ತಿಯು ಪದಮಂಜರಿಯನ್ನು ಉಲ್ಲೇಖಿಸುತ್ತದೆ. ವೀರಮಿತ್ರೋದಯ, ನಾರಾಯಣಭಟ್ಟನ ಪ್ರಯೋಗರತ್ನ, ವಿಶ್ವೇಶ್ವರಭಟ್ಟನ ಯಾಜ್ಞವಲ್ಕ್ಯ ಮಿತಾಕ್ಷರಾ ವೃತ್ತಿ ಮುಂತಾದವುಗಳಲ್ಲೂ ಸಹ ಹರದತ್ತ–ವೃತ್ತಿಗಳ ಉಲ್ಲೇಖಗಳಿವೆ.

ಹರದತ್ತನು ದಕ್ಷಿಣ ಭಾರತೀಯ ವಾಡಿಕೆಗಳಾದ ಸೋದರಮಾವನ ಮಕ್ಕಳೊಡನೆ ವಿವಾಹ ಇತ್ಯಾದಿಗಳನ್ನು ನಿಷೇಧಿಸದೆ ಒಪ್ಪಿಕೊಳ್ಳುವುದು, ತೆಲುಗು ಶಬ್ದಗಳ ಪ್ರಯೋಗ ಮಾಡಿರುವುದು ಇತ್ಯಾದಿಗಳ ಆಧಾರದ ಮೇಲೆ ದಕ್ಷಿಣ ಭಾರತೀಯನಿರಬೇಕೆಂದು ಅಭಿಪ್ರಾಯ ಪಡಲಾಗಿದೆ. ಇದೇ ಹೆಸರಿನ ಇಬ್ಬರು ಮೂವರು ಬೇರೆ ಬೇರೆ ಕೃತಿಗಳನ್ನು ರಚಿಸಿದ್ದಾರೆ ಎಂಬುದನ್ನು ಇಲ್ಲಿ ಸೂಚಿಸಬಹುದು.

ಹೇಮಾದ್ರಿ (ಕ್ರಿ. ಶ. ೧೨೬೦–೧೩೦೦) : ವಿಜ್ಞಾನೇಶ್ವರ, ಮಾಧವಾಚಾರ್ಯ, ದೇವಣ್ಣ ಭಟ್ಟ ಇವರ ಪಂಕ್ತಿಯಲ್ಲಿ ಹೆಸರಿಸಬಹುದಾದ ಈತನ ಮಹಾಕೃತಿ ಚತುರ್ವರ್ಗಚಿಂತಾಮಣಿ. ವ್ರತ, ದಾನ, ತೀರ್ಥ, ಮೋಕ್ಷ ಮತ್ತು ಪರಿಶೇಷಗಳೆಂಬ ಐದು ಖಂಡಗಳಲ್ಲಿ ಸಂಪೂರ್ಣವಾಗಿ ಒಂದು ವಿಶ್ವಕೋಶದ ಎತ್ತರ–ಬಿತ್ತರಗಳಲ್ಲಿ ರಚಿತವಾಗಬೇಕೆಂದು ಉದ್ದೇಶಿಸಲಾದ ಈ ಗ್ರಂಥ ಪೂರ್ಣವಾಗಿ ಉಪಲಬ್ಧವಿಲ್ಲ. ವ್ರತ, ದಾನ, ಶ್ರಾದ್ಧಗಳಿಗೆ ಸಂಬಂಧಿಸಿದ ಭಾಗಮಾತ್ರ ಅಚ್ಚಾಗಿದ್ದು ಆರು ಸಾವಿರ ಪುಟಗಳಷ್ಟಾಗಿದೆಯೆಂದಮೇಲೆ ಆ ಕೃತಿಯ ಬೃಹತ್ತ್ವವನ್ನು ಊಹಿಸಿಕೊಳ್ಳಬಹುದು, ಮೀಮಾಂಸೆಯಲ್ಲಿ ಸುಪರಿಚಿತ ರಾದವರಿಗೆ ಮಾತ್ರ ಈ ಕೃತಿಯ ಚರ್ಚೆಯ ಪ್ರತಿಸ್ವರವೂ ಅರ್ಥವಾದೀತು. ಹೇಮಾದ್ರಿಯ ವ್ರತ ಮತ್ತು ದಾನ ಖಂಡಗಳು ಮಹಾರಾಷ್ಟ್ರದಲ್ಲೇ ಅಲ್ಲದೆ ಇತರ ಪ್ರಾಂತಗಳಲ್ಲೂ ಬಹುಬೇಗ ಅಧಿಕೃತವೆಂದು ಪರಿಗಣಿತವಾದವು. ಈತನು ಸ್ಮೃತಿ, ಪುರಾಣಗಳಿಂದಲ್ಲದೆ ತನ್ನ ಹಿಂದಿನ ಸೂತ್ರಕಾರರು, ಭಾಷ್ಯಕಾರರು ಮತ್ತು ನಿಬಂಧಕಾರರಿಂದ ವಿಪುಲವಾಗಿ

ಉಲ್ಲೇಖಗಳನ್ನು ಕೊಟ್ಟಿದ್ದಾನೆ. ಮೂವತ್ತಕ್ಕೂ ಹೆಚ್ಚಾಗಿರುವ ಇವರಲ್ಲಿ ಆಪಸ್ತಂಭ ಧರ್ಮಸೂತ್ರಭಾಷ್ಯ, ವಿಶ್ವರೂಪ, ಮೇಧಾತಿಥಿ, ವಿಜ್ಞಾನೇಶ್ವರ, ದೇವಣ್ಣಭಟ್ಟ, ಅಪರಾರ್ಕ, ಗೋವಿಂದರಾಜ ಮುಂತಾದವರು ಪ್ರಮುಖರು. ಶೌನಕ ಪ್ರಣವಕಲ್ಪವೃತ್ತಿ, ಕಾತ್ಯಾಯನ ಆಧಾರಿತ ಶ್ರಾದ್ಧಕಲ್ಪ, ವೋಪದೇವನ (ಮುಗ್ಧಬೋಧಕಾರ) ಮುಕ್ತಾಫಲಕ್ಕೆ ಕೈವಲ್ಯ ದೀಪಿಕಾ ಎಂಬ ಟೀಕೆ, ವಾಗ್ಭಟನ ಆಯುರ್ವೇದಗ್ರಂಥ ಅಷ್ಟಾಂಗಹೃದಯಕ್ಕೆ ಆಯುರ್ವೇದ ರಸಾಯನ ಎಂಬ ವ್ಯಾಖ್ಯಾನ ಇವುಗಳು ಈತನ ಇತರ ಕೃತಿಗಳು.

ವತ್ಸಗೋತ್ರದ ವಾಸುದೇವನ ಪೌತ್ರನೂ, ಕಾಮದೇವನ ಪುತ್ರನೂ ಆಗಿದ್ದ ಈತನು ದೇವಗಿರಿಯ ಯಾದವದೊರೆ ಮಹಾದೇವನ [೧೨೬೦-೧೨೭೧] ಮಹಾಕರಣಾಧಿಕೃತ ನಾಗಿದ್ದು, ಮುಂದಿನ ರಾಜ ರಾಮಚಂದ್ರದೇವನ ಮಂತ್ರಿಯಾಗಿದ್ದನು. 'ನಾಸೀದಸ್ತಿ ಭವಿಷ್ಯತಿ ಕ್ಷಿತಿತಲೇ...' ಮುಂತಾಗಿ ವಿಜ್ಞಾನೇಶ್ವರ ಹೇಳಿಕೊಂಡಂತೆಯೇ ಈತನೂ ಸಹ "ನೈವಾಸೀನ್ನ ಚ ವರ್ತತೇ ನ ಭವಿತಾ ಹೇಮಾದ್ರಿಸೂರೇಃ ಪರ'' ಎಂದುಕೊಂಡಿರುವುದು ಉತ್ಪ್ರೇಕ್ಷೆಯಲ್ಲವೆನ್ನಬೇಕಾಗುತ್ತದೆ. ಈತನು ಜನೋಪಕಾರಿ ಕೃತ್ಯಗಳನ್ನು ಮಾಡಿಯೂ ಸಹ ತನ್ನ ರಾಜ್ಯದಲ್ಲಿ ಪ್ರಸಿದ್ಧನಾಗಿದ್ದನೆನ್ನುವುದು ಅನೇಕ ಶಾಸನ ಸಾಕ್ಷ್ಯಗಳಿಂದ ವೇದ್ಯವಾಗುತ್ತದೆ. ಮಾಧವಾಚಾರ್ಯ (ಕಾಲಮಾಧವೀಯ), ಮದನಪಾರಿಜಾತ (ಮದನಪಾಲ), ನಿರ್ಣಯಸಿಂಧು ಇತ್ಯಾದಿಗಳಲ್ಲಿ ಈತನ ಕೃತಿಯ ಉಲ್ಲೇಖಗಳಿವೆ. ವಿವಾಹ, ಶ್ರಾದ್ಧ ಇತ್ಯಾದಿಗಳಲ್ಲಿ ವೈದಿಕ ಶಾಖೆಯವರಿಗೆ ಉದಾರವಾದ ಮಾರ್ಗದರ್ಶನವನ್ನು ಈತನು ಇತ್ತಿದ್ದಾನೆ.

ಕುಲ್ಲೂಕಭಟ್ಟ (ಕಿ. ಶ. ೧೨೫೦-೧೩೦೦) : ಪ್ರಸಕ್ತ ಮನುಸ್ಮೃತಿ ವ್ಯಾಖ್ಯಾನಗಳಲ್ಲೆಲ್ಲಾ ಈತನ 'ಮನ್ವರ್ಥ ಮುಕ್ತಾವಳಿ'ಯೇ, ಸಂಕ್ಷೇಪತೆ, ಸರಳತೆ ನಿಖರತೆ, ಮುಂತಾದವುಗಳಿಂದ ಸುಪ್ರಸಿದ್ಧವಾಗಿದೆ ತನಗಿಂತ ಹಿಂದಿನವರಾದ ಮೇಧಾತಿಥಿ ಅದರಲ್ಲೂ ಗೋವಿಂದರಾಜ ಇವರ ಸಹಾಯವನ್ನು ವಿಪುಲವಾಗಿ ಪಡೆದಿರುವ ಈತನು-ನೈತನ್ಮೇಧಾತಿಥಿರಭಿದಧೇ ನಾಪಿ ಗೋವಿಂದರಾಜೋ । ವ್ಯಾಖ್ಯಾತಾರೋ ನ ಜಗುರಪರೇ- ಎಂದು ಉದ್ಗಾರವೆತ್ತಿದ್ದಾನೆ. ಆದರೂ ತನ್ನ ವ್ಯಾಖ್ಯಾನದ ಸಮಾಪ್ತಿ ಶ್ಲೋಕವೊಂದರಲ್ಲಿ ''ಸಾರಾಸಾರವಚಃ ಪ್ರಪಂಚನ ವಿಧೌ ಮೇಧಾತಿಥೇಶ್ಚಾತುರೀ" "ಸ್ತೋಕಂ ವಸ್ತು ನಿಗೂಢಮಲ್ಪವಚಸಾ ಗೋವಿಂದರಾಜೋ ಜಗೌ" ಎಂದು ಭಾಗಶಃ ಪ್ರಶಂಸೆಯನ್ನೇ ಮಾಡಿದ್ದಾನೆ. ತಾನು ಮಾತ್ರ "ಮಾನವಮರ್ಥತತ್ತ್ವಮಖಿಲಂ ವಕ್ತುಂಕೃತೋಽಯಂಶ್ರಮಃ" ಎಂದು ಆತ್ಮಪ್ರಶಂಸೆಮಾಡಿಕೊಂಡಿರುವುದನ್ನು ಸರ್‌ವಿಲಿಯಂ ಜೋನ್ಸ್‌ರಂತಹ ವಿಮರ್ಶಕರು "ಇದು ಅತಿ ಸಂಕ್ಷೇಪವಾದದ್ದು, ಆದರೆ ಅಷ್ಟೇ ಓಜಸ್ಸಿನಿಂದ ಕೂಡಿದೆ. ನಿರಾಡಂಬರವಾದರೂ ಹೆಚ್ಚಿನ ಪಾಂಡಿತ್ಯವುಳ್ಳದ್ದು. ಗಹನವಾದರೂ ಸರ್ವಸಮ್ಮತ ವಾದುದು. ಪ್ರಾಚೀನ ಅಥವಾ ಅರ್ವಾಚೀನವಾದ ಯಾವ ಗ್ರಂಥಕರ್ತನ ಮೇಲೂ ಇಂತಹ ವ್ಯಾಖ್ಯಾನಗ್ರಂಥ ಸಿದ್ಧವಾಗಿಲ್ಲ'' ಎಂದು ಸಮರ್ಥಿಸಿದ್ದಾರೆ (ಯು. ಭಾ. ಸಂ, ೨. ೨೭೧)

ಗೌಡದೇಶದ ವಾರೇಂದ್ರ ಕುಲದ ಈತನು ಕಾಶಿಯಲ್ಲಿ ನೆಲೆಸಿದ್ದು ಕೃತಿರಚನೆ ಮಾಡಿದನು. ತಂದೆ ಭಟ್ಟದಿವಾಕರ. ಕುಲ್ಲೂಕನು ಗರ್ಗ, ಭೋಜ, ವಾಮನ (ಕಾಶಿಕಾಕಾರ), ವಿಶ್ವರೂಪ (ಕೋಶಕಾರ), ಕಲ್ಪತರು, ಹಲಾಯುಧ ಮುಂತಾದ ಕೃತಿಗಳನ್ನೂ ಕೃತಿಕಾರರನ್ನೂ ಉಲ್ಲೇಖಿಸಿದ್ದಾನೆ. ಚಂಡೇಶ್ವರ (ರಾಜನೀತಿರತ್ನಾಕರ), ಶ್ರೀನಾಥ, 'ಗೋವಿಂದಾನಂದ, ರಘುನಂದನ ಮುಂತಾದವರು ಕುಲ್ಲೂಕಭಟ್ಟನನ್ನು ಉಲ್ಲೇಖಿಸುತ್ತಾರೆ. ಸ್ಮೃತಿಸಾಗರವೆಂಬ ಮತ್ತೊಂದು ಕೃತಿಯನ್ನೂ ಈತನು ರಚಿಸಿದ್ದಂತೆ ಕಂಡುಬರುತ್ತದೆ.

ಚಂಡೇಶ್ವರ (ಕ್ರಿ. ಶ. ೧೩೧೪-೧೩೭೦) :—ಮಿಥಿಲಾ ಸಂಪ್ರದಾಯದಲ್ಲಿ ಸುಪ್ರಸಿದ್ಧ ನಿಬಂಧಕಾರನಾದ ಈತನು 'ಸ್ಮೃತಿರತ್ನಾಕರ'ವೆಂಬ ಬೃಹದ್ ಗ್ರಂಥದ ಕರ್ತೃ. ಈ ಗ್ರಂಥದಲ್ಲಿ ಕೃತ್ಯ, ದಾನ, ವ್ಯವಹಾರ ಶುದ್ಧಿ, ಪೂಜಾ, ವಿವಾದ ಮತ್ತು ಗೃಹಸ್ಥವೆಂಬ ಏಳು ಭಾಗಗಳಿದ್ದು ಏಳೂ ಸಹ ಪ್ರತ್ಯೇಕ ಗ್ರಂಥಗಳಷ್ಟಿವೆ. ಕೃತ್ಯರತ್ನಾಕರದಲ್ಲಿ ೨೨ ತರಂಗಗಳಿದ್ದು ಧರ್ಮ, ವ್ರತಗಳು ಅವುಗಳ ಕಾಲ ಇತ್ಯಾದಿಗಳ ವಿವರವಿದೆ. ಗೃಹಸ್ಥರತ್ನಾಕರವು ಗೃಹಸ್ಥನ ಧರ್ಮವನ್ನು ೭೮ ತರಂಗಗಳಲ್ಲಿ ವರ್ಣಿಸಿದರೆ, ದಾನರತ್ನಾಕರವು ೨೯ ತರಂಗಗಳಲ್ಲಿ ವಿವಿಧ ದಾನ, ಉಚಿತ ಕಾಲ ಇತ್ಯಾದಿಗಳನ್ನು ವಿವರಿಸುತ್ತಾನೆ. ಒಂದು ನೂರು ತರಂಗಗಳ ವಿವಾದರತ್ನಾಕರವು ವಾಚಸ್ಪತಿ ಮಿಶ್ರನ ವಿವಾದ ಚಿಂತಾಮಣಿಯಂತೆ ಮಿಥಿಲಾ ಪ್ರಾಂತದ ಪ್ರಮಾಣ ಗ್ರಂಥವಾಗಿತ್ತು. ಮಿತಾಕ್ಷರಾ ಅಥವಾ ಚಂದ್ರಿಕೆಯಷ್ಟೇ ಇದರ ಗಾತ್ರ. ವ್ಯವಹಾರರತ್ನಾಕರವು ನ್ಯಾಯ ನಿರ್ಣಯಕ್ಕೆ ಸಂಬಂಧಿಸಿದುದು. ಶುದ್ಧಿರತ್ನಾಕರವು ೩೪ ತರಂಗಗಳಲ್ಲಿ ಶುದ್ಧಿ ವಿಚಾರವನ್ನು ಒಳಗೊಂಡಿದೆ. ಮಿಥಿಲೆಯ ರಾಜ ಭವೇಶ್ವರನ (ಸಂಧಿವಿಗ್ರಹಿಕ) ಮಂತ್ರಿಯಾಗಿದ್ದ ಈತನು ಆತನ ಪ್ರೇರಣೆಯಂತೆ ರಾಜನೀತಿರತ್ನಾಕರವೆಂಬ ಹದಿನಾರು ತರಂಗಗಳ ಗ್ರಂಥವೊಂದನ್ನು ರಚಿಸಿದನು. ಇವುಗಳಲ್ಲದೆ ಈತನು ಕೃತ್ಯಚಿಂತಾಮಣಿ, ದಾನವಾಕ್ಯಾವಲಿ, ಶಿವವಾಕ್ಯಾವಲಿ ಎಂಬ ಗ್ರಂಥಗಳನ್ನು ರಚಿಸಿದ್ದಂತೆ ಕಂಡುಬರುತ್ತದೆ. ತನ್ನ ಹಿಂದಿನ ಪ್ರಕಾಶ, ಪಾರಿಜಾತ, ಕಾಮಧೇನು, ಕಲ್ಪತರು ಮತ್ತು ಹಲಾಯುಧನಕೃತಿ ಈ ಐದನ್ನು ಮೀರಿಸಬೇಕೆಂದೂ ಕೃತಿ ರಚನೆಗೆ ಕೈಹಾಕಿ ತನ್ನ ಮಹತ್ವಾಕಾಂಕ್ಷೆಯನ್ನು ಸಫಲಗೊಳಿಸಿಕೊಂಡನು. ಸುಮಾರು ನಲವತ್ತು ಕೃತಿಕಾರರನ್ನು ಕೃತಿಗಳನ್ನು ಈತನು ಉಲ್ಲೇಖಿಸುತ್ತಾನೆ. ಮಿಥಿಲೆಯಲ್ಲಲ್ಲದೆ ಬಂಗಾಳದಲ್ಲಿಯೂ ಈತನ ಕೀರ್ತಿಯು ಹರಡಿತೆಂಬುದನ್ನು ಮಿಸರುಮಿಶ್ರ, ವರ್ಧಮಾನ ರಘುನಂದನ, ಮಿತ್ರಮಿಶ್ರ ಇವರುಗಳ ಉಲ್ಲೇಖಗಳಿಂದ ತಿಳಿದು ಬರುತ್ತದೆ. ಪ್ರಸಿದ್ಧ ವ್ಯಾಖ್ಯಾನಕಾರನಾದ ವಾಚಸ್ಪತಿ ಮಿಶ್ರನು ಇವನ ಪ್ರಾಮಾಣ್ಯವನ್ನು ಅಂಗೀಕರಿಸಿದ್ದಾನೆ.

ಮಾಧವಚಾರ್ಯ (ಕ್ರಿ. ಶ. ೧೩೩೦-೧೩೮೫) :—ದಾಕ್ಷಿಣಾತ್ಯ ಪಂಥದ ಧರ್ಮಶಾಸ್ತ್ರ ಲೇಖಕರಲ್ಲಿ ಸನ್ಮಾನ್ಯ ಪ್ರಥಮಸ್ಥಾನವು ಬಹುಮುಖ ಪ್ರತಿಭೆಯ ಬಹುಮುಖ ಕ್ರಿಯಾಶಕ್ತಿಯ ಇವರಿಗೆ ಸಲ್ಲಲೇಬೇಕಾಗುತ್ತದೆ. ಹಿಂದೂ ಸಂಸ್ಕೃತಿಯು ಪರಕೀಯರ ಧಾಳಿಯಿಂದ ವಿನಿಪಾತ ಮುಖವಾಗಿದ್ದುದನ್ನು ತಡೆದು ನಿಲ್ಲಿಸಿ ರಾಜಕೀಯವಾಗಿ, ಪಾರಮಾರ್ಥಿಕವಾಗಿ ಅದನ್ನು ಉದ್ಧಾರದತ್ತ

ಒಯ್ದ ಚಿರಂತನಧವಳಕೀರ್ತಿ ಪುಣ್ಯಶ್ಲೋಕರಾದ ಮಾಧವಾಚಾರ್ಯರದು ಇವರ ಕೃತಿಗಳಲ್ಲಿ ಧರ್ಮ ಶಾಸ್ತ್ರಕ್ಕೆ ಸಂಬಂಧಿಸಿದಂತೆ 'ಪರಾಶರ ಮಾಧವೀಯ' ಎಂಬ ಪರಾಶರಸ್ಮೃತಿಯ ವಿದ್ವತ್ ಪೂರ್ಣವೃತ್ತಿ ಮತ್ತು 'ಕಾಲಮಾಧವೀಯ' (ಕಾಲನಿರ್ಣಯ)ವೆಂಬ ಎರಡು ಪ್ರಸಿದ್ಧವಾಗಿವೆ. ಸುಮಾರು ೨೩೭೦ ಮುದ್ರಿತ ಪುಟಗಳಿರುವ ಪರಾಶರಸ್ಮೃತಿವೃತ್ತಿಯು ಕೇವಲ ವ್ಯಾಖ್ಯಾನ ವಾಗಿರದೆ, ವ್ಯಾವಹಾರಿಕ ಮತ್ತು ಧಾರ್ಮಿಕ ಕಟ್ಟು ಕಟ್ಟಳೆಗಳ, ಕಾನೂನುಗಳ ಸಾರಗ್ರಾಹಿಯಾದ ಕೈಪಿಡಿಯಾಗಿದೆ. ಮೂಲದಲ್ಲಿ ಒಂದೇ ಶ್ಲೋಕವಿರುವ ವ್ಯವಹಾರಭಾಗವನ್ನು ವ್ಯಾಖ್ಯಾನದಲ್ಲಿ ದೀರ್ಘವಾಗಿ ಲಂಬಿಸಿ ಸ್ವಯಂಪೂರ್ಣಕಾಂಡವನ್ನಾಗಿ ಮಾಡಿದ್ದಾರೆ. ಇದರಿಂದ ಈ ಕೃತಿಯು ದಕ್ಷಿಣ ಭಾರತದಲ್ಲಿ ಅಧಿಕಾರಿಕ ಪ್ರಮಾಣವಾಗಿ ಅಂಗೀಕೃತವಾಯಿತು. 'ಕಲೌ ಪರಾಶರಾಃ ಸ್ಮೃತಾಃ' [೧ ೨೪] ಎಂದು ತಾನೇ ಘೋಷಿಸಿಕೊಂಡಿರುವ ಪರಾಶರ ಸ್ಮೃತಿಯು ವೃತ್ತಿರೂಪ ದಿಂದ ರಾಜಕಾರಣಿಯೂ ವಿಜಯಚಕ್ರಾಧಿಪತ್ಯದ ಮಹಾ ಅಧ್ವರ್ಯುವೂ, ಯತಿಶ್ರೇಷ್ಠರೂ ಆಗಿದ್ದ ಮಾಧವವಿದ್ಯಾರಣ್ಯರ ಹಸ್ತಕಮಲೋದ್ಭವವಾಗಿ ಅಖಿಲ ಭಾರತೀಯ ಮನ್ನಣೆಯನ್ನು ಪಡೆಯಿತು. ಸರಳವೂ ಅನತಿ ವಿಸ್ತೃತವೂ ಆದ ಶೈಲಿಯಲ್ಲಿ ರಚಿತವಾಗಿರುವ ಈ ವೃತ್ತಿಯಲ್ಲಿ ಸ್ಮೃತಿ, ಪುರಾಣಾದಿಗಳಿಂದಲ್ಲದೆ, ಅಪರಾರ್ಕ ದೇವಸ್ವಾಮಿ, ಮೇಧಾತಿಥಿ, ವಿಶ್ವರೂಪಾಚಾರ್ಯ, ಸ್ಮೃತಿಚಂದ್ರಿಕಾಗಳಿಂದಲೂ ಉಲ್ಲೇಖಗಳಿವೆ. ಪರಾಶರಸ್ಮೃತಿಗೆ ಈ ಮೊದಲು ವ್ಯಾಖ್ಯಾನಗಳಿರಲಿಲ್ಲವೆಂದು ಗ್ರಂಥವೇ ತಿಳಿಸುತ್ತದೆ. [ಪರಾಶರಸ್ಮೃತಿಃ ಪೂರ್ವೈರ್ನ ವ್ಯಾಖ್ಯಾತಾ ನಿಬಂಧೃಭಿಃ । ಮಯಾತೋ ಮಾಧವಾಚಾರ್ಯೇಣ ತದ್ವ್ಯಾಖ್ಯಾಯಾಂ ಪ್ರಯತ್ಯತೇ । ಪೀಠಿಕಾಶ್ಲೋಕ-೯]

ಕಾಲ ನಿರ್ಣಯವು ಐದು ಪ್ರಕರಣ (ಉಪೋದ್ಘಾತ, ವತ್ಸರ, ಪ್ರತಿಪದ, ಶಿಷ್ಟತಿಥಯಃ ನಕ್ಷತ್ರಾದಿಃ) ಗಳಲ್ಲಿ ಕಾಲ ಮತ್ತು ಅದರ ವಿಭಾಗಗಳು, ಆಯಾ ಕಾಲಗಳಲ್ಲಿ ವಿಹಿತ ಮತ್ತು ನಿಷಿದ್ಧ ವ್ರತಾದಿಗಳು ಮುಂತಾದುವನ್ನು ವಿವರಿಸುತ್ತದೆ. ಅನೇಕ ಪುರಾಣಗಳು, ಜ್ಯೋತಿಷ ಗ್ರಂಥಗಳು, ಖಗೋಳ ವಿಜ್ಞಾನಿಗಳ ಹೆಸರುಗಳು ಮತ್ತು ಉಲ್ಲೇಖಗಳೂ ಇಲ್ಲಿವೆ.

ಮಾಧವವಿದ್ಯಾರಣ್ಯರ ಜೀವನ, ಕಾರ್ಯ ಇತ್ಯಾದಿಗಳು ಲೋಕಪ್ರಸಿದ್ಧವಾಗಿರುವುದ ರಿಂದಲ್ಲೂ ಕರ್ನಾಟಕದ ಇತಿಹಾಸದ ಸುವರ್ಣಾಧ್ಯಾಯವನ್ನು ಬರೆದ 'ಶ್ರೀಕರ' ಅವರದಾಗಿ ರುವುದರಿಂದಲೂ ಆ ವಿಚಾರವನ್ನು ಇಲ್ಲಿ ವಿಸ್ತರಿಸುವುದು ಅಪ್ರಕೃತ. ಆಸಕ್ತರು ಡಿವಿಜಿಯವರ 'ವಿದ್ಯಾರಣ್ಯರ ಸಮಕಾಲೀನರು' ಸಿವೆಲ್(sewell)ರವರ 'TheForgotten empire' ಮಾಧವಕರುಣಾವಿಲಾಸ (ವಿದ್ಯಾರಣ್ಯ ವಿಜಯ) ಇತ್ಯಾದಿಗಳನ್ನೂ ಕರ್ನಾಟಕ ಇತಿಹಾಸ ಪರಂಪರೆಯನ್ನೂ ಪರಾಮರ್ಶಿಸಬಹುದು.

ಶೂಲಪಾಣಿ (ಕ್ರಿ.ಶ. ೧೪೧೫-೧೪೬೫) ಜೀಮೂತವಾಹನನಾದ ಮೇಲೆ ವಂಗಪಂಥೀಯ ನಿಬಂಧಕಾರರಲ್ಲಿ ಶೂಲಪಾಣಿಯೇ ಪ್ರಸಿದ್ಧ ವ್ಯಕ್ತಿ. ರಾಢೀಯ ಬ್ರಾಹ್ಮಣರ ಪೈಕಿ ಸಾಹುಡಿಯಾಳ

ವಂಶಕ್ಕೆ ಸೇರಿದ ಈತನು ಇಪ್ಪತ್ತು ವಿಂಕ್ಕು ಕೃತಿರಚನೆ ಮಾಡಿದಂತೆ ಕಂಡು ಬರುತ್ತದೆ. 'ಸ್ಮೃತಿ ವಿವೇಕ 'ವೆಂಬ ಬೃಹದ್ ಗ್ರಂಥವೊಂದನ್ನು ರಚಿಸಬೇಕೆಂಬ ಮಹೋದ್ದೇಶದಿಂದ ಹೊರಟ ಈತನು 'ವಿವೇಕ' ಎಂಬ ಅಂತ್ಯವುಳ್ಳ ಏಕಾದಶೀ, ತಿಥಿ, ದತ್ತಕ, ದುರ್ಗೋತ್ಸವ ಪ್ರಯೋಗ, ದುರ್ಗೋತ್ಸವ, ದೋಲಾ, ಪ್ರತಿಷ್ಠಾ, ರಾಸಯಾತ್ರಾ, ವ್ರತಕಾಲ, ಶುದ್ಧಿ, ಪ್ರಾಯಶ್ಚಿತ್ತ, ಸಂಕ್ರಾಂತಿ, ಸಂಬಂಧ (ವಿವಾಹ), ಪ್ರಾಯಶ್ಚಿತ್ತ ವೆಂಬ ಹದಿನಾಲ್ಕು ಕೃತಿಗಳನ್ನು ರಚಿಸಿದ್ದಾನೆ. ಇವುಗಳಲ್ಲಿ ಶ್ರಾದ್ಧವಿವೇಕ ಮತ್ತು ಪ್ರಾಯಶ್ಚಿತ್ತವಿವೇಕಗಳು ಗಹನ ಗ್ರಂಥಗಳಾಗಿದ್ದು ಮುಂದೆ ಶ್ರೀನಾಥಆಚಾರ್ಯಚೂಡಾಮಣಿ, ಗೋವಿಂದಾನಂದ, ಹರಿದಾಸತರ್ಕಾಚಾರ್ಯ, ಕವಿಕಂಕಣಾಚಾರ್ಯ, ಅಚ್ಯುತಚಕ್ರವರ್ತಿ, ಮಹೇಶ್ವರನ್ಯಾಯಾಲಂಕಾರ, ಶ್ರೀಕೃಷ್ಣ ತರ್ಕಾಲಂಕಾರ ಮುಂತಾದವರ ವ್ಯಾಖ್ಯಾನ ಗ್ರಂಥಗಳನ್ನು ಪಡೆವ ಸೌಭಾಗ್ಯ ದೊರೆತಿದೆ. ಶ್ರಾದ್ಧವಿವೇಕವು ಶೂಲಪಾಣಿಯ ಉದ್‌ಗ್ರಂಥ, ಕ್ಲಿಷ್ಟವಾದ ಮೀಮಾಂಸೆಯ ಪಾರಿಭಾಷಿಕ ಶಬ್ದಗಳಿಂದ ತುಂಬಿದೆ ಇದಕ್ಕಿಂತ ಮೊದಲು ಈತನು ದೀಪಕಲಿಕಾ ಎಂಬ ಹೆಸರಿನಿಂದ ಯಾಜ್ಞವಲ್ಕ್ಯನ ಸ್ಮೃತಿಯ ವ್ಯವಹಾರಕಾಂಡಕ್ಕೆ ವ್ಯಾಖ್ಯಾನ ಬರೆದಿದ್ದಾನೆ ಇದು ಮುಂದೆ ಮಿತ್ರಮಿಶ್ರ (ವೀರಮಿತ್ರೋದಯ), ರಘುನಂದನ ಮುಂತಾದವರ ಕೃತಿಗಳಲ್ಲಿ ಉಲ್ಲೇಖಗೊಂಡಿರುವ ಕೃತಿ, ಆಸ್ತಿ ವಿಭಾಗ ವಿಚಾರದಲ್ಲಿ ಈತನು ಜೀಮೂತವಾಹನ, ದೇವಣ್ಣಭಟ್ಟ ಇತ್ಯಾದಿಗಳ ಅಭಿಪ್ರಾಯವನ್ನು ಪುಷ್ಟೀಕರಿಸಿದ್ದಾನೆ. ಶ್ರಾದ್ಧ ವಿಚಾರದ ಇವನ ಕೃತಿಯನ್ನು ವಾಚಸ್ಪತಿಮಿಶ್ರ, ಗೋವಿಂದಾನಂದ, ರಘುನಂದನ ಇತ್ಯಾದಿಗಳು ಉಲ್ಲೇಖಿಸುತ್ತಾರೆ.

ವಾಚಸ್ಪತಿಮಿಶ್ರ (ಕ್ರಿ.ಶ.೧೪೫೦_೧೪೮೦) : — ಈತನು ಮಿಥಿಲಾ ಸಂಪ್ರದಾಯದಲ್ಲಿ ಅತಿ ಶ್ರೇಷ್ಠ ನಿಬಂಧಕಾರ ಈತನ ಕೃತಿ 'ವಿವಾದ ಚಿಂತಾಮಣಿಯು' ಅಧಿಕಾರಕವೆಂದು ನ್ಯಾಯಾಸ್ಥಾನಗಳಲ್ಲಿ ಪರಿಗಣಿತವಾಗಿತ್ತು "ಶಾಸ್ತ್ರೇ ದಶ ಸ್ಮೃತೌ ತ್ರಿಂಶನ್ನಿಬಂಧಾ ಯೇನ ಯೌವನೇ । ನಿರ್ಮಿತಾಸ್ತೇನ ಚರಮೋ ವಯಸ್ಯೇಷ ವಿನಿರ್ಮಿತಃ ॥"ಎಂಬುದಾಗಿ ತನ್ನ ಕೊನೆಯ ಕೃತಿ ಶ್ರಾದ್ಧಕಲ್ಪ (ಪಿತೃಭಕ್ತಿತರಂಗಿಣಿ) ದಲ್ಲಿ ಹೇಳಿ ಕೊಂಡಿರುವ ಈತನು 'ಚಿಂತಾಮಣಿ' ಎಂದು ಅಂತ್ಯವಾಗುವ ಹನ್ನೊಂದು ಕೃತಿಗಳನ್ನು ರಚಿಸಿದ್ದಾನೆ. ಆಹ್ನಿಕ ಚಿಂತಾಮಣಿಯು ವಾಜಸನೇಯಿಗಳ ಆಹ್ನಿಕ ವಿಧಿಗಳನ್ನು, ವರ್ಣಿಸುತ್ತದೆ. ಕೃತ್ಯ ಚಿಂತಾಮಣಿಯು ವರ್ಷದಲ್ಲಿ ಬರುವ 'ಪರ್ವ'ಗಳನ್ನೂ, ತೀರ್ಥಚಿಂತಾಮಣಿಯು ಪ್ರಯೋಗ, ಪುರುಷೋತ್ತಮ (ಪುರೀ), ಗಂಗಾ, ಗಯಾ, ಮತ್ತು ವಾರಾಣಸಿ ತೀರ್ಥದಲ್ಲಿ ಮಾಡಬೇಕಾದ ವಿಧಿಗಳನ್ನೂ ವಿವರಿಸುತ್ತದೆ. ದ್ವೈತಚಿಂತಾಮಣಿ, ನೀತಿಚಿಂತಾಮಣಿ, ಆಚಾರ ಚಿಂತಾಮಣಿ, ವಿವಾದ ಚಿಂತಾಮಣಿ, ವ್ಯವಹಾರ ಚಿಂತಾಮಣಿ, ಶುದ್ಧಿ ಚಿಂತಾಮಣಿ, ಶೂದ್ರಾಚಾರಚಿಂತಾಮಣಿ ಮತ್ತು ಶ್ರಾದ್ಧ ಚಿಂತಾಮಣಿಗಳು ಆಯಾವಿಚಾರಗಳನ್ನು ಕುರಿತ ಗ್ರಂಥಗಳು. ಇದಲ್ಲದೆ ಈತನು 'ನಿರ್ಣಯ' (ಉದಾ-ತಿಥಿನಿರ್ಣಯ)ವೆಂದು ಅಂತ್ಯವಾಗುವ ತಿಥಿ, ದ್ವೈತ (ಧರ್ಮಶಾಸ್ತ್ರದಲ್ಲಿ ಶಂಕಾಸ್ಪದ ವಿಷಯ), ಮಹಾದಾನ, ವಿವಾದ, ಶುದ್ಧಿ, ಇವುಗಳನ್ನು ಕುರಿತ ನಿಬಂಧಗಳನ್ನೂ ರಚಿಸಿದ್ದಾನೆ, ಮುಂದಿನ, ರಘುನಂದನ, ಗೋವಿಂದಾನಂದ, ಮಿತ್ರಮಿಶ್ರ

(ವೀರಮಿತ್ರೋದಯ), ವರ್ಧಮಾನ (ದಂಡವಿವೇಕ) ಮುಂತಾದವರು ವಾಚಸ್ಪತಿಯ ಕೃತಿಗಳಿಂದ ಉಲ್ಲೇಖಗಳನ್ನು ಮಾಡಿದ್ದಾರೆ. ಈತನಾದರೂ ಕಲ್ಪತರು, ಮಿತಾಕ್ಷರಾ, ಚತುರ್ವರ್ಗ ಚಿಂತಾಮಣಿ, ರತ್ನಾಕರ, ಪಾರಿಜಾತ ಮುಂತಾದವರನ್ನು ಉಲ್ಲೇಖಿಸಿದ್ದಾನೆ.

ವಾಚಸ್ಪತಿಯು ಮಿಥಿಲಾಸಂಪ್ರದಾಯದ ನಿಬಂಧಕಾರರಲ್ಲಿ ಶಿರೋಮಣಿಪ್ರಾಯನಾಗಿ ರಾಜಾಶ್ರಯವನ್ನು ಪಡೆದು, ಪರಮಗುರುವೆಂಬ ಹೆಸರು ಪಡೆದಿದ್ದನು (ಮು. ಭಾ. ಸಂ ೨. ೨೭೪. ೩. ೨೭೪). ಈತನ ಗ್ರಂಥಗಳ ಪೈಕಿ ಕಾನೂನನ್ನು ಕುರಿತ 'ವಿವಾದ ಚಿಂತಾಮಣಿ' ಹಾಗೂ ಕಾನೂನಿನ ವಿವಾದಾಸ್ಪದ ವಿಷಯಗಳನ್ನು ವಿವರಿಸುವ 'ದ್ವೈತ ನಿರ್ಣಯ' ಇವುಗಳು ಅತ್ಯಂತ ಪಾಂಡಿತ್ಯಪೂರ್ಣವಾದವು ಇವುಗಳ ಮೇಲೆ ಅನೇಕ ವ್ಯಾಖ್ಯಾನಗಳಿವೆ. ವ್ಯವಹಾರ ಚಿಂತಾಮಣಿಯು ಕಾನೂನು ವ್ಯವಸ್ಥೆಯನ್ನು ಕುರಿತ ಒಂದು ಸಾರಗ್ರಾಹಿಯಾದ ಕೃತಿ. ಈತನು ಸುಪ್ರಸಿದ್ಧ ತತ್ತ್ವಶಾಸ್ತ್ರವೇತ್ತನಾದ (ಭಾಮತೀಕಾರ) ವಾಚಸ್ಪತಿಮಿಶ್ರನಲ್ಲವೆಂಬುದನ್ನು ಇಲ್ಲಿ ಸೂಚಿಸುವುದು ಯುಕ್ತವಾದುದು.

ನೃಸಿಂಹಪ್ರಸಾದ (ಕ್ರಿ. ಶ. ೧೪೯೦–೧೫೧೨) :—ದೇವಗಿರಿಯ ಮುಸಲ್ಮಾನರಾಜನೂ 'ಜಗದ್ಗುರು'ವೆಂದು ಹೆಸರು ಪಡೆದವನೂ ಆಗಿದ್ದ ನಿಜಾಮ ಸಾಹನ (ಅಹಮದ್ ನಿಜಾಮ್‌ಷಾ ಅಥವಾ ಅವನ ಮಗ ಬುರ್ಹನ್ ನಿಜಾಮ್ ಷಾ) ಆಶ್ರಯ ಪಡೆದಿದ್ದ ದಲಪತಿ (ದಲಾಧೀಶ)ಯು ಇದರ ಕರ್ತೃ ಇನ್ನು ಪ್ರಕಾಶವನ್ನು ಕಾಣದಿರುವ ಈ ಕೃತಿಯು ಹನ್ನೆರಡು ಭಾಗಗಳ ವಿಶ್ವಕೋಶದಂತಹ ಕೃತಿ, ಪ್ರತಿಯೊಂದು ಭಾಗವೂ 'ಸಾರ'ವೆಂದು ಅಂತ್ಯವಾಗುತ್ತದೆ. [ಉದಾ : ಸಂಸ್ಕಾರಸಾರ, ಆಹ್ನಿಕಸಾರ].

ಪ್ರತಾಪರುದ್ರದೇವ [ಕ್ರಿ. ಶ. ೧೪೯೭–೧೫೩೯] :—ಒರಿಸ್ಸಾದ ರಾಜಧಾನಿ ಕಟಕ್ [ಕಟಕ]–ಇಂದಿನ ಭುವನೇಶ್ವರದಲ್ಲಿ ಕಪಿಲೇಂದ್ರ ಗಜಪತಿವಂಶಕ್ಕೆ ಸೇರಿದ ಪ್ರತಾಪರುದ್ರದೇವರಾಜನು ಸರಸ್ವತೀವಿಲಾಸವೆಂಬ ನಿಬಂಧಗ್ರಂಥವೊಂದನ್ನು ರಚಿಸಿದ್ದಾನೆ. ಕರ್ನಾಟಕದ ಕಲಬುರಿಗೇಶ್ವರ. [ನವಕೋಟಿ ಕರ್ನಾಟಕಲುಬುರಿಗೇಶ್ವರ ರಾಜಾಧಿರಾಜ ರಾಜರಾಜ ಪರಮೇಶ್ವರ ವೀರಪ್ರತಾಪರುದ್ರದೇವ ಮಹಾರಾಜ ವಿರಚಿತೇ ಸರಸ್ವತೀ ವಿಲಾಸೇ] ತಾನೆಂದು ಇಲ್ಲಿ ಹೇಳಿಕೊಂಡಿರುವುದರಿಂದ ಆಪ್ರಾಂತ ಈತನಿಗೆ ಆ ಕಾಲದಲ್ಲಿ ಸೇರಿತ್ತೆನ್ನಬಹುದು. ವಿಜ್ಞಾನಯೋಗಿ, ಅಪರಾರ್ಕ, ಭಾರುಚಿ ಮುಂತಾದವರಿಂದ ಪರಸ್ಪರ ವಿರೋಧಾಭಿಪ್ರಾಯಗಳು ಉಂಟಾಗಿ ಅವುಗಳ ಪರಿಹಾರಕ್ಕಾಗಿ ಕೃತಿ ರಚನೆ ಮಾಡಿದುದಾಗಿ ಪೀಠಿಕಾಶ್ಲೋಕಗಳಲ್ಲಿ ತಿಳಿಸಲಾಗಿದೆ. ಈತನಕ ಆಚಾರ ಮತ್ತು ವ್ಯವಹಾರ ಕಾಂಡಗಳು ಅಚ್ಚಾಗಿದ್ದು. ವ್ಯವಹಾರ ಕಾಂಡವು ದಕ್ಷಿಣಭಾರತದಲ್ಲಿ ಆಧಾಕಾರಿಕವೆಂದು ಅಂಗೀಕೃತವಾಗಿತ್ತು. ಇದರಲ್ಲಿ ವಿಜ್ಞಾನೇಶ್ವರ ಅಭಿಪ್ರಾಯಗಳಿಗೆ [ದಾಯವಿಭಾಗದಲ್ಲಿ] ಮನ್ನಣೆಯಿದ್ದರೂ ಅವನಿಂದ ವಿರೋಧಾಭಿಪ್ರಾಯಕ್ಕೆ ಅವಕಾಶವಾಗಿತ್ತೆನ್ನುವುದು ಪ್ರಶ್ನಾರ್ಥಕವಾಗಿದೆ ಈ ಕೃತಿಯಲ್ಲಿ ಮಾಮೂಲು ಧರ್ಮಸೂತ್ರ, ಸ್ಮೃತಿಗಳಲ್ಲದೆ ಅಪರಾರ್ಕ,

ಅಸಹಾಯ, ಧಾರೇಶ್ವರ, ಮಿತಾಕ್ಷರ, ಮೇಧಾತಿಥಿ ಇತ್ಯಾದಿಗಳನ್ನು ಉಲ್ಲೇಖಿಸಲಾಗಿದೆ. ದಿವ್ಯಗಳ ವಿಚಾರದಲ್ಲಿ ಆಚರಣೆಯಲ್ಲಿರುವ ದಿವ್ಯಗಳನ್ನು ವಿವರಿಸಲಾಗಿದೆ. ಪ್ರತಾಪಮಾರ್ತಂಡ ಅಥವಾ ಪ್ರೌಢಪ್ರತಾಪಮಾರ್ತಂಡವೆಂಬ ಐದು ಪ್ರಕಾಶ [ಭಾಗ]ಗಳ ಮತ್ತೊಂದು ಕೃತಿಯೂ ಈತನದೆನ್ನಬಹುದು. ಅದರಲ್ಲಿ ಪದಾರ್ಥನಿರ್ಣಯ, ವತ್ಸರಾದಿ ನಿರೂಪಣ, ತಿಥಿನಿರೂಪಣ, ವ್ರತನಿರ್ಣಯ ಮತ್ತು ವಿಷ್ಣುಭಕ್ತಿ ಈ ವಿಷಯಗಳು ನಿರೂಪಿತವಾಗಿವೆ. ಹೇಮಾದ್ರಿ, ಕಲ್ಪತರು, ರತ್ನಾಕರ, ಮಿತಾಕ್ಷರಾ, ಮಾಧವೀಯ ಸ್ಮೃತಿಚಂದ್ರಿಕಾ, ಅಪರಾರ್ಕ, ಪಾರಿಜಾತ, ಇತ್ಯಾದಿಗಳಿಂದ ಉಲ್ಲೇಖಗಳನ್ನು ಇಲ್ಲಿ ಕಾಣಬಹುದು.

ಗೋವಿಂದಾನಂದ [ಕ್ರಿ.ಶ. ೧೫೧೨-೧೫೩೫] : ವಂಗಪ್ರಾಂತೀಯ ನಿಬಂಧಕಾರನಾದ ಈತನು ಅನೇಕ ಕೃತಿಗಳನ್ನು ರಚಿಸಿ ಪ್ರಸಿದ್ಧನಾಗಿದ್ದರೂ ದಾನಕೌಮುದಿ, ಶುದ್ಧಿಕೌಮುದಿ, ಶ್ರಾದ್ಧಕೌಮುದಿ ಮತ್ತು ವರ್ಷಕ್ರಿಯಾಕೌಮುದಿಗಳು ಅಚ್ಚಾಗಿವೆ. ಇವೆಲ್ಲವೂ ಸಹ 'ಕ್ರಿಯಾ ಕೌಮುದಿ'ಯೆಂಬ ಬೃಹದ್‌ಗ್ರಂಥದ ಭಾಗಗಳಾಗಿರುವಂತಿದೆ. ಈತನು ಶೂಲಪಾಣಿಯ ಪ್ರಾಯಶ್ಚಿತ್ತವಿವೇಕಕ್ಕೂ, ಶ್ರೀನಿವಾಸನ ಶುದ್ಧಿದೀಪಿಕೆಗೂ ವ್ಯಾಖ್ಯಾನಗಳನ್ನು ಬರೆದಿದ್ದಾನೆ. ಅನೇಕ ಸೂತ್ರ, ಸ್ಮೃತಿ-ನಿಬಂಧಕಾರರನ್ನು ಈತನು ಹೆಸರಿಸಿರುವುದರಿಂದ ಅವುಗಳ ಅಧ್ಯಯನಕ್ಕೆ ಈತನ ಪ್ರತಿಗಳು ಸಹಕಾರಿಯಾಗಿವೆ. ಬಂಗಾಳದ ಮಿಡ್ನಾಪುರ ಜಿಲ್ಲೆಯ ಗಣಪತಿಭಟ್ಟನ ಮಗನಾದ ಈತನಿಗೆ ಕವಿಕಂಕಣಾಚಾರ್ಯನೆಂಬ ಕಾವ್ಯನಾಮವಿತ್ತು.

ರಘುನಂದನ [ಕ್ರಿ.ಶ. ೧೫೩೦-೭೫] ; ಸಂಪ್ರಸಿದ್ಧ ವಂಗಪಂಥೀಯ ನಿಬಂಧಕಾರತ್ರಯರಲ್ಲಿ ಈತನೇ ಕೊನೆಯವನು. ಮಹಾಮೇಧಾವಿಯೂ, ತನ್ನ ಹಿಂದಿನ ಸ್ಮೃತಿ ಮತ್ತು ನಿಬಂಧ ಸಾಹಿತ್ಯ ರಾಶಿಯನ್ನು ಕರತಲಾಮಲಕ ಮಾಡಿಕೊಂಡಿದ್ದವನೂ ಆದ ಈತನು ಅವುಗಳೆಲ್ಲವನ್ನೂ ಸೂಕ್ಷ್ಮವಾಗಿ ಪರಿಶೀಲಿಸಿ ೨೮ ಭಾಗಗಳಲ್ಲಿರುವ 'ಸ್ಮೃತಿತತ್ತ್ವ'ವೆಂಬ ಅತ್ಯಂತ ಪ್ರೌಢಗ್ರಂಥವನ್ನೂ ಇತರ ಹಲವು ಹನ್ನೆರಡು ಶಾಖೆಗಳಲ್ಲಿ ಮಾರ್ಗದರ್ಶಕ ಗ್ರಂಥಗಳನ್ನೂ ರಚಿಸಿ 'ಸ್ಮಾರ್ತ ಭಟ್ಟಾಚಾರ್ಯ' ಜಗದ್ಗುರು ! ಎಂಬ ಬಿರುದುಗಳಿಸಿದನು. ಒಂದು ಶತಮಾನದ ಹಿಂದೆಯೇ ಶೂಲಪಾಣಿಯು ಪ್ರಾರಂಭಿಸಿದ 'ನವ್ಯಸ್ಮೃತಿ' ಎಂಬ ನವದ್ವೀಪ ಸಂಪ್ರದಾಯವನ್ನು ಈತನು ಭದ್ರಬುನಾದಿಯ ಮೇಲೆ ಸ್ಥಾಪಿಸಿ ನಿಬಂಧ ಪ್ರಪಂಚವನ್ನು ತನ್ನ ಧೀಶಕ್ತಿಯಿಂದ ಮುನ್ನಡೆಸಿದನು. ಜೀಮೂತವಾಹನ ಮತ್ತು ಶೂಲಪಾಣಿಯನ್ನು ಬಿಟ್ಟು ಇತರ ಎಲ್ಲಾ ವಂಗೀಯ ನಿಬಂಧಕಾರರನ್ನೂ ಈತನು ಹಿಂದಿಕ್ಕಿ ಅನುಪಮ ವಿಜಯಪಥದಲ್ಲಿ ಮುಂದು ವರಿದನು. ಪೂರ್ವಭಾರತದಲ್ಲಿ ಆರ್ಯಸಂಸ್ಕೃತಿ ಕೇಂದ್ರವಾಗಿದ್ದ ನವದ್ವೀಪದಲ್ಲಿ ಬಾಳಿ, ಕಲಿತು, ಕಲಿಸಿ ಗ್ರಂಥರಚನೆ ಮಾಡಿದವನು ಈತ. ತಿಥಿಯನ್ನು ಕುರಿತ ತತ್ತ್ವಗಳು, ಉದ್ವಾಹ, ಪ್ರಾಯಶ್ಚಿತ್ತ, ಶುದ್ಧಿ, ಶ್ರಾದ್ಧ, ಮಲಮಾಸ ಮತ್ತು ಏಕಾದಶಿಗಳನ್ನು ಕುರಿತ ಆತನ ಏಳು ಪ್ರಮುಖ ಗ್ರಂಥಗಳು ಬಂಗಾಳದಾದ್ಯಂತ ಮೂರು ಶತಮಾನಗಳ ಕಾಲ ಅಧಿಕೃತ

ಕೃತಿಗಳೆನಿಸಿದುವು. ಈ ಕೃತಿಗಳು ಕಾಶೀರಾಮ ವಾಚಸ್ಪತಿ, ಗೋಪಾಲನ್ಯಾಯಪಂಚಾನನ ರಘುನಾಥ ಸಾರ್ವಭೌಮ, ರಾಧಾಮೋಹನವಿದ್ಯಾವಾಚಸ್ಪತಿ (ಗೋಸ್ವಾಮಿಭಟ್ಟಾಚಾರ್ಯ) ಮುಂತಾದ ಸುಪ್ರಸಿದ್ಧ ವಿದ್ವಾಂಸರ ವ್ಯಾಖ್ಯಾನಗಳಿಂದ ಮತ್ತಷ್ಟು ಬೆಳೆದು ಸಮೀಚೀನ ವಿವರಣೆಗಳಿಂದ ಕೂಡಿ ಜ್ಞಾನಪೀಠಗಳಲ್ಲಿ ಪ್ರಮುಖಪಾತ್ರವಹಿಸಿದ್ದುವು. ಆತನ ದಾಯ ತತ್ತ್ವವು ದಾಯ ವಿಭಾಗಕ್ಕೆ ಒಂದು ಪ್ರಮಾಣ ಗ್ರಂಥವಾಗಿತ್ತೆಂಬುದನ್ನು ಇಲ್ಲಿ ವಿಶೇಷವಾಗಿ ಪ್ರಸ್ತಾಪಿಸಬೇಕು.

ಶ್ರೀ ಕೃಷ್ಣಚೈತನ್ಯರ ಸಹಪಾಠಿಯೂ, ವಾಸುದೇವಸಾರ್ವಭೌಮರ ಶಿಷ್ಯನೂ ಆಗಿದ್ದ ಈತನು ವಂದ್ಯಘಾಟೀಯ ಬ್ರಾಹ್ಮಣ ಹರಿಹರ ಭಟ್ಟಾಚಾರ್ಯನ ಪುತ್ರರತ್ನ. ಈ ಮೊದಲೇ ಹೆಸರಿಸಲಾಗಿರುವ ಶ್ರೀನಾಥಆಚಾರಚೂಡಾಮಣಿಯೂ ಸಹ ಈತನ ಶಾಸ್ತ್ರಗುರು.

ನಾರಾಯಣಭಟ್ಟ [ಕ್ರಿ.ಶ. ೧೫೪೦-೭೦] : ಉತ್ತರ ಭಾರತದ ಸರಸ್ವತೀ ಪೀಠಗಳಲ್ಲೆಲ್ಲಾ ಪ್ರಸಿದ್ಧವಾದ ಕಾಶಿಯಲ್ಲಿ ದಾಕ್ಷಿಣಾತ್ಯ ಪಂಡಿತರ ವಿದ್ವತ್ ಪ್ರೌಢಿಮೆಯನ್ನು ವಿಶಾಲ ಭಾರತಕ್ಕೆ ಘೋಷಿಸಿ, ಆಸ್ಥಾನವನ್ನು ಇಂದಿಗೂ ಉಳಿಸಿಕೊಂಡಿರುವ ವೈದುಷ್ಯ ಸಂಪ್ರದಾಯಕ್ಕೆ ನಾಂದಿ ಹಾಡಿದ ಈತನು ದಕ್ಷಿಣದ ಪ್ರತಿಷ್ಠಾನ (ಈಗಿನ ಪೈಥಾನ್-ಔರಂಗಾಬಾದ್ ಜಿಲ್ಲೆ)ದಿಂದ ಕಾಶಿಗೆ ವಲಸೆಹೋದ ರಾಮೇಶ್ವರಭಟ್ಟನ ಮಗ. ಪ್ರಗಾಢ ವಿದ್ವಾಂಸನಾದ ತಂದೆಯ ಬಳಿ ವಿದ್ಯಾಭ್ಯಾಸಮಾಡಿದ ನಾರಾಯಣಭಟ್ಟನು ಅಯಸ್ಕಾಂತದಂತೆ ಸಂತೆತ್ತಲಿನ ವಿದ್ವಾಂಸರನ್ನು ತನ್ನತ್ತ ಆಕರ್ಷಿಸಿದನು. ಸಂಸ್ಕೃತ ಹಸ್ತಪ್ರತಿಗಳ ರಾಶಿ ರಾಶಿ ಅವನ ಬಳಿಯಿತ್ತು. ದೆಹಲಿಯಲ್ಲಿ ಮೊಗಲರ ಆಡಳಿತ ಪ್ರಾರಂಭವಾಗಿದ್ದ ಆದಿನಗಳಲ್ಲಿ ಆತನು ತನ್ನೊಂದು ಮಹಿಮೆಯಿಂದ ವೃಷ್ಟಿಯನ್ನು ತಂದು ಕಂಗಾಲಾಗಿದ್ದ ನಾಡನ್ನು ತಣಿಸಿದನಂತೆ. ತನ್ಮೂಲಕ ಕಾಶಿಯ ವಿಶ್ವೇಶ್ವರ ದೇವಾಲಯವನ್ನು ನೆಲಸಮ ಮಾಡಿಸಿದ್ದ ಮಹಮ್ಮದೀಯ ಸುಲ್ತಾನನಿಂದ ಮತ್ತೆ ಅದನ್ನು ಕಟ್ಟಿಸುವಂತೆ ಮಾಡಿದನಂತೆ. ತನ್ನ ಗಹನ ಪಾಂಡಿತ್ಯ ಹಾಗೂ ತತ್ಸಮಾನವಾದ ಸಾಧುತ್ವದಿಂದ 'ಜಗದ್ಗುರು'ವೆಂಬ ಪದವಿಗೆ ಪಾತ್ರನಾದ. ಈತನು ವಿದ್ವತ್ ಸಭೆಗಳಲ್ಲಿ, ವೈದಿಕ ಗೋಷ್ಠಿಗಳಲ್ಲಿ ಅಗ್ರಸ್ಥಾನದ ಮನ್ನಣೆ ಪಡೆದನು. ಈತನು ಅಂತ್ಯೇಷ್ಟಿ ಪದ್ಧತಿ, ತ್ರಿಸ್ಥಲೀಸೇತು (ಪ್ರಯಾಗ, ಕಾಶಿ, ಗಯಾ) ಮತ್ತು ಪ್ರಯೋಗರತ್ನ ಎಂಬ ಅಧಿಕಾರಿಕ ಗ್ರಂಥಗಳನ್ನು ರಚಿಸಿ ಅಖಿಲ ಭಾರತೀಯ ಖ್ಯಾತಿ ಗಳಿಸಿದನು. ಇವುಗಳಲ್ಲದೆ 'ಕಾಲಮಾಧವೀಯ'ದ ಪೀಠಿಕಾ ಶ್ಲೋಕಗಳಿಗೆ ವ್ಯಾಖ್ಯಾನ, ದಿವ್ಯಾನುಷ್ಠಾನ ಪದ್ಧತಿ, ವೃತ್ತರತ್ನಾಕರ (ಛಂದೋಗ್ರಂಥ) ಮುಂತಾದ ಕೃತಿಗಳನ್ನೂ ರಚಿಸಿದ್ದಾನೆ. ನಾರಾಯಣಭಟ್ಟನ ಕೀರ್ತಿಯು ಆತನ ಪುತ್ರರು ಅದರಲ್ಲಿಯೂ ಪೌತ್ರರಾದ ಕಮಲಾಕರಭಟ್ಟ (ನಿರ್ಣಯಸಿಂಧು), ನೀಲಕಂಠ ಇವರುಗಳಿಂದ ಮತ್ತೂ ಚಿರಸ್ಥಾಯಿಯಾಯಿತು.

ನಂದಪಂಡಿತ [ಕ್ರಿ. ಶ. ೧೫೫೫-೧೬೩೦] : ಕರ್ನಾಟಕದ ಬಿದಿರೆಯಿಂದ ಕಾಶಿಗೆ ವಲಸೆ ಹೋದ ಲಕ್ಷ್ಮೀಧರನ ವಂಶಜನಾದ ಈತನು ಮತ್ತೊಬ್ಬ ಸುಪ್ರಸಿದ್ಧ ನಿಬಂಧಕಾರ,

ತಂದೆ ರಾಮಪಂಡಿತ (ದೇವಶರ್ಮ). ಕಾಶಿಯಲ್ಲಿ ನೆಲೆಸಿದ್ದ ಕರ್ನಾಟಕದ ರಾಜವಂಶದವರ ಹಾಗೂ ಸ್ಥಳೀಯ ರಾಜವಂಶದವರ ಆಶ್ರಯವನ್ನು ಪಡೆದು ಧರ್ಮಾಧಿಕಾರಿಯಾಗಿದ್ದನೆಂಬುದು ವ್ಯಕ್ತವಾಗುತ್ತದೆ. ಸಾಧಾರಣ (ಈಗಿನ ಸಹರಾನ್‌ಪುರ್?)ದ ದೊರೆ ಪರಮಾನಂದ, ಕರ್ನಾಟಕದ ಕೊಂಡಪ್ಪರಸನ ಮಗ ತಮ್ಮರಸ (ಕೇಶವ) ನಾಯಕ, ಮಧುರೆಯ ಕೃಷ್ಣನಾಯಕನ ಗುರು ಶರ್ವಭಟ್ಟ ಈ ಎಲ್ಲರ ಹೆಸರುಗಳು ನಂದಪಂಡಿತನ ಸುಮಾರು ೧೫-೧೬ ಕೃತಿಗಳಲ್ಲಿ ಅಲ್ಲಲ್ಲಿ ಕಂಡು ಬರುತ್ತವೆ. ನಂದಪಂಡಿತನೂ ಸ್ವತಃ ಧರ್ಮಾಧಿಕಾರಿಯಾಗಿದ್ದನು.

ಈತನ ಕೃತಿಗಳಲ್ಲಿ 'ವಿದ್ವನ್ ಮನೋಹರಾ' ಎಂಬುದು ಪರಾಶರಸ್ಮೃತಿಯ ವ್ಯಾಖ್ಯಾನ, ಇದಕ್ಕೆ ಮಾಧವಾಚಾರ್ಯರ ಕೃತಿಯು ದಿಗ್ದರ್ಶನ, 'ಪ್ರಮಿತಾಕ್ಷರಾ' ಎಂಬುದು ಯಾಜ್ಞವಲ್ಕ್ಯ ಮಿತಾಕ್ಷರಾಕ್ಕೆ ವೃತ್ತಿ, ಬಾಲಭೂಷಾ ಮತ್ತು ಶುದ್ಧಿಚಂದ್ರಿಕಾ ಎಂಬ ಎರಡು ಕೃತಿಗಳೂ ವ್ಯಾಖ್ಯಾನ ಗ್ರಂಥಗಳು, ಸ್ಮೃತಸಿಂಧು, ಶ್ರಾದ್ಧಕಲ್ಪಲತಾ, ನವರತ್ನಪ್ರದೀಪ, ಹರಿವಂಶ ವಿಲಾಸ, ತೀರ್ಥಕಲ್ಪಲತಾ, ಕಾಲನಿರ್ಣಯಕೌತುಕ. ಕಾಶೀಪ್ರಕಾಶ, ಮಾಧವಾನಂದ, ಜ್ಯೋತಿಶ್ಶಾಸ್ತ್ರ ಸಮುಚ್ಚಯ, ಸ್ಮಾರ್ತ ಸಮುಚ್ಚಯಗಳೆಂಬುವು ಸ್ವತಂತ್ರ ನಿಬಂಧ ಕೃತಿಗಳು. ಇವನ ಸುಪ್ರಸಿದ್ಧ ಕೃತಿ ದತ್ತಕಮಿಮಾಂಸಾ. ಕೇಶವ ನಾಯಕನ ಪ್ರೋತ್ಸಾಹದಿಂದ ರಚಿಸಿದ್ದ ವಿಷ್ಣುಧರ್ಮಸೂತ್ರ ವ್ಯಾಖ್ಯಾನ 'ಕೇಶವವೈಜಯಂತೀ' ಎಂಬುದು.

ಮೇಲೆ ನಮೂದಿಸಿದ 'ದತ್ತಕ ಮೀಮಾಂಸಾ' ಕೃತಿಯು ಅಖಿಲ ಭಾರತೀಯ ಮನ್ನಣೆ ಪಡೆದು ನ್ಯಾಯಾಲಯಗಳಲ್ಲೂ ಅಧಿಕಾರಿಕವೆಂದು ಅಂಗೀಕೃತವಾಯಿತು, ಮಿಥಿಲಾ, ವಾರಣಸಿ ಮತ್ತು ಬೊಂಬಾಯಿ (ಮಹಾರಾಷ್ಟ್ರ) ಪ್ರಾಂತಗಳಲ್ಲಿ ಇದಕ್ಕೆ ಹೆಚ್ಚು ಪ್ರಾಶಸ್ತ್ಯ ದೊರೆಯಿತು. ಈ ಕೃತಿಯು ವಿಜ್ಞಾನೇಶ್ವರನ ಮಿತಾಕ್ಷರಾವನ್ನು ಆಧರಿಸಿದ್ದರೂ ಸಹ ಅವಶ್ಯವಿದ್ದಡೆ ಸ್ವತಂತ್ರಾಭಿಪ್ರಾಯವನ್ನು ಸಮರ್ಥಿಸುತ್ತದೆ. ಯಾರು, ಯಾವಾಗ, ಯಾರಿಂದ ಯಾರನ್ನು, ಏಕೆ, ಮತ್ತು ಹೇಗೆ ದತ್ತುವಾಗಿ ಸ್ವೀಕರಿಸಬೇಕೆಂಬುದನ್ನು ವಿವರಿಸಿ, ಉಚಿತ ವಿಧಿಗಳನ್ನು ಉಪದೇಶಿಸುವ ಈ ಕೃತಿಯಲ್ಲಿ ಬೇರೆ ತಂದೆಗೆ ಒಬ್ಬಳೇ ತಾಯಿಯಲ್ಲಿ ಹುಟ್ಟಿದ 'ಮಲ ಮಗ'ನಿಗೆ ಆಸ್ತಿಯ ಹಕ್ಕು, ವ್ಯಕ್ತಿಯೊಬ್ಬ ಅಪುತ್ರನಾಗಿ ಗತಿಸಿದಾಗ ಆತನ ಮಗಳಿಗಿಂತ ವಿಧವೆ ಸೊಸೆಗೆ ಆಸ್ತಿಯಲ್ಲಿ ಹಕ್ಕು ಮುಂತಾದ ವಿಚಾರಗಳಲ್ಲಿ ವಿಜ್ಞಾನೇಶ್ವರನಿಗೂ ನಂದಪಂಡಿತನಿಗೂ ಮತಭೇಧವಿದೆ.

ಕಮಲಾಕರಭಟ್ಟ (ಕ್ರಿ. ಶ. ೧೬೦೦-೧೬೪೦) : ಕಾಶಿಯಲ್ಲಿ ನೆಲಸಿದ ದಕ್ಷಿಣ ಭಾರತೀಯ ಭಾಟ್ಟವಂಶಜರಲ್ಲಿ ಈತನು ಮತ್ತೊಬ್ಬ ಅಖಿಲಭಾರತೀಯ ಮನ್ನಣೆ ಪಡೆದ ನಿಬಂಧಕಾರ, ಮೇಲೆ ತಿಳಿಸಿದ ನಾರಾಯಣ ಭಟ್ಟನ ಪೌತ್ರನೂ, ಮೀಮಾಂಸಾಶಾಸ್ತ್ರದಲ್ಲಿ ಪರಿಶ್ರಮ ಪಡೆದಿದ್ದ ರಾಮಕೃಷ್ಣಭಟ್ಟನ ಸುಪುತ್ರನೂ ಆದ ಈತನೂ ಭಾರತೀಯ ವಿದ್ವತ್ತಿನ ನಾನಾಪ್ರಕಾರಗಳಾದ ತರ್ಕ, ವ್ಯಾಕರಣ, ನ್ಯಾಯ, ಮೀಮಾಂಸಾ, ವೇದಾಂತ, ಅಲಂಕಾರ, ಧರ್ಮಶಾಸ್ತ್ರ ಮತ್ತು

ಶ್ರೌತ ಪ್ರಯೋಗಗಳಲ್ಲಿ ಪರಿಣತಿ ಪಡೆದ ಬಹುಮುಖ ಪ್ರತಿಭೆಯ ವಿದ್ವದಗ್ರೇಸರ. ನಿಬಂಧಕಾರಸಹಸ್ರದ ಮಧ್ಯೆ ಪ್ರಾಯಶಃ ನೀಲಕಂಠ ಮತ್ತು ಮಿತ್ರಮಿಶ್ರರನ್ನು ಬಿಟ್ಟರೆ ಮತ್ತಾವನೂ ಈತನಷ್ಟು ಕೃತಿರಚನೆ ಮಾಡಿಲ್ಲ, ಧರ್ಮಶಾಸ್ತ್ರದ ವಿವಿಧ ವಿಷಯಗಳಿಗೆ ಸಂಬಂಧಿಸಿದಂತೆ 'ಕಮಲಾಕರ' ಎಂದು ಅಂತ್ಯವಾಗುವ ಇಪ್ಪತ್ತೆರಡು ಕೃತಿಗಳು ಈತನ ಅವಿರತ ಲೇಖನಿಯಿಂದ ಅವ್ಯಾಹತವಾಗಿ ರೂಪ ತಳೆದವು, ಒಂದೊಂದೂ ಬೃಹತ್ ಕೃತಿಯೇ. ದಾನ ಕಮಲಾಕರ, ಶಾಂತಿಕಮಲಾಕರ, ಪೂರ್ತಕಮಲಾಕರ, ವ್ರತಕಮಲಾಕರ, ತತ್ವಕಮಲಾಕರ (ಶಾಂತಿತತ್ವಕೌತೂಹಲ), ನಿರ್ಣಯಕಮಲಾಕರ (ನಿರ್ಣಯಸಿಂಧು ಎಂದು ಪ್ರಸಿದ್ಧಿ) ಶೂದ್ರಕಮಲಾಕರ, ಪ್ರಾಯಶ್ಚಿತ್ತರತ್ನ, ವಿವಾದತಾಂಡವ, ಬಹ್ವೃಚಾಹ್ನಿಕ ಗೋತ್ರಪ್ರವರ ದರ್ಪಣ, ಕರ್ಮವಿಪಾಕರತ್ನ, ಸರ್ವತೀರ್ಥವಿಧಿ, ಮುಂತಾದುವೇ ಆತನ ಕೆಲವು ಕೃತಿಗಳು ಇವುಗಳಲ್ಲಿ ನಿರ್ಣಯಸಿಂಧು, ಶೂದ್ರಕಮಲಾಕರ ಮತ್ತು ವಿವಾದತಾಂಡವ ಈ ಮೂರು ಸುಪ್ರಸಿದ್ಧವಾಗಿವೆ.

ನಿರ್ಣಯಸಿಂಧುವು ಅಗಾಧ ವಿದ್ವತ್ತು, ಅವಿರತ ಪರಿಶ್ರಮ, ಮತ್ತು ಸ್ಪಷ್ಟ ನಿರೂಪಣೆಯ ಬೃಹನ್ಮೂರ್ತ ಸ್ವರೂಪ. ಇದರಲ್ಲಿ ಹೇಮಾದ್ರಿ, ಮಾಧವಾಚಾರ್ಯರಾದಿಯಾಗಿ ಮೂರು ನೂರು ಜನ ನಿಬಂಧಕಾರರನ್ನೂ, ಒಂದುನೂರು ಸ್ಮೃತಿಗಳನ್ನೂ ಹೆಸರಿಸಲಾಗಿದೆ. ಮೂರು ಪರಿಚ್ಛೇದಗಳ ಕೃತಿಯಲ್ಲಿ ಕಾಲನಿರ್ಣಯ, ವ್ರತಗಳು, ಸಂಸ್ಕಾರಗಳು, ಸಪಿಂಡಸಂಬಂಧ, ಮೂರ್ತಿಪ್ರತಿಷ್ಠೆ, ಸಂಮುಹೂರ್ತ, ಆಶೌಚ, ಅಂತ್ಯೇಷ್ಟಿ, ಸತೀಧರ್ಮ, ಸಂನ್ಯಾಸ ಮುಂತಾದ ಧಾರ್ಮಿಕ ವಿಷಯಗಳನ್ನು ಪ್ರತಿಪಾದಿಸಲಾಗಿದೆ. ಶೂದ್ರಕಮಲಾಕರವು ಶೂದ್ರಧರ್ಮಕ್ಕೆ ಪ್ರಾಮಾಣಿಕ ಗ್ರಂಥವೆಂದು ಅಂಗೀಕೃತವಾಗಿದೆ. ಮದನರತ್ನ, ಮದನಪಾರಿಜಾತ, ಶೂಲಪಾಣಿ, ಮಾಧವಾಚಾರ್ಯ, ಇಂದ್ರಾದಿ ನಿಬಂಧಕಾರರ ಉಲ್ಲೇಖಗಳು ಇದರಲ್ಲೂ ಇವೆ. ವಾರಣಾಸಿ ಮತ್ತು ಬೊಂಬಾಯಿ ಸಂಪ್ರದಾಯದ ಕಾನೂನುಗಳ ರೀತ್ಯಾ ನಿರ್ಣಯಸಿಂಧು ಅಧಿಕೃತವಾಗಿತ್ತು.

ನೀಲಕಂಠಭಟ್ಟ ಕ್ರಿ. ಶ. ೧೬೧೦–೧೬೪೫ :—ಅನುಸ್ಯೂತವಾಗಿ ಮೀಮಾಂಸಾಶ್ಯಾಸ್ತ್ರವು ರಕ್ತಗತವಾಗಿದ್ದ ವಿದ್ವಾದ್ ವಂಶೋದ್ಭವನಾದ ನೀಲಕಂಠನು ನಾರಾಯಣಭಟ್ಟನ ಪೌತ್ರ ; ಆತನ ಕಿರಿಯ ಮಗ ಶಂಕರಭಟ್ಟನ ಕುಮಾರ. ಅಜ್ಜ, ಅಪ್ಪ ಇಬ್ಬರೂ ಮೀಮಾಂಸಕರೆಂದ ಮೇಲೆ ಈತನ ಹೈಮಾಲಯ ಕೃತಿ-ಧರ್ಮಶಾಸ್ತ್ರದ ವಿಶ್ವಕೋಶ-ಮೂರುಪರಿಚ್ಛೇದಗಳೂ, ಹನ್ನೆರಡು ಮಯೂಖಗಳೂ ಇರುವ'ಭಗವಂತಭಾಸ್ಕರ', ಬುಂದೇಲಖಂಡದ ರಾಜ ಭಗವಂತದೇವನ ಆಶ್ರಯ ಪ್ರೋತ್ಸಾಹಗಳಿಂದ ಮೈತಳೆದ ಕೃತಿರತ್ನ. ಧರ್ಮಶಾಸ್ತ್ರದ ಮುಖ್ಯ ಪ್ರಮೇಯಗಳಾದ 'ಸಂಸ್ಕಾರ, ಆಚಾರ, ಕಾಲ, ಶ್ರಾದ್ಧ, ನೀತಿ, ವ್ಯವಹಾರ ದಾನ, ಉತ್ಸರ್ಗ, ಪ್ರತಿಷ್ಠಾ, ಪ್ರಾಯಶ್ಚಿತ್ತ, ಶುದ್ಧಿ ಮತ್ತು ಶಾಂತಿ ಎಂಬ ಹನ್ನೆರಡು ಮಯೂಖಗಳು ಇದರಲ್ಲಿವೆ.

ಈ ಹನ್ನೆರಡರಲ್ಲಿ 'ವ್ಯವಹಾರಮಯೂಖ'ವು ಹಿಂದೂ ನ್ಯಾಯ ಪದ್ಧತಿಯಲ್ಲಿ ಮಿತಾಕ್ಷರಾಕ್ಕೆ ಎಣೆಯಾದುದು. ವಿಜ್ಞಾನೇಶ್ವರನ ಮಾರ್ಗದರ್ಶನದಲ್ಲಿ ನೀಲಕಂಠನು ಮುಂದುವರೆದಿದ್ದರೂ

ಸಹ ಅಲ್ಲಲ್ಲಿ ಸ್ವಾಭಿಮತ ವಿಚಾರವನ್ನು ಪ್ರತಿಪಾದಿಸುವುದರಲ್ಲಿ ಸ್ವತಂತ್ರ ವೃತ್ತಿಯುವನ್ನೂ ದಾಯ ವಿಭಾಗ ವಿಚಾರದಲ್ಲಿ ನೀಲಕಂಠನಿಗೂ ಸೋದರ ಸಂಬಂಧಿ ಕಮಲಾಕರಭಟ್ಟನಿಗೂ ವಿವಾದವಿರುವುದನ್ನು ಡಾ॥ ಕಾಣೆಯವರು ತೋರಿಸಿದ್ದಾರೆ. ವ್ಯವಹಾರ ಮಯೂಖಕ್ಕೆ ಕಾಶಿ, ಬೊಂಬಾಯಿ, ಕೊಂಕಣ, ಗುಜರಾತ್ ಮತ್ತು ಉಳಿದ ಮಹಾರಾಷ್ಟ್ರ ಪ್ರಾಂತಗಳಲ್ಲಿ ನ್ಯಾಯಾಲಯಗಳಲ್ಲಿ ಮನ್ನಣೆ ದೊರೆತಿತ್ತು. ಇತರ ಮಯೂಖಗಳಲ್ಲಿ ಸಂಸ್ಕಾರ, ಪ್ರಾಯಶ್ಚಿತ್ತ ಮತ್ತು ಪ್ರತಿಷ್ಠಾ ಮಯೂಖಗಳಿಗೂ ಸಹ ಇದೇ ಮಾನ್ಯತೆ ಈಯಲಾಗಿತ್ತು.

ಒಟ್ಟಿನಲ್ಲಿ ಮಧ್ಯಕಾಲೀನ ಭಾರತೀಯ ಧರ್ಮಶಾಸ್ತ್ರಕಾರರ ಮಧ್ಯೆ ವಿಷಯದಲ್ಲಿ ಪ್ರಭುತ್ವ, ನಿರೂಪಣಾಸ್ಪಷ್ಟತೆ, ಶೈಲಿಯ ಸರಳತೆ, ದೃಷ್ಟಿಯಲ್ಲಿ ನಿಖರತೆ, ನಿರ್ಣಯದಲ್ಲಿ ಸಮತೋಲನ ಈ ವಿಶಿಷ್ಟ ಶಕ್ತಿಗಳನ್ನು ನಾವು ನೀಲಕಂಠನಲ್ಲಿ ಕಾಣುತ್ತೇವೆಂದರೆ ಉತ್ಪ್ರೇಕ್ಷೆಯಲ್ಲ.

ಮಿತ್ರಮಿಶ್ರ [ಕ್ರಿ. ಶ. ೧೬೧೦-೧೬೪೦]—: ನಿಬಂಧಕಾರರಲ್ಲಿ ದಕ್ಷಿಣಭಾರತದ ಹೇಮಾದ್ರಿ ಮತ್ತು ಉತ್ತರ ಭಾರತದ ಈ ನಮ್ಮ ಮಿತ್ರಮಿಶ್ರ ಈ ಈರ್ವರ ಕೃತಿಗಳು ನಿಬಂಧ ರಾಕ್ಷಸಗಳು. ಈ 'ವಾತಾಪಿ'ಗಳನ್ನು ಜೀರ್ಣಿಸಿಕೊಳ್ಳಲು ಅಗಸ್ತ್ಯ ಶಕ್ತಿಯೇ ಬೇಕಾದೀತು! ಪುಣ್ಯಕ್ಕೆ ಈ ಎರಡು ಕೃತಿಗಳೂ ಇನ್ನೂ ಸಂಪೂರ್ಣವಾಗಿ ಸಂಪಾದಿತವಾಗಿಲ್ಲ. ಬುಂದೇಲ್ ಖಂಡವನ್ನು ಆಳುತ್ತಿದ್ದ ವೀರಸಿಂಹದೇವನು ಅಕ್ಬರ ಚಕ್ರವರ್ತಿಯ ಮಿತ್ರ, ಮಿತ್ರಮಿಶ್ರನು ವೀರಸಿಂಹನ ಕೃಪಾಶ್ರಯದಲ್ಲಿ ಪೋಷಕ-ಕೃತಿಕಾರರಿಬ್ಬರ ಹೆಸರನ್ನೂ ಸಮನ್ವಯಗೊಳಿಸಿ ನಮಗೆ ಗೊತ್ತಿರುವ ಮಹಾಭಾರತಕ್ಕೆ ಗಾತ್ರದಲ್ಲಿ ಸುಮಾರು ಎರಡರಷ್ಟಿರುವ "ವೀರಮಿತ್ರೋದಯ"ವೆಂಬ ಗದ್ಯಪದ್ಯಾತ್ಮಕವೂ, ಇಪ್ಪತ್ತೆರಡು 'ಪ್ರಕಾಶ'ಗಳೆಂಬ ಬೃಹದ್‌ಭಾಗಗಳುಳ್ಳದ್ದೂ ಆದ ಮಹಾಕೃತಿಯನ್ನು ಬರೆದನು. "ವ್ರತಪ್ರಕಾಶ"ವೆಂಬ ಭಾಗದಲ್ಲಿ ೨೨೬೫೦ ಶ್ಲೋಕಗಳಿವೆ. [ಘಾರ್ ಪ್ರತಿ ಸಂಪಾದಿತ, ಬೊಂಬಾಯಿ. ೧೯೧೬. ಪರಿಭಾಷಾಪ್ರಕಾಶದ ಮುನ್ನುಡಿ ದಾನ, ವ್ಯವಹಾರ, ಪ್ರಕಾಶಗಳಲ್ಲಿ ಹದಿಮೂರು ಸಾವಿರಕ್ಕೆ ಮೀರಿದ ಶ್ಲೋಕ ಸಂಖ್ಯೆ. ಸಂಸ್ಕಾರ ಪ್ರಕಾಶದಲ್ಲಿ ಹದಿನೇಳು ಸಾವಿರವನ್ನೂ ದಾಟಿದೆ. ಹೀಗೆ ಧರ್ಮಶಾಸ್ತ್ರದ ನಾನಾ ವಿಷಯಗಳ ಜೊತೆ ಜೊತೆಗೇ, ಚಿಕಿತ್ಸಾ, ಲಕ್ಷಣ ಇತ್ಯಾದಿಗಳನ್ನೂ ಕುರಿತ ಪ್ರಕಾಶಗಳಿವೆ. ಮೊದಲನೆಯದು ಪರಿಭಾಷಾಪ್ರಕಾಶ. ಕೊನೆಯದು ಮೋಕ್ಷಪ್ರಕಾಶ.

ತನ್ನ ಗ್ರಂಥಭಾಗಗಳ ಮುಕ್ತಾಯದಲ್ಲಿ ಹೇಳಿಕೊಂಡಿರುವಂತೆ ಮಿತ್ರಮಿಶ್ರನು ಹಂಪ ಪಂಡಿತನ ಪೌತ್ರ; ಪರಶುರಾಮ ಪಂಡಿತ (-ಮಿಶ್ರ)ನ ಪುತ್ರ. ಗೋಪಾಚಲನಿವಾಸಿ; ಸುಪ್ರಸಿದ್ಧ ಹಾಗೂ ಅಪ್ರಸಿದ್ಧರಾದ ನೂರಾರು ಜನ ನಿಬಂಧಕಾರರಿಂದಲೂ, ಸ್ಮೃತಿಗಳಿಂದಲೂ ದೀರ್ಘವಾದ ಉಲ್ಲೇಖಗಳನ್ನು ಮಾಡಿಕೊಂಡು, ವಾದವಿವಾದವನ್ನು ಬೆಳೆಸಿ

ತನ್ನ ಗ್ರಂಥರಾಕ್ಷಸನನ್ನು ಕೊಬ್ಬಿಸಿರುವ ವಿಶ್ವಮಿತ್ರನು ವಿಜ್ಞಾನೇಶ್ವರಾದಿಗಳನ್ನು ಅನುಸರಿಸಿದ್ದರೂ ಕೆಲವು ವಿಚಾರಗಳಲ್ಲಿ ನೀಲಕಂಠ, ಕಮಲಾಕರರಂತೆ ಸ್ವತಂತ್ರನಾಗಿದ್ದಾನೆ. ಆ ಇಬ್ಬರ ಸಮಕಾಲೀನನಾದ ಈತನು ಅವರ ಕೃತಿಗಳಿಂದ ಉಲ್ಲೇಖಿಗಳನ್ನೀಯದಿರುವುದು ಆಶ್ಚರ್ಯವೇನಲ್ಲ. ಈ ಕೃತಿಯು ಉತ್ತರ ದಕ್ಷಿಣಗಳೆರಡರಲ್ಲೂ ಜನಾದರಣೆ ಪಡೆದಿದ್ದಾಗಿದೆ. ವಾರಾಣಸಿಯ ನಿಬಂಧಕಾರರಲ್ಲಿ ಈತನೇ ಪ್ರಸಿದ್ಧಿಪಡೆದ ಕೊನೆಯವ್ಯಕ್ತಿಯೆನ್ನಬಹುದು.

ಅನಂತದೇವ (ಕ್ರಿ.ಶ.೧೬೪೫–೧೬೭೫) :—ಹಿಮಾಲಯ ತಪ್ಪಲಿನ ಅಲ್ಮೋರಾ ನೈನಿತಾಲ್ ಜಿಲ್ಲೆಗಳ ರಾಜನಾಗಿದ್ದ ಬಾಜ್‌ಬಹದ್ದೂರನ ಆಶ್ರಿತನೂ ಮಹಾಸಂತ ಏಕನಾಥನ ಪೌತ್ರನ ಪೌತ್ರನೂ, ಮೀಮಾಂಸಾನ್ಯಾಯಪ್ರಕಾಶ (ಆಪದೇವೀ) ಕರ್ತೃವಾದ ಆಪದೇವನ ಪುತ್ರನೂ ಆಗಿದ್ದ ಈತನು ಸ್ಮೃತಿಕೌಸ್ತುಭವೆಂಬ ನಿಬಂಧವನ್ನು ರಚಿಸಿದನು. ಸಂಸ್ಕಾರ, ಆಚಾರ, ರಾಜಧರ್ಮ, ದಾನ, ಉತ್ಸರ್ಗ, ಪ್ರತಿಷ್ಠಾ, ತಿಥಿ, ಸಂವತ್ಸರಗಳೆಂಬ ಎಂಟು ಕೌಸ್ತುಭಗಳೂ, ದೀಧಿತಿಗಳೆಂಬ ಉಪವಿಭಾಗಗಳೂ ಇರುವ ಈ ಕೃತಿಯಲ್ಲಿ ನೂರಾರು ಗ್ರಂಥಕಾರರ, ಕೃತಿಗಳ ಹೆಸರುಗಳೂ ಉಲ್ಲೇಖಗಳೂ ಇವೆ. ಇವರಲ್ಲಿ ಮಿತಾಕ್ಷರಾ, ಅಪರಾರ್ಕ, ಹೇಮಾದ್ರಿ, ಮಾಧವ, ಮದನರತ್ನ ಮತ್ತು ಮದನಪಾರಿಜಾತ ಇವುಗಳು ಮುಖ್ಯವಾದವು. ಪ್ರತ್ಯೇಕ ಗ್ರಂಥವಾಗಿ ಅಚ್ಚಾಗಿರುವ ಸಂಸ್ಕಾರ ಕೌಸ್ತುಭವು ಬಹು ಜನಾದರಣೀಯ ಹಾಗೂ ಅಧಿಕಾರಿಕ ಕೃತಿ. ದತ್ತಕಮೀಮಾಂಸ, ವ್ಯವಹಾರ ಮಯೂಖಗಳೊಡನೆ ಸಂಸ್ಕಾರಕೌಸ್ತುಭದ 'ದತ್ತಕದೀಧಿತಿ' ಯನ್ನು ಅಭ್ಯಾಸಮಾಡುವುದು ಉಚಿತವಾಗುತ್ತದೆ.

ನಾಗೋಜಿಭಟ್ಟ (ಕ್ರಿ.ಶ. ೧೬೫೦–೧೭೫೦) : –ಬಹುಮುಖಪ್ರತಿಭೆಯ ಈತನ ಭದ್ರಕೋಟೆ ವ್ಯಾಕರಣವಾಗಿದ್ದರೂ ಸಹ ಧರ್ಮಶಾಸ್ತ್ರವನ್ನು ಕುರಿತು 'ಇಂದುಶೇಖರ'ವೆಂದು ಅಂತ್ಯವಾಗುವ, 'ಆಚಾರ, ತೀರ್ಥ, ತಿಥಿ, ಪ್ರಾಯಶ್ಚಿತ್ತ, ಶ್ರಾದ್ಧ ಎಂಬ ಐದು ಕೃತಿಗಳ ಜೊತೆಗೆ ಆಶೌಚ ನಿರ್ಣಯ, ಸಪಿಂಡೀಮಂಜರೀ, ಸಪಿಂಡ್ಯದೀಪಕವೆಂಬ ಮೂರು ಕೃತಿಗಳನ್ನು ರಚಿಸಿದ್ದಾನೆ. ತಂದೆ ಕಾಳೇವಂಶದ ಶಿವಭಟ್ಟ; ವೈಯಾಕರಣ ಸಿದ್ಧಾಂತ ಕೌಮುದೀ ಕರ್ತೃವಾದ ಭಟ್ಟೋಜಿದೀಕ್ಷಿತನ ಮೊಮ್ಮಗ ಈತನ ವಿದ್ಯಾಗುರುವೆಂದರೆ ಸಾಕು.

ವೈದ್ಯನಾಥೀಯ (ಕ್ರಿ.ಶ. ಸು. ೧೬ನೆಯ ಶತಮಾನ):—ಸ್ಮೃತಿಮುಕ್ತಾಫಲವೆಂಬ ಈತನ ಗ್ರಂಥವು ಕರ್ತೃನಾಮದಿಂದ ಪ್ರಸಿದ್ಧನಾಗಿದೆ. ವರ್ಣಾಶ್ರಮಧರ್ಮ, ಆಹ್ನಿಕ, ಆಶೌಚ, ಶ್ರಾದ್ಧ, ದ್ರವ್ಯಶುದ್ಧಿ, ಪ್ರಾಯಶ್ಚಿತ್ತ, ವ್ಯವಹಾರ ಮತ್ತು ಕಾಲ ಇವುಗಳನ್ನು ಕುರಿತು ಪೂರ್ವಸ್ಮೃತಿ, ನಿಬಂಧಾದಿಗಳಿಂದ ಉಲ್ಲೇಖಿಸಿವಿತ್ತು ವಿವರಿಸುವ ಈ ಕೃತಿಯು ದಕ್ಷಿಣ ಭಾರತೀಯ ನಿಬಂಧ ಸಂಪ್ರದಾಯದಲ್ಲಿ ಪ್ರಾಮುಖ್ಯತೆ ಪಡೆದಿದೆ.

ಬಾಲಂಭಟ್ಟ (ಕ್ರಿ.ಶ. ೧೭೪೦- ೧೮೩೦) :- ಈತ ನಾಗೋಜಿಭಟ್ಟನ ಶಿಷ್ಯ. ಕೋಲ್‌ಬ್ರೂಕ್ (colcbrooke) ಎಂಬ ಐರೋಪ್ಯನಿಗೆ ಪಂಡಿತ. ತಂದೆ ವೈದ್ಯನಾಥ ಪಾಯಗುಂಡ, ತಾಯಿ ಲಕ್ಷ್ಮೀದೇವಿ (ಉಮಾ). ವಿಜ್ಞಾನೇಶ್ವರನ ಮಿತಾಕ್ಷರಾಕ್ಕೆ ವ್ಯಾಖ್ಯಾನ ಬರೆದು ತನ್ನ ತಾಯಿ ಲಕ್ಷ್ಮೀದೇವಿಗೆ ಅರ್ಪಣೆ ಮಾಡಿ, 'ಲಕ್ಷ್ಮೀ' ವ್ಯಾಖ್ಯಾನವೆಂದು ಕರೆದಿದ್ದಾನೆ. ವ್ಯಾಖ್ಯಾನವೇನೋ ಸಮೃದ್ಧವಾಗಿದ್ದರೂ ಪಾಂಡಿತ್ಯದಲ್ಲಿ ಸರ್ವತೋಲವಿಲ್ಲ. ಇದ್ದದ್ದರಲ್ಲಿ ಆಚಾರಕಾಂಡದ ವ್ಯಾಖ್ಯೆ ವಿದ್ವತ್ ಪೂರ್ಣವಾಗಿದೆ. ವ್ಯವಹಾರ ಕಾಂಡದಲ್ಲಿ 'ಮಿತಾಕ್ಷರಾ' ವೃತ್ತಿಯನ್ನು ಪದಶಃ ಅರ್ಥೈಸುತ್ತಾ ಅಲ್ಲಲ್ಲಿ ಉದ್ಧೃದ್ಧ ಟಿಪ್ಪಣಿಗಳನ್ನೀಯುತ್ತದೆ. ಪ್ರಾಯಶ್ಚಿತ್ತ ಕಾಂಡದ ವಾಖ್ಯಾನವು ಇನ್ನೂ ಪ್ರಕಟಿತವಾಗಿಲ್ಲ. ಗ್ರಂಥದ ಉದ್ದಕ್ಕೂ ಹಿಂದಿನ ನೂರಾರು ಸ್ಮೃತಿ ಮತ್ತು ನಿಬಂಧಕಾರರ ಉಲ್ಲೇಖಗಳಿವೆ. ಇವುಗಳಲ್ಲಿ ನಿರ್ಣಯಸಿಂಧು, ವೀರ ಮಿತ್ರೋದಯ, ನೀಲಕಂಠನ ಮಯೂಖಗಳು, ಸಂಸ್ಕಾರಕೌಸ್ತುಭ, ಮುಂತಾದುವು ಮುಖ್ಯ ವಾದುವು. ವಾರಾಣಸೀಯ ಸಂಪ್ರದಾಯದಲ್ಲಿ ಇದಕ್ಕೆ ಸ್ವಲ್ಪ ಮಾನ್ಯತೆ ಇದ್ದರೂ ಸಹ ಇತರ ಕಡೆಗಳಲ್ಲಿ ಮುಖ್ಯವಾಗಿ ದಾಯಭಾಗ ವಿಚಾರದಲ್ಲಿ ಮಾನ್ಯತೆ ಇಲ್ಲವೆನ್ನಬೇಕು. ಬಾಲಂಭಟ್ಟ (ಅಥವಾ ಬಾಲಕೃಷ್ಣನು) ಇನ್ನೂ ಅನೇಕ ಗ್ರಂಥಗಳನ್ನು ಬರೆದು ತನ್ನ ತಂದೆ ವೈದ್ಯನಾಥನ ಹೆಸರಿಗೆ ಅರ್ಪಣೆ (ಆರೋಪ) ಮಾಡಿದನೆನ್ನಲಾಗಿದೆ. ನಿಬಂಧ ಗ್ರಂಥಗಳಲ್ಲೆಲ್ಲಾ ಇದೇ ಕಟ್ಟ ಕಡೆಯದೆಂಬುದನ್ನು ಹೆಸರಿಸುವುದರಲ್ಲೇ ಈ ಕೃತಿಯ ಪ್ರಾಮುಖ್ಯವಡಗಿದೆಯೆನ್ನಬಹುದು.

ಕಾಶೀನಾಥ ಉಪಾಧ್ಯಾಯ (ಬಾಬಾ ಪಾಧ್ಯೆ) (ಮರಣ ಕ್ರಿ.ಶ. ೧೮೦೫) :— ಕ್ರಿ. ಶ. ೧೭೯೦ ರಲ್ಲಿ ಈತನು ನಿರ್ಣಯ ಸಿಂಧುವನ್ನನುಸರಿಸಿ, ಅದರಲ್ಲಿರುವ ಸ್ಮೃತಿಭಾಗ ವೆಲ್ಲವನ್ನೂ ತೆಗೆದು ಹಾಕಿ, ನಿಬಂಧ ಭಾಗಗಳ ಉಲ್ಲೇಖಗಳನ್ನು ಉಳಿಸಿಕೊಂಡು ಬಾಲಬೋಧೆಗಾಗಿ (ಬಾಲ ಬೋಧಾಯ) ಧರ್ಮಸಿಂಧು ಅಥವಾ ಧರ್ಮಸಿಂಧೂಸಾರ (ಧರ್ಮಾಬ್ಧಿ ಸಾರ) ವೆಂಬ ಕೃತಿ ರಚನೆಮಾಡಿದನು. (೧೭೯೦).

ಮೂರು ಪರಿಚ್ಛೇದಗಳಿರುವ ಈ ಬಾಲಬೋಧೆಯಲ್ಲಿ ಕಾಲ, ವ್ರತ ಇವು ಕ್ರಮವಾಗಿ ಮೊದಲ ಎರಡು ಪರಿಚ್ಛೇದದಲ್ಲೂ ಮೂರನೆಯದರಲ್ಲಿ 'ಸಂಸ್ಕಾರ' ಶ್ರಾದ್ಧ, ಆಶೌಚ, ಅಂತ್ಯೇಷ್ಟಿ ವಿಧವಾಧರ್ಮ ಮತ್ತು ಸಂನ್ಯಾಸಿಧರ್ಮವೂ ಪೂರ್ವನಿಬಂಧಗ್ರಂಥಗಳ ಆಧಾರದ ಮೇಲೆ ವರ್ಣಿತವಾಗಿವೆ. ರತ್ನಗಿರಿ ಜಿಲ್ಲೆಯ ಹಳ್ಳಿಗಳಿಗೆ ಜೋಯಿಸ ಮತ್ತು ಉಪಾಧ್ಯೆಯಾಗಿದ್ದ ಈತನ ತಂದೆ ಪಂಡರಾಪುರದಲ್ಲಿ ನೆಲೆನಿಂತನು. ತತ್ಫಲವಾಗಿ ಬಾಲಕೃಷ್ಣನು ವಿಠ್ಠಲ ಭಕ್ತನಾಗಿ, ಇಷ್ಟದೇವತಾಪ್ರಶಸ್ತಿಕೃತಿಯೊಂದನ್ನೂ ರಚಿಸಿ ಕ್ರಮಸಂನ್ಯಾಸಿಯಾಗಿ ೧೮೦೫ ರಲ್ಲಿ ದಿವಂಗತನಾದನು.

## ನಿಬಂಧ ಸಂಪ್ರದಾಯಗಳು

ಮೇಲ್ಕಂಡ ನಿಬಂಧಗಳನ್ನು ಪ್ರಾಂತೀಯ ಆಧಾರದ ಮೇಲೆ ವಂಗ, ಮಿಥಿಲಾ. ಕಾಮರೂಪ, ವಾರಾಣಾಸಿ, ಅಥವಾ ಮಧ್ಯ ಭಾರತೀಯ ಮತ್ತು ದಾಕ್ಷಿಣಾತ್ಯ

ಸಂಪ್ರದಾಯಂಗಳಿಂದೂ ಪರಿಗಣಿಸಬಹುದು (ಯು. ಭಾ. ಸಂ. ೨. ೨೬೭–೨೮೧). ಆಯಾ ಪ್ರಾಂತಗಳಲ್ಲಿ ಅಲ್ಲಿಯ ನಿಬಂಧಕಾರರ ಕೃತಿಗಳಿಗೆ ಸಾಮಾನ್ಯವಾಗಿ ಹೆಚ್ಚು ಮನ್ನಣೆ ದೊರೆತಿದೆ—ಮೇಧಾತಿಥಿ, ಗೋವಿಂದರಾಜ ಮತ್ತು ಕುಲ್ಲೂಕಭಟ್ಟ ಇವರು ಯಾವ ಪ್ರಾಂತ್ಯದವರೇ ಆದರೂ ಅವರ ಮನು–ವೃತ್ತಿಗಳಿಗೆ ಅಖಿಲಭಾರತೀಯ ಮನ್ನಣೆ ದೊರೆಯುತ್ತದೆ. ವಿಜ್ಞಾನೇಶ್ವರನ ಮಿತಾಕ್ಷರಾ ವಂಗಪ್ರಾಂತ್ಯವನ್ನು ಬಿಟ್ಟು ಮಿಕ್ಕೆಲ್ಲ ಕಡೆಯೂ ಅಧಿಕಾರಿಕವಾಗಿತ್ತು—ಮಾಧವಾಚಾರ್ಯರ ಪರಾಶರಸ್ಮೃತಿಯ ವ್ಯಾಖ್ಯಾನವಂತೂ ಅಖಿಲ ಭಾರತೀಯ ಪ್ರಸಾರ ಪಡೆಯಿತು. ವಾರಾಣಸಿಯಂತೂ ದಕ್ಷಿಣ ಭಾರತದಿಂದ ವಲಸೆಹೋದ "ಭಟ್ಟ" ವಿದ್ವದ್ದಿಗ್ಗಜಗಳ ಭದ್ರಕೋಟೆಯಾಗಿ ಇನ್ನೂ ಉಳಿದಿದೆ ಕಾಲಕಳೆದಂತೆ ದೇಶ ಧರ್ಮ, ಕುಲಧರ್ಮಗಳನ್ನು ಶ್ರುತಿ–ಸ್ಮೃತ್ಯುಕ್ತಧರ್ಮಗಳೊಡನೆ ಸಮನ್ವಯಮಾಡಿಕೊಂಡು ಸನಾತನ ಧರ್ಮವು ಚಿರಂತನ ನೂತನವೂ ಆಗಿ ಮೈತಳೆದು ಬೆಳೆಯಿತು.

ವಂಗ ಸಂಪ್ರದಾಯದಲ್ಲಿ ಭವದೇವಭಟ್ಟ, ಜೀಮೂತವಾಹನ, ಅನಿರುದ್ಧ, ಶೂಲಪಾಣಿ, ರಘುನಂದನಭಟ್ಟಾಚಾರ್ಯ ಮುಂತಾದವರು ಮುಖ್ಯರು.

ಮಿಥಿಲಾ ಸಂಪ್ರದಾಯದಲ್ಲಿ ಚಂಡೇಶ್ವರ, ವಾಚಸ್ಪತಿಮಿಶ್ರ, ಮುಂತಾದವರು ಪ್ರಮುಖರು. ಕಾಮರೂಪ ಸಂಪ್ರದಾಯದಲ್ಲಿ ಅನೇಕರು ಗ್ರಂಥರಚನೆ ಮಾಡಿದ್ದರು. ಇತರ ಸಂಪ್ರದಾಯದವರೊಡನೆ ಸಮಾನ ಸ್ಕಂದರಾಗಿ ನಿಲ್ಲುವವರು ಒಬ್ಬರೂ ಇಲ್ಲ. ವಾರಾಣಸಿ ಸಂಪ್ರದಾಯದಲ್ಲಿ ಲಕ್ಷ್ಮೀಧರ, ವಿಶ್ವೇಶ್ವರಭಟ್ಟ, (ಮದನ ಪಾರಿಜಾತ) ನಾರಾಯಣಭಟ್ಟ, ಕಮಲಾಕರಭಟ್ಟ, ನೀಲಕಂಠಭಟ್ಟ, ನಂದಪಂಡಿತ ಮತ್ತು ಮಿತ್ರಮಿಶ್ರ ಇವರು ಸುಪ್ರಸಿದ್ಧರು. ದಕ್ಷಿಣ ಭಾರತೀಯ ಸಂಪ್ರದಾಯದಲ್ಲಿ ಮೊಟ್ಟ ಮೊದಲಹೆಸರು ವಿಜ್ಞಾನೇಶ್ವರ, ಪ್ರತಾಪರುದ್ರ, ಹೇಮಾದ್ರಿ, ಮಾಧವಾಚಾರ್ಯ ಮತ್ತು ದೇವಣ್ಣಭಟ್ಟ ಮುಂತಾದವರು ಇತರ ಪ್ರಮುಖ ನಿಬಂಧಕಾರರು.

ಉಪಸಂಹಾರ :—ಯಾಜ್ಞವಲ್ಕ್ಯಸಂಹಿತೆಯಲ್ಲಿರುವಂತೆ ಆಚಾರ ವ್ಯವಹಾರ ಮತ್ತು ಪ್ರಾಯಶ್ಚಿತ್ತ ಎಂದು ನಿಬಂಧ ಸಾಹಿತ್ಯವನ್ನು ಮೂರು ಬಗೆಯಾಗಿ ವಿಂಗಡಿಸಬಹುದು. ವ್ಯಕ್ತಿಯ ಧಾರ್ಮಿಕ ಸಾಮಾಜಿಕ ಹಾಗೂ ನೈತಿಕ ಸಂಬಂಧಗಳ ಸರ್ವತೋ ಮುಖವಾದ ಪರಿಪೂರ್ಣತೆಯೇ ಈ ಮೂರು ವಾಹಿನಿಗಳ ಅಂತಿಮ ಗುರಿ, ವಿಪುಲವಾಗಿ ಅಗಣಿತ ಕವಲುಗಳಾಗಿ ಬೆಳೆದು ಪ್ರಚಾರದಲ್ಲಿದ್ದ ನಿಬಂಧ ಸಾಹಿತ್ಯವು ಪರಕೀಯ ಧಾಳಿ, ಭಾರತೀಯರ ಆದರ್ಶಗಳಲ್ಲಿ ಅವರಿಗಿದ್ದ ಅಸಹಾನುಭೂತಿ, ಅಷ್ಟೇ ಅಲ್ಲದೆ ಅವುಗಳಲ್ಲಿ ತಾತ್ಸಾರ ಇವುಗಳಿಂದ ಇವುಗಳಿಗೆ ಪ್ರಯೋಜನವಿಲ್ಲದಂತಾಯಿತು. ತಮ್ಮ ಕಾಯಿದೆ ಕಟ್ಟಲೆಗಳನ್ನು ಇಲ್ಲಿಯವರ ಮೇಲೆ ಹೇರಲಾಯಿತು. ಇಷ್ಟಾದರೂ ಸಹ ಅಲ್ಲಲ್ಲಿ ಹಿಂದೂ ರಾಜರು, ನಾಯಕರು, ಪಾಳೇಗಾರರು,

ಧರ್ಮಪ್ರಚಾರಕರು ತಲೆಯೆತ್ತಿ ವಿನಾಶದಿಂದ ಈ ಸಾಹಿತ್ಯ ಪ್ರಕಾರವನ್ನು ರಕ್ಷಿಸಿದುದೇ ಅಲ್ಲದೆ ಪ್ರೋತ್ಸಾಹಿಸಿ ಬೆಳೆಸಿದರು. ಇಂತಹ ಕೆಲವು ಉದಾಹರಣೆಗಳನ್ನು ನಾವು ಮೇಲೆ ಓದಿ ತಿಳಿದಿದ್ದೇವೆ. ಆದರೂ ಸಹ ಮಧ್ಯಕಾಲೀನ ಭಾರತದ (೧೨೦೬–೧೭೬೫) ಸಾಮಾಜಿಕ, ಧಾರ್ಮಿಕ, ಮತ್ತು ನ್ಯಾಯದಾನದ ಇತಿಹಾಸವನ್ನು ನಿಜಕ್ಕೂ ಅಭ್ಯಸಿಸಿ ಬರೆಯಬೇಕೆಂಬ ಇತಿಹಾಸ ವಿದ್ಯಾರ್ಥಿಗಳಿಗೆ ನಿಬಂಧಸಾಹಿತ್ಯಾಭ್ಯಾಸವು ಅನಿವಾರ್ಯ.

—ಧರ್ಮೋ ರಕ್ಷತಿ ರಕ್ಷಿತಃ—

———

೫

# ಜ್ಯೋತಿಷ್ಯ

ಜ್ಯೋತಿಶ್ಯಾಸ್ತ್ರವು ಮಾನವನಿಗೆ ನಿತ್ಯೋಪಯುಕ್ತ ಶಾಸ್ತ್ರ. ಆತ ಇದನ್ನ ಪ್ರತ್ಯಕ್ಷ ವಾಗಿಯೋ ಪರೋಕ್ಷವಾಗಿಯೋ ಅವಲಂಬಿಸಿರುವುದನ್ನು ನಾವು ನೋಡಬಹುದು. ಭವಿಷ್ಯದ ಬಗೆಗೆ ಕುತೂಹಲ ಮಾನವ ಸಹಜವಾದುದರಿಂದ ಅದನ್ನು ತಿಳಿಯಲು ಆತನ ಶಾಸ್ತ್ರೀಯ ಪ್ರಯತ್ನ ಬಹಳ ಹಿಂದಿನ ಕಾಲದಿಂದಲೂ ನಡೆದುಬಂದಿದೆ. ನಿತ್ಯ ಜೀವನದ ಉಪಯುಕ್ತ ಅಂಗವಾದ ಇದರ ವ್ಯಾಪ್ತಿ ಗಹನ ಹಾಗೂ ಅಪಾರ. ಗ್ರಹನಕ್ಷತ್ರಗಳು ಜ್ಯೋತಿಗಳು, ಅವು ಗಳನ್ನಾಧರಿಸಿ ರಚಿಸಿದ ಶಾಸ್ತ್ರವೇ ಜ್ಯೋತಿಶ್ಯಾಸ್ತ್ರ. ಖಗೋಳದಲ್ಲಿರುವ ಗ್ರಹನಕ್ಷತ್ರಗಳ ಪರಿಚಯ, ಅವುಗಳ ಚಲನವಲನ, ಭೂಮಿಯಲ್ಲಿ ಅವುಗಳ ಪರಿಣಾಮ ಹಾಗೂ ಉಪಯೋಗ ಅಲ್ಲದೆ ವೈಜ್ಞಾನಿಕವಾಗಿ ಗ್ರಹಗಳ ಚಲನೆಯಿಂದ ಮಾನವ ಜೀವನದಲ್ಲಿ ನಡೆಯುವ ಘಟನೆಗಳನ್ನು ಈ ಶಾಸ್ತ್ರ ವಿವರವಾಗಿ ತಿಳಿಸುತ್ತದೆ. ಆದುದರಿಂದಲೇ ಈ ಶಾಸ್ತ್ರದ ಸ್ವರೂಪವನ್ನು " ಜ್ಯೋತಿಂಷಿ ಗ್ರಹನಕ್ಷತ್ರಾಣಿ ತದಧಿಕೃತಂ ಶಾಸ್ತ್ರಂ ಜ್ಯೋತಿಷ್ಯಂ'' ಎಂದು ವಿಶ್ಲೇಷಿಸಿದ್ದಾರೆ.

ಯಾವ ಯಾವ ಕಾಲದಲ್ಲಿ ಯಾವ ಯಾವ ಕರ್ಮಗಳನ್ನು ಮಾಡಬೇಕೆಂದು ವಿಧಿಸಿ ವಿವರಿಸಿರುವ ಈ ಶಾಸ್ತ್ರವನ್ನು ' ಕಾಲವಿಧಾನ ' ಶಾಸ್ತ್ರವೆಂದೂ ಕರೆಯುತ್ತಾರೆ, ವೈದಿಕ ಕರ್ಮ ಗಳನ್ನು ಮಾಡುವವರು ಕಾಲಗಣನೆಯನ್ನು ವಿವರವಾಗಿ ತಿಳಿಯಬೇಕಾಗಿದ್ದಿತು. ಚಂದ್ರನ ಪಕ್ಷಾಂತ ಚಾರಗಳು, ಸೂರ್ಯನ ಅಯನಗಳು, ಋತುಗಳು ಮತ್ತು ೨೭ ಅಥವಾ ೨೮ ನಕ್ಷತ ಗಳಿಂದಾದ ಭಚಕ್ರ, ರಾಶಿಗಳು ಇವೆಲ್ಲವೂ ಅವರಲ್ಲಿ ಸೇರುತ್ತಿದ್ದವು.

''ವೇದಾ ಹಿ ಯಜ್ಞಾರ್ಥಮಭಿಪ್ರವೃತ್ತಾಃ
ಕಾಲಾನುಪೂರ್ವ್ಯಾ ವಿಹಿತಾಶ್ಚ ಯಜ್ಞಾಃ ।
ತಸ್ಮಾದಿದಂ ಕಾಲವಿಧಾನಶಾಸ್ತ್ರಂ
ಯೋ ಜ್ಯೋತಿಷಂ ವೇದ ಸ ವೇದಯಜ್ಞಂ ॥

(ವೇದಾಂಗ ಜ್ಯೋತಿಷಂ ೩)

ಯಾರಿಗೆ ಜ್ಯೋತಿರ್ವಿಜ್ಞಾನದ ಅರಿವು ಇರುತ್ತದೆಯೋ, ಆತನು ಯಜ್ಞಯಾಗಾದಿ ಕರ್ಮಗಳನ್ನು ಮಾಡುವ ಸೂಕ್ತ ಕಾಲವನ್ನು ತಿಳಿದು ಸೂಕ್ತ ರೀತಿಯಲ್ಲಿ ಆಚರಿಸಬಲ್ಲನು ಎಂಬುದರಿಂದ ಈ ಶಾಸ್ತ್ರದ ಪ್ರಾಮುಖ್ಯತೆ ಎಷ್ಟೆಂಬುದು ವೇದ್ಯವಾಗುತ್ತದೆ.

ಆದುದರಿಂದಲೇ—

"ಯಥಾ ಶಿಖಾ ಮಯೂರಾಣಾಂ
ನಾಗಾನಾಂ ಮಣಯೋ ಯಥಾ ।
ತದ್ವದ್ವೇದಾಂಗಶಾಸ್ತ್ರಾಣಾಂ
ಜ್ಯೋತಿಷಂ (ಗಣಿತಂ) ಮೂರ್ಧನಿ ಸ್ಥಿತಂ ॥

(ವೇದಾಂಗ ಜ್ಯೋತಿಷಂ–೪)

ಎಂಬುದಾಗಿ ಹೇಳಲ್ಪಟ್ಟಿದೆ. ಪ್ರಸಿದ್ಧವಾದ ಆರು ವೇದಾಂಗಗಳಲ್ಲಿ ಜ್ಯೋತಿಷ್ಯಕ್ಕೆ ಒಂದು ಪ್ರಮುಖ ಸ್ಥಾನವಿದೆ. ವೇದಾಂಗಗಳಲ್ಲಿ ಇದು ಪ್ರಧಾನವೆಂತಲೂ ಪರಿಗಣಿಸಲ್ಪಟ್ಟಿದೆ.

ತಸ್ಮಾದ್ವೇದಾಂಗಶಾಸ್ತ್ರಾಣಾಂ ಪ್ರಧಾನಂ ಜ್ಯೋತಿಷಂ ಸ್ಮೃತಂ ।
ಯಸ್ಮಾದೇತದ್ವಿನಾ ಶಾಸ್ತ್ರಂ ಕಾಲಜ್ಞಾನಂ ನ ಸಿಧ್ಯತಿ. ॥

(ನಾರದ ಸಂಹಿತಾ)

ಈ ರೀತಿ ಎಲ್ಲಾ ಜೀವಿ ವರ್ಗಕ್ಕೂ ಬಹುವಿಧದಿಂದ ಉಪಯೋಗವಾಗುವ ಈ ಶಾಸ್ತ್ರಕ್ಕೆ ಬಹಳ ಪ್ರಾಧಾನ್ಯವನ್ನು ಕೊಟ್ಟಿದ್ದಾರೆ. ಭೂಮಿ ಮತ್ತು ಗ್ರಹಗಳ ಚಲನೆಯಿಂದ ಕಾಲವನ್ನು ಅಳೆದು ಧಾರ್ಮಿಕ, ಆರ್ಥಿಕ ಮತ್ತು ವ್ಯವಸಾಯ ವ್ಯವಹಾರಗಳಿಗೆ ಬೇಕಾದ ವರ್ಷ, ಆಯನ, ಋತು, ಮಾಸ, ಪಕ್ಷ, ವಾರ, ನಕ್ಷತ್ರ, ತಿಥಿ, ಯೋಗ, ಕರಣ ರೂಪವಾದ ಕಾಲವನ್ನು ಇದು ನಿರ್ಧರಿಸುತ್ತದೆ. ಈ ಶಾಸ್ತ್ರಸಾರವೇ ನಮ್ಮ ದೇಶದಲ್ಲಿ ವ್ಯವಹರಿಸುವ 'ಪಂಚಾಂಗ' (ಕ್ಯಾಲೆಂಡರ್) ವಾಗಿದೆ.

ಜ್ಯೋತಿಶ್ಶಾಸ್ತ್ರದ ಆರಂಭ ವೇದಗಳ ಕಾಲದಷ್ಟು ಹಿಂದೆ ಹೋಗುತ್ತದೆ. ವೇದಗಳಲ್ಲಿ 'ದರ್ಶಪೂರ್ಣಮಾಸಾಭ್ಯಾಂ ಯಜೇತ,' 'ವಸಂತೇ ವಸಂತೇಜ್ಯೋತಿಷಾ ಯಜೇತ,' "ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ", 'ಶರದಿ ವೈಶ್ಯಃ' (ತೈ. ಬ್ರಾ.) ಇತ್ಯಾದಿಯಾಗಿ ಆಯಾಯ ಕಾಲಾನುಸಾರಿಯಾದ ಯಾಗಗಳು ವಿಹಿತವಾಗಿವೆ. ಈ ರೀತಿ ಹೇಳಬೇಕಾದರೆ ಮತ್ತು ಆ ಕಾರ್ಯಗಳನ್ನು ಅನುಷ್ಠಾನ ಮಾಡಬೇಕಾದರೆ ದರ್ಶಪೂರ್ಣ ಮಾಸಗಳ ಜ್ಞಾನ, ವಸಂತ ಋತುವಿನ ಆರಂಭಕಾಲದ ಜ್ಞಾನ ಇದ್ದಿತೆಂಬುದಾಗಿ ತಿಳಿದು ಬರುತ್ತದೆ. ಮೇಲಿನ ವಾಕ್ಯಗಳಿಂದ

ಜ್ಯೋತಿಶ್ಶಾಸ್ತ್ರದ ಪರಿಚಯ ಹಾಗೂ ಪ್ರಯೋಗ ವೇದಗಳ ಕಾಲದಲ್ಲಿಯೇ ಇದ್ದಿತೆಂದು ವ್ಯಕ್ತವಾಗುತ್ತದೆ ಈ ಅರ್ಥವನ್ನು "ವೇದೈಃ ಸಹ ಸಮುದ್ಭೂತಂ ವೇದಚಕ್ಷುಃ ಸನಾತನಂ"— ಸನಾತನವಾದ ವೇದದ ಕಣ್ಣಾದ ಈ ಶಾಸ್ತ್ರವು ವೇದದೊಡನೆಯೇ ಉಂಟಾಯಿತು ಎಂದು ಸಂಹಿತಾವಾಕ್ಯಗಳು ಸಮರ್ಥಿಸುತ್ತವೆ. ಪೃಥ್ವಿ, ಸೂರ್ಯ, ಚಂದ್ರ, ನಕ್ಷತ್ರ, ರಾಶಿ, ವರ್ಷ, ಅಯನ, ಋತು, ಮಾಸ, ದಿನಗಳ ಅರಿವಿನೊಂದಿಗೆ ಚಂದ್ರನ ಪಂಕ್ಷಾಂತಚಾರಗಳು, ಸೂರ್ಯನ ಅಯನಗಳು, ೨೭ ನಕ್ಷತ್ರಗಳಿಂದಾದ ಭಚಕ್ರರಾಶಿಗಳೂ ಇತ್ಯಾದಿ ವಿಷಯವನ್ನೊಳಗೊಂಡ ಪಂಚಾಂಗ ಪ್ರಯೋಗವು ವೈದಿಕಯುಗದಲ್ಲಿ ಬಹಳ ಪ್ರಚಾರದಲ್ಲಿತ್ತೆಂದು ತಿಳಿದು ಬರುತ್ತದೆ. ವೈದಿಕ ಸಾಹಿತ್ಯದಲ್ಲಿ ಸೂರ್ಯ, ಚಂದ್ರ, ನಕ್ಷತ್ರ, ಋತು ವ್ಯವಸ್ಥೆ ಮತ್ತು ಗ್ರಹಗಳ ಬಗೆಗೆ ವೈಜ್ಞಾನಿಕ ಛಾಯೆಗಳು ಅಲ್ಲಲ್ಲಿ ಕಂಡು ಬಂದರೂ ಸೃಷ್ಟಿವಿಷಯಕ ಕಲ್ಪನಾಲಹರಿಯಲ್ಲಿ ಖಗೋಳ-ಜ್ಯೋತಿಶ್ಶಾಸ್ತ್ರದ ಉಗಮವು ಅಡಗಿಹೋಗಿದೆ. ಅಲ್ಲದೆ ಆ ಕಾಲದಲ್ಲಿ ಈ ಶಾಸ್ತ್ರ ವನ್ನೇ ಕುರಿತು ರಚಿತವಾದ ಗ್ರಂಥವೊಂದೂ ಉಪಲಬ್ಧವಿಲ್ಲ. ಕ್ರಿ. ಪೂ. ೭ನೆಯ ಶತಮಾನ ದಲ್ಲಿದ್ದಿರಬಹುದಾದ ಪಾಣಿನೀಅಷ್ಟಾಧ್ಯಾಯಿ ಸೂತ್ರಗಳಲ್ಲಿ ಶ್ರವಿಷ್ಠಾ (ಧನಿಷ್ಠಾ), ಫಲ್ಗುನೀ, ಅನೂರಾಧ, ಸ್ವಾತಿ, ಇತ್ಯಾದಿ ನಕ್ಷತ್ರಗಳ ಉಲ್ಲೇಖ ದೊರೆಯುತ್ತದೆ. ಶ್ರವಿಷ್ಠಾ ಫಲ್ಗುನ್ಯನುರಾಧಾ ಸ್ವಾತಿ.........(ಅಷ್ಟಾಧ್ಯಾಯಿ ೪-೩-೩೪). ಅಲ್ಲದೆ ಚೈತ್ರ ವೈಶಾಖ ಮುಂತಾದ ಚಾಂದ್ರಮಾನದ ಮಾಸಗಳ ಹೆಸರನ್ನು ಪಾಣಿನಿಯು ವ್ಯುತ್ಪಾದಿಸಿದ್ದಾನೆ. ಸಂವತ್ಸರ, ಮುಹೂರ್ತ ಶಬ್ದಗಳು ಪಠಿತವಾಗಿವೆ. ಆದ್ದರಿಂದ ಪಾಣಿನಿಯ ಕಾಲದಲ್ಲಿ ನಕ್ಷತ್ರ ಮತ್ತು ಚೈತ್ರ, ವೈಶಾಖಾದಿ ಮಾಸಗಳ ಪರಿಚಯ ಸ್ಪಷ್ಟವಾಗಿತ್ತೆಂದೂ, ಸಂವತ್ಸರ ಮುಹೂರ್ತ ಗಳಿಗೆ ಸಂಬಂಧಿಸಿದಂತೆ ಗ್ರಂಥಗಳು ಇದ್ದವೆಂದೂ ಹೇಳಬಹುದು. ಕಲ್ಪಸೂತ್ರ, ಗೃಹ್ಯಸೂತ್ರ, ಶ್ರೌತಸೂತ್ರ, ರಾಮಾಯಣ, ಮಹಾಭಾರತಾದಿ ಕಾಲಗಳಲ್ಲಿ ಈ ಶಾಸ್ತ್ರಜ್ಞಾನವು ಸುಸ್ಪಷ್ಟ ವಾಗಿತ್ತೆಂದು ತಿಳಿದು ಬರುತ್ತದೆ. ಆದುದರಿಂದ ಈ ಶಾಸ್ತ್ರವು ವೇದಕಾಲದಲ್ಲಿ ಉತ್ಪನ್ನವಾಗಿ ಆಯಾಯ ಕಾಲದಲ್ಲಿದ್ದ ಋಷಿಗಳು ಹಾಗೂ ಇತರೆ ಸಿದ್ಧಾಂತ ಗ್ರಂಥಕರ್ತೃಗಳಿಂದ ಗ್ರಂಥ ರಚನೆ ಮತ್ತು ಪಾಠಪ್ರವಚನಗಳ ಮೂಲಕ ಕಾಲಕ್ರಮದಲ್ಲಿ ಪುಷ್ಟಿಹೊಂದಿ ಬೆಳೆಯಿತು ಎಂಬುದಾಗಿ ಹೇಳಬಹುದು.

ಜ್ಯೋತಿಶ್ಶಾಸ್ತ್ರ ಮತ್ತು ಗಣಿತ ಶಾಸ್ತ್ರಗಳು ಭಾರತದಲ್ಲಿ ಖಗೋಳ ಶಾಸ್ತ್ರದ ಸಂಬಂಧದಲ್ಲಿ ಮಾತ್ರ ಬೆಳೆದಿರುವುದನ್ನು ನಾವು ನೋಡಬಹುದು. ಒಬ್ಬರೇ ಲೇಖಕರು ಫಲ ಜ್ಯೋತಿಶ್ಶಾಸ್ತ್ರ ಹಾಗೂ ಖಗೋಳ ಶಾಸ್ತ್ರಗಳೆರಡರ ಮೇಲೂ ಕೃತಿಗಳನ್ನು ರಚಿಸಿದ್ದಾರೆ. ಇದು ಖಗೋಳ ಶಾಸ್ತ್ರದೊಡನೆ ನಿಕಟವಾಗಿ ಸಂಬಂಧ ಹೊಂದಿರುವುದನ್ನು ಪ್ರಾರಂಭದಲ್ಲೇ ನಾವು ನೋಡ ಬಹುದು ಖಗೋಳ, ಜ್ಯೋತಿಷ್ಯ ಹಾಗೂ ಗಣಿತ ಜ್ಯೋತಿಶ್ಶಾಸ್ತ್ರದ ಮೂರು ಮುಖಗಳು. ಖಗೋಳ ಗ್ರಹಗಳ ಚಲನೆಯನ್ನು ತಿಳಿಸುತ್ತದೆ. ಮಾನವ ಜೀವನದ ಮೇಲೆ ಈ ಚಲನೆ ಬೀರುವ ಪ್ರಭಾವ ತಿಳಿಸುವುದು ಜ್ಯೋತಿಷ. ಇವುಗಳ ಫಲ ನಿರ್ಣಯ ಮಾಡುವುದು ಗಣಿತ

ಮಾನವ ಜೀವನದ ಮೇಲೆ ಗ್ರಹಗಳ ಪ್ರಭಾವದಿಂದ ಉಂಟಾಗುವ ಪರಿಣಾಮವನ್ನು ಗಣನೆ ಮಾಡಿ ಭವಿಷ್ಯ ನಿರ್ಣಯಿಸುವುದೇ ಫಲಜ್ಯೋತಿಷ. ಜ್ಯೋತಿಶ್ಶಾಸ್ತ್ರವು ಪ್ರಧಾನವಾಗಿ ಸಿದ್ಧಾಂತ, ಸಂಹಿತಾ ಮತ್ತು ಹೊರಾ ಎಂಬುದಾಗಿ ಮೂರು ಸ್ಕಂಧ (ಅಂಗ) ಗಳಿಂದ ಕೂಡಿದೆ. ನಾರದಸಂಹಿತೆಯಲ್ಲಿ ಹೀಗೆ ಹೇಳಿದೆ--

ಸಿದ್ಧಾಂತಸಂಹಿತಾಹೋರಾರೂಪಸ್ಕಂಧತ್ರಯಾತ್ಮಕಂ ।
ವೇದಸ್ಯ ನಿರ್ಮಲಂ ಚಕ್ಷುಃ ಜ್ಯೋತಿಶ್ಶಾಸ್ತ್ರಮನುತ್ತಮಂ ॥

(ನಾರದ ಸಂಹಿತೆ ೧.೪)

ಮೊದಲನೆಯದಾದ ಗಣಿತಸ್ಕಂಧಕ್ಕೆ (ಸಿದ್ಧಾಂತ) ಹೆಚ್ಚಿನ ಪ್ರಾಧಾನ್ಯತೆ ಇದೆ. ಇದು ಖಗೋಳ-ಗಣಿತ, ಶಾಸ್ತ್ರೀಯಭಾಗ ; ಇದು ಗಣನೆ ವಿಷಯಕ ; ಖಗೋಳಶಾಸ್ತ್ರಕ್ಕೆ ಸೇರಿದ್ದು. ಈ ಗಣಿತ ಸ್ಕಂಧದಿಂದ ತನ್ಮೂಲಕ ತಿಥ್ಯಾದಿಗಳು ಸಿದ್ಧಿಸುತ್ತವೆ. ಇಲ್ಲಿ ಗಣಿತದ ಮೂಲಕ ಆಕಾಶದಲ್ಲಿನ ಗ್ರಹನಕ್ಷತ್ರಗಳ ಸ್ಥಾನ, ಗತಿಗಳನ್ನು ನಿರ್ಧರಿಸಲಾಗುತ್ತದೆ. ಕಾಲಗಣನೆ, ಗ್ರಹಗತಿ ಗಣನೆ, ಪೃಥ್ವಿ ಮತ್ತು ನಕ್ಷತ್ರ, ಗ್ರಹ ಇತ್ಯಾದಿಗಳ ಸ್ಥಾನ ಮತ್ತು ಗ್ರಹವೇಧಕ್ಕೋಸ್ಕರ ಯಂತ್ರಗಳ ನಿರ್ಮಾಣ ನಿಯಮಗಳೂ, ವಿವೇಚಿಸಲ್ಪಟ್ಟಿವೆ ಎರಡನೆಯದಾದ ಸಂಹಿತಾ ಅಥವಾ ಶಾಖಾ ಭಾಗವು ಭವಿಷ್ಯ ಕಥನವನ್ನು ವಿಶ್ಲೇಷಿಸುತ್ತದೆ. ಇಲ್ಲಿ ಗ್ರಹಗತಿಗಳ ನಿರೀಕ್ಷಣೆ ಯಿಂದ ಪ್ರಕೃತಿಯಲ್ಲಿ ನಡೆಯುವ ವಿಶೇಷ ಘಟನೆಗಳನ್ನು ವಿವೇಚಿಸಲಾಗಿದೆ. ಗ್ರಹಗಳ ತಾತ್ಕಾಲೀನ ಸ್ಥಿತಿಯಿಂದ ಸುಭಿಕ್ಷ, ದುರ್ಭಿಕ್ಷ, ರಾಷ್ಟ್ರಕ್ಕೆ ಉಪಯೋಗವಾಗುವ ಶುಭಾಶುಭ ಗಳನ್ನು ಇಲ್ಲಿ ಸೂಚಿಸಲಾಗಿದೆ. ವರಾಹಮಿಹಿರನು ಈ ಭಾಗದಲ್ಲಿ ರಾಷ್ಟ್ರದ ಸಂವೃದ್ಧಿ ವಾಸ್ತು ವಿಧ್ಯಾವೃಕ್ಷಾಯುರ್ವೇದ ಪ್ರಾಸಾದ ಲಕ್ಷಣ ಇತ್ಯಾದಿಗಳನ್ನು ತನ್ನ ಬೃಹತ್ಸಂಹಿತೆಯಲ್ಲಿ ಸವಿಸ್ತಾರವಾಗಿ ಪ್ರಸ್ತಾಪಿಸಿದ್ದಾನೆ. ಪ್ರಾಚೀನ ಕಾಲದಲ್ಲಿ ಈ ಭಾಗವೇ ಪ್ರಸಿದ್ಧವಾಗಿದ್ದು ಲೋಕಪ್ರಿಯವಾಗಿತ್ತೆಂದು ತಿಳಿದುಬರುತ್ತದೆ. ಈ ಶಾಖಾ ಪ್ರವರ್ತಕರ ಸಂಖ್ಯೆ ಅಪಾರ, ವರಾಹಮಿಹಿರನ ಬೃಹತ್ಸಂಹಿತೆ ಈ ಸ್ಕಂಧದ ಪ್ರಮುಖ ಗ್ರಂಥ.

ಮೂರನೆಯದಾದ ಹೋರಾಭಾಗವು ಫಲಭಾಗವನ್ನು ವಿವರಿಸುತ್ತದೆ. ಇಲ್ಲಿ ಜಾತಕ ಕುಂಡಲಿ ಪತ್ರಿಕೆಗಳ ಲೇಖನವನ್ನು ಸವಿಸ್ತಾರವಾಗಿ ನಿರೂಪಿಸಲಾಗಿದೆ. ಮನುಷ್ಯನು ಗ್ರಹ ನಕ್ಷತ್ರಾದಿಗಳನ್ನು ಕಾಲವನ್ನು ಅಳೆಯಲು ಸಾಧನವನ್ನಾಗಿ ಮಾಡಿಕೊಂಡ ಮೇಲೆ ಸುಖ ದುಃಖಗಳ ಅನುಭವ ಹೊಂದಲು ಕಾಲವಿಶೇಷವೇ ಕಾರಣವೆಂದು ತಿಳಿದನು. ಅದರಲ್ಲೂ ಜನ್ಮ ಕಾಲವು ಮುಖ್ಯವೆಂದು ಪರಿಗಣಿಸಿ ಆ ಕಾಲದಲ್ಲಿ ಗ್ರಹಾದಿಗಳ ಸ್ಥಾನಗಳನ್ನು ಜಾತಕ ಕುಂಡಲಿಗಳ ಮೂಲಕ ಬರೆದಿಡಲು ಪ್ರಾರಂಭಿಸಿದರು. ಇದರ ಆಧಾರದ ಮೇಲೆ ಒಬ್ಬ ವ್ಯಕ್ತಿಯ ಜನ್ಮ ಕಾಲವನ್ನು ತಿಳಿದಕೂಡಲೇ ಅವನ ಭವಿಷ್ಯವನ್ನು ಹೇಳಲು ಸಾಧ್ಯ. ಗ್ರಹಗಳ ಸ್ಥಾನಕ್ಕೂ

ಮನುಷ್ಯನ ಸುಖದುಃಖಗಳಿಗೂ ಸಂಬಂಧವನ್ನು ಕಲ್ಪಿಸುವ ಈ ಭಾಗವೇ ಹೋರಾಶಾಸ್ತ್ರ. 'ಹೋರಾ' ಶಬ್ದದ ವ್ಯುತ್ಪತ್ತಿಯಲ್ಲಿ ಭಿನ್ನಾಭಿಪ್ರಾಯಗಳಿವೆ. ಇಂಗ್ಲೀಷ್ ಭಾಷೆಯ 'ಹವರ್' (Hour) ಎಂಬ ಘಂಟೆಯನ್ನು ಸೂಚಿಸುವ ಶಬ್ದದಿಂದ ಹೋರಾ ಶಬ್ದವು ಸಾದೃಶ್ಯವನ್ನು ಹೊಂದಿದೆ. ಆದರೆ ವರಾಹಮಿಹಿರನ ಅಭಿಪ್ರಾಯದಂತೆ ಈ ಶಬ್ದವು 'ಅಹೋರಾತ್ರ' ಎಂಬ ಸಂಸ್ಕೃತ ಶಬ್ದದ ಪ್ರಥಮ ಹಾಗೂ ಅಂತ್ಯಾಕ್ಷರಗಳ ಲೋಪದಿಂದ ಪ್ರಚಾರಕ್ಕೆ ಬಂದಿದೆ. ಎರಡನೆಯ ಮತ್ತು ಮೂರನೆಯ ಸ್ಕಂಧಗಳಿಗೆ ಈ ಶಾಸ್ತ್ರದಲ್ಲಿ ದ್ವಿತೀಯ ಸ್ಥಾನವನ್ನು ಕೊಟ್ಟಿದ್ದಾರೆ. ಅದೃಷ್ಟವಾದ ಈ ಎರಡು ಭಾಗಗಳಲ್ಲಿ ಪ್ರತ್ಯಕ್ಷವನ್ನು ಸಾಧಿಸುವುದು ಅತೀಂದ್ರಿಯ ಜ್ಞಾನಿಗಳಿಗೆ ಅಥವಾ ಸಿದ್ಧಮಂತ್ರರಿಗೆ ಸಾಧ್ಯ, ಆದುದರಿಂದಲೇ 'ಅನೇಕ ಹೋರಾತತ್ತ್ವಜ್ಞಃ ಪಂಚಸಿದ್ಧಾಂತಕೋವಿದಃ ಊಹಾಪೋಹಪಟುಃ ಸಿದ್ಧ ಮಂತ್ರೋ ಜಾನಾತಿ ಜಾತಕಂ.

(ಪ್ರಶ್ನ ಮಾರ್ಗ ಅಧ್ಯಾಯ ೧)

ಎಂಬ ಲೋಕೋಕ್ತಿ ಪ್ರಸಿದ್ಧವಾಗಿದೆ. ಆದರೆ ಮೊದಲನೆಯ ಸಿದ್ಧಾಂತಕ್ಕೆ ಅತಿಮಹತ್ವ ಸ್ಥಾನವನ್ನು ಕೊಟ್ಟಿರುವುದರಿಂದ ಈ ಶಾಸ್ತ್ರವು--

ಅಪ್ರತ್ಯಕ್ಷಾಣಿ ಶಾಸ್ತ್ರಾಣಿ ವಿವಾದಾಸ್ತೇಷು ಕೇವಲಂ ।
ಪ್ರತ್ಯಕ್ಷಂ ಜ್ಯೋತಿಷಂ ಶಾಸ್ತ್ರಂ ಚಂದ್ರಾರ್ಕೌಯತ್ರ ಸಾಕ್ಷಿಣೌ ॥

ವರಾಹಮಿಹಿರನು ಜ್ಯೋತಿಶ್ಶಾಸ್ತ್ರದ ತಂತ್ರ (ಗಣಿತ), ಸಂಹಿತಾ (ಶಾಖಾ), ಹೋರಾ ಎಂಬ ಮೂರು ಸ್ಕಂಧಗಳನ್ನು ಹೇಳಿದ್ದಾನೆ. ಇದನ್ನು ಮೂರು ಸ್ಕಂಧಗಳಾಗಿ ವರ್ಗೀಕರಣ ಮಾಡಿರುವುದರಿಂದ "ಜ್ಯೋತಿಷತ್ರಿಸ್ಕಂಧ" ಎಂದು ಕರೆಯುವ ವಾಡಿಕೆ ಇದೆ.

## ಲಗಧ (ಸುಮಾರು ಕ್ರಿ. ಪೂ. ೧೨೦೦)

ಶುಭಾಶುಭಕಾಲನಿರ್ಣಯಕ್ಕಾಗಿಯೇ ಜ್ಯೋತಿಷ್ಯವು ಅಭ್ಯಾಸದಲ್ಲಿದ್ದು ವೇದಾಂಗ ವೆನಿಸಿಕೊಂಡಿತ್ತು. ನಾಲ್ಕು ವೇದಗಳಿಗೂ ಪ್ರತ್ಯೇಕವಾದ ಜ್ಯೋತಿಷಾಂಗವಿದ್ದದ್ದು ತಿಳಿದು ಬರುತ್ತದೆ. ಆದರೆ ಸಾಮವೇದಕ್ಕೆ ಸಂಬಂಧಿಸಿದ ಜ್ಯೋತಿಷಾಂಗವು ಲುಪ್ತವಾಗಿದೆ. ಋಗ್ವೇದಕ್ಕೆ ಸಂಬಂಧಿಸಿದ ಜ್ಯೋತಿಷಾಂಗವನ್ನು 'ಆರ್ಚಜ್ಯೋತಿಷಂ' ಎಂದು ಕರೆಯುತ್ತಾರೆ. ಇಲ್ಲಿ ೩೬ ಶ್ಲೋಕಗಳಿವೆ. ಯಜುರ್ವೇದಕ್ಕೆ ಸಂಬಂಧಿಸಿದ ಜ್ಯೋತಿಷಾಂಗದಲ್ಲಿ ೪೩ ಶ್ಲೋಕಗಳೂ, ಅಥರ್ವಕ್ಕೆ ಸಂಬಂಧಿಸಿದುದರಲ್ಲಿ ೧೬೨ ಶ್ಲೋಕಗಳೂ ಇವೆ.

ವಿಪುಲ ಜ್ಯೋತಿಶ್ಶಾಸ್ತ್ರ ಸಾಹಿತ್ಯದಲ್ಲಿ ಬಹಳ ಪ್ರಾಚೀನವಾದ ಮತ್ತು ಮುಖ್ಯ ಸ್ವತಂತ್ರಲಕ್ಷಣ ಗ್ರಂಥವೆಂದರೆ 'ವೇದಾಂಗ ಜ್ಯೋತಿಷಂ' ಇದು ಶ್ಲೋಕಬದ್ಧವಾಗಿ ಸೂತ್ರ ರೂಪದಂತೆ ಸಂಕ್ಷಿಪ್ತವಾಗಿರುವ ಒಂದು ಚಿಕ್ಕ ಕೃತಿ. ಇದರಲ್ಲಿ ಋಗ್ವೇದಕ್ಕೆ ಸಂಬಂಧಿಸಿದ್ದು ಹಾಗೂ ಯಜುರ್ವೇದಕ್ಕೆ ಸಂಬಂಧಿಸಿದುದು ಎಂದು ಎರಡು ಪಾಠಗಳಿವೆ. ಈ ಎರಡರಲ್ಲಿ ವಿಷಯಗಳು ಒಂದೇ ಆದರೂ ಶ್ಲೋಕ ಸಂಖ್ಯೆಯಲ್ಲಿ ವ್ಯತ್ಯಾಸವಿದೆ. ಯಜುರ್ವೇದೀಯ ಪಾಠದಂತೆ ೪೩ ಶ್ಲೋಕಗಳೂ, ಋಗ್ವೇದ ಪಾಠದಂತೆ ೩೬ ಶ್ಲೋಕಗಳೂ ಇವೆ. ಶ್ಲೋಕಕ್ರಮದಲ್ಲಿ ವ್ಯತ್ಯಾಸ ಇದೆ. ಯಜುರ್ವೇದ ಪಾಠದಲ್ಲಿ ವ್ಯಾಖ್ಯಾನಪರ ಶ್ಲೋಕಗಳ ಸೇರ್ಪಡೆಯಿಂದ ಶ್ಲೋಕಸಂಖ್ಯೆ ಹೆಚ್ಚಿದೆ ಎಂದು ಕೆಲವು ವಿದ್ವಾಂಸರ ಅಭಿಪ್ರಾಯ. ಇದು ಚಿಕ್ಕ ಕೃತಿಯಾದರೂ ವಿಷಯ ದೃಷ್ಟಿಯಿಂದ ಗಹನ ಮತ್ತು ಮಹತ್ವದ್ದು ಆಗಿದೆ. ಇದರಲ್ಲಿ ಪಂಚಾಂಗ ಪದ್ಧತಿಯ ಸ್ಥೂಲ ದಿಗ್ದರ್ಶನವಾಗಿರುವುದನ್ನು ನಾವು ಗಮನಿಸಬಹುದು. ಇಲ್ಲಿ ೩೬೬ ದಿವಸಗಳು, ಒಂದೊಂದಕ್ಕೂ ಇರುವ ಐದು ವರ್ಷಗಳ ಚಕ್ರ, ಚಂದ್ರಗತಿ, ಸೂರ್ಯಗತಿ, ವಿಷುವಕಾಲಗಳು, ನಕ್ಷತ್ರಾಚಾರದಲ್ಲಿ ಹುಣ್ಣಿಮೆ ಅಮಾವಾಸ್ಯೆಗಳು ವಿವೇಚಿಸಲ್ಪಟ್ಟಿವೆ. ಇವರೊಂದಿಗೆ ಗ್ರಹಯೋಗಗಳಿಂದ ಉಂಟಾಗುವ ಶುಭಾಶುಭ ಫಲಗಳನ್ನೂ ಸಹ ಸೂಚಿಸಲಾಗಿದೆ. 'ವೇದಾಂಗಜ್ಯೋತಿಷದ ಗ್ರಂಥಕಾರ ಲಗಧನೆಂದೂ ಉಳಿದ ವೇದಗಳ ಜ್ಯೋತಿಷಾಂಗಗಳ ಕರ್ತೃವು ಇವನೇ ಎಂದೂ ಈತನನ್ನು 'ಲಗಧ ಮುನಿ' ಎಂದು ಕರೆಯುತ್ತಿದ್ದರೆಂದೂ ಕೆಲವು ವಿದ್ವಾಂಸರ ಅಭಿಪ್ರಾಯ. ಆದರೆ ಇದಕ್ಕೆ ಯಾವ ಆಧಾರವೂ ಇಲ್ಲ ಅಲ್ಲದೆ ಸಂಸ್ಕೃತ ಸಾಹಿತ್ಯದಲ್ಲಿ ಈ ಹೆಸರಿನ ಬಳಕೆ ಎಲ್ಲಿಯೂ ಕಂಡುಬರುತ್ತಿಲ್ಲ. ಗ್ರಂಥೋಕ್ತ ಸಾಮಗ್ರಿಯಿಂದ ಈ ಕೃತಿಯ ರಚನೆ ಸುಮಾರು ಕ್ರಿ.ಪೂ. ೧೨೦೦ ಎಂದು ಹೇಳಬಹುದು. ಆರ್. ಶಾಮಾಶಾಸ್ತ್ರಿಗಳ ಅಭಿಪ್ರಾಯದಲ್ಲಿ ಈ ಕೃತಿಯ ರಚನೆಯ ಕಾಲ ಕ್ರಿ. ಪೂ. ೧೪೦೦ ರಿಂದ ೮೫೦ರ ವರೆವಿಗೂ ವ್ಯಾಪಿಸುತ್ತದೆ.

### ಪಂಚ ಸಿದ್ಧಾಂತಗಳು

#### ಸುಮಾರು ೧ನೆಯ ಶತಮಾನ

ಬಹಳ ಪ್ರಾಚೀನ ಕಾಲದಿಂದಲೂ ಈ ಶಾಸ್ತ್ರವನ್ನು ಋಷಿಗಳು ಹಾಗೂ ಸಿದ್ಧಾಂತಿಗಳು ಬೆಳೆಸಿಕೊಂಡು ಬಂದಿರುವುದನ್ನು ನಾವು ಕಾಣಬಹುದು. ಆದರೆ ಫಲಜ್ಯೋತಿಶ್ಶಾಸ್ತ್ರದ ಪ್ರಾಚೀನ ಕೃತಿಗಳು ಪೂರ್ಣವಾಗಿ ನಷ್ಟವಾಗಿರುವುದು ತಿಳಿದು ಬರುತ್ತದೆ. ಈ ಶಾಸ್ತ್ರದ ಪ್ರವರ್ತಕರಾದ ಕೆಲವು ಋಷಿಗಳು ಹಾಗೂ ಸಿದ್ಧಾಂತಿಗಳ ಹೆಸರುಗಳು ಈ ರೀತಿ ತಿಳಿದು ಬರುತ್ತದೆ. ಕಶ್ಯಪ ಸಂಹಿತೆಯಲ್ಲಿ—

ಸೂರ್ಯಃ ಪಿತಾಮಹೋ ವ್ಯಾಸೋ ವಸಿಷ್ಠೋಽತ್ರಿ ಪರಾಶರಃ ।
ಕಶ್ಯಪೋ ನಾರದೋ ಗರ್ಗೋ ಮರೀಚಿರ್ಮನುರಂಗಿರಾಃ ॥

ಲೋಮಶಃ ಪೌಲಶಶ್ಚೈವ ಚ್ಯವನೋ ಯವನೋ ಭೃಗುಃ ॥
ಶೌನಕೋಽಷ್ಟಾದಶಾಹ್ಯೇತೇ ಜ್ಯೋತಿಶ್ಶಾಸ್ತ್ರಪ್ರವರ್ತಕಾಃ ॥

ಎಂದು ಹೇಳಲಾಗಿದೆ.

ಈ ೧೮ ಋಷಿಗಳಲ್ಲಿ ಕೆಲವರು ಸಿದ್ಧಾಂತ ಗ್ರಂಥಗಳನ್ನು (ಕಶ್ಯಪಸಂಹಿತೆ) ರಚಿಸಿರುವುದಾಗಿಯೂ, ಕೆಲವರು ಸಂಹಿತಾಗ್ರಂಥಗಳನ್ನು ರಚಿಸಿರುವುದಾಗಿಯೂ ಮತ್ತೆ ಕೆಲವರು ಫಲಗ್ರಂಥಗಳನ್ನು ರಚಿಸಿರುವುದಾಗಿಯೂ ತಿಳಿದು ಬರುತ್ತದೆ. ಜ್ಯೋತಿಶ್ಶಾಸ್ತ್ರದ ಆಚಾರ್ಯನೆಂದು ಅತ್ಯಂತ ಖ್ಯಾತಿಯನ್ನುಗಳಿಸಿರುವ 'ವರಾಹಮಿಹಿರನು' ತನಗಿಂತ ಹಿಂದಿದ್ದ ಅನೇಕರನ್ನು ಸ್ಮರಿಸಿದ್ದಾನೆ–ಗರ್ಗ, ವೃದ್ಧಗರ್ಗ, ಅಸಿತ, ದೇವಲ, ಪರಾಶರ, ವ್ಯಾಸ, ನಾರದ ಇತ್ಯಾದಿ. ಇವುಗಳಲ್ಲಿ ಕೆಲವರು ರಚಿಸಿದ ಗ್ರಂಥಗಳು ಲುಪ್ತವಾಗಿವೆ, ಕೆಲವು ಸಿಕ್ಕಿವೆ. ಸಿಕ್ಕಿರುವ ಗ್ರಂಥಗಳು ಅಪೂರ್ಣ ಹಾಗೂ ಅಶುದ್ಧ. ಗರ್ಗನಿಂದ ರಚಿಸಲ್ಪಟ್ಟ ಗಾರ್ಗಿಸಂಹಿತೆಯು ಕೇವಲ ಉಲ್ಲೇಖಗಳಿಂದ ತಿಳಿದು ಬರುತ್ತದೆ ಆದರೆ ಇದು ಜ್ಯೋತಿಶ್ಶಾಸ್ತ್ರದ ಒಂದು ಪ್ರಮಾಣ ಗ್ರಂಥವೆಂದು ಪರಿಗಣಿಸಲ್ಪಟ್ಟಿದೆ. ವೃದ್ಧಗರ್ಗ ಸಂಹಿತಾ ಗ್ರಂಥವು ದೊರೆತಿದ್ದರೂ ಇದು ಹೆಚ್ಚಾಗಿ ಫಲಜ್ಯೋತಿಷ್ಯವನ್ನು ವಿವರಿಸುವ ಕೃತಿಯಾಗಿದೆ.

'ವೇದಾಂಗಜ್ಯೋತಿಷ್ಯ'ದಿಂದ ಹಿಡಿದು ವರಾಹಮಿಹಿರನ ವರೆಗಿನ ಕಾಲದಲ್ಲಿ ಹಿಂದೆ ಬಳಕೆಯಲ್ಲಿದ್ದು ಪ್ರಚಲಿತವಾಗಿದ್ದ ಸಿದ್ಧಾಂತಗಳು ವಿಶೇಷವಾಗಿ ಪ್ರತಿಪಾದಿಸಲ್ಪಟ್ಟಿವೆ. ಆದುದರಿಂದ ಈ ಕಾಲವನ್ನು ಸಿದ್ಧಾಂತಯುಗವೆಂದು ಕರೆಯುತ್ತಾರೆ. ಪೈತಾಮಹಸಿದ್ಧಾಂತ (ಬ್ರಹ್ಮಸಿದ್ಧಾಂತ), ವಾಸಿಷ್ಠಸಿದ್ಧಾಂತ, ರೋಮಕಸಿದ್ಧಾಂತ, ಪೌಲಶಸಿದ್ಧಾಂತ ಮತ್ತು ಸೂರ್ಯಸಿದ್ಧಾಂತಗಳನು ವರಾಹಮಿಹಿರನು ತನ್ನ 'ಪಂಚಸಿದ್ಧಾಂತಿಕಾದಲ್ಲಿ' ಸಂಕ್ಷೇಪಿಸಿದ್ದಾನೆ. ಇವುಗಳಲ್ಲಿ ಸೌರಸಿದ್ಧಾಂತವೇ ಸರಿಯಾದುದೆಂದೂ, ಪೌಲಿಶ ರೋಮಕ ಸಿದ್ಧಾಂತಗಳು ತಕ್ಕ ಮಟ್ಟಿಗೆ ಸರಿ ಎಂದೂ ವರಾಹಮಿಹಿರನ ಅಭಿಪ್ರಾಯ. ಪೌಲಿಶ ರೋಮಕ ಸಿದ್ಧಾಂತಗಳನ್ನು ಆರ್ಯಭಟ್ಟನಿಗೆ ಹಿಂದೆ ಇದ್ದ ಲಾಟಾಚಾರ್ಯನೆಂಬುವನು ಪೂರ್ವದಲ್ಲಿ ವ್ಯಾಖ್ಯಾನ ಮಾಡಿದ್ದನೆಂದೂ ತಿಳಿಸಿದ್ದಾನೆ. ಪಂಚಸಿದ್ಧಾಂತಿಕಾ ಗ್ರಂಥವು ಕಳೆದುಹೋಗಿದ್ದು ಕ್ರಿ. ಶ. ೧೮೮೯ರಲ್ಲಿ ಪಂಡಿತ ಸುಧಾಕರದ್ವಿವೇದಿ ಮತ್ತು ಡಾ॥ ಥೀಬೋ ಎಂಬುವರ ಶ್ರಮಸಾಹಸಗಳಿಂದ ಪುನರುಜ್ಜೀವಿತವಾಯಿತು. ಈ ಪೌಲಿಶ, ರೋಮಕ, ವಾಸಿಷ್ಠ ಸಿದ್ಧಾಂತಗಳು ಕಳೆದುಹೋಗಿರುವುದರಿಂದ ವರಾಹಮಿಹಿರನು ಕೊಟ್ಟಿರುವ ಸಂಕ್ಷೇಪವರ್ಣನೆಯನ್ನು ಬಿಟ್ಟು ಇವುಗಳ ವಿಷಯವಾಗಿ ತಿಳಿಯಪಡಿಸುವ ಗ್ರಂಥಗಳು ಮತ್ತಾವುವು ಇಲ್ಲ. ಪಂಚಸಿದ್ಧಾಂತಿಕಾ ಗ್ರಂಥದಲ್ಲಿ ೧೮ ಅಧ್ಯಾಯಗಳಿವೆ.

ಪಂಚಸಿದ್ಧಾಂತಿಕೆಯ ೧೨ನೆಯ ಅಧ್ಯಾಯದಲ್ಲಿ ಕೇವಲ ಐದು ಶ್ಲೋಕಗಳು ಪಿತಾಮಹ ಸಿದ್ಧಾಂತಕ್ಕೆ (ಬ್ರಹ್ಮ) ಸೀಮಿತವಾಗಿವೆ. ಈ ಸಿದ್ಧಾಂತವು ಬ್ರಹ್ಮನಿಂದ ಉಪದೇಶಿಸಲ್ಪಟ್ಟಿರು

ವುದರಿಂದ ಇದನ್ನು ಬ್ರಹ್ಮಸಿದ್ಧಾಂತವೆಂತಲೂ ಕರೆಯುವ ವಾಡಿಕೆ ಇದೆ. ಇದು ವೇದಾಂಗ ಜ್ಯೋತಿಷ್ಯಕ್ಕೆ ಬಹಳ ನಿಕಟವಾಗಿದ್ದು ಹೆಚ್ಚಾಗಿ ಅದನ್ನೇ ಹೋಲುತ್ತದೆ. ಇಲ್ಲಿಯೂ ಸಹ ೫ ವರ್ಷಗಳ ಯುಗವನ್ನು ಮಾನ್ಯಮಾಡಿದೆ. ವಸಿಷ್ಠಸಿದ್ಧಾಂತದ ಮಾಹಿತಿಯೂ ಕೂಡ ಬಹಳ ಸಂಕ್ಷಿಪ್ತವಾಗಿ ಲಭ್ಯವಾಗಿದೆ. ಇಲ್ಲಿ ಪ್ರತಿಪಾದಿತವಾಗಿರುವ ಸಿದ್ಧಾಂತಗಳು ಪಿತಾಮಹ ಸಿದ್ಧಾಂತವನ್ನೇ ಹೋಲುತ್ತವೆ. ಈ ಸಿದ್ಧಾಂತವು ಗ್ರಹಗಳ ಗತಿಯ ವಿಜ್ಞಾನದ ವಿಷಯದಲ್ಲಿ ಬಹಳ ಮುಂದುವರಿದಿದೆ. ಈಗ ಪ್ರಚಾರದಲ್ಲಿರುವ ಲಘುವಾಸಿಷ್ಠ ಸಿದ್ಧಾಂತಗ್ರಂಥವು ಇದರಿಂದ ಭಿನ್ನವಾಗಿದೆ. ಪೌಲಿಶ ಸಿದ್ಧಾಂತವು ಶುದ್ಧರೂಪದಲ್ಲಿ ಲಬ್ಧವಿಲ್ಲದುದರಿಂದ ಹಾಗೂ ಅನೇಕ ಪಾಠಾಂತರಗಳಿರುವುದರಿಂದ ನಿಶ್ಚಿತ ಕಾಲ ಗಣನೆ ಬಗ್ಗೆ ಹಾಗೂ ಸಿದ್ಧಾಂತ ಪ್ರತಿಪಾದನೆಯ ಬಗ್ಗೆ ವಿವಾದಾಸ್ಪದವಾಗಿದೆ. ಇದು ವಾಸಿಷ್ಠ ಸಿದ್ಧಾಂತಕ್ಕೆ ತುಂಬಾ ನಿಕಟ ವಾಗಿದೆ. ವರಾಹಮಿಹಿರನ ಗ್ರಂಥದ ಮೇಲೆ ಭಟ್ಟೋತ್ಪಲನ ವ್ಯಾಖ್ಯಾನದಿಂದ ಒಂದು ಪೌಲಿಶ ಸಿದ್ಧಾಂತವು ಅಸ್ತಿತ್ವದಲ್ಲಿದ್ದ ಸಂಗತಿ ನಮಗೆ ತಿಳಿದು ಬರುತ್ತದೆ. ಈ ಸಿದ್ಧಾಂತವು ಪೌಲಿಶ ನಿಂದ ಗರ್ಗಾದಿ ಋಷಿಗಳಿಗೆ ತಿಳಿಸಲ್ಪಟ್ಟಿತೆಂದೂ ತಿಳಿದು ಬರುತ್ತದೆ. ರೋಮಕ ಸಿದ್ಧಾಂತವು ಪೂರ್ಣವಾಗಿ ಗ್ರೀಕ್ ಸಿದ್ಧಾಂತಗಳನ್ನು ಪ್ರತಿಪಾದಿಸುತ್ತದೆ ಎಂದು ಕೆಲವು ವಿದ್ವಾಂಸರ ಅಭಿಮತ. ಪರಕೀಯವಾದ ರೋಮಕ ಸಿದ್ಧಾಂತದ ಕರ್ತೃವೂ ಕೂಡ ಬ್ರಹ್ಮ ಶಾಪದಿಂದ ಯವನ ಜಾತಿಯಲ್ಲಿ ಹುಟ್ಟಿ ರೋಮನ್ ನಗರದಲ್ಲಿ ಶಾಸ್ತ್ರಪ್ರಚಾರ ಮಾಡಿದ ಸೂರ್ಯನೇ ಎಂದು ಕೆಲ ವರು ಅಭಿಪ್ರಾಯ ಪಡುತ್ತಾರೆ. ಆದರೆ ರೋಮಕಸಿದ್ಧಾಂತದ ಕರ್ತೃ 'ಶ್ರೀಷೇಣ' ಎಂದು ಕೆಲವರ ಅಭಿಪ್ರಾಯ ಆದರೆ ಥೀಬೋ ಶ್ರೀಷೇಣನು ಯಾವ ಸ್ವತಂತ್ರ ಗ್ರಂಥವನ್ನೂ ರಚಿಸಿಲ್ಲ ವೆಂದೂ, ಹಿಂದೆ ಪ್ರಚಾರದಲ್ಲಿದ್ದ ಈ ಸಿದ್ಧಾಂತಕ್ಕೆ ಒಂದು ಹೊಸ ರೂಪ ಕೊಟ್ಟಿದ್ದಾನೆಂದೂ ಅಭಿಪ್ರಾಯಪಡುತ್ತಾನೆ ಇಲ್ಲಿ ಪ್ರತಿಪಾದಿತವಾಗಿರುವ ಅನೇಕ ವಿಷಯಗಳಿಂದ ಗ್ರೀಕ್ ಸಿದ್ಧಾಂತ ಹಾಗೂ ತತ್ವಗಳಲ್ಲಿ ಸಾಮ್ಯವಿದ್ದು ಕಾಣುವುದನ್ನು ನಾವು ನೋಡಬಹುದು. ಈ ಸಿದ್ಧಾಂತದ ಪ್ರಕಾರ ಒಂದು ಯುಗದಲ್ಲಿ ೨೮೫೦ ವರ್ಷಗಳೂ, ೧೦೫೦ ಅಧಿಕ ಮಾಸಗಳೂ' ೧೬೫೪೭ ಕ್ಷಯತಿಥಿಗಳೂ ಇವೆ ಎಂದು ಗೊತ್ತಾಗುತ್ತದೆ. ಅಂದರೆ ಲೆಕ್ಕಾಚಾರದಲ್ಲಿ ೨೮೫೦ ವರ್ಷಗಳ ಯುಗದಲ್ಲಿ ೧೦೪೦೯೫೩ ದಿನಗಳಿರುವುದು ತಿಳಿದು ಬರುತ್ತದೆ. ಇದರಿಂದ ಒಂದು ವರ್ಷದಲ್ಲಿ ೩೬೫ ದಿನಗಳು, ೫ಘಂಟೆಗಳು, ೫೦ನಿಮಿಷಗಳು, ೧೨ಸೆಕೆಂಡುಗಳೂ ಇವೆ ಎಂದು ತಿಳಿಯುತ್ತದೆ. ವರಾಹಮಿಹಿರನು ಸಂಗ್ರಹಿಸಿರುವ ಸೂರ್ಯಸಿದ್ಧಾಂತದ ಪ್ರಕಾರ ಇದು ೩೬೫ ದಿನ, ೬ಘಂಟೆ, ೧೨ ನಿಮಿಷ, ೨೬ ಸೆಕೆಂಡು ಮತ್ತು ಈಗ ಪ್ರಚಾರದಲ್ಲಿರುವ ಸೂರ್ಯ ಸಿದ್ಧಾಂತದ ಪ್ರಕಾರ ೩೬೫ ದಿನ, ೬ ಘಂಟೆ, ೧೩ ನಿಮಿಷ, ೩೬,೫೬ ಸೆಕೆಂಡುಗಳೂ ಇವೆ.

ಪಂಚ ಸಿದ್ಧಾಂತಗಳಲ್ಲಿ 'ಸೂರ್ಯಸಿದ್ಧಾಂತ'ಕ್ಕೆ ವರಾಹಮಿಹಿರನೇ ಬಹಳ ಉನ್ನತ ಸ್ಥಾನ ಕೊಟ್ಟಿದ್ದಾನೆ. ಸಿದ್ಧಾಂತಯುಗದಲ್ಲಿ ದೊರೆತಿರುವ ಅತ್ಯಂತ ಪ್ರಾಚೀನವೂ ಪ್ರಾಮುಖ್ಯ ಪೂರ್ಣತೂ ಆದ ಗ್ರಂಥವೆಂದರೆ ಸೂರ್ಯಸಿದ್ಧಾಂತ. ಈಗ ದೊರೆತಿರುವ ಗ್ರಂಥವು ಪ್ರಾಚೀನ ಗ್ರಂಥದಿಂದ ಸ್ವಲ್ಪ ಭಿನ್ನವಾಗಿರುವುದು ಕಂಡುಬರುತ್ತದೆ. ಈಗ ಲಭ್ಯವಾಗಿರುವ ಪಾಠದ

ಪ್ರಕಾರ ಅನುಷ್ಟುಪ್ ಛಂದಸ್ಸಿನ ೫೦೦ ಶ್ಲೋಕಗಳನ್ನೊಳಗೊಂಡ ೧೪ ಅಧ್ಯಾಯಗಳಿವೆ. ಭಾರತೀಯರು ಇದರ ಉತ್ಪತ್ತಿ ದಿವ್ಯವೆಂದು ಪರಿಗಣಿಸಿದರೆ, ಅಲ್ಬರೂನಿಯ ಪ್ರಕಾರ ಈ ಕೃತಿಯ ಲೇಖಕ ಲಾಟ. ಇದರ ಪ್ರಾರಂಭದ ಶ್ಲೋಕಗಳನ್ನು ವೀಕ್ಷಿಸಿದರೆ, ಭಗವಾನ್ ಸೂರ್ಯ ದೇವನು ಇದನ್ನು ಅಸುರನಾದ ಮಯನಿಗೆ ಪ್ರಕಟಿಸಿದನೆಂದು ತಿಳಿದುಬರುತ್ತದೆ. ಈಗ ಸಿಕ್ಕಿರುವ ಕೃತಿರೂಪವು ಶುದ್ಧವಾದ ಮೂಲರೂಪವಂತೂ ಅಲ್ಲ. ಏಕೆಂದರೆ ವರಾಹಮಿಹಿರನು ತನ್ನ ಪಂಚಸಿದ್ಧಾಂತಿಕಾದಲ್ಲಿ ಸೂರ್ಯಸಿದ್ಧಾಂತದ ವಿಷಯಗಳಿಗೆ ಕೊಡುವ ವಿವರಣೆ ನಮಗೆ ಸಿಕ್ಕಿರುವ ಕೃತಿಗಿಂತ ಎಷ್ಟೋ ಕಡೆಗಳಲ್ಲಿ ಭಿನ್ನವಾಗಿದೆ. ಕೃತಿಯ ಉದ್ದಕ್ಕೂ ಭಾರತೀಯತೆಯನ್ನು ಪ್ರಾರಂಭದಿಂದಲೂ ಉಳಿಸಿಕೊಂಡು ಬಂದಿರುವುದಲ್ಲದೆ, ಗ್ರಹನಕ್ಷತ್ರ ಸಮಾಗಮಗಳ ವಿಷಯವಾಗಿ ಪರಂಪರಾಗತ ಮೂಲವಿಚಾರಗಳನ್ನು ಅಂಗೀಕರಿಸಿ ಮುಂದುವರಿದಿರುವುದು ಇದರ ಒಂದು ವಿಶೇಷ, ಹಿಂದಿನ ವಿಚಾರಧಾರೆಗಳನ್ನು ಉಳಿಸಿ ಬೆಳೆಸಿಕೊಂಡು ಬಂದಿರು ವುದರ ಜೊತೆಗೆ ಹೊಸ ವಿಚಾರಗಳನ್ನು ಅದಕ್ಕೆ ಹೊಂದಿಸಿ ಹೊಸದೃಷ್ಟಿಕೋನ ಬೀರಿರುವುದು ಕಂಡುಬರುತ್ತದೆ. ಪಂಚಸಿದ್ಧಾಂತಿಕಾ ಗ್ರಂಥದ ಗಣಿತಗಳು ಕ್ರಿ. ಶ. ೫೦೫ ರಿಂದ ಆರಂಭವಾಗುವ ಕಾರಣ ಈ ಗ್ರಂಥರಚನೆ ಇದೇ ಕಾಲಕ್ಕೆ ಆಗಿರಬೇಕು. ಪಂಚಸಿದ್ಧಾಂತಿಕಾ ಗ್ರಂಥಗಳ ರಚನೆಯ ಕಾಲ ಗೊತ್ತಿಲ್ಲದಿದ್ದರೂ ವರಾಹಮಿಹಿರನ ಕಾಲ ವಂತೂ ನಿರ್ದಿಷ್ಟವಾಗಿ ತಿಳಿದಿದೆ. ಕ್ರಿ. ಶ. ೬ನೆಯ ಶತಮಾನದ ಪೂರ್ವಾರ್ಧಕಾಲಕ್ಕೆ ಅವನ ಕೃತಿಗಳು ಪ್ರಖ್ಯಾತಿಹೊಂದಿ ಆಧಾರ ಗ್ರಂಥಗಳೆಂದು ಪರಿಗಣಿಸಲ್ಪಡುತ್ತಿದ್ದವು. ಆದುದರಿಂದ ಕ್ರಿ. ಶಕೆಯ ಆರಂಭದ ಶತಮಾನಗಳಲ್ಲಿ ಈ ಪಂಚಸಿದ್ಧಾಂತಗಳು ಹುಟ್ಟಿರಬೇಕು. ಆದರೆ ಈ ಗ್ರಂಥಗಳು ಮತ್ತೆ ಮತ್ತೆ ರೂಪಾಂತರಗೊಂಡಿರುವುದರಿಂದ ಅವುಗಳ ಕಾಲ ನಿರ್ಣಯ ಸಮಸ್ಯೆ ಮತ್ತಷ್ಟು ಜಟಿಲವಾಗುತ್ತದೆ.

## ಆರ್ಯಭಟ್ಟ ಕ್ರಿ. ಶ. ೪೭೬

ಭಾರತೀಯ ಜ್ಯೋತಿರ್ವಿಜ್ಞಾನದ ಆದ್ಯಪ್ರವರ್ತಕ ಆರ್ಯಭಟ್ಟ ಜ್ಯೋತಿಶ್ಶಾಸ್ತ್ರಕ್ಕೆ ಶಾಸ್ತ್ರೀಯ ಸ್ವರೂಪವನ್ನು ತಂದುಕೊಟ್ಟನು. ಈತನ 'ಆರ್ಯಸಿದ್ಧಾಂತ' ಖಗೋಳದ ವಿಜ್ಞಾನಕ್ಕೆ ಸ್ಮರಣೀಯ ಕಾಣಿಕೆಯಾಗಿದೆ. ಖಗೋಳ ಮತ್ತು ಜ್ಯೋತಿಶ್ಶಾಸ್ತ್ರದ ನಿಶ್ಚಿತ ಇತಿಹಾಸ ಪರಂಪರೆ ಆರ್ಯಭಟ್ಟನಿಂದ ಪ್ರಾರಂಭವಾಗುತ್ತದೆ. ಈತನು ತಾನು ಹೊಸದಾಗಿ ಶಾಸ್ತ್ರವನ್ನು ನಿರ್ಮಾಣಮಾಡಿಲ್ಲವೆಂದೂ, ಪ್ರಾಚೀನಕಾಲದಲ್ಲಿ ಪ್ರಚಾರದಲ್ಲಿದ್ದ ಬ್ರಹ್ಮಸಿದ್ಧಾಂತ ವನ್ನು ಶುದ್ಧವಾಗಿಯೂ, ಸ್ಫುಟವಾಗಿಯೂ ತಿಳಿಸಿರುವುದಾಗಿ ಹೇಳಿಕೊಂಡಿದ್ದಾನೆ. ಕೆಲವು ಕಡೆ ಪ್ರಾಚೀನ ಸಿದ್ಧಾಂತಗಳನ್ನು ತನ್ನ ಬುದ್ಧಿಬಲದಿಂದ ನಿರಾಕರಿಸಿ ಜ್ಯೋತಿಶ್ಶಾಸ್ತ್ರಕ್ಕೆ ಸಂಬಂಧ ವಾದ ತಿಥಿನಿರ್ಣಯ, ಗ್ರಹಣವಿಚಾರ ಮುಂತಾದುವುಗಳ ವಿಚಾರಗಳಲ್ಲಿ ತನ್ನ ಮತವನ್ನು ಸಿದ್ಧಾಂತ ರೂಪದಿಂದ ತಿಳಿಸಿದ್ದಾನೆ ಆರ್ಯಭಟನ ಹೆಸರನ್ನು ಕೆಲವು ಪಂಚಾಂಗಗಳ ಮೇಲೆ

ನೋಡಬಹುದಲ್ಲದೆ, ಪಂಚಾಂಗ ರಚನೆಯಲ್ಲಿ ಆರ್ಯಭಟ್ಟನ ಸಿದ್ಧಾಂತವನ್ನು ಅನುಸರಿಸಿರುವುದನ್ನು ನಾವು ನೋಡಬಹುದು. ಈತನ ಹೆಸರಿನ ಬಗ್ಗೆ ವಿವಾದವಿದೆ. ಕೆಲವರು ಈತನನ್ನು ಆರ್ಯಭಟ್ಟನೆಂತಲೂ, ಕೆಲವರು ಆರ್ಯಭಟ ಎಂತಲೂ ಕರೆದಿದ್ದಾರೆ. ಪಂಚಾಂಗಗಳಲ್ಲಿ ಆರ್ಯಭಟ್ಟ ಎಂದೇ ಬಹಳ ಕಡೆ ಮುದ್ರಿತವಾಗಿರುವುದನ್ನು ನೋಡಬಹುದು ಕೆಲವು ಹಸ್ತ ಲಿಖಿತ ಪ್ರತಿಗಳಲ್ಲಿ ಎರಡು ವಿಧವಾದ ಹೆಸರುಗಳೂ ಕಂಡುಬರುತ್ತವೆ. ಸಂಸ್ಕೃತದಲ್ಲಿ ಎರಡೂ ಶಬ್ದಗಳ ಪ್ರಯೋಗವಿರುವುದರಿಂದ ಯಾವುದನ್ನು ಉಪಯೋಗಿಸಿದರೂ ದೋಷವಿಲ್ಲ ವೆಂದು ಕೆಲವರ ಮತ. ಆರ್ಯಭಟ್ಟ ಶಬ್ದವು ಛಂದೋನಿಯಮಗಳಿಗೆ ಅನುಕೂಲವಾಗಿಲ್ಲದುದರಿಂದ ಆರ್ಯಭಟ ಎಂಬ ಹೆಸರೇ ಹೆಚ್ಚು ಜನಪ್ರಿಯವಾಗಿದ್ದು ಪ್ರಚಾರದಲ್ಲಿದೆ. ಅಲ್ಬರೂನಿಯೂ ಸಹ ಸ್ಪಷ್ಟವಾಗಿ "ಆರ್ಯಭಟ'' ಎಂದೇ ತಿಳಿಸಿದ್ದಾನೆ. ಆರ್ಯಭಟ ಎಂಬ ಹೆಸರಿನ ಇಬ್ಬರು ಜ್ಯೋತಿರ್ವಿಜ್ಞಾನಿಗಳು ಇರುವುದು ಕಂಡುಬರುತ್ತದೆ. ಅಲ್ಬರೂನಿಯು ಕೂಡ ಒಬ್ಬ ಪ್ರಾಚೀನ ಮತ್ತು ಒಬ್ಬ ಅರ್ವಾಚೀನ ಆರ್ಯಭಟರಿದ್ದುದನ್ನು ಅರಿತವನಾಗಿದ್ದನು ಆರ್ಯಸಿದ್ಧಾಂತ ಅಥವಾ 'ಆರ್ಯಭಟೀಯಂ' ಗ್ರಂಥ ರಚನಾಕಾರ ಮೊದಲನೆಯ ಆರ್ಯಭಟ್ಟ ಭಾಸ್ಕರನೂ ಈ ಆರ್ಯಭಟನ ಪರಿಚಯ ಪಡೆದಿದ್ದನು. ಪ್ರಾಚೀನ ಆರ್ಯಭಟನ ಶಿಷ್ಯನೆಂದು ಕೆಲವೊಮ್ಮೆ ಲಲ್ಲನನ್ನು ಹೇಳಲಾಗುತ್ತದೆ. ಈ ಲಲ್ಲನು ಶಿಷ್ಯಧೀವೃದ್ಧಿತತಂತ್ರ ಎಂಬ ಕೃತಿಯನ್ನು ರಚಿಸಿದ್ದನೆಂದೂ ಇದಕ್ಕೆ ಭಾಸ್ಕರನ ವ್ಯಾಖ್ಯಾನವಿರುವುದೆಂದೂ ತಿಳಿದು ಬರುತ್ತದೆ.

ಕ್ರಿ.ಶ. ೪೭೬ರಲ್ಲಿ ಆರ್ಯಭಟ್ಟನ ಜನನವು ಪಾಟಲೀಪುತ್ರ (ಪಾಟ್ನಾ)ದಲ್ಲಿ ಆಯಿತೆಂದೂ ಕ್ರಿ.ಶ. ೪೯೯ರಲ್ಲಿ ಸುಪ್ರಸಿದ್ಧ ಆರ್ಯಭಟೀಯ ಗ್ರಂಥವನ್ನು ರಚಿಸಿದನೆಂದೂ ತಿಳಿದು ಬರುತ್ತದೆ. ತನ್ನ ೨೩ನೆಯ ವಯಸ್ಸಿನಲ್ಲಿ ಸಿದ್ಧಾಂತ ರೂಪವಾದ ಇಂಥಹ ಗ್ರಂಥವನ್ನು ರಚಿಸಿರುವುದರಿಂದ ಈತನು ಬಹಳ ಪ್ರತಿಭಾವಂತನಾದ ಪ್ರಕಾಂಡ ಪಂಡಿತನೆಂಬುದು ನಿರ್ವಿವಾದ. ಆರ್ಯಭಟೀಯದ ಮುಖ್ಯ ವ್ಯಾಖ್ಯಾನಕಾರರಾದ ಪರಮೇಶ್ವರಭಟ್ಟ ನೀಲಕಂಠ ಸೋಮಯಾಜಿಗಳು ಆರ್ಯಭಟನು ದಕ್ಷಿಣದವನೆಂತಲೂ, ಅದರಲ್ಲೂ ಕೇರಳೀಯನು ಎಂಬುದಾಗಿಯೂ ಊಹಿಸಿದ್ದಾರೆ. ಪಾಶ್ಚಾತ್ಯ ಚರಿತ್ರಜ್ಞರು ಹೇಳಿರುವಂತೆ ಆರ್ಯಭಟ್ಟನು ಪಾಟಲೀಪುತ್ರದವನೆಂದು ಸಮರ್ಥಿಸಲು ಸಾಧ್ಯವಿಲ್ಲದಿದ್ದರೂ ಆಗಿನ ಕಾಲದಲ್ಲಿ ಪ್ರಸಿದ್ಧ ವಿದ್ವಾಂಸರು ಸೇರುತ್ತಿದ್ದ ಪಾಟಲೀಪುತ್ರ ನಗರದಲ್ಲಿ ತನ್ನ ಸಿದ್ಧಾಂತವನ್ನು ಪ್ರಸಿದ್ಧಿಗೆ ತಂದನೆಂಬುದು ನಿರ್ವಿವಾದ. ಆರ್ಯಭಟನು 'ದಶಗೀತಿಕಾ' ಎಂಬ ಸೂತ್ರ ರೂಪವಾದ ಗ್ರಂಥವನ್ನೂ, ಅದಕ್ಕೆ ವಿವರಣ ರೂಪವಾದ 'ಆರ್ಯಭಟೀಯಂ' ಎಂಬ ಎರಡು ಗ್ರಂಥಗಳನ್ನು ರಚಿಸಿದ್ದಾನೆ. ಆರ್ಯಭಟೀಯವನ್ನು ಆರ್ಯಾಷ್ಟಶತಂ ಅಟ್ಟಾರ್ಯಭಟೀಯವೆಂತಲೂ ಹೆಸರಿಸುತ್ತಾರೆ. ಪ್ರಾಚೀನ ಗ್ರಂಥಗಳಾದ ಸೂರ್ಯಸಿದ್ಧಾಂತ, ಗರ್ಗಸಂಹಿತಾ ಮೊದಲಾದ ಗ್ರಂಥಗಳು ಅನುಷ್ಟುಪ್ ಛಂದಸ್ಸಿನಲ್ಲಿದ್ದು ಈ ಕೃತಿ ಆರ್ಯಾವೃತ್ತದಿಂದ ರಚಿತವಾದ ೧೦೮ ಶ್ಲೋಕಗಳಿಂದ ಕೂಡಿರುವುದರಿಂದ ಈ ಹೆಸರು ಬಳಕೆಗೆ ಬಂದಿತೆಂದು ತಿಳಿದು ಬರುತ್ತದೆ. ಈತನ ಪ್ರಾಚೀನ ಸಿದ್ಧಾಂತಗಳನ್ನು ತನ್ನ ಪಾಂಡಿತ್ಯ

ಪ್ರತಿಭೆಯಿಂದ ಶಾಸ್ತ್ರೀಯವಾಗಿ ಸಂಸ್ಕರಿಸಿ ವೈಜ್ಞಾನಿಕವಾಗಿ ವಿವೇಚಿಸಿದ್ದಾನೆ. ಇದರಲ್ಲಿ ೧೨೧ ಶ್ಲೋಕಗಳಿದ್ದು ಗೀತಿಕಾ, ಗಣಿತ, ಕಾಲಕ್ರಿಯಾ ಮತ್ತು ಗೋಳ ಎಂಬ ನಾಲ್ಕು ಪಾದಗಳಿವೆ. ಇದರಲ್ಲಿ ಕಡೆಯ ಮೂರು ಪಾದಗಳು 'ಆರ್ಯಾಷ್ಟಶತಿ' ಎಂಬ ಹೆಸರಿನಿಂದ ಸ್ವತಂತ್ರ ಕೃತಿ ಎಂತಲೂ ಪರಿಗಣಿಸಲ್ಪಟ್ಟಿದೆ. ಮೊದಲನೆಯದಾದ ದಶಗೀತಿಕಾ ಸೂತ್ರವು ಅಂಕೆಗಳನ್ನು ಬರೆಯುವ ಒಂದು ವಿಶಿಷ್ಟ ಕ್ರಮವನ್ನು ವಿವರಿಸುತ್ತದೆ. ಈ ವಿಶಿಷ್ಟವನ್ನು ಬಳಕೆಗೆ ತಂದವರಲ್ಲಿ ಈತನೇ ಮೊದಲಿಗನು. ದೊಡ್ಡ ಸಂಖ್ಯೆಗಳನ್ನು ಸ್ವಲ್ಪ ಶಬ್ದಗಳಲ್ಲಿ ತಿಳಿಸಲು ಈತನ ಸಂಜ್ಞೆಯ ಕಲ್ಪನೆ ಅದ್ವಿತೀಯ. ಇಲ್ಲಿ ಶಾಸ್ತ್ರದ ಮೂಲ ಪ್ರಕ್ರಿಯೆಗಳು ಪ್ರತಿಪಾದಿಸಲ್ಪಟ್ಟಿವೆ. ಆರ್ಯ ಭಟೀಯದಲ್ಲಿ ೩೩ ಶ್ಲೋಕಗಳು ಗಣಿತಕ್ಕೆ ವಿನಿಯೋಗವಾಗಿದ್ದರೆ ' ಉಳಿದ ಭಾಗ ಜ್ಯೋತಿಶ್ಶಾಸ್ತ್ರಕ್ಕೆ ವಿನಾಸಲು. ಈ ಗಣಿತ ಪಾಠದಲ್ಲಿ ಮೊದಲನೆಯ ಶ್ಲೋಕ ಮಂಗಳಾಚರಣ ಪದ್ಯ ಉಳಿದ ೩೨ ಶ್ಲೋಕಗಳಲ್ಲಿ ವರ್ಗ, ಘನವರ್ಗ, ಮೂಲ, ಘನಮೂಲ, ತ್ರಿಭುಜ, ವೃತ್ತ ಇತ್ಯಾದಿ ಗಣಿತ ಮೂಲತತ್ವಗಳು ಪ್ರತಿಪಾದಿಸಲ್ಪಟ್ಟಿವೆ. ಆರ್ಯಭಟನಾದ ಮೇಲೆ ಬಂದ ಗಣಿತಜ್ಞರು ಕಟಪಯಾದಿ ಸಂಜ್ಞೆಯನ್ನೂ ಈತನ ಪ್ರಮಾಣಗಳನ್ನು ತಿರಸ್ಕರಿಸಿದ್ದರಿಂದ ಭಾರತದಲ್ಲಿ ಬೀಜಗಣಿತವು ಹೆಚ್ಚು ಅಭಿವೃದ್ಧಿಯನ್ನು ಹೊಂದದೇ ಹೋಯಿತೆಂದು ಕೆಲವರ ಅಭಿಪ್ರಾಯ ಮೂರನೆಯ ದಾದ ಕಾಲಕ್ರಿಯಾ ಪಾದವು ೨೫ ಪದ್ಯಗಳನ್ನೊಳಗೊಂಡಿದೆ. ಇದು ಖಗೋಳಶಾಸ್ತ್ರೀಯ ಕಾಲ ಗಣನೆಯ ಮೂಲ ತತ್ವಗಳನ್ನು ಸಂಗ್ರಹಿಸಿದೆ. ನಾಲ್ಕನೆಯ ಗೋಳ ಪಾದವು ೫೦ ಪದ್ಯ ಗಳಲ್ಲಿದ್ದು ಕಾಲವಿಭಾಗ, ಭಗಣಗಳು (ಗ್ರಹ ನಕ್ಷತ್ರಾದಿಗಳಿಗೆ ಭೂಮಿಯ ಸುತ್ತಲೂ ಒಂದು ಪ್ರದಕ್ಷಿಣೆಗೆ ಹಿಡಿಯುವ ಕಾಲ) ಗ್ರಹಗಳು ಮತ್ತು ಅವುಗಳ ಗಮನಾದಿಗಳನ್ನೂ ಭೂಮಿಯ ಆಕಾರ, ಗಾತ್ರ, ಚಲನ, ಭ್ರಮಣ, ದಿನ, ರಾತ್ರಿ, ಇತ್ಯಾದಿಗಳನ್ನೂ ವಿವರಿಸುತ್ತದೆ.

## ವರಾಹಮಿಹಿರ (ಕ್ರಿ. ಶ. ೫೦೫–೫೮೭)

ಜ್ಯೋತಿಶ್ಶಾಸ್ತ್ರದಲ್ಲಿ ಅವಂತಿ ನಿವಾಸಿಯಾದ ವರಾಹಮಿಹಿರನ ಸ್ಥಾನ ಅದ್ವಿತೀಯ ಜ್ಯೋತಿಶ್ಶಾಸ್ತ್ರದ ಮೂರು ಭಾಗಗಳಲ್ಲೂ ಗ್ರಂಥವನ್ನು ರಚಿಸಿ ಫಲಜ್ಯೋತಿಶ್ಶಾಸ್ತ್ರದ ಆದ್ಯ ಪ್ರವರ್ತಕನೆನಿಸಿಕೊಂಡಿದ್ದಾನೆ. ತನ್ನ ದೇಶ ಕಾಲಾದಿಗಳನ್ನು ಈತನು ಎಲ್ಲೂ ಪ್ರಸ್ತಾಪಿಸಿಲ್ಲ. ವರಾಹಮಿಹಿರನು ತನಗಿಂತ ಹಿಂದಿದ್ದ ಅಸಿತ, ದೇವಲ, ಗರ್ಗ, ವೃದ್ಧಗರ್ಗ, ಪರಾಶರ, ನಾರದ ಇವರುಗಳನ್ನು ಸ್ಮರಿಸಿದ್ದಾನೆ. ಇವುಗಳಲ್ಲಿ ನಮಗೆ ಒಂದೇ ಒಂದು ಕೃತಿ ಲಭ್ಯವಾಗಿದೆ. ಅದೇ ವೃದ್ಧಗರ್ಗಸಂಹಿತಾ ಅಥವಾ ವೃದ್ಧಗಾರ್ಗೀಯ. ಈ ಕೃತಿಯಾದರೂ ಅದರ ಮೂಲ ರೂಪದಲ್ಲಿ ದೊರೆತಿದೆಯೇ ಎಂಬುದು ಸಂದೇಹಾಸ್ಪದ. ಈತನು ಅವಂತಿಗೆ ಸೇರಿದವನೆಂದೂ, ತಂದೆಯು ಆದಿತ್ಯದಾಸನೆಂತಲೂ, ತಂದೆಯೇ ವಿದ್ಯಾಗುರುಗಳೆಂದೂ, ಕಾಪಿತ್ಥಕ ಎಂಬ ಹಳ್ಳಿ ಯಲ್ಲಿ ತಪಸ್ಸಿನಿಂದ ಸೂರ್ಯನ ಅನುಗ್ರಹ ಪಡೆದುದರಿಂದ ಹೋರಾ ಶಾಸ್ತ್ರವನ್ನು ರಚಿಸಿ ದ್ದೇನೆಂದೂ ಬೃಹಜ್ಜಾತಕ ಗ್ರಂಥದ ಕೊನೆಯ ಶ್ಲೋಕದಿಂದ ತಿಳಿದು ಬರುತ್ತದೆ. ಈತನ

ಜನ್ಮ ಕಾಲ ಕ್ರಿ.ಶ. ೫೦೫ ಎಂದೂ ಕ್ರಿ.ಶ. ೫೮೭ರಲ್ಲಿ ಮೃತಿಹೊಂದಿನೆಂದೂ ತಿಳಿದು ಬರುತ್ತದೆ. ಒಟ್ಟಿನ ಮೇಲೆ ಕ್ರಿ.ಶ. ೬ನೆಯ ಶತಮಾನದ ಆದಿ ಭಾಗದಲ್ಲಿ ಹುಟ್ಟಿದನೆಂದೂ ಮಧ್ಯಭಾಗದಲ್ಲಿ ಗ್ರಂಥಗಳನ್ನು ರಚಿಸಿದನೆಂದೂ ಅಂತ್ಯಭಾಗದಲ್ಲಿ ಮೃತಿ ಹೊಂದಿದನೆಂದೂ ಹೇಳಬಹುದು. ಈತನು ವಿಕ್ರಮಾದಿತ್ಯನ ಆಸ್ಥಾನದಲ್ಲಿ ನವರತ್ನಗಳಲ್ಲಿ ಒಬ್ಬನೆಂದು ಕೆಲವರು ಅಭಿಪ್ರಾಯ ಪಟ್ಟರೆ ಮತ್ತೆ ಕೆಲವರು ಅಮರಸಿಂಹ, ವಿಷ್ಣುಶರ್ಮ ಇವರ ಸಮಕಾಲೀನನು ಎಂದು ಅಭಿಪ್ರಾಯ ಪಡುತ್ತಾರೆ.

ಪಂಚಸಿದ್ಧಾಂತಿಕಾ, ಲಘುಸಂಹಿತಾ, ವಾರಾಹೀ ಸಂಹಿತಾ ಮತ್ತು ಬೃಹಜಾತವು ಇವು ಈತನ ಕೃತಿಗಳು. ಪಂಚಸಿದ್ಧಾಂತಿಕಾ ಗಂಥ್ರವು ಬಹುಕಾಲ ನಷ್ಟ ಪ್ರಾಯವಾಗಿತ್ತು. ಕೋಲ್‌ಬ್ರೂಕ್ ಮತ್ತು ಪಾಶ್ಚಾತ್ಯ ಪಂಡಿತರು ಈ ನಷ್ಟ ಗಂಥ್ರವನ್ನು ಪತ್ತೆ ಮಾಡಲು ಬಹಳ ಪ್ರಯತ್ನಿಸಿ ಕೈಬಿಟ್ಟರು. ಆದರೂ ಕೆಲವು ಶ್ಲೋಕಗಳನ್ನು ಪತ್ತೆ ಹಚ್ಚಿದರು. ಆದರೆ ಡಾ॥ ಥೀಬೋರವರು ಬಹಳ ಶ್ರಮಪಟ್ಟು ಪಂಡಿತ ಸುಧಾಕರ ದ್ವಿವೇದಿಯವರ ಅಮೂಲ್ಯ ಸಹಾಯವನ್ನು ಪಡೆದು ಈ ಗ್ರಂಥವನ್ನು ಮುದ್ರಿಸಿ ಪ್ರಕಾಶಿಸಿದರು.

ಖಗೋಳ ಶಾಸ್ತ್ರಜ್ಞನೆಂದು ಪ್ರಖ್ಯಾತಿ ಹೊಂದಿದ್ದ ವರಾಹಮಿಹಿರನು ಜ್ಯೋತಿಶ್ಶಾಸ್ತ್ರದ ಸಕಲಾಂಗಗಳನ್ನು ಪ್ರತಿಪಾದಿಸಿದ್ದಾನೆ. ಈತನ ಶ್ರೇಷ್ಠ ಕೃತಿ 'ಬೃಹತ್ಸಂಹಿತೆ'. ಹೆಸರಿಗೆ ತಕ್ಕಂತೆ ಈ ಕೃತಿಯು ಈತನ ಎಲ್ಲಾ ಗ್ರಂಥಗಳಿಗಿಂತ ದೊಡ್ಡದು. ಇದರಲ್ಲಿ ೪೦೦೦ ಶ್ಲೋಕಗಳನ್ನೊಳಗೊಂಡ ೧೦೦ ಅಧ್ಯಾಯಗಳಿವೆ. ಅನೇಕ ವಿಷಯಗಳು ಪೂರ್ವಾಚಾರ್ಯರಿಂದ ವಿವರಿಸಲ್ಪಟ್ಟಿರುವುದರಿಂದ ಅವರವರ ಶ್ಲೋಕಗಳನ್ನೇ ಈತನು ಉದಾಹರಿಸಿರುವುದು ಕಂಡು ಬರುತ್ತದೆ. ಈ ಕೃತಿಯಲ್ಲಿ ಜೀವನದ ಅನೇಕ ಕ್ಷೇತ್ರಗಳಲ್ಲಿ ತುಂಬಾ ಉಪಕಾರಿಯಾದ ಪ್ರಾಕೃತಿಕ ಜ್ಯೋತಿಷ್ಯದ ಬಗ್ಗೆ ವಿವರಣಾತ್ಮಕವಾದ ವಿಷಯ ಸಂಗ್ರಹಣೆ ಇದೆ. ಇದರೊಂದಿಗೆ ಸಾಮಾಜಿಕ ಹಾಗೂ ವೈಯುಕ್ತಿಕ ಜೀವನದ ನಾನಾ ಅಂಶಗಳನ್ನು ಕುರಿತ ವಿವೇಚನೆಯೂ ಇದೆ. ಜ್ಯೋತಿಷ್ಯವನ್ನು ಹೇಳುವವನ ಲಕ್ಷಣ, ನಕ್ಷತ್ರವ್ಯೂಹ, ಗರ್ಭಲಕ್ಷಣ, ಮಳೆ, ಕಾಮನ ಬಿಲ್ಲು, ವಾಸ್ತುವಿದ್ಯಾ, ಅಶ್ವ ಲಕ್ಷಣ, ವಾಯು ಸರುತ, ವಜ್ರಪರೀಕ್ಷೆ, ಪಾಕಾಧ್ಯಾಯ ನಕ್ಷತ್ರ ಜಾತಕ ಮುಂತಾದ ವಿಷಯಗಳ ಮೇಲೆಲ್ಲಾ ೪೦–೫೦ ಶ್ಲೋಕಗಳ ಒಂದೊಂದು ಅಧ್ಯಾಯವನ್ನೇ ಬರೆದಿದ್ದಾನೆ. ಇದರಿಂದಾಗಿ ಇದು ಪ್ರಾಚೀನ ವಿಜ್ಞಾನಿಗಳ ಒಂದು ಚಿಕ್ಕ ವಿಶ್ವಕೋಶದಂತಿದ್ದು. ಇತರ ಶಾಸ್ತ್ರಗಳೊಡನೆ ಸಂಪರ್ಕ ಪಡೆದಿದೆ. ಧರ್ಮದ ಇತಿಹಾಸ ದೃಷ್ಟಿಯಿಂದಲೂ ಈ ಗ್ರಂಥಕ್ಕೆ ತುಂಬಾ ಮಹತ್ವವಿದೆ. ಎರಡನೆಯ ಅಧ್ಯಾಯದಲ್ಲಿ ಜ್ಯೋತಿಶ್ಶಾಸ್ತ್ರದ ಪಾಂಡಿತ್ಯ ಹೊಂದಿರಬೇಕಂದು ಹೇಳಿದ್ದಾನೆ. ಆತನ ಶುಚಿಯಾಗಿಯೂ ಬುದ್ಧಿವಂತವಾಗಿಯೂ, ದ್ಯೂತಾದಿ ವ್ಯಸನಾಸಕ್ತನಾಗದೆ ಗ್ರಹಗಣಿತ ಸಂಹಿತಾ ಹೋರಾಗಗಳನ್ನು ತಿಳಿದವನಾಗಿಯೂ ಇರಬೇಕು. ನಟನೆ ಹಾಗೂ ಮೋಸದ ಜೋಯಿಸರ ಬಗ್ಗೆ ಎಚ್ಚರವಹಿಸಬೇಕೆಂದೂ ಎಚ್ಚರಿಸಿದ್ದಾನೆ. ಖಗೋಳ ದೃಷ್ಟಿಯಿಂದ ಹವಮಾನವನ್ನು ಕುರಿತ ಕೆಲವು ಅಧ್ಯಾಯಗಳಿವೆ. ಸ್ತ್ರೀಪುರುಷರ ಲಕ್ಷಣ, ಸ್ತ್ರೀ ಪ್ರಶಂಸೆ

ಇತ್ಯಾದಿ ಎಲ್ಲಾ ವಿಷಯಗಳ ವಿಹಂಗಮ ನಿರೂಪಣೆ ಈ ಗ್ರಂಥದಲ್ಲಿ ಸವಿಸ್ತಾರವಾಗಿ ವಿವೇಚಿಸಲ್ಪಟ್ಟಿದೆ.

ಬೃಹಜ್ಜಾತಕ ಮತ್ತು ಲಘುಜಾತಕ ಗ್ರಂಥಗಳು ಒಬ್ಬನ ಜನ್ಮಕಾಲದಲ್ಲಿ ಗ್ರಹನಕ್ಷತ್ರಗಳ ಸ್ಥಿತಿಯ ಮೇಲಿಂದ ಅವನ ಭವಿಷ್ಯವನ್ನು ಹೇಗೆ ಲೆಕ್ಕಾಚಾರವಾಗಿ ಹೇಳಬಹುದೆಂಬುದನ್ನು ವಿವರಿಸುತ್ತವೆ. ಅನೇಕ ಪ್ರಾಚೀನ ಸಿದ್ಧಾಂತಿಗಳಿಂದ ಪ್ರಣೀತವಾದ ವಿಷಯಗಳನ್ನು ಸಂಗ್ರಹಿಸಿ ಇವನ್ನು ರಚಿಸಿರುವುದರಿಂದ ಇದು ಫಲ ಭಾಗವನ್ನು ಹೇಳುವ ಜ್ಯೋತಿಷಿಕರಿಗೆ ಬಹಳ ಉಪಯುಕ್ತವಾಗಿದೆ. ತಾನು ಹಿಂದಿನ ಋಷಿಗಳಿಂದ ರಚಿತವಾದ ಕೃತಿಗಳ ಆಧಾರದ ಮೇಲೆ ತನ್ನ ಗ್ರಂಥಗಳನ್ನು ಬರೆದುದಾಗಿಯೂ ತಾನೇ ಹೇಳಿಕೊಂಡಿರುವುದಲ್ಲದೆ ಆಧಾರ ಗ್ರಂಥಗಳ ಹೆಸರನ್ನೂ ಸೂಚಿಸಿದ್ದಾನೆ. ರಾಶಿ ಪ್ರಭೇದ, ಗ್ರಹಯೋನಿ ಭೇದ, ನಷ್ಟಜಾತಕಗಳನ್ನೊಳಗೊಂಡ ೨೬ ಅಧ್ಯಾಯಗಳು ಬೃಹಜ್ಜಾತಕದಲ್ಲಿವೆ, ಜಾತಕ ಸ್ವರೂಪವನ್ನು ನಿರ್ಣಯಿಸುವ ಜಾತಕ ಅಥವಾ ಗ್ರೀಕ್ ಹೋರಾ ಶಾಸ್ತ್ರವೆಂಬ ಜ್ಯೋತಿಶ್ಶಾಸ್ತ್ರ ವಿಭಾಗವು ಸಂಪೂರ್ಣವಾಗಿ ಗ್ರೀಕ್ ಜ್ಯೋತಿಷ್ಯದಿಂದ ಪ್ರಭಾವಿತವಾಗಿದೆ. ಗ್ರೀಕ್ ಪಾರಿಭಾಷಿಕ ಶಬ್ದಗಳಿಂದ ಕೂಡಿದ ಈ ಕೃತಿಗಳ ವಿಷಯನಿರೂಪಣೆ ಗ್ರೀಕ್ ಪದ್ಧತಿಯನ್ನು ಸಂಪೂರ್ಣವಾಗಿ ಹೋಲುತ್ತದೆ. ವರಾಹಮಿಹಿರನು ತನಗಿಂತ ಹಿಂದಿನವರು ಪ್ರಚಾರಪಡಿಸಿದ್ದ ಕೃತಿಗಳ ಮೇಲೆ ತನ್ನ ಗ್ರಂಥವನ್ನು ರಚಿಸಿರುವುದಾಗಿ ಹೇಳಿರುವುದರಿಂದ ಈ ಶಾಸ್ತ್ರವು ಭಾರತದಲ್ಲಿ ಬಹಳ ಹಿಂದಿನ ಕಾಲದಿಂದಲೂ ಬಹಳ ಪ್ರಚಾರದಲ್ಲಿತ್ತು ಎಂಬುದು ತಿಳಿದುಬರುತ್ತದೆ. ಮದುವೆಗೆ ಶುಭವಾದ ಮುಹೂರ್ತಗಳ ಬಗೆಗೆ ಬೃಹದ್ವಿವಾಹಪಟಲ ಮತ್ತು ಲಘುವಿವಾಹಪಟಲ ಎಂಬ ಎರಡು ಸ್ವತಂತ್ರ ಪ್ರಕರಣ ಗ್ರಂಥಗಳನ್ನೂ ರಚಿಸಿರುವುದರೊಂದಿಗೆ ರಾಜನ ಯುದ್ಧಪ್ರಯಾಣಕ್ಕೆ ಯೋಗ್ಯವಾದ ಶುಭಲಗ್ನಗಳನ್ನು ಸೂಚಿಸುವ 'ಯೋಗಯಾತ್ರಾ' ಎಂಬ ಗ್ರಂಥವನ್ನೂ ರಚಿಸಿದ್ದಾನೆ. ವರಾಹಮಿಹಿರನ ಮಗನ ಹೆಸರು 'ಪೃಥು ಯಶಸ್'. ಈತನು ಇಂದಿಗೂ ಪ್ರಚಾರದಲ್ಲಿರುವ ಷಟ್ಪಂಚಾಶಿಕಾ ಎಂಬ ಜ್ಯೋತಿಷ್ಯ ಕೃತಿಯನ್ನು ರಚಿಸಿದ್ದಾನೆ. ಭಟ್ಟೋತ್ಪಲನು ವರಾಹಮಿಹಿರನ ಎಲ್ಲಾ ಕೃತಿಗಳ ಮೇಲೂ ವ್ಯಾಖ್ಯಾನ ರಚಿಸಿದಂತೆ ಷಟ್ಪಂಚಾಶಿಕಾ ಕೃತಿಯ ಮೇಲೂ ವ್ಯಾಖ್ಯಾನ ಬರೆದಿದ್ದಾನೆ.

## ಬ್ರಹ್ಮಗುಪ್ತ (ಕ್ರಿ.ಶ. ೫೯೮)

ವರಾಹಮಿಹಿರನಾದ ಮೇಲೆ ಜ್ಯೋತಿಶ್ಶಾಸ್ತ್ರದಲ್ಲಿ ಅತ್ಯಂತ ಪ್ರಸಿದ್ಧನಾದವನೆಂದರೆ ಬ್ರಹ್ಮಗುಪ್ತ. ಪ್ರಸಿದ್ಧನಾದ ಭಾಸ್ಕರಾಚಾರ್ಯನು ಈತನನ್ನು ಗಣಕಚಕ್ರಚೂಡಾಮಣಿ ಎಂದು ಕರೆದು ಶ್ಲಾಘಿಸಿ, ಆತನ ವಿಚಾರಧಾರೆಗಳನ್ನು ತನ್ನ ಕೃತಿಗಳಲ್ಲಿ ಪ್ರತಿಪಾದಿಸಿದ್ದಾನೆ. ಪಂಚ ಸಿದ್ಧಾಂತ ಗ್ರಂಥಗಳಲ್ಲಿ ಲಾಟ, ಆರ್ಯಭಟ್ಟ ವರಾಹಮಿಹಿರ ಮೊದಲಾದ ಆಚಾರ್ಯರ

ವಂತಗಳನ್ನು ಬಾರಿಬಾರಿಗೆ ಖಂಡಿಸಿರುವುದರಿಂದ ಈತನು ಅವರೆಲ್ಲರಿಗಿಂತ ಈಚಿನವನೆಂದು ತಿಳಿದು ಬರುತ್ತದೆ. ತನ್ನ ಕೃತಿಯಾದ ಬ್ರಹ್ಮಸ್ಫುಟ ಸಿದ್ಧಾಂತ ೨೪ನೆಯ ಅಧ್ಯಾಯದಲ್ಲಿ ತಾನೇ ಹೇಳಿಕೊಂಡಿರುವಂತೆ ಈ ಗ್ರಂಥರಚನೆ ಮಾಡಿದಾಗ ಆತನಿಗೆ ೩೦ ವರ್ಷಗಳೆಂದೂ, ಆತನ ಜನ್ಮಕಾಲ ಕ್ರಿ. ಶ. ೫೯೮ ಎಂದೂ, ಅವನ ತಂದೆಯ ಹೆಸರು ವಿಷ್ಣುಗುಪ್ತನೆಂದೂ, ಅವನ ಆಶ್ರಯದಾತನಾದ ರಾಜನು ವ್ಯಾಘ್ರನಾಮುಕನೆಂದೂ ತಿಳಿದು ಬರುವುದು. ಅವನು ವಿಷ್ಣು ಗುಪ್ತನ ಪೌತ್ರನೂ ಆದುದರಿಂದ ಗುಪ್ತಶಬ್ದದಿಂದ ಅವನು ವೈಶ್ಯಕುಲಸಂಭೂತನೆಂದು ಕೆಲವರು ಅಭಿಪ್ರಾಯ ಪಡುತ್ತಾರೆ.

ಈತನು 'ಬ್ರಹ್ಮಸ್ಫುಟ ಸಿದ್ಧಾಂತ ' ಮತ್ತು ' ಖಂಡಖಾದ್ಯಕ ' ಎಂಬ ಎರಡು ಕೃತಿಗಳನ್ನು ರಚಿಸಿದ್ದಾನೆ. ಬ್ರಾಹ್ಮಸ್ಫುಟ ಸಿದ್ಧಾಂತವು ವಿಷ್ಣು ಧರ್ಮೋತ್ತರ ಪುರಾಣಕ್ಕೆ ಸೇರಿದ ಪೈತಾಮಹಾಸಿದ್ಧಾಂತದ ಆಧಾರದ ಮೇಲೆ ರಚಿತವಾದ ಗ್ರಂಥ. ಪ್ರಾಚೀನ ಬ್ರಹ್ಮಸಿದ್ಧಾಂತವನ್ನು ಸಂಗ್ರಹಿಸಿ ಕಾಲಾನುಗುಣವಾಗಿ ತಿದ್ದಿ ಮಾಡಿದ ಗ್ರಂಥವೆಂದು ಕೆಲವರು ಅಭಿಪ್ರಾಯ ಪಡುತ್ತಾರೆ. ಪ್ರಾಚೀನ ಸಿದ್ಧಾಂತಗಳು ನಷ್ಟ ಪ್ರಾಯವಾಗಿರುವುದರಿಂದ ಬ್ರಹ್ಮಸ್ಫುಟ ಸಿದ್ಧಾಂತವು ಬ್ರಹ್ಮಸಿದ್ಧಾಂತವೆಂಬ ಹೆಸರನ್ನು ಹೊಂದಿದೆ. ಬ್ರಹ್ಮಸ್ಫುಟ ಸಿದ್ಧಾಂತವು ಸಾಮಾನ್ಯವಾಗಿ ಪೂರ್ವ ಗ್ರಂಥಗಳೊಡನೆ ಸಹಮತವಾಗಿದ್ದು ವಿವರಗಳಲ್ಲಿ ಸೂರ್ಯಸಿದ್ಧಾಂತಕ್ಕೆ ಭಿನ್ನವಾಗಿದೆ. ಇಲ್ಲಿ ಬಹ್ಮಗುಪ್ತನು ಸಿದ್ಧಾಂತವನ್ನು ತನ್ನ ಪೂರ್ವದವರಿಗಿಂತ ವಿವರವಾಗಿ ಹಾಗೂ ವ್ಯವಸ್ಥಿತವಾಗಿ ಪ್ರತಿಪಾದಿಸಿದ್ದಾನೆ. ಬ್ರಹ್ಮಸ್ಫುಟ ಸಿದ್ಧಾಂತದಲ್ಲಿ ' ಹೋರಾ ' ಭಾಗವು ಸೇರಿಲ್ಲ. ಗ್ರಹ ಗಣಿತ, ಪಾಟೀಗಣಿತ, ಕ್ಷೇತ್ರಗಣಿತ, ಗೋಳಾಧ್ಯಾಯ ಮತ್ತು ಯಂತ್ರಾಧ್ಯಾಯಗಳು ಇವೆ. ತಂತ್ರಾಧ್ಯಾಯವೆಂಬ ಒಂದು ಅಧ್ಯಾಯವನ್ನೇ ಪರಮತ ಖಂಡನೆಗಾಗಿ ಅದರಲ್ಲಿಯೂ ಆರ್ಯಭಟನ ಟೀಕೆಗಾಗಿಯೇ ಮೀಸಲಿಟ್ಟಿದ್ದಾನೆ. ಆರ್ಯಭಟನಂಥ ಸಿದ್ಧಾಂತಿಯನ್ನು ನಿರ್ದಾಕ್ಷಿಣ್ಯವಾಗಿ ಖಂಡಿಸಿರುವುದರಲ್ಲಿ ಈತನೇ ಮೊದಲಿಗನು. ಈತನ ಬ್ರಹ್ಮಸ್ಫುಟ ಸಿದ್ಧಾಂತ ೨೧ ಅಧ್ಯಾಯಗಳನ್ನೊಳಗೊಂಡ ಒಂದು ದೊಡ್ಡ ಕೃತಿ. ಕೆಲವೊಂದು ಅಧ್ಯಾಯಗಳು ಖಗೋಳ ಶಾಸ್ತ್ರ ಸಮಸ್ಯೆಯನ್ನು ಬಿಡಿಸಲು ವಿನಿಯುಕ್ತವಾಗಿವೆ. ಬ್ರಹ್ಮಗುಪ್ತನ ಸಮಗ್ರ ಗ್ರಂಥವು ಆರ್ಯಭಟನ ಕೃತಿಗಿಂತ ವಿಸ್ತೃತವಾಗಿರುವುದರಿಂದ ಗಣಿತಾಧ್ಯಾಯ ದೊಡ್ಡದಾಗಿದೆ, ಗಣಿತ ಶಾಸ್ತ್ರಜ್ಞನಾಗಿ ಈತನು ಪ್ರಥಮಸ್ಥಾನಕ್ಕೆ ಯೋಗ್ಯನು. ದೊರೆತ ಹಸ್ತಲಿಖಿತ ಪ್ರತಿಗಳನ್ನು ಸಂಸ್ಕರಿಸಿ ಶೋಧಿಸಿ ಪ್ರಕಟಿಸಿದ ಕೀರ್ತಿ ಮಹಾಮಹೋಪಾಧ್ಯಾಯ ಪಂಡಿತ ಸುಧಾಕರ ದ್ವಿವೇದಿಯವರಿಗೆ ಸಲ್ಲುತ್ತದೆ.

ಈತನು ' ಖಂಡಖಾದ್ಯಕ ' ವೆಂಬ ಕರಣ ಗ್ರಂಥವನ್ನು ರಚಿಸಿದ್ದಾನೆ. ತನ್ನ ಗಣನೆಯನ್ನು ಕ್ರಿ.ಶ. ೬೬೪ ರಿಂದ ಆರಂಭಿಸುತ್ತಾನೆ. ಇದರಲ್ಲಿ ೧೦ ಅಧ್ಯಾಯಗಳಿದ್ದು ಪ್ರಾರಂಭದ ೮ ಅಧ್ಯಾಯಗಳು ಆರ್ಯಭಟ್ಟನ ಅನುಕರಣೆ ಮಾತ್ರವಾಗಿದ್ದು ಪೂರ್ವಾರ್ಧದ ಅಧ್ಯಾಯಗಳು ಸ್ವತಂತ್ರ ಹಾಗೂ ವಿಮರ್ಶಾತ್ಮಕ ವಿಷಯಗಳಿಗೆ ವಿನಿಯೋಗಿಸಿದ್ದಾನೆ. ಬ್ರಹ್ಮ ಗುಪ್ತ ಮತ್ತು

ಇತ್ಯಾದಿ ಎಲ್ಲಾ ವಿಷಯಗಳ ವಿಹಂಗಮ ನಿರೂಪಣೆ ಈ ಗ್ರಂಥದಲ್ಲಿ ಸವಿಸ್ತಾರವಾಗಿ ವಿವೇಚಿಸಲ್ಪಟ್ಟಿದೆ.

ಬೃಹಜ್ಜಾತಕ ಮತ್ತು ಲಘುಜಾತಕ ಗ್ರಂಥಗಳು ಒಬ್ಬನ ಜನ್ಮಕಾಲದಲ್ಲಿ ಗ್ರಹನಕ್ಷತ್ರಗಳ ಸ್ಥಿತಿಯ ಮೇಲಿಂದ ಅವನ ಭವಿಷ್ಯವನ್ನು ಹೇಗೆ ಲೆಕ್ಕಾಚಾರವಾಗಿ ಹೇಳಬಹುದೆಂಬುದನ್ನು ವಿವರಿಸುತ್ತವೆ. ಅನೇಕ ಪ್ರಾಚೀನ ಸಿದ್ಧಾಂತಿಗಳಿಂದ ಪ್ರಣೀತವಾದ ವಿಷಯಗಳನ್ನು ಸಂಗ್ರಹಿಸಿ ಇವನ್ನು ರಚಿಸಿರುವುದರಿಂದ ಇದು ಫಲ ಭಾಗವನ್ನು ಹೇಳುವ ಜ್ಯೋತಿಷಿಕರಿಗೆ ಬಹಳ ಉಪಯುಕ್ತವಾಗಿದೆ. ತಾನು ಹಿಂದಿನ ಋಷಿಗಳಿಂದ ರಚಿತವಾದ ಕೃತಿಗಳ ಆಧಾರದ ಮೇಲೆ ತನ್ನ ಗ್ರಂಥಗಳನ್ನು ಬರೆದುದಾಗಿಯೂ ತಾನೇ ಹೇಳಿಕೊಂಡಿರುವುದಲ್ಲದೆ ಆಧಾರ ಗ್ರಂಥಗಳ ಹೆಸರನ್ನೂ ಸೂಚಿಸಿದ್ದಾನೆ. ರಾಶಿ ಪ್ರಭೇದ, ಗ್ರಹಯೋನಿ ಭೇದ, ನಷ್ಟಜಾತಕಗಳನ್ನೊಳಗೊಂಡ ೨೬ ಅಧ್ಯಾಯಗಳು ಬೃಹಜ್ಜಾತಕದಲ್ಲಿವೆ, ಜಾತಕ ಸ್ವರೂಪವನ್ನು ನಿರ್ಣಯಿಸುವ ಜಾತಕ ಅಥವಾ ಗ್ರೀಕ್ ಹೋರಾ ಶಾಸ್ತ್ರವೆಂಬ ಜ್ಯೋತಿಶ್ಶಾಸ್ತ್ರ ವಿಭಾಗವು ಸಂಪೂರ್ಣವಾಗಿ ಗ್ರೀಕ್ ಜ್ಯೋತಿಷ್ಯದಿಂದ ಪ್ರಭಾವಿತವಾಗಿದೆ. ಗ್ರೀಕ್ ಪಾರಿಭಾಷಿಕ ಶಬ್ದಗಳಿಂದ ಕೂಡಿದ ಈ ಕೃತಿಗಳ ವಿಷಯನಿರೂಪಣೆ ಗ್ರೀಕ್ ಪದ್ಧತಿಯನ್ನು ಸಂಪೂರ್ಣವಾಗಿ ಹೋಲುತ್ತದೆ. ವರಾಹಮಿಹಿರನು ತನಗಿಂತ ಹಿಂದಿನವರು ಪ್ರಚಾರಪಡಿಸಿದ್ದ ಕೃತಿಗಳ ಮೇಲೆ ತನ್ನ ಗ್ರಂಥವನ್ನು ರಚಿಸಿರುವುದಾಗಿ ಹೇಳಿರುವುದರಿಂದ ಈ ಶಾಸ್ತ್ರವು ಭಾರತದಲ್ಲಿ ಬಹಳ ಹಿಂದಿನ ಕಾಲದಿಂದಲೂ ಬಹಳ ಪ್ರಚಾರದಲ್ಲಿತ್ತು ಎಂಬುದು ತಿಳಿದುಬರುತ್ತದೆ. ಮದುವೆಗೆ ಶುಭವಾದ ಮುಹೂರ್ತಗಳ ಬಗೆಗೆ ಬೃಹದ್ವಿವಾಹಪಟಲ ಮತ್ತು ಲಘುವಿವಾಹಪಟಲ ಎಂಬ ಎರಡು ಸ್ವತಂತ್ರ ಪ್ರಕರಣ ಗ್ರಂಥಗಳನ್ನೂ ರಚಿಸಿರುವುದರೊಂದಿಗೆ ರಾಜನ ಯುದ್ಧಪ್ರಯಾಣಕ್ಕೆ ಯೋಗ್ಯವಾದ ಶುಭಲಗ್ನಗಳನ್ನು ಸೂಚಿಸುವ 'ಯೋಗಯಾತ್ರಾ' ಎಂಬ ಗ್ರಂಥವನ್ನೂ ರಚಿಸಿದ್ದಾನೆ. ವರಾಹಮಿಹಿರನ ಮಗನ ಹೆಸರು 'ಪೃಥು ಯಶಸ್'. ಈತನು ಇಂದಿಗೂ ಪ್ರಚಾರದಲ್ಲಿರುವ ಷಟ್ಪಂಚಾಶಿಕಾ ಎಂಬ ಜ್ಯೋತಿಷ್ಯ ಕೃತಿಯನ್ನು ರಚಿಸಿದ್ದಾನೆ. ಭಟ್ಟೋತ್ಪಲನು ವರಾಹಮಿಹಿರನ ಎಲ್ಲಾ ಕೃತಿಗಳ ಮೇಲೂ ವ್ಯಾಖ್ಯಾನ ರಚಿಸಿದಂತೆ ಷಟ್ಪಂಚಾಶಿಕಾ ಕೃತಿಯ ಮೇಲೂ ವ್ಯಾಖ್ಯಾನ ಬರೆದಿದ್ದಾನೆ.

## ಬ್ರಹ್ಮಗುಪ್ತ (ಕ್ರಿ.ಶ. ೫೯೮)

ವರಾಹಮಿಹಿರನಾದ ಮೇಲೆ ಜ್ಯೋತಿಶ್ಶಾಸ್ತ್ರದಲ್ಲಿ ಅತ್ಯಂತ ಪ್ರಸಿದ್ಧನಾದವನೆಂದರೆ ಬ್ರಹ್ಮಗುಪ್ತ. ಪ್ರಸಿದ್ಧನಾದ ಭಾಸ್ಕರಾಚಾರ್ಯನು ಈತನನ್ನು ಗಣಕಚಕ್ರಚೂಡಾಮಣಿ ಎಂದು ಕರೆದು ಶ್ಲಾಘಿಸಿ, ಆತನ ವಿಚಾರಧಾರೆಗಳನ್ನು ತನ್ನ ಕೃತಿಗಳಲ್ಲಿ ಪ್ರತಿಪಾದಿಸಿದ್ದಾನೆ. ತನ್ನ ಸಿದ್ಧಾಂತ ಗ್ರಂಥಗಳಲ್ಲಿ ಲಾಟ, ಆರ್ಯಭಟ್ಟ ವರಾಹಮಿಹಿರ ಮೊದಲಾದ ಆಚಾರ್ಯರ

ವಂತಗಳನ್ನು ಬಾರಿಬಾರಿಗೆ ಖಂಡಿಸಿರುವುದರಿಂದ ಈತನು ಅವರೆಲ್ಲರಿಗಿಂತ ಈಚಿನವನೆಂದು ತಿಳಿದು ಬರುತ್ತದೆ. ತನ್ನ ಕೃತಿಯಾದ ಬ್ರಹ್ಮಸ್ಫುಟ ಸಿದ್ಧಾಂತ ೨೪ನೆಯ ಅಧ್ಯಾಯದಲ್ಲಿ ತಾನೇ ಹೇಳಿಕೊಂಡಿರುವಂತೆ ಈ ಗ್ರಂಥರಚನೆ ಮಾಡಿದಾಗ ಆತನಿಗೆ ೩೦ ವರ್ಷಗಳೆಂದೂ, ಆತನ ಜನ್ಮಕಾಲ ಕ್ರಿ. ಶ. ೫೯೮ ಎಂದೂ, ಅವನ ತಂದೆಯ ಹೆಸರು ವಿಷ್ಣುಗುಪ್ತನೆಂದೂ, ಅವನ ಆಶ್ರಯದಾತನಾದ ರಾಜನು ವ್ಯಾಘ್ರನಾಮಕನೆಂದೂ ತಿಳಿದು ಬರುವುದು. ಅವನು ವಿಷ್ಣು ಗುಪ್ತನ ಪೌತ್ರನೂ ಆದುದರಿಂದ ಗುಪ್ತಶಬ್ದದಿಂದ ಅವನು ವೈಶ್ಯಕುಲಸಂಭೂತನೆಂದು ಕೆಲವರು ಅಭಿಪ್ರಾಯ ಪಡುತ್ತಾರೆ.

ಈತನು 'ಬ್ರಹ್ಮಸ್ಫುಟ ಸಿದ್ಧಾಂತ' ಮತ್ತು 'ಖಂಡಖಾದ್ಯಕ' ಎಂಬ ಎರಡು ಕೃತಿಗಳನ್ನು ರಚಿಸಿದ್ದಾನೆ. ಬ್ರಾಹ್ಮಸ್ಫುಟ ಸಿಂದ್ಧಾಂತವು ವಿಷ್ಣು ಧರ್ಮೋತ್ತರ ಪುರಾಣಕ್ಕೆ ಸೇರಿದ ಪೈತಾ ಮಹಾಸಿದ್ಧಾಂತದ ಆಧಾರದ ಮೇಲೆ ರಚಿತವಾದ ಗ್ರಂಥ. ಪ್ರಾಚೀನ ಬ್ರಹ್ಮಸಿದ್ಧಾಂತವನ್ನು ಸಂಗ್ರಹಿಸಿ ಕಾಲಾನುಗುಣವಾಗಿ ತಿದ್ದಿ ಮಾಡಿದ ಗ್ರಂಥವೆಂದು ಕೆಲವರು ಅಭಿಪ್ರಾಯ ಪಡುತ್ತಾರೆ. ಪ್ರಾಚೀನ ಸಿಂದ್ಧಾಂತಗಳು ನಷ್ಟ ಪ್ರಾಯವಾಗಿರುವುದರಿಂದ ಬ್ರಹ್ಮಸ್ಫುಟ ಸಿಂದ್ಧಾಂತವು ಬ್ರಹ್ಮಸಿದ್ಧಾಂತವೆಂಬ ಹೆಸರನ್ನು ಹೊಂದಿದೆ. ಬ್ರಹ್ಮಸ್ಫುಟ ಸಿದ್ಧಾಂತವು ಸಾಮಾನ್ಯವಾಗಿ ಪೂರ್ವ ಗ್ರಂಥಗಳೊಡನೆ ಸಹಮತವಾಗಿದ್ದು ವಿವರಗಳಲ್ಲಿ ಸೂರ್ಯಸಿದ್ಧಾಂತಕ್ಕೆ ಭಿನ್ನವಾಗಿದೆ. ಇಲ್ಲಿ ಬಹ್ಮಗುಪ್ತನು ಸಿದ್ಧಾಂತವನ್ನು ತನ್ನ ಪೂರ್ವದವರಿಗಿಂತ ವಿವರವಾಗಿ ಹಾಗೂ ವ್ಯವಸ್ಥಿತವಾಗಿ ಪ್ರತಿಪಾದಿಸಿದ್ದಾನೆ. ಬ್ರಹ್ಮಸ್ಫುಟ ಸಿದ್ಧಾಂತದಲ್ಲಿ 'ಹೋರಾ' ಭಾಗವು ಸೇರಿಲ್ಲ. ಗ್ರಹ ಗಣಿತ, ಪಾಟೀಗಣಿತ, ಕ್ಷೇತ್ರಗಣಿತ, ಗೋಳಾಧ್ಯಾಯ ಮತ್ತು ಯಂತ್ರಾಧ್ಯಾಯ ಗಳು ಇವೆ. ತಂತ್ರಾಧ್ಯಾಯವೆಂಬ ಒಂದು ಅಧ್ಯಾಯವನ್ನೇ ಪರಮತ ಖಂಡನೆಗಾಗಿ ಅದರಲ್ಲಿಯೂ ಆರ್ಯಭಟನ ಟೀಕೆಗಾಗಿಯೇ ಮೀಸಲಿಟ್ಟಿದ್ದಾನೆ. ಆರ್ಯಭಟನಂಥ ಸಿದ್ಧಾಂತಿಯನ್ನು ನಿರ್ದಾಕ್ಷಿಣ್ಯವಾಗಿ ಖಂಡಿಸಿರುವುದರಲ್ಲಿ ಈತನೇ ಮೊದಲಿಗನು. ಈತನ ಬ್ರಹ್ಮಸ್ಫುಟ ಸಿದ್ಧಾಂತ ೨೧ ಅಧ್ಯಾಯಗಳನ್ನೊಳಗೊಂಡ ಒಂದು ದೊಡ್ಡ ಕೃತಿ. ಕೆಲವೊಂದು ಅಧ್ಯಾಯಗಳು ಖಗೋಳ ಶಾಸ್ತ್ರ ಸಮಸ್ಯೆಯನ್ನು ಬಿಡಿಸಲು ವಿನಿಯುಕ್ತವಾಗಿವೆ. ಬ್ರಹ್ಮಗುಪ್ತನ ಸಮಗ್ರ ಗ್ರಂಥವು ಆರ್ಯಭಟನ ಕೃತಿಗಿಂತ ವಿಸ್ತೃತವಾಗಿರುವುದರಿಂದ ಗಣಿತಾಧ್ಯಾಯ ದೊಡ್ಡದಾಗಿದೆ. ಗಣಿತ ಶಾಸ್ತ್ರಜ್ಞನಾಗಿ ಈತನು ಪ್ರಥಮಸ್ಥಾನಕ್ಕೆ ಯೋಗ್ಯನು. ದೊರೆತ ಹಸ್ತಲಿಖಿತ ಪ್ರತಿಗಳನ್ನು ಸಂಸ್ಕರಿಸಿ ಶೋಧಿಸಿ ಪ್ರಕಟಿಸಿದ ಕೀರ್ತಿ ಮಹಾಮಹೋಪಾಧ್ಯಾಯ ಪಂಡಿತ ಸುಧಾಕರ ದ್ವಿವೇದಿಯವರಿಗೆ ಸಲ್ಲುತ್ತದೆ.

ಈತನು 'ಖಂಡಖಾದ್ಯಕ' ವೆಂಬ ಕರಣ ಗ್ರಂಥವನ್ನು ರಚಿಸಿದ್ದಾನೆ. ತನ್ನ ಗಣನೆ ಯನ್ನು ಕ್ರಿ.ಶ. ೬೬೫ ರಿಂದ ಆರಂಭಿಸುತ್ತಾನೆ. ಇದರಲ್ಲಿ ೧೦ ಅಧ್ಯಾಯಗಳಿದ್ದು ಪ್ರಾರಂಭದ ೮ ಅಧ್ಯಾಯಗಳು ಆರ್ಯಭಟ್ಟನ ಅನುಕರಣೆ ಮಾತ್ರವಾಗಿದ್ದು ಪೂರ್ವಾರ್ಧದ ಅಧ್ಯಾಯಗಳು ಸ್ವತಂತ್ರ ಹಾಗೂ ವಿಮರ್ಶಾತ್ಮಕ ವಿಷಯಗಳಿಗೆ ವಿನಿಯೋಗಿಸಿದ್ದಾನೆ. ಬ್ರಹ್ಮಗುಪ್ತ ಮತ್ತು

ಭಾಸ್ಕರಾಚಾರ್ಯರ ನಡುವಿನಕಾಲದಲ್ಲಿ ಯಾವ ಪ್ರಾಮಾಣಿಕ ಜ್ಯೋತಿಷ್ಯ ಗ್ರಂಥಗಳೂ ರಚಿತವಾಗಿರುವುದು ಕಂಡುಬರುವುದಿಲ್ಲ. ಕೆಲವು ಜ್ಯೋತಿರ್ವಿಜ್ಞಾನಿಗಳು ಪ್ರಸಿದ್ಧ ಕೃತಿಗಳನ್ನು ರಚಿಸಿದ್ದರೂ ಹಿಂದಿನ ಕೃತಿಗಳಿಗೆ ಸವಿಸ್ತಾರ ವ್ಯಾಖ್ಯಾನಗಳನ್ನು ರಚಿಸಿರುವುದನ್ನು ನೋಡಬಹುದು. ಕಲ್ಯಾಣವರ್ಮ ಎಂಬುವನು ಕ್ರಿ.ಶ. ೫೭೮ರಲ್ಲಿ ಗ್ರೀಕ್ ಹೋರಾ ಶಾಸ್ತ್ರವನ್ನು ಕ್ರೋಢೀಕರಿಸಿ 'ಸಾರಾವಳಿ' ಎಂಬ ಗ್ರಂಥವನ್ನು ರಚಿಸಿರುವನು. ಜಾತಕ ರಚನೆಯ ರೂಪ ರೇಖೆಗಳನ್ನು ಸವಿಸ್ತಾರವಾಗಿ ಇಲ್ಲಿ ಪ್ರಸ್ತಾಪಿಸಲಾಗಿದೆ. ಕ್ರಿ. ಶ. ೭೪೮ರಲ್ಲಿ 'ಲಲ್ಲನು' 'ಶಿಷ್ಯಧೀವೃದ್ಧಿ' ಮತ್ತು 'ರತ್ನಕೋಶ' ಗಳನ್ನು ರಚಿಸಿದನು. ಈತನು ಆರ್ಯಭಟ್ಟನ ಶಿಷ್ಯನೆಂದೂ ಆತನ ಸಿದ್ಧಾಂತಗಳನ್ನು ಪ್ರತಿಪಾದಿಸಲೆಂದೇ ಈ ಕೃತಿಗಳನ್ನು ರಚಿಸಿರುವನೆಂದೂ ಕೆಲವು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. 'ಮಹಾಸಿದ್ಧಾಂತ' ಗ್ರಂಥದ ಕರ್ತೃ 'ಆರ್ಯಭಟ ದ್ವಿತೀಯ' ನೆಂದು ಕೆಲವರು ಅಭಿಪ್ರಾಯಪಟ್ಟರೆ, ಆರ್ಯಭಟ ದ್ವಿತೀಯನೆಂಬುವನು ಇರಲೇ ಇಲ್ಲ ಎಂಬುದಾಗಿ ಕೆಲವು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಈತನ ಹೆಸರನ್ನು ಸುಧಾಕರ ದ್ವಿವೇದಿ ತನ್ನ ಗ್ರಂಥವಾದ 'ಗಣಿತ ತರಂಗಿಣಿ' ಯಲ್ಲಿ ಪ್ರಸ್ತಾಪಿಸಿಲ್ಲ. ಕ್ರಿ.ಶ. ೯೩೨ರಲ್ಲಿ 'ಮುಂಜುಳ' ನೆಂಬ ಪ್ರಖ್ಯಾತ ಜ್ಯೋತಿಷಿಯು 'ಲಘು ಮಾನಸ' ಎಂಬ ಕೃತಿಯನ್ನು ರಚಿಸಿದ್ದಾನೆ. ಕ್ರಿ. ಶ. ೧೦ ನೆಯ ಶತ ಮಾನದಲ್ಲಿ ಪ್ರಖ್ಯಾತ ವ್ಯಾಖ್ಯಾನಕಾರನೆನಿಸಿಕೊಂಡಿದ್ದ 'ಉತ್ಪಲ'ನು ವರಾಹಮಿಹಿರನ ಎಲ್ಲಾ ಕೃತಿಗಳಿಗೂ ವ್ಯಾಖ್ಯಾನ ರಚಿಸಿದ್ದಾನೆ. ಈತನ ಬೃಹಜ್ಜಾತಕ, ಬೃಹತ್ಸಂಹಿತಾ, ಖಂಡ ಖಾದ್ಯಕ, ಷಟ್‌ಪಂಚಾಶಿಕಾ, ಲಘು-ಜಾತಕ ಇವುಗಳಿಗೆ ರಚಿತ ವ್ಯಾಖ್ಯಾನ ಪ್ರೌಢ ಹಾಗೂ ಪಾಂಡಿತ್ಯ ಪೂರ್ಣವಾಗಿದ್ದು ಇಂದಿಗೂ ಗೌರವಾಸ್ಪದವಾಗಿವೆ. ಬ್ರಹ್ಮಗುಪ್ತನ ಕೃತಿಗಳಾದ ಬ್ರಹ್ಮಸ್ಫುಟ ಸಿದ್ಧಾಂತ, ಖಂಡ ಖಾದ್ಯಕ ಗ್ರಂಥಗಳಿಗೆ ಪ್ರಾಮಾಣಿಕ ಟೀಕಾ ಕಾರನೇ ಪೃಥೂದಕ ಸ್ವಾಮಿ. ೧೧ನೆಯ ಶತಮಾನದಲ್ಲಿ ಶತಾನಂದನ ಕರಣ ಭಾಸ್ವತಿ ಒಂದು ಪ್ರಾಮಾಣಿಕ ಗ್ರಂಥ. ಇದರ ಕಾಲ ಗಣನೆ ಕ್ರಿ. ಶ. ೧೦೯೯ ರಿಂದ ಪ್ರಾರಂಭವಾಗುತ್ತದೆ. ಇದಕ್ಕೆ ಅನೇಕ ಪಾಠಾಂತರಗಳಿದ್ದು ಬಹಳಷ್ಟು ವ್ಯಾಖ್ಯಾನಗಳಿವೆ. ಇದರಲ್ಲಿ ೮ ಅಧ್ಯಾಯಗಳಿವೆ. ರಾಜಮೃಗಾಂಕ ಎಂಬುದು ಒಂದು ಕರಣಗ್ರಂಥ ಇದನ್ನು ಭೋಜರಾಜ ಬರೆದಿರುವನೆಂದು ಹೇಳಲಾಗಿದೆ ಇದರ ರಚನಾ ಕಾಲ ಕ್ರಿ. ಶ. ೧೦೪೨.

## ಭಾಸ್ಕರಾಚಾರ್ಯ (ಕ್ರಿ.ಶ. ೧೧೧೪)

ವರಾಹಮಿಹಿರ ಮತ್ತು ಬ್ರಹ್ಮಗುಪ್ತನಾದ ಮೇಲೆ ಜ್ಯೋತಿಶ್ಶಾಸ್ತ್ರದಲ್ಲಿ ಪ್ರಮುಖ ಸಿದ್ಧಾಂತಿ ಎಂದರೆ ಭಾಸ್ಕರಾಚಾರ್ಯ. ಈತನು ಜ್ಯೋತಿರ್ಗಗನ ಭಾಸ್ಕರನೆಂದು ಪ್ರಖ್ಯಾತನಾಗಿದ್ದನು. ಈತನ ಜನ್ಮಸ್ಥಳ ಕರ್ನಾಟಕ ಪ್ರಾಂತದ ಸಹ್ಯಾದ್ರಿ ಪರ್ವತದ ಸಮೀಪದ ವಿಜ್ಜಡವೀಡ ಎಂಬ ಗ್ರಾಮವೆಂತಲೂ, ತಂದೆ ಹೆಸರು ಮಹೇಶ್ವರನೆಂತಲೂ, ತಂದೆಯೇ ಈತನ ವಿದ್ಯಾ ಗುರುವೆಂತಲೂ ಕೆಲವು ವಿದ್ವಾಂಸರ ಅಭಿಪ್ರಾಯ. ಜನ್ಮ ಕಾಲ ಕ್ರಿ.ಶ. ೧೧೧೪. ವಿಜ್ಜಡವೀಡ ಗ್ರಾಮ ಮಹಾರಾಷ್ಟ್ರಕ್ಕೆ ಸೇರಿದ ಗ್ರಾಮವೆಂತಲೂ ಕೆಲವರು ಅಭಿಪ್ರಾಯಪಟ್ಟರೆ, ಕೆಲವರು

ಹೈದರಬಾದ್ ಸಂಸ್ಥಾನಕ್ಕೆ ಸೇರಿದ ಬಿಜ್ಜಳನೆಂಬ ಸಾಮಂತನ ಆಧಿಪತ್ಯಕ್ಕೆ ಒಳಪಟ್ಟ ಗ್ರಾಮವೆಂತಲೂ ಅಭಿಪ್ರಾಯ ಪಡುತ್ತಾರೆ. ಕ್ರಿ.ಶ. ೧೧೫೦ ರಲ್ಲಿ ಅಂದರೆ ತನ್ನ ೩೬ ನೆಯ ವಯಸ್ಸಿನಲ್ಲಿ ಪ್ರಖ್ಯಾತವಾದ ' ಸಿದ್ಧಾಂತ ಶಿರೋಮಣಿ ' ಗ್ರಂಥವನ್ನು ರಚಿಸಿದನು. ಸೂರ್ಯ ಸಿದ್ಧಾಂತದ ನಂತರ ಜ್ಯೋತಿಶ್ಶಾಸ್ತ್ರದಲ್ಲಿ ಅತ್ಯಂತ ಗೌರವಾಸ್ಪದ ರಚನೆ ಎನಿಸಿದ ಈ ಕೃತಿಯು ಪ್ರಾಚೀನ ಕೃತಿಗಳಿಗಿಂತ ಹೆಚ್ಚು ಸಮಗ್ರವಾಗಿ ಸ್ಪಷ್ಟವಾಗಿ ಪ್ರಾಚೀನ ಸಿದ್ಧಾಂತಗಳನ್ನು ಪ್ರತಿಪಾದಿಸುತ್ತದೆ.

ಈತನು ಸಿದ್ಧಾಂತ ಶಿರೋಮಣಿ, ಕರಣಕುತೂಹಲ ಎಂಬ ಎರಡು ಕೃತಿಗಳನ್ನು ರಚಿಸಿದ್ದಾನೆ. ಸಿದ್ಧಾಂತಶಿರೋಮಣಿಯಲ್ಲಿ ಲೀಲಾವತಿ, ಬೀಜಗಣಿತ. ಗ್ರಹಗಣಿತಾಧ್ಯಾಯ ಮತ್ತು ಗೋಳಾಧ್ಯಾಯ ಎಂಬ ೪ ಅಧ್ಯಾಯಗಳಿವೆ. ಲೀಲಾವತಿ ಮತ್ತು ಬೀಜಗಣಿತವು ಗಣಿತ ಶಾಸ್ತ್ರೀಯ ಪೀಠಿಕೆಯಾಗಿದ್ದರೆ ಗ್ರಹಗಣಿತಾಧ್ಯಾಯ ಮತ್ತು ಗೋಳಾಧ್ಯಾಯಗಳು ಜ್ಯೋತಿಶ್ಶಾಸ್ತ್ರಕ್ಕೆ ಮೀಸಲಾಗಿವೆ. ಗ್ರಹಗಣಿತಾಧ್ಯಾಯವು ಸಿದ್ಧಾಂತವನ್ನು ಪ್ರತಿಪಾದಿಸುತ್ತದೆ. ಲೀಲಾವತಿ ಎಂಬ ಭಾಗವು ಪಾಟೀಗಣಿತವನ್ನು ತಿಳಿಸುತ್ತದೆ. ಗಣಿತವನ್ನು ಮಾಡಲು ಧೂಳುಸವರಿದ್ದ ಹಲಗೆಯನ್ನು ಉಪಯೋಗಿಸುತ್ತಿದ್ದುದರಿಂದ ಪಾಟೀಗಣಿತವೆಂದರೆ ಅಂಕ ಗಣಿತವೆಂದು ಅರ್ಥವಾಗುತ್ತದೆ. ಭಾಸ್ಕರಾಚಾರ್ಯರಿಗೆ ' ಲೀಲಾವತಿ ' ಎಂಬ ವಿಧವೆಯಾದ ಮಗಳಿದ್ದಳೆಂದೂ, ಅವಳ ಬೇಸರವನ್ನು ಕಳೆಯಲು ಗಣಿತವನ್ನು ಹೇಳಿ ಕೊಟ್ಟ ಕಾರಣ ಇದಕ್ಕೆ ' ಲೀಲಾವತಿ ' ಎಂಬ ಹೆಸರಿಟ್ಟನೆಂದೂ ಕೆಲವರು ಅಭಿಪ್ರಾಯಪಡುತ್ತಾರೆ. ಕೆಲವರು ಆಚಾರ್ಯರಿಗೆ ವಿಧವೆಯಾದ ಮಗಳೊಬ್ಬಳಿದ್ದು ಕರುಣೆಯಿಂದ ಅವಳ ನೆನಪಿಗೆ ಈ ಗ್ರಂಥವನ್ನು ರಚಿಸಿರಬಹುದೆಂದು ಅಭಿಪ್ರಾಯ ಪಡುತ್ತಾರೆ. ಲೀಲಾವತಿಯು ಸಂಕಲನ ವ್ಯವಕಲನಾದಿಗಳಿಂದ ಹಿಡಿದು ಗಣಿತದ ಎಲ್ಲಾ ಅಂಗಗಳನ್ನೂ ಪ್ರತಿಪಾದಿಸುತ್ತದೆ. ಗ್ರಹಗಣಿತ ಮತ್ತು ಗೋಳಾಧ್ಯಾಯಗಳು ಜ್ಯೋತಿಶ್ಶಾಸ್ತ್ರಕ್ಕೆ ಮೀಸಲಾಗಿವೆ. ಗೋಳಾಧ್ಯಾಯದಲ್ಲಿ ಮಧ್ಯಗತಿವಾಸನಾ, ಸ್ಫುಟಗತಿವಾಸನ ಮುಂತಾದ ಪರಿಚ್ಛೇದಗಳಿವೆ. ಗ್ರಹಗಣಿತಾಧ್ಯಾಯದಲ್ಲಿ ಭುವನಕೋಶ, ಯಂತ್ರಾಧ್ಯಾಯ. ಪ್ರಶ್ನಾಧ್ಯಾಯ ಮುಂತಾದ ಅಧ್ಯಾಯಗಳಿವೆ. ಜ್ಯೋತಿಶ್ಶಾಸ್ತ್ರವನ್ನು ಅಭ್ಯಾಸ ಮಾಡುವವನು ವ್ಯಕ್ತ ಮತ್ತು ಅವ್ಯಕ್ತ ಗಣಿತದಲ್ಲಿ ಪಂಡಿತನಾಗಿರಬೇಕೆಂದೂ, ಹಾಗಿಲ್ಲದಿದ್ದರೆ ಅವನು ಕೇವಲ ನಾಮಧಾರಿ ಎಂದೂ ಅಧಿಕಾರಿಯ ಲಕ್ಷಣವನ್ನು ವಿವರಿಸಿದ್ದಾನೆ. ಭಾಸ್ಕರನು ಹೊಸದೇನನ್ನೂ ಪ್ರತಿಪಾದಿಸದೆ ಸಂಪೂರ್ಣವಾಗಿ ಬ್ರಹ್ಮಗುಪ್ತನಿಗೆ ಋಣಿಯಾಗಿದ್ದಾನೆ. ಈತನ ಗ್ರಂಥ ಅತಿ ಸಂಕ್ಷೇಪವಾಗಿಯೂ ಇಲ್ಲ, ಹಾಗೂ ಅತಿ ವಿಸ್ತಾರವಾಗಿಯೂ ಇಲ್ಲ. ಪ್ರೌಢ ವಿಷಯಗಳನ್ನೊಳಗೊಂಡಿದ್ದರೂ ಆಕರ್ಷಕವಾಗಿದ್ದು ಬಹಳ ಜನಪ್ರಿಯವಾಗಿದೆ. ಆರ್ಯಭಟ್ಟ ಮತ್ತು ಬ್ರಹ್ಮಗುಪ್ತರು ಕೇವಲ ಆರ್ಯಾವೃತ್ತದಲ್ಲಿಯೇ ತಮ್ಮ ಗ್ರಂಥಗಳನ್ನು ರಚಿಸಿದ್ದಾರೆ. ಆದರೆ ಭಾಸ್ಕರಾಚಾರ್ಯನು ಈಚಿನವನಾದುದರಿಂದ ಅನೇಕ ವೃತ್ತಗಳನ್ನು ಬಳಸಿರುವುದೇ ಅಲ್ಲದೆ ಪ್ರಾಸ ಶ್ಲೇಷಾದಿ ಶಬ್ದಾರ್ಥಾಲಂಕಾರಗಳನ್ನು ಪ್ರಯೋಗಿಸಿದ್ದಾನೆ. ಋತುಗಳ ವಿಷಯವಾದ ಒಂದು ಕಾವ್ಯಮಯ ವರ್ಣನೆಗೂ ಇಲ್ಲಿ ಸ್ಥಾನಸಿಕ್ಕಿದೆ.

ಈತನ ಎರಡನೆಯ ಕೃತಿ 'ಕರಣಕುತೂಹಲ', ಇದು ಕ್ರಿ. ಶ. ೧೧೮೩ ರಲ್ಲಿ ರಚಿತವಾಯಿತು. ಇದು ಕರಣ ಗ್ರಂಥ. ಈಗ ಪಂಚಾಂಗ ರಚನೆಗೆ ಇದು ಉಪಯೋಗಿಸಲ್ಪಡುತ್ತಿಲ್ಲ. ಭಾಸ್ಕರಾಚಾರ್ಯನ ಕೃತಿಗಳಿಗೆ ಇರುವಷ್ಟು ವ್ಯಾಖ್ಯಾನ ಮತ್ತು ಟಿಪ್ಪಣಿಗಳು ಬೇರೆಯಾವ ಜ್ಯೋತಿಷ ಗ್ರಂಥಗಳಿಗೂ ಇಲ್ಲ. ಕೆಲವು ವ್ಯಾಖ್ಯಾನಗಳು ಕೇವಲ "ಲೀಲಾವತಿ" ಗ್ರಂಥಕ್ಕಿದ್ದರೆ ಮತ್ತೆ ಕೆಲವು ಕೇವಲ ಬೀಜಗಣಿತಕ್ಕೆ ಇವೆ. ಮತ್ತೆ ಕೆಲವು ಕೇವಲ ಗ್ರಹಗಣಿತ ಮತ್ತು ಗೋಳಾಧ್ಯಾಯಗಳಿಗೆ ಇವೆ.

ಭಾಸ್ಕರೋತ್ತರ ಕಾಲದಲ್ಲಿ ಪ್ರಾಮಾಣಿಕ ಫಲಜ್ಯೋತಿಷ ಗ್ರಂಥಗಳ ರಚನೆಯಾಗಿರುವುದು ಅತಿ ವಿರಳ. ಆದರೆ ಕೆಲವು ಜ್ಯೋತಿರ್ವಿಜ್ಞಾನಿಗಳು ಜಾತಕ ಮುಹೂರ್ತ ಇತ್ಯಾದಿ ವಿಷಯಗಳನ್ನೊಳಗೊಂಡ ಕೃತಿಗಳನ್ನು ರಚಿಸಿರುವುದು ವ್ಯಕ್ತವಾಗುತ್ತದೆ. 'ಮಹಾರಾಜಾ ಬಳ್ಳಾಳಸೇನನು' ಕ್ರಿ. ಶ. ೧೧೬೮ ರಲ್ಲಿ ಬೃಹತ್ಸಂಹಿತಾ ಮಾದರಿಯ ಅದ್ಭುತಸಾಗರವೆಂಬ ಗ್ರಂಥವನ್ನು ರಚಿಸಿದನು. ಸಂಹಿತಾ ರೂಪದಲ್ಲಿರುವ ಈ ಗ್ರಂಥದಲ್ಲಿ ಪ್ರಾಚೀನ ಆಚಾರ್ಯರುಗಳ ಸಿದ್ಧಾಂತಗಳು ಪ್ರತಿಪಾದಿಸಲ್ಪಟ್ಟಿವೆ. ತಿಥ್ಯಾದಿ ಪತ್ರದ ಕರ್ತೃ ಮಕರಂದ. ಸೂರ್ಯ ಸಿದ್ಧಾಂತ ರೀತ್ಯಾ ತಿಥಿ ಇತ್ಯಾದಿಗಳ ಪಟ್ಟಿಯನ್ನೊಳಗೊಂಡರೂ ಉತ್ತರ ಇಂಡಿಯಾದಲ್ಲಿ ಇದನ್ನು ಪ್ರಾಮಾಣಿಕ ಗ್ರಂಥವೆಂದು ಪರಿಗಣಿಸಿ ಕಾಶಿ ಮತ್ತು ಮಿಥಿಲಾ ಪ್ರಾಂತಗಳಲ್ಲಿ ಪಂಚಾಂಗವನ್ನು ರಚಿಸಲು ಇದನ್ನೇ ಆಧಾರವಾಗಿಟ್ಟು ಕೊಂಡಿರುವುದು ವ್ಯಕ್ತವಾಗುತ್ತದೆ. ಈ ಕೃತಿ ಕ್ರಿ. ಶ. ೧೪೭೮ ರಲ್ಲಿ ವಾರಾಣಸಿಯಲ್ಲಿ ರಚಿತವಾಯಿತು. 'ಗ್ರಹಲಾಘವ' ಅಥವಾ 'ಸಿದ್ಧಾಂತ ರಹಸ್ಯ' ಒಂದು ಕರಣ ಗ್ರಂಥ. ಇದರ ಕರ್ತೃ ಕೇಶವನ ಮಗ ಗಣೇಶ. ಇದರ ರಚನಾಕಾಲ ಕ್ರಿ. ಶ. ೧೫೨೦. ಈತನ ಕೃತಿಗೆ ಅನೇಕ ಟೀಕಾಕಾರರು ವ್ಯಾಖ್ಯಾನ ರಚಿಸಿದ್ದಾರೆ. ಈತನು ಒಳ್ಳೆಯ ಸಂಶೋಧಕನಾಗಿದ್ದು ಜ್ಯೋತಿಶ್ಶಾಸ್ತ್ರದ ಶಾಸ್ತ್ರೀಯ ಲೆಕ್ಕಾಚಾರಕ್ಕೆ ಹೆಚ್ಚಿನ ಪ್ರಾಶಸ್ತ್ಯ ಕೊಟ್ಟಿದ್ದನು. ಈತನು ದೈವಜ್ಞನೆಂದು ಪ್ರಸಿದ್ಧಿ ಹೊಂದಿದ್ದನು. 'ತಾಜಿಕ ನೀಲಕಂಠೀ'ಯ ಕರ್ತೃ ನೀಲಕಂಠ. ಈತನು ಅಕ್ಬರನ ಆಸ್ಥಾನದಲ್ಲಿ ಸಭಾಪಂಡಿತನಾಗಿದ್ದು ತನ್ನ ಕೃತಿಯನ್ನು ಕ್ರಿ. ಶ. ೧೫೮೭ ರಲ್ಲಿ ರಚಿಸಿದನು. ವರ್ಷಫಲವನ್ನು ಹೇಳಲು ಈಗಲೂ ಈ ಗ್ರಂಥವನ್ನೇ ಆಶ್ರಯಿಸುತ್ತಾರೆ. ಇವನ ತಮ್ಮನಾದ ರಾಮದೈವಜ್ಞನು ಮುಹೂರ್ತಚಿಂತಾಮಣಿ ಎಂಬ ಗ್ರಂಥವನ್ನು ರಚಿಸಿದ್ದಾನೆ. ಮುಹೂರ್ತವು ಜ್ಯೋತಿಷ್ಯ ಶಾಸ್ತ್ರದ ಒಂದು ವಿಶಿಷ್ಟಭಾಗ. ಈ ಹೆಸರಿನ ಅನೇಕ ಕೃತಿಗಳು ರಚಿತವಾಗಿವೆ. ಇವು ಶುಭ ಕಾರ್ಯಗಳಿಗೆ ಯೋಗ್ಯ ಸಮಯವನ್ನು (ಮುಹೂರ್ತ) ನಿರ್ಣಯಿಸಲು ಸಹಾಯಕವಾಗಿವೆ. ಇಂದಿಗೂ ಮುಹೂರ್ತಗಳನ್ನು ನಿರ್ಣಯಿಸಲು ಈ ಗ್ರಂಥವನ್ನೇ ಅವಲಂಬಿಸಿರುವುದರಿಂದ ಇದು ಬಹಳ ಜನಪ್ರಿಯ ಗ್ರಂಥ. ಇದು ಭಾರತೀಯ ಖಗೋಳಶಾಸ್ತ್ರದ ಕೊನೆಯ ಪ್ರಾಮಾಣಿಕ ಗ್ರಂಥವೆಂದು ಕೆಲವರು ಭಾವಿಸಿದ್ದಾರೆ. ಈತನು ಅರೇಬಿಯನ್ ಖಗೋಳ ಶಾಸ್ತ್ರವನ್ನು ಅಧ್ಯಯನ ಮಾಡಿ ಭಾಸ್ಕರನ ವಿರುದ್ಧ ಅನೇಕ ವಾದಗಳನ್ನೆತ್ತಿದ್ದಾನೆ. ಈತನ ಕಾಲ ಸುಮಾರು ೧೬೦೮. ಈತನು ನ್ಯೂಟನ್ನಿನ ಸಮಕಾಲೀನನೆಂದು ಅಭಿಪ್ರಾಯ ಪಡುತ್ತಾರೆ.

ಖಗೋಳ ಶಾಸ್ತ್ರಜ್ಞರು ಸೂರ್ಯ, ಚಂದ್ರ, ತಾರಾಮಂಡಲಗಳ ನಿರ್ದಿಷ್ಟ ಸ್ಥಾನವನ್ನು ಪರಿಶೀಲಿಸಿ ನೋಡುವ ಸಲುವಾಗಿ ವಿಚಿತ್ರ ಸಾಧನಗಳನ್ನು ಬಳಸುತ್ತಿದ್ದುದು ಬಹಳ ಪ್ರಾಚೀನವಾದ ವೈಜ್ಞಾನಿಕ ಪದ್ಧತಿಯಾಗಿತ್ತು. ಹಿಂದಿನ ಸಿದ್ಧಾಂತಿಗಳು, ಜ್ಯೋತಿಷಿವೇಧಶಾಲೆ ಹಾಗೂ ಯಂತ್ರಗಳ ವಿವರಣೆಗಳನ್ನು ವಿವರಿಸಲು ಕೆಲವು ಅಧ್ಯಾಯಗಳನ್ನೇ ವಿನ್ಯಾಸಲಾಗಿಟ್ಟಿರುವುದನ್ನು ನೋಡಬಹುದು. ಘಳಿಗೆ ಅಳೆಯಲು, ಪ್ರತಿಯೊಂದು ತಿಂಗಳಿನಲ್ಲೂ ಸೂರ್ಯ ನಕ್ಷತ್ರಗಳ ಗತಿಗಳನ್ನು ಪರಿಶೀಲಿಸಲು, ದೂರದರ್ಶಿಯು ಸಹಾಯವಿಲ್ಲದೆ ಬರಿಗಣ್ಣಿನಿಂದಲೇ ಖಗೋಳ ಗ್ರಹಗಳ ಗತಿಯನ್ನು ಅಳೆಯಲು ಮಾಡಿದ ಪರಿಶೀಲನಾಲಯಗಳೇ ವೇಧಶಾಲೆಗಳು. ಜ್ಯೋತಿಷ ಶಾಸ್ತ್ರೀಯ ಲೆಕ್ಕಾಚಾರಕ್ಕೆ ವೇಧಶಾಲೆಗಳು ಪ್ರಧಾನ ಸಾಧನಗಳಾಗಿವೆ. ಇದರ ಅಭಾವದಿಂದ ಇಡೀ ಶಾಸ್ತ್ರವೇ ಕುಂಠಿತವಾಗಿರುವುದು ವ್ಯಕ್ತವಾಗುತ್ತದೆ. ಈ ವಿಧವಾದ ವೇಧಶಾಲೆಗಳ ನಿರ್ಮಾಣದ ಗೌರವ ಜಯಪುರದ ಎರಡನೆಯ ಸವಾಯಿ ಜಯಸಿಂಹನಿಗೆ ಸಲ್ಲುತ್ತದೆ. ಆತನ ಕಾಲ ಕ್ರಿ.ಶ. ೧೬೮೬ ರಿಂದ ೧೭೪೩. ಜ್ಯೋತಿರ್ವಿಜ್ಞಾನದಲ್ಲಿ ಅಪಾರ ನಂಬಿಕೆಯುಳ್ಳವನಾಗಿದ್ದರಿಂದ ಈತನು ತಾನೇ ಸ್ವತಃ ಈ ಶಾಸ್ತ್ರವನ್ನು ಅಧ್ಯಯನ ಮಾಡಿ ಜಯಪುರ, ದೆಹಲಿ, ಉಜ್ಜಯಿನಿ, ಕಾಶಿ ಮತ್ತು ಮಥುರಾ ನಗರಗಳಲ್ಲಿ ವೇಧಶಾಲೆಗಳನ್ನು ಸ್ಥಾಪಿಸಿದನು. ಈ ಯಂತ್ರಗಳ ತಯಾರಿಕೆಗೆ ಅನೇಕ ಪ್ರಕಾಂಡ ಜ್ಯೋತಿಷ್ಯಜ್ಞರನ್ನು ಕರೆಸಿ ಅವರ ಸಹಾಯದಿಂದ ಈ ವೇಧಶಾಲೆಗಳನ್ನು ಸ್ಥಾಪಿಸಿದನು. ಈ ಪಂಡಿತರಲ್ಲಿ ಜಗನ್ನಾಥ ಜ್ಯೋತಿಷಿ ಬಹಳ ಮುಖ್ಯನಾದವನು.

ಜಯಸಿಂಹನಾದ ಮೇಲೆ ಭಾರತದಲ್ಲಿ ಬ್ರಿಟಿಷರ ಆಳ್ವಿಕೆ ವಿಸ್ತರಿಸುತ್ತಾ ಹೋಯಿತು. ಪಾಶ್ಚಿಮಾತ್ಯರ ಪ್ರಭಾವ ಎಲ್ಲಾ ಕ್ಷೇತ್ರಗಳ ಮೇಲೆ ಪರಿಣಾಮ ಬೀರಲು ಪ್ರಾರಂಭಿಸಿದಂತೆ ಈ ಶಾಸ್ತ್ರದ ಮೇಲೂ ಬೀಳಲು ಪ್ರಾರಂಭಿಸಿತು. ಈ ಕಾಲದಲ್ಲಿ ಯಾವ ಪ್ರಾಮಾಣಿಕ ಸಿದ್ಧಾಂತ ಗ್ರಂಥಗಳ ರಚನೆಯಾಗದಿದ್ದರೂ ಪ್ರಾಚೀನ ಗ್ರಂಥಗಳನ್ನು ಅಧ್ಯಯನ ಮಾಡುವ ದೃಷ್ಟಿಕೋನ ಹಾಗೂ ವಿಮರ್ಶಾತ್ಮಕ ಸಂಶೋಧನೆಗೆ ಹೆಚ್ಚು ಪ್ರಾಶಸ್ತ್ಯ ಸಿಕ್ಕಿತು. ಕೆಲವರು ಪ್ರಾಚೀನ ಕೃತಿಗಳನ್ನು ಸಂಶೋಧಿಸಿ ಸಂಸ್ಕರಿಸಿ ಆಲೋಚನಾತ್ಮಕ ಟೀಕೆ ಟಿಪ್ಪಣಿ ರಚಿಸಿ ಪ್ರಕಟಿಸಿರುವುದು ಕಂಡು ಬರುತ್ತದೆ.

ಕಾಶಿ ಸಂಸ್ಕೃತ ವಿದ್ಯಾಲಯದಲ್ಲಿ ಗಣಿತಾಚಾರ್ಯರಾಗಿದ್ದ ಬಾಪುದೇವಶಾಸ್ತ್ರೀ ಕ್ರಿ. ಶ. ೧೮೭೧ರಲ್ಲಿ ರೇಖಾಗಣಿತ, ತ್ರಿಕೋಣ ಮಿತಿ, ಅಂಕ ಗಣಿತ ಇತ್ಯಾದಿ ಗ್ರಂಥಗಳನ್ನು ಪ್ರಕಾಶಿಸಿದರು. ಅಲ್ಲದೆ ಸಿದ್ಧಾಂತಶಿರೋಮಣಿಯ ಗೋಳಾಧ್ಯಾಯ ಮತ್ತು ಸೂರ್ಯ ಗ್ರಂಥಗಳನ್ನು ವಿಲ್ಕಿನ್ ಸನ್‌ರವರ ಸಹಾಯದಿಂದ ಆಂಗ್ಲ ಭಾಷೆಗೆ ತರ್ಜುಮೆ ಮಾಡಿದನು.

ಫ್ರೆಂಚ್ ಮತ್ತು ಆಂಗ್ಲ ಜ್ಯೋತಿಷ ಗ್ರಂಥವನ್ನಾಧರಿಸಿ 'ಗ್ರಹಸಾಧನ ಕೋಷ್ಠಕ' ಎಂಬ ಮರಾಠಿ ಗ್ರಂಥವನ್ನು ಕೇರೆ ಲಕ್ಷ್ಮಣಛತ್ರೆ ರಚಿಸಿದನು. ಇದನ್ನನುಸರಿಸಿ ಪಂಚಾಂಗವನ್ನು ರಚಿಸಿದನು. ಇದು ಇಂದಿಗೂ ಮಹಾರಾಷ್ಟ್ರದೇಶ ಮತ್ತು ಇತರ ಪ್ರದೇಶಗಳಲ್ಲಿ ಪ್ರಸಿದ್ಧವಾಗಿದೆ.

'ಸಿದ್ಧಾಂತ ದರ್ಪಣ' ಎಂಬ ಗ್ರಂಥದ ಕರ್ತೃ ಚಂದ್ರಶೇಖರ ಸಿಂಹ ಸಾಮಂತ. ಈತನು ಒರಿಸ್ಸಾ ದೇಶದವನು. ತಾನೇ ರಚಿಸಿದ ಯಂತ್ರದ ಸಹಾಯದಿಂದ ಸೂರ್ಯ ಚಂದ್ರ ಮತ್ತು ಗ್ರಹಗಳ ಮೂಲಾಂಕಗಳನ್ನು ಸಂಶೋಧಿಸಿ 'ಸಿದ್ಧಾಂತ ದರ್ಪಣ' ಎಂಬ ಗ್ರಂಥವನ್ನು ರಚಿಸಿದನು.

ಜ್ಯೋತಿರ್ಗಣಿತ ಮತ್ತು ಕೇತಕೀ ಗ್ರಹಗಣಿತದ ಕರ್ತೃ ವೆಂಕಟೇಶ ಬಾಪೂಜಿ ಕೇತ್‌ಕರ್ (೧೮೫೪ ರಿಂದ ೧೯೩೦). ಈತನು ಪ್ರಾಚ್ಯ ಮತ್ತು ಪಾಶ್ಚಾತ್ಯ ಜ್ಯೋತಿರ್ವಿಜ್ಞಾನದ ಅದ್ವಿತೀಯ ಪಂಡಿತನೆನಿಸಿಕೊಂಡ ಪ್ರಕಾಂಡ ಜ್ಯೋತಿಷಿ ಎನಿಸಿಕೊಂಡಿದ್ದನು. ಈತನ ಜ್ಯೋತಿರ್ಗಣಿತವು ಸಿದ್ಧಾಂತಗಳನ್ನು ಪ್ರತಿಪಾದಿಸುವ ಅಮೂಲ್ಯಗ್ರಂಥವಾದರೆ, ಕೇತಕೀ ಗ್ರಹಗಣಿತವು ಅರ್ವಾಚೀನ ಜ್ಯೋತಿಶ್ಶಾಸ್ತ್ರದ ರೀತಿ ಪಂಚಾಂಗವನ್ನು ರಚಿಸುವ ವಿಧಾನಗಳನ್ನು ವಿಸ್ತಾರವಾಗಿ ವಿಶ್ಲೇಷಿಸಿದೆ. ಇದು ಶ್ಲೋಕಬದ್ಧವಾದ ಒಂದು ಚಿಕ್ಕ ಸಂಸ್ಕೃತ ಗ್ರಂಥ. ಇಂದಿಗೂ ಇದು ಒಂದು ಪ್ರಮಾಣಿಕ ಗ್ರಂಥವೆಂದು ಪ್ರಸಿದ್ಧವಾಗಿದೆ.

'ಓರಾಯನ್' ಎಂಬುದು ಆಂಗ್ಲ ಭಾಷೆಯಲ್ಲಿ ಬಾಲಗಂಗಾಧರತಿಲಕರಿಂದ ರಚಿಸಲ್ಪಟ್ಟ ಶ್ರೇಷ್ಠ ಕೃತಿ. ಪಾಶ್ಚಾತ್ಯ ಪಂಡಿತರಿಂದ ಮಾನ್ಯತೆ ಹೊಂದಿದ ಈ ಕೃತಿ ಪ್ರೌಢ ಹಾಗೂ ಸರ್ವಸಾಮಾನ್ಯ.

ಉತ್ತರ ಭಾರತದಲ್ಲಿ ಜ್ಯೋತಿಷ ಶಾಸ್ತ್ರದ ಅಧ್ಯಯನ ಹಾಗೂ ಪ್ರಚಾರಕ್ಕೆ ಹೆಚ್ಚು ಶ್ರಮಿಸಿದ ಜ್ಯೋತಿಷಿ ಎಂದರೆ ಸುಧಾಕರ್‌ದ್ವಿವೇದಿ. ಕಾಶಿ ನಗರದಲ್ಲಿ ಮಹಾಮಹೋಪಾಧ್ಯಾಯ ಎಂಬ ವಿಶೇಷ ಬಿರುದಾಂಕಿತನಾಗಿ ಪ್ರಭಾವಶಾಲಿ ಜ್ಯೋತಿಷಿ ಹಾಗೂ ಗಣಿತಜ್ಞನಾಗಿದ್ದನು. ಪ್ರಾಚೀನ ಜ್ಯೋತಿಶ್ಶಾಸ್ತ್ರದ ಗ್ರಂಥಗಳನ್ನು ಸಂಶೋಧಿಸಿ ಹಾಗೂ ಪರಿಷ್ಕರಿಸಿ ಪ್ರಕಟಿಸುವುದರೊಂದಿಗೆ ಅರ್ವಾಚೀನ ಗಣಿತ ಶಾಸ್ತ್ರದ ಬಗ್ಗೆ ಕೆಲವು ಉಪಯುಕ್ತ ಗ್ರಂಥಗಳನ್ನು ರಚಿಸಿದ್ದಾರೆ. ಕೆಲವು ಸ್ವತಂತ್ರ ಕೃತಿಗಳನ್ನು ಸಂಸ್ಕೃತದಲ್ಲಿ ರಚಿಸಿರುವುದೇ ಅಲ್ಲದೆ ಯಂತ್ರರಾಜ, ಲೀಲಾವತಿ. ಬೀಜಗಣಿತ, ಕರಣ ಕುತೂಹಲ, ಪಂಚಸಿದ್ಧಾಂತಿಕಾ, ಸೂರ್ಯಸಿದ್ಧಾಂತ, ಗ್ರಹಲಾಘವ ಇತ್ಯಾದಿ ಪ್ರಮಾಣ ಗ್ರಂಥಗಳಿಗೆ ಸರಳ ವ್ಯಾಖ್ಯಾನವನ್ನು ರಚಿಸಿದ್ದಾನೆ.

ಇಂದಿಗೂ ಈ ಶಾಸ್ತ್ರವನ್ನು ಒಂದು ಅಧ್ಯಯನ ವಿಷಯವಾಗಿ ಪಾಠ ಪ್ರವಚನದಲ್ಲಿ ಅಳವಡಿಸಿ ಬೋಧಿಸುತ್ತಿರುವುದನ್ನು ನಾವು ಕೆಲವು ಪ್ರಾಚೀನ ಅಧ್ಯಯನಕ್ಕೆ ಮೀಸಲಾದಸಂಸ್ಕೃತ ಮಹಾಪಾಠಶಾಲೆಗಳಲ್ಲಿ ನೋಡಬಹುದು. ಆಧುನಿಕ ದೃಷ್ಟಿ ಕೋಣದಿಂದ ಈ ಶಾಸ್ತ್ರವನ್ನು ಪುನಃ ಶೋಧಿಸಿ ಸಂಸ್ಕರಿಸಿ ವೈಜ್ಞಾನಿಕವಾಗಿ ಬೋಧಿಸಿ ಪ್ರಚಾರ ಪಡಿಸಿದರೆ ಇದಕ್ಕೆ ಉತ್ತಮ ಭವಿಷ್ಯವಿದೆ ಎಂದು ಹೇಳಿದರೆ ತಪ್ಪಾಗಲಾರದು.

# ೬.

# ಜೈನದರ್ಶನ

ಜೈನ ದರ್ಶನವು ಕ್ರಿ.ಪೂ. ೬ನೆಯ ಶತಕದಲ್ಲಿದ್ದ ೨೪ನೆಯ ತೀರ್ಥಂಕರರಾದ ಭಗವಾನ್ ಮಹಾವೀರರಿಂದ ಪ್ರಚಾರದಲ್ಲಿ ಬಂದಿತು. ಅವರಿಗಿಂತ ೨೫೦ ವರ್ಷಗಳ ಹಿಂದೆ ಪಾರ್ಶ್ವನಾಥರೆಂಬ ೨೩ನೆಯ ತೀರ್ಥಂಕರರಿದ್ದರೆಂದೂ ಮಹಾವೀರರು ಆ ಸಂಪ್ರದಾಯದ ಅನುಯಾಯಿಗಳೆಂದೂ ಜೈನಾಗಮಗಳಲ್ಲಿ ಉಲ್ಲೇಖವುಂಟು. ಪಾರ್ಶ್ವನಾಥರು ಐತಿಹಾಸಿಕ ಪುರುಷರೆಂದು ಗೊತ್ತಾಗಿದೆ. ಆದ್ದರಿಂದ ಜೈನಧರ್ಮವು ಕ್ರಿ.ಪೂ. ೮೦೦ರಲ್ಲಿ ಇದ್ದಿತೆಂದು ನಿರ್ವಿವಾದವಾಗಿ ಹೇಳಬಹುದಾಗಿದೆ. ಇದಕ್ಕೂ ಪ್ರಾಚೀನವೆಂದು ಜೈನಪರಂಪರೆ ಹೇಳುತ್ತದೆ.

ಋಷಭದೇವರಿಂದ ಹಿಡಿದು ೨೩ ತೀರ್ಥಂಕರರು ಹಿಂದೆ ಆಗಿ ಹೋದರೆಂದೂ ಮಹಾವೀರರು ೨೪ನೆಯ ತೀರ್ಥಂಕರರೆಂದೂ ಜೈನ ಸಾಹಿತ್ಯ ಹೇಳುತ್ತದೆ. ಸುಮಾರು ಕ್ರಿ.ಪೂ.೬೦೦ರಲ್ಲಿ ಬಿಹಾರ್ ಪ್ರಾಂತದ ಕುಂಡಲಪುರದ ರಾಜನಾಗಿದ್ದ ಸಿದ್ಧಾರ್ಥನು ಮಹಾವೀರರ ತಂದೆ. ತಾಯಿ ತ್ರಿಶಲಾದೇವಿ. ಮಹಾವೀರರ ಜನ್ಮ ಚೈತ್ರಶುದ್ಧತ್ರಯೋದಶಿಯಂದು ಆಯಿತು. ಇವರಿಗೆ ಮೊದಲು ವರ್ಧಮಾನ ಎಂಬ ಹೆಸರಿತ್ತು. ಹನ್ನೆರಡು ವರ್ಷಗಳ ಕಾಲ ತಪಸ್ಸುಮಾಡಿ ಕೇವಲಜ್ಞಾನವನ್ನು ಪಡೆದು, ಸುಮಾರು ೩೦ ವರ್ಷಗಳವರೆಗೆ ಜಿನಧರ್ಮವನ್ನು ಬೋಧಿಸಿ ೭೨ ನೆಯ ವಯಸ್ಸಿನಲ್ಲಿ ಮಹಾವಿರರು ನಿರ್ವಾಣವನ್ನೈದಿದರು. ಇವರ ನಿರ್ವಾಣ ಕಾಲ ಕ್ರಿ.ಪೂ. ೫೨೭[1].

ಮೊದಲು ಜೈನದರ್ಶನವು ಗ್ರಂಥರೂಪದಲ್ಲಿರದೆ ಉಪದೇಶಪರಂಪರೆಯಿಂದ ಪ್ರಚಲಿತ ವಾಗಿತ್ತು. ಹಿಂದಿನ ಈ ಸಿದ್ಧಾಂತಕ್ಕೆ 'ಶ್ರುತ' ಎಂದು ಹೆಸರು. ಇದನ್ನರಿತವರು ಶ್ರುತ ಕೇವಲಿಗಳು. ಶ್ರುತದ ವಿಚಾರಧಾರೆಗಳು ಹದಿನಾಲ್ಕು 'ಪೂರ್ವ'ಗಳಾಗಿ ವಿಭಕ್ತವಾಗಿದ್ದವು. ಚತುರ್ದಶಪೂರ್ವಗಳೂ ದ್ವಾದಶಾಂಗಗಳಾಗಿ ವಿಭಕ್ತವಾಗಿದ್ದ. ಅವನ್ನು ಮಹಾವೀರರು ಉಪದೇಶಿಸಿದರು. ಅವರ ಉಪದೇಶಗಳು ಕಾಲಕ್ರಮದಲ್ಲಿ ನಷ್ಟವಾದವು. ಪರಂಪರಾಗತವಾಗಿ

೧ ಮಹಾವೀರ-ಗೌತಮಬುದ್ಧರು ಸಮಕಾಲಿಕರು. ಇಬ್ಬರೂ ನೆರೆಹೊರೆಯ ಪ್ರಾಂತ ಗಳಲ್ಲಿ ತಮ್ಮ ತಮ್ಮ ಧರ್ಮವನ್ನು ಪ್ರಚಾರಮಾಡಿದರು.

ಕೆಲವು ಆಚಾರ್ಯರಲ್ಲಿ ಮಾತ್ರ ಅಲ್ಪ ಸ್ವಲ್ಪ ಉಳಿದವು. ಮಹಾವೀರರ ನಿರ್ವಾಣದ ತರುವಾಯ ೭೦೦ ವರ್ಷಗಳ ಅನಂತರ, ಎಂದರೆ ಕ್ರಿ.ಶ. ೩ನೆಯ ಶತಮಾನದಲ್ಲಿ ಗಿರಿನಗರದ ಚಂದ್ರಗುಹೆಯಲ್ಲಿದ್ದ ಆಚಾರ್ಯ ಧರಸೇನರಿಗೆ ಈ ಹದಿನಾಲ್ಕು ಪೂರ್ವಗಳಲ್ಲಿ ದ್ವಿತೀಯ ಪೂರ್ವದ ಕೆಲವು ಅಂಶಗಳು ಮಾತ್ರ ಚನ್ನಾಗಿ ತಿಳಿದಿದ್ದವು. ಅವರು ತಮ್ಮ ಶಿಷ್ಯರಾದ ಪುಷ್ಪದಂತ ಮತ್ತು ಭೂತಬಲಿ ಎಂಬ ಆಚಾರ್ಯರಿಗೆ ಅದನ್ನು ಬೋಧಿಸಿದರು. ಅದರ ಆಧಾರ ದಿಂದ ಈ ಇಬ್ಬರು ಆಚಾರ್ಯರು 'ಷಟ್ ಖಂಡಾಗಮ' ಎಂಬ ಗ್ರಂಥವನ್ನು ರಚಿಸಿದರು. ಜೈನಸಿದ್ಧಾಂತ ವಿಷಯವಾಗಿ ಉಪಲಬ್ಧವಾಗುವ ಪ್ರಥಮ ಗ್ರಂಥ ಇದೇ. ಗ್ರಂಥರೂಪವಾದ ಶಾಸ್ತ್ರಕ್ಕೆ 'ದ್ರವ್ಯಶ್ರುತ' ಎಂದೂ, ಉಪದೇಶರೂಪದಲ್ಲಿ ಮಾತ್ರ ಇದ್ದ ಶಾಸ್ತ್ರಕ್ಕೆ 'ಭಾವಶ್ರುತ' ಎಂದೂ ಹೆಸರು. ಜೈನ ಧರ್ಮವನ್ನು ವಿವರಿಸುವ ಷಟ್‌ಖಂಡಾಗಮದ ತರುವಾಯ ಧವಲ, ಮಹಾಧವಲ, ಜಯಧವಲ, ಗೊಮ್ಮಟಸಾರ, ಲಬ್ಧಿಸಾರ, ಕ್ಷಪಣಸಾರ, ಸಮಯಸಾರ ಮೊದಲಾದ ಗ್ರಂಥಗಳು ರಚಿತವಾದವು. ಈ ಮೂಲಗ್ರಂಥಗಳು ವಿಶೇಷವಾಗಿ ಅರ್ಧಮಾಗಧಿ, ಶೌರಸೇನಿ, ಪ್ರಾಕೃತಭಾಷೆಗಳಲ್ಲಿವೆ. ಇವುಗಳಿಗೆ ಸಂಸ್ಕೃತದಲ್ಲಿ ಪ್ರೌಢವ್ಯಾಖ್ಯಾನ ಗಳು ಹುಟ್ಟಿವೆ. ಅಲ್ಲದೆ ಸಂಸ್ಕೃತದಲ್ಲಿಯೂ ಸ್ವತಂತ್ರವಾದ ಗ್ರಂಥಗಳು ಹುಟ್ಟಿದವು. ಜೈನ ಸಿದ್ಧಾಂತಕ್ಕೆ ಪೋಷಕವಾದ ಜೈನತರ್ಕಶಾಸ್ತ್ರವೂ ವಿಪುಲವಾಗಿ ಬೆಳೆಯಿತು.

## ಜೈನಸಿದ್ಧಾಂತದ ಸಾರ

ಈ ವಿಶ್ವವು ಅನಾದ್ಯನಂತವಾದುದು. ಇದನ್ನು ಜೀವ, ಅಜೀವ ಎಂದು ಎರಡು ಗುಂಪಾಗಿ ವಿಂಗಡಿಸಬಹುದು. ಜೀವಗಳು ಅನಂತವಾಗಿದ್ದು ಶಾಶ್ವತವಾಗಿವೆ. ಪ್ರತಿಯೊಂದು ಜೀವವೂ ಚೈತನ್ಯಸ್ವರೂಪವಾಗಿದ್ದು ಅನಂತಜ್ಞಾನ, ಅನಂತದರ್ಶನ, ಅನಂತವೀರ್ಯ, ಅನಂತ ಸುಖಗಳಿಂದ ಕೂಡಿದೆ. ಜೀವಕ್ಕೆ ಅಜೀವಪುದ್ಗಲದ ಸಂಬಂಧ ಹೇಗೋ ಗಂಟುಬಿದ್ದು ಕರ್ಮ ಬಂಧನಕ್ಕೊಳಗಾಗಿ ಸಂಸಾರದಲ್ಲಿ ಪರಿತಪಿಸುತ್ತದೆ. ಆವರಣವು ಕವಿದಿರುವುದರಿಂದ ಅದರ ಅನಂತಜ್ಞಾನಾದಿಗಳು ಪ್ರಕಾಶಕ್ಕೆ ಬರುವುದಿಲ್ಲ. ಶುಭಾಶುಭಕರ್ಮಗಳಿಂದ ಮನುಷ್ಯ, ದೇವತೆ, ತಿರ್ಯಗ್‌ಜಂತು, ನಾರಕಿಗಳ ಜನ್ಮವೆಂಬ ಚತುರ್ಗತಿಯಲ್ಲಿ ತೊಳಲುತ್ತದೆ. ಹೀಗಿರುವಾಗ ಪುಣ್ಯಕರ್ಮದ ಫಲವಾಗಿ ಈ ಸಂಸಾರ ಚಕ್ರದಿಂದ ಬಿಡುಗಡೆಯಾಗಲು ಭವ್ಯ ಜೀವಕ್ಕೆ ಅಪೇಕ್ಷೆ ಹುಟ್ಟುತ್ತದೆ. ಕಾಲಲಬ್ಧಿ ಬಂದಾಗ ಸಮ್ಯಗ್‌ದರ್ಶನ, ಸಮ್ಯಗ್‌ಜ್ಞಾನ, ಸಮ್ಯಕ್‌ಚರಿತ್ರ— ಎಂಬ ರತ್ನತ್ರಯದಲ್ಲಿ ಮನಸ್ಸು ಆಸಕ್ತವಾಗಿ ಅದನ್ನು ಪಡೆದು ತತ್ತ್ವಸ್ವರೂಪವನ್ನು ಅರಿಯುತ್ತದೆ. ಆಗ ತನ್ನೆಡೆಗೆ ಹರಿದು ಬರುವ ಬಂಧಕಕರ್ಮಗಳನ್ನು ಸಂವರದಿಂದ ತಡೆದು ಹಿಂದೆ ಸೇರಿದ್ದ ಕರ್ಮಗಳನ್ನು ನಿರ್ಜರೆಯೆಂಬ ತಪಸ್ಸಿನಿಂದ ನಿಶ್ಶೇಷವಾಗಿ ನಾಶಗೊಳಿಸುತ್ತದೆ. ಹೀಗೆ ಸಂಸಾರದ ಬಲೆಯಿಂದ ಬಿಡಿಸಿಕೊಂಡು ಮುಕ್ತಾತ್ಮನಾಗಿ ತನ್ನ ನಿಜಸ್ವರೂಪವನ್ನು ಪಡೆಯುತ್ತದೆ. ಆಗ ಅನಂತಜ್ಞಾನಾದಿಗಳಿಂದ ಬೆಳಗುತ್ತ ಲೋಕಾಗ್ರದಲ್ಲಿರುವ ಸಿದ್ಧಶಿಲೆಯಲ್ಲಿ ಶಾಶ್ವತವಾಗಿ ನೆಲೆಸುತ್ತದೆ. ಈ ಸ್ಥಿತಿಯೇ ಮೋಕ್ಷ.

## ಪ್ರಮೇಯಂಗಳ ಸಂಕ್ಷಿಪ್ತ ನಿರೂಪಣೆ

## ತತ್ತ್ವಗಳು

ಜೀವ, ಅಜೀವ, ಆಸ್ರವ, ಸಂವರ, ನಿರ್ಜರಾ, ಬಂಧ, ಮೋಕ್ಷ–ಇವು ಏಳು ತತ್ತ್ವಗಳು[1]. ಇವನ್ನು ಸಪ್ತಪದಾರ್ಥಗಳೆಂದೂ ಹೇಳುತ್ತಾರೆ. ಪುಣ್ಯ, ಪಾಪಗಳೂ ಸೇರಿ ನವ ಪದಾರ್ಥ ಗಳೆಂದೂ ವಿಂಗಡಿಸುವುದುಂಟು[2]. ಇವುಗಳಲ್ಲಿ ಆಸ್ರವಾದಿಗಳನ್ನು ಜೀವದಲ್ಲಿಯೋ ಅಜೀವ ದಲ್ಲಿಯೋ ಅಂತರ್ಭಾವ ಮಾಡಬಹುದಾದರೂ ಮೋಕ್ಷಶಾಸ್ತ್ರದಲ್ಲಿ ಸಂಸಾರದ ಮತ್ತು ಅದರ ಬಿಡುಗಡೆಯ ಕಾರಣವನ್ನು ಸ್ಫುಟವಾಗಿ ಪ್ರತಿಪಾದಿಸಲು ಸಹಾಯಕವಾಗುತ್ತದೆಯೆಂದು ಆಸ್ರವಾದಿಗಳನ್ನು ತತ್ತ್ವಗಳೆಂದು ಗಣಿಸಿ ವಿವರಿಸಲಾಗಿದೆ. ಇವು ಜೀವ ಜೀವಗಳ ಸಂಯೋಗ ವಿಯೋಗ ಪರಿಣಾಮದಿಂದ ಉತ್ಪನ್ನವಾಗತಕ್ಕವು.

### ೧. ಜೀವ

ಜೈನದರ್ಶನವು ಅನಂತ ಜೀವಗಳನ್ನೊಪ್ಪುತ್ತದೆ. ದೇವ, ಮನುಷ್ಯ, ಪಶು, ಪಕ್ಷಿ, ಕ್ರಿಮಿ, ಕೀಟ, ಮರ, ಬಳ್ಳಿಗಳಲ್ಲಿ ಚೈತನ್ಯರೂಪವಾಗಿ ಜೀವವಿದೆ. ಇದು ಪರಿಶುದ್ಧವೂ ನಿತ್ಯವೂ ಆಗಿದೆ. ಈ ಜೀವಗಳಲ್ಲಿ ಮುಕ್ತಜೀವ, ಸಂಸಾರಿ ಜೀವ–ಎಂದು ಎರಡು ವಿಧ. ಮುಕ್ತರಿಗೆ ಅನಂತವಾದ ಜ್ಞಾನ, ದರ್ಶನ, ವೀರ್ಯ, ಸುಖಗಳು ಪ್ರಕಾಶವಾಗಿರುತ್ತವೆ. ಸಂಸಾರಿ ಜೀವಗಳಲ್ಲಿ ಇವು ಇದ್ದರೂ ಆವರಣಮಲದಿಂದ ಮಾಸಿಹೋಗಿರುತ್ತವೆ. ಸಂಸಾರಿ ಜೀವಗಳಿಗೆ ಪಾಪಪುಣ್ಯಗಳಿಗೆ ಅನುಗುಣವಾಗಿ ದೇವ ಮನುಷ್ಯಾದಿ ಜನ್ಮ ಬರುತ್ತದೆ. ಕರ್ಮಗಳ ಜಂಜಡವನ್ನು ತಪ್ಪಿಸಿಕೊಂಡು ಮೋಕ್ಷವನ್ನು ಗಳಿಸುವುದೇ ಜೀವದ ಪುರುಷಾರ್ಥ.

ಜೀವವು ಚೈತನ್ಯಸ್ವರೂಪ. ಆದಕ್ಕೆ ಜ್ಞಾನದರ್ಶನಗಳುಂಟು ಬಾಹ್ಯಪದಾರ್ಥ ಗ್ರಹಣಕ್ಕೆ ಜ್ಞಾನವೆಂದೂ[3], ಆತ್ಮಸ್ವರೂಪಗ್ರಹಣಕ್ಕೆ ದರ್ಶನವೆಂದೂ[4], ಹೆಸರು ಗುಣಗುಣಿಗಳಿಗೆ ಅಭೇದವನ್ನು ಒಪ್ಪಿರುವುದರಿಂದ ಜೀವವನ್ನು ಜ್ಞಾನಸ್ವರೂಪವೆಂದೂ, ಚೈತನ್ಯಸ್ವರೂಪವೆಂದೂ ಹೇಳಬಹುದು. ಜೀವನು ಅಮೂರ್ತ, ರೂಪರಸಾದಿಗಳು ಇವನಲ್ಲಿಲ್ಲ. ಇವನು ಕರ್ತೃ, ಕರ್ಮವನ್ನು ಆಚರಿಸುತ್ತಾನೆ. ಇವನು ಭೋಕ್ತೃ, ಕರ್ಮಫಲವನ್ನನುಭವಿಸುತ್ತಾನೆ. ಜೀವನು ದೇಹಪರಿಮಿತ, ತಾನು ಧರಿಸಿದ ದೇಹದಷ್ಟು ಅಳತೆಯುಳ್ಳವನು. ಯಾವ ದೇಹವನ್ನು ಪಡೆದರೂ ಅದರ ತುಂಬ ಹರಡಿಕೊಳ್ಳುತ್ತಾನೆ. ಜೀವನು ಮಧ್ಯಮ ಪರಿಮಾಣನೆನ್ನಬಹುದು.

---

೧. ತತ್ತ್ವಾರ್ಥರಾಜವಾರ್ತಿಕ, ೧–೪

೨. ಪಂಚಾಸ್ತಿಕಾಯಸಂಗ್ರಹ, ೧೦೮

೩. ಸಾಕಾರಂ ಜ್ಞಾನಂ

೪. ನಿರಾಕಾರಂ ದರ್ಶನಂ,

ಸಂಸಾರಿ ಜೀವರನ್ನು ಸ್ಥಾವರ, ತ್ರಸ (ಜಂಗಮ) ಎಂದು ವಿಂಗಡಿಸಲಾಗಿದೆ. ಸ್ಥಾವರಗಳೆಂದರೆ ವನಸ್ಪತಿ ಮೊದಲಾದವು. ಗಿಡಮರಗಳಲ್ಲಿಯೂ ಜೀವವಿರುತ್ತದೆ. ಅಲ್ಲದೆ ಪೃಥ್ವಿ, ಜಲ, ಅಗ್ನಿ, ವಾಯು–ಇವನ್ನು ಕಾಯವಾಗಿ ಪಡೆದಿರುವ ಜೀವಗಳೂ ಇರುತ್ತವೆ. ಇವುಗಳಿಗೆ ಪೃಥ್ವಿಕಾಯಿಕ–ಇತ್ಯಾದಿ ಹೆಸರು[1]. ಮನುಷ್ಯಾದಿಗಳು ತ್ರಸಜೀವಿಗಳು.

## ೨. ಅಜೀವ

ಜೀವಭಿನ್ನವಾದದ್ದು ಅಜೀವದ್ರವ್ಯ. ಈ ದ್ರವ್ಯವು ಪುದ್ಗಲ, ಧರ್ಮ, ಅಧರ್ಮ, ಆಕಾಶ ಮತ್ತು ಕಾಲ ಎಂದು ಐದುಬಗೆ.

### 1. ಪುದ್ಗಲ :

ಜಗತ್ತಿನಲ್ಲಿ ಗೋಚರಿಸುವ ಪೃಥ್ವಿ ಮೊದಲಾದವು ಪುದ್ಗಲದ ವಿವಿಧ ರೂಪಗಳು. ಪುದ್ಗಲವು ಅಚೇತನ, ನಿತ್ಯ, ಏಕಪ್ರದೇಶಿ, ಅವಿಭಾಗಿ ಮತ್ತು ಮೂರ್ತ. ಜೈನದರ್ಶನದಲ್ಲಿ ಮೂರ್ತವಾದುದ್ದು ಪುದ್ಗಲ ಒಂದೇ ಇದನ್ನು ಪರಮಾಣುವಿಗೆ ಹೋಲಿಸಬಹುದು. ಈ ಪುದ್ಗಲದಲ್ಲಿ ರೂಪ, ರಸ, ಗಂಧ ಮತ್ತು ಸ್ಪರ್ಶವೆಂಬ ನಾಲ್ಕು ಗುಣಗಳಿವೆ. ಶಬ್ದವು ಗುಣವಲ್ಲ. ಅದು ಪುದ್ಗಲದಿಂದಾದ ದ್ರವ್ಯ ಇಂದ್ರಿಯ, ಮನಸ್ಸು, ಕರ್ಮ–ಇವೆಲ್ಲವೂ ಪುದ್ಗಲದಿಂದಾದ ದ್ರವ್ಯಗಳೇ ರೂಪಾದಿಗಳು ಅನಭಿವ್ಯಕ್ತವಾಗಿರುವುದರಿಂದ ಪುದ್ಗಲದಲ್ಲಿ ಗೋಚರಿಸುವುದಿಲ್ಲ.

### 2. ಧರ್ಮ :

ಇದು ಒಂದು ಪಾರಿಭಾಷಿಕಶಬ್ದ. ಧರ್ಮವುಜೀವ–ಪುದ್ಗಲಗಳ ಚಲನಕ್ಕೆ ಸಹಾಯಕವಾದ ಒಂದು ಸ್ವತಂತ್ರದ್ರವ್ಯ. ಮೀನು ಈಜುವುದಕ್ಕೆ ನೀರು ಇದ್ದಂತೆ ಜೀವಪುದ್ಗಲಗಳ ಓಡಾಟಕ್ಕೆ ಇದು ಬೇಕು, ಇದು ಇಲ್ಲದಿದ್ದರೆ ಯಾವ ಕ್ರಿಯೆಯೂ ನಡೆಯದು. ಇದರ ಸತ್ತೆಯಿಂದಲೇ ಊರ್ಧ್ವಗತಿಯುಳ್ಳ ಮುಕ್ತಜೀವನು ಸಿದ್ಧಶಿಲೆಯವರೆಗೆ ಹೋಗುತ್ತಾನೆ. ಅದರ ಮೇಲೆ ಅಲೋಕಾಕಾಶಕ್ಕೆ ಹೋಗುವುದಿಲ್ಲ. ಏಕೆಂದರೆ ಅಲ್ಲಿ ಧರ್ಮ ದ್ರವ್ಯವಿಲ್ಲ. ಇದು ಅಮೂರ್ತ, ನಿತ್ಯ.

---

೧. ಪೃಥಿವೀ ಜಲ ಮೊದಲಾದವುಗಳಲ್ಲಿಯೇ ಜೀವವಿದೆಯೆಂದು ತಿಳಿಯಬಾರದು ಪೃಥಿವ್ಯಾದಿಗಳು ಅಜೀವಗಳು, ಕೆಲವು ಜೀವಗಳು ಕರ್ಮವಶದಿಂದ ಪೃಥಿವೀ ಕಾಯಾದಿಗಳನ್ನು ಪಡೆದಿರುವುದುಂಟು, ಶಾಪಗ್ರಸ್ತಳಾಗಿ ಕಲ್ಲಾದ ಅಹಲ್ಯೆಯಂತೆ.

3. ಅಧರ್ಮ :

ಇದು ಜೀವಪುದ್ಗಲಗಳ ಸ್ಥಿತಿಗೆ-ಒಂದೆಡೆ ನಿಲ್ಲುವುದಕ್ಕೆ ಸಹಾಯಕವಾದ ದ್ರವ್ಯ, ವಸ್ತುಗಳು ನಿಲ್ಲಲು ಭೂಮಿ ಇದ್ದಂತೆ. ಇದೂ ಅಮೂರ್ತ, ನಿತ್ಯ.

ಧರ್ಮಾಧರ್ಮಗಳೆರಡೂ ಜೀವಪುದ್ಗಲಗಳಿಗೆ ಸಹಾಯಕಗಳೇ ಹೊರತು ಪ್ರೇರಕಗಳಲ್ಲ. ಜೀವಪುದ್ಗಲಗಳು ಸ್ವಯಂ ಚಲಿಸುತ್ತವೆ, ಸ್ವಯಂ ನಿಲ್ಲುತ್ತವೆ. ಧರ್ಮಾಧರ್ಮಗಳು ಲೋಕದ ಎಲ್ಲೆಡೆಯೂ ಹರಡಿವೆ. ಅಲೋಕದಲ್ಲಿ ಇವು ಇಲ್ಲ.

4. ಆಕಾಶ :

ಜೀವಾಜೀವಗಳಿಗೆ ಇರಲು ಅವಕಾಶವನ್ನು ಕೊಡತಕ್ಕದ್ದು ಆಕಾಶದ್ರವ್ಯ, ಇದು ಸರ್ವ ವ್ಯಾಪಿ, ಅನಂತ, ಆಕಾಶದಲ್ಲಿ ಲೋಕಾಕಾಶ, ಅಲೋಕಾಕಾಶ ಎಂದು ಎರಡು ವಿಧ. ಲೋಕದಲ್ಲಿ ಜೀವ, ಪುದ್ಗಲ, ಆಕಾಶ, ಧರ್ಮ, ಅಧರ್ಮಗಳಿರುತ್ತವೆ. ಲೋಕದಲ್ಲಿರುವ ಆಕಾಶ ಲೋಕಾಕಾಶ. ಲೋಕದ ಆಚೆ ಅಲೋಕದಲ್ಲಿರುವುದು ಅಲೋಕಾಕಾಶ. ಅಲೋಕದಲ್ಲಿ ಆಕಾಶ ಒಂದೇ ಇದೆ,

5. ಕಾಲ :

ಪ್ರತಿಯೊಂದು ವಸ್ತುವಿನ ಪರಿವರ್ತನೆಗೆ ಸಹಾಯಕವಾಗಿ ಅದರ ರೂಪಾಂತರಕ್ಕೆ ನೆರವಾಗತಕ್ಕದ್ದು ಕಾಲದ್ರವ್ಯ. ಇದೂ ಅನಾದಿ, ಅನಂತ.

ಹೀಗೆ ಅಜೀವಭೇದಗಳಾದ ಪುದ್ಗಲ, ಧರ್ಮ, ಅಧರ್ಮ, ಆಕಾಶ, ಕಾಲಗಳೂ ಜೀವವೂ ಸೇರಿ ಷಡ್ದ್ರವ್ಯಗಳು. ವಾಸ್ತವವಾಗಿ ಇಷ್ಟೇ ಪದಾರ್ಥಗಳು. ಆಸ್ರವಾದಿಗಳು ಪರಿಣಾಮವಿಶೇಷಗಳು ಮಾತ್ರ. ಯಾವುದು ಉತ್ಪಾದ, ವ್ಯಯ, ಧ್ರೌವ್ಯ ಎಂಬ ೩ ಪರ್ಯಾಯ ಲಕ್ಷಣಗಳಿಂದ ಕೂಡಿದೆಯೋ ಅದೇ ಸತ್, ಅದೇ ದ್ರವ್ಯ[1], ಉದಾಹರಣೆಗೆ ಸುವರ್ಣವು ಒಂದು ದ್ರವ್ಯ, ಅದರಿಂದ ಉಂಗುರವನ್ನು ಮಾಡಿದಾಗ 'ಉತ್ಪಾದ'ವಾಗುತ್ತದೆ. ಅದನ್ನು ಕರಗಿಸಿ 'ಕುಂಡಲ'ವನ್ನಾಗಿ ಮಾಡಿದಾಗ ಉಂಗುರಕ್ಕೆ 'ವ್ಯಯ' ಸಂಭವಿಸುತ್ತದೆ. ಆದರೆ ಅದರ ಎಲ್ಲ ಅವಸ್ಥೆಗಳಲ್ಲಿಯೂ ಸುವರ್ಣತ್ವ ಅನುಸ್ಯೂತವಾಗಿರುತ್ತದೆ. ಇದೇ ಧ್ರೌವ್ಯ. ಈ ಮೂರು ಗುಣಗಳನ್ನುಳ್ಳದ್ದು ದ್ರವ್ಯ[2].

ಇವುಗಳಲ್ಲಿ ಕಾಲವನ್ನು ಬಿಟ್ಟು ಉಳಿದ ಐದು ದ್ರವ್ಯಗಳಿಗೆ 'ಅಸ್ತಿಕಾಯ'ಗಳೆಂದು ಹೆಸರು.

---

೧. ಉತ್ಪಾದವ್ಯಯ ಧ್ರಾವ್ಯಯುಕ್ತಂ ಸತ್ (ತತ್ತ್ವಾರ್ಥವಾರ್ತಿಕ ೫-೩೯)

೨. ಗುಣಪರ್ಯಯವದ್ದ್ರವ್ಯಂ (ಠೇ ೫-೩೭)

ಒಂದು ಪ್ರದೇಶವನ್ನು ವ್ಯಾಪಿಸುವ ವಸ್ತು ಕಾಯ, ಅಸ್ತಿ (ಸತ್) ಮತ್ತು ಕಾಯವಾದದ್ದು ಅಸ್ತಿಕಾಯ ಕಾಲಕ್ಕೆ ಪ್ರದೇಶವು ಬೇಕಿಲ್ಲ. ಅದು ಅಸ್ತಿಕಾಯವಲ್ಲ,

## ೩. ಆಸ್ರವ

ರಾಗದ್ವೇಷ ಮೋಹಗಳಿಂದ ಜೀವಿಯ ಮನೋವಾಕ್ಕಾಯಗಳಲ್ಲಿ ಕ್ರಿಯೆ ನಡೆಯುತ್ತದೆ. ಈ ಕ್ರಿಯೆಯಿಂದ ಶುಭಾಶುಭ ಪರಿಣಾಮಗಳುಂಟಾಗಿ ಕರ್ಮ ಪುದ್ಗಲಗಳು ಜೀವಕ್ಕೆ ಹರಿದು ಬರುತ್ತವೆ.

ಒಳ್ಳೆಯ ಕೆಲಸಗಳಿಂದಾಗುವ ಜೀವದ ಶುಭ ಪರಿಣಾಮವೇ ಪುಣ್ಯ, ಕೆಟ್ಟ ಕೆಲಸ ಗಳಿಂದಾಗುವ ಅಶುಭ ಪರಿಣಾಮವೇ ಪಾಪ, ಈ ಪರಿಣಾಮವು ಜೀವದಲ್ಲಿಯೂ ಪುದ್ಗಲ ಗಳಲ್ಲಿಯೂ ಸಂಭವಿಸುತ್ತದೆ. ಆಗ ಪುಣ್ಯಪುದ್ಗಲಗಳೂ ಪಾಪಪುದ್ಗಲಗಳೂ ಜೀವದ ಕಡೆಗೆ ಹರಿದು ಬರುತ್ತವೆ,

## ೪. ಬಂಧ

ಹರಿದುಬಂದ ಕರ್ಮಪುದ್ಗಲಗಳು ಜೀವಕ್ಕೆ ಅಂಟಿಕೊಳ್ಳುವುದು ಬಂಧವೆನಿಸುತ್ತದೆ. ಒದ್ದೆಯ ಬಟ್ಟೆಯಲ್ಲಿ ಧೂಳಿಯ ಕಣಗಳು ಸೇರುವಂತೆ ಜೀವದಲ್ಲಿ ಈ ಪುದ್ಗಲಗಳು ಸೇರುತ್ತವೆ. ಪಾಪಪುಣ್ಯಗಳೆರಡೂ ಸಂಸಾರಕ್ಕೆ ಹೇತುಗಳು–ಬಂಧಕಗಳು.

## ೫. ಸಂವರ

ಕರ್ಮಪುದ್ಗಲಗಳು ಹರಿದು ಬರದಂತೆ ತಡೆಯುವುದೇ ಸಂವರ. ರಾಗ ದ್ವೇಷಮೋಹಗಳಿಂದ ಶುಭಾಶುಭ ಪರಿಣಾಮಗಳಾಗಿ ಕರ್ಮಪುದ್ಗಲಗಳು ಹರಿದು ಬರುತ್ತವೆಯಷ್ಟೆ. ರಾಗಾದಿಗಳನ್ನು ಜಯಿಸುವುದರಿಂದ ಈ ಪುದ್ಗಲಗಳ ಆಸ್ರವವನ್ನು ತಡೆಯಬಹುದು. ಹೊಸ ಕರ್ಮಲೇಪವನ್ನು ತಪ್ಪಿಸಿಕೊಳ್ಳುವುದು ಸಂವರದ ಪ್ರಯೋಜನ

## ೬. ನಿರ್ಜರಾ

ಮೋಕ್ಷವನ್ನು ಬಯಸತಕ್ಕವನು ಸಂವರವನ್ನು ಸಾಧಿಸಿದರೂ ಮೊದಲೇ ಸೇರಿಕೊಂಡಿರುವ ಕರ್ಮಪುದ್ಗಲಗಳಿಂದ ತಪ್ಪಿಸಿಕೊಳ್ಳಬೇಕಾಗುತ್ತದೆ. ಸೇರಿಕೊಂಡ ಕರ್ಮಗಳ ಕ್ಷಯವೇ ನಿರ್ಜರಾ. ಜೀವನದಲ್ಲಿ ಪ್ರತಿಕ್ಷಣವೂ ಕರ್ಮಗಳ ಆಸ್ರವವೂ ಬಂಧವೂ ಆಗುತ್ತಿರುವಂತೆ

ನಿರ್ಜರೆಯೂ ಆಗುತ್ತಿರುವುದು ಏಕೆಂದರೆ, ಕರ್ಮಪುದ್ಗಲಗಳು ಫಲವನ್ನು ಕೊಟ್ಟ ಮೇಲೆ ನಿಃಸತ್ವವಾಗಿ ಜೀವಾತ್ಮನಿಂದ ಬೇರೆಯಾಗುವುವು. ಹೀಗೆ ಸಹಜವಾದ ಕರ್ಮಕ್ಷಯಕ್ಕೆ 'ಸವಿಪಾಕ ನಿರ್ಜರೆ' ಎಂದು ಹೆಸರು. ಭವ್ಯಜೀವಿಯು ತಪೋಬಲದಿಂದ ಕರ್ಮಕಣಗಳನ್ನು ನಿಃಸತ್ತ್ವಗೊಳಿಸಿ ಕರ್ಮಕ್ಷಯ ಮಾಡಿಕೊಳ್ಳುತ್ತಾನೆ. ಈ ಬಗೆಯ ಕರ್ಮಕ್ಷಯಕ್ಕೆ 'ಅವಿಪಾಕ ನಿರ್ಜರೆ' ಎಂದು ಹೆಸರು.

## ೭. ಮೋಕ್ಷ

ಜೀವವನ್ನು ಸಂಸಾರದಲ್ಲಿ ಸಿಲುಕಿಸಿರುವುದೇ ಕರ್ಮ. ಆದ್ದರಿಂದ ಈ ಕರ್ಮಬಂಧವನ್ನು ಕಳೆದುಕೊಂಡರೆ ಮೋಕ್ಷವು ತಪ್ಪದೆ ದೊರೆಯುತ್ತದೆ. ಸಂವರದಿಂದ ಕರ್ಮಾಸ್ರವವನ್ನು ತಡೆದು, ನಿರ್ಜರೆಯಿಂದ ಕರ್ಮಕಣಗಳನ್ನು ಕ್ಷಯಿಸಿಕೊಂಡಾಗ ಅವುಗಳಿಂದಾಗುವ ಜ್ಞಾನಾವರಣಾದಿಗಳು ಇಲ್ಲವಾಗುತ್ತವೆ. ಆಗ ಜೀವಾತ್ಮನು ಸ್ವಸ್ವರೂಪವನ್ನು ಪಡೆದು ಪರಿಶುದ್ಧನಾಗುತ್ತಾನೆ. ಅವನು ಸರ್ವಜ್ಞನೂ ಚೈತನ್ಯರೂಪನೂ ಸಕಲವ್ಯಾಪಾರ ವರ್ಜಿತನೂ ನಿತ್ಯಸುಖಾಸ್ಪದನೂ ಆಗಿ, ಊರ್ಧ್ವಗತಿಯಿಂದ ಹೋಗಿ ಸಿದ್ಧಶಿಲೆಯಲ್ಲಿ ನೆಲೆಸುತ್ತಾನೆ. ಇದೇ ಮೋಕ್ಷ. ಅವನಿಗೆ ಪುನಃ ಸಂಸಾರಬಂಧವಿಲ್ಲ.

## ಮೋಕ್ಷ ಸಾಧನಗಳು

ಸಮ್ಯಗ್‌ದರ್ಶನ, ಸಮ್ಯಗ್‌ಜ್ಞಾನ, ಸಮ್ಯಕ್‌ಚಾರಿತ್ರ ಎಂಬ ಮೂರು ಮೋಕ್ಷ ಸಾಧನಗಳನ್ನು ಜೈನ ಸಿದ್ಧಾಂತವು ವಿಶೇಷವಾಗಿ ಪರಿಗಣಿಸಿದೆ. ಈ ಮೂರು ಸಾಧನಗಳಿಗೆ 'ರತ್ನತ್ರಯ' ಎಂದು ಹೆಸರು.

೧. ಸಮ್ಯಗ್ ದರ್ಶನ :

ಆಪ್ತರಾದ ತೀರ್ಥಂಕರರಲ್ಲಿಯೂ ಜೈನಾಗಮಗಳಲ್ಲಿಯೂ ಗುರುಗಳಲ್ಲಿಯೂ ಪೂರ್ಣವಾದ ನಂಬಿಕೆ; ಜೀವ, ಅಜೀವ-ಮುಂತಾದ ಶಾಸ್ತ್ರೋಕ್ತ ತತ್ತ್ವಗಳಲ್ಲಿ ಸಂಶಯಾತೀತವಾದ ಶ್ರದ್ಧೆ—ಈ ಬಗೆಯ ವಿಶ್ವಾಸವೇ ಸಮ್ಯಗ್ ದರ್ಶನ.

೨. ಸಮ್ಯಗ್ ಜ್ಞಾನ :

ಸಮ್ಯಗ್ ದರ್ಶನದಿಂದ ಗ್ರಹಿಸಿದ ವಿಷಯವನ್ನು ಮನನ ಮಾಡಿ, ಜೀವಾದಿತತ್ತ್ವಗಳ ಸ್ವರೂಪವನ್ನು ಯಥಾವತ್ತಾಗಿ ತಿಳಿದುಕೊಳ್ಳುವುದು ಸಮ್ಯಗ್‌ಜ್ಞಾನ.

೩. ಸಮ್ಯಕ್‌ಚಾರಿತ್ರ :

ಸಮ್ಯಗ್‌ದರ್ಶನ ಮತ್ತು ಸಮ್ಯಕ್‌ಜ್ಞಾನಗಳಿಂದ ತಿಳಿದುಕೊಂಡಿರುವುದನ್ನು ಶ್ರದ್ಧೆಯಿಂದ ಆಚರಣೆಗೆ ತರುವುದೇ ಸಮ್ಯಕ್‌ಚಾರಿತ್ರ. ಇದನ್ನು ಸದಾಚಾರ ಎನ್ನಬಹುದು. ಅಶುಭವಾದ ಕರ್ಮವನ್ನು ಬಿಟ್ಟು ಶುಭವಾದ ಕರ್ಮವನ್ನಾಚರಿಸುವುದು ವ್ಯಾವಹಾರಿಕವಾದ ಸಮ್ಯಕ್ ಚಾರಿತ್ರ. ಆದರೆ ಸಂಸಾರಕ್ಕೆ ಕಾರಣವಾದ ಕರ್ಮಬಂಧವನ್ನು ತೊಡೆಯುವುದಕ್ಕಾಗಿ ಬಾಹ್ಯಾಂತರ ಕ್ರಿಯೆಗಳೆಲ್ಲವನ್ನೂ ತಡೆಯುವುದು ಶ್ರೇಷ್ಠವಾದ ಸಮ್ಯಕ್‌ಚಾರಿತ್ರ.

ಕರ್ಮ, ತಪಸ್ಸು, ಜ್ಞಾನ—ಮುಂತಾದುವುಗಳಲ್ಲಿ ಜೈನಸಿದ್ಧಾಂತವು ವಿಪುಲವಾದ ವಿಭಾಗಗಳನ್ನೂ ಅಂತರ್ವಿಭಾಗಗಳನ್ನೂ ಹೇಳುತ್ತದೆ.

## ಈಶ್ವರ

ಜೈನಸಿದ್ಧಾಂತವು ಸೃಷ್ಟಿಕರ್ತನಾದ ಈಶ್ವರನನ್ನೊಪ್ಪುವುದಿಲ್ಲ. ಅವನು ಸೃಜಿಸುವುದೇಕೆ ? ಅನ್ಯಪ್ರೇರಿತನಾಗಿ ಸೃಜಿಸುತ್ತಾನೆಂದರೆ ಈಶ್ವರನು ಸ್ವತಂತ್ರನಲ್ಲವೆಂದಾಗುತ್ತದೆ. ಕೃಪೆಯಿಂದ ಎಂದರೆ, ಲೋಕದಲ್ಲಿ ಕಷ್ಟವನ್ನು ಸೃಜಿಸಿದ್ದೇಕೆ ?—ಎಂಬ ಪ್ರಶ್ನೆ ಏಳುತ್ತದೆ. ಪ್ರಾಣಿಗಳ ಕಷ್ಟಪರಿಹಾರಕ್ಕಾಗಿ ಎಂದರೆ, ಕಷ್ಟವನ್ನೇಕೆ ಸೃಷ್ಟಿಸಿದನು ? ಎಂದು ಕೇಳಬೇಕಾಗುತ್ತದೆ. ಕ್ರೀಡಾರ್ಥವಾಗಿ ಎಂದರೆ, ಬಾಲಕನಂತೆ ಈಶ್ವರನನ್ನು ಅಜ್ಞನೆನ್ನಬೇಕಾಗುತ್ತದೆ. ಸೃಜಿಸುವುದು ಈಶ್ವರನ ಸ್ವಭಾವ ಎಂದರೆ ಸ್ವಭಾವವು ನಿತ್ಯವಾದ್ದರಿಂದ ಸದಾ ಸೃಷ್ಟಿಯೇ ಇದ್ದು ಪ್ರಳಯ ವಿಲ್ಲವೆಂದಾಗುತ್ತದೆ. ಪ್ರಳಯವಿಲ್ಲವೆಂದರೆ, ಯಾವ ಪದಾರ್ಥಕ್ಕೆ ನಾಶವಿಲ್ಲವೋ ಅದು ಅನಾದಿಯೆಂದು ಸಿದ್ಧವಾಗುತ್ತದೆ. ಇತ್ಯಾದಿ ಯುಕ್ತಿಗಳಿಂದ ಜೈನರು ಈಶ್ವರನಿದ್ದಾನೆಂಬುದನ್ನು ನಿರಾಕರಿಸುತ್ತಾರೆ. ಅನಾದಿಯಾದ ಈಶ್ವರನನ್ನು ಒಪ್ಪುವುದಕ್ಕಿಂತ ಜಗತ್ತನ್ನು ಅನಾದಿಯೆಂದೂ, ಗುಣಧರ್ಮಗಳು ಪದಾರ್ಥಗಳಿಗೆ ಸ್ವಾಭಾವಿಕವೆಂದೂ ಹೇಳುವುದು ಯುಕ್ತವೆಂದು ಅವರ ಸಿದ್ಧಾಂತವಿದೆ.

## ಪ್ರಮಾಣ ಪ್ರಮೇಯಗಳು

### ಪ್ರಮಾಣ :

'ಸಮ್ಯಗ್ ಜ್ಞಾನಂ ಪ್ರಮಾಣಂ' ಎಂದು ಪ್ರಮಾಣದ ಲಕ್ಷಣ[1]. ಸಂಶಯ, ವಿಪರ್ಯಯ ಅನಧ್ಯಾವಸಾಯಗಳಿಲ್ಲದ ಸಮ್ಯಗ್‌ಜ್ಞಾನವು ಪ್ರಮಾಣವೆನಿಸುತ್ತದೆ. ಇಂದ್ರಿಯಗಳಾಗಲಿ ಇಂದ್ರಿಯಾರ್ಥಸನ್ನಿಕರ್ಷವಾಗಲಿ ಪ್ರಮಾಣವೆಂದು ಜೈನತರ್ಕವು ಒಪ್ಪುವುದಿಲ್ಲ. 'ಚಕ್ಷುಷಾ ಪ್ರಮೀಯತೇ' ಇತ್ಯಾದಿ ಪ್ರಯೋಗವು ಔಪಚಾರಿಕಪ್ರಮಾಣವೆಂಬುದು ಭಾವಸಾಧನ, ಭಾವೇ ಲ್ಯುಟ್‌ಪ್ರತ್ಯಯ. ಧೂಮಜ್ಞಾನದಿಂದ ವಹ್ನಿಜ್ಞಾನವು ಹುಟ್ಟುವ ಸ್ಥಳಗಳಲ್ಲಿ ಧೂಮ

---

೧ ನ್ಯಾಯದೀಪಿಕಾ

ಜ್ಞಾನವೆಂಬ ಪ್ರಮಾಣವು ಪ್ರಮಾಕರಣವಾದರೂ [ದೋಷವಿಲ್ಲ, ಧೂಮಜ್ಞಾನವು ಸಮ್ಯಗ್ ಜ್ಞಾನವೇ ಆಗಿರುವುದರಿಂದ. ಅಥವಾ ಪ್ರಮಾಣಶಬ್ದವು ಭಾವಸಾಧನ, ಕರಣಸಾಧನ ಎರಡೂ ಆಗಬಹುದು.

ಜ್ಞಾನದ ಪ್ರಾಮಾಣ್ಯವು ಸ್ವತಃ, ಪರತಃ-ಎಂದು ಎರಡು ವಿಧದಲ್ಲಿಯೂ ಗೃಹೀತವಾಗುತ್ತದೆ[1]. ಪ್ರಮಾಣವು ಪ್ರತ್ಯಕ್ಷ, ಪರೋಕ್ಷ-ಎಂದು ಎರಡು ವಿಧ. ಸ್ಪಷ್ಟವೂ ನಿರ್ಮಲವೂ ಎಂದು ಅನುಭವಸಿದ್ಧವಾದ ಜ್ಞಾನ ಪ್ರತ್ಯಕ್ಷ[2]. ಪ್ರತ್ಯಕ್ಷವು ಸಾಂವ್ಯವಹಾರಿಕ, ಪಾರಮಾರ್ಥಿಕ ಎಂದು ಎರಡು ವಿಧ. ಇಂದ್ರಿಯ ಮನಸ್ಸುಗಳಿಗೆ ಗೋಚರವಾದದ್ದು ಸಾಂವ್ಯವಹಾರಿಕ ಪ್ರತ್ಯಕ್ಷ. ಇದು ಈಷದ್ವಿಶದ. ಅವಧಿಜ್ಞಾನ, ಮನಃಪರ್ಯಯಜ್ಞಾನ, ಕೇವಲ ಜ್ಞಾನ-ಇವು ಪಾರಮಾರ್ಥಿಕ ಪ್ರತ್ಯಕ್ಷ. ಇವು ಸರ್ವತೋವಿಶದ.

ಜ್ಞಾನವು ಮತಿ, ಶ್ರುತ, ಅವಧಿ, ಮನಃಪರ್ಯಯ, ಕೇವಲ-ಎಂದು ಐದು ವಿಧ. ಇಂದ್ರಿಯಗಳು ಮತ್ತು ಮನಸ್ಸಿನಿಂದ ಆಗತಕ್ಕದ್ದು ಮತಿಜ್ಞಾನ. ಮತಿಜ್ಞಾನದ ನೆರವಿನಿಂದ ಯುಕ್ತಿ, ತರ್ಕ (ವ್ಯಾಪ್ತಿಜ್ಞಾನ), ಅನುಮಾನ, ಮತ್ತು ಶಬ್ದಾರ್ಥಜ್ಞಾನ-ಇವುಗಳಿಂದಾಗುವುದು ಶ್ರುತ ಜ್ಞಾನ. ಇಂದ್ರಿಯಾರ್ಥಸಂನಿಕರ್ಷವಿಲ್ಲದೆ ದೂರದ ಪದಾರ್ಥಗಳನ್ನರಿಯಬಲ್ಲ ದೇವಾದಿಗಳ ಜ್ಞಾನ ಅವಧಿಜ್ಞಾನ. ಇನ್ನೊಬ್ಬರ ಮನಸ್ಸಿನಲ್ಲಿರುವುದು ಮನಃಪರ್ಯಯಜ್ಞಾನ. ವಿಶ್ವದ ಸಮಸ್ತ ವಸ್ತುಗಳನ್ನೂ ಯಥಾವತ್ತಾಗಿ ತಿಳಿಯುವ ಅಬಾಧಿತ ಜ್ಞಾನ, ಕೇವಲ ಜ್ಞಾನ.

ಮತಿ, ಶ್ರುತಗಳಿಗೆ ಇಂದ್ರಿಯಗಳ ನೆರವು ಬೇಕು ; ಅವಧಿ, ಮನಃಪರ್ಯಯ, ಕೇವಲ ಜ್ಞಾನಗಳಿಗೆ ಬೇಕಿಲ್ಲ. ಮನಸ್ಸು ಇಂದ್ರಿಯವಲ್ಲ. ಅದನ್ನು 'ನೋ ಇಂದ್ರಿಯ' ಎನ್ನುತ್ತಾರೆ.

ಮತಿ, ಶ್ರುತಜ್ಞಾನಗಳು ಸಾಂವ್ಯವಹಾರಿಕ ಪ್ರತ್ಯಕ್ಷ. ಪರಮಾರ್ಥದಲ್ಲಿ ಇವು ಪರೋಕ್ಷಗಳೇ. ಉಳಿದ ಮೂರು ಜ್ಞಾನಗಳು ಪ್ರತ್ಯಕ್ಷಗಳು. ಅಕ್ಷ ಎಂದರೆ ಆತ್ಮನಿಗೆ ಪ್ರತಿನಿಯತವಾದದ್ದು-ಇಂದ್ರಿಯಾಪೇಕ್ಷೆ ಇಲ್ಲದ್ದು ಪ್ರತ್ಯಕ್ಷ. ಆತ್ಮನಿಗೆ ಪರವಾದ ಇಂದ್ರಿಯಗಳ ಅಪೇಕ್ಷೆ ಇರತಕ್ಕದ್ದು ಪರೋಕ್ಷ. ಈ ವಿಷಯದಲ್ಲಿ ಜೈನತರ್ಕವು ಇತರದರ್ಶನಗಳಿಗಿಂತ ಭಿನ್ನವಾದ

---

೧ 'ಪ್ರಾಮಾಣ್ಯಂ ತು ಸ್ವತಃ ಸಿದ್ಧಮಭ್ಯಾಸಾತ್ ಪರತೋಽನ್ಯಥಾ'

—ಪ್ರಮಾಣಪರೀಕ್ಷಾ.

೨ ವಿಶದಪ್ರತಿಭಾಸಾತ್ಮಕಂ ಜ್ಞಾನಂ ಪ್ರತ್ಯಕ್ಷಂ

—ನ್ಯಾಯದೀಪಿಕಾ.

ಪ್ರಕ್ರಿಯೆಯನ್ನು ನಿರೂಪಿಸುತ್ತದೆ[1]. ಶ್ರುತಜ್ಞಾನದಲ್ಲಿ ಸ್ಮೃತಿ, ಪ್ರತ್ಯಭಿಜ್ಞಾನ, ತರ್ಕ, ಅನುಮಾನ, ಆಗಮ (ಶಬ್ದ) ಜ್ಞಾನಗಳೆಂಬ ಐದು ವಿಧ. ಮತಿ, ಶ್ರುತಜ್ಞಾನಗಳು ಪರೋಕ್ಷ[2].

## ಪ್ರಮೇಯ

ದ್ರವ್ಯ ಎಂಬ ಒಂದೇ ಪದಾರ್ಥವಿದೆ. ಯಾವುದು ಸತ್ ಆಗಿದೆಯೋ ಅದು ದ್ರವ್ಯ. ದ್ರವ್ಯೇತರವಾಗಿ ತೋರುವುದೆಲ್ಲವೂ ಅಸತ್-ಇಲ್ಲ. ಸತ್ ಎಂದರೆ ದ್ರವ್ಯವು ಉತ್ಪಾದ-ವ್ಯಯ-ಧ್ರೌವ್ಯಗಳಿಂದ ಕೂಡಿದೆ[3]. ಮೃತ್ಪಿಂಡವು ಘಟವಾದಾಗ ಘಟಕ್ಕೆ ಉತ್ಪಾದವಾಗುತ್ತದೆ. ಮೃತ್ಪಿಂಡಕ್ಕೆ ವ್ಯಯವಾಗುತ್ತದೆ. ಮೃತ್ಪಿಂಡ ಘಟಗಳಲ್ಲಿ ಮೃತ್ ಸ್ವರೂಪ ಇದ್ದೇ ಇರುತ್ತದೆ. ಇದೇ ಧ್ರೌವ್ಯ. ಹೀಗೆ ಸಕಲದ್ರವ್ಯಗಳೂ ಪರಿಣಾಮಹೊಂದಿ ಮೂರು ಧರ್ಮಗಳನ್ನು ಪಡೆಯುತ್ತವೆ. ಪರಿಣಾಮವಾದವು ಜೈನದರ್ಶನಕ್ಕೆ ಸಂಮತ.

ರೂಪ ರಸಾದಿಗಳು ಗುಣಗಳು. ಘಟ, ಕಟಕ, ಕುಂಡಲ-ಮುಂತಾದ ಆಕೃತಿ ಭೇದಗಳೂ ಕರ್ಮವೂ ಪರ್ಯಯ (ಪರ್ಯಾಯ)ಗಳು. ಈ ಗುಣ ಪರ್ಯಯಗಳು ದ್ರವ್ಯದ ಪರಿಣಾಮ ವಿಶೇಷಗಳೇ ಹೊರತು ಅತಿರಿಕ್ತ ಪದಾರ್ಥಗಳಲ್ಲ. ಸಾಮಾನ್ಯ, ವಿಶೇಷ, ಸಮವಾಯ, ಅಭಾವ ಗಳನ್ನೂ ಜೈನತರ್ಕವು ಅತಿರಿಕ್ತ ಪದಾರ್ಥಗಳೆಂದು ಅಂಗೀಕರಿಸುವುದಿಲ್ಲ. ಅವೆಲ್ಲವೂ ಗುಣ ಪರ್ಯಯಗಳಲ್ಲಿ ಸೇರುತ್ತವೆ. ಆದ್ದರಿಂದ ದ್ರವ್ಯ ಒಂದೇ ಪದಾರ್ಥ.

ದ್ರವ್ಯವು ಜೀವ-ಅಜೀವ ಎಂದು ಎರಡು ವಿಧ. ಜೀವವು ಚೈತನ್ಯ ಸ್ವರೂಪವಾಗಿದೆ. ಅನಂತ ಜೀವಗಳಿವೆ. ಸೃಷ್ಟಿ ಕರ್ತನಾದ ಈಶ್ವರನಿಲ್ಲ. ಜಗತ್ತು ನಿತ್ಯವಾದದ್ದು. ಜೀವನಿಗೆ ಭಿನ್ನವಾದ ಸಕಲ ಜಡ ವಸ್ತುಗಳು ಅಜೀವದಲ್ಲಿ ಸೇರುತ್ತವೆ. ಅಜೀವ ದ್ರವ್ಯಗಳಲ್ಲಿ ಪುದ್ಗಲ, ಧರ್ಮ, ಅಧರ್ಮ, ಆಕಾಶ, ಕಾಲ-ಎಂದು ಐದು ಭೇದಗಳಿವೆ. ಪುದ್ಗಲವೆಂದರೆ ಪರಮಾಣು ವೆನ್ನಬಹುದು. ಇದರಲ್ಲಿ ರೂಪ ರಸಾದಿಗಳಿರುವುದರಿಂದ ಪುದ್ಗಲವು ಮೂರ್ತವೆನಿಸುತ್ತದೆ. ಪುದ್ಗಲಗಳಿಂದ ಪೃಥಿವೀಮೊದಲಾದ ಸಕಲ ಮೂರ್ತ ದ್ರವ್ಯಗಳೂ ಹುಟ್ಟಿವೆ. ಧರ್ಮಾದಿ ನಾಲ್ಕು ದ್ರವ್ಯಗಳು ಮೂರ್ತಗಳಲ್ಲ. ಜೀವನೂ ಮೂರ್ತನಲ್ಲ.

---

೧. ಮನಸ್ಸು ದ್ರವ್ಯಮನಃ ಭಾವಮನಃ ಎಂದು ಎರಡು ವಿಧ. ಅವಧಿ, ಮನಃಪರ್ಯಯ ಜ್ಞಾನಗಳಿಗೆ ಭಾವಮನಸ್ಸಿನ ಅಪೇಕ್ಷೆ ಇದ್ದರೂ ಕೇವಲಜ್ಞಾನಕ್ಕೆ ಅದರ ಅಪೇಕ್ಷೆಯೂ ಇಲ್ಲ-ಇತ್ಯಾದಿ.

೨. 'ಆದ್ಯೇ ಪರೋಕ್ಷಂ'

—ತ. ಸೂ. ೧-೧೧

೩. 'ಉತ್ಪಾದವ್ಯಯ ಧ್ರೌವ್ಯಯುಕ್ತಂ ಸತ್—ತ. ಸೂ. ೫-೨೯

ಶಬ್ದವು ದ್ರವ್ಯ, ಗುಣವಲ್ಲ. ಇದು ಪುದ್ಗಲಗಳಿಂದ ಹುಟ್ಟುತ್ತದೆ. ಕತ್ತಲೆ, ನೆರಳು, ಪ್ರಕಾಶ–ಇವೂ ಸಹ ಪುದ್ಗಲಗಳಿಂದ ಆಗಿವೆ[1].

ಪ್ರಮಾಣದಿಂದ ಪ್ರಮೇಯದ ಎಂದರೆ ಅರ್ಥದ ಪ್ರಕಾಶನವಾಗುತ್ತದೆ. ಪ್ರಕಾಶಿತವಾದ ಅರ್ಥವನ್ನು ಮನನ ಮಾಡಿ ನಿಶ್ಚಯಿಸಿಕೊಳ್ಳುವುದಕ್ಕೂ ಪರರಿಗೆ ವಸ್ತುತತ್ತ್ವವನ್ನು ತಿಳಿಯಪಡಿಸುವುದಕ್ಕೂ 'ನಯ'ಗಳ ಉಪಯೋಗವಾಗುತ್ತದೆ. 'ಪ್ರಮಾತುರಭಿಪ್ರಾಯೋ ನಯಃ' ಎಂದು ನ್ಯಾಯದೀಪಿಕೆಯಲ್ಲಿ ಹೇಳಿದೆ. 'ಪ್ರಮಾಣ ಪ್ರಕಾಶಿತಾರ್ಥವಿಶೇಷಪ್ರರೂಪಕೋ ನಯಃ' ಎಂದು ರಾಜವಾರ್ತಿಕ ಹೇಳುತ್ತದೆ (೧–೩೩–೧). ಪ್ರಮಾಣಗಳಿಂದ ಗೊತ್ತಾದ ಜೀವಾದಿ ಪದಾರ್ಥಗಳ ಗುಣ ಪರ್ಯಾಯ ವಿಶೇಷಗಳನ್ನು ನಿರೂಪಿಸುವ ಪ್ರಮಾತೃವಿನ ಅಭಿಪ್ರಾಯವೇ ನಯ, ಇದರಲ್ಲಿ ನೈಗಮ, ಸಂಗ್ರಹ–ಮುಂತಾದ ಏಳು ಭೇದಗಳಿದ್ದು ಒಂದೊಂದು ವಸ್ತುವಿನ ಏಕಾಂಶವನ್ನು ಮನವರಿಕೆ ಮಾಡಿ ಕೊಡುತ್ತದೆ. ಆದ್ದರಿಂದ 'ವಸ್ತ್ವಂಶಗ್ರಾಹೀ ನಯಃ' ಎಂದು ಹೇಳಲಾಗಿದೆ. ಪರರಿಗೆ ಅಧಿಗಮವನ್ನು ಎಂದರೆ ಬೋಧವನ್ನು ಉಂಟುಮಾಡುವಾಗ ನಯವು ವಾಕ್ಯಾತ್ಮಕವಾಗುತ್ತದೆ. ಆದ್ದರಿಂದ 'ಅನ್ಯತರಧರ್ಮವಾಚಕೋನಯಃ' ಎನ್ನುವುದುಂಟು. ನಯವು ದ್ರವ್ಯಾರ್ಥಿಕ, ಪರ್ಯಾಯಾರ್ಥಿಕ–ಎಂದು ಎರಡು ವಿಧ. ದ್ರವ್ಯ ಒಂದೇ ಇದೆ, ಇನ್ನು ಯಾವ ಭಾವ ವಿಕಾರಗಳಾಗಲಿ ಅಭಾವವಾಗಲಿ ಇಲ್ಲ ಎಂದು ಸಾಧಿಸುವುದು ದ್ರವ್ಯಾರ್ಥಿಕ. ಘಟ ಪಟಾದಿಗಳೆಲ್ಲವೂ ದ್ರವ್ಯದ ಪರ್ಯಾಯಗಳೇ ಹೊರತು ಅತಿರಿಕ್ತ ವಸ್ತುಗಳಲ್ಲ ಎಂದು ಸಾಧಿಸುವುದು ಪರ್ಯಾಯಾರ್ಥಿಕ, ನಯಗಳ ಸಂಕಲನದಿಂದ ಮುಂದೆ ಹೇಳುವ ಸ್ಯಾದ್ವಾದವು ರೂಪಿತವಾಗಿದೆ.

## ಸ್ಯಾದ್ವಾದ

ಸ್ಯಾದ್ವಾದವು ಜೈನದರ್ಶನದಲ್ಲಿ ಮಹತ್ತ್ವದ ಸ್ಥಾನವನ್ನು ಪಡೆದಿದೆ. 'ಸರ್ವಮನೇಕಾಂತಮ್-ಸಕಲಪದಾರ್ಥವೂ ಅನೇಕ (ವಿರುದ್ಧ) ಧರ್ಮಗಳನ್ನು ಪಡೆದಿದೆ'ಯೆಂಬುದು ಜೈನಸಿದ್ಧಾಂತವಾಗಿರುವುದರಿಂದ ಈ ವಾದ ಅವಶ್ಯಕವಾಗಿದೆ. ಇದಕ್ಕೆ ಸ್ಯಾದ್ವಾದ, ಅನೇಕಾಂತವಾದ, ಸಪ್ತಭಂಗೀ

---

೧, ಈ ವಿಚಾರವನ್ನು ಮಹಾದಾರ್ಶನಿಕನಾದ ಭರ್ತೃಹರಿಯು ವಾಕ್ಯಪದೀಯದಲ್ಲಿ ಉಲ್ಲೇಖಿಸಿದ್ದಾನೆಂಬುದು ಗಮನಾರ್ಹ.

1. ವಾಯೋರಣೂನಾಂ ಜ್ಞಾನಸ್ಯ ಶಬ್ದತ್ವಾಪತ್ತಿರಿಷ್ಯತೇ ।
2. ಅಭ್ರಾಣೀವ ಪ್ರಚೀಯಂತೇ ಶಬ್ದಾಖ್ಯಾಃ ಪರಮಾಣವಃ ॥
3. ಅಣವಃ ಸರ್ವಶಕ್ತಿತ್ವಾತ್ ಭೇದಸಂಸರ್ಗಹೇತವಃ ।

ಛಾಯಾತಪತಮಃ ಶಬ್ದಭಾವೇನ ಪರಿಣಾಮಿನಃ ॥

—ವಾಕ್ಯ. ಬ್ರಹ್ಮ, ೧೧೭ ೧೧೦

ನಯ–ಎಂಬ ಹೆಸರುಗಳುಂಟು. ವಾದದ ಏಳು ಸ್ತರಗಳಲ್ಲಿಯೂ 'ಸ್ಯಾತ್' ಪದವಿರುವುದರಿಂದ ಸ್ಯಾದ್ವಾದ. 'ಸ್ಯಾತ್' ಎಂಬುದು 'ಕಥಂಚಿತ್' ಎಂಬ ಅರ್ಥದ ಅವ್ಯಯ, ಕ್ರಿಯಾಪದವಲ್ಲ. 'ಸ್ಯಾದಸ್ತಿ' ಎಂದರೆ ಕಥಂಚಿದಸ್ತಿ–ಒಂದಾನೊಂದು ಪ್ರಕಾರದ ವಿಶೇಷದಿಂದ ಇದೆ ಎಂದರ್ಥ. ಸ್ಯಾತ್ ಪದವು ಅನೇಕಾಂತತ್ವ ದ್ಯೋತಕ. ಅಂತವೆಂದರೆ ಧರ್ಮ. ಅನೇಕ ಅಂತಗಳನ್ನು (ಧರ್ಮಗಳನ್ನು) ಪ್ರತಿಪಾದಿಸುವ ವಾದ ಅನೇಕಾಂತವಾದ. ಭಂಗವೆಂದರೆ ಭೇದ ಅಥವಾ ಏಕಾಂತತ್ವದ ಭಂಗ. ಈ ನಯಪರಿಪಾಟಿಯಲ್ಲಿ ಸಪ್ತಭಂಗಗಳಿರುವುದರಿಂದ ಇದಕ್ಕೆ ಸಪ್ತಭಂಗೀನಯವೆಂದು ಹೆಸರು[1].

ವಿವಕ್ಷಾಭೇದದಿಂದ ಒಂದೇ ವಸ್ತುವಿನಲ್ಲಿ ಅನೇಕ ವಿರುದ್ಧ ಧರ್ಮಗಳು ಸಂಭವಿಸುತ್ತವೆ ಹೇಗೆಂದರೆ, ಚಿನ್ನದ ಗಟ್ಟಿಯನ್ನು ಮುರಿಸಿ ಕಟಿಕವನ್ನೂ ಕುಂಡಲವನ್ನೂ ಮಾಡಬಹುದು. ಚಿನ್ನದ ರೂಪದಿಂದ ಚಿನ್ನದ ಗಟ್ಟಿ, ಕಟಕ, ಕುಂಡಲ ಈ ಮೂರೂ ಒಂದೇ ಅದ್ದರಿಂದ ಇವನ್ನು ಚಿನ್ನ ಎಂದು ವ್ಯವಹರಿಸಬಹುದು. ಹೀಗೆ ಇವು ಅಭಿನ್ನವೆಂದು ಸಾಧಿಸುವುದು ದ್ರವ್ಯಾರ್ಥಿಕ ನಯ. ಲೋಕದಲ್ಲಿ ಈ ಮೂರಕ್ಕೂ ಚಿನ್ನವೆಂದೇ ಬೆಲೆಗಟ್ಟುತ್ತಾರೆ. 'ನನಗೆ ಕಟಕ ಬೇಕು–ಕುಂಡಲ ಬೇಡ'ಎನ್ನುವಾಗ ಇವು ಭಿನ್ನವೆಂದೂ ಗೊತ್ತಾಗುತ್ತದೆ. ಇವು ಭಿನ್ನವೆಂದು ಸಾಧಿಸುವುದು ಪರ್ಯಾಯಾರ್ಥಿಕ ನಯ. ಲೋಕದಲ್ಲಿ ಈ ಎರಡು ರೀತಿಗಳಿಂದಲೂ ವ್ಯವಹಾರ ನಡೆಯುತ್ತದೆ. ಈ ವಿರೋಧವು ಸಾಪೇಕ್ಷವಾದ್ದರಿಂದ ದೋಷವಲ್ಲ[2]. ಒಬ್ಬನೇ ಮನುಷ್ಯನು ಸಾಪೇಕ್ಷವಾಗಿ ಒಬ್ಬನಿಗೆ ತಂದೆ, ಇನ್ನೊಬ್ಬನಿಗೆ ಮಗ, ಮತ್ತೊಬ್ಬನಿಗೆ ಸೋದರ, ಮಗದೊಬ್ಬನಿಗೆ ಸೋದರಳಿಯ ಆಗಬಹುದು.

ಸ್ಯಾದ್ವಾದದ ವಿಷಯವಾಗಿ ಸಮಯಸಾರದಲ್ಲಿ ವ್ಯಾಖ್ಯಾನದಲ್ಲಿ ಅಮೃತಚಂದ್ರಸೂರಿಗಳು ಹೀಗೆ ಹೇಳಿದ್ದಾರೆ. "ಸ್ಯಾದ್ವಾದವು ಸಮಸ್ತವಸ್ತುತತ್ತ್ವಸಾಧಕವೂ ಮುಖ್ಯವೂ ಅಸ್ಖಲಿತವೂ ಆದ ಅರ್ಹತ್ ಸರ್ವಜ್ಞನ ಶಾಸನ. ಸರ್ವವೂ ಅನೇಕಾಂತಾತ್ಮಕವೆಂದು ಜಿನವಾಣಿಯು ಅನುಶಾಸನ ಮಾಡುತ್ತದೆ. ಏಕೆಂದರೆ, ಸಕಲಪದಾರ್ಥವೂ ಅನೇಕಾಂತವಾಗಿಯೇ ಇದೆ. ಈ ಶಾಸ್ತ್ರದಲ್ಲಿ ಆತ್ಮವಸ್ತು ಜ್ಞಾನಮಾತ್ರವೆಂದು ಉಪನಿರ್ದಿಷ್ಟವಾಗಿದ್ದರೂ ಅದಕ್ಕೆ ವಿರೋಧವೇನೂ ಇಲ್ಲ, ಜ್ಞಾನಮಾತ್ರವಾದ ಆತ್ಮವಸ್ತು ಸ್ವಯಂ ಅನೇಕಾಂತವಾದ್ದರಿಂದ.

---

೧. ಸಪ್ತಾನಾಂ ನಯಾನಾಂ ಸಮಾಹಾರಃ ಸಪ್ತಭಂಗೀ.

೨. ಅರ್ಪಣಾ ಭೇದಾದವಿರೋಧಃ ಪಿತೃಪುತ್ರಾದಿ ಸಂಬಂಧವತ್ ।

–ರಾಜವಾರ್ತಿಕ (೧–೬–೧೦)

'ಏಕಸ್ಯ ದೇವದತ್ತಸ್ಯ ಜಾತಿಕುಲರೂಪಸಂಜ್ಞಾವ್ಯಪದೇಶವಿಷ್ಟಸ್ಯ ಪಿತಾ, ಪುತ್ರೋ, ಭ್ರಾತಾ, ಭಾಗಿನೇಯ ಇತ್ಯೇವಂ ಪ್ರಕಾರಾಃ ಸಂಬಂಧಾಃ ಜನ್ಯಜನಕತ್ವಾದಿ ಶಕ್ತ್ಯರ್ಪಣಾಭೇದಾನ್ನ ವಿರುಧ್ಯಂತೇ, ನಹ್ಯೇಕಾಪೇಕ್ಷಯಾ ಪಿತೇತಿ ಸರ್ವಾಪೇಕ್ಷಯಾ ಪಿತಾ ಭವತಿ'

–ಅಲ್ಲಿಯೇ.

ಸ್ಯಾದ್ವಾದದ ಪ್ರಕಾರ ಯಾವ ವಸ್ತು 'ತತ್' ಆಗಿದೆಯೋ ಅದೇ 'ಅತತ್' ಯಾವುದು 'ಏಕ್' ವೋ ಅದೇ, 'ಅನೇಕ, ಯಾವುದು 'ಸತ್' ಆಗಿದೆಯೋ ಅದೇ 'ಅಸತ್' ಯಾವುದು 'ನಿತ್ಯ'ವೋ ಅದೇ 'ಅನಿತ್ಯ' ಈ ಒಂದು ವಸ್ತುವಿನಲ್ಲಿ ವಸ್ತುತ್ವನಿಷ್ಪಾದಕವಾದ ಪರಸ್ಪರ ವಿರುದ್ಧ ಶಕ್ತಿದ್ವಯ ಪ್ರಕಾಶನವೇ ಅನೇಕಾಂತ"

ಜೈನೇತರ ದರ್ಶನಗಳು ಸ್ಯಾದ್ವಾದವನ್ನು ಅಂಗೀಕರಿಸಿಲ್ಲ. ಅವು ಏಕಾಂತವಾದಿಗಳು. ಆಸ್ತಿಕದರ್ಶನಗಳಲ್ಲಿ ಸತ್, ಅಸತ್, ಅನಿರ್ವಚನೀಯ ಎಂಬ ಮೂರು ಮುಖ್ಯ ವಾದಗಳುಂಟು. ಜೈನದರ್ಶನವು ಈ ಮೂರು ಪ್ರಕಾರಗಳನ್ನಂಗೀಕರಿಸಿ ಮತ್ತೆ ನಾಲ್ಕು ಪ್ರಕಾರಗಳನ್ನು ಕಲ್ಪಿಸುತ್ತದೆ. ಹೇಗೆಂದರೆ ಸತ್ ಅಸತ್–ಇವುಗಳ ಕ್ರಮವಿವಕ್ಷೆಯಿಂದ ಸದಸತ್ ಎಂಬ ಇನ್ನೊಂದು ಪ್ರಕಾರ ಹೊರಡುತ್ತದೆ. ಅನಿರ್ವಚನೀಯವು ಸದಸತ್ತುಗಳ ಯುಗಪದ್ವಿವಕ್ಷೆಯಿಂದ ಆದುದ್ದು. ಇದೇ ಅವಕ್ತವ್ಯ. ಅವಕ್ತವ್ಯದೊಡನೆ ಸತ್, ಅಸತ್, ಸದಸತ್ ಪ್ರಕಾರಗಳನ್ನು ಕ್ರಮವಿವಕ್ಷೆಯಿಂದ ಹೇಳಿದಾಗ ಇನ್ನು ಮೂರು ಪ್ರಕಾರಗಳು ಹುಟ್ಟಿಸಪ್ತಭಗಗಳಾಗುತ್ತವೆ. ಯಾವುವೆಂದರೆ,

೧. ಸ್ಯಾದಸ್ತಿ
೨. ಸ್ಯಾನ್ನಾಸ್ತಿ
೩. ಸ್ಯಾದಸ್ತಿ ನಾಸ್ತಿ ಚ
೪. ಸ್ಯಾದವಕ್ತವ್ಯಃ
೫. ಸ್ಯಾದಸ್ತಿಚ ಅವಕ್ತವ್ಯಶ್ಚ
೬. ಸ್ಯಾನ್ನಾಸ್ತಿಚ ಅವಕ್ತವ್ಯಶ್ಚ
೭. ಸ್ಯಾದಸ್ತಿ ನಾಸ್ತಿಚ ಅವಕ್ತವ್ಯಶ್ಚ

ಇಲ್ಲಿ ಒಂದು ಶಂಕೆ ಬರಬಹುದು, ಸತ್. ಅಸತ್, ಸದಸತ್ ಇವನ್ನು ಯುಗಪದ್ ವಿವಕ್ಷೆಯಿಂದ ಅವಕ್ತವ್ಯದೊಡನೆ ಸೇರಿಸಿದಾಗ ೮ನೆಯ ಭಂಗವಾಗಿದೆ? ಎಂದು, ಇಲ್ಲ. ಅದು ಅವಕ್ತವ್ಯಃ ಅವಕ್ತವ್ಯಃ ಎಂದಾಗಿ 'ಸ್ಯಾದವಕ್ತವ್ಯಃ' ಎಂಬುದರಲ್ಲಿ ಸೇರಿಹೋಗುತ್ತದೆ.

ಒಂದೇ ವಸ್ತುವಿನಲ್ಲಿ 'ಅಸ್ತಿ, ನಾಸ್ತಿ' ಎಂಬ ವಿರುದ್ಧ ಪ್ರಕಾರಗಳು ಹೇಗೆ ಸಂಭವಿಸುತ್ತವೆಯೆಂದರೆ,

ಘಟವು ಅಸ್ತಿ ಎಂದು ಹೇಳುವಾಗ ಯಾವ ವಿಧದಿಂದ ಎಂಬ ಪ್ರಶ್ನೆ ಬರುತ್ತದೆ. ಸರ್ವತ್ರ, ಸರ್ವದಾ, ಸರ್ವಾತ್ಮನಾ ಎಂದು ಹೇಳಲಾಗುವುದಿಲ್ಲ. ಸರ್ವತ್ರ ಇರುವುದಾದರೆ ಸಮೀಪದಲ್ಲಿಯೂ ಇದೆಯೆಂದಾಗುತ್ತದೆ. ಆಗ 'ಘಟವಹಾನಯ' ಎಂದು ಯಾವನೂ ಹೇಳಲಾರ. ಸರ್ವತ್ರ ಇಲ್ಲವಾದರೆ, ಆಗಲೂ ಈ ಮಾತನ್ನು ಹೇಳಲಾರ ಇಲ್ಲದನ್ನು ಯಾವನೂ ತರಲಾರ. ಆದ್ದರಿಂದ ಘಟವು ದೂರದಲ್ಲಿದೆ, ಹತ್ತಿರದಲ್ಲಿಲ್ಲ ಎನ್ನಬೇಕು. ಈ ಪ್ರಕಾರ ಎರಡು ವಿರುದ್ಧ

ಧರ್ಮಗಳು ಒಂದರಲ್ಲಿ ವಿವಕ್ಷಾ ಭೇದದಿಂದ ಬರಬಹುದು. ಹಾಗೆಯೇ ಜೀವನು ನಿತ್ಯನೆಂದೂ ಅನಿತ್ಯನೆಂದೂ ಹೇಳಬಹುದು. ಜೀವನಿಗೆ ಮನುಷ್ಯಾದ್ಯನೇಕ ಶರೀರಗಳು ಬರುತ್ತವೆ. ಆಗ ಚೈತನ್ಯವು ಅನುಸ್ಯೂತವಾಗಿರುತ್ತದೆ ಎಂಬುದನ್ನು ಲಕ್ಷ್ಯದಲ್ಲಿಡಬೇಕು. ಆದ ಕಾರಣ ಚೈತನ್ಯಸ್ವರೂಪದಿಂದ ಜೀವನು ನಿತ್ಯ, ಮನುಷ್ಯ ಶರೀರ ವಿಶಿಷ್ಟತೆಯಿಂದ ಅನಿತ್ಯ ಎನ್ನಬಹುದು.

## ಎರಡು ಉದಾಹರಣೆಗಳು

೧

೧. ಸ್ಯಾದಸ್ತಿ—ಘಟಃ ಪ್ರಾಪ್ಯತ್ವೇನ ಅಸ್ತಿ (ಸತ್)

೨. ಸ್ಯಾನ್ನಾಸ್ತಿ—ಘಟಃ ಅಪ್ರಾಪ್ಯತ್ವೇನ ನಾಸ್ತಿ (ಅಸತ್)

೩. ಸ್ಯಾದಸ್ತಿ ನಾಸ್ತಿಚ-ಘಟಃ ಪ್ರಾಪ್ಯತ್ವೇನ ಅಸ್ತಿ ಅಪ್ರಾಪ್ಯತ್ವೇನ ನಾಸ್ತಿ (ಸತ್+ ಅಸತ್) (ಕ್ರಮೇಣ ವಿವಕ್ಷಾ)

೪. ಸ್ಯಾದವಕ್ತವ್ಯ :-ಘಟಃ ಪ್ರಾಪ್ಯತ್ವಾಪ್ರಾಪ್ಯತ್ವಾಭ್ಯಾಂ ಅವಕ್ತವ್ಯಃ (ಯುಗಪತ್)

ಈ ನಾಲ್ಕನೆಯದು ಮೊದಲನೇ ಮೂರು ಭಂಗಗಳೊಡನೆ ಸೇರಿದಾಗ ಇನ್ನು ಮೂರು ಭಂಗಗಳ ನಿಷ್ಪನ್ನವಾಗುತ್ತವೆ.

೫. ಸ್ಯಾದಸ್ತಿ ಅವಕ್ತವ್ಯಶ್ಚ (೧ ಮತ್ತು ೪ನೆಯ ಭಂಗಗಳು ಸೇರಿವೆ.)

೬. ಸ್ಯಾನ್ನಾಸ್ತಿ ಅವಕ್ತವ್ಯಶ್ಚ (೨ ಮತ್ತು ೪ನೆಯ ಭಂಗಗಳು ಸೇರಿವೆ).

೭. ಸ್ಯಾದಸ್ತಿ ನಾಸ್ತಿ ಚ ಅವಕ್ತವ್ಯಶ್ಚ (೩ ಮತ್ತು ೪ ನೆಯ ಭಂಗಗಳು ಸೇರಿವೆ)

ಸತ್-ಅಸತ್ ಧರ್ಮಗಳನ್ನು ಹೇಳುವಾಗ ಸಪ್ತ ಭಂಗಗಳಲ್ಲಿಯೂ ಅಸ್ತಿ-ನಾಸ್ತಿ ಶಬ್ದಗಳನ್ನು ಬಳಸುತ್ತಾರೆ. ಉಳಿದ ಧರ್ಮಗಳನ್ನು ಹೇಳುವಾಗ ಈ ಶಬ್ದಗಳು ಬೇಕಿಲ್ಲ.

೨

೧. ಸ್ಯಾನ್ನಿತ್ಯಃ-ಆತ್ಮಾ ಕೇವಲ ಚೈತನ್ಯತ್ವೇನ ನಿತ್ಯಃ

೨. ಸ್ಯಾದನಿತ್ಯಃ—ಮನುಷ್ಯಶರೀರಾವಚ್ಛಿನ್ನತ್ವೇನ ಅನಿತ್ಯಃ

೩. ಸ್ಯಾನ್ನಿತ್ಯಃ ಅನಿತ್ಯಶ್ಚ—(ಕ್ರಮವಾಗಿ ಮೇಲಿನ ಎರಡು ಭಂಗಗಳಿವೆ)

೪. ಸ್ಯಾದವಕ್ತವ್ಯಃ—ಕೇವಲ ಚೈತನ್ಯತ್ವಮನುಷ್ಯಶರೀರಾವಚ್ಛಿನ್ನತ್ವಾಭ್ಯಾಂಯುಗಪದವಕ್ತವ್ಯಃ

೫. ಸ್ಯಾನ್ನಿತ್ಯಃ ಅವಕ್ತವ್ಯಶ್ಚ (೧+೪)
೬. ಸ್ಯಾದನಿತ್ಯಃ ಅವಕ್ತವ್ಯಶ್ಚ (೨+೪)
೭. ಸ್ಯಾನ್ನಿತ್ಯಃ ಅನಿತ್ಯಶ್ಚ ಅವಕ್ತವ್ಯಶ್ಚ (೩+೪) } ಕ್ರಮವಿವಕ್ಷಾ

ಜೈನಸಿದ್ಧಾಂತವು ಸ್ಯಾದ್ವಾದವನ್ನೇಕೆ ಅಂಗೀಕರಿಸಿದೆ ಎಂಬ ಪ್ರಶ್ನೆ ಬರುತ್ತದೆ. ಇದಕ್ಕೆ ಉತ್ತರವಾಗಿ ಸಮಯಸಾರವ್ಯಾಖ್ಯಾನದ ಪರಿಶಿಷ್ಟ ಭಾಗದಲ್ಲಿ ಹದಿನಾಲ್ಕು ಪ್ರಯೋಜನಗಳನ್ನು ವಿವರಿಸಲಾಗಿದೆ. ವಸ್ತುವಿನ ನಿಜತತ್ತ್ವವನ್ನು 'ಈ ಧರ್ಮ ಇದೆ. ಈ ಧರ್ಮ ಇಲ್ಲ'–ಎಂಬ ಅನ್ವಯ ವ್ಯತಿರೇಕಗಳಿಂದಲೇ ಪರೀಕ್ಷಿಸಿ ತಿಳಿಯಬೇಕು, ಸರ್ವವಿಧದಲ್ಲಿಯೂ ವಸ್ತುವನ್ನು ಪರೀಕ್ಷೆಗೆ ಒಳಪಡಿಸುವುದು ಸ್ಯಾದ್ವಾದದ ಉದ್ದೇಶ. ಉದಾಹರಣೆಗೆ ಎರಡು ಪ್ರಯೋಜನ ಗಳನ್ನು ಇಲ್ಲಿ ತಿಳಿಸಿದೆ.

೧. ಆತ್ಮಜ್ಞಾನರೂಪತ್ವೇನ ಅಸ್ತಿ.

ಜ್ಞಾನರೂಪನಾದ ಜೀವಾತ್ಮನು ಅನಾದಿ ಸಂಸಾರದ ದೆಸೆಯಿಂದ ಜ್ಞೇಯವಸ್ತುವನ್ನು ಸ್ವಸ್ವರೂಪವೆಂದು ತಿಳಿದುಕೊಂಡಿದ್ದಾನೆ. ಸ್ಯಾದ್ವಾದವು (೧ನೆಯ ಭಂಗ) ಅವನನ್ನು ಜ್ಞಾನ ರೂಪದಲ್ಲಿಯೇ ನಿಲ್ಲಿಸಿ ಅವನು ನಾಶವಾಗಲು ಅವಕಾಶಕೊಡುವುದಿಲ್ಲ.

೨. ಆತ್ಮಾಜ್ಞೇಯತ್ವೇನ ನಾಸ್ತಿ.

'ಸರ್ವಂ ಖಲ್ವಿದಮಾತ್ಮಾ' ಇತ್ಯಾದಿ ವಚನವನ್ನು ಕೇಳಿ ಜೀವನು ಜ್ಞೇಯವೆಲ್ಲವೂ ನಾನೇ ಎಂದು ಕೊಂಡು ನಾಶವಾಗುತ್ತಿದ್ದಾನೆ. ಈ ಎರಡನೆಯ ಭಂಗವು ಅವನು ಜ್ಞೇಯವಲ್ಲವೆಂದೂ ಜ್ಞಾನಸ್ವರೂಪನಾದ ಆತನು ಜ್ಞೇಯವಾದ ವಿಶ್ವಕ್ಕಿಂತ ಭಿನ್ನನೆಂದೂ ತಿಳಿಸಿ ರಕ್ಷಿಸುತ್ತದೆ.

ಇದುವರೆಗೆ ಜೈನಸಿದ್ಧಾಂತದ ರೂಪರೇಖೆಗಳನ್ನೂ ಅದಕ್ಕೆ ಪೋಷಕವಾಗಿ ಬೆಳೆದ ಜೈನತರ್ಕ ಶಾಸ್ತ್ರದ ಪ್ರಮಾಣ ಪ್ರಮೇಯಗಳನ್ನು ಸಂಕ್ಷೇಪವಾಗಿ ಗುರುತಿಸಲಾಯಿತು. ಈ ಸಿದ್ಧಾಂತದ ಧಾರ್ಮಿಕಗ್ರಂಥಗಳು ವಿಶೇಷವಾಗಿ ಪ್ರಾಕೃತ, ಅರ್ಧಮಾಗಧೀ–ಭಾಷೆಗಳಲ್ಲಿವೆ. ತರ್ಕ ಶಾಸ್ತ್ರವು ಸಂಸ್ಕೃತ ಭಾಷೆಯಲ್ಲಿಯೇ ವಿಪುಲವಾಗಿ ಬೆಳೆದಿದೆ. ಉಮಾಸ್ವಾತಿಗಳ (ಕ್ರಿ.ಶ.ಸಂ. ೩೦೦) ತತ್ತ್ವಾರ್ಥಸೂತ್ರವು ಈ ತರ್ಕಶಾಸ್ತ್ರಕ್ಕೆ ಆಕರ ಗ್ರಂಥವಾಗಿದೆ. ಇದರ ಮೇಲೆ ದೇವನಂದಿ ಪೂಜ್ಯಪಾದ ಕೃತವಾದ (ಕ್ರಿ.ಶ.ಸಂ. ೫೦೦) ಸರ್ವಾರ್ಥಸಿದ್ಧಿ, ಅಕಲಂಕಾಚಾರ್ಯರ ತತ್ತ್ವಾರ್ಥ ರಾಜವಾರ್ತಿಕ (ಕ್ರಿ.ಶ.ಸಂ. ೭೦೦), ವಿದ್ಯಾನಂದಿಕೃತ ತತ್ತ್ವಾರ್ಥಶ್ಲೋಕವಾರ್ತಿಕ (ಕ್ರಿ.ಶ.ಸಂ. ೯೦೦)–ಎಂಬ ಮೂರು ವ್ಯಾಖ್ಯಾನಗಳು ಪ್ರಸಿದ್ಧವಾಗಿವೆ. ವಿದ್ಯಾನಂದಿ, ಸಮಂತಭದ್ರ,

ಸಿದ್ಧಸೇನ, ಅನಂತಕೀರ್ತಿ, ಹರಿಭದ್ರ, ಹೇಮಚಂದ್ರ, ವಾದಿರಾಜ–ಮೊದಲಾದ ವಿದ್ವಾಂಸರು ಶ್ರೇಷ್ಠವಾದ ಗ್ರಂಥಗಳನ್ನು ರಚಿಸಿ ಜೈನದರ್ಶನಕ್ಕೆ ಅಮೂಲ್ಯವಾದ ಕಾಣಿಕೆಗಳನ್ನು ಇತ್ತಿದ್ದಾರೆ. ಶ್ರೀಕುಂದಕುಂದಾಚಾರ್ಯರ ಗ್ರಂಥಗಳೆಲ್ಲವೂ ಪ್ರಾಕೃತಭಾಷೆಯಲ್ಲಿದ್ದರೂ ಜೈನದರ್ಶನವನ್ನು ಭದ್ರವಾದ ತಳಹದಿಯ ಮೇಲೆ ನಿಲ್ಲಿಸಿ ಮುಂದಿನ ವಿದ್ವಾಂಸರಿಗೆ ಸ್ಫೂರ್ತಿಯನ್ನು ನೀಡಿವೆ. ಷಟ್‌ಖಂಡಾಗಮವು ಈ ಶಾಸ್ತ್ರದಲ್ಲಿ ಮೊದಲನೆಯ ಗ್ರಂಥ. ಜೈನಸಿದ್ಧಾಂತದಲ್ಲಿ ಪ್ರಧಾನವಾದ ಕೆಲವು ಗ್ರಂಥಗಳನ್ನೂ ಗ್ರಂಥಕರ್ತರನ್ನೂ ಮುಂದೆ ಪರಿಚಯ ಮಾಡಿಕೊಡಲಾಗಿದೆ.

### ೧. ಪುಷ್ಪದಂತ, ಬಾಹುಬಲಿ (ಕ್ರಿ.ಶ.ಸು. ೩೦೦)

ಗಿರಿನಗರದ ಚಂದ್ರಗುಹೆಯಲ್ಲಿದ್ದ ಆಚಾರ್ಯ-ಧರಸೇನರಿಗೆ ದ್ವಿತೀಯ ಪೂರ್ವದ ವಿಷಯಗಳು ಚೆನ್ನಾಗಿ ತಿಳಿದಿದ್ದವು. ಅವರ ಶಿಷ್ಯರೇ ಪುಷ್ಪದಂತ ಮತ್ತು ಬಾಹುಬಲಿಗಳು. ಇವರು ತಮ್ಮ ಗುರುಗಳ ಉಪದೇಶವನ್ನನುಸರಿಸಿ ಷಟ್‌ಖಂಡಾಗಮ ಎಂಬ ಗ್ರಂಥವನ್ನು ರಚಿಸಿದರು. ಮೊದಲನೆಯ ಐದು ಖಂಡಗಳನ್ನು ಪುಷ್ಪದಂತಾಚಾರ್ಯರೂ, ಆರನೆಯ ಖಂಡವನ್ನು ಬಾಹುಬಲಿಗಳೂ ರಚಿಸಿದ್ದಾರೆ. ಇವು ಪ್ರಾಕೃತ ಭಾಷೆಯಲ್ಲಿ ಸೂತ್ರರೂಪದಲ್ಲಿ ರಚಿತವಾಗಿವೆ. ಜೈನಸಿದ್ಧಾಂತವಲ್ಲಿ ಉಪಲಬ್ಧವಾಗುವ ಪ್ರಥಮ ಗ್ರಂಥ ಇದೇ.

ಈ ಗ್ರಂಥದಲ್ಲಿ ಜೀವಸ್ಥಾನ, ಕ್ಷುಲ್ಲಕಬಂಧ, ಬಂಧಸ್ವಾಮಿತ್ವವಿಚಯ, ವೇದನಾಖಂಡ, ವರ್ಗಣಾಖಂಡ, ಮಹಾಬಂಧ-ಎಂಬ ಆರು ಖಂಡಗಳಿವೆ. ಕ್ರಿ.ಶ. ೯ನೆಯ ಶತಮಾನದ ಆದಿ ಭಾಗದಲ್ಲಿದ್ದ ವೀರಸೇನಾಚಾರ್ಯರು ಈ ಗ್ರಂಥಕ್ಕೆ ಧವಳಾ ಎಂಬ ಟೀಕೆಯನ್ನು ಬರೆದಿದ್ದಾರೆ. ಈ ಟೀಕೆಯು ಶೌರಸೇನೀ ಭಾಷೆಯಲ್ಲಿ ಗದ್ಯರೂಪದಲ್ಲಿದೆ. ಅಲ್ಲಲ್ಲಿ ಪ್ರಾಚೀನ ಗಾಥೆಗಳನ್ನು ಉದ್ಧರಿಸಲಾಗಿದೆ. ಅಲ್ಲಲ್ಲಿ ಸಂಸ್ಕೃತದಲ್ಲಿಯೂ ವ್ಯಾಖ್ಯಾನವಿದೆ. ಹೀಗೆ ಧವಳಾ ವ್ಯಾಖ್ಯಾನವು ಮಣಿಪ್ರವಾಳ ಶೈಲಿಯಲ್ಲಿ ಸಂಸ್ಕೃತ-ಪ್ರಾಕೃತ ಭಾಷೆಗಳ ಸಂಮಿಶ್ರಣವಾಗಿರುವುದೊಂದು ವಿಶೇಷ. ಆರನೆಯ ಖಂಡದ ವ್ಯಾಖ್ಯಾನವು ವಿಸ್ತೃತವಾಗಿದ್ದು ಮಹಾಧವಳಾ ಎಂಬ ಹೆಸರನ್ನು ಪಡೆದಿದೆ.

ವೀರಸೇನಾಚಾರ್ಯರು ಮಣಿಪ್ರವಾಳ ಶೈಲಿಯಲ್ಲಿ ಯತಿ ವೃಷಭಾಚಾರ್ಯರ ವೃತ್ತಿಸೂತ್ರದ ಮೇಲೆ ‘ಜಯಧವಳಾ’ ಎಂಬ ಟೀಕೆಯನ್ನು ಬರೆದಿದ್ದಾರೆ. ಇದು ಅಪೂರ್ಣವಾದ್ದರಿಂದ ಇವರ ಶಿಷ್ಯರಾದ ಜಿನಸೇನಾಚಾರ್ಯರು ವ್ಯಾಖ್ಯಾನವನ್ನು ಪೂರ್ಣಗೊಳಿಸಿದ್ದಾರೆ. ದವಳಾ, ಮಹಾಧವಳಾ, ಜಯಧವಳಾ–ಇವು ಮೂರು ಜೈನಸಿದ್ಧಾಂತದಲ್ಲಿ ಸಂಪ್ರಸಿದ್ಧ ಗ್ರಂಥಗಳು.

### ೨. ಕುಂದಕುಂದಾಚಾರ್ಯ (ಕ್ರಿ.ಶ.ಸು. ೪೦೦)

ಪ್ರಾಕೃತ ಪಾಹುಡಗಳ ರಚನಾಪರಂಪರೆಯಲ್ಲಿ ಕುಂದಕುಂದಾಚಾರ್ಯರ ಹೆಸರು ವಿಖ್ಯಾತವಾದುದು. ಇವರಿಗೆ ಸಂದ ಕೀರ್ತಿ, ಗೌರವಗಳು ಜೈನಸಿದ್ಧಾಂತದ ಇನ್ನಾವ

ಗ್ರಂಥಕಾರರಿಗೂ ಲಭಿಸಿಲ್ಲ. ಇವರನ್ನು ಕೊಂಡಕುಂಡ ಪುರನಿವಾಸಿಗಳೆಂದು ಕೆಲವೆಡೆ ಹೇಳಿದೆ. ಗುಂತಕಲ್ ಸಮೀಪದಲ್ಲಿರುವ ಕೊಂಡಕುಂಡ ಎಂಬ ಗ್ರಾಮವು ಅವರ ಜನ್ಮಸ್ಥಳವೆಂದು ಊಹಿಸಲಾಗಿದೆ. ಇವರು ಪ್ರಾಕೃತದಲ್ಲಿ ವಿಚಾರಪೂರ್ಣವಾದ ಹಲವಾರು ಗ್ರಂಥಗಳನ್ನು ರಚಿಸಿದ್ದಾರೆ. ಅವುಗಳಲ್ಲಿ ಸಮಯಸಾರ, ಪ್ರವಚನಸಾರ. ಪಂಚಾಸ್ತಿಕಾಯ, ನಿಯಮಸಾರಗಳು ದಾರ್ಶನಿಕ ವಿಷಯಗಳನ್ನು ಪ್ರತಿಪಾದಿಸುತ್ತವೆ. ಇವುಗಳಿಗೆ ಅಮೃತಚಂದ್ರಸೂರಿಗಳು ಸಂಸ್ಕೃತದಲ್ಲಿ ವ್ಯಾಖ್ಯಾನಗಳನ್ನು ಬರೆದಿದ್ದಾರೆ. ಆ ವಿಷಯವನ್ನು ಮುಂದೆ ಪರಿಚಯ ಮಾಡಿಕೊಡಲಾಗಿದೆ.

## ೩. ಉಮಾಸ್ವಾಮಿ (ಉಮಾಸ್ವಾತಿ) (ಕ್ರಿ.ಶ. ಸು. ೪೦೦)

ಇವರು ಕುಂದಕುಂದಾಚಾರ್ಯರ ಶಿಷ್ಯರು. ಇವರು ರಚಿಸಿದ ತತ್ತ್ವಾರ್ಥ ಸೂತ್ರವು ಜೈನದರ್ಶನದಲ್ಲಿ ಪ್ರಥಮತಃ ಉಪಲಬ್ಧವಾಗುವ ಸ್ವತಂತ್ರ ಗ್ರಂಥ. ಶ್ರವಣಬೆಳಗೊಳದ ಶಿಲಾಲೇಖ ೧೦೮ರಲ್ಲಿ ಈ ಆಚಾರ್ಯರ ಉಲ್ಲೇಖವಿದೆ. ಇವರಿಗೆ ಗೃಧ್ರಪಿಂಛಾಚಾರ್ಯ ಎಂಬ ಇನ್ನೊಂದು ಹೆಸರಿತ್ತು.

ತತ್ತ್ವಾರ್ಥಸೂತ್ರದಲ್ಲಿ ಹತ್ತು ಅಧ್ಯಾಯಗಳಿದ್ದು ಒಟ್ಟು ೩೫೭ ಸೂತ್ರಗಳಿವೆ. ಪ್ರಥಮಾಧ್ಯಾಯದಲ್ಲಿ ಸಮ್ಯಗ್ ದರ್ಶನಾದಿ ರತ್ನತ್ರಯಗಳು, ಪ್ರಮಾಣ, ನಯ, ಮತಿಶ್ರುತಾದಿ ಜ್ಞಾನಭೇದ-ಇವನ್ನು ನಿರೂಪಿಸಲಾಗಿದೆ. ದ್ವಿತೀಯಾಧ್ಯಾಯದಲ್ಲಿ ಜೀವನ ಔಪಶಮಿಕಾದಿ ಭಾವಗಳು, ಜೀವದ ಶರೀರಭೇದಗಳು ಪ್ರತಿಪಾದಿತವಾಗಿವೆ. ತೃತೀಯ ಚತುರ್ಥಾಧ್ಯಾಯ ಗಳಲ್ಲಿ ವಿಭಿನ್ನ ಲೋಕಗಳ ವರ್ಣನೆಯುಂಟು. ಪಂಚಮಾಧ್ಯಾಯದಲ್ಲಿ ಅಜೀವ ಪದಾರ್ಥಗಳ ವಿವೇಚನೆ ಇದೆ. ಆರರಲ್ಲಿ ಪುಣ್ಯ, ಪಾಪ, ಆಸ್ರವಗಳ ವಿವರಣೆಯೂ, ಏಳರಲ್ಲಿ ಅಹಿಂಸಾದಿ ವ್ರತನಿರೂಪಣೆಯೂ, ಎಂಟರಲ್ಲಿ ಬಂಧಕಾರಣ, ಜ್ಞಾನಾವರಣ, ನಿರ್ಜರಾದಿಗಳ ಸ್ವರೂಪವೂ, ಒಂಬತ್ತರಲ್ಲಿ ನಿರ್ಜರಾ, ಪರೀಷಹಾದಿಗಳೂ ಇವೆ. ಹತ್ತನೆಯ ಅಧ್ಯಾಯದಲ್ಲಿ ಮೋಕ್ಷಸ್ವರೂಪವನ್ನು ವಿವರಿಸಿದೆ.

ಸೂತ್ರಗಳು ಸಾಮಾನ್ಯವಾಗಿ ಕ್ಲಿಷ್ಟವಾಗಿದ್ದು ವ್ಯಾಖ್ಯಾನ ಸಾಪೇಕ್ಷವಾಗಿವೆ. ಉದಾಹರಣೆಗೆ ಎರಡು ಸೂತ್ರಗಳನ್ನು ಇಲ್ಲಿ ಬರೆಯ ಲಾಗಿದೆ.

೧. ಸದಸತೋ ರವಿಶೇಷಾತ್ ಯದೃಚ್ಛೋಪಲಬ್ಧೇರುನ್ಮತ್ತವತ್ (೧-೩೨)

೨. ಏಕಾದಯೋ ಭಾಜ್ಯಾ ಯುಗಪದೇಕಸ್ಮಿನ್ ಏಕೋನವಿಂಶತೇಃ (೭-೧೭)

ಈ ಸೂತ್ರಗಳ ಮೇಲೆ ವಿದ್ಯಾನಂದಿ ಪೂಜ್ಯಪಾದಕೃತ ಸರ್ವಾರ್ಥಸಿದ್ಧಿ, ಅಕಲಂಕದೇವ ಕೃತ ತತ್ತ್ವಾರ್ಥರಾಜವಾರ್ತಿಕ, ವಿದ್ಯಾನಂದಿಕೃತ ತತ್ತ್ವಾರ್ಥ ಶ್ಲೋಕವಾರ್ತಿಕ–ಮೊದಲಾದ ವ್ಯಾಖ್ಯಾನಗಳಿವೆ.

## ೪. ಮಲ್ಲವಾದಿ (ಕ್ರಿ. ಶ. ಸು. ೫೦೦)

ಈತನು ಬೌದ್ಧಾಚಾರ್ಯನಾದ ದಿಙ್ನಾಗನನ್ನು (ಕ್ರಿ.ಶ. ೪೫೦) ಸ್ಮರಿಸಿದ್ದಾನೆ. ಇವನ ಗ್ರಂಥ ದ್ವಾದಶಾರನಯಚಕ್ರ. ಇದರಲ್ಲಿ ವಿಶೇಷವಾಗಿ ವೈಶೇಷಿಕ ಮತವನ್ನು ದೂಷಿಸಲಾಗಿದೆ. ಮಲ್ಲವಾದಿಯು 'ಕಟಂದಿಕಾರ' ಎಂಬ ಹೆಸರಿನಿಂದ ವೈಶೇಷಿಕ ಮತವನ್ನು ಉಲ್ಲೇಖಿಸಿದ್ದಾನೆ. ಈ ಸಂದರ್ಭದಲ್ಲಿ ಮುರಾರಿಯ ಅನರ್ಘರಾಘವನಾಟಕದಲ್ಲಿ ರಾವಣನು ಹೇಳುವ ಈ ಮಾತು ಗಮನಾರ್ಹ—

ರಾವಣ:—ಭೋ ಭೋ ಲಕ್ಷ್ಮಣ, ವೈಶೇಷಿಕಕಟಂದೀಪಂಡಿತೋ ಜಗದ್ವಿಜಯಮಾನಃ ಪರ್ಯಟಾಮಿ, ಕ್ವಾಸೌ ರಾಮಃ? ತೇನ ಸಹ ವಿವದಿಷ್ಯೇ

ಅನರ್ಘರಾಘವ, ೫ನೆಯ ಅಂಕ

ಜೈನಸಂಮತವಾದ ಸ್ಯಾದ್ವಾದದ ವಿವೇಚನೆ ಈ ದ್ವಾದಶಾರನಯಚಕ್ರದ ಉದ್ದೇಶವಾಗಿದೆ. ನೈಗಮ, ಋಜುಸೂತ್ರ—ಮುಂತಾದ ಏಳುನಯಗಳಲ್ಲಿ ಒಂದೊಂದರಲ್ಲಿಯೂ ಒಂದುನೂರು ಅಂತರ್ನಯಗಳಂತೆ ಒಟ್ಟು ೭೦೦ನೆಯ ಪ್ರಕಾರಗಳಿದ್ದವಂತೆ. ಮಂದಮತಿಗಳಿಗೆ ಆ ಪ್ರಕಾರಗಳು ತಿಳಿಯಮೆಂದು ಸುಲಭಗೊಳಿಸಲು ಈ ಗ್ರಂಥವನ್ನು ತಾನು ರಚಿಸಿರುವುದಾಗಿ ಮಲ್ಲವಾದಿ ಹೇಳುತ್ತಾನೆ. ದ್ರವ್ಯಾರ್ಥಿಕನಯಕ್ಕೆ ಆರು, ಪರ್ಯಾಯಾರ್ಥಿಕನಯಕ್ಕೆ ಆರು–ಹೀಗೆ ದ್ವಾದಶ ಪ್ರಭೇದಗಳು. ವಿಧಿನಿಯಮಗಳ ಜೋಡಣೆಯಿಂದ ಈ ಹನ್ನೆರಡು ಭಂಗಗಳಾಗುತ್ತವೆ. ಅವು ಯಾವುವೆಂದರೆ, ವಿಧಿ, ವಿಧಿವಿಧಿ, ವಿಧ್ಯುಭಯ, ವಿಧಿನಿಯಮ, ಉಭಯ, ಉಭಯವಿಧಿ, ಉಭಯೋಭಯ, ಉಭಯನಿಯಮ, ನಿಯಮ, ನಿಯಮವಿಧಿ, ನಿಯಮೋಭಯ ಮತ್ತು ನಿಯಮನಿಯಮ. ಈ ಭಂಗಗಳಿಗೆ ಅನುಸಾರವಾಗಿ ದರ್ಶನಾಂತರಗಳು ವಿಚಾರ ಮಾಡುವುದಿಲ್ಲವಾದ್ದರಿಂದ ಅವು ಅಸತ್ಯವೆಂದು ಹೇಳಲಾಗಿದೆ.

ವಿಧಿನಿಯಮ ಭಂಗವೃತ್ತಿ ವ್ಯತಿರಿಕ್ತತ್ವಾದನರ್ಥಕವಚೋವತ್ ।<br>
ಜೈನಾದನ್ಯಚ್ಛಾಸನಮನೃತಂ ಭವತೀತಿ ವಿಜ್ಞೇಯಂ ॥

ಕ್ರಿ. ಶ. ೧೧ನೆಯ ಶತಕದಲ್ಲಿದ್ದಿರಬಹುದಾದ ಸಿಂಹಸೂರಿಗಣಿಯೆಂಬವನು ಈ ಕೃತಿಗೆ ವ್ಯಾಖ್ಯೆಯನ್ನು ಬರೆದಿದ್ದಾನೆ.

## ೫. ಸಮಂತಭದ್ರ (ಕ್ರಿ. ಶ. ಸು. ೫೦೦)

ಇವರು ಕಾಂಚಿಯಲ್ಲಿದ್ದು ಆಮೇಲೆ ಕರಹಾಟ (ಕರ್ಣಾಟ?) ದೇಶಕ್ಕೆ ಬಂದರೆಂದು ತಿಳಿದು ಬರುತ್ತದೆ. ಶ್ರವಣಬೆಳಗೊಳದ ಶಿಲಾಲೇಖದಲ್ಲಿ (ನಂ. ೬೭) ಈ ಆಚಾರ್ಯರ ಉಲ್ಲೇಖ ವಿದ್ದು, ಅವರು ಒಬ್ಬ ರಾಜನಿಗೆ ಈ ಶ್ಲೋಕವನ್ನು ಹೇಳಿದರೆಂದು ತಿಳಿಸಲಾಗಿದೆ—

ಪೂರ್ವಂಪಾಟಲಿಪುತ್ರನಾಮನಗರೇ ಭೇರೀ ಮಯಾ ತಾಡಿತಾ
ಪಶ್ಚಾನ್ಮಾಲವಸಿಂಧುಠಕ್ಕವಿಷಯೇ ಕಾಂಚೀಪುರೇ ವೈದಿಶೇ ।
ಪ್ರಾಪ್ತೋಽಹಂ ಕರಹಾಟಕಂ ಬಹುಭಟಂ ವಿದ್ಯೋತ್ಕಟಂ ಸಂಕಟಂ
ವಾದಾರ್ಥೀ ವಿಚರಾಮ್ಯಹಂ ನರಪತೇ ಶಾರ್ದೂಲವಿಕ್ರೀಡಿತಂ ॥

ಸಮಂತಭದ್ರಾಚಾರ್ಯರು ಬರೆದ ನ್ಯಾಯ ವಿಷಯಕ್ಕೆ ಸಂಬಂಧಿಸಿದ ಗ್ರಂಥಗಳಲ್ಲಿ ಆಪ್ತ ಮೀಮಾಂಸಾ, ಯುಕ್ತ್ಯನು ಶಾಸನ-ಎಂಬ ಎರಡು ಮಾತ್ರ ಉಪಲಬ್ಧವಾಗಿವೆ. ಇವೆರಡೂ ಸ್ತುತಿರೂಪವಾಗಿದ್ದು ಸಾ ದ್ವಾದವನ್ನಾಶ್ರಯಿಸಿ ಅನೇಕಾಂತವಾದವನ್ನು ಸ್ಥಾಪಿಸುತ್ತವೆ. ತಾರ್ಕಿಕಯುಕ್ತಿಗಳಿಂದ ಏಕಾಂತವಾದವನ್ನು ಖಂಡಿಸುತ್ತವೆ. ಆಪ್ತಮೀಮಾಂಸೆಗೆ ಅಕಲಂಕ ದೇವಕೃತವಾದ ಅಷ್ಟಶತಿ ಎಂಬ ಪ್ರೌಢವಾದ ಟೀಕೆ ಇದೆ. ಅದರ ಮೇಲೆ ವಿದ್ಯಾನಂದಿ ಎಂಬ ಆಚಾರ್ಯರು ಅಷ್ಟಸಹಸ್ರಿ ಎಂಬ ಉದ್ದಾಮನ್ಯಾಯಶೈಲಿಯ ವ್ಯಾಖ್ಯಾನವನ್ನು ಬರೆದಿದ್ದಾರೆ. ಯುಕ್ತ್ಯನುಶಾಸನದ ಮೇಲೂ ವಿದ್ಯಾನಂದಿಗಳ ಟೀಕೆ ಇದೆ.

## ೬. ಪೂಜ್ಯಪಾದ (ಕ್ರಿ. ಶ. ಸು. ೬೦೦)

ಪೂಜ್ಯಪಾದರಿಗೆ ದೇವನಂದಿ ಎಂಬ ಹೆಸರಿತ್ತು. ಪ್ರಸಿದ್ಧವಾದ ಜೈನೇಂದ್ರ ವ್ಯಾಕರಣ ವನ್ನು ರಚಿಸಿದವರು ಇವರೇ ಉಮಾಸ್ವಾತಿಗಳ ತತ್ತ್ವಾರ್ಥಸೂತ್ರಕ್ಕೆ ಸರ್ವಾರ್ಥಸಿದ್ಧಿ ಎಂಬ ಪ್ರಸಿದ್ಧವಾದ ವ್ಯಾಖ್ಯಾನವನ್ನು ರಚಿಸಿದ್ದಾರೆ. ಇದು ಅತಿವಿಸ್ತೃತವೂ ಸಂಕ್ಷಿಪ್ತವೂ ಆಗದೆ ಮಧ್ಯಮಾರ್ಗವನ್ನವಲಂಬಿಸಿದೆ.

ಮೋಕ್ಷಮಾರ್ಗಸ್ಯ ನೇತಾರಂ ಭೇತ್ತಾರಂ ಕರ್ಮಭೂಭೃತಾಂ ।
ಜ್ಞಾತಾರಂ ವಿಶ್ವತತ್ತ್ವಾನಾಂ ವಂದೇ ತದ್ಗುಣಲಬ್ಧಯೇ ॥

ಎಂಬುದು ಸರ್ವಾರ್ಥಸಿದ್ಧಿಯ ಮಂಗಳ ಶ್ಲೋಕ ವ್ಯಾಖ್ಯಾನ ಶೈಲಿಗೆ ಒಂದು ಉದಾಹರಣೆ—

ತತ್ಪ್ರಮಾಣೇ (ತ ಸೂ, ೧-೧೦)

ತದ್ವಚನಂ ಕಿಮರ್ಥಮ್ ? ಪ್ರಮಾಣಾಂತರ ಪರಿಕಲ್ಪನಾನಿವೃತ್ತ್ಯರ್ಥಮ್. ಸಂನಿಕರ್ಷಃ ಪ್ರಮಾಣಂ, ಇಂದ್ರಿಯಂ ಪ್ರಮಾಣಂ–ಇತಿ ಕೇಚಿತ್ ಕಲ್ಪಯಂತಿ, ತನ್ನಿವೃತ್ತ್ಯರ್ಥಂ ತದಿತ್ಯುಚ್ಯತೇ ।. ತದೇವ ಮತ್ಯಾದಿ ಪ್ರಮಾಣಂ ನಾನ್ಯದಿತಿ । ಅಥ ಸಂನಿಕರ್ಷೇ ಪ್ರಮಾಣೇಇಂದ್ರಿಯೇ ವಾ ಕೋ ದೋಷಃ ? ಯದಿ ಸಂನಿಕರ್ಷಃ ಪ್ರಮಾಣಂ, ಸೂಕ್ಷ್ಮವ್ಯವಹಿತ ವಿಪ್ರಕೃಷ್ಟಾ ನಾಮಗ್ರಹಣ ಪ್ರಸಂಗಃ। ನ ಹಿ ತೇ ಇಂದ್ರಿಯೈಃ ಸಂನಿಕೃಷ್ಯಂತೇ । ಅತಃ ಸರ್ವಜ್ಞತ್ವಾಭಾವಃ ಸ್ಯಾತ್

೭. ಭಟ್ಟಾಕಲಂಕ (ಕ್ರಿ. ಶ. ಸಂ. ೭೦೦)

ಇವರು ಕನ್ನಡಶಬ್ದಾನುಶಾಸನವನ್ನು ಬರೆದ ಭಟ್ಟಾಕಳಂಕನಲ್ಲ. ಆತನಿಗಿಂತ ತುಂಬ ಪ್ರಾಚೀನರು. ಇವರು ಜೈನತರ್ಕದಲ್ಲಿ ಪ್ರಕಾಂಡ ಪಂಡಿತರು. ಜೈನತರ್ಕಶಾಸ್ತ್ರಕ್ಕೆ ಇವರ ಕಾಣಿಕೆ ಅಮೂಲ್ಯವಾದುದು. 'ಪ್ರಮಾಣಮಕಲಂಕಸ್ಯ' ಎಂಬ ಉಕ್ತಿ ಪ್ರಸಿದ್ಧವಾಗಿದೆ. ಇವರ ಗ್ರಂಥಗಳು—

೧ ತತ್ತ್ವಾರ್ಥರಾಜವಾರ್ತಿಕ

ಉಮಾಸ್ವಾಮಿಗಳ ತತ್ತ್ವಾರ್ಥಸೂತ್ರಕ್ಕೆ ಇದು ವಿಸ್ತೃತವಾದ ಟೀಕೆ, ಒಂದೊಂದು ಸೂತ್ರದ ಮೇಲೂ ಅನೇಕ ವಾರ್ತಿಕಗಳನ್ನು ವಾದಶೈಲಿಯಲ್ಲಿ ಬರೆದು ವ್ಯಾಖ್ಯಾನವನ್ನ. ಮಾಡಲಾಗಿದೆ. ಸೂತ್ರಾರ್ಥ ವಿಚಾರಕ್ರಮವು ಪಾಣಿನಿಯ ಅಷ್ಟಾಧ್ಯಾಯಿಗೆ ಬರೆದ ವಾರ್ತಿಕಗಳನ್ನೂ ಮಹಾ ಭಾಷ್ಯವನ್ನೂ ನೆನಪಿಗೆ ತರುತ್ತದೆ. ವಿಚಾರಪರಂಪರೆಗಳು ಪುಂಖಾನುಪುಂಖವಾಗಿ ಬರುತ್ತವೆ. ಅಕಲಂಕಾಚಾರ್ಯರು ಧೀಮಂತರಾದ ತಾರ್ಕಿಕರೆಂಬುದಕ್ಕೆ ಈ ಗ್ರಂಥವೇ ಸಾಕ್ಷಿ ತತ್ತ್ವಾರ್ಥ ಸೂತ್ರದ ೩-೪ನೆಯ ಅಧ್ಯಾಯಗಳಲ್ಲಿ ಬರುವ ವಿಭಿನ್ನ ಲೋಕಗಳ ವರ್ಣನೆಯ ಪ್ರಸ್ತಾವದಲ್ಲಿ ಸ್ವತಂತ್ರವಾಗಿ ಅತಿ ವಿಸ್ತೃತವಾದ ವರ್ಣನೆಗಳನ್ನು ಕೊಡಲಾಗಿದೆ. ಜೈನದರ್ಶನ ಮತ್ತು ಜೈನಧರ್ಮಕ್ಕೆ ಸಂಬಂಧಿಸಿದ ಎಲ್ಲ ವಿಚಾರಗಳಿಗೂ ಇದು ಆಕರಗ್ರಂಥವೆನ್ನಬಹುದು. ಇವರ ಶೈಲಿಗೆ ಒಂದು ಉದಾಹರಣೆ—

ನವಾ ನಾಂತರೀಯಕತ್ವಾತ್ ರಸಾಯನವತ್ (ತ. ಸೂ. ವಾ. ೧-೨-೧೦)

ನವಾ ಏಷ ದೋಷಃ । ಕಿಂ ಕಾರಣಂ? ನಾಂತರೀಯಕತ್ವಾತ್ । ನ ಹಿ ತ್ರಿತಯಮಂತರೇಣ ಮೋಕ್ಷ ಪ್ರಾಪ್ತಿರಸ್ತಿ । ಕಥಂ ? ರಸಾಯನವತ್ । ಯಥಾ ನ ರಸಾಯನಜ್ಞಾನಾದೇವ ರಸಾಯನಫಲೇನಾಭಿಸಂಬಂಧಃ । ರಸಾಯನ ಶ್ರದ್ಧಾನಕ್ರಿಯಾಭಾವಾತ್ ।

## ೨ ಲಘೀಯಸ್ತ್ರಯಂ

ಇದರಲ್ಲಿ ಪ್ರಮಾಣಪ್ರವೇಶ, ನಯಪ್ರವೇಶ, ಪ್ರವಚನಪ್ರವೇಶ-ಎಂಬ ಮೂರು ಪ್ರಕರಣಗಳಿವೆ. ಗುಣ-ಗುಣಿಗಳು ಪೃಥಕ್ ಅಲ್ಲವೆಂದೂ, ಪೃಥಕ್ ಆದರೆ ನೈಯಾಯಿಕರ ಆತ್ಮ ಅಜ್ಞನಾಗುತ್ತದೆಯೆಂದೂ ಇದರಲ್ಲಿ ಪ್ರತಿಪಾದಿಸಲಾಗಿದೆ. ಕಾಲತ್ರಯವೂ, ಷಟ್ ಕಾರಕಗಳೂ, ಮೂರು ಲಿಂಗಗಳೂ ಅನೇಕಾಂತವಾದವನ್ನು ಸಮರ್ಥಿಸುತ್ತವೆಯೆಂದು ನಿರೂಪಿಸಿದೆ. ನೈಯಾಯಿಕರ ಮೋಕ್ಷಸ್ವರೂಪವನ್ನು ಖಂಡಿಸಲಾಗಿದೆ. ಜ್ಞಾನವು ಅರ್ಥಜನ್ಯವಲ್ಲ, ಅದು ಇಂದ್ರಿಯಾನಿಂದ್ರಿಯ ಜನ್ಯ ಎಂದು ಪ್ರತಿಪಾದಿಸಲಾಗಿದೆ.

## ೩ ನ್ಯಾಯವಿನಿಶ್ಚಯ

ಇದರಲ್ಲಿ ಅಚೇತನ ಜ್ಞಾನವಾದ, ಪ್ರತಿಬಿಂಬವಾದ, ಸಾಕಾರಜ್ಞಾನವಾದ, ಅದ್ವಯವಾದ ವಿಭ್ರಮವಾದ, ಸಂವಿದದ್ವೈತವಾದಗಳನ್ನು ತರ್ಕಶೈಲಿಯಿಂದ ಖಂಡಿಸಲಾಗಿದೆ. ನೈಯಾಯಿಕ ಬೌದ್ಧಮತಗಳನ್ನು ನಿರಾಕರಿಸಿ ಪರಿಣಾಮವಾದವನ್ನು ಸಮರ್ಥಿಸಲಾಗಿದೆ. ವೇದವು ಅನಾದಿಯಲ್ಲವೆಂದು ಶಬ್ದವು ಅನಿತ್ಯವೆಂದೂ ಪ್ರತಿಪಾದಿಸಿದೆ. ಇದರಮೇಲೆ ವಾದಿರಾಜನ (ಕ್ರಿ. ಶ. ೧೧ ನೆಯ ಶತಮಾನ) ವಿವರಣ ಎಂಬ ಟೀಕೆ ಇದೆ.

## ೪ ಪ್ರಮಾಣಸಂಗ್ರಹ

ಇದರಲ್ಲಿ ಪ್ರತ್ಯಕ್ಷ, ಅನುಮಾನಗಳ ಸ್ವರೂಪ ಮತ್ತು ಹೇತು, ಹೇತ್ವಾಭಾಸಗಳ ನಿರೂಪಣವಿದೆ. ವಾದ ಪ್ರವಚನಗಳ ಲಕ್ಷಣವನ್ನೂ ಸಪ್ತಭಂಗೀನಯದ ಸ್ವರೂಪವನ್ನೂ ಪ್ರೌಢಶೈಲಿಯಲ್ಲಿ ವಿವರಿಸಲಾಗಿದೆ.

## ೫ ಸಿದ್ಧಿವಿನಿಶ್ಚಯ

ಇದರಲ್ಲಿ ಪ್ರತ್ಯಕ್ಷಸಿದ್ಧಿ, ಪ್ರಮಾಣಾಂತರಸಿದ್ಧಿ, ಜೀವಸಿದ್ಧಿ-ಮೊದಲಾದ ಹನ್ನೆರಡು ಪ್ರಸ್ತಾವಗಳಿವೆ. ಪ್ರಮಾಣ, ನಯ, ನಿಕ್ಷೇಪಗಳ ವಿವೇಚನೆಯನ್ನು ತರ್ಕಶೈಲಿಯಲ್ಲಿ ನಿರೂಪಿಸಿದೆ.

ಅಕಲಂಕಾಚಾರ್ಯರು ಸ್ವತಂತ್ರವಾದ ಜೈನತರ್ಕಕ್ಕೆ ಉನ್ನತವಾದ ಗೌರವವನ್ನು ದೊರೆಕಿಸಿಕೊಟ್ಟರು.

## ೬ ವಿದ್ಯಾನಂದಿ (ಕ್ರಿ.ಶ. ೮೦೦)

ಇವರು ಮೊದಲು ಬ್ರಾಹ್ಮಣರಾಗಿದ್ದು ಜೈನಮತಕ್ಕೆ ಸೇರಿದರೆಂದು ಆರಾಧನಕಥಾ ಕೋಶದಿಂದ ತಿಳಿದು ಬರುತ್ತದೆ. ಶಿವಮೊಗ್ಗ ಜಿಲ್ಲೆಯ ಹುಮಚದಲ್ಲಿ ವಿದ್ಯಾನಂದಿ ಪ್ರಶಸ್ತಿಯು ದೊರಕಿದೆ. ಇವರು ಕನ್ನಡಿಗರು. ಅಕಳಂಕಾಚಾರ್ಯರ ತರುವಾಯ ಜೈನತರ್ಕವನ್ನು ವ್ಯವಸ್ಥೆ ಗೊಳಿಸಿದ ಕೀರ್ತಿ ಇವರಿಗೆ ಸಲ್ಲುತ್ತದೆ. ಇವರ ಗ್ರಂಥಗಳು—

### ೧ ಶ್ಲೋಕವಾರ್ತಿಕ

ತತ್ತ್ವಾರ್ಥಸೂತ್ರಗಳಿಗೆ ಶ್ಲೋಕರೂಪದಲ್ಲಿ ವಾರ್ತಿಕಗಳನ್ನು ಬರೆದು ಅವುಗಳಿಗೆ ಗದ್ಯದಲ್ಲಿ ವ್ಯಾಖ್ಯಾನವನ್ನು ಮಾಡಲಾಗಿದೆ. ಅತಿಸೂಕ್ಷ್ಮವಾದ ತಾರ್ಕಿಕ ವಿಚಾರಸರಣಿಯನ್ನು ಇದರಲ್ಲಿ ಕಾಣಬಹುದು.

### ೨ ಅಷ್ಟಸಹಸ್ರೀ

ಅಕಲಂಕಾಚಾರ್ಯರ ಅಷ್ಟಶತಿಗೆ ಇದು ವ್ಯಾಖ್ಯಾನ. ಇದರಲ್ಲಿ ೧೦ ಪರಿಚ್ಛೇದಗಳಿವೆ. ಅರ್ಹಂತನೇ ಸರ್ವಜ್ಞನೆಂದು ಸಮರ್ಥಿಸಿ ಅದ್ವೈತ, ಬೌದ್ಧಮತಗಳನ್ನು ಖಂಡಿಸಲಾಗಿದೆ. ಈಶ್ವರನು ಸೃಷ್ಟಿಕರ್ತನೆಂಬುದನ್ನು ದೂಷಿಸಿ ಶಬ್ದಾದ್ವೈತ ಮತವನ್ನು ನಿರಾಕರಿಸಲಾಗಿದೆ. ಶೈಲಿಯು ತುಂಬ ಪ್ರೌಢವಾಗಿದ್ದು ವಾದವಿವಾದಗಳ ಗೊಂಡಾರಣ್ಯವಾಗಿದೆ. ಒಂದೊಂದು ಪರಿಚ್ಛೇದದ ಕಡೆಯಲ್ಲಿಯೂ ವಿಷಯಸಂಗ್ರಹ ರೂಪವಾದ ಪದ್ಯವಿದೆ. ಒಂದು ಉದಾಹರಣೆ—

ಅಪೇಕ್ಷೈಕಾಂತಾದಿ ಪ್ರಬಲಗರಲೋದ್ರೇಕದಲಿನೀ
ಪ್ರವೃದ್ಧಾನೇಕಾಂತಾಮೃತ ರಸ ನಿಷೇಕಾನವರತಂ ।
ಪ್ರವೃತ್ತಾ ವಾಗೇಷಾ ಸಕಲವಿಕಲಾದೇಶವಶತಃ
ಸಮಂತಾದ್ ಭದ್ರಂ ವೋ ದಿಶತು ಮುನಿಪಸ್ಯಾಮಲಮತೇಃ ॥

ಇದರಲ್ಲಿ ಸಾಂಖ್ಯಕಾರಿಕೆ, ವಾಕ್ಯಪದೀಯ ನ್ಯಾಯ ವೈಶೇಷಿಕ ಗ್ರಂಥಗಳನ್ನೂ ಧರ್ಮ ಕೀರ್ತಿ, ಮಂಡನಮಿಶ್ರ, ಕುಮಾರಿಲಭಟ್ಟ ಮೊದಲಾದವರ ಹೆಸರುಗಳನ್ನೂ ಉಲ್ಲೇಖಿಸಲಾಗಿದೆ. ವಾದ ಕೋಲಾಹಲದಲ್ಲಿ ಪ್ರಸ್ತುತವಾದ ಈ ಶ್ಲೋಕ ಗಮನಾರ್ಹವಾದುದು—

ಭಾವನಾ ಯದಿ ವಾಕ್ಯಾರ್ಥೋ ನಿಯೋಗೋ ನೇತಿ ಕಾ ಪ್ರಮಾ ।
ತಾವುಭೌ ಯದಿ ವಾಕ್ಯಾರ್ಥೋ ಹತೌ ಭಟ್ಟಪ್ರಭಾಕರೌ ॥

ಆಪ್ತಪರೀಕ್ಷಾ, ಪ್ರಮಾಪರೀಕ್ಷಾ, ಪತ್ರಪರೀಕ್ಷಾ, ಸತ್ಯಶಾಸನ ಪರೀಕ್ಷಾ—ಎಂಬಿವು ಆಚಾರ್ಯವಿದ್ಯಾನಂದಿಗಳು ಬರೆದ ಸ್ವತಂತ್ರವಾದ ನ್ಯಾಯವಿಷಯಕ ಗ್ರಂಥಗಳು.

## ೯. ಸಿದ್ಧಸೇನ (ಕ್ರಿ. ಶ. ಸು. ೮೦೦)

ಈತನು ೩೨ ಕಾರಿಕೆಗಳಿರುವ ನ್ಯಾಯಾವತಾರ ಎಂಬ ಸಂಕ್ಷಿಪ್ತವಾದ ತರ್ಕಗ್ರಂಥವನ್ನು ಬರೆದಿದ್ದಾನೆ. ಇದರಲ್ಲಿ ಪ್ರತ್ಯಕ್ಷ, ಅನುಮಾನ. ಶಬ್ದ—ಎಂಬ ಮೂರು ಪ್ರಮಾಣಗಳನ್ನು ವಿವೇಚಿಸಲಾಗಿದೆ. ಜೈನ ನ್ಯಾಯಕ್ಕೆ ಇದು ಒಂದು ಹೊಸ ತಿರುವನ್ನು ಕೊಡುತ್ತದೆ. ಇದಕ್ಕೂ ಪೂರ್ವದಲ್ಲಿ ಮತಿ, ಶ್ರುತ, ಅವಧಿ, ಮನಃಪರ್ಯಯ. ಕೇವಲ ಈ ಐದು ಜ್ಞಾನಭೇದಗಳನ್ನು ಪ್ರಮಾಣಗಳೆಂದು ಮನ್ನಿಸಿ ಮೊದಲಿನವೆರಡು ಪರೋಕ್ಷವೆಂದೂ, ಉಳಿದ ಮೂರು ಪ್ರತ್ಯಕ್ಷ ವೆಂದೂ ಹೇಳಲಾಗಿತ್ತು. ನ್ಯಾಯಾವತಾರದಲ್ಲಿ ವೈದಿಕ ಮತ್ತು ಬೌದ್ಧ ಸಂಪ್ರದಾಯವನ್ನನು ಸರಿಸಿ ಇಂದ್ರಿಯಾರ್ಥಸಂನಿಕರ್ಷದಿಂದ ಆಗುವ ಜ್ಞಾನವನ್ನು ಪ್ರತ್ಯಕ್ಷವೆಂದು ಹೇಳಲಾಗಿದೆ. ಇದಕ್ಕೆ ಸಾಂವ್ಯವಹಾರಿಕ ಪ್ರತ್ಯಕ್ಷ ಎನ್ನುತ್ತಾರೆ. ನ್ಯಾಯಾವತಾರದ ಮೇಲೆ ಹರಿಭದ್ರಸೂರಿ (ಕ್ರಿ.ಶ. ೮೫೦), ಸಿದ್ಧರ್ಷಿಗಣಿ (ಕ್ರಿ.ಶ. ೯೦೦), ಶಾಂತಿಸೂರಿ (ಕ್ರಿ.ಶ. ೧೦೦೦), ದೇವಭದ್ರ ಸೂರಿ (ಕ್ರಿ ಶ. ೧೧೦೦) ಮುಂತಾದವರು ವ್ಯಾಖ್ಯಾನಗಳನ್ನು ಬರೆದು ನ್ಯಾಯಶಾಸ್ತ್ರವನ್ನು ಬೆಳೆಸಿದ್ದಾರೆ.

## ೧೦. ಹರಿಭದ್ರ (ಕ್ರಿ. ಶ. ಸು. ೮೦೦)

ಹರಿಭದ್ರಾಚಾರ್ಯನು ಜೈನದರ್ಶನದಲ್ಲಿ ವಿಖ್ಯಾತನಾದ ಗ್ರಂಥಕಾರ. ಇವನು ಜೈನ ನ್ಯಾಯವನ್ನೂ ಜೈನ ಸಿದ್ಧಾಂತವನ್ನೂ ತನ್ನ ವಿಪುಲಕೃತಿಗಳಿಂದ ಪರಿಪುಷ್ಟವಾಗಿ ಮಾಡಿದ್ದಾನೆ. ಇವನು ಅನೇಕಾಂತಜಯಪತಾಕಾ (ಸ್ವೋಪಜ್ಞ, ವೃತ್ತಿ ಸಹಿತ), ಅನೇಕಾಂತವಾದಪ್ರವೇಶ, ಸರ್ವಜ್ಞಸಿದ್ಧಿ, ಷಡ್‌ದರ್ಶನಸಮುಚ್ಚಯ, ಶಾಸ್ತ್ರವಾರ್ತಾಸಮುಚ್ಚಯ (ಸ್ವೋಪಜ್ಞಟೀಕಾ ಸಹಿತ)—ಮೊದಲಾದ ವಿವಿಧ ಕೃತಿಗಳನ್ನು ರಚಿಸಿದ್ದಾನೆ. ಯೋಗಶಾಸ್ತ್ರಕ್ಕೆ ಸಂಬಂಧಿಸಿದ ಯೋಗಬಿಂದು; ಯೋಗಶತಕ—ಮೊದಲಾದುವು ಈತನ ಹೆಸರಿನಲ್ಲಿ ಪ್ರಸಿದ್ಧವಾಗಿವೆ. ಇವನ ಷಡ್‌ದರ್ಶನಸಮುಚ್ಚಯದ ಮೇಲೆ ವ್ಯಾಖ್ಯಾನವನ್ನು ಬರೆದ ಮಣಿಭದ್ರನು ಹರಿಭದ್ರಾ ಚಾರ್ಯನನ್ನು 'ಚತುರ್ದಶ ಶತ ಪ್ರಕರಣೋಪಕೃತ ಜೈನಧರ್ಮಃ' ಎಂದು ಕರೆದಿದ್ದಾನೆ. ಇವನು ಬ್ರಾಹ್ಮಣನಾಗಿದ್ದು ಜೈನಧರ್ಮವನ್ನು ಸ್ವೀಕರಿಸಿದನೆಂದು ತಿಳಿದು ಬರುತ್ತದೆ. ಇವನ ಕಾಲದ ವಿಷಯವಾಗಿ ಭಿನ್ನಾಭಿಪ್ರಾಯಗಳಿವೆ. (ಕ್ರಿ.ಶ. ೬ನೆಯ ಶತಮಾನದಿಂದ ೧೨ನೆಯ ಶತಮಾನದ ವರೆಗೆ)

ಬೌದ್ಧಾಚಾರ್ಯನಾದ ದಿಙ್ನಾಗನ (ಕ್ರಿ.ಶ. ೪೫೦) ನ್ಯಾಯ ಪ್ರವೇಶದ ಮೇಲೆ ಹರಿ ಭದ್ರಾಚಾರ್ಯನು ಒಂದು ವಿಸ್ತೃತ ಟೀಕೆಯನ್ನು ಬರೆದು ಜೈನ ಸಂಪ್ರದಾಯದಲ್ಲಿ ಬೌದ್ಧ

ನ್ಯಾಯದ ಅಧ್ಯಯನ ಪರಂಪರೆಯನ್ನು ಪ್ರಾರಂಭಿಸಿದನು. ಇದೊಂದು ವಿಶೇಷವಾಗಿ ಗಮನಿಸಬೇಕಾದ ಸಂಗತಿಯಾಗಿದೆ.

## ೧೧. ಮಾಣಿಕ್ಯನಂದಿ (ಕ್ರಿ. ಶ. ಸು. ೯೦೦)

ಈತನ 'ಪರೀಕ್ಷಾಮುಖ' ಎಂಬ ತರ್ಕಗ್ರಂಥವು ಅನ್ನಂಭಟ್ಟನ ತರ್ಕಸಂಗ್ರಹವನ್ನು ಹೋಲುತ್ತದೆ. ಜೈನತರ್ಕವನ್ನು ೬ ಅಧಿಕಾರಗಳಲ್ಲಿ ಸೂತ್ರರೂಪವಾಗಿ ಪ್ರತಿಪಾದಿಸಿದ್ದಾನೆ. ಪ್ರಮಾಣಸ್ವರೂಪ, ಪ್ರಮಾಣವಿಷಯ, ಪ್ರಮಾಣಫಲ, ಪ್ರಮಾಣಾಭಾಸಗಳನ್ನು ಸ್ಫುಟವಾಗಿ ನಿರೂಪಿಸಲಾಗಿದೆ. ಅನುಮಾನದಲ್ಲಿ ಪ್ರತಿಜ್ಞಾ, ಹೇತು, ದೃಷ್ಟಾಂತ, ಉಪನಯ, ನಿಗಮನ ಗಳೆಂಬ ಐದು ಅವಯವಗಳ ಪ್ರಯೋಗವನ್ನು ವಿವರಿಸಿದ್ದಾನೆ.

೧೧ನೆಯ ಶತಕದಲ್ಲಿ ಪದ್ಮನಂದಿಯ ಶಿಷ್ಯನಾದ ಪ್ರಭಾಚಂದ್ರನು ಇದಕ್ಕೆ ಪ್ರಮೇಯ ಕಮಲಮಾರ್ತಾಂಡ ಎಂಬ ತರ್ಕಜಟಿಲವಾದ ಟೀಕೆಯನ್ನು ಬರೆದಿದ್ದಾನೆ. ಪ್ರಭಾಚಂದ್ರನು ದೊಡ್ಡ ವಿದ್ವಾಂಸ. ಈತನು ಅಕಲಂಕಾಚಾರ್ಯರ ಲಘೀಯಸ್ತ್ರಯಕ್ಕೆ ನ್ಯಾಯಕುಮುದಚಂದ್ರ ಎಂಬ ವಿಸ್ತಾರವಾದ ಟೀಕೆಯನ್ನು ರಚಿಸಿದ್ದಾನೆ. ಇದು ಜೈನ ನ್ಯಾಯದಲ್ಲಿ ಬಹು ದೊಡ್ಡ ಪ್ರಾಮಾಣಿಕ ಗ್ರಂಥವೆಂದು ಮಾನ್ಯತೆಯನ್ನು ಪಡೆದಿದೆ.

ಕ್ರಿ. ಶ. ಸಂ. ೧೨ ನೆಯ ಶತಕದಲ್ಲಿದ್ದ ಅನಂತವೀರ್ಯನು ಮಾಣಿಕ್ಯನಂದಿಯ ಪರೀಕ್ಷಾ ಮುಖಕ್ಕೆ ಪ್ರಮೇಯರತ್ನಮಾಲಾ ಎಂಬ ವಿಸ್ತೃತವೂ ಪ್ರೌಢವೂ ಆದ ವ್ಯಾಖ್ಯಾನವನ್ನು ರಚಿಸಿದ್ದಾನೆ. ಅಕಲಂಕಾಚಾರ್ಯರ ಸಿದ್ಧಿನಿಶ್ಚಯಕ್ಕೂ ಈತನು ರಚಿಸಿದ ಒಂದು ವಿಸ್ತೃತ ಟೀಕೆ ಉಪಲಬ್ಧವಾಗಿದೆ. ಸಾಯಣಾಚಾರ್ಯರ ಸರ್ವದರ್ಶನಸಂಗ್ರಹದಲ್ಲಿ ಅನಂತವೀರ್ಯನ ಹೆಸರಿನಿಂದ ಸ್ಯಾದ್ವಾದಕ್ಕೆ ಸಂಬಂಧಿಸಿದ ಕೆಲವು ಶ್ಲೋಕಗಳೂ ಉದ್ಧೃತವಾಗಿವೆ.

## ೧೨. ಅಮೃತಚಂದ್ರಸೂರಿ (ಕ್ರಿ. ಶ. ಸು. ೧೦೦೦)

ಇವರು ಜೈನಸಿದ್ಧಾಂತದ ಒಬ್ಬ ಪ್ರಮುಖ ಆಚಾರ್ಯರು. ಕುಂದಕುಂದಾಚಾರ್ಯರ ಸಮಯಸಾರ, ಪ್ರವಚನಸಾರ, ಪಂಚಾಸ್ತಿಕಾಯಗಳ ಮೇಲೆ ಸಂಸ್ಕೃತದಲ್ಲಿ ಪ್ರಬುದ್ಧ ವ್ಯಾಖ್ಯಾನಗಳನ್ನು ರಚಿಸಿದ್ದಾರೆ. ಇವು ಸ್ವತಂತ್ರಗ್ರಂಥಗಳೋ ಎಂಬಂತೆ ಪ್ರೌಢವೂ ವಿಸ್ತೃತವೂ ಆಗಿವೆ. ಪುರುಷಾರ್ಥಸಿದ್ಧ್ಯುಪಾಯ ಎಂಬುದು ಇವರ ಸ್ವತಂತ್ರ ಕೃತಿ.

## ೧. ಸಮಯಸಾರವ್ಯಾಖ್ಯಾ

ಮೂಲದ ೪೧೫ ಗಾಹೆಗಳನ್ನು ಸಂಸ್ಕೃತಕ್ಕೆ ಪರಿವರ್ತಿಸಿ ವ್ಯಾಖ್ಯಾನ ಮಾಡಲಾಗಿದೆ. ಶೈಲಿ ತುಂಬ ಓಜಸ್ವಿಯಾದದ್ದು. ವ್ಯಾಖ್ಯಾನದ ನಡುವೆ ಅಮೃತಚಂದ್ರಸೂರಿಗಳು ವಿಭಿನ್ನವೃತ್ತಗಳಲ್ಲಿ 'ಕಲಶ' ಎಂಬ ಹೆಸರಿನ ಶ್ಲೋಕಗಳನ್ನು ರಚಿಸಿ ಸಿದ್ಧಾಂತವನ್ನು ನಿರೂಪಿಸುತ್ತಾರೆ.

ಸಮಯವೆಂದರೆ ಜೀವ. 'ಜೀವೋ ನಾಮ ಪದಾರ್ಥಃ, ಸಃ ಸಮಯಃ । ಸಮಯತೇ ಏಕತ್ವೇನ ಯುಗಪಜ್ಞಾನಾತಿ ಗಚ್ಛತಿ ಚೇತಿ ನಿರುಕ್ತೇಃ' (೧ನೇಗಾಥೆಯ ವ್ಯಾಖ್ಯಾನದಲ್ಲಿ). ಜೀವಾಜೀವಾಧಿಕಾರ, ಕರ್ತೃ ಕರ್ಮಾಧಿಕಾರ, ಪುಣ್ಯಪಾಪಾಧಿಕಾರ–ಈ ರೀತಿಯಲ್ಲಿ ವಿಭಿನ್ನಾಧಿಕಾರಗಳಾಗಿ ಗ್ರಂಥವು ವಿಭಕ್ತವಾಗಿದೆ. ಕಡೆಯಲ್ಲಿ ಪರಿಶಿಷ್ಟ ಎಂಬ ವಿಭಾಗವಿದ್ದು ಅದರಲ್ಲಿ ಸ್ಯಾದ್ವಾದದ ೧೪ ಪ್ರಯೋಜನಗಳನ್ನು ತಿಳಿಸಲಾಗಿದೆ. ಮುಕ್ತನಾದ ಜೀವನಿಗೆ ೪೭ ಬಗೆಯ ಶಕ್ತಿಗಳಿರುತ್ತವೆಯೆಂದು ಹೇಳಿದೆ. ಆತ್ಮನು ಜ್ಞಾನ ಜ್ಞೇಯ–ಉಭಯ ಸ್ವರೂಪನೆಂದು ಪ್ರತಿಪಾದಿಸಿದೆ. ಜೀವನ ಕರ್ತೃತ್ವ ಭೋಕ್ತೃತ್ವಗಳು ಅವನ ಸ್ವಭಾವಗಳಲ್ಲವೆಂದೂ. ಅಜ್ಞಾನಾವಸ್ಥೆಯಲ್ಲಿ ಮಾತ್ರ ಇರುತ್ತವೆಯೆಂದೂ, ಮುಕ್ತಾವಸ್ಥೆಯಲ್ಲಿ ಇರುವುದಿಲ್ಲವೆಂದೂ ಈ ಶ್ಲೋಕಗಳಲ್ಲಿ ನಿರೂಪಿಸಿದ್ದಾರೆ.

ಅಕರ್ತಾ ಜೀವೋಽಯಂ ಸ್ಥಿತ ಇತಿ ವಿಶುದ್ಧಃ ಸ್ವರಸತಃ
ಸ್ಫುರಚ್ಚಿಜ್ಜ್ಯೋತಿರ್ಭಿಶ್ಛುರಿತಭುವನಾಭೋಗಭವನಃ ।
ತಥಾಪ್ಯಸ್ಯಾಸೌ ಸ್ಯಾದ್ಯದಿಹ ಕಿಲ ಬಂಧಃ ಪ್ರಕೃತಿಭಿಃ
ಸ ಖಲ್ವಜ್ಞಾನಸ್ಯ ಸ್ಫುರತಿ ಮಹಿಮಾ ಕೋಽಪಿ ಗಹನಃ ॥

(ಶ್ಲೋ. ೧೯೫)

ಭೋಕ್ತೃತ್ವಂ ನ ಸ್ವಭಾವೋಽಸ್ಯ ಸ್ಮೃತಃ ಕರ್ತೃತ್ವವಚ್ಚಿತಃ।
ಅಜ್ಞಾನಾದೇವ ಭೋಕ್ತಾಯಂ ತದಭಾವಾದವೇದಕಃ ॥

(ಶ್ಲೋ. ೧೯೬)

## ೨. ಪಂಚಾಸ್ತಿಕಾಯವ್ಯಾಖ್ಯಾ

ಕುಂದಕುಂದಾಚಾರ್ಯರ ೧೭೩ ಗಾಹೆಗಳಿರುವ ಪಂಚಾಸ್ತಿಕಾಯಸಂಗ್ರಹಕ್ಕೆ ಇದು ವ್ಯಾಖ್ಯಾನ. ಇದರಲ್ಲಿ ಜೀವ, ಪುದ್ಗಲ, ಧರ್ಮ, ಅಧರ್ಮ, ಆಕಾರ–ಎಂಬ ಪಂಚಾಸ್ತಿಕಾಯಗಳ ಸ್ವರೂಪವನ್ನೂ ಕಾಲದ್ರವ್ಯವನ್ನೂ ಗಂಭೀರ ಶೈಲಿಯಿಂದ ವಿವೇಚಿಸಲಾಗಿದೆ. ರೂಪ, ರಸ,

ಗಂಧ, ಸ್ಪರ್ಶಗಳುಳ್ಳದ್ದು ಮೂರ್ತ, ಉಳಿದವು ಅಮೂರ್ತ ಎಂದು ಹೇಳಿದೆ. ಅನಂತರ ನವ ಪದಾರ್ಥಗಳ ಸ್ವರೂಪ ಮತ್ತು ಮೋಕ್ಷಮಾರ್ಗದ ವಿವರಣೆಗಳು ಬಂದಿವೆ. ಸ್ವತಂತ್ರವಾದ 'ಕಲಶ' ಶ್ಲೋಕಗಳ ರಚನೆ ವಿಪುಲವಾಗಿದೆ. ಕಡೆಯಲ್ಲಿ

ಸ್ವರೂಪಗುಪ್ತಸ್ಯ ನ ಕಿಂಚಿದಸ್ತಿ
ಕರ್ತವ್ಯಮೇವಾಮೃತಚಂದ್ರಸೂರೇಃ ॥

ಎಂದು ವ್ಯಾಖ್ಯಾನವನ್ನು ಮುಗಿಸಿದ್ದಾರೆ.

ಪ್ರವಚನಸಾರವು ಶ್ರಮಣಲಕ್ಷಣ, ಪ್ರವ್ರಜ್ಯಾಸ್ವರೂಪ, ಮುನಿಗಳ ಆಚಾರ ಮುಂತಾದ ವಿಷಯಗಳುಳ್ಳ ಧಾರ್ಮಿಕ ಗ್ರಂಥ. ಆಚಾರ್ಯರ ಸ್ವತಂತ್ರ ಗ್ರಂಥವಾದ ಪುರುಷಾರ್ಥಸಿದ್ಧ್ಯುಪಾಯವೂ ಧಾರ್ಮಿಕ ಸ್ವರೂಪದ ಕೃತಿ.

ಕುಂದಕುಂದಾಚಾರ್ಯರ ನಿಯಮಸಾರಕ್ಕೆ ಅಮೃತಚಂದ್ರಸೂರಿಗಳು ಟೀಕೆಯನ್ನು ಬರೆದಂತೆ ಕಾಣುವುದಿಲ್ಲ. ಕ್ರಿ.ಶ.ಸು. ೧೨ನೇ ಶತಕದಲ್ಲಿದ್ದ ಪದ್ಮಪ್ರಭಮಲಧಾರಿದೇವನು 'ತಾತ್ಪರ್ಯವೃತ್ತಿ' ಎಂಬ ಸಂಸ್ಕೃತ ಟೀಕೆಯನ್ನು ನಿಯಮಸಾರಕ್ಕೆ ಬರೆದಿದ್ದಾನೆ. ಟೀಕೆಯಲ್ಲಿ ಅಮೃತಚಂದ್ರಸೂರಿಗಳನ್ನು ಸ್ಮರಿಸುತ್ತಾನೆ. ಅವರ ವ್ಯಾಖ್ಯಾಶೈಲಿಯನ್ನು ಪೂರ್ತಿಯಾಗಿ ಅನುಕರಿಸಿದ್ದಾನೆ.

### ಪಂಚಾಧ್ಯಾಯೀ (ಕರ್ತೃ ?)

ಈ ಗ್ರಂಥದ ಕರ್ತೃ ಯಾರೆಂಬುದು ತಿಳಿದಿಲ್ಲ. ನಿರೂಪಣ ಕ್ರಮವನ್ನೂ ಭಾಷಾಶೈಲಿಯನ್ನೂ ಪರಿಶೀಲಿಸಿ, ಇದರ ಕರ್ತೃ ಅಮೃತಚಂದ್ರಸೂರಿಗಳಾಗಿರಬೇಕೆಂದು ಕೆಲವರು ಊಹಿಸಿದ್ದಾರೆ.

ಈಗ ಇದರ ಮೊದಲನೆಯ ಎರಡು ಅಧ್ಯಾಯಗಳು ಮಾತ್ರ ಉಪಲಬ್ಧವಾಗಿವೆ. ಈ ಕೃತಿ ಪೂರ್ಣವಾಗಿರಲಾರದು. ಇವುಗಳಲ್ಲಿ ೧೧೪೫ ಶ್ಲೋಕಗಳಿವೆ. ವ್ಯಾಖ್ಯಾನವಿಲ್ಲ. ಪ್ರಥಮಾಧ್ಯಾಯದಲ್ಲಿ ದಾರ್ಶನಿಕ ವಿಚಾರಗಳೂ, ದ್ವಿತೀಯಾಧ್ಯಾಯದಲ್ಲಿ ಧಾರ್ಮಿಕವಿಚಾರಗಳೂ ಬಂದಿವೆ.

### ೧೩. ನೇಮಿಚಂದ್ರಸಿದ್ಧಾಂತದೇವ (ಕ್ರಿ. ಶ. ೧೧ನೆಯ ಶತಮಾನ)

ಈತನು ಕನ್ನಡಿಗ. ಗಂಗರಾಜ ರಾಚಮಲ್ಲನ ಮಂತ್ರಿಯಾದ ಚಾವುಂಡರಾಯನ ಗುರು. ಚಾವುಂಡರಾಯನು ಶ್ರವಣಬೆಳಗೊಳದಲ್ಲಿ ಗೋಮಟೇಶ್ವರ ಮೂರ್ತಿಯನ್ನು

ಕ್ರಿ.ಶ. ೧೦೨೮ರಲ್ಲಿ ಪ್ರತಿಷ್ಠೆಮಾಡಿಸಿದನು ಚಾವುಂಡರಾಯನಿಗೆ ಗೊಮ್ಮಟರಾಯನೆಂಬ ಹೆಸರಿತ್ತು. ನೇಮಿಚಂದ್ರನು ಪ್ರಾಕೃತದಲ್ಲಿ ಬರೆದ ಗೋಮ್ಮಟಸಾರ, ಬೃಹದ್‌ದ್ರವ್ಯಸಂಗ್ರಹ ಎಂಬೆರಡು ಕೃತಿಗಳು ಪ್ರಸಿದ್ಧವಾಗಿವೆ.

## ೧. ಗೋಮ್ಮಟಸಾರ

ಇದು ಪ್ರಾಕೃತ ಭಾಷೆಗಳಲ್ಲಿ ಗಾಹೆಗಳ ರೂಪದಲ್ಲಿದೆ. ಒಟ್ಟು ಸುಮಾರು ೧೭೦೦ ಗಾಹೆಗಳಿದ್ದು ಜೀವಕಾಂಡ, ಕರ್ಮಕಾಂಡ ಎಂಬ ಎರಡು ವಿಭಾಗಗಳಿವೆ. ಷಟ್‌ಖಂಡಾಗಮದ ಸಾರವನ್ನು ಇದರಲ್ಲಿ ಸಂಗ್ರಹಿಸಿರುವುದರಿಂದ ಜೈನಪರಂಪರೆಯಲ್ಲಿ ಇದು ಪ್ರಮುಖ ಸ್ಥಾನವನ್ನು ಪಡೆದಿದೆ. ಹೆಸರೇ ಸೂಚಿಸುವಂತೆ ಜೀವಕಾಂಡದಲ್ಲಿ ಜೀವಕ್ಕೆ ಸಂಬಂಧಿಸಿದ ವಿಚಾರಗಳೂ, ಕರ್ಮಕಾಂಡದಲ್ಲಿ ಕರ್ಮಸಂಬಂಧಿ ವಿಚಾರಗಳೂ ಬಂದಿವೆ. ವಾದವಿವಾದಗಳ ಗೊಂದಲಕ್ಕೆ ಹೋಗದೆ ಪ್ರಮೇಯಗಳನ್ನು ವಿಸ್ತೃತವಾಗಿ ನಿರೂಪಿಸುವುದೇ ಈ ಗ್ರಂಥದ ವೈಶಿಷ್ಟ್ಯ.

ಕ್ರಿ.ಶ. ೧೪ನೆಯ ಶತಕದಲ್ಲಿದ್ದಿರಬಹುದಾದ ನೇಮಿಚಂದ್ರ ಎಂದೇ ಹೆಸರಿದ್ದ ಇನ್ನೊಬ್ಬ ಆಚಾರ್ಯನು ಇದಕ್ಕೆ ಸಂಸ್ಕೃತದಲ್ಲಿ ಟೀಕೆಯನ್ನು ಬರೆದಿದ್ದಾನೆ.

## ೨. ಬೃಹದ್‌ದ್ರವ್ಯಸಂಗ್ರಹ

ಇದೂ ಸಹ ಪ್ರಾಕೃತ ಭಾಷೆಯ ಶ್ಲೋಕಗಳಲ್ಲಿದೆ ಒಟ್ಟು ೫೮ ಶ್ಲೋಕಗಳುಂಟು ೨೫ ಗಾಹೆಗಳಲ್ಲಿ ಲಘುದ್ರವ್ಯಸಂಗ್ರಹವನ್ನು ಬರೆದು ಅವನ್ನು ಇದರಲ್ಲಿ ವಿಸ್ತರಿಸಲಾಗಿದೆ. ಜೈನ ಸಿದ್ಧಾಂತದ ಎಲ್ಲ ಪ್ರಮೇಯಗಳನ್ನು ಇದರಲ್ಲಿ ಅರ್ಥವತ್ತಾಗಿ ಸಂಗ್ರಹಿಸಲಾಗಿದೆ. ಕ್ರಿ.ಶ. ೧೨೦೦ರಲ್ಲಿದ್ದ ಬ್ರಹ್ಮದೇವ ಎಂಬ ದೊಡ್ಡ ವಿದ್ವಾಂಸನು ಇದಕ್ಕೆ ಸಂಸ್ಕೃತದಲ್ಲಿ ವಿಸ್ತೃತವಾದ ಟೀಕೆಯನ್ನು ಬರೆದಿದ್ದಾನೆ.

## ೧೪. ವಾದಿರಾಜ (ಕ್ರಿ.ಶ. ೧೧ನೆಯ ಶತಮಾನ)

ವಾದಿರಾಜನು ಚಾಲುಕ್ಯದೊರೆಯಾದ ಜಗದೇಕಮಲ್ಲನಿಂದ (ಕ್ರಿ.ಶ.ಸು. ೧೦೧೮–೧೦೪೨) ಸಂಮಾನಿತನಾದ ವಿದ್ವಾಂಸ. ಇವನಿಗೆ ಜಗದೇಕಮಲ್ಲವಾದಿ, ಸ್ಯಾದ್ವಾದ ವಿದ್ಯಾಪತಿ, ಸತ್ತರ್ಕ ಷಣ್ಮುಖ ಎಂಬ ಬಿರುದುಗಳಿದ್ದವು. ಮಲ್ಲಿಷೇಣ ಪ್ರಶಸ್ತಿಯಲ್ಲಿ (ಕ್ರಿ.ಶ. ೧೨ನೆಯ ಶತಮಾನ) ವಾದಿರಾಜನನ್ನು ಕುರಿತ ಪ್ರಶಂಸೆ ಹೀಗಿದೆ :

ತ್ರೈಲೋಕ್ಯದೀಪಿಕಾ ವಾಣೀ ದ್ವಾಭ್ಯಾಮೇವೋದಗಾದಿಹ ।
ಜಿನರಾಜತ ಏಕಸ್ಮಾದೇಕಸ್ಮಾದ್ವಾದಿರಾಜತಃ ॥

ಶಿವಮೊಗ್ಗ ಜಿಲ್ಲೆಯ ಹುಮಚದ ಒಂದು ಶಿಲಾಲೇಖದಲ್ಲಿ (ನಂ. ೩೯) ಕಾಣುವ ಪ್ರಶಂಸೆ ಇದು.

ಸದಸಿ ಯದಕಲಂಕಃ ಕೀರ್ತನೇ ಧರ್ಮಕೀರ್ತಿಃ
ವಚಸಿ ಸುರಪುರೋಧಾ ನ್ಯಾಯವಾದೇsಕ್ಷಪಾದಃ ।
ಇತಿ ಸಮಯಗುರೂಣಾಮೇಕತಃ ಸಂಗತಾನಾಂ
ಪ್ರತಿನಿಧಿರಿವ ದೇವೋ ರಾಜತೇ ವಾದಿರಾಜಃ ॥

ಮತಿಸಾಗರ ಎಂಬ ಆಚಾರ್ಯನು ಈತನ ಗುರು. ವಾದಿರಾಜನು ನ್ಯಾಯವಿನಿಶ್ಚಯ ವಿವರಣ ಎಂಬ ದಾರ್ಶನಿಕ ಗ್ರಂಥವನ್ನು ರಚಿಸಿದ್ದಾನೆ. ಇದು ಅಕಲಂಕಾಚಾರ್ಯರ ನ್ಯಾಯ ವಿನಿಶ್ಚಯದ ವ್ಯಾಖ್ಯಾನ. ಇದರಲ್ಲಿ ಅಕಳಂಕಾಚಾರ್ಯರನ್ನೂ, ವಿದ್ಯಾನಂದ, ಅನಂತವೀರ್ಯ, ಪೂಜ್ಯಪಾದ, ಮತಿಸಾಗರ, ದಯಾಪಾಲ, ಕನಕಸೇನಾರಾಧ್ಯ, ನರೇಂದ್ರಸೇನ–ಎಂಬ ಪೂರ್ವಾಚಾರ್ಯರನ್ನೂ ಸ್ತುತಿಸಿದ್ದಾನೆ. ಇದು ಉನ್ನತ ಮಟ್ಟದ ದಾರ್ಶನಿಕ ಗ್ರಂಥ. ಮುಖ್ಯವಾಗಿ ಸ್ಯಾದ್ವಾದದ ಪೋಷಣೆಯನ್ನು ಇದರಲ್ಲಿ ಕಾಣಬಹುದು. ಇದು ವ್ಯಾಖ್ಯಾನಗ್ರಂಥವಾಗಿದ್ದರೂ ವಾದಿರಾಜನ ಗಂಭೀರವಾದ ವಿಚಾರ ಪರಂಪರೆಗಳೂ, ಅಧಿಕಾರಯುತವಾದ ಪ್ರಮಾಣಿಕವಾಗ್ಸಿದ್ಧನಗಳೂ ಮನನೀಯವಾಗಿದ್ದು ಸ್ವತಂತ್ರವಾದ ಒಂದು ಮಹಾಗ್ರಂಥದ ಯೋಗ್ಯತೆಯನ್ನು ಪಡೆದಿದೆ. ಈ ವಿವರಣವು ವಿವರಣಾಲಂಕಾರ, ವ್ಯಾಖ್ಯಾನ ರತ್ನಮಾಲಾ ಎಂದೂ ಪ್ರಸಿದ್ಧಿಯನ್ನು ಗಳಿಸಿದೆ. ಶಂಕರಾಚಾರ್ಯರು ತಮ್ಮ ಬ್ರಹ್ಮಸೂತ್ರ ಭಾಷ್ಯದಲ್ಲಿ ಸ್ಯಾದ್ವಾದದ ಮೇಲೆ ಎತ್ತಿದ ಆಕ್ಷೇಪಣೆಗಳಿಗೆ ವಾದಿರಾಜನು ಉತ್ತರವನ್ನಿತ್ತಿದ್ದಾನೆ. ತನ್ನ ಗ್ರಂಥದಲ್ಲಿ ಕುಮಾರಿಲ, ಪ್ರಶಸ್ತಪಾದ, ಈಶ್ವರಕೃಷ್ಣ, ಮಂಡನಮಿಶ್ರ, ವಿಶ್ವರೂಪ–ಮೊದಲಾದ ಪ್ರಸಿದ್ಧ ದಾರ್ಶನಿಕರನ್ನು ಉಲ್ಲೇಖಿಸಿದ್ದಾನೆ. ವಿಶೇಷವಾಗಿ ಬೌದ್ಧಮತ ಖಂಡನೆಯನ್ನು ಇದರಲ್ಲಿ ಕಾಣಬಹುದು.

ಪಾರ್ಶ್ವನಾಥಚರಿತ, ಯಶೋಧರಚರಿತ–ಎಂಬಿವೆರಡು ವಾದಿರಾಜನು ಬರೆದ ಕಾವ್ಯಗಳು.

## ೧೪. ಹೇಮಚಂದ್ರ (ಕ್ರಿ.ಶ. ೧೨ನೆಯ ಶತಮಾನ)

ಇವನು ಶ್ವೇತಾಂಬರ ಸಂಪ್ರದಾಯದವನು. ಕ್ರಿ.ಶ. ೧೦೮೯ರಲ್ಲಿ ಜನಿಸಿ ೮೪ ವರ್ಷಗಳ ವರೆಗೆ ಜೀವಿಸಿದ್ದನೆಂದು ತಿಳಿದು ಬರುತ್ತದೆ. 'ಶಬ್ದಾನುಶಾಸನ' ಎಂಬ ಹೈಮ ವ್ಯಾಕರಣವನ್ನು ರಚಿಸಿದವನು ಈತನೇ. ತ್ರಿಷಷ್ಠಿಶಲಾಕಾಪುರುಷಚರಿತವೆಂಬ ಪುರಾಣಕಾವ್ಯವನ್ನೂ, ಕುಮಾರ ಪಾಲಚರಿತ ಎಂಬ ಐತಿಹಾಸಿಕ ಕಾವ್ಯವನ್ನು ಬರೆದಿದ್ದಾನೆ. ಇವನ ಯೋಗಶಾಸ್ತ್ರವು ಒಂದು ಸಾವಿರ ಶ್ಲೋಕಗಳುಳ್ಳ ಕೃತಿ, ಅಲಂಕಾರಶಾಸ್ತ್ರದಲ್ಲಿಯೂ ಇವನು ಗ್ರಂಥ ರಚನೆ ಮಾಡಿದ್ದಾನೆ

ಹೇಮಚಂದ್ರಾಚಾರ್ಯನು ಪ್ರಮಾಣಮೀಮಾಂಸಾ ಎಂಬ ಜೈನತರ್ಕಕ್ಕೆ ಸಂಬಂಧಿಸಿದ ಗ್ರಂಥವನ್ನೂ ರಚಿಸಿದ್ದಾನೆ ಇದು ಸೂತ್ರರೂಪವಾಗಿದ್ದು ಸ್ವೋಪಜ್ಞ ವೃತ್ತಿಯಿಂದ ಕೂಡಿದೆ. ವೃತ್ತಿಯು ಪ್ರೌಢವಾದ ತರ್ಕಶೈಲಿಯಲ್ಲಿ ಬರೆಯಲ್ಪಟ್ಟಿದೆ.

ತನ್ನ ಈ ಗ್ರಂಥದಲ್ಲಿ ತತ್ತ್ವಾರ್ಥಸೂತ್ರಗಳನ್ನು ರಚಿಸಿದ ಉಮಾಸ್ವಾತಿಗಳನ್ನು "ವಾಚಕ ಮುಖ್ಯ" ಎಂದು ವ್ಯವಹರಿಸಿದ್ದಾನೆ. ಅಕಲಂಕ, ಧರ್ಮಕೀರ್ತಿಗಳ ಉಲ್ಲೇಖವಿದೆ. 'ಪರೀಕ್ಷಾ ಮುಖದ' ಸೂತ್ರವೂ ಉದಾಹೃತವಾಗಿದೆ.

ಪ್ರಮಾಣಲಕ್ಷಣ, ಸಂಶಯ ಅನಧ್ಯವಸಾಯಾದಿಗಳ ಸ್ವರೂಪ, ಪ್ರತ್ಯಕ್ಷ–ಪರೋಕ್ಷ ವಿಭಾಗ, ವ್ಯಾಪ್ತಿ, ಅನುಮಾನ, ಸಾಧ್ಯ, ದೃಷ್ಟಾಂತಾದಿಗಳ ಲಕ್ಷಣ, ಪರಾರ್ಥಾನುಮಾನ ಪ್ರಕಾರ, ಹೇತ್ವಾಭಾಸಗಳು–ಇವನ್ನು ಕುರಿತು ಸೂಕ್ಷ್ಮವಾದ ವಿವೇಚನೆಯನ್ನು ಹೇಮಚಂದ್ರನು ಮಾಡಿದ್ದಾನೆ. 'ಸರ್ವಾರ್ಥಗ್ರಹಣಂ ಮನಃ' (೧–೧–೨೪) ಎಂಬ ಸೂತ್ರದಲ್ಲಿ ಮನಸ್ಸು ದ್ರವ್ಯಮನಃ, ಭಾವಮನಃ–ಎಂದು ಎರಡು ವಿಧವೆಂದೂ, ದ್ರವ್ಯಮನಸ್ಸು ಪುದ್ಗಲರಚಿತ ವೆಂದೂ, ಭಾವಮನಸ್ಸು ಆತ್ಮನ ಅರ್ಥಗ್ರಹಣೋನ್ಮುಖವಾದ ವ್ಯಾಪಾರವಿಶೇಷವೆಂದೂ ಪ್ರತಿಪಾದಿತವಾಗಿದೆ. ಅಲ್ಲಲ್ಲಿ ಸಾಂಖ್ಯ, ನೈಯಾಯಿಕ, ಜೈಮಿನೀಯರ ಮತಗಳ ನಿರಾಕರಣೆ ಇದೆ. ಈ ಗ್ರಂಥವು ಪೂರ್ತಿಯಾಗಿ ಉಪಲಬ್ಧವಾಗಿಲ್ಲ.

ಅಲ್ಲದೆ ಹೇಮಚಂದ್ರನು ಅನೇಕಾಂತವಾದವನ್ನು ನಿರೂಪಿಸುವ ಅನ್ಯಯೋಗ ವ್ಯವಚ್ಛೇದಿಕಾ, ಅಯೋಗವ್ಯವಚ್ಛೇದ ಎಂಬ ಎರಡು ದ್ವಾತ್ರಿಂಶಿಕೆಗಳನ್ನು ರಚಿಸಿದ್ದಾನೆ. ಅನ್ಯಯೋಗವ್ಯವಚ್ಛೇದಿಕೆಯ ಮೇಲೆ ಕ್ರಿಸ್ತೀಯ ೧೩ ನೆಯ ಶತಕದಲ್ಲಿದ್ದ ಮಲ್ಲಿಷೇಣಸೂರಿಯು ಸ್ಯಾದ್ವಾದಮಂಜರಿ ಎಂಬ ವಿಸ್ತಾರವಾದ ಟೀಕೆಯನ್ನು ಬರೆದಿದ್ದಾನೆ. ಇದರಲ್ಲಿ ನ್ಯಾಯ, ವೈಶೇಷಿಕ, ಪೂರ್ವಮೀಮಾಂಸಾ, ಅದ್ವೈತವೇದಾಂತ, ಬೌದ್ಧ ಮತ್ತು ಚಾರ್ವಾಕ ಮತಗಳ ಸಮಾಲೋಚನೆ ಇದೆ. ಆದ್ದರಿಂದ ಸ್ಯಾದ್ವಾದಮಂಜರಿಯು ತುಲನಾತ್ಮಕ ಅಧ್ಯಯನಕ್ಕೆ ಉಪಯುಕ್ತವಾದ ಉತ್ತಮ ಗ್ರಂಥವಾಗಿದೆ. ಜಿನಪ್ರಭಸೂರಿಯ ನೆರವಿನಿಂದ ಈ ಗ್ರಂಥವನ್ನು ಕ್ರಿ. ಶ. ೧೨೯೨ರಲ್ಲಿ ಮಲ್ಲಿಷೇಣಸೂರಿಯು ರಚಿಸಿದನೆಂದು ತಿಳಿದು ಬರುತ್ತದೆ.

## ೧೫. ಆಶಾಧರಸೂರಿ (ಕ್ರಿ. ಶ. ೧೨೪೦)

ಇವರು ಧಾರನಗರದಲ್ಲಿ ವಿದ್ಯಾಭ್ಯಾಸ ಮಾಡಿದರೆಂದೂ, ಗೃಹಸ್ಥರಾಗಿಯೇ ಉಳಿದಿದ್ದ ರೆಂದೂ ತಿಳಿದು ಬರುತ್ತದೆ. ಪ್ರಸಿದ್ಧನಾದ ಬಿಲ್ಹಣಕವಿ ಇವರ ಮಿತ್ರನಾಗಿದ್ದನೆಂದು ಗೊತ್ತಾಗುತ್ತದೆ. ಆಶಾಧರ ಸೂರಿಗಳು ಸುಮಾರು ೨೦ ಕೃತಿಗಳನ್ನು ರಚಿಸಿದ್ದಾರೆ. ಅವುಗಳಲ್ಲಿ ಸಾಗಾರಧರ್ಮಾಮೃತ, ಅನಾಗಾರಧರ್ಮಾಮೃತ- ಎಂಬೆರಡು ಕೃತಿಗಳು ಸುಪ್ರಸಿದ್ಧವಾದವು.

ಸಾಗಾರ ಎಂದರೆ ಗೃಹಸ್ಥ. ಅನಾಗಾರನೆಂದರೆ ಯತಿ ಇವರಿಬ್ಬರ ಧರ್ಮವನ್ನು ಪ್ರತಿಪಾದಿಸತಕ್ಕ ಕೃತಿಗಳಿವು. ಸಂಲಭವಾದ ಶ್ಲೋಕಗಳಲ್ಲಿ ರಚಿತವಾಗಿವೆ. ಆಶಾಧರಸೂರಿಗಳೇ ಇವುಗಳಿಗೆ ವ್ಯಾಖ್ಯಾನಗಳನ್ನು ಬರೆದಿದ್ದಾರೆ. ಸಮ್ಯಕ್‌ಚಾರಿತ್ರದ ವಿಸ್ತೃತ ನಿರೂಪಣೆಯೇ ಈ ಗ್ರಂಥಗಳಲ್ಲಿ ಪ್ರತಿಪಾದ್ಯವಾದುದು. ಮನುಸ್ಮೃತಿ ಮೊದಲಾದ ಸ್ಮೃತಿಗ್ರಂಥಗಳಿಗೆ ಸದೃಶವಾದ ಧಾರ್ಮಿಕ ಗ್ರಂಥವಿದು.

## ೧೬: ಧರ್ಮಭೂಷಣಯತಿ(ಕ್ರಿ. ಶ. ಸು. ೧೪೫೦)

ಈತನ ನ್ಯಾಯದೀಪಿಕಾ ಎಂಬ ಕೃತಿ ಜೈನತರ್ಕವನ್ನು ಅಭ್ಯಾಸಮಾಡತಕ್ಕವರಿಗೆ ತುಂಬ ಉಪಯುಕ್ತವಾದುದು. ಇದು ಅನ್ನಂಭಟ್ಟನ ತರ್ಕಸಂಗ್ರಹದೀಪಿಕೆಗೆ ಸದೃಶವಾದ ಸರಳ ಗ್ರಂಥ. ಆದರೆ ಪ್ರಮಾಣಗಳ ವಿಷಯವನ್ನು ಮಾತ್ರ ಜೈನಶಾಸ್ತ್ರಾನುಗುಣವಾಗಿ ಇದರಲ್ಲಿ ಪ್ರತಿಪಾದಿಸಲಾಗಿದೆ. ಭಟ್ಟ, ಪ್ರಾಭಾಕರ, ಸೌಗತಾದಿಗಳ ಮತವನ್ನು ಸರಳ ಶೈಲಿಯಲ್ಲಿ ಉಲ್ಲೇಖಿಸಿ ನಿರಾಕರಿಸಲಾಗಿದೆ. ಸಮಂತಭದ್ರ, ಉದಯನಾಚಾರ್ಯ–ಮೊದಲಾದ ಪ್ರಸಿದ್ಧ ದಾರ್ಶನಿಕರನ್ನು ಧರ್ಮಭೂಷಣಯತಿಯು ಇದರಲ್ಲಿ ಉಲ್ಲೇಖಿಸಿದ್ದಾನೆ.

ಸುಮಾರು ಕ್ರಿ. ಶ. ೧೫ ನೆಯ ಶತಮಾನದಲ್ಲಿದ್ದಿರಬಹುದಾದ ವಿಮಲದಾಸನು ಸಪ್ತಭಂಗೀ ತರಂಗಿಣಿಯನ್ನೂ, ಶುಭಚಂದ್ರನು ಸಂಶಯವದನವಿದಾರಣವನ್ನೂ, ಜಯಸಿಂಹ ಸೂರಿಯು ನ್ಯಾಯ ಸಾರದೀಪಿಕೆಯನ್ನೂ, ಬರೆದಿದ್ದಾರೆ. ಶುಭವಿಜಯನ (೧೭ನೆಯ ಶತಮಾನ) ಸ್ಯಾದ್ವಾದಮಾಲಾ, ವಿನಯವಿಜಯನ (೧೭ನೆಯ ಶತಮಾನ) ನಯಕರ್ಣಿಕಾ–ಇವು ತರ್ಕಗ್ರಂಥಗಳಲ್ಲಿ ಉಲ್ಲೇಖನೀಯವಾದವು.

## ೧೭. ಯಶೋವಿಜಯ (ಕ್ರಿ. ಶ. ೧೭೫೦)

ಈತನು ಜೈನನ್ಯಾಯವನ್ನು ಯಶಸ್ವಿಯಾಗಿ ವಿಸ್ತರಿಸಿದನು. ಯಶೋವಿಜಯನು ದೊಡ್ಡ ತರ್ಕಪಂಡಿತನೆಂಬುದಕ್ಕೆ ಇವನ ಗ್ರಂಥಗಳೇ ಸಾಕ್ಷಿಯಾಗಿವೆ. ಜೈನತರ್ಕದಲ್ಲಿ ನವೀನ ನ್ಯಾಯ ಶೈಲಿಯನ್ನು ತಂದು ಒಂದು ನವೀನ ಮಾರ್ಗವನ್ನು ನಿರ್ಮಿಸಿದ ಕೀರ್ತಿ ಯಶೋವಿಜಯನಿಗೆ ಸಲ್ಲುತ್ತದೆ. ಇವನು ತರ್ಕದಲ್ಲಿಯೂ ಜೈನಸಿದ್ಧಾಂತದಲ್ಲಿಯೂ ಹಲವಾರು ಗ್ರಂಥಗಳನ್ನು ರಚಿಸಿದ್ದಾನೆ. ಅನೇಕಾಂತವ್ಯವಸ್ಥಾ, ಜೈನತರ್ಕಭಾಷಾ, ಸಪ್ತಭಂಗೀನಯ ಪ್ರದೀಪ, ನಯೋಪದೇಶ, ನಯರಹಸ್ಯ, ಜ್ಞಾನಸಾರಪ್ರಕರಣ, ಅನೇಕಾಂತಪ್ರವೇಶ, ವಾದಮಾಲಾ–ಇವು ತರ್ಕದಲ್ಲಿ ಉಲ್ಲೇಖನೀಯವಾದ ಗ್ರಂಥಗಳು. ಅಲ್ಲದೆ ಜ್ಞಾನಬಿಂದು, ನ್ಯಾಯಖಂಡಖಾದ್ಯ, ನ್ಯಾಲೋಕಗಳು ನವೀನ ತರ್ಕಶೈಲಿಯಲ್ಲಿ ಬರೆದ ಪ್ರೌಢಗ್ರಂಥಗಳು.

## ೧೮. ಅಭಿನವಚಾರುಕೀರ್ತಿ ಪಂಡಿತಾಚಾರ್ಯ (ಕ್ರಿ.ಶ. ೧೮೩೫)

ಇವರು ಶ್ರವಣಬೆಳಗೊಳದ ಮಠದ ಅಧ್ಯಕ್ಷರಾಗಿದ್ದರು. ಪ್ರಮೇಯರತ್ನಾಲಂಕಾರ ಎಂಬ ಟೀಕಾಗ್ರಂಥವನ್ನು ಬರೆದಿದ್ದಾರೆ. ಇದು ಮಾಣಿಕ್ಯನಂದಿಯ ಪರೀಕ್ಷಾಮುಖಸೂತ್ರಗಳ ಮೇಲೆ ನವ್ಯನ್ಯಾಯಶೈಲಿಯಲ್ಲಿ ಬರೆದ ಪ್ರೌಢಟೀಕೆಯಾಗಿದೆ. ಈ ಗ್ರಂಥದಲ್ಲಿ ಆರು ಪರಿಚ್ಛೇದಗಳಿವೆ. ವೇದಾಂತಿ, ಮೀಮಾಂಸಕ, ನೈಯಾಯಿಕ, ಯೋಗಿಗಳ ಮತಗಳನ್ನು ಅಲ್ಲಲ್ಲಿ ಉಲ್ಲೇಖಿಸಿ ನಿಶಿತವಾದ ಯುಕ್ತಿಗಳಿಂದ ಅವುಗಳನ್ನು ಖಂಡಿಸಲಾಗಿದೆ. ಅನುಮಾನ ಪ್ರಕರಣವು ವಿಸ್ತೃತವಾದಿದ್ದು ಹೇತ್ವಾಭಾಸಗಳ ಸ್ವರೂಪವನ್ನು ನಿರೂಪಿಸಿದೆ. ಛಲ, ಜಾತಿ, ನಿಗ್ರಹಸ್ಥಾನಗಳ ನಿರಸನವನ್ನು ಮಾಡಲಾಗಿದೆ.

ಅರ್ಥಪ್ರಕಾಶಿಕಾ, ಸಪ್ತಭಂಗೀತರಂಗಿಣೀ–ಮೊದಲಾದ ಅನೇಕ ಕೃತಿಗಳನ್ನು ಇವರು ನಿರ್ಮಿಸಿದ್ದಾರೆ.

## ಉಪಸಂಹಾರ

ಪ್ರಾಕೃತ ಭಾಷೆಯಲ್ಲಿಯೇ ಹುಟ್ಟಿ ಬೆಳೆದಿದ್ದ ಜೈನ ಸಿದ್ಧಾಂತವು ಸಂಸ್ಕೃತ ಭಾಷೆಯತ್ತ ಒಲವು ತೋರಿದುದು ಐತಿಹಾಸಿಕ ಕಾರಣಗಳಿಂದ ಎನ್ನಬಹುದಾಗಿದೆ. ಉತ್ತರ ಭಾರತದಲ್ಲಿ ಶೌರಸೇನೀ, ಮಾಗಧಿಗಳು ಜನಸಾಮಾನ್ಯರಿಗೆ ಪರಿಚಿತ ಭಾಷೆಗಳಾಗಿದ್ದರೂ ದಕ್ಷಿಣ ಭಾರತಕ್ಕೆ ಅವು ಅನ್ಯ ಭಾಷೆಗಳೇ ಆಗಿದ್ದವು ವಿಶೇಷವಾಗಿ ಕರ್ಣಾಟಕ ಮತ್ತು ತಮಿಳುನಾಡುಗಳಲ್ಲಿ ಜೈನ ಮತವು ಪ್ರಬಲಿಸಿದಾಗ, ಇಲ್ಲಿಯ ವಿದ್ವಾಂಸರಿಗೆ ಸಂಸ್ಕೃತವೇ ಶಾಸ್ತ್ರರಚನೆಗೆ ಹೆಚ್ಚು ಅನುಕೂಲಕರವೆಂದು ತೋರಿತು. ಇದು ಸಹಜವೇ ಆಗಿದೆ. ಅನ್ಯದರ್ಶನಗಳು ಸಂಸ್ಕೃತದಲ್ಲಿದ್ದುದರಿಂದ ಆ ದರ್ಶನಗಳಂತೆ ವಿದ್ವನ್ಮಾನ್ಯತೆಯನ್ನು ಗಳಿಸಲು ಜೈನವಿದ್ವಾಂಸರು ಆ ಭಾಷೆಯನ್ನೇ ಅವಲಂಬಿಸಿದರು. ಸೂಕ್ಷ್ಮವಾದ ದಾರ್ಶನಿಕ ವಿಷಯಗಳನ್ನು ನಿರೂಪಿಸಲು ಪಾರಿಭಾಷಿಕ ಶಬ್ದಗಳಿಂದ ಪರಿಪುಷ್ಟವಾಗಿದ್ದ ಸಂಸ್ಕೃತವೇ ಹೆಚ್ಚು ಉಪಯುಕ್ತವೆನಿಸಿತು. ಜೈನಸಿದ್ಧಾಂತವನ್ನು ಪೋಷಿಸಿ ರಕ್ಷಿಸುವುದೇ ಜೈನತರ್ಕದ ಬೆಳವಣಿಗೆಯ ಮುಖ್ಯ ಉದ್ದೇಶವಾಗಿತ್ತು. ಈ ಗ್ರಂಥಗಳಲ್ಲಿ ಎಲ್ಲೆಡೆಯೂ ಪ್ರಧಾನವಾಗಿ ವಿಜೃಂಭಿಸುವ ಈ ಮೂರು ವಿಶೇಷಗಳು ಗಮನಾರ್ಹವಾದವು. ಯಾವುವೆಂದರೆ,

1. ಬೌದ್ಧಮತದ ಖಂಡನೆ.
2. ವೇದಪ್ರಾಮಾಣ್ಯದ ನಿರಾಕರಣೆ.
3. ಅನೇಕಾಂತವಾದ ಸ್ಥಾಪನೆ.

ಭಗವಾನ್ ಮಹಾವೀರರ ಸಮಕಾಲದಲ್ಲಿ ಅವರ ನೆರೆ ನಾಡಿನಲ್ಲಿಯೇ ಬೌದ್ಧಮತ ಪ್ರಬಲಿಸುತ್ತಿತ್ತು ಎಂಬುದನ್ನು ನಾವು ಲಕ್ಷ್ಯದಲ್ಲಿಡಬೇಕು. ಪ್ರಬಲಿಸುತ್ತಿದ್ದ ಬೌದ್ಧಪಕ್ಷದ ನೈರಾತ್ಮ್ಯವಾದವೇ ಜೈನ ವಿದ್ವಾಂಸರ ಖಂಡನೆಗೆ ಮುಖ್ಯ ಗುರಿಯಾಯಿತು ಜಿನವಾಣಿಯ ಪ್ರಾಮಾಣ್ಯವನ್ನು ಸ್ಥಾಪಿಸುವುದಕ್ಕೆ ವೇದಪ್ರಾಮಾಣ್ಯವನ್ನು ನಿರಾಕರಿಸುವುದು ಅವಶ್ಯಕವಾಯಿತು. ಇತರ ದರ್ಶನಗಳೆಲ್ಲವೂ ಅನೇಕಾಂತ ವಾದವನ್ನು ಅಂಗೀಕರಿಸಲಿಲ್ಲವಾದ್ದರಿಂದ 'ಸರ್ವಮನೇಕಾಂತಂ' ಎಂಬ ಮೂಲತತ್ತ್ವದರಕ್ಷಣೆಗಾಗಿ ಅನೇಕಾಂತವಾದದ ಸ್ಥಾಪನೆಗೆ ವಿಶೇಷವಾಗಿ ಯತ್ನಿಸಬೇಕಾಯಿತು.

---

## ೭

# ಪೂರ್ವಮೀಮಾಂಸಾದರ್ಶನ

ಮೀಮಾಂಸಾ ಶಾಸ್ತ್ರವೆಂದರೆ ವೇದಾರ್ಥ ವಿಚಾರ ಶಾಸ್ತ್ರ. ಈ ಪದವನ್ನು ಈ ಅರ್ಥದಲ್ಲಿ ವೇದಭಾಗಗಳಲ್ಲಿ ಪ್ರಯೋಗಿಸಿದೆ. 'ಉತ್ಸೃಜ್ಯಾಂ ನೋತ್ಸೃಜ್ಯಾಂ ಇತಿ ಮೀಮಾಂಸಂತೇ ಬ್ರಹ್ಮವಾದಿನಃ ತದ್ಧಾಹುಃ ಉತ್ಸೃಜ್ಯಾಮೇವೇತಿ' ಎಂದು ತೈತ್ತಿರೀಯ ಸಂಹಿತೆಯಲ್ಲಿಯೂ (೭-೫-೭-೧). 'ಬ್ರಾಹ್ಮಣಃ ಪಾತ್ರೇ ನ ಮೀಮಾಂಸೇತ' ಎಂದು ತಾಂಡ್ಯಬ್ರಾಹ್ಮಣದಲ್ಲಿಯೂ (೬-೫-೯), 'ಉದಿತೇ ಹೋತವ್ಯಂ ಅನುದಿತೇ ಇತಿ ಮೀಮಾಂಸಂತೇ' ಎಂದು ಕೌಷೀತಕಿ ಬ್ರಾಹ್ಮಣದಲ್ಲಿಯೂ (೨-೯) ಈ ಪದವನ್ನು ಬಳಸಿದೆ. ಉಪನಿಷತ್ತುಗಳಲ್ಲಿ ಈ ಪದದ ಬಳಕೆ ಇದೆ. 'ಮಹಾಶ್ರೋತ್ರಿಯಾಃ ಸಮೇತ್ಯ ಮೀಮಾಂಸಾಂಚಕ್ರುಃ' ಎಂದು ಛಾಂದೋಗ್ಯ ಉಪನಿಷತ್ತಿನಲ್ಲಿಯೂ (೫-೧೧-೧), 'ಸೈಷಾ ಆನಂದಸ್ಯ ಮೀಮಾಂಸಾ ಭವತಿ' ಎಂದು ತೈತ್ತಿರೀಯ ಉಪನಿಷತ್ತಿನಲ್ಲಿಯೂ (ಬ್ರಹ್ಮವಲ್ಲಿ ೮ನೆಯ ಅನುವಾಕ), 'ಅಥನು ಮೀಮಾಂಸ್ಯ ಮೇವ ತೇ ಮನ್ಯೇ ವಿದಿತಂ' ಎಂದು ಕೇನೋಪನಿಷತ್ತಿನಲ್ಲಿಯೂ (೨-೧) ಈ ಪದದ ಪ್ರಯೋಗವಿದೆ. ಪ್ರಾಚೀನವಾದ ಧರ್ಮಶಾಸ್ತ್ರಗಳಲ್ಲಿ 'ಮೀಮಾಂಸೇತ', 'ಮೀಮಾಂಸಾ', ಎಂಬ ಪದಗಳ ಬಳಕೆ ಕಂಡು ಬರುತ್ತದೆ. ಧರ್ಮ ವಿಚಾರದಲ್ಲಿ ಹಾಗೂ ಯಾಗ ವಿಚಾರದಲ್ಲಿ ಉಂಟಾದ ಸಂಶಯಂಗಳನ್ನು ಕುರಿತಂತೆ ಚರ್ಚೆಗಳು ನಡೆಯುತ್ತಿದ್ದವೆಂಬುದನ್ನು ಇದರಿಂದ ತಿಳಿಯಬಹುದು.

ಪೂರ್ವಮೀಮಾಂಸಾ ದರ್ಶನಕ್ಕೆ 'ಕರ್ಮಮೀಮಾಂಸಾ', ಅಥವಾ 'ಧರ್ಮಮೀಮಾಂಸಾ' ಎಂಬ ಹೆಸರು ರೂಢಿಯಲ್ಲಿದೆ. ಉಪನಿಷತ್ತುಗಳಿಗೂ ಹಿಂದಿನ ವೇದಭಾಗಗಳ ಉಪದೇಶಕ್ಕೆ ಈ ದರ್ಶನ ಸಂಬಂಧಿಸಿದೆ ಎಂಬುದನ್ನು 'ಪೂರ್ವಮೀಮಾಂಸಾ' ಎಂಬ ಪದವೇ ಸೂಚಿಸುತ್ತದೆ. ಧರ್ಮಸ್ವರೂಪವನ್ನು ನಿರ್ಣಯಿಸುವಾಗ ಚಾರ್ವಾಕ, ಬೌದ್ಧ ಮೊದಲಾದವರ ಅಭಿಪ್ರಾಯಂಗಳನ್ನು ನಿರಾಕರಿಸಿ ವೇದ ಪ್ರಾಮಾಣ್ಯವನ್ನು ಸ್ಥಾಪಿಸಿದರೇ ಧರ್ಮ ನಿರೂಪಣೆಯಾಗುವ ಕಾರಣ ಈ ದರ್ಶನ ಮೊಟ್ಟ ಮೊದಲು ವೇದ ಪ್ರಾಮಾಣ್ಯವನ್ನು ಸ್ಥಾಪಿಸುತ್ತದೆ. ಇತರರ 'ಅನಾತ್ಮ ದರ್ಶನ'ಕ್ಕೆ ಪ್ರತಿಯಾಗಿ 'ಆತ್ಮವಾದ'ವನ್ನು ಸ್ಥಾಪನೆ ಮಾಡಿತು ಇದು.

ವೇದ ವಿಹಿತವಾದ ಯಾಗಾನುಷ್ಠಾನಗಳನ್ನು ಕುರಿತಂತೆ ಅನೇಕ ನಿಯಮಗಳು ರೂಪುಗೊಂಡು ಪರಂಪರೆಯಾಗಿ ಬೆಳೆದು ಬಂದಿದ್ದವು. ಬ್ರಾಹ್ಮಣ ಗ್ರಂಥಗಳಲ್ಲಿ ಅಲ್ಲಲ್ಲಿ ಇಂಥ ನಿಯಮಗಳ ನಿರೂಪಣೆ ಮತ್ತು ಯಾಗಾದಿ ಕಾರ್ಯಕಲಾಪಗಳ ವಿವರಣೆ ಕಂಡುಬರುತ್ತದೆ.

ಕರ್ಮಾಚರಣೆಗೆ ಸಂಬಂಧಿಸಿದಂತೆ ಅನೇಕ ಸಂದೇಹಗಳೂ ಸಹಜವಾಗಿಯೇ ಉಂಟಾಗುತ್ತಿದ್ದವು, ಅಂಥ ಸಂಶಯಗಳನ್ನು ಕುರಿತಂತೆ ಚರ್ಚೆಗಳು, ವಿಚಾರ ವಿವೇಚನೆಗಳು ಮತ್ತು ತೀರ್ಮಾನಗಳು ಬೆಳೆಯುತ್ತಾ ಬಂದವು. ಇವೆಲ್ಲಾ ಮೀಮಾಂಸಾ ಶಾಸ್ತ್ರದ ಉಗಮವನ್ನು ಸೂಚಿಸುತ್ತವೆ. ಸ್ವಯಂ ಪ್ರಮಾಣವಾದ ವೇದವೂ ಶಬ್ದಮಯವಾದುದು. ವೇದವಾಕ್ಯಗಳ ನಿಜವಾದ ಅರ್ಥವನ್ನು ನಿರ್ಣಯ ಮಾಡುವ ಅವಶ್ಯಕತೆ ಇದ್ದೇ ಇದೆ. ಶ್ರುತಿಯ ಅರ್ಥವನ್ನು ಹೇಗೆ ಅರಿಯಬೇಕೆಂಬ ವಿವೇಚನೆಯೇ ಮೀಮಾಂಸೆ. ಶ್ರುತಿವಾಕ್ಯಗಳ ಹಿನ್ನೆಲೆಯಲ್ಲಿರುವ ಭಾವನೆಯನ್ನು ಗ್ರಹಿಸಲು ಮಾಡುವ ಪ್ರಯತ್ನ ಇದು. ಈ ಪ್ರಯತ್ನದ ಫಲವಾಗಿ ಶ್ರುತ್ಯರ್ಥಗಳನ್ನು ನಿರ್ಣಯಿಸಲು ಬಳಸುವ 'ನ್ಯಾಯ'ಗಳನ್ನು ರೂಪಿಸಲಾಯಿತು. 'ನ್ಯಾಯಗಳು' ಎಂದು ಕರೆಯಲ್ಪಡುವ ಈ ನಿಯಮಗಳು ಅತ್ಯಂತ ವ್ಯಾಪಕವಾಗಿ ವೇದಾರ್ಥ ನಿರ್ಣಯಕ್ಕೆ ಮಾತ್ರವಲ್ಲವೆ ಇತರ ಕೃತಿಗಳ ಅರ್ಥ ನಿರ್ಣಯಕ್ಕೂ ಅಪಾರವಾಗಿ ಸಹಾಯ ಮಾಡುತ್ತವೆ. ಧರ್ಮಶಾಸ್ತ್ರಗಳ ಅರ್ಥ ನಿರ್ಣಯಕ್ಕಂತೂ ಇವುಗಳಿಂದ ಬಹಳ ಉಪಕಾರವಾಗಿದೆ.

ಮೀಮಾಂಸೆಯು ಮುಖ್ಯವಾಗಿ ಯಾಗಾದಿಗಳ ಪರಿಶೀಲನೆ ನಡೆಸುತ್ತದೆ. ಬ್ರಾಹ್ಮಣ ಗ್ರಂಥಗಳೇ ಮೊದಲಾದುವುಗಳಲ್ಲಿ ಸೂಕ್ಷ್ಮವಾಗಿ ವಿವೇಚಿಸಲ್ಪಟ್ಟ ವಿಚಾರಗಳೆಲ್ಲಾ ಮುಂದಿನ ಕಾಲದಲ್ಲಿ ಚರ್ಚೆಗೊಳಗಾಗಿ ವ್ಯವಸ್ಥಿತವಾದ ರೂಪವೊಂದನ್ನು ಪಡೆದುದು ಮೀಮಾಂಸಾ ಶಾಸ್ತ್ರದಲ್ಲಿ, ಪ್ರಾಚೀನವಾದ ಕರ್ಮಾಚರಣೆಗಳಿಗೆ ವ್ಯಾಪಕವಾದ ನಿರೂಪಣೆಯನ್ನು ಈ ಶಾಸ್ತ್ರ ಮಾಡಿದೆ. ಹಾಗೆಯೇ ಅನೇಕ ಬದಲಾವಣೆಗಳನ್ನು ಉಂಟು ಮಾಡಿದೆ. ಈ ದರ್ಶನ ಬೆಳೆದ ಹಾಗೆ ಇದರ ದೃಷ್ಟಿಯಲ್ಲಿಯೂ ಬದಲಾವಣೆ ಆಯಿತು. ಇದು ಇತರ ದರ್ಶನಗಳಂತೆ ಮೋಕ್ಷದ ಆದರ್ಶವನ್ನು ಮುಂದಿಟ್ಟಿತು. ಅದರಿಂದ ದರ್ಶನದ ಸ್ಥಾನವನ್ನು ಪಡೆಯಿತು, ಹೀಗೆ ಮಾಡದೆ ಯಾಗಾದಿ ಕರ್ಮಾನುಷ್ಠಾನದಿಂದ ಬರುವ ಸ್ವರ್ಗವನ್ನೇ ಪುರುಷಾರ್ಥವೆಂದು ಭಾವಿಸಿದ್ದರೆ ಅದು ದರ್ಶನದ ಮಟ್ಟಕ್ಕೇರುತ್ತಿರಲಿಲ್ಲ. ಕೇವಲ ಕರ್ಮ ವಿವೇಚನೆಯೇ ಆಗಿ ಉಳಿಯುತ್ತಿತ್ತು.

ಈ ಸಿದ್ಧಾಂತದ ಪ್ರಧಾನವಾದ ಪ್ರಮಾಣ ಗ್ರಂಥ ಜೈಮಿನಿಯ ಪೂರ್ವಮೀಮಾಂಸಾ ಸೂತ್ರಗಳು. ಜೈಮಿನಿಗಳಿಗಿಂತ ಹಿಂದೆ ಅನೇಕ ಸೂತ್ರಕಾರರು ಇದ್ದರೆಂಬುದು ಜೈಮಿನಿಯ ಕೃತಿ ಯಿಂದಲೇ ನಮಗೆ ಕಂಡು ಬರುತ್ತದೆ. ಈ ಕೃತಿಯ ಕಾಲವನ್ನು ನಿರ್ದಿಷ್ಟವಾಗಿ ಹೇಳುವುದು ಕಷ್ಟ. ತತ್ತ್ವಪರವಾದ ಸೂತ್ರ ಗ್ರಂಥಗಳಲ್ಲೆಲ್ಲಾ ಈ ಕೃತಿ ಅತ್ಯಂತ ದೊಡ್ಡದು. ಮೀಮಾಂಸಾ ಶಾಸ್ತ್ರಕ್ಕೆ ಈ ಸೂತ್ರಗಳೇ ಪರಮಾಧಾರವಾಗಿವೆ. ಇವುಗಳ ಮೇಲೆ ಭಾಷ್ಯಗಳು, ವಾರ್ತಿಕಗಳು ಹಾಗೂ ವ್ಯಾಖ್ಯಾನಗಳು ಮುಂದಿನ ಕಾಲದಲ್ಲಿ ರಚಿತವಾದವು. ಶಬರಸ್ವಾಮಿಯ ಭಾಷ್ಯ (ಕ್ರಿ.ಶ. ೨೦೦ ?) ಇವುಗಳಲ್ಲೆಲ್ಲಾ ಅತ್ಯಂತ ಪ್ರಧಾನವಾದುದು. ಇದಕ್ಕಿಂತಲೂ ಹಿಂದಿನ ಕಾಲಕ್ಕೆ ಸೇರಿದ್ದ ಉಪವರ್ಷನ ವೃತ್ತಿ ಇತ್ತೆಂದು ಗೊತ್ತಾಗುತ್ತದೆ, ಇದರಿಂದ

ಉಲ್ಲೇಖಗಳನ್ನು ಶಬರಸ್ವಾಮಿ ತನ್ನ ಭಾಷ್ಯದಲ್ಲಿ ಮಾಡಿದ್ದಾರೆ. ಈ ಕೃತಿಯ ಬಗೆಗೆ ನಮಗೆ ಮತ್ತೇನೂ ತಿಳಿಯದು. ಶಬರಭಾಷ್ಯವನ್ನು ಕುಮಾರಿಲಭಟ್ಟ (ಕಿ ಶ. ೭೦೦) ಮತ್ತು ಪ್ರಭಾಕರಮಿಶ್ರ (ಕಿ.ಶ. ೭೨೦) ಇವರು ಎರಡು ಬೇರೆ ಬೇರೆ ರೀತಿಯಲ್ಲಿ ವಿವರಿಸಿದ್ದಾರೆ. ಪ್ರಭಾಕರನ ಕೃತಿ 'ಬೃಹತೀ'. ಪ್ರಭಾಕರನ ಶಿಷ್ಯನಾದ ಶಾಲಿಕನಾಥಮಿಶ್ರ 'ಋಜುವಿಮಲಾ' ಎಂಬ ವ್ಯಾಖ್ಯಾನವನ್ನು 'ಬೃಹತಿ'ಯ ಮೇಲೆ ರಚಿಸಿದ್ದಾನೆ. 'ಪ್ರಕರಣ ಪಂಚಿಕಾ' ಎಂಬ ತನ್ನ ಕೃತಿಯಲ್ಲಿ ಪ್ರಭಾಕರಮತವನ್ನು ಶಾಲಿಕನಾಥಮಿಶ್ರ ನಿರೂಪಿಸಿದ್ದಾನೆ. ಕುಮಾರಿಲಭಟ್ಟರು 'ಶ್ಲೋಕವಾರ್ತಿಕ', 'ತಂತ್ರವಾರ್ತಿಕ' ಮತ್ತು 'ಟುಪ್‌ಟೀಕಾ' ಎಂಬ ಕೃತಿಗಳಲ್ಲಿ ಶಬರಭಾಷ್ಯದ ಅರ್ಥಗಳನ್ನು ಸ್ವತಂತ್ರವಾಗಿ ನಿರೂಪಿಸಿದ್ದಾರೆ. ಪ್ರಭಾಕರನ ಮತವನ್ನು 'ಗುರುಮತ' ಎಂದೂ, ಕುಮಾರಿಲಭಟ್ಟರ ಮತವನ್ನು 'ಭಾಟ್ಟಮತ' ಎಂದೂ ಕರೆಯುತ್ತಾರೆ ಕುಮಾರಿಲಭಟ್ಟರ ಶಿಷ್ಯರಾದ ಮಂಡನಮಿಶ್ರರು 'ವಿಧಿವಿವೇಕ', 'ಭಾವನಾವಿವೇಕ' ಮೊದಲಾದ ಕೃತಿಗಳನ್ನು ರಚಿಸಿದ್ದಾರೆ ಪಾರ್ಥಸಾರಥಿಮಿಶ್ರರು, (ಕ್ರಿ. ಶ. ೯ನೆಯ ಶತಮಾನ) ತಮ್ಮ 'ನ್ಯಾಯರತ್ನಾಕರ'ದಲ್ಲಿ ಶ್ಲೋಕವಾರ್ತಿಕದ ವಿವರಣೆ ನೀಡಿದ್ದಾರೆ. ಪಾರ್ಥಸಾರಥಿಮಿಶ್ರರ 'ಶಾಸ್ತ್ರದೀಪಿಕಾ' ಮತ್ತು 'ತಂತ್ರರತ್ನ' ಇವು ಭಾಟ್ಟಮತವನ್ನು ನಿರೂಪಿಸುತ್ತವೆ. ಮಾಧವಾಚಾರ್ಯರ (ಕ್ರಿ.ಶ ೧೩೫೦) 'ಜೈಮಿನಿನ್ಯಾಯಮಾಲಾವಿಸ್ತರ' ಹಾಗೂ ಖಂಡದೇವನ (ಕ್ರಿ.ಶ. ೧೬೫೦) 'ಭಾಟ್ಟದೀಪಿಕಾ' ಇವು ಜೈಮಿನಿಯ ಸೂತ್ರಕ್ರಮವನ್ನನುಸರಿಸಿ ವಿವರಣೆ ನೀಡುವ ಕೃತಿಗಳು. ಈ ಸಿದ್ಧಾಂತವನ್ನು ವಿವರಿಸುವ ಇನ್ನೊಂದು ಪ್ರಮುಖ ಕೃತಿ ಆಪದೇವನ (ಕ್ರಿ ಶ ೧೬೮೦-೧೬೫೦) 'ಮೀಮಾಂಸಾ ನ್ಯಾಯ ಪ್ರಕಾಶ' ಲೌಗಾಕ್ಷಿಭಾಸ್ಕರನ (ಕ್ರಿ. ಶ. ೧೬೦೦) ಅರ್ಥಸಂಗ್ರಹ ಈ ಸಿದ್ಧಾಂತದ ಸಾರಸಂಗ್ರಹ ಭಾಟ್ಟ ಸಂಪ್ರದಾಯಕ್ಕೆ ಸೇರಿದ ಇನ್ನೊಂದು ಗಮನಾರ್ಹವಾದ ಕೃತಿ 'ಮಾನಮೇಯೋದಯಃ'.

ಮೀಮಾಂಸಾಶಾಸ್ತ್ರದಲ್ಲಿ ಕಂಡುಬರುವ ಈ ಎರಡು ಮತಗಳಲ್ಲದೆ 'ಮಿಶ್ರಮತ'ವೆಂದು ಕರೆಯಲಾದ ಮತ್ತೊಂದು ಮತವಿದ್ದಿತೆಂದೂ, ಅದು 'ಮುರಾರಿಮಿಶ್ರ'ನಿಗೆ (ಕ್ರಿ.ಶ.೧೩ನೆಯಶತಮಾನ) ಸಂಬಂಧಿಸಿತ್ತೆಂದೂ ಹೇಳುತ್ತಾರೆ. ಆದರೆ ಅದು ಪೂರ್ಣವಾಗಿ ಲುಪ್ತವಾಗಿ ಹೋಗಿದೆ. ಈಗ ಉಳಿದು ಬಂದಿರುವ ಎರಡು ಶಾಖೆಗಳೆಂದರೆ ಪ್ರಾಭಾಕರ ಮತ್ತು ಭಾಟ್ಟಮತ ಎಂಬುವೇ. ಮುಂದೆ ಈ ಸಿದ್ಧಾಂತ ಹೆಚ್ಚು ಬೆಳೆಯಲಿಲ್ಲ. ವೇದಾಂತದರ್ಶನ ಜನತೆಯ ದರ್ಶನವಾಗಿ ಇದನ್ನು ಹಿಂದಿಕ್ಕಿದುದು ಇದಕ್ಕೆ ಕಾರಣವಿರಬಹುದು.

## ಪದಾರ್ಥ ವಿಭಾಗ

ಕುಮಾರಿಲರ ಮತಕ್ಕನುಸಾರವಾಗಿ ಈ ಸಿದ್ಧಾಂತದಲ್ಲಿ ದ್ರವ್ಯ, ಜಾತಿ, ಗುಣ, ಕ್ರಿಯಾ ಮತ್ತು ಅಭಾವ ಎಂದು ಐದು ಪದಾರ್ಥಗಳಿವೆ. ಪ್ರಭಾಕರರ ಮತಕ್ಕನುಸಾರವಾಗಿ

ದ್ರವ್ಯ, ಗುಣ, ಕರ್ಮ, ಜಾತಿ, ಶಕ್ತಿ, ಸಾದೃಶ್ಯ, ಸಂಖ್ಯಾ ಮತ್ತು ಸಮವಾಯ ಎಂಬ ಎಂಟು ಪದಾರ್ಥಗಳನ್ನು ನಿರೂಪಿಸುತ್ತಾರೆ. ಈ ಎಂಟು ಪದಾರ್ಥಗಳಲ್ಲಿ ಶಕ್ತಿ ಮತ್ತು ಸಂಖ್ಯಾ ಎಂಬುವನ್ನು ಗುಣದಲ್ಲಿಯೂ, ಸಾದೃಶ್ಯವನ್ನು ದ್ರವ್ಯ ಗುಣ ಜಾತಿಗಳಲ್ಲಿಯೂ ಭಾಟ್ಟರು ಅಂತರ್ಭಾವ ಮಾಡುತ್ತಾರೆ. ಭಾಟ್ಟ ಸಂಪ್ರದಾಯಕ್ಕನುಸಾರವಾಗಿ ಸಮವಾಯ ಪ್ರತ್ಯೇಕ ಪದಾರ್ಥವಲ್ಲ.

ದ್ರವ್ಯ :—ಪರಿಮಾಣವೆಂಬ ಗುಣಕ್ಕೆ ಆಶ್ರಯವಾದುದು ದ್ರವ್ಯ. ಇದು ಪೃಥಿವೀ, ಅಪ್ಪು, ತೇಜಸ್ಸು, ವಾಯು, ತಮಸ್ಸು, ಆಕಾಶ, ಕಾಲ, ದಿಕ್ಕು, ಆತ್ಮಾ, ಮನಸ್ಸು ಮತ್ತು ಶಬ್ದ ಎಂದು ಹನ್ನೊಂದು ಬಗೆ. ಇವುಗಳಲ್ಲಿ ಪೃಥಿವ್ಯಪ್ತೇಜಸ್ಸುಗಳು ಪ್ರತ್ಯಕ್ಷಗಳು. ವಾಯು ತ್ವಗಿಂದ್ರಿಯ ಪ್ರತ್ಯಕ್ಷವಾದುದು. ತಮಸ್ಸು ಭಾವರೂಪವಾದ ದ್ರವ್ಯ. ಇವು ಐದು ಅವಯವಿ ದ್ರವ್ಯಗಳು. ಇವುಗಳ ಪರಮಾಣುಗಳು ಇವುಗಳ ಅವಯವಗಳು. ಈ ಪರಮಾಣುಗಳು ನ್ಯಾಯ ವೈಶೇಷಿಕರು ಹೇಳುವ ಪರಮಾಣುಗಳಲ್ಲ. ಆದರೆ ಅವರು ಹೇಳುವ ತ್ರ್ಯಣುಕದಂತಹವು. ಆಕಾಶ, ಕಾಲ ಮತ್ತು ದಿಕ್ಕುಗಳು ನಿತ್ಯವಾದವು ಮತ್ತು ಪ್ರತ್ಯಕ್ಷವಾದವು. ಆತ್ಮವಸ್ತು ಚೈತನ್ಯಾಶ್ರಯವಾಗಿ ಮಾನಸ ಪ್ರತ್ಯಕ್ಷಗಮ್ಯವಾದುದು. ಆತ್ಮರು ಅನೇಕರು, ನಿತ್ಯರು ಮತ್ತು ವಿಭುಗಳು.

ಶಬ್ದ :—ಶ್ರೋತ್ರೇಂದ್ರಿಯದಿಂದ ಮಾತ್ರ ಗ್ರಹಿಸಲ್ಪಡುವ ದ್ರವ್ಯ ಇದು. ಇದೂ ಸಹ ವಿಭು. ಇದು ಅವಯವ ದ್ರವ್ಯವಲ್ಲದ ಕಾರಣ ಆತ್ಮನಂತೆಯೇ ವಿಭು ಎಂದು ಅನುಮಾನ ಮಾಡಿದೆ. ಇದು ನಿತ್ಯವಾದುದು. ಒಂದು ವರ್ಣವು, ಉದಾಹರಣೆಗೆ 'ಕಕಾರ' ಉತ್ಪನ್ನ ವಾಯಿತು ಮತ್ತು ನಷ್ಟವಾಯಿತು ಎಂಬುದರಿಂದ ಅದನ್ನು ಅನಿತ್ಯವೆನ್ನಲಾಗದು. ಕೂಪಖನನಾದಿ ಗಳಿಂದ ನಿತ್ಯವೂ ವಿಭುವೂ ಆದ ಆಕಾಶವು ಹೇಗೆ ಅಭಿವ್ಯಕ್ತವಾಗುತ್ತದೆಯೋ ಹಾಗೆಯೇ ವರ್ಣವೂ ಅಭಿವ್ಯಕ್ತವಾಗುತ್ತದೆ. ಒಂದೇ ವರ್ಣವನ್ನು ಮಂದವಾಗಿಯೋ ತೀವ್ರ ವಾಗಿಯೋ, ತ್ರೀವ್ರತರವಾಗಿಯೋ ಉಚ್ಚರಿಸಿದರೂ ಆ ವರ್ಣ ಬೇರೆಯದಾಗುವುದಿಲ್ಲ. ಮಣಿ, ಕನ್ನಡಿ, ಕತ್ತಿ ಮೊದಲಾದವುಗಳಲ್ಲಿ ಒಂದೇ ಮುಖ ಪ್ರತಿಬಿಂಬಿತವಾದಾಗ ಆ ಪ್ರತಿಬಿಂಬಗಳು ಬೇರೆ ಬೇರೆ ಧರ್ಮ ಹೊಂದಿರುವಂತೆ ಕಂಡು ಬಂದರೂ ಹೇಗೆ ಮುಖಭೇದವಿಲ್ಲವೋ ಹಾಗೆಯೇ ಇಲ್ಲಿಯೂ ವರ್ಣಭೇದವಿಲ್ಲ. ವರ್ಣಾತ್ಮಕವಾದ ಶಬ್ದ ಒಟ್ಟುಗೂಡಿ ಒಂದು ಅರ್ಥವನ್ನು ಕೊಡುವುದಾಗಿ ಪದವೆಂದು ಕರೆಯಲ್ಪಡುತ್ತದೆ. ಅದರಿಂದಲೇ ಪದವನ್ನು ಅರ್ಥಬೋಧಕವಾದ ವರ್ಣಸಮುದಾಯ ಎಂದು ಹೇಳಿದೆ.

ಜಾತಿ :—ಪದಗಳು ಜಾತಿಯನ್ನು (ಸಾಮಾನ್ಯವನ್ನು) ನೇರವಾಗಿ ಬೋಧಿಸುತ್ತವೆಯೇ ವಿನಾ ವ್ಯಕ್ತಿಯನ್ನಲ್ಲ ಎಂಬುದು ಈ ಸಿದ್ಧಾಂತದ ನಿಶ್ಚಯ. 'ಜಾತಿ ಎಂಬ ಪದಾರ್ಥವೇ ಇಲ್ಲ. ಅದು ವ್ಯಕ್ತಿಗತವಾದುದೂ ಅಲ್ಲ; ಸರ್ವಗತವಾದುದೂ ಅಲ್ಲ; ಸರ್ವಗತವಾಗಿದ್ದರೆ

ಅದು ಸರ್ವತ್ರ ಉಪಲಬ್ಧವಾಗಬೇಕಾಗಿತ್ತು. ವ್ಯಕ್ತಿಗತವೂ ಅಲ್ಲ. ಏಕೆಂದರೆ ಆಗತಾನೇ ಉತ್ಪನ್ನವಾದ ವ್ಯಕ್ತಿಯಲ್ಲಿ ಬೇರೆ ವ್ಯಕ್ತಿಯಲ್ಲಿರುವ ಜಾತಿ ಅನ್ವಯಿಸಲಾರದು. ವ್ಯಕ್ತಿ ಹುಟ್ಟುವಾಗ ಅದರೊಡನೆ ಜಾತಿಯೂ ಹುಟ್ಟುತ್ತದೆ ಎಂದು ಹೇಳಲಾಗದು. ಏಕೆಂದರೆ ಜಾತಿ ನಿತ್ಯವಾದುದು ಎಂದು ಹೇಳುವುದಕ್ಕೆ ಇದು ಸರಿಹೊಂದದು, ವ್ಯಕ್ತ್ಯಂತರದಿಂದ ವ್ಯಕ್ತಿಗೆ ಅದು ಸಂಕ್ರಮಿಸಲಾರದು. ಅಮೂರ್ತವಾದ ಅದಕ್ಕೆ ಗಮನಾಗಮನಗಳಿಲ್ಲವು. ಜಾತಿ ನಿರಂಶವಾದ ಕಾರಣ ವ್ಯಕ್ತಿಯ ಏಕದೇಶದೊಡನೆ ಸಂಬಂಧಿಸಲಾರದು. ಅಲ್ಲದೆ ವ್ಯಕ್ತಿ ನಾಶವಾದಾಗ ಜಾತಿ ನಾಶವಾಗುವುದೋ ಇಲ್ಲವೋ? ಅಲ್ಲಿಯೇ ನಿಲ್ಲುವುದೋ ? ವ್ಯಕ್ತ್ಯಂತರಕ್ಕೆ ಹೋಗುವುದೋ ? ಅದು ನಿತ್ಯವಾದುದರಿಂದ ನಾಶ ಹೊಂದದು. ಅಲ್ಲಿ ಉಬಲಬ್ಧವಾಗದ ಕಾರಣ ಅಲ್ಲಿ ನಿಲ್ಲುವುದೆಂದು ಹೇಳಲಾಗದು. ಕ್ರಿಯಾರಹಿತವಾದ ಕಾರಣ ವ್ಯಕ್ತ್ಯಂತರಕ್ಕೆ ಹೋಗಲಾರದು,'–ಹೀಗೆಲ್ಲಾ ಜಾತಿಯ ಮೇಲೆ ಆಕ್ಷೇಪವೆತ್ತಿರುವುದಕ್ಕೆ ಇಲ್ಲಿ ಉತ್ತರ ಕೊಡಲಾಗಿದೆ. ಸಾಮಾನ್ಯವು ಸರ್ವಗತವೆಂದು ಒಪ್ಪಿದಾಗಲೇ ವ್ಯಕ್ತಿಗತವೇಬುದೂ ಸಿದ್ಧಿಸುವುದರಿಂದ ಆ ಆಕ್ಷೇಪ ಸಲ್ಲದು. ಸರ್ವತ್ರ ಉಪಲಬ್ಧವಾಗುವುದಿಲ್ಲವೆಂಬ ಶಂಕೆಗೆ ಆಸ್ಪದವಿಲ್ಲ. ಏಕೆಂದರೆ ಇದಕ್ಕೆ ವ್ಯಕ್ತಿವ್ಯಂಗ್ಯತ್ವವನ್ನು ಒಪ್ಪಿರುವುದರಿಂದ ವ್ಯಕ್ತಿಸ್ಥಲದಲ್ಲಿಯೇ ಉಪಲಬ್ಧಿ ಉಂಟಾಗುವುದರಿಂದ ದೋಷವುಂಟಾಗದು. ವ್ಯಕ್ತಿಯೊಡನೆ ಜಾತಿಗೆ ಅಪೃಥಕ್ಸಿದ್ಧ ಸಂಬಂಧವನ್ನು ಒಪ್ಪಿರುವುದರಿಂದ ಗಮನಾಗಮನ ವಿಚಾರವಾದ ಆಕ್ಷೇಪಕ್ಕೂ ಅವಕಾಶವಿಲ್ಲ. ವ್ಯಕ್ತಿಗೂ ಜಾತಿಗೂ ಭೇದವೇ ಅಭೇಧವೇ. ಎಂದರೆ ಈ ಸಿದ್ಧಾಂತ ಭೇದಾಭೇದಸಮುಚ್ಚಯವನ್ನು ಅನುಭವ ಬಲದಿಂದ ಅಂಗೀಕರಿಸುತ್ತದೆ. ಆದುದರಿಂದ ಜಾತಿ ಎಂಬ ಪದಾರ್ಥ ಸಿದ್ಧವಾಗುತ್ತದೆ.

## ಗುಣ

ಈ ಸಿದ್ಧಾಂತದಲ್ಲಿ ೨೪ ಗುಣಗಳನ್ನು ಅಂಗೀಕರಿಸಿದ್ದಾರೆ ರೂಪ, ರಸ, ಗಂಧ, ಸ್ಪರ್ಶ, ಸಂಖ್ಯಾ, ಪರಿಮಾಣ, ಪೃಥಕ್ತ್ವ, ಸಂಯೋಗ, ವಿಭಾಗ, ಪರತ್ವ, ಅಪರತ್ವ. ಗುರುತ್ವ. ದ್ರವತ್ವ, ಸ್ನೇಹ, ಬುದ್ಧಿ, ಸುಖ, ದುಃಖ, ಇಚ್ಛಾ, ದ್ವೇಷ, ಪ್ರಯತ್ನ, ಸಂಸ್ಕಾರ ಧ್ವನಿ, ಪ್ರಾಕಟ್ಯ, ಶಕ್ತಿ ಎಂಬುವು ಅವು. ಇವುಗಳಲ್ಲಿ ಅನೇಕ ಗುಣಗಳ ನಿರೂಪಣೆ ಪ್ರಾಯಃ ನಯ್ಯಾಯಿಕರು ನಿರೂಪಿಸುವಂತೆಯೇ ಇದೆ, ಆತ್ಮಗುಣವಾದ ಬುದ್ಧಿಯನ್ನು ಅಪರ 'ಜ್ಞಾತತಾ' ಅಥವಾ 'ಪ್ರಾಕಟ್ಯ 'ದಿಂದ ತಿಳಿಯಬೇಕು. ಸಂಸ್ಕಾರವು ಲೌಕಿಕ ಮತ್ತು ಅಲೌಕಿಕ ಎಂದು ಎರಡು ಬಗೆ. ವೇಗ, ಭಾವನಾ ಮತ್ತು ಸ್ಥಿತಿಸ್ಥಾಪಕ ಎಂಬುವು ಲೌಕಿಕ ಸಂಸ್ಕಾರಗಳ ಬಗೆಗಳು. ವೇದವಾಕ್ಯಗಳು ವಿಧಿಸುವ 'ಪ್ರೋಕ್ಷಣ' ಮೊದಲಾದುವುಗಳಿಗೆ ಅಲೌಕಿಕ ಸಂಸ್ಕಾರ ಅನ್ವಯಿಸುತ್ತದೆ. ಶಬ್ದಾಭಿವ್ಯಂಜಕವಾದ ವಾಯುವಿನ ಗುಣವನ್ನು ಧ್ವನಿ ಎಂದು ಇವರು ಹೇಳುತ್ತಾರೆ. 'ಜ್ಞಾತತಾ' ಅಥವಾ 'ಪ್ರಾಕಟ್ಯ' ಸರ್ವವ್ಯವಹಾರಗಳಿಗೂ ಕಾರಣವಾದುದೂ, ಸರ್ವದ್ರವ್ಯವರ್ತಿಯಾದುದೂ. ಆದ ಸಾಮಾನ್ಯಗುಣ. 'ಘಟಃ ಪ್ರಕಾಶತೇ', 'ಪ್ರಕಟೋ ಘಟಃ' ಮೊದಲಾದ ವ್ಯವಹಾರಗಳು ಪ್ರಾಕಟ್ಯಯುಕ್ತವಾದ ಅರಿವನ್ನು ಉಂಟುಮಾಡುತ್ತವೆ. ವಿಷಯ

ಗತವಾದ ಪ್ರಕಾಶ 'ಪ್ರಾಕಟ್ಯ' ಇದರಿಂದ ಜ್ಞಾನವನ್ನು ಅನುಮಾನಮಾಡಿ ತಿಳಿಯಬಹುದು. ಜ್ಞಾನವೇ ಪ್ರಾಕಟ್ಯವಲ್ಲ. ಘಟವೇ ಮೊದಲಾದ ವಿಷಯಗಳೊಡನೆ ಕೂಡಿಕೊಂಡಂತೆ ಪ್ರಾಕಟ್ಯದ ವ್ಯವಹಾರವಿರುವುದು ಇದಕ್ಕೆ ಕಾರಣ.

ಶಕ್ತಿ :—ಶಕ್ತಿಯನ್ನು ಅರ್ಥಾಪತ್ತಿಯಿಂದ ಕಲ್ಪಿಸಲಾಗಿದೆ. ಪ್ರತಿಬಂಧಕಮಣಿ ಇಲ್ಲದಾಗ ಅಗ್ನಿಗೆ ದಾಹಕತ್ವವನ್ನು ಕಾಣುವುದರಿಂದಲೂ, ಪ್ರತಿಬಂಧಕಮಣಿ ಇದ್ದಾಗ ದಾಹಕತ್ವ ಕಂಡು ಬರದೆ ಇರುವುದರಿಂದಲೂ ದಾಹಾನುಕೂಲವಾದ ಶಕ್ತಿ ಬೆಂಕಿಯಲ್ಲಿದೆಯೆಂದು ಅರ್ಥಾಪತ್ತಿಯಿಂದ ನಿಶ್ಚಯಿಸಲಾಗುತ್ತದೆ. ಇದು ಲೌಕಿಕ ಮತ್ತು ವೈದಿಕ ಎಂದು ಎರಡು ಬಗೆ ಅಗ್ನಿಯಲ್ಲಿರುವ 'ದಾಹಕಶಕ್ತಿ' ಮೊದಲಾದವು ಲೌಕಿಕವಾದವು. ಯಾಗ ಮೊದಲಾದವುಗಳಿಗಿರುವ ಸ್ವರ್ಗಸಾಧನತ್ವ ಶಕ್ತಿ ವೈದಿಕವಾದ ಶಕ್ತಿಗೆ ನಿದರ್ಶನ. ತಾರ್ಕಿಕರು ಪದಾರ್ಥದ ಸ್ವಭಾವಭೇದವು ಶಕ್ತಿ ಎಂದು ಹೇಳುವುದನ್ನು ಇವರು ಒಪ್ಪುವುದಿಲ್ಲ. ಶಕ್ತಿಯು ಸ್ವಭಾವವೇ ಆದ ಪಕ್ಷದಲ್ಲಿ ಸ್ವಭಾವ ನಿತ್ಯವಾದುದರಿಂದ ದ್ರವ್ಯವಿರುವವರೆಗೂ ಇರಬೇಕಾಗಿ ಪ್ರತಿಬಂಧಕಮಣಿ ಇರುವಾಗಲೂ ಕಾರ್ಯಕರವಾಗಲೇ ಬೇಕಾಗುತ್ತದೆ. ಪ್ರತಿಬಂಧಕ ಮಣಿಯ ಅಭಾವ ದಾಹಾದಿಕಾರ್ಯಕ್ಕೆ ಕಾರಣ ಎಂದು ಹೇಳಲಾಗದು. ಅಭಾವಕ್ಕೆ ಕಾರಕತ್ವವನ್ನೆಲ್ಲೂ ಕಂಡಿಲ್ಲ. ಆದುದರಿಂದ ಶಕ್ತಿಯು ಅತಿರಿಕ್ತವಾದ ಪದಾರ್ಥವಾಗಿ ಗುಣದಲ್ಲಿ ಅಂತರ್ಭೂತವಾಗಿದೆಯೆಂದೂ ತಿಳಿಯಬೇಕು.

ಕ್ರಿಯಾ :—ವಿಭುವಲ್ಲದ ದ್ರವ್ಯಗಳಲ್ಲಿರುವುದಾಗಿ ಸಂಯೋಗ ಮತ್ತು ವಿಭಾಗಕ್ಕೆ ಕಾರಣವಾಗುವ ಚಲನೆ ಮೊದಲಾದವು 'ಕ್ರಿಯೆ' ಅಥವಾ 'ಕರ್ಮ' ವೆನಿಸುವುವು. ಇದು ಉತ್ಕ್ಷೇಪಣ, ಅಪಕ್ಷೇಪಣ, ಆಕುಂಚನ, ಪ್ರಸಾರಣ ಮತ್ತು ಗಮನ ಎಂದು ಐದು ಬಗೆ ಪ್ರಭಾಕರರ ಮತಕ್ಕನುಸಾರವಾಗಿ ಕರ್ಮ ಪ್ರತ್ಯಕ್ಷವಲ್ಲ. ಇದು ಸರ್ವದ್ರವ್ಯಗತವಾದ ಸುಸೂಕ್ಷ್ಮವಾದ ವ್ಯಾಪಾರ ಎಂದು ಅವರು ಹೇಳುವರು. ಸಂಯೋಗ ಹಾಗೂ ವಿಭಾಗ ಇವುಗಳಿಂದ ಇದನ್ನು ಊಹಿಸಿ ತಿಳಿಯಬೇಕು ಎಂದು ಅವರು ಹೇಳುತ್ತಾರೆ. ಕುಮಾರಿಲರ ಮತಕ್ಕನುಸಾರ ಇದು ಪ್ರತ್ಯಕ್ಷ. 'ಗೌರ್ಗಚ್ಛತಿ", 'ಶ್ಯೇನಶ್ಚಲತಿ' ಮೊದಲಾದುವುಗಳಲ್ಲಿ ಪ್ರತ್ಯಕ್ಷವಾಗಿ ಕರ್ಮ ಉಪಲಬ್ಧವಾಗುತ್ತದೆಯೆಂದು ಇವರು ಹೇಳುತ್ತಾರೆ. ಸಂಯೋಗ ವಿಭಾಗಗಳಿಗಿಂತ ಇದು ಬೇರೆಯಾದುದು ಎಂದು ಇವರ ಮತ.

ಅಭಾವ :—ಇದು ಐದನೆಯ ಪದಾರ್ಥ. ಭಾವವಿಲಕ್ಷಣವಾದುದು ಅಭಾವ. ಇದನ್ನು ಗ್ರಹಿಸುವ ಪ್ರಮಾಣ ಅನುಪಲಬ್ಧಿ. ಇದು 'ಸಂಸರ್ಗಾಭಾವ' ಮತ್ತು 'ಅನ್ಯೋನ್ಯಾಭಾವ' ಎಂದು ಎರಡು ಬಗೆ. ಸಂಸರ್ಗಾಭಾವವು ಪ್ರಾಗಭಾವ, ಪ್ರಧ್ವಂಸಾಭಾವ ಮತ್ತು ಅತ್ಯಂತಾಭಾವ ಎಂದು ಮೂರು ಬಗೆ. ಪ್ರಭಾಕರರು ಅಭಾವವೆಂಬ ಅತಿರಿಕ್ತ ಪದಾರ್ಥವನ್ನು ಒಪ್ಪುವುದಿಲ್ಲ. ಅವರ ಅಭಿಪ್ರಾಯದಂತೆ 'ಘಟಾಭಾವ' ಎಂಬುದು 'ಭೂತಲವೇ' ಭಾಟ್ಟ ಮತದಲ್ಲಿ ಇದನ್ನು ಅತಿರಿಕ್ತವಾದ ಪದಾರ್ಥವೆಂದು ಅಂಗೀಕರಿಸಿದ್ದಾರೆ.

ಪ್ರಮಾಣಗಳು :—

ಭಾಟ್ಟಶಾಖೆಯ ಮೀಮಾಂಸಕರು 'ಪ್ರತ್ಯಕ್ಷ', 'ಅನುಮಾನ', 'ಶಬ್ದ', 'ಉಪಮಾನ', 'ಅರ್ಥಾಪತ್ತಿ' ಮತ್ತು 'ಅನುಪಲಬ್ಧಿ' ಎಂದು ಆರು ಪ್ರಮಾಣಗಳನ್ನು ಅಂಗೀಕರಿಸಿದ್ದಾರೆ. ಆದರೆ ಪ್ರಭಾಕರರು 'ಅನುಪಲಬ್ಧಿ'ಯನ್ನು ಒಪ್ಪುವುದಿಲ್ಲ. ಉಳಿದ ಐದು ಪ್ರಮಾಣಗಳನ್ನು ಅವರು ಒಪ್ಪಿದ್ದಾರೆ.

ಪ್ರತ್ಯಕ್ಷ :—ಇಂದ್ರಿಯಾರ್ಥ ಸನ್ನಿಕರ್ಷದಿಂದ ಉಂಟಾಗುವುದು ಪ್ರತ್ಯಕ್ಷಜ್ಞಾನ ಚಕ್ಷು, ರಸನೆ, ಶ್ರೋತ್ರ, ಘ್ರಾಣ, ಸ್ಪರ್ಶನ ಮತ್ತು ಮನಸ್ಸು ಎಂಬ ಆರು ಇಂದ್ರಿಯಗಳ ಮೂಲಕ ಆಗುವ ಪ್ರತ್ಯಕ್ಷಜ್ಞಾನ ಆರು ಬಗೆ. ಇಂದ್ರಿಯಾರ್ಥ ಸನ್ನಿಕರ್ಷವು ಎರಡು ಬಗೆ – ಸಂಯೋಗ ಮತ್ತು ಸಂಯುಕ್ತತಾದಾತ್ಮ್ಯ ಎಂದು. ಪೃಥಿವ್ಯಪ್ತೇಜಸ್ಸುಗಳು ನೇತ್ರ ಮತ್ತು ತ್ವಗಿಂದ್ರಿಯ ಗಳೊಡನೆ ಸಂಯೋಗ ಹೊಂದಿ ಗ್ರಹಿಸಲ್ಪಡುತ್ತವೆ. ವಾಯುವಿಗೆ ತ್ವಕ್ಸಂಯೋಗವಾಗುತ್ತದೆ. ದಿಕ್ಕು, ಆಕಾಶ ಮತ್ತು ತಮಸ್ಸುಗಳಿಗೆ ಚಕ್ಷುಸ್ಸಂಯೋಗವಾಗುತ್ತದೆ. ಶಬ್ದರೂಪವಾದ ದ್ರವ್ಯಕ್ಕೆ ಶ್ರೋತ್ರದೊಡನೆ ಸಂಯೋಗವೂ, ಆತ್ಮದೊಡನೆ ಮನಸ್ಸಂಯೋಗವೂ ಆಗಿ ಅವುಗಳ ಗ್ರಹಣವಾಗುತ್ತದೆ. ಕಾಲದ ಗ್ರಹಣ ಎಲ್ಲಾ ಇಂದ್ರಿಯಗಳ ಸಂಯೋಗದಿಂದ ಆಗುತ್ತದೆ. ಪೃಥಿವೀ ಮೊದಲಾದವುಗಳಲ್ಲಿರುವ ಜಾತಿ, ಗುಣ ಮತ್ತು ಕರ್ಮ ಇವುಗಳ ಗ್ರಹಣ 'ಸಂಯುಕ್ತತಾದಾತ್ಮ್ಯ'ದಿಂದ ಆಗುತ್ತದೆ. ಪ್ರತ್ಯಕ್ಷವು 'ನಿರ್ವಿಕಲ್ಪಕ' ಮತ್ತು 'ಸವಿಕಲ್ಪಕ' ಎಂದು ಎರಡು ಬಗೆ. ಇಂದ್ರಿಯ ಸನ್ನಿಕರ್ಷದಿಂದ ಒಂದು ವಿಷಯದ ಜ್ಞಾನ ಮೊದಲನೆಯ ಸಲ ಆಗುವಾಗ ಅದು 'ಸಂಮುಗ್ಧ'ವಾಗಿರುತ್ತದೆ. ಇಂಥ ವಸ್ತು ಸ್ವರೂಪ ಮಾತ್ರಗ್ರಾಹಿ'ಯೂ, 'ಶಬ್ದಾನುಗಮ ರಹಿತ'ವೂ, 'ಸಂಮುಗ್ಧ'ವೂ ಆದ ಜ್ಞಾನ ನಿರ್ವಿಕಲ್ಪಕ. ಮುಂದೆ ಅದೇ ವಿಷಯವನ್ನು ಕುರಿತ 'ಶಬ್ದಸ್ಮರಣ ಸಹಕೃತ'ವೂ 'ಜಾತ್ಯಾದಿ ವಿಶಿಷ್ಟ'ವೂ, ಆದ ಜ್ಞಾನ 'ಸವಿಕಲ್ಪಕ' ಎಂದು ಹೇಳಿದೆ. ನಿರ್ವಿಕಲ್ಪಕವೂ ಇಲ್ಲಿ ನಮ್ಮ ಸಾಮಾನ್ಯ ಅನುಭವದ ಒಂದು ಭಾಗವೇ ಆಗಿದೆ.

ಅನುಮಾನ :—ಕೆಲವು ಅಂಶಗಳಲ್ಲಿ ಅನುಮಾನ ನಿರೂಪಣೆಯಲ್ಲಿ ನೈಯ್ಯಾಯಿಕರಿಗೂ ಇವರಿಗೂ ವ್ಯತ್ಯಾಸಗಳಿದ್ದರೂ ಸಾಮಾನ್ಯವಾಗಿ ನ್ಯಾಯ ವೈಶೇಷಿಕರ ದೃಷ್ಟಿಯನ್ನು ಇವರ ನಿರೂಪಣೆ ಹೋಲುತ್ತದೆ.

ಶಬ್ದ :—ಶಬ್ದ ಪ್ರಮಾಣವು ಪೌರುಷೇಯ ಮತ್ತು ಅಪೌರುಷೇಯ ಎಂದು ಎರಡು ಬಗೆ. ಪೌರುಷೇಯ ಎಂಬುದು ಅಪ್ತರು ಹೇಳಿದ ಮಾತು. ಅಪೌರುಷೇಯ ಎಂಬುದು ಶ್ರುತಿ. ಶ್ರುತಿಯು 'ಕಾರ್ಯಾರ್ಥ'ವನ್ನು ಹೊಂದಿದೆ. ಸಿದ್ಧವಾದ ವಸ್ತುವನ್ನು ಅದು ಭೋಧಿಸಲಾರದು. 'ಈ ವಾಕ್ಯವನ್ನು ಹೇಳಿದವನು ಈ ಅರ್ಥವನ್ನು ಮನಸ್ಸಿನಲ್ಲಿಟ್ಟುಕೊಂಡು

ಈ ಮಾತಂಗಳನ್ನು ಪ್ರಯೋಗಿಸಿದ್ದಾನೆ.' ಎಂದು ಪೌರುಷೇಯವಾದ ಲೌಕಿಕ ವಾಕ್ಯಗಳ ಬಗೆಗೆ ಅನುಮಾನ ಮಾಡುವುದರ ಮೇಲೆ ಅವುಗಳ ಅರ್ಥದ ಬೋಧಕತ್ವವು ನಿಂತಿದೆ ಎಂದು ಪ್ರಾಭಾಕರರ ಮತ, ಇವರ ಅಭಿಪ್ರಾಯದಂತೆ ಲೌಕಿಕ ವಾಕ್ಯಗಳ ಅರ್ಥಾವಬೋಧಕತ್ವ ಅನುಮಾನಾಧೀನವಾದುದು. ಈ ಅಭಿಪ್ರಾಯವನ್ನು ಭಾಟ್ಟಸಂಪ್ರದಾಯದವರು ಒಪ್ಪುವುದಿಲ್ಲ ಲೌಕಿಕವಾದ ಶಬ್ದವೂ ಅತಿರಿಕ್ತವಾದ ಪ್ರಮಾಣವೆಂದು ಇವರ ಮತ. ಲೌಕಿಕ ವಾಕ್ಯವು ಸಿದ್ಧ ವಸ್ತುವನ್ನೂ ಬೋಧಿಸಬಲ್ಲದು, ಕಾರ್ಯಾರ್ಥವನ್ನೂ ಬೋಧಿಸಬಲ್ಲದು ಎಂಬುದು ಭಾಟ್ಟ ಸಂಪ್ರದಾಯದ ಮತ. ಆದರೆ 'ಶ್ರುತಿಗೆ ಕಾರ್ಯಾರ್ಥವೇ' ಎಂಬುದು ಕುಮಾರಿಲರ ಅಭಿಪ್ರಾಯವೂ ಆಗಿದೆ. ಪ್ರಾಭಾಕರರು 'ಅನ್ವಿತಾಭಿಧಾನ ವಾದ'ವನ್ನು ಸ್ವೀಕಾರಮಾಡಿದ್ದಾರೆ. ಇದಕ್ಕನುಸಾರವಾಗಿ ಪದಗಳ ಸಾಮರ್ಥ್ಯದಿಂದಲೇ ಪದಾರ್ಥಗಳಿಗಿರುವ ಪರಸ್ಪರ ಸಂಬಂಧ ಎಂಬ ವಾಕ್ಯಾರ್ಥವು ತಿಳಿದು ಬರುತ್ತದೆ. ಪದಗಳು ಅನ್ವಿತವಾದ ಅರ್ಥವನ್ನು ಬೋಧಿಸುತ್ತವೆ ಎಂಬುದು ಇವರ ಮತ. ಪದಗಳು ತಮ್ಮ ತಮ್ಮ ಅರ್ಥವನ್ನು ಸ್ಮರಣೆಗೆ ತರುತ್ತವೆ. ಆದರೆ ಅಲ್ಲೇ ವಿರಮಿಸುವುದಿಲ್ಲ. ತಾವು ಸ್ಮರಣೆಗೆ ತಂದ ಆಯಾ ಅರ್ಥಗಳನ್ನು ಇತರ ಪದಾರ್ಥಗಳೊಡನೆ ಅನ್ವಿತವಾಗಿ ಬೋಧಿಸಿ ವಿರಮಿಸುತ್ತವೆ. ಭಾಟ್ಟರು ಈ ವಾದವನ್ನು ಒಪ್ಪುವುದಿಲ್ಲ. ಅವರು 'ಅಭಿಹಿತಾನ್ವಯವಾದ'ವನ್ನು ಅಂಗೀಕರಿಸಿದ್ದಾರೆ. ಇದಕ್ಕನುಸಾರವಾಗಿ ಪದಗಳು ಅವುಗಳ ಅರ್ಥಗಳನ್ನು ಮಾತ್ರ ತಿಳಿಸುತ್ತವೆ. ಆ ಪದಗಳ ಅರ್ಥಗಳ ಸಾಮರ್ಥ್ಯದಿಂದಲೇ ಅವುಗಳ ಸಂಬಂಧವೆಂಬ ವಾಕ್ಯಾರ್ಥವು ಗೊತ್ತಾಗುತ್ತದೆ.

ಉಪಮಾನ :— ಈ ಸಿದ್ಧಾಂತಕ್ಕನುಸಾರವಾಗಿ ಉಪಮಾನವೂ ಸಹ ಒಂದು ಅತಿರಿಕ್ತವಾದ ಪ್ರಮಾಣ. ಉಪಮಾನದಿಂದ ಪರಸ್ಪರ ಸಾದೃಶ್ಯವು ಗೊತ್ತಾಗುತ್ತದೆ. ಹಸುವನ್ನು ನೋಡಿರುವವನೊಬ್ಬನು ಆಕಸ್ಮಾತ್ತಾಗಿ ಗವಯವನ್ನು ನೋಡಿದಾಗ ಗವಯಕ್ಕೂ ಹಸುವಿಗೂ ಇರುವ ಸಾದೃಶ್ಯವನ್ನು ತಿಳಿದುಕೊಂಡು 'ಹಸುವು ಗವಯದಂತೆ ಇದೆ' ಎಂದು ತಿಳಿಯುತ್ತಾನೆ. ಹಸುವನ್ನು ನಗರದಲ್ಲಿ ನೋಡಿರುವವನಿಗೆ ಗವಯಸಾದೃಶ್ಯ ಮೊದಲು ಗೊತ್ತಿರುವುದಿಲ್ಲ. ಏಕೆಂದರೆ ಅವನು ಇನ್ನೂ ಗವಯವನ್ನು ಕಂಡಿರುವುದಿಲ್ಲ. ಅವನು ಗವಯವನ್ನು ನೋಡಿದ ಮೇಲೆಯೇ ಗೋಸಾದೃಶ್ಯ ಗೊತ್ತಾಗುತ್ತದೆ. ಗವಯವನ್ನು ಪ್ರತ್ಯಕ್ಷವಾಗಿ ಅವನು ನೋಡುತ್ತಾನೆ. ಆಗ ನಗರದಲ್ಲಿರುವ ಹಸುವಿನಲ್ಲಿ ಗೋಸಾದೃಶ್ಯ ಗೊತ್ತಾಗುತ್ತದೆ. ಈ ಜ್ಞಾನಕ್ಕೆ ಕಾರಣ ಪ್ರತ್ಯಕ್ಷವಲ್ಲ. ಏಕೆಂದರೆ ಹಸು ಎದುರಿಗಿರುವುದಿಲ್ಲ. ಇದು ಸ್ಮರಣೆಯೂ ಅಲ್ಲ. ಏಕೆಂದರೆ ಹಸುವಿನಲ್ಲಿ ಗವಯ ಸಾದೃಶ್ಯವನ್ನೂ ಹಿಂದೆ ಅವನು ಕಂಡವನಲ್ಲ. ಇದು ಅನುಮಾನವೂ ಅಲ್ಲ. ಏಕೆಂದರೆ ಪಕ್ಷವೃತ್ತಿತ್ವ, ಸಪಕ್ಷವೃತ್ತಿತ್ವ ಮತ್ತು ವಿಪಕ್ಷ ಅವೃತ್ತಿತ್ವ, ಇವು ಈ ಕಾರಣವಲ್ಲಿ ಇಲ್ಲ. ಆದುದರಿಂದ ಉಪಮಾನವು ಪ್ರಮಾಣಾಂತರವೆಂದು ಸಾಧಿಸಿದ್ದಾರೆ.

ಅರ್ಥಾಪತ್ತಿ : —ಬದುಕಿರುವನೆಂದು ನಮಗೆ ಗೊತ್ತಾಗಿರುವ ದೇವದತ್ತ ಮನೆಯಲ್ಲಿಲ್ಲದ ಕಾರಣ ಇನ್ನೆಲ್ಲೋ ಇರಬೇಕೆಂದು ತೀರ್ಮಾನಿಸುವುದು ಅರ್ಥಾಪತ್ತಿಗೆ ಉದಾಹರಣೆ.

ತಿಳಿದಿರುವುದರಿಂದ ತಿಳಿಯದೆ ಇರುವುದನ್ನು ಕಂಡು ಹಿಡಿಯಲು ಸಾಧ್ಯವಾಗುವುದರಿಂದ ಇದು ಪ್ರಮಾಣವಾಗುತ್ತದೆ. ನಯ್ಯಾಯಿಕರು ಇದನ್ನು ಅನುಮಾನದಲ್ಲಿ ಸೇರಿಸುತ್ತಾರೆ. ಮೀಮಾಂಸಾದರ್ಶನಕ್ಕನುಸಾರವಾಗಿ ಇದು ಅನುಮಾನದಲ್ಲಿ ಸೇರುವುದಿಲ್ಲ. ಇವರ ಅಭಿಪ್ರಾಯಕ್ಕನುಸಾರ ಅನುಮಾನಮಾಡಲು ಸಮರ್ಥವಾದ ಹೇತು ಇಲ್ಲಿ ಇಲ್ಲ. 'ಬದುಕಿದ್ದಾನೆ' ಎಂಬುದಾಗಲೀ 'ಮನೆಯಲ್ಲಿಲ್ಲ' ಎಂಬುದಾಗಲೀ ಯಾವುದೂ ಪ್ರತ್ಯೇಕವಾಗಿ 'ಮನೆಯ ಹೊರಗಿರುವನು' ಎಂದು ಅನುಮಾನ ಮಾಡಲು ಹೇತುವಾಗಲಾರದು. ಇವೆರಡೂ ಕೂಡಿಯೇ ಹೇತುವಾಗಲಿ ಎನ್ನಲಾಗದು. ಇವೆರಡನ್ನು ಸೇರಿಸಿದಾಗ 'ಮನೆಯ ಹೊರಗೆ ಅವನಿದ್ದಾನೆ' ಎಂಬುದು ತಿಳಿದು ಬರುತ್ತದೆ. ಆಗ ಅನುಮಾನಮಾಡಿ ನಿಶ್ಚಯಿಸುವ ಅಂಶವೇ ಇರುವುದಿಲ್ಲ. ಆದುದರಿಂದ ಅರ್ಥಾಪತ್ತಿ ಪ್ರತ್ಯೇಕವಾದ ಪ್ರಮಾಣ ಎಂದು ಒಪ್ಪಲಾಗಿದೆ.

ಅನುಪಲಬ್ಧಿ :—ಇದುವರೆಗೆ ವಿವರಿಸಿದ ಪ್ರತ್ಯಕ್ಷಾದಿ ಪ್ರಮಾಣ ಪಂಚಕದ ಅಭಾವವು ವಸ್ತುವಿನ 'ಇಲ್ಲದಿರುವಿಕೆ'ಯನ್ನು ಸೂಚಿಸುತ್ತದೆ. ಈ ಐದು ಪ್ರಮಾಣಗಳ ಅಭಾವವೇ ಆರನೆಯ ಪ್ರಮಾಣವೆನಿಸಿದ ಅನುಪಲಬ್ಧಿ. ಅನುಪಲಬ್ಧಿ ಎಂದರೆ 'ಜ್ಞಾನಾಭಾವ', ಮೇಲೆ ಹೇಳಿದ ಐದು ಪ್ರಮಾಣಗಳಿಂದಲೂ ಜ್ಞಾನವು ದೊರೆಯದೆ ಇರುವಿಕೆ. ಅಭಾವಜ್ಞಾನವನ್ನುಂಟು ಮಾಡುವ ಕಾರಣಗಳು (೧) ಪ್ರಮಾಣಾಭಾವ ಮತ್ತು (೨) ಸ್ಮರಣಾಭಾವ ಎಂದು ಎರಡು. ಪ್ರತ್ಯಕ್ಷ ಪ್ರಮಾಣದ ಅಭಾವ ಎಂಬ ಅನುಪಲಬ್ಧಿಯಿಂದ ಮಡಕೆಯ ಅಭಾವಜ್ಞಾನ ಉಂಟಾಗುತ್ತದೆ. ಹಾಗೆಯೇ ಸ್ಮರಣಾಭಾವದ ಕಾರಣ ಒಬ್ಬನು 'ಬೆಳಿಗ್ಗೆ ಇಲ್ಲಿ ಆನೆ ಇರಲಿಲ್ಲ' ಎಂದು ಅರಿಯ ಬಹುದು. ಅಭಾವಜ್ಞಾನ ಹುಟ್ಟುವ ನಿದರ್ಶನಗಳು ಅನೇಕವಿವೆ. ಪ್ರಾಭಾಕರರು 'ಅಭಾವ'ವನ್ನೇ ಅಂಗೀಕರಿಸದೆ ಇರುವುದರಿಂದ 'ಅನುಪಲಬ್ಧಿ' ಎಂಬ ಈ ಪ್ರಮಾಣವನ್ನು ಒಪ್ಪುವುದಿಲ್ಲ.

## ಅಖ್ಯಾತಿ ಮತ್ತು ವಿಪರೀತಖ್ಯಾತಿ ವಾದಗಳು

ಇತರ ದಾರ್ಶನಿಕರು 'ಭ್ರಮೆ' ಎನ್ನುವ ಸ್ಥಳದಲ್ಲಿ ಇವರ ವಿವರಣೆ ಮುಂದೆ ಕಂಡಂತಿದೆ. ಜ್ಞಾನವು ಬಾಹ್ಯಸತ್ತೆ ಇರುವ ವಸ್ತುವೊಂದನ್ನು (ಎಂದರೆ ಹೊರಗೆ ವಾಸ್ತವವಾಗಿ ಇರುವ ವಸ್ತುವೊಂದನ್ನು ಸೂಚಿಸುವುದೆಂಬುದು ಈ ದರ್ಶನದ ಸಿದ್ಧಾಂತ. ಇವರ ಸಿದ್ಧಾಂತಕ್ಕನು ಸಾರವಾಗಿ ಎಲ್ಲ ಜ್ಞಾನವೂ ಸತ್ಯ. ಎಲ್ಲ ಜ್ಞಾನವೂ ಬಾಹ್ಯಸತ್ತೆ ಇರುವ ವಿಷಯವನ್ನು ಕುರಿತದ್ದಾದ ಕಾರಣ ಭ್ರಮೆ ಎಂಬುದು ಇಲ್ಲವೇ ಇಲ್ಲ. ಜ್ಞಾನವೊಂದರ ಪ್ರಾಮಾಣ್ಯದ ವಿಷಯದಲ್ಲಿ ಸಂದೇಹ ಬಂದಾಗ ಮಾತ್ರ ಅದರ ಪರೀಕ್ಷೆಗೆ ಅವಕಾಶವಾಗುತ್ತದೆ. ಅದು ಬಾಧಿತವಾಗುವ ವರೆಗೆ ಅದರ ಪ್ರಾಮಾಣ್ಯ ಸುಸ್ಥಿತವಾಗಿರುವುದು. ಶುಕ್ತಿಯನ್ನು ರಜತ ಎಂದು ತಿಳಿಯುವಲ್ಲಿ

ಶುಕ್ತಿಯನ್ನೂ ಗ್ರಹಿಸಿ ಅದರಲ್ಲಿ ಬೆಳ್ಳಿಯ ಕೆಲವು ಲಕ್ಷಣಗಳನ್ನೂ ಕಾಣುತ್ತೇವೆ. ಆ ಲಕ್ಷಣಗಳ ಜ್ಞಾನದಿಂದ ಬೆಳ್ಳಿಯನ್ನು ಸ್ಮರಿಸುತ್ತೇವೆ. ಮೊದಲುಂಟಾದ ಪ್ರತ್ಯಕ್ಷಜ್ಞಾನ ಮತ್ತು ಅನಂತರ ಆಗುವ ಸ್ಮರಣೆ ಇವೆರಡೂ ಇಲ್ಲಿ ಕೂಡಿಕೊಂಡಿರುತ್ತವೆ. ಪ್ರತ್ಯಕ್ಷಜ್ಞಾನ ಸತ್ಯವಾದುದು. ಆದರೆ ಇಲ್ಲಿ ಸ್ಮೃತಿಯ 'ಪ್ರಮೋಷ' ಆಗಿರುತ್ತದೆ. ಪ್ರತ್ಯಕ್ಷಜ್ಞಾನಕ್ಕೂ ಸ್ಮೃತಿಗೂ ಇರುವ 'ಅಸಂಸರ್ಗ'ದ 'ಅಗ್ರಹಣ' ದೋಷಕ್ಕೆ ಕಾರಣವಾಗುತ್ತದೆ. ಇದು ಅಪೂರ್ಣಜ್ಞಾನವೆಂದು ಹೇಳಬಹುದು. ಆದುದರಿಂದ ಇಲ್ಲಿ ಭ್ರಮೆಯೇ ಇಲ್ಲ ಎಂದು ಪ್ರಾಭಾಕರರು ಹೇಳುತ್ತಾರೆ. ಇದು 'ಅಖ್ಯಾತಿವಾದ' ?

ಆದರೆ ಕುಮಾರಿಲರು ವಿಪರೀತ ಖ್ಯಾತಿವಾದವನ್ನು ಪ್ರತಿಪಾದಿಸುತ್ತಾರೆ. ಇದು ನೈಯ್ಯಾಯಿಕರ 'ಅನ್ಯಥಾಖ್ಯಾತಿ'ಯಂತೆಯೇ ಇದೆ. ಶುಕ್ತಿಯನ್ನು ರಜತ ಎಂದು ತಿಳಿದಾಗ 'ಇದಂ' ಎಂಬುದು ಪ್ರತ್ಯಕ್ಷವಾಗಿಯೇ ಇರುತ್ತದೆ. ದೋಷವನ್ನು ತಿದ್ದಿಕೊಂಡಾಗಲೂ 'ಇದಂ' ಬಾಧಿತವಾಗುವುದಿಲ್ಲ. ಬೆಳ್ಳಿ ಅಲ್ಲಿಲ್ಲದಿದ್ದರೂ ಹಿಂದೆ ಅನುಭವಕ್ಕೆ ಬಂದ ಬೆಳ್ಳಿಯನ್ನು ಅಲ್ಲಿ ಸಂಯೋಜಿಸುವುದು ದೋಷಕ್ಕೆ ಕಾರಣವಾಗಿದೆ. ಅಖ್ಯಾತಿವಾದಕ್ಕನುಸಾರವಾಗಿ ಪ್ರತ್ಯಕ್ಷ ಮತ್ತು ಸ್ಮೃತಿಗಳ ಅಂಶಗಳ ಅಸಂಸರ್ಗದ ಅಗ್ರಹ ದೋಷಕ್ಕೆ ಕಾರಣವಾದರೆ, ವಿಪರೀತಖ್ಯಾತಿಯಲ್ಲಿ ಪ್ರತ್ಯಕ್ಷ ಮತ್ತು ಸ್ಮೃತಿಯ ಅಂಶಗಳನ್ನು ತಪ್ಪಾಗಿ ಕೂಡಿಸುವುದು ಎಂದರೆ 'ಸಂಸರ್ಗ ಗ್ರಹ' ದೋಷಕ್ಕೆ ಕಾರಣವಾಗಿದೆ. ಮೊದಲನೆಯ ಅಭಿಪ್ರಾಯದಲ್ಲಿ ಸಂಗತವಾದ ಯಾವುದೋ ಒಂದು ಅಂಶವನ್ನು ಗ್ರಹಿಸಲಾರದೆ ಹೋದರೆ ಈ ಎರಡನೆಯದಾದ ವಿಪರೀತಖ್ಯಾತಿಯಲ್ಲಿ ವಾಸ್ತವವಾಗಿ ದೋಷ ಆಗಿದೆ. ಅಖ್ಯಾತಿಯಲ್ಲಿ ಎರಡು ಜ್ಞಾನಗಳ 'ಅಸಂಸರ್ಗದ ಅಗ್ರಹಣ' ಆದರೆ, ವಿಪರೀತ ಖ್ಯಾತಿಯಲ್ಲಿ ಎರಡು ಜ್ಞಾನಗಳ 'ಸಂಸರ್ಗದ ಗ್ರಹಣ' ಆಗಿದೆ. ಕುಮಾರಿಲರ ದೃಷ್ಟಿಯಲ್ಲಿ ದೋಷವನ್ನು ದೋಷವೆಂದು ಒಪ್ಪಿಕೊಳ್ಳಲಾಗಿದೆ. ಸತ್ಯದಿಂದ ಅದನ್ನು ಪ್ರತ್ಯೇಕಿಸಬಹುದು ಎಂಬುದು ಅವರ ಅಭಿಪ್ರಾಯ. ಆದರೆ ಪ್ರಾಭಾಕರರ ಅಭಿಪ್ರಾಯದಲ್ಲಿ ವಾಸ್ತವವಾಗಿ ದೋಷವೆಂಬುದೇ ಇಲ್ಲ. ಜ್ಞಾನ ವ್ಯವಹಾರಕ್ಕೆ ಉಪಯುಕ್ತವಾದರೆ ಸತ್ಯ, ಇಲ್ಲವಾದರೆ ಅದು ದೋಷ. ಆದರೆ ದೋಷಕ್ಕೂ ಸತ್ಯದಷ್ಟೇ ಜ್ಞಾನತಃ ಮೌಲ್ಯವಿದೆ ಎಂದು ಅವರ ಅಭಿಪ್ರಾಯ.

ಆತ್ಮ :—ಸಿದ್ಧಾಂತಕ್ಕನುಸಾರವಾಗಿ ದೇಹೇಂದ್ರಿಯಗಳೇ ಮೊದಲಾದವುಗಳಿಗಿಂತ ಬೇರೆಯಾದ ಆತ್ಮರುಗಳುಂಟು. ಆತ್ಮರು ಅನಂತರು, ನಿತ್ಯರು ಪರಸ್ಪರ ಭಿನ್ನರು ಮತ್ತು ಭೋಗ ಮತ್ತು ಅಪವರ್ಗವನ್ನನುಭವಿಸುವವರು. ಆತ್ಮರು ಚೈತನ್ಯಕ್ಕೆ ಆಶ್ರಯರಾಗಿದ್ದಾರೆ. ಆತ್ಮರುಗಳ ನಿತ್ಯತ್ವವನ್ನೂ ಅನೇಕತ್ವವನ್ನೂ ಈ ದರ್ಶನದ ಎರಡು ಶಾಖೆಗಳವರೂ ಒಪ್ಪುತ್ತಾರೆ. ಆತ್ಮರುಗಳು ಕರ್ತೃತ್ವ ಮತ್ತು ಭೋಕ್ತೃತ್ವವನ್ನು ಹೊಂದಿರುವರೆಂದು ಭಾಟ್ಟಶಾಖೆಯವರು ಒಪ್ಪುತ್ತಾರೆ. ಆತ್ಮರುಗಳು ವಿಭುಗಳು ಎಂದೂ ಅಂಗೀಕರಿಸಲಾಗಿದೆ. ಜ್ಞಾನವು ಆತ್ಮನಲ್ಲಿ ಉಂಟಾಗುವ ಒಂದು ಪರಿಣಾಮ ಇದನ್ನು 'ಕ್ರಿಯಾ' ಅಥವಾ 'ವ್ಯಾಪಾರ' ಎಂದು

ಹೇಳಲಾಗಿದೆ. ಒಂದು ವಸ್ತುವಿಗೆ ಸಂಬಂಧಿಸಿದ ಜ್ಞಾನ ಆತ್ಮನಲ್ಲಿ ಉಂಟಾದಾಗ ಅದರ ಮೂಲಕ ಆ ವಸ್ತು 'ಪ್ರಕಾಶ ವಿಶಿಷ್ಟ' ವಾಗುತ್ತದೆ. ಹೀಗೆ ವಸ್ತು ಪ್ರಕಾಶಿತವಾಗುವುದು 'ಜ್ಞಾತತಾ'. ಜ್ಞಾನದ ಉದಯವನ್ನು ಅನುಮಾನದಿಂದ ನಿರ್ಣಯಿಸಬೇಕು. ಆ ಜ್ಞಾನವನ್ನೂ ಅನುಮಾನದಿಂದಲೇ ತಿಳಿಯಬೇಕು.

ಕುಮಾರಿಲರ ಅಭಿಪ್ರಾಯಕ್ಕನುಸಾರವಾಗಿ ಆತ್ಮನನ್ನು 'ಅಹಂ ಪ್ರತ್ಯಯ' ದಿಂದ ನೇರವಾಗಿ ತಿಳಿಯಬಹುದು. ಅದು ಏಕಕಾಲದಲ್ಲಿ ಜ್ಞಾತೃವೂ ಜ್ಞೇಯವೂ ಆಗಬಹುದು ಎಂದು ಇದರ ಭಾವ. ಈ ದೃಷ್ಟಿಯನ್ನು ಪ್ರಭಾಕರ ಒಪ್ಪುವುದಿಲ್ಲ. ಒಂದೇ ವಸ್ತು ಏಕಕಾಲದಲ್ಲಿ ಜ್ಞಾತೃವೂ ಜ್ಞೇಯವೂ ಆಗಬಲ್ಲದೆಂಬುದನ್ನು ಅವನು ನಿರಾಕರಿಸುತ್ತಾನೆ. ಆತ್ಮವು ಜ್ಞಾತೃ–ಎಲ್ಲ ಜ್ಞಾನಗಳಲ್ಲಿಯೂ ಅದು ಜ್ಞಾತೃವಾಗಿಯೇ ಪ್ರಕಾಶಿಸುತ್ತದೆ. ಆತ್ಮವು ಜಡವೇ ಆದುದರಿಂದ ಅದು ಪ್ರಕಾಶಿತವಾಗಬೇಕಾದರೆ ಸ್ವಯಂ ಪ್ರಕಾಶವಾದ ಜ್ಞಾನದ ಆವಶ್ಯಕತೆ ಇದೆ ಎಂಬುದು ಅವನ ಅಭಿಪ್ರಾಯ. ಜ್ಞಾನ ಅಥವಾ 'ಸಂವಿತ್' ಸ್ವಯಂ ಪ್ರಕಾಶವುಳ್ಳದ್ದು; ಅದನ್ನು ಬೇರೆ ಯಾವುದೂ ಪ್ರಕಾಶಪಡಿಸಬೇಕಾಗಿಲ್ಲ. ಅದು ವಸ್ತುವನ್ನು ಪ್ರಕಾಶ ಪಡಿಸುವಾಗ (೧) ವಸ್ತುವನ್ನೂ (೨) ಆತ್ಮವನ್ನೂ (೩) ತನ್ನನ್ನೂ ಪ್ರಕಾಶ ಪಡಿಸುತ್ತದೆ. ಇದನ್ನು 'ತ್ರಿಪುಟೀ ಜ್ಞಾನ' ಎಂದು ಪ್ರಾಭಾಕರರು ಹೇಳುತ್ತಾರೆ.

ವೇದ ಪ್ರಾಮಾಣ್ಯ– ವೇದ ಪ್ರಾಮಾಣ್ಯ ಮೊದಲು ಸಿದ್ಧವಾದರೆ ಅನಂತರ ಧರ್ಮ ನಿರೂಪಣೆಯೂ ಸಿದ್ಧವಾಗುವುದೆಂಬ ಉದ್ದೇಶದಿಂದ ಈ ದರ್ಶನ ಮೊದಲು ವೇದಪ್ರಾಮಾಣ್ಯ ಸ್ಥಾಪನೆಗೆ ಗಮನ ನೀಡಿದೆ, ಜೈಮಿನಿಗಳು ತಮ್ಮ ಸೂತ್ರಗಳಲ್ಲಿ (೧–೨–೩೧ ರಿಂದ ೧–೨–೫೩) ವೇದಪ್ರಾಮಾಣ್ಯವನ್ನು ಸ್ಥಾಪಿಸಿದ್ದಾರೆ. ಮಂತ್ರಭಾಗಗಳಿಗೆ ಅರ್ಥವತ್ತ್ವ ವುಂಟೆಂದೂ, ಆನುಪೂರ್ವೀ ವಿಶಿಷ್ಟವಾಗಿ ಉಚ್ಚರಿಸಿದಾಗ ಅದೃಷ್ಟವಾದ ಫಲವುಂಟೆಂದೂ, ಮಂತ್ರಭಾಗಗಳಂತೆ ಬ್ರಾಹ್ಮಣಭಾಗಗಳೂ ಪ್ರಮಾಣವೆಂದೂ, ಅರ್ಥವಾದಗಳು ವಿಧಿವಾಕ್ಯಗಳ ಪ್ರಶಂಸೆಗಾಗಿ ಬಂದಿವೆಯೆಂದೂ, ಆದುದರಿಂದ ಅವುಗಳೂ ಪ್ರಮಾಣವೆಂದೂ ಸ್ಥಾಪಿಸಿದ್ದಾರೆ. ವೇದ ಪ್ರಾಮಾಣ್ಯವನ್ನು ಸ್ಥಾಪಿಸಿದಂತೆ ವೇದಗಳ ಅಪೌರುಷೇಯತ್ವವನ್ನೂ ಸ್ಥಾಪಿಸಿದ್ದಾರೆ. ವೇದ ಸ್ವತಃ ಪ್ರಮಾಣ, ನಿತ್ಯ, ಅನಾದಿ, ಆನುಪೂರ್ವಿಯೂ ನಿತ್ಯ, ಅವುಗಳ ಅರ್ಥಗಳೂ ನಿತ್ಯ, ಶಬ್ದಕ್ಕೂ ಅರ್ಥಕ್ಕೂ ಇರುವ ಸಂಬಂಧವೂ ನಿತ್ಯ ಎಂದು ಸಾಧಿಸಲಾಗಿದೆ. ಅಪೌರುಷೇಯವಾದ ಕಾರಣ ವೇದಕ್ಕೆ ದೋಷ ಸಂಭವವೇ ಇಲ್ಲದೆ ಪರಮ ಪ್ರಾಮಾಣ್ಯವುಂಟು ಎಂದು ತೀರ್ಮಾನಿಸಿದೆ.

ವೇದದಿಂದ ನಮಗೆ ಧರ್ಮವಿಚಾರ ತಿಳಿದು ಬರುತ್ತದೆ. ನಮ್ಮ ಸಾಮಾನ್ಯ ಅನುಭವದಿಂದ ನಾವು ತಿಳಿಯಲಾಗದ ಧರ್ಮಾಧರ್ಮವಿಚಾರವನ್ನು ವೇದದಿಂದಲೇ ತಿಳಿಯಬೇಕು. ಧರ್ಮಾಧರ್ಮಗಳಿಗೆ ಪ್ರಭಾಕರ 'ಅಪೂರ್ವ' ಎಂಬ ಹೆಸರನ್ನು ಕೊಡುತ್ತಾನೆ. ಇತರ

ಪ್ರಮಾಣಗಳಿಗೆ ಇದು ಮೀರಿದುದು ಎಂಬ ಅರ್ಥ ಇದಕ್ಕಿದೆ. ಇದು 'ಮಾನಾಂತರಾಪೂರ್ವ". ಅಪೂರ್ವವೆಂದರೆ ಪ್ರಭಾಕರನ ಅಭಿಪ್ರಾಯದಲ್ಲಿ ಯಜ್ಞ ಮತ್ತು ಇತರ ಕರ್ಮಗಳ ಫಲ. ಈ ಅಪೂರ್ವವು ಆತ್ಮನಲ್ಲಿರುತ್ತದೆ. ಕುಮಾರಿಲರ ಅಭಿಪ್ರಾಯದಂತೆ ಕರ್ಮದ ಬೇರೆ ಬೇರೆ ರೂಪಗಳೇ 'ಧರ್ಮಾಧರ್ಮಗಳು'. 'ಯಾಗಾದಿರೇವ ಧರ್ಮಃ'. ಇವರಿಬ್ಬರ ಅಭಿಪ್ರಾಯದಂತೆಯೂ ವೇದವು ಧರ್ಮವನ್ನು ಪ್ರತಿಪಾದಿಸುತ್ತದೆ.

## ವೇದಾರ್ಥ

ವೇದದ ಉಪದೇಶ 'ಕರ್ಮ" ಎಬುದು ಮೀಮಾಂಸಾದರ್ಶನದ ನಿಶ್ಚಯ. ಇದು 'ವಿಧಿ' ಅಥವಾ 'ನಿಯೋಗ'ದ ರೂಪದಲ್ಲಿದೆ. ಈ ವಿಧಿಗಳ ಉದ್ದೇಶವನ್ನು ಭಾಟ್ಟರು ಮತ್ತು ಪ್ರಾಭಾಕರರು ಬೇರೆ ಬೇರೆ ರೀತಿಯಲ್ಲಿ ವಿವರಿಸಿದ್ದಾರೆ. ವೇದಾರ್ಥವನ್ನು ತಿಳಿದುಕೊಂಡು ಮಾಡಬೇಕಾದ ಕರ್ಮಗಳಿಗೆ ಫಲವಿದೆ ಎಂದು ಭಾಟ್ಟರ ಅಭಿಪ್ರಾಯ. ' ಫಲಂ ವೇದಾರ್ಥಃ ' ಎಂದು ಇದನ್ನು ಹೇಳಿದೆ. ಸ್ವರ್ಗಪ್ರಾಪ್ತಿಗಾಗಿ ಜ್ಯೋತಿಷ್ಟೋಮ ಮಾಡುವುದು ಇದಕ್ಕೆ ನಿದರ್ಶನ. ವೇದೋಕ್ತವಾದ ವಿಧಿಯನ್ನು ನೆರವೇರಿಸುವಂತೆ ಮಾಡಲು ಹೀಗೆ ಆಶೆಯನ್ನು ತೋರಿದೆ ಎಂಬುದನ್ನು 'ನ ಹಿ ವಿಧಿಶತೇನಾಪಿ ತಥಾ ಪ್ರವರ್ತತೇ ಯಥಾ ಲೋಭೇನ' ಎಂದು ಹೇಳಿದ್ದಾರೆ.

ಪ್ರಾಭಾಕರರು ವೇದಾರ್ಥವನ್ನು ಬೇರೆ ರೀತಿಯಲ್ಲಿ ಹೇಳುತ್ತಾರೆ. ವೇದಕ್ಕೆ 'ನಿಯೋಗ'ದಲ್ಲಿ ದೃಷ್ಟಿಯೇವಿನಾ 'ಫಲದಲ್ಲಿ' ಅಲ್ಲ ಎಂದು ಅವರ ಅಭಿಪ್ರಾಯ. ವೇದ ಸಾರ್ವಭೌಮನ ಆಜ್ಞೆಯಂತೆ ಇಲ್ಲಿ ತಿಳಿಯಬೇಕಾದುದು ಯಾರಿಗೆ ನಿಯೋಗ ? ಯಾವ ವಿಷಯದಲ್ಲಿ ನಿಯೋಗ ? ಎಂಬುದಷ್ಟೇ. ವೇದಕ್ಕೆ ದೈನ್ಯವೂ ಇಲ್ಲ ಆಶಕ್ತಿಯೂ ಇಲ್ಲ. ಜ್ಯೋತಿಷ್ಟೋಮ ವಾಕ್ಯದಲ್ಲಿಯೂ ಆ ಯಾಗಕ್ಕೆ ಅರ್ಹತೆಯುಳ್ಳವನು ಸ್ವರ್ಗದಲ್ಲಿ ಅಪೇಕ್ಷೆ ಇದ್ದರೆ ಅದನ್ನು ನೆರವೇರಿಸಬೇಕೆಂಬ ಅರ್ಥವೇವಿನಾ ಫಲ ಆ ವಾಕ್ಯದ ನೇರ ಗುರಿಯಲ್ಲ ಎಂದು ಇವರು ವಿವರಿಸುತ್ತಾರೆ.

ನಿತ್ಯನೈಮಿತ್ತಿಕ ಕರ್ಮಗಳ ವಿಚಾರದಲ್ಲಿಯೂ ಇವೆರಡು ಶಾಖೆಯವರಲ್ಲಿ ಗಮನಾರ್ಹವಾದ ಅಭಿಪ್ರಾಯಭೇಧವಿದೆ. ಹಿಂದಿನ ಪಾಪಗಳ ಕ್ಷಯ ನಿತ್ಯಕರ್ಮಗಳ ಅನುಷ್ಠಾನದ ಗುರಿ ಎಂದು ಭಾಟ್ಟಮತದ ಅಭಿಪ್ರಾಯ. ನಿತ್ಯಕರ್ಮ ಮಾಡದೆ ಇದ್ದರೆ ಉಂಟಾಗುವ ಪ್ರತ್ಯವಾಯವನ್ನು ಆ ಕರ್ಮಗಳನ್ನು ತಪ್ಪದೇ ಮಾಡುವುದರಿಂದ ತಪ್ಪಿಸಿಕೊಳ್ಳಬಹುದು. ಪ್ರಾಭಾಕರರಿಗನುಸಾರ ನಿತ್ಯಕರ್ಮಗಳನ್ನು ಕೇವಲ ಕರ್ತವ್ಯವೆಂದು ತಿಳಿದು ಆಚರಿಸಬೇಕು. ಅವುಗಳಿಗೆ ಯಾವ ಫಲವೂ ಇಲ್ಲ. ಅವು ಸ್ವಯಂ ಪ್ರಯೋಜನವಾದವು. ಅವುಗಳನ್ನು ಆಚರಿಸದೆ ಇದ್ದರೆ ಶಿಕ್ಷೆ ಏನು ಎಂದರೆ ಸಮಾಜದಲ್ಲಿರುವ ಸಜ್ಜನರ ಗರ್ಹೆ ಮತ್ತು ತಾನು ಅಪರಾಧಿ ಎಂದು ತನ್ನನ್ನು ಗರ್ಹಿಸುವ ಅಂತಸ್ಸಾಕ್ಷಿ ಎಂದು ಹೇಳಿದ್ದಾರೆ.

## ಜಗತ್ತು

ಈ ಸಿದ್ಧಾಂತದಲ್ಲಿ ಜಗತ್ತನ್ನು ಸೃಜಿಸವ ಅಥವಾ ಉಪಸಂಹಾರ ಮಾಡುವ ಈಶ್ವರನೊಬ್ಬನನ್ನು ಅಂಗೀಕರಿಸಿಲ್ಲ. ಈಶ್ವರನ ಅಪೇಕ್ಷೆಯಿಲ್ಲದೆ ಈ ಜಗತ್ತು ಎಂದೆಂದೂ ನಡೆದುಕೊಂಡು ಹೋಗುತ್ತಿದೆ. ಧರ್ಮ ಮತ್ತು ಅಧರ್ಮಗಳನ್ನು ನೋಡಿ ಫಲಕೊಡುವವ ನೊಬ್ಬನು ಬೇಕೆಂದು ಹೇಳುವ ವಾದವೂ ಸರಿಯಿಲ್ಲ. ಏಕೆಂದರೆ ಇವು ಅವುಗಳನ್ನು ಆಚರಿಸಿದವನಿಗೇ ಸಂಬಂಧಿಸುತ್ತವೆ. ಧರ್ಮಾಧರ್ಮಗಳ ಸಂಯೋಗವನ್ನಾಗಲೀ ಸಮವಾಯ ವನ್ನಾಗಲೀ ಈಶ್ವರನಿಗೆ ಹೇಳುವುದಕ್ಕಾಗುವುದಿಲ್ಲ. ಈ ಜಗತ್ತನ್ನು ಹೀಗೆ ಈಶ್ವರನು ಸೃಷ್ಟಿ ಮಾಡಿದನೆಂದು ಹೇಳಿದರೆ ಅವನಿಗೆ ವೈಷಮ್ಯ ನೈರ್ಘೃಣ್ಯಗಳುಂಟಾಗುತ್ತವೆ. ಆದುದರಿಂದ ಈಶ್ವರನನ್ನು ಈ ದರ್ಶನ ಒಪ್ಪಿಲ್ಲ.

ಇವರು ಜಗತ್ಸತ್ಯತ್ವವಾದಿಗಳು. ಇವರು ಶಾಶ್ವತವಾದ ದ್ರವ್ಯಗಳಿರುವುವೆಂದೂ, ಅವುಗಳು ನಿಜವಾಗಿ ಗುಣಗಳಿಗೆ ಆಧಾರವಾಗಿವೆಯೆಂದೂ ಒಪ್ಪುತ್ತಾರೆ. ದ್ರವ್ಯ ನಿತ್ಯವಾದರೂ ಬೇರೆ ಬೇರೆ ಪ್ರಕಾರಗಳನ್ನು ಅದು ಹೊಂದಿ ಮರೆಯಾಗುತ್ತಿರುವುದು. ಇಲ್ಲಿ ಪರಿಣಾಮವಾದವನ್ನು ಕಾಣಬಹುದು. ಈ ಪ್ರಪಂಚವು ಅನಾದಿಯಾಗಿ ಎಂದಿನಿಂದಲೂ ಹೀಗೆಯೇ ಇರುತ್ತಿದೆ. ಸಾಂಖ್ಯರು ಹೇಳಿದಂತೆ ಒಂದು ದ್ರವ್ಯದಿಂದ ಇವೆಲ್ಲಾ ಹುಟ್ಟಿತೆಂದು ಇವರು ಹೇಳುವುದಿಲ್ಲ. ಪ್ರಪಂಚಕ್ಕೆ ಸೃಷ್ಟಿಯೂ ಇಲ್ಲ ಪ್ರಲಯವೂ ಇಲ್ಲ. 'ನ ಕದಾಚಿತ್ ಅನೀದೃಶಂ ಜಗತ್' ಎಂಬುದು ಇವರ ನಿಲುವು.

## ಮೋಕ್ಷ ಸ್ವರೂಪ

ಆತ್ಮನಿಗೆ ಶರೀರ, ಇಂದ್ರಿಯ ಇವುಗಳಿದ್ದು ಇವುಗಳೊಡನೆ ಬಾಹ್ಯ ಜಗತ್ತಿನ ಸಂಪರ್ಕವನ್ನು ಹೊಂದಿದ್ದಾನೆ. ಈ ಮೂರರೂ ಉಪಾಧಿಗಳಿಂದ ಬಿಡುಗಡೆ ಹೊಂದುವುದು ಮೋಕ್ಷ. ಮೋಕ್ಷದಲ್ಲಿ ಪ್ರಪಂಚ ಬಾಧಿತವಾಗುವುದಿಲ್ಲ. ಏಕೆಂದರೆ ಅದಕ್ಕೆ ಲಯವಿಲ್ಲ. ಈ ಜಗತ್ತು ಹೀಗೆಯೇ ಇರುತ್ತಿದ್ದರೂ ಜಗತ್ತಿಗೂ ಆತ್ಮನಿಗೂ ಇರುವ ಸಂಬಂಧ ತಪ್ಪುತ್ತದೆ. ಎಲ್ಲ ಸುಖ ದುಃಖಗಳನ್ನೂ ಕಳೆದು ಕೊಳ್ಳುವುದು ಮೋಕ್ಷ. ಸುಖದುಃಖ ಹೀನನಾಗಿ 'ಸ್ವಸ್ಥ' ನಾಗಿರುವುದು ಮುಕ್ತಿ. ಆಗ ಮನಸ್ಸಿನ ಕ್ರಿಯೆ ಇಲ್ಲದ ಕಾರಣ ಸ್ವಪ್ರಜ್ಞೆಯೂ ಇರುವುದಿಲ್ಲ. ಆದರೆ ಜ್ಞಾನಶಕ್ತಿ, ಸತ್ತಾ, ದ್ರವ್ಯತ್ವ ಮೊದಲಾದವು ಇರುತ್ತವೆಯೆಂದು ಇವರು ನಿರೂಪಿಸುತ್ತಾರೆ. ಇವು ಇದ್ದರೂ, ಇವು ಎಂದೂ ಮುಂದೆ ಅಭಿವ್ಯಕ್ತವಾಗುವುದಿಲ್ಲ.

## ಮೋಕ್ಷ ಸಾಧನ

ಉಪದೇಶದಲ್ಲಿ ಶ್ರದ್ಧೆ, ಲೌಕಿಕ ವ್ಯವಹಾರದಲ್ಲಿ ಅನಾಸಕ್ತಿ ಇವು ಇತರ ದರ್ಶನಗಳಲ್ಲಿರುವಂತೆ ಇಲ್ಲಿಯೂ ಇವೆ. ಕರ್ಮವೇ ಬಂಧನಕ್ಕೆ ಕಾರಣವಾದುದರಿಂದ ಆ ಕರ್ಮವನ್ನು ಪೂರ್ಣವಾಗಿ ಕಳೆದು ಹಾಕಬೇಕು. ಕಾಮ್ಯ ಮತ್ತು ಪ್ರತಿಷಿದ್ಧ ಕರ್ಮಗಳನ್ನು ವರ್ಜಿಸುವುದರಿಂದ ಅವುಗಳಿಂದ

ಮುಂದೆ ಆಗಬಹುದಾದ ಬಂಧನವನ್ನು ತಪ್ಪಿಸಿಕೊಳ್ಳಬೇಕು. ಮುಮುಕ್ಷು ನಿತ್ಯಕರ್ಮವನ್ನು ಆಚರಿಸಲೇಬೇಕು. ಹಾಗೆ ಆಚರಿಸದೆ ಹೋದರೆ ಅದರಿಂದ ಲೋಪವುಂಟಾಗಿ ಪಾಪ ಸಂಭವಿಸುತ್ತದೆ. ಹಿಂದಿನ ಕರ್ಮಗಳ ಕಾರಣ ಬಂದೊಪಗಿರುವ ಸುಖದುಃಖಗಳನ್ನು ಅನುಭವಿಸಿ ಸಂಚಿತ ಕರ್ಮವನ್ನು ನಾಶಗೊಳಿಸಬೇಕು ಆಗ ಹಿಂದಿನ ಕರ್ಮನಾಶವಾಗಿ ಮುಂದೆ ಕರ್ಮ ಹುಟ್ಟದೆ ಇರುವುದರಿಂದ ಜನ್ಮಕ್ಕೆ ಕಾರಣವಿಲ್ಲವಾಗುವುದು ಆಗ ಆತ್ಮನು ತನ್ನ ಸ್ವರೂಪದಲ್ಲಿ ನಿಲ್ಲುವನು. ಮೋಕ್ಷಸಾಧನೆಗೆ ನಿತ್ಯಕರ್ಮವನ್ನಾಚರಿಸುವುದರ ಜೊತೆಗೆ ಆತ್ಮಜ್ಞಾನವೂ ಅಗತ್ಯವೆಂಬುದನ್ನು ಒತ್ತಿಹೇಳಲಾಗಿದೆ. ಆದುದರಿಂದ ಇವರು ಪ್ರತಿಪಾದಿಸುವ ಮೋಕ್ಷೋಪಾಯ ಸ್ವರೂಪವನ್ನು 'ಜ್ಞಾನ-ಕರ್ಮ ಸಮುಚ್ಚಯವಾದ' ವೆಂದು ಹೇಳಬಹುದು.

## ದರ್ಶನ ಪ್ರತಿಪಾದಕರು

ಈ ದರ್ಶನವನ್ನು ಪ್ರತಿಪಾದಿಸುವ ಕೃತಿಗಳು ಅಸಂಖ್ಯವಾಗಿವೆ. ಜೈಮಿನಿಗಳ ಸೂತ್ರಗಳ ಮೇಲೆ ವೃತ್ತಿಗಳು. ವ್ಯಾಖ್ಯಾನಗಳು ಮತ್ತು ವಿವರಣೆಗಳು ಬಂದಂತೆಯೇ ಸಿದ್ಧಾಂತದ ಪ್ರಮೇಯಗಳನ್ನು ನಿರೂಪಿಸುವ ಪ್ರಕರಣ ಗ್ರಂಥಗಳೂ ಬೇಕಾದಷ್ಟು ಬಂದಿವೆ. ಅನೇಕರು ಈ ದರ್ಶನದ ಪ್ರಮೇಯಗಳನ್ನು ಸಮರ್ಥವಾದ ರೀತಿಯಲ್ಲಿ ವಿವರಿಸಿದ್ದಾರೆ. ಇವರಲ್ಲಿ ಮುಖ್ಯರಾದ ಕೆಲವರು ಕೃತಿಕಾರರ ಬಗೆಗೂ ಅವರ ಕೃತಿಗಳ ಬಗೆಗೂ ಸಂಗ್ರಹವಾದ ಪರಿಚಯವನ್ನು ಕೆಳಗೆ ಮಾಡಿಕೊಡಲಾಗಿದೆ.

### ಜೈಮಿನಿ

ಜೈಮಿನಿಗಳ ಕಾಲದ ಬಗೆ ನಿರ್ದಿಷ್ಟವಾಗಿ ಏನನ್ನೂ ಹೇಳುವುದಕ್ಕಾಗುವುದಿಲ್ಲ. ಜೈಮಿನಿಗಳ ಪೂರ್ವ ಮೀಮಾಂಸಾ ಸೂತ್ರಗಳಲ್ಲಿ ಬೌದ್ಧ ಸಿದ್ಧಾಂತವನ್ನು ಕುರಿತು ನೇರವಾದ ಪ್ರಸ್ತಾಪವಿಲ್ಲ. ಶಬ್ದಾರ್ಥ ನಿರ್ಣಯದ ಸಂದರ್ಭದಲ್ಲಿ(೧-೩-೮-೯ರಲ್ಲಿ)ಮ್ಲೇಚ್ಛಪ್ರಸಿದ್ಧಿ ಮತ್ತು ಆರ್ಯಪ್ರಸಿದ್ಧಿ ಎಂಬ ವಿಚಾರವನ್ನು ಮಾಡಿದೆ. ಧರ್ಮವಿಚಾರದಲ್ಲಿ ಪ್ರಾಮಾಣ್ಯವನ್ನು ಸ್ಥಾಪಿಸುವಲ್ಲಿ ಆಚಾರಗಳು, ಕಲ್ಪಸೂತ್ರಗಳು, ಸ್ಮೃತಿಗಳು ಮತ್ತು ವ್ಯಾಕರಣವನ್ನು ಕುರಿತಂತೆ ಉಲ್ಲೇಖಗಳಿವೆ. ಜೈಮಿನಿಗಳ ಪೂರ್ವಮೀಮಾಂಸಾ ಸೂತ್ರಗಳಿಗೂ ಬಾದರಾಯಣರ ವೇದಾಂತ ಸೂತ್ರಗಳಿಗೂ ಇರುವ ಸಂಬಂಧವನ್ನು ನಾವು ಗುರುತಿಸಬಹುದು ಜೈಮಿನಿ ಬಾದರಾಯಣರ ಅಭಿಪ್ರಾಯವನ್ನೂ ಬಾದರಾಯಣರು ಜೈಮಿನಿಗಳ ಅಭಿಪ್ರಾಯವನ್ನೂ ತಮ್ಮ ತಮ್ಮ ಸೂತ್ರಗಳಲ್ಲಿ ಉಲ್ಲೇಖಿಸಿದ್ದಾರೆ. ಜೈಮಿನಿಗಳೂ ತಮ್ಮದೇ ಆದ ವೇದಾಂತ ಸೂತ್ರಗಳನ್ನು ರಚಿಸಿದ್ದಿರ ಬಹುದೆಂದು ಕೆಲವರು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಕರ್ಮಕಾಂಡದ ವಿವರಣೆಯ ಬಗೆಗೆ ಇವರಿಬ್ಬರಲ್ಲಿಯೂ ಏಕಾಭಿಪ್ರಾಯವಿದೆ. ವೇದಗಳ ನಿತ್ಯತ್ವವನ್ನು ಕುರಿತ

ಜೈಮಿನಿಗಳ ಸಿದ್ಧಾಂತ ಬಾದರಾಯಣರಿಗೆ ಒಪ್ಪಿಗೆಯಾಗಿದೆ. ಜೈಮಿನಿಗಳ ಜೀವನದ ಬಗ್ಗೆ ನಮಗೆ ಏನೂ ತಿಳಿಯದು ಜೈಮಿನಿಪಾರಾಶರ್ಯ ವ್ಯಾಸರ ಶಿಷ್ಯರೆಂದು ಸಾಮವಿಧಾನ ಬ್ರಾಹ್ಮಣ ತಿಳಿಸುತ್ತದೆ. ಭಾಗವತದಲ್ಲಿ (೧೨. ೬,೪೯-೫೫) ವ್ಯಾಸರು ವೇದವನ್ನು ನಾಲ್ಕು ಭಾಗಗಳಾಗಿ ವಿಭಾಗಮಾಡಿ ಸಾಮವೇದವನ್ನು ಜೈಮಿನಿಗೆ ಉಪದೇಶಿಸಿದರೆಂದು ಹೇಳಿದೆ. ಜೈಮಿನಿ ಸಾಮವೇದಪ್ರವರ್ತಕರೆಂದೂ ಸಾಮಸಂಹಿತೆಯ ಆಚಾರ್ಯರೆಂದೂ ಅದೇ ಭಾಗವತ (೧೨-೬-೭೫) ಹೇಳುತ್ತದೆ.

ಈ ವಿಚಾರದಲ್ಲಿ ಏನನ್ನೂ ನಿರ್ಧಾರವಾಗಿ ಹೇಳುವುದಕ್ಕಾಗುವುದಿಲ್ಲ. ಜೈಮಿನಿಗಳ ಪೂರ್ವ ಮೀಮಾಂಸಾಸೂತ್ರಗಳು ಹನ್ನೆರಡು ಅಧ್ಯಾಯಗಳಲ್ಲಿವೆ. ಸಂಕರ್ಷಣಕಾಂಡವೆಂದು ಹೆಸರಾದ ಇದರ ಮುಂದಿನ ನಾಲ್ಕು ಅಧ್ಯಾಯಗಳನ್ನು ಇವರೇ ಬರೆದರೆಂದು ಹೇಳುತ್ತಾರೆ. ಆದರೆ ಈಗ ಪ್ರಚಾರದಲ್ಲಿರುವುವು ಈ ೧೨ ಅಧ್ಯಾಯಗಳೇ. ಕುಮಾರಿಲರು ಮೊದಲಾದವರು ವಿವೇಚಿಸಿರುವುದೂ ಈ 'ದ್ವಾದಶಲಕ್ಷಣೀ' ಎಂಬುದನ್ನೇ. ಶಬರಸ್ವಾಮಿ ತನ್ನ ಭಾಷ್ಯದಲ್ಲಿ (೧೨-೨-೧೧) 'ಇತಿ ಸಂಕರ್ಷೇ ವಕ್ಷ್ಯತಿ' ಎಂದು ಉಲ್ಲೇಖಿಸಿದ್ದಾರೆ. ಉಪವರ್ಷ, ಭವದಾಸ, ದೇವಸ್ವಾಮಿನ್ ಮೊದಲಾದವರು ಅದರ ಮೇಲೆ ವ್ಯಾಖ್ಯಾನ ರಚಿಸಿದ್ದರೆಂದು ಗೊತ್ತಾಗುತ್ತದೆ ಅಲಭ್ಯವಾದ ಸಂಕರ್ಷಕಾಂಡವೂ ಜೈಮಿನಿಕೃತವೆಂದು ವಿದ್ವಾಂಸರ ಅಭಿಪ್ರಾಯ (ನೋಡಿ. ತತ್ತ್ವಬಿಂದು-ಪೀಠಿಕೆ ಪು, ೧೩. ವಿ ಎ. ರಾಮಸ್ವಾಮಿಶಾಸ್ತ್ರೀ, ಅಣ್ಣಾಮಲೈ ವಿಶ್ವವಿದ್ಯಾನಿಲಯ ಸಂಸ್ಕೃತ ಸೀರೀಸ್ ನಂ.೩). ಜೈಮಿನಿಸೂತ್ರಗಳಲ್ಲಿ ಅನೇಕ ವಿಚಾರಗಳನ್ನು ಕುರಿತು ಚರ್ಚಿಸಿದ್ದಾರೆ. ಈ ಹನ್ನೆರಡು ಅಧ್ಯಾಯಗಳಲ್ಲಿ ಧರ್ಮಪ್ರಮಾಣಗಳು, ಭೇದ, ಲಿಂಗತ್ವ, ಪ್ರಯೋಜ್ಯಪ್ರಯೋಜಕ ಭಾವ, ಕ್ರಮ, ಅಧಿಕಾರ, ಅತಿದೇಶ, ವಿಶೇಷಾತಿದೇಶ, ಊಹ, ಬಾಧ, ತಂತ್ರ ಮತ್ತು ಪ್ರಸಂಗ ಎಂಬ ವಿಚಾರಗಳನ್ನು ಕ್ರಮವಾಗಿ ಪ್ರತಿಪಾದಿಸಿದೆ. ಈ ಸೂತ್ರಗಳೇ ಪೂರ್ವ ಮೀಮಾಂಸಾ ದರ್ಶನಕ್ಕೆ ಪರಮಾಧಾರವಾದವು. ಈ ಹನ್ನೆರಡು ಅಧ್ಯಾಯಗಳಲ್ಲಿ ೬೦ ಉಪಪ್ರಕರಣಗಳೂ, ೨೭೪೪ ಸೂತ್ರಗಳೂ ಇವೆ.

## ಉಪವರ್ಷ

ಜೈಮಿನಿಸೂತ್ರಗಳ ಮೇಲೆ ಮೊಟ್ಟಮೊದಲಿನ 'ವೃತ್ತಿ' ಬರೆದವರು ಇವರು. 'ವೃತ್ತಿಕಾರ ಉಪವರ್ಷ' ಎಂದೇ ಇವರು ಪ್ರಸಿದ್ಧರಾಗಿದ್ದಾರೆ. ಪೂರ್ವೋತ್ತರ ಮೀಮಾಂಸೆಗಳೆರಡಕ್ಕೂ ಇವರು ವೃತ್ತಿ ಬರೆದರೆಂದು ಹೇಳಲಾಗಿದೆ. ಶಬರಸ್ವಾಮಿ ಇವರನ್ನು 'ಭಗವಾನ್ ಉಪವರ್ಷಃ' ಎಂದು (೧-೧೫ರಲ್ಲಿ) ಉಲ್ಲೇಖಿಸುತ್ತಾರೆ. 'ವರ್ಣಾ ಏವ ತು ಶಬ್ದಾ ಇತಿ ಭಗವಾನ್ ಉಪವರ್ಷಃ' ಎಂದು ಶಂಕರಾಚಾರ್ಯರು ದೇವತಾಧಿಕರಣ ಭಾಷ್ಯದಲ್ಲಿ ಇವರ ಹೆಸರನ್ನು ಉಲ್ಲೇಖಿಸಿದ್ದಾರೆ. ಇವರೂ ಬೋಧಾಯನರೂ ಒಬ್ಬರೇ ಅಥವಾ ಬೇರೆ ಬೇರೆಯೆ ಎಂಬುವ ವಿಚಾರದಲ್ಲಿ ಸಾಕಷ್ಟು ಚರ್ಚೆಯಾಗಿದೆ. ಆದರೆ ಯಾವುದನ್ನೂ ನಿರ್ಧಾರವಾಗಿ ಹೇಳುವುದಕ್ಕಾಗುವುದಿಲ್ಲ. ಇವರ ಕಾಲದ ವಿಚಾರವೂ ಖಚಿತವಾಗಿ ಹೇಳುವುದಕ್ಕಾಗುವುದಿಲ್ಲ.

ಶಬರಸ್ವಾಮಿಗಳಿಗಿಂತ ಇವರು ಹಿಂದಿನವರಾದ ಕಾರಣ ಕ್ರಿ. ಶ. ೨೦೦ ಕ್ಕಿಂತ ಪ್ರಾಯಃ ಹಿಂದಿನವರೆಂದು ಹೇಳಬಹುದು.

## ಶಬರಸ್ವಾಮಿ (ಕ್ರಿ.ಶ. ೨೦೦)

ಜೈಮಿನಿ ಸೂತ್ರಗಳ ಮೇಲೆ ಉಪಲಬ್ಧವಾಗಿರುವ ಭಾಷ್ಯಗಳಲ್ಲೆಲ್ಲಾ ಇವರ ಭಾಷ್ಯ ಅತ್ಯಂತ ಪ್ರಾಚೀನವಾದುದು. ಈ ಭಾಷ್ಯ ಸರಳವಾಗಿಯೂ ಖಚಿತವಾಗಿಯೂ ಇದ್ದು ಶೈಲಿ ಮತ್ತು ವಿಷಯ ನಿರೂಪಣೆಯಲ್ಲಿ ಪತಂಜಲಿಯ ಮಹಾಭಾಷ್ಯವನ್ನು ಹೋಲುತ್ತದೆ. ಶಬರಸ್ವಾಮಿ ಉಪವರ್ಷನಿಗೂ ಭರ್ತೃಮಿತ್ರನಿಗೂ ನಡುವಣ ಕಾಲಕ್ಕೆ ಸೇರಿದವರು ಪಾಣಿನಿ ಮತ್ತು ಕಾತ್ಯಾಯನರನ್ನು ಇವರು ಉಲ್ಲೇಖಿಸಿದ್ದಾರೆ. ಆದರೆ ಪತಂಜಲಿಯನ್ನುಲ್ಲೇಖಿಸಿಲ್ಲ ಕಾತ್ಯಾಯನನಿಗಿಂತ ಪಾಣಿನಿಗೆ ಹೆಚ್ಚಿನ ಪ್ರಾಮಾಣ್ಯವೆಂಬುದನ್ನು 'ಸದ್ವಾದಿತ್ವಾಚ್ಚ ಪಾಣಿನೇಃ ವಚನಂ ಪ್ರಮಾಣಂ', 'ಅಸದ್ವಾದಿತ್ವಾತ್‌ನ ಕಾತ್ಯಾಯನಸ್ಯ' ಎಂದು (೧೦-೮-೧ರಲ್ಲಿ) ಹೇಳಿದ್ದಾರೆ ಯಾಸ್ಕ, ಪಿಂಗಳ, ಬೋಧಾಯನ, ಆಪಸ್ತಂಬ ಮೊದಲಾದವರನ್ನೂ ಮನುಸ್ಮೃತಿ, ಮಹಾಭಾರತ ಮತ್ತು ಪುರಾಣಗಳನ್ನೂ, ಬೌದ್ಧರ ಶೂನ್ಯವಾದವನ್ನೂ ಶಬರ ಉಲ್ಲೇಖಿಸಿದ್ದಾರೆ. ಇವರ ಕಾಲಕ್ಕೂ ಹಿಂದೆಯೇ ಜೈಮಿನಿ ಸೂತ್ರಗಳ ಮೇಲೆ ಅನೇಕ ವೃತ್ತಿಗಳೂ ಭಾಷ್ಯಗಳೂ ಇದ್ದಿರಬೇಕು. ಇವುಗಳ ಅಭಿಪ್ರಾಯವನ್ನು ಇವರ ಭಾಷ್ಯದಿಂದ ನಾವರಿಯಬಹುದು, ಈ ಸಿದ್ಧಾಂತದ ಮೊದ ಮೊದಲಿನ ಸ್ವರೂಪವನ್ನು ತಿಳಿಯಲು ಈ ಕೃತಿ ಬಹಳ ಅಮೂಲ್ಯವಾದ ಆಧಾರವಾಗಿದೆ.

## ಭರ್ತೃಮಿತ್ರ (ಕ್ರಿ. ಶ. ೩೦೦-೬೦೦)

ಶಬರಸ್ವಾಮಿಗೂ ಕುಮಾರಿಲಭಟ್ಟರಿಗೂ ಮಧ್ಯಕಾಲದಲ್ಲಿದ್ದ ಅನೇಕ ವ್ಯಾಖ್ಯಾನಕಾರರುಗಳಲ್ಲಿ ಭರ್ತೃಮಿತ್ರ ಒಬ್ಬರು. ಇವರಿಗೆ 'ಆಚಾರ್ಯ' ಎಂಬ ಬಿರುದಿತ್ತೆಂದು ಕಂಡುಬರುತ್ತದೆ ಕುಮಾರಿಲರು ತಮ್ಮ ಶ್ಲೋಕವಾರ್ತಿಕದಲ್ಲಿ 'ಪ್ರಾಯೇಣ ಸರ್ವಾ ಮೀಮಾಂಸಾಹಂತ ಲೋಕಾಯತೀಕೃತಾ' ಎಂದು ಹೇಳಿರುವುದು ಈ ಭರ್ತೃಮಿತ್ರರನ್ನು ಕುರಿತು ಎಂದು ಪಾರ್ಥಸಾರಥಿಮಿಶ್ರ ತನ್ನ ನ್ಯಾಯರತ್ನಾಕರದಲ್ಲಿ ಹೇಳುತ್ತಾನೆ. ಕುಮಾರಿಲರ ಅಭಿಪ್ರಾಯದಂತೆ ಪೂರ್ವಮೀಮಾಂಸಾ ಸಿದ್ಧಾಂತಕ್ಕೆ ಅನೇಕ ಅಪಸಿದ್ಧಾಂತಗಳನ್ನು ತಂದು ಸೇರಿಸಿದ ಆಚಾರ್ಯರಿವರು. 'ನಿತ್ಯನಿಷಿದ್ಧಕರ್ಮಣಾ ಫಲರಾಹಿತ್ಯಂ' ಎಂಬುದು ಇಂಥ ಒಂದು ಅಪಸಿದ್ಧಾಂತವೆಂದು ನ್ಯಾಯರತ್ನಾಕರ ಹೇಳುವದನ್ನು ಆಧಾರವಾಗಿಟ್ಟುಕೊಂಡು ಕೆಲವರು ವಿದ್ವಾಂಸರು ಪ್ರಾಭಾಕರ ಸಿದ್ಧಾಂತ ಕುಮಾರಿಲರಿಗೂ ಹಿಂದಿನದಿರಬೇಕೆಂದು ಊಹಿಸಿದ್ದಾರೆ. ಶ್ಲೋಕವಾರ್ತಿಕದಲ್ಲಿ (೧-೧-೬ರಲ್ಲಿ) ಇವರನ್ನು ಕುಮಾರಿಲರು ಉಲ್ಲೇಖಿಸಿದ್ದಾರೆ. ಇವರ ಕೃತಿಯ ಸ್ವರೂಪ ನಮಗೆ ಸ್ಪಷ್ಟವಾಗಿ ಗೊತ್ತಿಲ್ಲ.

# ಕುಮಾರಿಲಭಟ್ಟರು (ಕ್ರಿ.ಶ. ೬೨೦-೭೦೦)

ಕುಮಾರಿಲಭಟ್ಟರು ಮೀಮಾಂಸಾವಾರ್ತಿಕಕಾರರೆಂದು ಪ್ರಸಿದ್ಧರಾಗಿದ್ದಾರೆ. ತಮ್ಮ ತಂತ್ರವಾರ್ತಿಕದ ವ್ಯಾಕರಣಾಧಿಕರಣದಲ್ಲಿ ಇವರು ಭರ್ತೃಹರಿಯ ವಾಕ್ಯಪದೀಯವನ್ನು ಉಲ್ಲೇಖಿಸುವುದರಿಂದ ಅವರಿಗಿಂತ ಈಚಿನವರೆಂದು ಹೇಳಬಹುದು. ಕುಮಾರಿಲರು ಮಂಡನಮಿಶ್ರರ ಗುರುಗಳಾಗಿದ್ದರು ಈ ಕಾರಣಗಳಿಂದ ಇವರನ್ನು ಕ್ರಿ. ಶ. ೭ನೆಯ ಶತಮಾನದವರೆಂದು ಹೇಳಬಹುದು. ಕುಮಾರಿಲರು ತಮ್ಮ 'ತಂತ್ರವಾರ್ತಿಕ'ದಲ್ಲಿ ಅನೇಕ ದ್ರಾವಿಡ ಶಬ್ದಗಳನ್ನು ಬಳಸಿರುವುದರಿಂದ ಇವರು ದಾಕ್ಷಿಣಾತ್ಯರೆಂದು ಕೆಲವರ ಅಭಿಪ್ರಾಯವಾದರೆ 'ವಾರ್ತಿಕಕಾರಮಿಶ್ರ'ರೆಂದು ಶಾಲೀಕನಾಥ ಉಲ್ಲೇಖಿಸಿರುವುದರಿಂದ ಇವರು ಔತ್ತರೇಯರೆಂದು ಮತ್ತೆ ಕೆಲವರು ಅಭಿಪ್ರಾಯ ಪಡುತ್ತಾರೆ.

ಪೂರ್ವಮೀಮಾಂಸಾ ದರ್ಶನದಲ್ಲಿ 'ಭಾಟ್ಟ ಸಂಪ್ರದಾಯ'ದ ಮೂಲ ಪುರುಷರು ಇವರು. ಈ ಶಾಸ್ತ್ರದ ವಾರ್ತಿಕಕಾರರಾದ ಇವರ ಸ್ಥಾನ ಅದ್ವಿತೀಯವಾದುದು. ಇತರ ಶಾಸ್ತ್ರಗಳಲ್ಲಿ ಭಾಷ್ಯಕಾರರು ವಾರ್ತಿಕಕಾರರನ್ನು ಮೀರಿಸಿದ್ದರೆ ಈ ಶಾಸ್ತ್ರದಲ್ಲಿ ಇವರು ಭಾಷ್ಯಕಾರರನ್ನು ಮೀರಿಸಿದ್ದಾರೆ. ಇವರ ಕೃತಿಗಳು ಶಬರಸ್ವಾಮಿಗಳ ಕೃತಿಗಿಂತ ಸಿದ್ಧಾಂತಕ್ಕೆ ಹೆಚ್ಚು ಆಧಾರವಾಗಿವೆ. ಅನೇಕ ಕಡೆ ಇವರು ಭಾಷ್ಯಕಾರರ ವಿವರಣೆಗಿಂತ ಭಿನ್ನವಾದ ವಿವರಣೆಗಳನ್ನು ಕೊಟ್ಟಿದ್ದಾರೆ. 'ವಿರೋಧೇ ತ್ವನಪೇಕ್ಷ್ಯಂ ಸ್ಯಾತ್ ಅಸತಿ ಹ್ಯನುಮಾನಂ' ಎಂಬುದರ ವಿವರಣೆ (೧-೩-೨) ಇದಕ್ಕೊಂದು ನಿದರ್ಶನ.

ಕುಮಾರಿಲರು ಶಬರಭಾಷ್ಯದ ಮೇಲೆ ವಿಸ್ತಾರವಾಗಿ ವಿವೇಚಿಸಿದ್ದಾರೆ. 'ಶ್ಲೋಕ ವಾರ್ತಿಕ', 'ತಂತ್ರವಾರ್ತಿಕ' ಮತ್ತು 'ಟುಪ್‌ಟೀಕಾ' ಎಂಬುವು ಇವರ ಕೃತಿಗಳಾಗಿವೆ. ಶ್ಲೋಕ ವಾರ್ತಿಕವು ಶಬರಭಾಷ್ಯದ ತರ್ಕಪಾದವನ್ನು ವಿವರಿಸುವ ಗ್ರಂಥ ಇದು ಅನುಷ್ಟುಪ್ ಶ್ಲೋಕದಲ್ಲಿದೆ. ಜಿಜ್ಞಾಸಾಧಿಕರಣದಲ್ಲಿ ಭಾಷ್ಯದ ಆರಂಭವಾಕ್ಯವನ್ನು ೬ ಬೇರೆ ಬೇರೆ ರೀತಿಯಲ್ಲಿ ವಿವರಿಸಿರುವುದು ಇವರ ಅದ್ಭುತವಾದ ಪ್ರತಿಭೆಗೆ ಸಾಕ್ಷಿಯಾಗಿದೆ. ಇವರು 'ಸ್ವತಃ ಪ್ರಾಮಾಣ್ಯವಾದ' ವನ್ನು ಸ್ಥಾಪಿಸಿದ್ದಾರೆ. ಬೌದ್ಧರ 'ಶೂನ್ಯವಾದ'ವನ್ನೂ ಭರ್ತೃಹರಿಯ 'ಸ್ಫೋಟವಾದ'ವನ್ನೂ ಖಂಡಿಸಿರುವುದು ಗಮನಾರ್ಹವಾಗಿದೆ. ಇಲ್ಲಿ ಇವರು 'ಪ್ರಾಕಟ್ಯಾನುಮೇಯವಾದ'ವನ್ನು ಸ್ಥಾಪಿಸಿದ್ದಾರೆ. ಶಬ್ದ, ಅರ್ಥ ಮತ್ತು ಅವುಗಳ ಸಂಬಂಧ-ಇವುಗಳ ನಿತ್ಯತ್ವವನ್ನು ಸ್ಥಾಪಿಸಿದ್ದಾರೆ. ೧-೧-೭ರಲ್ಲಿ 'ಅಭಿಹಿತಾನ್ವಯವಾದ' ವನ್ನು ಇವರು ಪ್ರತಿಪಾದಿಸಿದ್ದಾರೆ.

## ತಂತ್ರವಾರ್ತಿಕ

ಇದು ಶಬರ ಭಾಷ್ಯದ ೧-೨-೧ ರಿಂದ ಆರಂಭವಾಗಿ ಮೂರನೆಯ ಅಧ್ಯಾಯದ ಕೊನೆ ವರೆಗಿನ ಭಾಗದ ಮೇಲಿನ ವಾರ್ತಿಕ ಇದು ಹೆಚ್ಚಾಗಿ ಗದ್ಯದಲ್ಲಿದೆ. ನಡುನಡುವೆ ಪದ್ಯಗಳೂ ಇವೆ. ಇದೂ ಸಹ ಭಾಷ್ಯದ ಮೇಲಿನ ವ್ಯಾಖ್ಯಾನವಷ್ಟೇ ಆಗಿರದೆ ಪೂರ್ವಮೀಮಾಂಸಾ ಸಿದ್ಧಾಂತವನ್ನು ವಿವರಿಸುವ ಸ್ವತಂತ್ರವಾದ ವಿವೇಚನೆಯೂ ಆಗಿದೆ. ನ್ಯಾಯಗಳನ್ನು ನಿರೂಪಿಸುವಲ್ಲಿ ಭಾಷ್ಯಕಾರರ ಅಭಿಪ್ರಾಯಕ್ಕೆ ಪೂರಕವಾದ ಅನೇಕ ವಿವರಣೆಗಳನ್ನು ಕುಮಾರಿಲರು ಕೊಟ್ಟಿದ್ದಾರೆ.

## ಟುಪ್ ಟೀಕಾ

ಶಬರಭಾಷ್ಯದ ನಾಲ್ಕನೆಯ ಅಧ್ಯಾಯದಿಂದ ಆರಂಭವಾಗಿ ಹನ್ನೆರಡನೆಯ ಅಧ್ಯಾಯದ ಕೊನೆಯವರೆಗಿನ ಭಾಗದ ಮೇಲಿನ ಸಂಗ್ರಹವಾದ ವ್ಯಾಖ್ಯಾನ ಇದು. ವಿಷಯಗಳನ್ನು ಬಹಳ ಸಂಗ್ರಹವಾಗಿ ಹೇಳುವುದರಲ್ಲಿ ಇವರಿಗೆ ಎಷ್ಟು ಸಾಮರ್ಥ್ಯವಿತ್ತೆಂಬುದನ್ನು ಅಲ್ಲಿ ನೋಡಬಹುದು. ಅವರು 'ಬೃಹಟ್ಟೀಕಾ' ಮತ್ತು 'ಮಧ್ಯಮಟೀಕಾ' ಎಂಬ ಕೃತಿಗಳನ್ನು ಬರೆದಿದ್ದರೆಂದು ಹೇಳುತ್ತಾರೆ. ಆದರೆ ಅವು ಉಪಲಬ್ಧವಾಗಿಲ್ಲ.

## ಪ್ರಭಾಕರಮಿಶ್ರ (ಕ್ರಿ.ಶ. ೬೫೦-೭೨೦)

ಪ್ರಭಾಕರಮಿಶ್ರರು ಕುಮಾರಿಲರ ಶಿಷ್ಯರೆಂದು ಸಂಪ್ರದಾಯದಿಂದ ತಿಳಿದು ಬರುತ್ತದೆ. ಅವರು ಕುಮಾರಿಲರಿಗೂ ಹಿಂದಿನವರೆಂದು ಗಂಗನಾಥ್‌ಝಾ ಮೊದಲಾದವರ ಅಭಿಪ್ರಾಯ ವಾದರೆ ಮಹಾಮಹೋಪಾಧ್ಯಾಯ ಕುಪ್ಪುಸ್ವಾಮಿಶಾಸ್ತ್ರಿಗಳೇ ಮೊದಲಾದವರು ಕುಮಾರಿಲರ ಕಿರಿಯ ಸಮಕಾಲೀನರೆಂದು ಪ್ರತಿಪಾದಿಸಿದ್ದಾರೆ. ಅವರ ಜಾಣ್ಮೆಯನ್ನು ಕಂಡ ಕುಮಾರಿಲರು ಅವರಿಗೆ 'ಗುರು' ಎಂಬ ಬಿರುದನ್ನು ಕೊಟ್ಟರೆಂದು ಹೇಳಲಾಗಿದೆ. ಅವರ ಮತಕ್ಕೆ ಗುರು ಮತ ಎಂಬ ಪ್ರಸಿದ್ಧಿ ಇದೆ. ಶಬರ ಭಾಷ್ಯದ ಮೇಲೆ ಅವರು ಎರಡು ವ್ಯಾಖ್ಯಾನಗಳನ್ನು ಬರೆದಿದ್ದಾರೆ. ಒಂದು 'ಲಘ್ವೀ' ಎಂಬುದು ಇದಕ್ಕೆ 'ವಿವರಣ' ಎಂಬ ಹೆಸರು ಪ್ರಸಿದ್ಧವಾಗಿದೆ. ಮತ್ತೊಂದು 'ಬೃಹತೀ' ಎಂಬುದು. ಇದು 'ನಿಬಂಧನ' ಎಂದು ವಿಖ್ಯಾತವಾಗಿದೆ.

## ಮಂಡನಮಿಶ್ರ (ಕ್ರಿ.ಶ. ೬೮೦-೭೫೦)

ಇವರು ಕುಮಾರಿಲರ ಶಿಷ್ಯರೆಂಬ ಸಂಪ್ರದಾಯವಿದೆ. ಮಂಡನಮಿಶ್ರರು ಯಾರು ಎಂಬುದ ಬಗೆಗೆ ಬಹಳ ಚರ್ಚೆ ಆಗಿದೆ. ಮಂಡನರೂ ಸುರೇಶ್ವರರೂ ಒಬ್ಬರೇ ಬೇರೆಯೇ? ವಿಶ್ವರೂಪರೂ ಸುರೇಶ್ವರರೂ ಒಬ್ಬರೇ ಬೇರೆಯೇ? ಎಂಬ ಬಗೆಗೆ ಬಹಳ ಸಂಶೋಧನೆ ನಡೆದಿದೆ. ಸುರೇಶ್ವರರೂ ವಿಶ್ವರೂಪರೂ ಒಬ್ಬರೇ ಎಂದೂ ಮಂಡನರು ಸುರೇಶ್ವರರಿಗಿಂತ ಬೇರೆಯಾದವ ರೆಂದೂ ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಮಂಡನಮಿಶ್ರರು ಅನೇಕ ಕೃತಿಗಳನ್ನು ಬರೆದಿದ್ದಾರೆ.

ವಿಧ್ಯರ್ಥವನ್ನು ನಿರೂಪಿಸುವ 'ವಿಧಿವಿವೇಕ' ಅವುಗಳಲ್ಲಿ ಒಂದು. ವಿಧ್ಯರ್ಥವನ್ನು ಕುರಿತ ಭಾಟ್ಟ ಮತ್ತು ಪ್ರಾಭಾಕರ ಪಂಥಗಳ ನಿರೂಪಣೆಯನ್ನು ನಿರಾಕರಿಸಿ 'ಇಷ್ಟಸಾಧನತ್ವ' ವಿಧಿಯು ಮುಖ್ಯಾರ್ಥವೆಂದು ಇವರು ನಿರೂಪಿಸುತ್ತಾರೆ 'ಭಾವನಾವಿವೇಕ' ಎಂಬ ಕೃತಿಯಲ್ಲಿ ಮಂಡನರು ಆಖ್ಯಾತ ಪ್ರತ್ಯಯದ ಅರ್ಥ 'ಭಾವನಾ' ಎಂದು ತೀರ್ಮಾನಿಸಿದ್ದಾರೆ ಐದು ಖ್ಯಾತಿವಾದಗಳ ನಿರೂಪಣೆಗೆ ಮೀಸಲಾದ ಕೃತಿ 'ವಿಭ್ರಮವಿವೇಕ' ಎಂಬುದು. 'ಮೀಮಾಂಸಾ ಸೂತ್ರಾನುಕ್ರಮಣೀ', 'ಸ್ಫೋಟಸಿದ್ಧಿ' 'ಬ್ರಹ್ಮಸಿದ್ಧಿ' ಎಂಬುವು ಇವರ ಇತರ ಕೃತಿಗಳು.

## ಉಮ್ವೇಕಭಟ್ಟ (ಕ್ರಿ.ಶ. ೬೭೦–೭೫೦)

ಇವನೂ ಕುಮಾರಿಲರ ಶಿಷ್ಯನೆಂದು ಹೇಳಲಾಗಿದೆ ಭವಭೂತಿಯೂ ಉಮ್ವೇಕನೂ ಒಬ್ಬನೇ ಎಂದು ಅನೇಕ ವಿದ್ವಾಂಸರ ಮತ. ಇದಕ್ಕೆ ಮುಂದಿನ ಕಾರಣಗಳನ್ನು ಹೇಳಲಾಗಿದೆ. ಚಿತ್ಸುಖಾಚಾರ್ಯರ ತತ್ವಪ್ರದೀಪಿಕೆಯು 'ಭವಭೂತಿಃ ಉಮ್ವೇಕಃ' ಎಂದು ಹೇಳುತ್ತದೆ. ಶ್ಲೋಕವಾರ್ತಿಕದ ವ್ಯಾಖ್ಯಾನವು "ಯೇ ನಾಮ ಕೇಚಿದಿಹ ನಃ ಪ್ರಥಯಂತ್ಯವಜ್ಞಾಂ" ಎಂಬ ಮಾಲತೀಮಾಧವದ ಶ್ಲೋಕದಿಂದ ಆರಂಭವಾಗುತ್ತದೆ. ಮೇಲಿನ ಈ ಸಿದ್ಧಾಂತಕ್ಕೆ ವಿರೋಧ ವಾಗಿ ಕಾಣುವ ಪ್ರಮಾಣಗಳೂ ಇವೆ. ಭವಭೂತಿ ತನ್ನ ನಾಟಕಗಳ ಪ್ರಸ್ತಾವನೆಯಲ್ಲಿ ತನ್ನ ಗುರುವಿನ ಹೆಸರನ್ನು 'ಜ್ಞಾನನಿಧಿ' ಎಂದು ಹೇಳಿಕೊಂಡಿದ್ದಾನೆ. ಕುಮಾರಿಲಭಟ್ಟನೆಂದು ಹೇಳಿಲ್ಲ. ಕುಮಾರಿಲಭಟ್ಟರೂ ಜ್ಞಾನನಿಧಿಯೂ ಒಬ್ಬರೇ ಎಂದು ಹೇಳುವುದಕ್ಕೆ ಯಾವ ಆಧಾರ ಇಲ್ಲ. ಮಾಲತೀಮಾಧವದಲ್ಲಿ ತನಗಿರುವ ಅನೇಕ ಶಾಸ್ತ್ರಗಳಲ್ಲಿನ ಪಾಂಡಿತ್ಯವನ್ನು ಹೇಳಿರುವ ಕವಿ 'ಮೀಮಾಂಸೆ'ಯ ಪ್ರಸ್ತಾಪ ಮಾಡಿಲ್ಲ. ಆದುದರಿಂದ ಭವಭೂತಿಯೂ ಉಮ್ವೇಕನೂ ಬೇರೆ ಬೇರೆ ಇರಬಹುದೆಂದು ಮತ್ತೆ ಕೆಲವರು ಅಭಿಪ್ರಾಯ ಪಡುತ್ತಾರೆ. ಈ ವಿಷಯ ಇನ್ನೂ ತೊಡಕಾಗಿಯೇ ಉಳಿದಿದೆ. ಕುಮಾರಿಲಭಟ್ಟರ ಶ್ಲೋಕವಾರ್ತಿಕ ಮತ್ತು ಮಂಡನಮಿಶ್ರರ ಭಾವನಾವಿವೇಕ ಈ ಕೃತಿಗಳ ಮೇಲೆ ಉಮ್ವೇಕಭಟ್ಟ ವ್ಯಾಖ್ಯಾನಗಳನ್ನು ರಚಿಸಿದ್ದಾನೆ. ಉಮ್ವೇಕನು ನಿಬಂಧಕಾರನೆಂದೂ ಪ್ರಸಿದ್ಧನಾಗಿದ್ದಾನೆ.

## ಶಾಲಿಕನಾಥ (ಕ್ರಿ.ಶ. ೬೯೦–೭೬೦)

ಇವನು ಪ್ರಭಾಕರನ ಸಾಕ್ಷಾತ್ ಶಿಷ್ಯ. ಮಂಡನಮಿಶ್ರರ ವಿಧಿವಿವೇಕದಿಂದ ಇವನು ಉದಾಹರಿಸಿದ್ದಾನೆ. ಕ್ರಿ. ಶ. ೯ನೆಯ ಶತಮಾನದಲ್ಲಿದ್ದ ವಾಚಸ್ಪತಿಮಿಶ್ರರು ಶಾಲಿಕನಾಥನ 'ಋಜುವಿಮಲಾ'ದಿಂದ ಶ್ಲೋಕಗಳನ್ನು ಉಲ್ಲೇಖಿಸುತ್ತಾರೆ. ಆದುದರಿಂದ ಇವನು ಕ್ರಿ.ಶ. ಎಂಟನೆಯ ಶತಮಾನದ ಸುಮಾರಿನಲ್ಲಿದ್ದನೆಂದು ಹೇಳಬಹುದು. ಶಾಲಿಕನಾಥ ತನ್ನ ಗುರುವಿನ ಸಿದ್ಧಾಂತವನ್ನು ಸಮರ್ಥವಾಗಿ ಪ್ರಚಾರಪಡಿಸಿದ್ದಾನೆ. 'ಲಘ್ವೀ' ಮೇಲೆ ಇವನು 'ದೀಪ ಶಿಖಾ' ಎಂಬ ವ್ಯಾಖ್ಯಾನವನ್ನೂ, 'ಬೃಹತೀ' ಮೇಲೆ 'ಋಜುವಿಮಲಾ' ಎಂಬ ವ್ಯಾಖ್ಯಾನವನ್ನೂ

ರಚಿಸಿದ್ದಾನೆ. ಇವುಗಳ ಜೊತೆಗೆ 'ಪ್ರಕರಣಪಂಚಿಕಾ' ಎಂಬ ಪ್ರಕರಣ ಗ್ರಂಥವನ್ನು ಬರೆದಿದ್ದಾನೆ. ಪ್ರಕರಣಪಂಚಿಕೆಯಲ್ಲಿ ಪ್ರಾಭಾಕರ ಪಂಥದ ಪ್ರಮುಖ ಸಿದ್ಧಾಂತಗಳನ್ನು ವ್ಯಾಪಕವಾಗಿ ವಿವೇಚಿಸಿದ್ದಾನೆ ಅವುಗಳಲ್ಲಿ 'ಅಧ್ಯಯನವಿಧಿ'ಯ ಚರ್ಚೆ ಗಮನಾರ್ಹವಾದುದು. ಜಾತಿ ನಿರ್ಣಯ, ಪ್ರಮಾಣ ನಿರ್ಣಯ, ಆತ್ಮಸ್ವರೂಪ ನಿರ್ಣಯ. ವಾಕ್ಯಾರ್ಥಾವಗಮ ವಿವೇಚನೆ- ಇವು ಇಲ್ಲಿ ನಿರೂಪಿಸಿರುವ ಇತರ ಮುಖ್ಯ ವಿಚಾರಗಳು.

## ವಾಚಸ್ಪತಿಮಿಶ್ರ (ಕ್ರಿ. ಶ. ೮೦೦-೯೦೦)

ಇವರ ಕಾಲನಿರ್ಣಯ ಮಾಡಲು ಇವರ ಕೃತಿಯಲ್ಲಿರುವ ಅಂತರಂಗ ಪ್ರಮಾಣ ಸಹಾಯಕವಾಗಿದೆ. ತಮ್ಮ ನ್ಯಾಯಸೂಚೀನಿಬಂಧ, ವೆಂಬ ಕೃತಿಯನ್ನು ತಾವು ರಚಿಸಿ ಪೂರ್ಣ ಗೊಳಿಸಿದ ಕಾಲವನ್ನು ವಿಕ್ರಮಶಕೆ ೮೯೮ ಎಂದು ಇವರು ತಿಳಿಸಿದ್ದಾರೆ. ಇವರಿಂದ ಇವರ ಕಾಲ ಕ್ರಿ. ಶ. ೮೪೧-ಕ್ಕೆ ಸಮನಾಗುತ್ತದೆ. ಕ್ರಿ. ಶ. ೧೦ನೇ ಶತಮಾನದ ಮಧ್ಯಕಾಲದಲ್ಲಿದ್ದ ಉದಯನಾಚಾರ್ಯನಿಗಿಂತ ಇವರು ಹಿಂದಿನವರಾದ ಕಾರಣ ಇವರ ಕಾಲವನ್ನು ಕ್ರಿ.ಶ. ೮೦೦ ರಿಂದ ೯೦೦ರ ಒಳಗೆ ಎಂದುನಿಶ್ಚಯಿಸಬಹುದು. ವಾಚಸ್ಪತಿಮಿಶ್ರರು ನಮ್ಮ ದೇಶದ ಅದ್ವಿತೀಯ ವಿದ್ವಾಂಸರಲ್ಲೊಬ್ಬರು ಇವರಿಗೆ 'ಸರ್ವತಂತ್ರಸ್ವತಂತ್ರ' ಎಂಬ ಬಿರುದು ಇತ್ತು. ಆರು ಆಸ್ತಿಕ ದರ್ಶನಗಳ ಮೇಲೆಯೂ ಆಧಾರಭೂತವಾದ ಕೃತಿಗಳನ್ನು ರಚಿಸಿದ ಅದ್ವಿತೀಯ ಪಂಡಿತರು ಇವರು. ನ್ಯಾಯ, ವೈಶೇಷಿಕ, ಸಾಂಖ್ಯ, ಯೋಗ, ವೇದಾಂತ, ಮೀಮಾಂಸಾ ಈ ಎಲ್ಲಾ ದರ್ಶನಗಳಲ್ಲಿಯೂ ಇವರಿಗೆ ಕರತಲಾಮಲಕವಾದ ಪಾಂಡಿತ್ಯವಿತ್ತು.

ಮೀಮಾಂಸಾಶಾಸ್ತ್ರಕ್ಕೆ ಸಂಬಂಧಿಸಿದಂತೆ ಇವರು 'ನ್ಯಾಯಕಣಿಕಾ' ಮತ್ತು 'ತತ್ತ್ವಬಿಂದು' ಎಂಬ ಎರಡು ಕೃತಿಗಳನ್ನು ರಚಿಸಿದ್ದಾರೆ. 'ನ್ಯಾಯಕಣಿಕಾ' ಎಂಬುದು ಮಂಡನಮಿಶ್ರರ 'ವಿಧಿ ವಿವೇಕ'ದ ಮೇಲಿನ ವ್ಯಾಖ್ಯಾನ ಅತ್ಯುತ್ತಮ ವ್ಯಾಖ್ಯಾನವಾಗಿರುವುದಲ್ಲದೆ ಈ ಕೃತಿ ಸತ್ಕಾರ್ಯವಾದ, ಅಸತ್ಕಾರ್ಯವಾದ, ಕ್ಷಣಭಂಗವಾದ, ಖ್ಯಾತಿವಾದ ಮೊದಲಾದ ದಾರ್ಶನಿಕ ವಿಚಾರವಿವೇಚನೆಗಳನ್ನೊಳಗೊಂಡಿದೆ. ತತ್ತ್ವಬಿಂದುವಿನಲ್ಲಿ ..................... ಶಬ್ದ ಬೋಧದ ಕರಣವು ವಾಸ್ತವವಾಗಿ ಯಾವುದು ಎಂಬುದನ್ನು ವಿಚಾರ ಮಾಡುತ್ತಾ ಸ್ಫೋಟವಾದ ವನ್ನೂ, ಪ್ರಭಾಕರ ಮತ್ತು ಶಾಲಿಕನಾಥರು ಪ್ರತಿಪಾದಿಸಿದ ಅನ್ವಿತಾಭಿಧಾನವಾದವನ್ನೂ ನಿರಾಕರಿಸಿದ್ದಾರೆ. ವಾಚಸ್ಪತಿಮಿಶ್ರರು ಇಲ್ಲಿ ಅಭಿಹಿತಾನ್ವಯವಾದವನ್ನು ಪ್ರತಿಪಾದಿಸಿದ್ದಾರೆ. ವಿಖ್ಯಾತವಾದ 'ಭಾಮತೀ' ಮೊದಲಾದ ಅನೇಕ ವೇದಾಂತ ಗ್ರಂಥಗಳೂ, ಸಾಂಖ್ಯತತ್ತ್ವ ಕೌಮುದೀ, ಯೋಗಭಾಷ್ಯವಿಶಾರದೀ, ನ್ಯಾಯವಾರ್ತಿಕತಾತ್ಪರ್ಯಟೀಕಾ ಮೊದಲಾದವು ಇವರ ಇತರ ಪ್ರಸಿದ್ಧ ಕೃತಿಗಳು.

## ಪಾರ್ಥಸಾರಥಿಮಿಶ್ರ (ಕಿ. ಶ. ೧೦೫೦-೧೧೨೦)

ಪಾರ್ಥಸಾರಥಿಮಿಶ್ರ ಅನೇಕ ಪ್ರಮುಖ ಕೃತಿಗಳನ್ನು ರಚಿಸಿದ್ದಾನೆ. 'ತಂತ್ರರತ್ನ',

'ನ್ಯಾಯರತ್ನಾಕರ,' 'ಶಾಸ್ತ್ರದೀಪಿಕಾ.' 'ನ್ಯಾಯರತ್ನಮಾಲಾ' ಎಂಬುವು ಇವುಗಳಲ್ಲಿ ಮುಖ್ಯವಾದವು. ಕುಮಾರಿಲರ 'ಟುಪ್‌ಟೀಕೆ'ಯ ಮೇಲಿನ ವ್ಯಾಖ್ಯಾನ ತಂತ್ರರತ್ನ, 'ನ್ಯಾಯರತ್ನಾಕರ' ಶ್ಲೋಕವಾರ್ತಿಕದ ಮೇಲಿನ ವ್ಯಾಖ್ಯಾನ. ಶಾಸ್ತ್ರದೀಪಿಕೆ ಎಂಬುದು ಜೈಮಿನಿಗಳ ಪೂರ್ವಮೀಮಾಂಸಾಸೂತ್ರಗಳ ಮೇಲಿನ ಸ್ವತಂತ್ರವಾದ ವ್ಯಾಖ್ಯಾನ; ಮೀಮಾಂಸಾಶಾಸ್ತ್ರದ ಮುಖ್ಯತತ್ವಗಳನ್ನು ವಿವೇಚಿಸುವ ಸ್ವತಂತ್ರಕೃತಿ ನ್ಯಾಯರತ್ನಮಾಲಾ. ತಂತ್ರರತ್ನವು ಟುಪ್ ಟೀಕೆಯ ಮೇಲಿನ ವಿಸ್ತಾರವಾದ ವ್ಯಾಖ್ಯಾನವಷ್ಟೇ ಆಗಿರದೆ ಮೀಮಾಂಸಾಶಾಸ್ತ್ರದ ಸಮಗ್ರವಾದ ವಿವೇಚನೆಯೂ ಆಗಿದೆ. 'ಶಾಸ್ತ್ರದೀಪಿಕೆ'ಯು ಕುಮಾರಿಲರ ವಾರ್ತಿಕದ ಆಧಾರದಮೇಲೆ ರಚಿತವಾದ 'ನಿಬಂಧನ' ಕೃತಿ. ಭಾಟ್ಟಸಂಪ್ರದಾಯದ ಪ್ರಮಾಣಗ್ರಂಥಗಳಲ್ಲಿ ಅಧಿಕರಣ ಶರೀರವನ್ನು ಎಂದರೆ ವಿಷಯ, ವಿಶಯ, ಪೂರ್ವಪಕ್ಷ, ಸಿದ್ಧಾಂತ, ಪ್ರಯೋಜನ ಮತ್ತು ಸಂಗತಿಗಳನ್ನು ನಿರೂಪಿಸುವ ಮೊಟ್ಟಮೊದಲ ಕೃತಿ ಇದು. ಈ ಕೃತಿಗೆ ಸಂಪ್ರದಾಯದಲ್ಲಿ ವಿಶಿಷ್ಟವಾದ ಸ್ಥಾನವಿದೆ. ಮುಂದಿನ ಲೇಖಕರಾದ ಮಾಧವಾಚಾರ್ಯ, ಖಂಡದೇವಮಿಶ್ರ ಮೊದಲಾದವರಿಗೆ ನಿರೂಪಣೆಯ ಕ್ರಮ ಮಾದರಿಯಾಯಿತು. ಸರಳವಾದ ಭಾಷೆ ಮತ್ತು ಪ್ರಭಾವಪೂರ್ಣವಾದ ಶೈಲಿ ಇದರ ವೈಶಿಷ್ಟ್ಯ. ಅಧಿಕರಣಪ್ರಸ್ಥಾನದಲ್ಲಿ ಶಬರಭಾಷ್ಯ ಮತ್ತು ಕುಮಾರಿಲರ ವಾರ್ತಿಕವಾದ ಮೇಲೆ ಬಂದ ಮಹತ್ವದ ಕೃತಿ ಇದು. ಇದರ ಅಧ್ಯಯನವೇ ವ್ಯಾಪಕವಾಗಿ ಬೆಳೆದು ಭಾಷ್ಯ, ವಾರ್ತಿಕ ಮತ್ತು ಇತರ ವ್ಯಾಖ್ಯಾನಗಳೊಡನೆ ಸೂತ್ರಗಳ ಅಧ್ಯಯನವೂ ಹಿಂದೆ ಬೀಳುವಷ್ಟು ಇದು ಜನಪ್ರಿಯವಾಯಿತು. ಭಾಟ್ಟಸಂಪ್ರದಾಯದ ಕೆಲವು ಮೂಲಭೂತ ಸಿದ್ಧಾಂತಗಳನ್ನು 'ನ್ಯಾಯರತ್ನಮಾಲಾ' ವಿವೇಚಿಸುತ್ತದೆ. ಇದು ಈ ಸಿದ್ಧಾಂತದ ಒಂದು ಪ್ರೌಢವಾದ ಪ್ರಕರಣಗ್ರಂಥವಾಗಿದೆ. ಶಾಲೀಕನಾಥನು ಪ್ರಕರಣಸಂಚಿಕೆಯಲ್ಲಿ ವಿಸ್ತರಿಸಿದ ಪ್ರಾಭಾಕರ ಸಿದ್ಧಾಂತವನ್ನು ಪರೀಕ್ಷಿಸಿ ಸರಿಯಾದ ಉತ್ತರವನ್ನೂ ಕೊಟ್ಟು ಭಾಟ್ಟ ಸಿದ್ಧಾಂತವನ್ನು ಸ್ಥಾಪಿಸಿರುವುದು ಇದರ ಮಹತ್ವ.

## ಭವನಾಥಭಟ್ಟ (ಕ್ರಿ.ಶ. ೧೦೫೦–೧೧೫೦)

ಇವನು 'ನಯವಿವೇಕ' ವೆಂಬ ಕೃತಿಯನ್ನು ಬರೆದಿದ್ದಾನೆ. ಶಾಲಿಕನಾಥನ 'ಋಜುವಿಮಲಾ,' 'ದೀಪಶಿಖಾ' ಮತ್ತು 'ಪ್ರಕರಣಪಂಚಿಕಾ' ಇವುಗಳಿಗನುಸಾರವಾಗಿ ಪೂರ್ವಮೀಮಾಂಸಾಸೂತ್ರಗಳ ಹನ್ನೆರಡು ಅಧ್ಯಾಯಗಳಿಗೆ ಬರೆದ ಗದ್ಯವ್ಯಾಖ್ಯಾನ ಇದು ಭಾಟ್ಟ ಸಂಪ್ರದಾಯದಲ್ಲಿ ಪಾರ್ಥಸಾರಥಿ ಮಿಶ್ರರ ಶಾಸ್ತ್ರದೀಪಿಕೆಗೆ ಇರುವ ಸ್ಥಾನಕ್ಕೆ ಸಮನಾದ ಸ್ಥಾನ ಪ್ರಾಭಾಕರ ಸಂಪ್ರದಾಯದಲ್ಲಿ ಈ ಕೃತಿಗಿದೆ.

## ಪರಿತೋಷಮಿಶ್ರ (ಕ್ರಿ. ಶ. ೧೨೦೦)

ಇವನು ಪ್ರಾಯಃ ಬಂಗಾಳ ದೇಶಕ್ಕೆ ಸೇರಿದವನು. ತಂತ್ರವಾರ್ತಿಕದ ಮೇಲೆ 'ಅಜಿತಾ'

ಎಂಬ ವ್ಯಾಖ್ಯಾನವನ್ನು ಇವನು ಬರೆದಿದ್ದಾನೆ. ಇದು ಬಹಳ ಸಂಕ್ಷಿಪ್ತವಾಗಿದೆ ವಾರ್ತಿಕವನ್ನು ಅರ್ಥಮಾಡಿಕೊಳ್ಳಲು ಇದು ಬಹಳ ಉಪಯುಕ್ತವಾಗಿದೆ. ಈ ಕೃತಿಗೆ 'ತಂತ್ರಟೀಕಾ ನಿಬಂಧನ' ಎಂಬ ಮತ್ತೊಂದು ಹೆಸರೂ ಇದೆ.

## ಭಟ್ಟಸೋಮೇಶ್ವರ (ಕ್ರಿ.ಶ. ೧೨೦೦)

'ನ್ಯಾಯಸುಧಾ' ಅಥವಾ 'ರಾಣಕ' ಎಂಬುದು ಇವನು ರಚಿಸಿದ ಕೃತಿ. ಇದು ತಂತ್ರ ವಾರ್ತಿಕದ ಮೇಲಿನ ವ್ಯಾಖ್ಯಾನ, ಚಿದಾನಂದ ತನ್ನ 'ನೀತಿತತ್ತ್ವಾವಿರ್ಭಾವದಲ್ಲಿ ನ್ಯಾಯಸುಧೆ ಯನ್ನು ಗಮನಿಸಿರುವನೆಂದು 'ನೀತಿತತ್ತ್ವಾವಿರ್ಭಾವವ್ಯಾಖ್ಯಾ' ಕಾರನಾದ ಪರಮೇಶ್ವರ ೨ ಹೇಳುವುದರಿಂದ ಇವನ ಕಾಲ ಕ್ರಿ.ಶ. ೧೨೦೦ ಎಂದು ಹೇಳಬಹುದು. ಸೋಮನಾಥದೀಕ್ಷಿತ ಖಂಡದೇವಮಿಶ್ರ ಮೊದಲಾದವರು ಇವನ ಕೃತಿಯಿಂದ ಹೇರಳವಾಗಿ ಉಲ್ಲೇಖಿಸಿದ್ದಾರೆ.

## ಮುರಾರಿಮಿಶ್ರ

ಇವನ ಕಾಲ ಕ್ರಿ.ಶ. ೧೩ನೇ ಶತಮಾನದ ಆರಂಭಕಾಲ. ಮೀಮಾಂಸಾಶಾಸ್ತ್ರದಲ್ಲಿ 'ಮಿಶ್ರಮತ'ವೆಂಬ ಮೂರನೆಯ ಪಂಥವೊಂದನ್ನು ಇವನು ಸ್ಥಾಪಿಸಿದನೆಂದು ಹೇಳಲಾಗಿದೆ 'ಮುರಾರೇಃ ತೃತೀಯಃ ಪಂಥಾಃ'. 'ತ್ರಿಪಾದೀನೀತಿನಯನ' ಎಂಬುದು ಇವನ ಕೃತಿ. ಇಲ್ಲಿ ಅಧೀ ಕರಣದ ಆಧಾರದ ಮೇಲೆ ಇವನು ತನ್ನ ಅಭಿಪ್ರಾಯಗಳನ್ನು ಪ್ರತಿಪಾದಿಸಿದ್ದಾನೆ. 'ದ್ವಾದಶ ಲಕ್ಷಣೀ' ಮೇಲೆ ಪೂರ್ವವಾಗಿ ಇವನು ವ್ಯಾಖ್ಯಾನ ಮಾಡಿರುವನೋ ಇಲ್ಲವೋ ತಿಳಿಯದು ಮೊದಲನೆಯ ಅಧ್ಯಾಯ. ಎರಡು, ಮೂರು ಮತ್ತು ನಾಲ್ಕನೆಯ ಅಧ್ಯಾಯ ಇವುಗಳಿಗೆ ಕೃತಿ ಪ್ರಾಯಃ ಸಂಬಂಧಿಸಿರುತ್ತದೆ. ತನಗೆ ಆವಶ್ಯಕವೆನಿಸಿದ ಮುಖ್ಯವಾದ ಅಧಿಕರಣಗಳ ಮೇಲೆ ಇವನು ವ್ಯಾಖ್ಯಾನ ಮಾಡಿರಬಹುದೆಂದು ತೋರುತ್ತದೆ. ನಯವಿವೇಕದಲ್ಲಿ ಭವನಾಥ ಭಟ್ಟ ಪ್ರತಿಪಾದಿಸಿದ ಸಿದ್ಧಾಂತವನ್ನು ಇವನು ತನ್ನ ಕೃತಿಯಲ್ಲಿ ಖಂಡಿಸಿದ್ದಾನೆ.

## ನಂದೀಶ್ವರ (ಕ್ರಿ.ಶ. ೧೨೦೦–೧೩೦೦)

ಇವನು ಭವನಾಥಭಟ್ಟನ ನಂತರದ ಕಾಲದವನು. 'ಪ್ರಭಾಕರವಿಜಯ' ಎಂಬ ಉತ್ತಮ ಪ್ರಕರಣ ಗ್ರಂಥವನ್ನಿವನು ಬರೆದಿದ್ದಾನೆ. ಶಾಲಿಕನಾಥ ಮತ್ತು ಭವನಾಥ ವಿವರಿಸಿ ರುವುದನ್ನೇ ತಾನೂ ಪ್ರತಿಪಾದಿಸುವುದಾಗಿ ಇವನು ಹೇಳಿಕೊಂಡಿದ್ದಾನೆ. ಪಾರ್ಥಸಾರಥಿ ಮಿಶ್ರನ 'ನ್ಯಾಯರತ್ನಮಾಲಾ'ವನ್ನೂ ಉಲ್ಲೇಖಿಸಿ ಖಂಡಿಸಿದ್ದಾನೆ.

## ಚಿದಾನಂದಪಂಡಿತ (ಕ್ರಿ. ಶ. ೧೨೦೦–೧೩೦೦)

ಇವನು ಪಾರ್ಥಸಾರಥಿಮಿಶ್ರ, ಭಟ್ಟಸೋಮೇಶ್ವರ ಮತ್ತು ಭವನಾಥಭಟ್ಟ ಇವರುಗಳಿಗಿಂತ

ಅರ್ವಾಚೀನ. ಪ್ರಾಯಃ ಕ್ರಿ.ಶ. ೧೩ನೇ ಶತಮಾನದಲ್ಲಿ ಇವನಿದ್ದಿರಬಹುದು. ಇವನ ಕೃತಿ 'ನೀತಿತತ್ತ್ವಾವಿರ್ಭಾವ'. ಅನೇಕರು ಈ ಕೃತಿಯ ಮೇಲೆ ವ್ಯಾಖ್ಯಾನಗಳನ್ನು ಬರೆದಿದ್ದಾರೆ. ಕುಮಾರಿಲರ ಶ್ಲೋಕವಾರ್ತಿಕದ ಆಧಾರದ ಮೇಲೆ ಈ ಕೃತಿ ರಚಿತವಾಗಿದೆ. ಇದರಲ್ಲಿ ಅಧ್ಯಯನವಾದ, ಕಾರ್ಯವಾದ ಮೊದಲಾದ ೪೪ ವಾದಗಳು ಇರುವುದು ಇದರ ವೈಶಿಷ್ಟ್ಯ. ಇವುಗಳೆಲ್ಲಾ ಶ್ಲೋಕವಾರ್ತಿಕದಲ್ಲೇ ಇದ್ದರೂ ಇವುಗಳ ಬಗೆಗೆ ಹೆಚ್ಚು ಬೆಳಕನ್ನು ಈ ಕೃತಿ ಚೆಲ್ಲುತ್ತದೆ.

## ಮಾಧವಾಚಾರ್ಯ (ಕ್ರಿ.ಶ. ೧೨೯೭–೧೩೮೬)

ಮಾಧವಾಚಾರ್ಯರು ವೇದಾಂತ ದೇಶಿಕರ ಕಿರಿಯ ಸಮಕಾಲೀನರು. ಇವರ 'ಪರಾಶರಮಾಧವೀಯ'ದಿಂದಲೂ, ಕಂಚಿಯ ಶಾಸನವೊಂದರಿಂದಲೂ ಇವರ ತಂದೆ ತಾಯಿಗಳು ಮತ್ತು ಸಹೋದರರ ವಿಚಾರ ತಿಳಿದುಬರುತ್ತದೆ. ಮಾಯಣ ಮತ್ತು ಶ್ರೀಮಂತೀ ಇವರ ತಂದೆ ತಾಯಿಗಳು. ಸಾಯಣ ಮತ್ತು ಭೋಗನಾಥ ಇವರ ಸಹೋದರರು. ಮಾಧವಾಚಾರ್ಯರೂ ವಿದ್ಯಾರಣ್ಯರೂ ಒಬ್ಬರೇ ಅಥವಾ ಬೇರೆ ಬೇರೆಯವರೇ ಎಂಬ ವಿಚಾರದಲ್ಲಿ ಬಹಳ ಚರ್ಚೆ ಆಗಿದೆ. ಇನ್ನೂ ಇದು ಖಚಿತವಾಗಿ ನಿಶ್ಚಯವಾಗಿಲ್ಲ. ಮಾಧವಾಚಾರ್ಯರಿಗೆ ಸಂನ್ಯಾಸಾಶ್ರಮದಲ್ಲಿ ವಿದ್ಯಾರಣ್ಯ ಎಂಬ ಹೆಸರಿತ್ತೆಂದು ಸಂಪ್ರದಾಯವಿದೆ. ಮಾಧವಾಚಾರ್ಯರು ಅನೇಕ ಗ್ರಂಥಗಳನ್ನು ಬರೆದಿದ್ದಾರೆ. 'ನ್ಯಾಯಮಾಲಾವಿಸ್ತರ' ಎಂಬುದು ಪೂರ್ವಮೀಮಾಂಸಾಸೂತ್ರದ ದ್ವಾದಶಲಕ್ಷಣೀ ಮೇಲಿನ ವ್ಯಾಖ್ಯಾನವಾಗಿದೆ. ಇದು ಗದ್ಯಪದ್ಯಾತ್ಮಕವಾಗಿದೆ. ಒಂದೊಂದು ಅಧಿಕರಣದ ಅರ್ಥವನ್ನು ಒಂದೆರಡು ಶ್ಲೋಕಗಳಲ್ಲಿ ಇಲ್ಲಿ ವಿವರಿಸಿದ್ದಾರೆ. ಹಾಗೆ ವಿವರಿಸುವಾಗ ಮೊದಲು ಸಂಶಯವನ್ನು ಹೇಳಿ, ಪೂರ್ವಪಕ್ಷ ನಿರೂಪಣೆ ಮಾಡಿ, ಕೊನೆಯಲ್ಲಿ ಸಿದ್ಧಾಂತವನ್ನು ನಿರೂಪಿಸಿದ್ದಾರೆ. ಈ ಶ್ಲೋಕಗಳ ಅಭಿಪ್ರಾಯವನ್ನು ಸರಳವಾದ ಗದ್ಯದಲ್ಲಿ ವಿಶದೀಕರಿಸಿದ್ದಾರೆ. ಪಾರ್ಥಸಾರಥಿಮಿಶ್ರರು ಶಾಸ್ತ್ರದೀಪಿಕೆಯಲ್ಲಿ ಎಲ್ಲ ಅಧಿಕರಣಗಳಿಗೂ ಪೂರ್ವಪಕ್ಷ ಮತ್ತು ಸಿದ್ಧಾಂತಗಳನ್ನು ಕೊಟ್ಟಿಲ್ಲದಿರುವುದರಿಂದ ಈ ಕೃತಿಯಲ್ಲಿ ತಾವು ಎಲ್ಲ ಅಧಿಕರಣಗಳಿಗೂ ಅವುಗಳನ್ನು ಕೊಟ್ಟಿರುವುದಾಗಿ ಹೇಳಿಕೊಂಡಿದ್ದಾರೆ. ಮುಖ್ಯವಾದ ಅಧಿಕರಣಗಳಲ್ಲಿ ಪ್ರಭಾಕರರ ಅಭಿಪ್ರಾಯಗಳನ್ನೂ ಕೊಟ್ಟಿರುವುದು ಈ ಗ್ರಂಥದ ಮಹತ್ತ್ವವನ್ನು ಹೆಚ್ಚಿಸಿದೆ. ಇವರು 'ಪರಾಶರಮಾಧವೀಯ', 'ವೈಯಾಸಿಕನ್ಯಾಯಮಾಲಾ', 'ಪಂಚದಶೀ' 'ವಿವರಣಪ್ರಮೇಯ ಸಂಗ್ರಹ' ಅನುಭೂತಿಪ್ರಕಾಶ', 'ಸರ್ವದರ್ಶನ ಸಂಗ್ರಹ' ಮೊದಲಾದ ಇತರ ವಿಖ್ಯಾತ ಗ್ರಂಥಗಳನ್ನು ರಚಿಸಿದ್ದಾರೆ.

## ಭಟ್ಟವಿಷ್ಣು (ಕ್ರಿ.ಶ ೧೪೦೦)

ಕ್ರಿ ಶ ೧೪ನೆಯ ಶತಮಾನದ ಕೊನೆಯ ಕಾಲಕ್ಕೆ ಇವನು ಸೇರಿದವನು. ಇವನ

ಕೃತಿ 'ನಯತತ್ವ ಸಂಗ್ರಹ'. ತರ್ಕಪಾದದಲ್ಲಿ ಪ್ರತಿಪಾದಿತವಾದ ಮುಖ್ಯ ವಿಷಯಗಳ ಸರಳ ನಿರೂಪಣೆ ಈ ಕೃತಿಯಲ್ಲಿದೆ. ಪ್ರಭಾಕರನ ಮತಕ್ಕನುಸಾರ ಇವನು ನಿರೂಪಣೆ ಮಾಡಿದ್ದಾನೆ. ಪ್ರತ್ಯಕ್ಷ ಪ್ರಮಾಣ, ಬೌದ್ಧಮತದ ಪ್ರತ್ಯಯನಿರಾಲಂಬನತ್ವ, ಅನುಮಾನ, ಅರ್ಥಾಪತ್ತಿ, ಅಭಾವ, ಈಶ್ವರ, ಶಬ್ದನಿತ್ಯತ್ವ, ವಾಕ್ಯಾರ್ಥಜ್ಞಾನಕರಣ, ಪ್ರಪಂಚಮಿಥ್ಯಾತ್ವ ಮೊದಲಾದ ಅನೇಕ ವಿಚಾರಗಳನ್ನು ವಿವೇಚಿಸುವ ಈ ಕೃತಿ ತರ್ಕಪಾದಸೂತ್ರಗಳಿಗೆ ವ್ಯಾಖ್ಯಾನವಾಗಿರುವಂತೆ ಈ ಶಾಸ್ತ್ರದ ವಿವೇಚನೆಯನ್ನೂ ಮಾಡುವುದಾಗಿದೆ.

## ವರದರಾಜ (ಕ್ರಿ.ಶ. ೧೫೦೦-೧೫೭೦)

ಈ ವರದರಾಜನು 'ತಾರ್ಕಿಕರಕ್ಷಾ' ಕಾರನಾದ ವರದರಾಜನಿಗಿಂತ ಬೇರೆಯವನು. ಕ್ರಿ.ಶ. ೧೭ನೆಯ ಶತಮಾನದ ಆದಿಕಾಲದಲ್ಲಿದ್ದ ಸೋಮನಾಥದೀಕ್ಷಿತ ಈ ವರದರಾಜನನ್ನು ಉಲ್ಲೇಖಿಸಿದ್ದಾನೆ. ಇವನು ಭವನಾಥಭಟ್ಟನ 'ನಯವಿವೇಕ'ಕ್ಕೆ 'ದೀಪಿಕಾ' ಎಂಬ ವ್ಯಾಖ್ಯಾನವನ್ನು ರಚಿಸಿದ್ದಾನೆ. ಮೊದಲನೆಯ ಅಧ್ಯಾಯದ ಎರಡನೆಯ ಪಾದದಿಂದ ಈ ವ್ಯಾಖ್ಯಾನ ಆರಂಭವಾಗುತ್ತದೆ.

## ಅಪ್ಪಯ್ಯದೀಕ್ಷಿತ (ಕ್ರಿ. ಶ. ೧೫೨೦-೧೫೯೩)

ಅಪ್ಪಯ್ಯದೀಕ್ಷಿತರು ಸರ್ವಶಾಸ್ತ್ರ ಪಂಡಿತರಾಗಿ ವಿಖ್ಯಾತರಾಗಿದ್ದಾರೆ ಅದ್ವೈತಸಿದ್ಧಾಂತ ಶೈವಸಿದ್ಧಾಂತ, ಅಲಂಕಾರಶಾಸ್ತ್ರ-ಇವುಗಳಲ್ಲಿ ಹೇಗೆ ಅನುಪಮವಾದ ಕೃತಿಗಳನ್ನು ರಚಿಸಿದ್ದಾರೆಯೋ ಹಾಗೆಯೇ ಮೀಮಾಂಸಾಶಾಸ್ತ್ರದಲ್ಲಿಯೂ ಪ್ರಮಾಣಭೂತವಾದ ಕೃತಿಗಳನ್ನು ರಚಿಸಿದ್ದಾರೆ. 'ವಿಧಿರಸಾಯನ', 'ಉಪಕ್ರಮಪರಾಕ್ರಮ', 'ವಾದನಕ್ಷತ್ರಮಾಲಾ', 'ಮಯೂಖಾವಳೀ', 'ಚಿತ್ರಪಟ' ಎಂಬ ಕೃತಿಗಳನ್ನು ಇವರು ಬರೆದಿದ್ದಾರೆ. ಇವರು ತಮ್ಮ ಅದ್ವೈತ ಪರವಾದ ಕೃತಿಗಳಲ್ಲಿ ಮೀಮಾಂಸಾ ಶಾಸ್ತ್ರದ ಅನೇಕ ನ್ಯಾಯಗಳನ್ನು ಪ್ರಭಾವ ಪೂರ್ಣವಾಗಿ ನಿರೂಪಿಸಿದ್ದಾರೆ. ನಮ್ಮ ನಾಡಿನ ಶತಾಧಿಕ ಗ್ರಂಥ ಕರ್ತೃಗಳಲ್ಲಿ ಇವರೂ ಒಬ್ಬರು.

## ವಿಜಯೀಂದ್ರಭಿಕ್ಷು (ಕ್ರಿ.ಶ. ೧೫೪೯-೧೫೯೭)

ಇವರು ವಿಜಯೀಂದ್ರತೀರ್ಥರೆಂದು ವಿಖ್ಯಾತರಾಗಿದ್ದಾರೆ. ಇವರು ಅಪ್ಪಯ್ಯದೀಕ್ಷಿತರ ಸಮಕಾಲೀನರು. ವೇದಾಂತ ಮೊದಲಾದ ಅನೇಕ ವಿಷಯಗಳನ್ನು ಕುರಿತ ೧೦೪ ಕೃತಿಗಳನ್ನು ಇವರು ರಚಿಸಿರುವರೆಂದು ತಿಳಿದು ಬರುತ್ತದೆ. ಮೀಮಾಂಸಾಶಾಸ್ತ್ರಕ್ಕೆ ಸಂಬಂಧಿಸಿದಂತೆ ಇವರು (೧) 'ನ್ಯಾಯಾಧ್ವದೀಪಿಕಾ' (೨) 'ಮೀಮಾಂಸಾನಯಕೌಮುದೀ' ಮತ್ತು (೩) 'ಉಪಸಂಹಾರವಿಜಯ' ಎಂಬ ಕೃತಿಗಳನ್ನು ರಚಿಸಿದ್ದಾರೆ. ಮೊದಲ ಎರಡು ಕೃತಿಗಳೂ

ಸೂತ್ರಗಳ ಮೇಲಿನ ಗಚ್ಛದ್ವ್ಯಾಖ್ಯಾನಗಳು. ಉಪಸಂಹಾರ ಪ್ರಾಬಲ್ಯವನ್ನು ಸ್ಥಾಪಿಸುವುದು ಮೂರನೆಯ ಕೃತಿ. ಇವರು ಸರ್ವತಂತ್ರಸ್ವತಂತ್ರ. ಚತುಷ್ಷಷ್ಟಿಕಲಾವಲ್ಲಭ ಎಂದು ವಿಶ್ರುತ ರಾಗಿದ್ದಾರೆ.

## ನಾರಾಯಣಭಟ್ಟ (ಕ್ರಿ. ಶ. ೧೫೬೦-೧೬೫೬)

ಇವರು ಅಪ್ಪಯ್ಯದೀಕ್ಷಿತರ ನಂತರಕಾಲದಲ್ಲಿ ಆದರೆ ಆಪದೇವನಿಗಿಂತ ಹಿಂದೆ ಇದ್ದರೆಂದು ಗೊತ್ತಾಗಿದೆ. ಕೇರಳದ ವೆಂಪ್ಪಟ್ಟೂರ್ ಗ್ರಾಮಕ್ಕೆ ಇವರು ಸೇರಿದವರು. ಇವರ ಕೃತಿಗಳು "ಮಾನಮೇಯೋದಯ" ಮತ್ತು "ತಂತ್ರವಾರ್ತಿಕ ನಿಬಂಧನ" ಎಂಬುವು. ಮಾನಮೇಯೋದಯವು "ಮಾನ" ಮತ್ತು "ಮೇಯ"ವನ್ನು ವಿವೇಚಿಸುವ ಕೃತಿ. "ಮಾನ"ದ ನಿರೂಪಣೆಯ ನಂತರ ಅರ್ಧಕ್ಕೆ ನಿಂತುಹೋಗಿದೆ. ಭಾಟ್ಟರು ನಿರೂಪಿಸುವ ಆರು ಪ್ರಮಾಣ ಗಳನ್ನು ಇದು ನಿರೂಪಿಸುತ್ತದೆ. ಈಗ ದೊರಕಿರುವ 'ಮೇಯ' ವಿಭಾಗವನ್ನು ಕ್ರಿ.ಶ. ೧೭ನೆಯ ಶತಮಾನದ ಮತ್ತೊಬ್ಬ ನಾರಾಯಣನು ರಚಿಸಿದ್ದಾನೆ. ಮಾನಮೇಯೋದಯವು ಸರಳವಾದ ಶೈಲಿಯಲ್ಲಿದೆ. ಇಲ್ಲಿ ಅನೇಕ ಕಡೆ 'ಗುರುಮತ'ವನ್ನು ಖಚಿತವಾಗಿ ನಿರಾಕರಿಸ ಲಾಗಿದೆ. ಈ ಕೃತಿ ನ್ಯಾಯಶಾಸ್ತ್ರದ ಪರಿಭಾಷೆಯಲ್ಲಿ ರಚಿಸಲ್ಪಟ್ಟಿದೆ. "ನಿಬಂಧನ"ವು ತಂತ್ರವಾರ್ತಿಕದ ಮೇಲಿನ ಸರಳವಾದ ವ್ಯಾಖ್ಯಾನ. ಅನವಶ್ಯಕವಾದ ಚರ್ಚೆಗಳಿಗೆ ಪ್ರವೇಶಿಸದೆ ನೇರವಾಗಿ ಗ್ರಂಥದ ವಿವರಣೆಯನ್ನು ಕೊಡುವುದು ಇದರ ವೈಶಿಷ್ಟ್ಯ. ಇವರು "ಪ್ರಕ್ರಿಯಾ ಸರ್ವಸ್ವ" ಮೊದಲಾದ ಇತರ ಕೃತಿಗಳನ್ನು ಬರೆದಿದ್ದಾರೆ.

## ಲೌಗಾಕ್ಷಿಭಾಸ್ಕರ (ಕ್ರಿ. ಶ. ೧೬೦೦)

ಇವನ ಕೃತಿ "ಅರ್ಥಸಂಗ್ರಹ". ಆಪದೇವನ 'ನ್ಯಾಯಪ್ರಕಾಶ' ಈ ಅರ್ಥಸಂಗ್ರಹಕ್ಕೂ ಹಿಂದಿನದೋ ಅಥವಾ ಈ ಗ್ರಂಥದ ವಿಸ್ತರಣೆಯೋ ಆಪದೇವನ ಕೃತಿಯೋ ಎಂಬ ವಿಚಾರದಲ್ಲಿ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯವಿದೆ. ಮೀಮಾಂಸಾಶಾಸ್ತ್ರದ ಮುಖ್ಯಾಂಶಗಳನ್ನು ಪ್ರತಿಪಾದಿಸುವ ಅರ್ಥಸಂಗ್ರಹ ಈ ಶಾಸ್ತ್ರದ ಕೈಪಿಡಿಯಾಗಿ ಬಹಳ ಜನಪ್ರಿಯವಾಗಿದೆ.

## ಆಪದೇವ (ಕ್ರಿ. ಶ. ೧೫೮೦—೧೬೫೦)

ಇವನು ಸಂತ ಏಕನಾಥನ ವಂಶಕ್ಕೆ ಸೇರಿದವನೆಂಬುದನ್ನು ಇವನ ಮಗನಾದ ಅನಂತದೇವ ತನ್ನ ಸ್ಮೃತಿಕೌಸ್ತುಭದಲ್ಲಿ ತಿಳಿಸುತ್ತಾನೆ. ಇವನು ಬರೆದಿರುವ ಗ್ರಂಥ 'ಮೀಮಾಂಸಾ'

'ನ್ಯಾಯಪ್ರಕಾಶ'. ದ್ವಾದಶಲಕ್ಷಣೀಯ ವಿಷಯಗಳನ್ನೆಲ್ಲಾ ನಿರೂಪಿಸುವ ಪ್ರೌಢವಾದ ಪ್ರಕರಣ ಗ್ರಂಥ ಇದು. ಇಲ್ಲಿ ಒಂದು, ಮೂರು ಮತ್ತು ಐದನೆಯ ಅಧ್ಯಾಯಗಳಿಗೆ ಹೆಚ್ಚು ಪ್ರಾಶಸ್ತ್ಯ ಕೊಟ್ಟಿದೆ. ಅತಿದೇಶ, ಊಹ, ಬಾಧ, ತಂತ್ರ ಮತ್ತು ಪ್ರಸಂಗ—ಇವುಗಳನ್ನು ಎಂದರೆ ಪೂರ್ವ ಮೀಮಾಂಸಾ ಸೂತ್ರಗಳ ಉತ್ತರಾರ್ಧದ ವಿಚಾರಗಳನ್ನು ವಿವೇಚಿಸುವ ಇಂಥ ಮತ್ತೊಂದು ಕೃತಿ ಇಲ್ಲವೆಂದು ಹೇಳಬಹುದು.

## ಖಂಡದೇವಮಿಶ್ರ (ಕ್ರಿ. ಶ. ೧೫೭೫—೧೬೬೫)

ಇವನು ಅಪ್ಪಯ್ಯದೀಕ್ಷಿತರ ಕಿರಿಯಸಮಕಾಲೀನ. ಇವನು ಜಗನ್ನಾಥ ಪಂಡಿತನ ತಂದೆಯಾದ ಪೇರಂಭಟ್ಟನಿಗೆ ಮೀಮಾಂಸಾಶಾಸ್ತ್ರೋಪಾಧ್ಯಾಯನಾಗಿದ್ದನೆಂಬುದು ರಸಗಂಗಾಧರದಿಂದ ಗೊತ್ತಾಗುತ್ತದೆ. ಇವೆಲ್ಲ ಕಾರಣಗಳಿಂದ ಇವನು ಕ್ರಿ. ಶ. ೧೭ನೆಯ ಶತಮಾನದ ಪೂರ್ವಾರ್ಧದಲ್ಲಿದ್ದನೆಂದು ಗೊತ್ತಾಗುತ್ತದೆ. 'ಭಾಟ್ಟಕೌಸ್ತುಭ', 'ಭಾಟ್ಟದೀಪಿಕಾ' ಮತ್ತು 'ಭಾಟ್ಟರಹಸ್ಯ' ಎಂಬುವು ಇವನ ಕೃತಿಗಳು. ಭಾಟ್ಟಸಂಪ್ರದಾಯದಲ್ಲಿ 'ನವೀನಮತ'ದ ಆಧಾರಗಳನ್ನು ಅತಿ ಸ್ಪಷ್ಟವಾಗಿ ನಿರೂಪಿಸುವ ಈ ಕೃತಿಗಳು ಈ ಶಾಸ್ತ್ರದ ಯುಗಪ್ರವರ್ತಕ ಕೃತಿಗಳಾಗಿವೆ. ಭಾಷೆ ಮತ್ತು ವಿಷಯವಿವೇಚನೆಯಲ್ಲಿಯೂ ಈ ಕೃತಿಗಳು ಪ್ರಭಾವ ಪೂರ್ಣವಾಗಿವೆ. ಖಂಡದೇವ ಅನೇಕ ಕಡೆ ಭಾಟ್ಟಸಂಪ್ರದಾಯದ ಪ್ರಾಚೀನರ ಅಭಿಪ್ರಾಯಗಳನ್ನು ನಿರಾಕರಿಸಿ ತನ್ನದೇ ಆದ ಅಭಿಪ್ರಾಯಗಳನ್ನು ನಿರೂಪಿಸುತ್ತಾನೆ.

'ಭಾಟ್ಟಕೌಸ್ತುಭ'ವು ಸೂತ್ರಗಳ ಮೇಲಿನ ವಿಸ್ತಾರವಾದ ವ್ಯಾಖ್ಯಾನ. ಸೂತ್ರವಿವರಣೆ, ಅಧಿಕರಣ ಸ್ವರೂಪ, ಇವುಗಳನ್ನು ಇದು ನಿರೂಪಿಸುವುದಲ್ಲದೆ ಅನೇಕ ಮುಖ್ಯ ವಿಷಯಗಳನ್ನು ಕುರಿತ ಚರ್ಚೆಗಳನ್ನೂ ಒಳಗೊಂಡಿದೆ. ಇವನ ವಾದ ನವ್ಯನೈಯ್ಯಾಯಿಕರವಾದ ಸರಣಿಯಲ್ಲಿದೆ. ಈ ಕೃತಿಯನ್ನರಿಯಲು ನವೀನನ್ಯಾಯದ ಪರಿಚಯ ಅವಶ್ಯಕ.

ಇವನ ಕೃತಿಗಳಲ್ಲಿ 'ಭಾಟ್ಟದೀಪಿಕಾ' ಬಹಳ ಮುಖ್ಯವಾದುದು. ಇದು ಶಾಸ್ತ್ರದೀಪಿಕೆಯ ಮಾದರಿಯಲ್ಲಿದೆ. ಬಹಳ ಸಂಕ್ಷಿಪ್ತವಾಗಿ ಅಧಿಕರಣಗಳ ನಿರೂಪಣೆಯನ್ನಿಲ್ಲಿ ಮಾಡಿದೆ. ಈ ಕೃತಿಯಲ್ಲಿ ಖಂಡದೇವನ ಸ್ವಂತಕೊಡುಗೆಯೂ ಗಮನಾರ್ಹವಾಗಿದೆ. 'ಭಾಟ್ಟರಹಸ್ಯವು' ಶಾಬ್ದಬೋಧದ ನಿರೂಪಣೆಗೆ ಮೀಸಲಾದ ಕೃತಿ. ಧರ್ಮ ಮತ್ತು ಅಧರ್ಮದ ಲಕ್ಷಣ ಪರೀಕ್ಷೆಯೊಡನೆ ಆರಂಭವಾಗುವ ಈ ಕೃತಿ ನೈಯ್ಯಾಯಿಕರು ಮತ್ತು ವೈಯ್ಯಾಕರಣರು ಪ್ರತಿಪಾದಿಸುವ ಶಾಬ್ದಬೋಧದ ಸಿದ್ಧಾಂತವನ್ನು ಖಂಡಿಸಿ ಮೀಮಾಂಸಾಶಾಸ್ತ್ರದ ಸಿದ್ಧಾಂತವನ್ನು ಶಾಸ್ತ್ರೀಯವಾಗಿ ಪ್ರತಿಪಾದಿಸುತ್ತದೆ. ಗಧಾಧರಭಟ್ಟಾಚಾರ್ಯರ 'ವ್ಯುತ್ಪತ್ತಿವಾದ'ಕ್ಕಿರುವ ಪ್ರಾಧಾನ್ಯಕ್ಕೆ ಸಮನಾದ ಪ್ರಾಧಾನ್ಯ ಈ ಕೃತಿಗಿದೆ.

## ಸೋಮನಾಥದೀಕ್ಷಿತ (ಕ್ರಿ. ಶ. ೧೬೦೦)

ಶಾಸ್ತ್ರದೀಪಿಕೆಯ ಮೇಲೆ 'ಮಯೂಖಮಾಲಿಕಾ' ಎಂಬ ವ್ಯಾಖ್ಯಾನವನ್ನು ಇವನು ರಚಿಸಿದ್ದಾನೆ. ತರ್ಕಪಾದವನ್ನುಳಿದು ಇತರ ಭಾಗಗಳ ಮೇಲೆ ವಿವರಣೆ ಕೊಡುವ ಈ ಕೃತಿ ಬಹಳ ಉಪಯುಕ್ತವಾಗಿದೆ. ಈ ಕೃತಿಯಲ್ಲಿ ಇವನು ಪ್ರಮುಖರಾದ ಮೀಮಾಂಸಾಶಾಸ್ತ್ರಕಾರರ ಹೆಸರುಗಳನ್ನು ಹೇಳಿದ್ದಾನೆ.

## ಗಾಗಭಟ್ಟ (ಕ್ರಿ.ಶ. ೧೬೩೦-೧೭೦೦)

ಇವನಿಗೆ ವಿಶ್ವೇಶ್ವರಭಟ್ಟ ಎಂದು ಹೆಸರು. ಪೂರ್ವಮೀಮಾಂಸಾ ಸೂತ್ರಗಳ ಹನ್ನೆರಡು ಅಧ್ಯಾಯಗಳ ಮೇಲೆಯೂ ಇವನು ವ್ಯಾಖ್ಯಾನ ಬರೆದಿದ್ದಾನೆ. ಇವನ ಕೃತಿಯ ಹೆಸರು 'ಭಾಟ್ಟ ಚಿಂತಾಮಣಿ'. ನವ್ಯನ್ಯಾಯದ ಪರಿಭಾಷೆಯಲ್ಲಿ ಇಲ್ಲಿ ವಿಷಯನಿರೂಪಣೆ ಮಾಡಿದೆ. ಶ್ಲೋಕವಾರ್ತಿಕದ ಮೇಲೆ 'ಶಿವಾರ್ಕೋದಯ' ಎಂಬ ವ್ಯಾಖ್ಯಾನವನ್ನೂ, 'ಕುಸುಮಾಂಜಲಿ' ಹೆಸರಿನ ಸೂತ್ರವೃತ್ತಿಯನ್ನೂ ರಚಿಸಿದ್ದಾನೆ.

## ಶಂಭುಭಟ್ಟ (ಕ್ರಿ. ಶ. ೧೬೪೦-೧೭೦೦)

ಕ್ರಿ. ಶ. ೧೭ನೆಯ ಶತಮಾನದ ಕೊನೆಯ ಕಾಲಕ್ಕೆ ಇವನು ಸೇರಿದವನು. ಇವನು ಖಂಡದೇವಮಿಶ್ರನ ಸಾಕ್ಷಾತ್ ಶಿಷ್ಯ. ಭಾಟ್ಟ ದೀಪಿಕೆಯ ಮೇಲೆ 'ಪ್ರಭಾವಳೀ' ಎಂಬ ವಿಖ್ಯಾತ ವ್ಯಾಖ್ಯಾನವನ್ನಿವನು ಬರೆದಿದ್ದಾನೆ. ಈ ಕೃತಿಯಲ್ಲಿ ಇವನು ಭಾಟ್ಟ ಸಂಪ್ರದಾಯಕ್ಕೆ ಸೇರಿದ ಪ್ರಾಚೀನರ ಅಭಿಪ್ರಾಯವನ್ನು ನಿರಾಕರಿಸಿ ನವ್ಯರ ಮತವನ್ನು ಸ್ಥಾಪಿಸಿದ್ದಾನೆ.

ಇದುವರೆಗೆ ಕೆಲವರು ಪ್ರಮುಖ ಕೃತಿಕಾರರ ಮತ್ತು ಅವರ ಕೃತಿಗಳ ಪರಿಚಯವನ್ನು ಮಾಡಿ ಕೊಡಲಾಯಿತು. ಈ ಶಾಸ್ತ್ರವನ್ನು ಪ್ರವರ್ತನಗೊಳಿಸಿದವರು ಇನ್ನೂ ಅಸಂಖ್ಯರಾಗಿದ್ದಾರೆ. ಇವರೆಲ್ಲರೂ ಈ ಶಾಸ್ತ್ರದ ವಿವರಣೆಗೆ ಮತ್ತು ಬೆಳೆವಣಿಗೆಗೆ ಕಾರಣರಾಗಿದ್ದಾರೆ.

೮

# ಅದ್ವೈತದರ್ಶನ

ವೇದ–ಬ್ರಾಹ್ಮಣ–ಆರಣ್ಯಕ-ಉಪನಿಷತ್ ಈ ರೀತಿಯಾಗಿ ವೈದಿಕಸಾಹಿತ್ಯ ಬೆಳೆದಿರುವುದನ್ನು ಗಮನಿಸಬಹುದು. ವೇದದ ಅಂತಿಮ ಭಾಗಗಳಾದ ಉಪನಿಷತ್ತುಗಳನ್ನು 'ವೇದಾಂತ' ಎಂದೂ ಕರೆದಿದ್ದಾರೆ. 'ವೇದಾಂತವಾಕ್ಯಕುಸುಮಗ್ರಥನಾರ್ಥತ್ವಾತ್ ಸೂತ್ರಾಣಾಂ । ವೇದಾಂತವಾಕ್ಯಾನಿ ಹಿ ಸೂತ್ರೈಃ ಉದಾಹೃತ್ಯ ವಿಚಾರ್ಯಂತೇ ।'[1]

ವೇದಾಂತವಾಕ್ಯ (ಉಪನಿಷದ್ವಾಕ್ಯ) ಗಳೆಂಬ ಪುಷ್ಪಗಳನ್ನು ಮಾಲಿಕೆಯಾಗಿ ಕಟ್ಟುವುದು— ಆ ವೇದಾಂತ ವಾಕ್ಯಗಳನ್ನು ಸೂತ್ರಗಳಲ್ಲಿ ಉದಹರಿಸಿ ಅವುಗಳ ತಾತ್ಪರ್ಯವನ್ನು ವಿಚಾರ ಮಾಡುವುದು ಬ್ರಹ್ಮಸೂತ್ರದ ಗುರಿ.

ಉಪನಿಷತ್ಪ್ರಮಾಣವನ್ನಾಗಿ ಅಂಗೀಕರಿಸುವ ದರ್ಶನಗಳನ್ನು 'ವೇದಾಂತ'[2] ಎಂದೂ ಕರೆದಿದ್ದಾರೆ. ಉಪನಿಷತ್ತುಗಳಲ್ಲಿ ಎರಡು ರೀತಿಯ ಒಲವು ಕಾಣುತ್ತದೆ; ಒಂದನೆಯದು ಬ್ರಹ್ಮ–ಜೀವ–ಜಗತ್ತು ಇವುಗಳ ಐಕ್ಯದ ಬಗೆಗೆ, ಎರಡನೆಯದು ಇವುಗಳ ಭೇದದ ಬಗೆಗೆ. ಉಪನಿಷತ್ತಿನ ಹೇಳಿಕೆಗಳನ್ನು ಸಮನ್ವಯಗೊಳಿಸುವುದು ಬ್ರಹ್ಮಸೂತ್ರದ ಉದ್ದೇಶ. ಬಾದರಾಯಣರು ವೇದಾಂತಸೂತ್ರ (ಬ್ರಹ್ಮಸೂತ್ರ) ವನ್ನು ರಚಿಸಿದರು. ಅವರು ತಮ್ಮ ಕೃತಿಯಲ್ಲಿ ಕಾಶಕೃತ್ಸ್ನ, ಜೈಮಿನಿ, ಬಾದರಿ, ಕಾರ್ಷ್ಣಾಜಿನಿ, ಆಶ್ಮರಥ್ಯ, ಔಡುಲೋಮಿ ಮೊದಲಾದವರ ಹೆಸರನ್ನು ಉಲ್ಲೇಖಿಸಿದ್ದಾರೆ. ಗೌಡಪಾದರು 'ಮಾಂಡೂಕ್ಯಕಾರಿಕೆ'ಯಲ್ಲಿ ಅದ್ವೈತ ಸಿದ್ಧಾಂತದ ಹಲವು ಅಂಶಗಳನ್ನು ವಿವರಿಸಿದ್ದಾರೆ.

ಭಗವಾನ್ ಶಂಕರನ ಅವತಾರವೆಂಬುದಾಗಿ ಪರಿಗಣಿಸಲ್ಪಟ್ಟ, ಪ್ರತಿಭೆ, ಪಾಂಡಿತ್ಯ ಮತ್ತು

---

೧. ಬ್ರಹ್ಮಸೂತ್ರ, ಶಂಕರಭಾಷ್ಯ ೧–೧–೧

೨. ವೇದಾಂತೋ ನಾಮ ಉಪನಿಷತ್ಪ್ರಮಾಣಂ ತದುಪಕಾರೀಣಿ ಶಾರೀರಕ ಸೂತ್ರಾದೀನಿ ಚ ।

ಸದಾನಂದನ 'ವೇದಾಂತಸಾರ' ಪು–೧

ತತ್ತ್ವಜ್ಞಾನ ಈ ತ್ರಿಪುಟಿಗಳೇ ಮೈವೆತ್ತಂತಿದ್ದ ಶಂಕರಾಚಾರ್ಯರು (ಕಾಲ ಸುಮಾರು ಕ್ರಿ. ಶ. ೭೮೮-೮೨೦) ಪ್ರಧಾನ ಉಪನಿಷತ್ತುಗಳು, ಬ್ರಹ್ಮಸೂತ್ರ ಮತ್ತು ಭಗವದ್ಗೀತೆ ಇವುಗಳಿಗೆ ಲೋಕೋತ್ತರವಾದ ಭಾಷ್ಯ ಬರೆದು ಅದ್ವೈತ ಸಿದ್ಧಾಂತವನ್ನು ಸಕ್ರಮವಾಗಿ ಸುವ್ಯವಸ್ಥಿತವಾಗಿ ಪ್ರತಿಪಾದಿಸಿ, ಮೇಧಾವಿಗಳೂ ಮೆಚ್ಚುವಂತೆ ಯುಕ್ತಿ ಪ್ರಮಾಣಗಳಿಂದ ಅಭೂತಪೂರ್ವವಾಗಿ ವಿವರಿಸಿ, 'ಅದ್ವೈತ ಸ್ಥಾಪನಾಚಾರ್ಯ'ರೆಂದು ವಿಶ್ವವಿಖ್ಯಾತರಾಗಿದ್ದಾರೆ.

'ಶ್ರೀಮದ್ಗೋವಿಂದ ಭಗವತ್ಪೂಜ್ಯಪಾದ ಶಿಷ್ಯ' ಎಂದು ಶಂಕರರೇ ತಮ್ಮ ಕೃತಿಗಳಲ್ಲಿ ಹೇಳಿರುವುದರಿಂದ, ಅವರು ಆಚಾರ್ಯ ಗೌಡಪಾದರ ಶಿಷ್ಯರಾದ ಗೋವಿಂದ ಯತಿಗಳ ಶಿಷ್ಯರಾಗಿದ್ದರೆಂದು ತಿಳಿದು ಬರುವುದು.

ತತ್ತ್ವಸ್ವರೂಪ :—ಅದ್ವೈತ ಸಿದ್ಧಾಂತದ ತತ್ತ್ವಗಳ ನಿರೂಪಣೆಯಲ್ಲಿ ವೈಶಿಷ್ಟ್ಯವಿದೆ. ಬ್ರಹ್ಮತತ್ತ್ವವೇ ಪರಮಾರ್ಥ. ಇದಕ್ಕೆ ಭಿನ್ನವಾದ ಪರಮಾರ್ಥವಾದ ಮತ್ತೊಂದು ತತ್ತ್ವವಿಲ್ಲದ್ದರಿಂದಲೇ ಇದು ಅದ್ವೈತ ಸಿದ್ಧಾಂತವೆಂದು ವಿಖ್ಯಾತವಾಗಿದೆ. 'ಬ್ರಹ್ಮಸತ್ಯಂ ಜಗನ್ಮಿಥ್ಯಾಜೀವೋ ಬ್ರಹ್ಮೈವ ನಾಪರಃ' ಎಂಬುದು ಈ ಸಿದ್ಧಾಂತದ ತಿರುಳು. ಹಾಗಾದರೆ ಜಗತ್ತು, ಜೀವ ಇಲ್ಲವೆ ? ಅವು ಪರಮಾರ್ಥವಾಗಿಲ್ಲ. ಅಧ್ಯಾಸದಿಂದ ಮಾತ್ರ ತೋರುತ್ತವೆ. ಯಾವುದು ನಿಜವಾಗಿ ಇಲ್ಲವೋ—ಅದು ಇದೆ ಎಂದು ತಿಳಿಯುವುದೇ ಅಧ್ಯಾಸ. ಶಾರೀರಕ ಭಾಷ್ಯದ ಉಪೋದ್ಘಾತದಲ್ಲಿ ಶಂಕರಾಚಾರ್ಯರು 'ಅಧ್ಯಾಸ'ವನ್ನು ಹೀಗೆ ವಿವರಿಸಿದ್ದಾರೆ. 'ಅಧ್ಯಾಸೋನಾಮ ಅತಸ್ಮಿನ್ ತದ್‌ಬುದ್ಧಿಃ' ಅದಲ್ಲದರಲ್ಲಿ ಅದು ಎಂಬ ತಿಳಿವಳಿಕೆ. ತತ್ಪದಾರ್ಥದಲ್ಲಿ ಅತದ್ (ತದ್ಭಿನ್ನ) ಪದಾರ್ಥಗಳ ಸ್ವರೂಪವನ್ನು ಆರೋಪಿಸುವುದೇ ಅಧ್ಯಾಸ. ಆತ್ಮ ಅನಾತ್ಮರ ಅನ್ಯೋನ್ಯಾಧ್ಯಾಸವೇ ಅವಿದ್ಯೆ. ಈ ಅವಿದ್ಯೆಯಿಂದಲೇ ಕರ್ತೃತ್ವ, ಭೋಕ್ತೃತ್ವ ರೂಪವಾದ ಸಂಸಾರ ಬಂಧವಾಗಿರುವುದು. ಈ ಅಧ್ಯಾಸವು ಯಾವಾಗ ಪ್ರಾರಂಭವಾಯಿತು ? ಇದಕ್ಕೆ ಆಚಾರ್ಯರ ಉತ್ತರ ಇಂತಿದೆ-ಕರ್ತೃತ್ವ, ಭೋಕ್ತೃತ್ವ ಪ್ರವರ್ತಕವಾದ ಈ ಅಧ್ಯಾಸವು ಸಂಸಾರಿಗೆ ಅನಾದಿ ಹಾಗೂ ಅನಂತವಾದುದು[1] ಈ ಅವಿದ್ಯೆಯೆಂಬ ಆತ್ಮ ಅನಾತ್ಮಗಳ ಪರಸ್ಪರ ಅಧ್ಯಾಸವನ್ನು ಮೂಲವಾಗಿಟ್ಟುಕೊಂಡು ಎಲ್ಲ ಲೌಕಿಕ

---

೧. ಏವಂ ಅಯಂ ಅನಾದಿರನನ್ತಃ ನೈಸರ್ಗಿಕೋಽಧ್ಯಾಸಃ ಮಿಥ್ಯಾ ಪ್ರತ್ಯಯರೂಪಃ ಕರ್ತೃತ್ವ ಭೋಕ್ತೃತ್ವಪ್ರವರ್ತಕಃ ಸಕಲಲೋಪ್ರತ್ಯಕ್ಷಃ ।
'ಬ್ರಹ್ಮಸೂತ್ರ' ಶಾಂಕರಭಾಷ್ಯದ ಉಪೋದ್ಘಾತ,

ವೈದಿಕ ಪ್ರಮಾಣ ಪ್ರಮೇಯ ವ್ಯವಹಾರಗಳೂ ಹೊರಟಿರುತ್ತವೆ. ವಿಧಿಪ್ರತಿಷೇಧಮೋಕ್ಷ ಪರವಾಗಿರುವ ಸಕಲ ಶಾಸ್ತ್ರಗಳಿಗೂ ಈ ಅಧ್ಯಾಸವೇ ಮೂಲ[1]. ಈ ಅವಿದ್ಯಾ ನಿವೃತ್ತಿ ಯಾದರೆ ಯಾವ ವ್ಯವಹಾರವೂ ಉಳಿಯುವುದಿಲ್ಲ. ಜೀವೇಶ್ವರ ವಿಭಾಗ, ಸೃಷ್ಟಿಪ್ರತಿಪಾದನೆ, ಬಂಧಮೋಕ್ಷವ್ಯವಹಾರ, ಸಾಧನೋಪದೇಶ ಇತ್ಯಾದಿಗಳು ಅವಿದ್ಯಾದೃಷ್ಟಿಯಿಂದಲೇ ಹೊರತು ಅವು ಸತ್ಯವಲ್ಲ. ಅಧ್ಯಾಸ, ಅಧ್ಯಾರೋಪ, ಭ್ರಾಂತಿ, ಮಿಥ್ಯಾಜ್ಞಾನ, ಮಿಥ್ಯಾಪ್ರತ್ಯಯ ಮುಂತಾದ ಶಬ್ದಗಳಿಂದ ಉಕ್ತವಾಗಿರುವ ಅವಿದ್ಯೆಯು ಅದ್ವೈತ ಪ್ರಕ್ರಿಯೆಯಲ್ಲಿ ಬಹು ಮುಖ್ಯ ವಾಗಿರುತ್ತದೆ. ಹಗ್ಗದಲ್ಲಿ ಹಾವನ್ನು ಆರೋಪಿಸಿದಂತೆ, ಸಚ್ಚಿದಾನಂದಸ್ವರೂಪ ಬ್ರಹ್ಮನಲ್ಲಿ ಅಜ್ಞಾನಾದಿ ಸಕಲ ಜಡ ಸಮೂಹವಾದ ಅವಸ್ತುವಿನ ಆರೋಪವೇ ಅಧ್ಯಾರೋಪ[2]. ದೃಕ್ ಮತ್ತು ದೃಶ್ಯ ಎಂಬುದಾಗಿ ವಿಭಾಗ ಮಾಡಿ[3], ದೃಶ್ಯ ವಿಭಾಗದಲ್ಲಿ ಮಾಯೆ, (ಪ್ರಕೃತಿ), ಮಹತ್, ಅಹಂಕಾರ, ಮನಸ್ಸು, ಪಂಚಜ್ಞಾನೇಂದ್ರಿಯ, ಪಂಚಕರ್ಮೇಂದ್ರಿಯ, ಪಂಚತನ್ಮಾತ್ರ ಮತ್ತು ಪಂಚಮಹಾಭೂತ ಇತ್ಯಾದಿಯಾಗಿ ನಿರೂಪಣೆ ಕಂಡುಬಂದರೂ, ಅಧಿಷ್ಠಾನವೂ, ದೃಕ್‌ತತ್ತ್ವವೂ ಆದ ಬ್ರಹ್ಮನಲ್ಲಿ ಅವಸ್ತುವಾದ ದೃಶ್ಯದ ಅಧ್ಯಾಸ ಮಾಡಲಾಗಿದೆ. ಇಂತಹ ಮಿಥ್ಯಾಪ್ರತ್ಯಯ-ರೂಪವಾದ ಅಧ್ಯಾರೋಪವನ್ನು ನಿವಾರಿಸುವುದಕ್ಕಾಗಿಯೇ ಆತ್ಮೈಕತ್ವ ವಿದ್ಯೆಯನ್ನು ಪ್ರತಿಪಾದಿಸಲಾಗಿದೆ ಎಂದು ಆಚಾರ್ಯರು ಹೇಳಿದ್ದಾರೆ[4].

ಜೀವ :—ಜೀವವು ಬ್ರಹ್ಮವೇ. ಶರೀರ ಹಾಗೂ ಇಂದ್ರಿಯಗಳ ಒಡೆಯನಾದ ಮತ್ತು ಕರ್ಮಫಲಗಳನ್ನನುಭವಿಸುವ ಆತ್ಮನೇ ಜೀವ ಎಂಬುದಾಗಿ ಶಂಕರಾಚಾರ್ಯರು ಹೇಳಿದ್ದಾರೆ[5].

---

೧. ತಮೇತಮ್ ಅವಿದ್ಯಾಖ್ಯಮ್ ಆತ್ಮಾನಾತ್ಮನೋರಿತರೇತರಾಧ್ಯಾಸಂ ಪುರಸ್ಕೃತ್ಯ ಸರ್ವೇ ಪ್ರಮಾಣ ಪ್ರಮೇಯವ್ಯವಹಾರಾ ಲೌಕಿಕಾ ವೈದಿಕಾಶ್ಚ ಪ್ರವೃತ್ತಾಃ । ಸರ್ವಾಣಿ ಚ ಶಾಸ್ತ್ರಾಣಿ ವಿಧಿಪ್ರತಿಷೇಧಮೋಕ್ಷಪರಾಣಿ ।

"ಬ್ರಹ್ಮಸೂತ್ರ" ಶಾಂಕರಭಾಷ್ಯದ ಉಪೋದ್ಘಾತ.

೨. ಅಸರ್ಪಭೂತರಜ್ಜೌ ಸರ್ಪಾರೋಪವತ್ ವಸ್ತುನಿ ಅವಸ್ತ್ವಾರೋಪಃ ಅಧ್ಯಾರೋಪಃ

ವೇದಾಂತಸಾರ ಪು-೨

೩. ಏವಂ ಚ ದೃಗ್ದೃಶೌ ದ್ವಾವೇವ ಪದಾರ್ಥಾವಿತಿ ವೇದಾಂತಿನಾಂ ಸಿದ್ಧಾಂತ ಇತಿ ಸರ್ವಮುಪದಾತಮ್ ।

ಸರ್ವದರ್ಶನಸಂಗ್ರಹ ; 'ಶಾಂಕರದರ್ಶನ'

೪. ಅಸ್ಯ ಅನರ್ಥಹೇತೋಃ ಪ್ರಹಾಣಾಯ ಆತ್ಮೈಕತ್ವ ವಿದ್ಯಾ ಪ್ರತಿಪತ್ತಯೇ ಸರ್ವೇ ವೇದಾನ್ತಾ ಆರಭ್ಯಂತೇ॥

'ಬ್ರಹ್ಮಸೂ' ಶಾಂಕರಭಾಷ್ಯ ಉಪೋದ್ಘಾತ.

೫. ಅಸ್ತಿ ಆತ್ಮಾ ಜೀವಾಖ್ಯಃ ಶರೀರೇಂದ್ರಿಯಪಂಜರಾಧ್ಯಕ್ಷಃ ಕರ್ಮಫಲಸಂಬಂಧೀ ।

'ಬ್ರಹ್ಮಸೂತ್ರ' ಶಾಂಕರಭಾಷ್ಯ ೨, ೩, ೩.

ಜೀವಾತ್ಮನು ಸಚ್ಚಿದಾನಂದ ಬ್ರಹ್ಮಕ್ಕಿಂತ ಭಿನ್ನನಲ್ಲದಿದ್ದರೂ ಅವಿದ್ಯೆ ಎಂಬ ಉಪಾಧಿ ಸಹಿತನಾಗಿರುವುದರಿಂದ, ತನ್ನ ಸ್ವರೂಪದ ವಿಸ್ಮೃತಿಯನ್ನು ಹೊಂದಿ ಮಾಯಾಧೀನನಾಗಿ ಮಿಥ್ಯಾಜ್ಞಾನದಿಂದ 'ಇದು ನಾನು' 'ನನ್ನದಿದು' ಎಂಬ ಭಾವದಿಂದ ಸಹಜವಾಗಿ ಲೋಕ ವ್ಯವಹಾರ ಮಾಡುವನು[1]. ಒಬ್ಬನೇ ಚಂದ್ರನು ನೀರಿರುವ ಬೇರೆ ಬೇರೆ ಪಾತ್ರೆಗಳಲ್ಲಿ ಪ್ರತಿಬಿಂಬಿತನಾಗಿ ಅನೇಕ ಚಂದ್ರರಿರುವ ರೀತಿ ಕಾಣುವಂತೆ, ಅವಿಕಾರಿಯಾದ ಬ್ರಹ್ಮವು[2] ಅವಿದ್ಯಾ ಸಂಬಂಧದಿಂದ ಜೀವಭಾವವನ್ನು ಹೊಂದಿ ಅನೇಕ ಜೀವಾತ್ಮರಿರುವಂತೆ ಕಾಣುತ್ತದೆ[3]. ಇದಕ್ಕೆ ಪ್ರತಿಬಿಂಬವಾದವೆಂದು ಹೆಸರು. ಒಂದೇ ಆಕಾಶವು ಘಟ, ಗೃಹ ಮೊದಲಾದ ಉಪಾದಿಗಳಿಂದ ಘಟಾಕಾಶ, ಗೃಹಾಕಾಶ ಇತ್ಯಾದಿಯಾಗಿ ವ್ಯವಹರಿಸಲ್ಪಡುವಂತೆ ಒಂದೇ ಬ್ರಹ್ಮವು ಅವಿದ್ಯೋಪಾಧಿಯಿಂದ ಬೇರೆ ಬೇರೆ ಜೀವಾತ್ಮರಾಗಿ ಕರೆಯಲ್ಪಡುತ್ತದೆ[4].

ಇದಕ್ಕೆ ಅವಚ್ಛೇದವಾದವೆಂದು ಹೆಸರು. ಈ ರೀತಿಯಾಗಿ ಜೀವತತ್ತ್ವ ನಿರೂಪಣೆಯಲ್ಲಿ ಪ್ರತಿಬಿಂಬವಾದವನ್ನು ವಿವರಣ ಪ್ರಸ್ಥಾನವೂ, ಅವಚ್ಛೇದ ವಾದವನ್ನು ಭಾಮತೀ ಪ್ರಸ್ಥಾನವೂ ಪ್ರತಿಪಾದಿಸಿವೆ.

ಆತ್ಮ ಚೈತನ್ಯವು ಜಾಗ್ರತ್, ಸ್ವಪ್ನ ಮತ್ತು ಸುಷುಪ್ತಿ ಎಂಬ ಮೂರು ಅವಸ್ಥೆಗಳಲ್ಲಿಯೂ; ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ ಮತ್ತು ಆನಂದಮಯ ಎಂಬ ಐದು ಕೋಶಗಳಲ್ಲಿಯೂ ಉಪಲಬ್ಧವಾಗುತ್ತದೆ. ಆದರೆ ಆತ್ಮನ ಶುದ್ಧಚೈತನ್ಯವು ಇವುಗಳಿಗಿಂತ ಬೇರೆ ಎಂಬುದು ತುರೀಯಾವಸ್ಥೆಯಲ್ಲಿ ಅನುಭವಕ್ಕೆ ಬರುತ್ತದೆ. ಜೀವಾತ್ಮನ ಮೂರು ಅವಸ್ಥೆಗಳಿಗನುಗುಣವಾಗಿ ಮೂರು ಹೆಸರಿವೆ. ಜಾಗ್ರದವಸ್ಥೆಯಲ್ಲಿ ಸಂಚಿತ ಮತ್ತು ಪ್ರಾರಬ್ಧಕರ್ಮವನ್ನನುಸರಿಸುವ ಜೀವನನ್ನು 'ವಿಶ್ವ'ನೆಂದೂ; ಸ್ವಪ್ನಾವಸ್ಥಾ ಭೋಕ್ತೃ ಜೀವನನ್ನು 'ತೈಜಸ'ನೆಂದೂ; ಸುಷುಪ್ತ್ಯವಸ್ಥೆಯಲ್ಲಿ ವಿಶ್ರಾಂತಿ ಸುಖವನ್ನನುಭವಿಸುವ ಜೀವನನ್ನು 'ಪ್ರಾಜ್ಞ'ನೆಂದೂ ಕರೆಯುವರು.

---

೧ ಅತ್ಯಂತವಿವಿಕ್ತಯೋಃ ಧರ್ಮಧರ್ಮಿಣೋಃ ಮಿಥ್ಯಾಜ್ಞಾನನಿಮಿತ್ತಃ ಸತ್ಯಾನೃತೇ ಮಿಥುನೀಕೃತ್ಯ 'ಅಹಮಿದಂ' 'ಮಮೇದಂ' ಇತಿ ನೈಸರ್ಗಿಕೋಽಯಂ ಲೋಕವ್ಯವಹಾರಃ ।

ಬ್ರ.ಸೂ.ಶಾಂ.ಭಾ. ಅಭ್ಯಾಸ ಪ್ರಕರಣ ೧

೨ ಅವಿಕೃತಸ್ಯೈವ ಬ್ರಹ್ಮಣೋ ಜೀವಭಾವಾಭ್ಯುಪಗಮಾತ್ ।

ಬ್ರ.ಸೂ. ಶಾಂ.ಭಾ. ೨. ೩. ೧೭.

೩ ಏಕ ಏವ ಹಿ ಭೂತಾತ್ಮಾ ಭೂತೇ ಭೂತೇ ವ್ಯವಸ್ಥಿತಃ । ಏಕಧಾ ಬಹುಧಾ ಚೈವ ದೃಶ್ಯತೇ ಜಲಚಂದ್ರವತ್ ॥

ಬ್ರ.ಸೂ.ಶಾಂ.ಭಾ. ೩. ೨. ೧೮–೨೦

೪ ಏಕಸ್ಯೈವ ತು ಭೇದವ್ಯವಹಾರಃ ಉಪಾಧಿಕೃತಃ, ಯಥಾ ಘಟಾಕಾಶಃ ಮಹಾಕಾಶಃ ಇತಿ ।

ಬ್ರ.ಸೂ. ಶಾಂಕರಭಾಷ್ಯ ೧. ೨. ೨೦.

ಜೀವನಿಗೆ ಸ್ಥೂಲ, ಸೂಕ್ಷ್ಮ, ಮತ್ತು ಕಾರಣ ಎಂಬ ಮೂರು ಶರೀರಗಳಿರುವುವು. ಇವುಗಳಲ್ಲಿ ಅನೇಕಾವಯವಗಳಿಂದ ಕೂಡಿ ಪ್ರತ್ಯಕ್ಷಪ್ರಮಾಣಕ್ಕೆ ಗೋಚರಿಸುತ್ತಾ ಇಂದ್ರಿಯಗಳಿಗೆಲ್ಲ ಆಶ್ರಯವಾದುದು-ಸ್ಥೂಲದೇಹ. ಪಂಚಪ್ರಾಣ, ದಶೇಂದ್ರಿಯ, ಮನಸ್ಸು ಮತ್ತು ಬುದ್ಧಿಗಳ ಸಂಘಾತವುಳ್ಳದ್ದು ಸೂಕ್ಷ್ಮದೇಹ. ಸುಷುಪ್ತಿ ಸಮಯದಲ್ಲಿ ಎಲ್ಲ ಕಾರ್ಯ ಕರಣಗಳನ್ನು ತನ್ನಲ್ಲಿ ಅಡಗಿಸಿಕೊಂಡಿರುವ ಸೂಕ್ಷ್ಮರೂಪ ಪ್ರಕೃತಿಯೇ ಕಾರಣದೇಹ.

ಬ್ರಹ್ಮಸ್ವರೂಪವೇ ಜೀವವಾಗಿದ್ದರೂ ಅವಿದ್ಯೆಯಿಂದ ಮೇಲೆ ಹೇಳಿದಂತೆ ನಾನಾ ರೂಪಗಳ ಭಾಸವಾದರೂ, ಹಾಗೆ ಭಾಸವಾಗುವ ಸ್ಥಿತಿಯಲ್ಲಿಯೂ ಬ್ರಹ್ಮವು ತನ್ನ ನೈಜಸ್ವರೂಪವನ್ನು ಬಿಡುವುದಿಲ್ಲ: ಹೇಗೆಂದರೆ, ವಸ್ತುತಃ ನಿರ್ಮಲವಾದ ಆಕಾಶವು ಮೋಡದಿಂದ ಪರಿವೃತವಾಗಿದ್ದರೂ, ಅದು ತನ್ನ ನಿಜಸ್ವರೂಪದಿಂದ ಭಿನ್ನವಾಗದಂತೆ. ಒಟ್ಟಿನಲ್ಲಿ ಪಾರಮಾರ್ಥಿಕ ದೃಷ್ಟಿಯಿಂದ ಜೀವ-ಬ್ರಹ್ಮರು ಅಭಿನ್ನ.[1]

ಜಗತ್ತು :— ನಿರ್ವಿಶೇಷಬ್ರಹ್ಮವು ಮಾಯೆಯಿಂದ ಕೂಡಿದಾಗ ಸವಿಶೇಷ ಅಥವಾ ಸಗುಣಬ್ರಹ್ಮವೆನಿಸುವುದು. ಇದನ್ನೇ 'ಅಪರಬ್ರಹ್ಮ', 'ಈಶ್ವರ' ಎಂದು ಕರೆಯಲಾಗುವುದು. ಇಂತಹ ಮಾಯಾವಿಶಿಷ್ಟ ಈಶ್ವರನು ಜಗತ್ಕಾರಣನಾದರೆ[2] ಮಾಯಾ ಪ್ರಾಧಾನ್ಯ ದೃಷ್ಟಿಯಿಂದ ಉಪಾದಾನಕಾರಣನೂ, ಚೈತನ್ಯಪ್ರಾಧಾನ್ಯದೃಷ್ಟಿಯಿಂದ ನಿಮಿತ್ತಕಾರಣನೂ ಆಗುತ್ತಾನೆ.

ನಮ್ಮ ಜೀವನದಲ್ಲಿ ಅನುಭವಕ್ಕೆ ಬರುವ ಈ ನಾನಾತ್ವವೆಲ್ಲ ಭ್ರಮೆ[3] ಎಂದು ಶ್ರುತಿ ಹೇಳಿದೆ. ಈ ವೈವಿಧ್ಯವೂ, ನಾನಾತ್ವವೂ ಬಂದದ್ದು ನಾಮರೂಪಗಳಿಂದಲೇ. ಈ ನಾಮ ರೂಪಗಳಿಗೆಲ್ಲ ಮಾಯೆ ಕಾರಣವಾಗಿದೆ. ಸದಸದ್ವಿಲಕ್ಷಣವಾದ ಈ ಮಾಯೆಗೆ ಆವರಣ ಹಾಗೂ ವಿಕ್ಷೇಪವೆಂಬ ಶಕ್ತಿಗಳಿವೆ[4]. ಮೋಡವು ಸೂರ್ಯನನ್ನು ಮರೆಮಾಡುವಂತೆ, ಆವರಣ ಶಕ್ತಿಯಿಂದ

---

೧ ತತ್ರ ಅವಿದ್ಯಾಪರಿಕಲ್ಪಿತ ಭೇದನಿವೃತ್ತಿಪರತ್ವೇನ ತತ್ತ್ವಮಸ್ಯಾದಿ ತಾದಾತ್ಮ್ಯವಾದ ಪ್ರಾಮಾಣ್ಯೋಪಪತ್ತೇಃ ।

ಸರ್ವದರ್ಶನ ಸಂಗ್ರಹ. 'ಶಾಂಕರದರ್ಶನ'.

೨ ಅಸ್ಯಜಗತಃ ನಾಮರೂಪಾಭ್ಯಾ ವ್ಯಾಕೃತಸ್ಯ ಅನೇಕಕರ್ತೃಭೋಕ್ತೃಸಂಯುಕ್ತಸ್ಯ ಪ್ರತಿನಿಯತ ದೇಶಕಾಲನಿಮಿತ್ತಾಶ್ರಯಸ್ಯ ಮನಸಾಪ್ಯಚಿನ್ತ್ಯರಚನಾರೂಪಸ್ಯ ಜನ್ಮಸ್ಥಿತಿಭಂಗಂ ಯತಃ ಸರ್ವಜ್ಞಾತ್ ಸರ್ವಶಕ್ತೇಃ ಕಾರಣಾತ್ ಭವತಿ 'ತದ್‌ಬ್ರಹ್ಮ' ಇತಿ ವಾಕ್ಯಶೇಷಃ ।

'ಬ್ರಹ್ಮಸೂತ್ರ' ಶಾಂಕರಭಾಷ್ಯ ೧, ೧. ೧.

೩ ನೇಹ ನಾನಾಸ್ತಿ ಕಿಂಚನ ।

ಬೃಹದಾರಣ್ಯಕೋಪನಿಷತ್. ೪. ೪. ೧೯.

೪ ಅಸ್ಯ ಜ್ಞಾನಸ್ಯ ಆವರಣವಿಕ್ಷೇಪನಾಮಕಂ ಅಸ್ತಿ ಶಕ್ತಿದ್ವಯಂ ।

ಸದಾನಂದನ 'ವೇದಾನ್ತಸಾರ' ಪು. ೪.

ಮಾಯೆಯು ಬ್ರಹ್ಮವನ್ನು ಮರೆಮಾಡುತ್ತದೆ. ಹಗ್ಗದಲ್ಲಿ ಹಾವು ತೋರುವಂತೆ, ಏಕಮೇವಾದ್ವಿತೀಯವಾದ ಪರಬ್ರಹ್ಮನಲ್ಲಿ ಮಾಯೆಯ ವಿಕ್ಷೇಪಶಕ್ತಿಯಿಂದ ನಾಮರೂಪಾತ್ಮಕವಾದ ಜಗತ್ತು ವಿವರ್ತವಾಗಿದೆ.

ಬ್ರಹ್ಮದ ವಿವರ್ತವಾದ ಭೋಗ್ಯರೂಪವಾದ ಈ ಜಗತ್ತು ಸತ್ಯವಲ್ಲ[1] ಏಕೆಂದರೆ ಬ್ರಹ್ಮಾನುಭವಿಗೆ ಜಗತ್ತು ಮಿಥ್ಯೆಯಾಗುತ್ತದೆ. ಆದುದರಿಂದ ಅದು ಪರಮಾರ್ಥ ಸತ್ ಅಲ್ಲ ವ್ಯವಹಾರದೆಸೆಯಲ್ಲಿ ಅದು ಎಲ್ಲರಿಗೂ ಅನುಭವಕ್ಕೆ ಬರುವುದರಿಂದ 'ಅಸತ್' ಅಲ್ಲ. ಜಗತ್ತು ಬ್ರಹ್ಮನಿಗಿಂತ ಭಿನ್ನವಾದ ಅಸ್ತಿತ್ವವನ್ನು ಹೊಂದಿಲ್ಲದಿದ್ದರೂ. ಜಗತ್ತಿನ ವ್ಯಾವಹಾರಿಕ ಸತ್ತೆಯನ್ನು ಅದ್ವೈತಿಗಳು ಒಪ್ಪುವರು. ಅದುದರಿಂದ ಬ್ರಹ್ಮದ ವಿವರ್ತವಾದ ಜಗತ್ತು ಪಾರಮಾರ್ಥಿಕ 'ಸತ್' ಆಗದಿದ್ದರೂ 'ವ್ಯಾವಹಾರಿಕಸತ್' ಎಂದು ಪರಿಗಣಿಸಲ್ಪಟ್ಟಿದೆ.

ಬ್ರಹ್ಮ :—'ಬ್ರಹ್ಮ' ಶಬ್ದವು ವೃದ್ಧಿ ಎಂಬರ್ಥವನ್ನುಳ್ಳ 'ಬೃಹ್' ಧಾತುವಿನಿಂದ ನಿಷ್ಪನ್ನವಾಗಿದೆ[2]. 'ಬ್ರಹ್ಮದ' ನಿಜಸ್ವರೂಪವನ್ನು ಸ್ವರೂಪಲಕ್ಷಣ ಮತ್ತು ತಟಸ್ಥ ಲಕ್ಷಣಗಳ ಮೂಲಕ ಅದ್ವೈತದಲ್ಲಿ ಪ್ರತಿಪಾದಿಸಲಾಗಿದೆ. ಸ್ವರೂಪಲಕ್ಷಣವು ವಸ್ತುವಿನ ತಾತ್ತ್ವಿಕ ರೂಪವನ್ನು ತಿಳಿಸುತ್ತದೆ.

'ಸತ್ಯಂ ಜ್ಞಾನಮನಂತಂ ಬ್ರಹ್ಮ[3]' 'ವಿಜ್ಞಾನಮಾನಂದಂ ಬ್ರಹ್ಮ[4]'—ಈ ಶ್ರುತಿಗಳು ಬ್ರಹ್ಮದ ಸ್ವರೂಪಲಕ್ಷಣವನ್ನು ತಿಳಿಸುತ್ತವೆ. ವಸ್ತುವಿನ ತಾತ್ತ್ವಿಕಸ್ವರೂಪದಲ್ಲಿ ಸೇರದಿದ್ದರೂ ತಾತ್ತ್ವಿಕಸ್ವರೂಪವನ್ನು ಪರಿಚಯಮಾಡಲು ಸಹಕರಿಸುವುದಕ್ಕೆ 'ತಟಸ್ಥಲಕ್ಷಣ' ಎಂದು ಹೆಸರು. ಉದಾಹರಣೆ—'ಶಾಖಾಗ್ರೇ ಚಂದ್ರಃ'. ಅಂತೆಯೇ 'ಯತೋ ವಾ ಇಮಾನಿ ಭೂತಾನಿ ಜಾಯಂತೇ। ಯೇನ ಜಾತಾನಿ ಜೀವಂತಿ। ಯತ್ಪ್ರಯಂತ್ಯಭಿಸಂವಿಶಂತಿ ತದ್ವಿಜಿಜ್ಞಾಸಸ್ವ, ತದ್ಬ್ರಹ್ಮ

---

೧ ಅಭ್ಯುಪಗಮ್ಯ ಚ ಇಮಂ ವ್ಯಾವಹಾರಿಕಂ ಭೋಕ್ತೃಭೋಗ್ಯಲಕ್ಷಣಂ ವಿಭಾಗಂ 'ಸ್ಯಾಲ್ಲೋಕವತ್' ಇತಿ ಪರಿಹಾರೋಽಭಿಹಿತಃ ॥ ನ ತು ಅಯಂ ವಿಭಾಗಃ ಪರಮಾರ್ಥತೋಽಸ್ತಿ ।......

ಕಾರ್ಯಂ ಆಕಾಶಾದಿಕಂ ಬಹುಪ್ರಪಂಚಂ ಜಗತ್, ಕಾರಣಂ ಪರಂ ಬ್ರಹ್ಮ ।

'ಬ್ರಹ್ಮ ಸೂತ್ರ' ಶಾಂಕರಭಾಷ್ಯ ೨. ೧ ೧೪.

೨ ಅಸ್ತಿ ತಾವದ್ ಬ್ರಹ್ಮ ನಿತ್ಯಶುದ್ಧಬುದ್ಧಮುಕ್ತಸ್ವಭಾವಂ.......ಬೃಹತೇರ್ಧಾತೋರರ್ಥಾನನುಗಮಾತ್ ॥

'ಬ್ರಹ್ಮಸೂತ್ರ' ಶಾಂಕರಭಾಷ್ಯ ೧. ೧. ೧.

೩ ತೈತ್ತಿರೀಯೋಪನಿಷತ್, ೨. ೧. ೧.

೪ ಬೃಹದಾರಣ್ಯಕೋಪನಿಷತ್, ೩. ೯. ೨೮,

ಇದು ನಿರ್ವಿಶೇಷ ಬ್ರಹ್ಮನಿಗೆ ತಟಸ್ಥಲಕ್ಷಣ. ಪಾರಮಾರ್ಥಿಕ ದೃಷ್ಟಿಯಿಂದ ಬ್ರಹ್ಮ ನಿರ್ಗುಣ, ನಿರ್ವಿಶೇಷ. ಉಪನಿಷತ್ತು ಬ್ರಹ್ಮವನ್ನು 'ನೇತಿ. ನೇತಿ[1]' ಎಂಬ ಶಬ್ದದಿಂದ ಸೂಚಿಸುತ್ತದೆ. ಅಮೂರ್ತವೂ, ಅಗ್ರಾಹ್ಯವೂ. ಅಪ್ರಮೇಯವೂ, ಪ್ರಮಾಣಾತೀತವೂ, ನಿರಾಕಾರವೂ, ನಿರ್ಗುಣವೂ, ಸಜಾತೀಯ—ವಿಜಾತೀಯ—ಸ್ವಗತಭೇದ ಇತ್ಯಾದಿಗಳಿಗತೀತವೂ ಆಗಿ ಏಕಮೇವಾದ್ವಿತೀಯವಾಗಿರುವ ಬ್ರಹ್ಮವೇ ಪರಮಾರ್ಥ ಸತ್ಯವೆಂದು ಅದ್ವೈತ ದರ್ಶನದಲ್ಲಿ ಪ್ರತಿಪಾದಿಸಲಾಗಿದೆ.

ಈ ಬ್ರಹ್ಮವೇ ಮಾಯಾವಚ್ಛಿನ್ನವಾದಾಗ ಸಗುಣಬ್ರಹ್ಮ, ಅಪರಬ್ರಹ್ಮ, ಈಶ್ವರನೆಂದು ಕರೆಯಲ್ಪಡುತ್ತದೆ. ಈ ಅಂಶವು 'ಮಾಯಾಂ ತು ಪ್ರಕೃತಿಂ ವಿದ್ಯಾತ್ ಮಾಯಿನಂ ತು ಮಹೇಶ್ವರಮ್[2] ಎಂಬ ಉಪನಿಷತ್ತಿನ ವಾಕ್ಯದಿಂದ ತಿಳಿದು ಬರುವುದು.

ಸಗುಣಬ್ರಹ್ಮದ ಉಪಾಸನೆಯಿಂದ ಜೀವಿಯು ಚಿತ್ತಶುದ್ಧಿ ಹೊಂದಿ ವಿಶುದ್ಧವಾದ ಜ್ಞಾನ ಮಾರ್ಗವನ್ನವಲಂಬಿಸಿ ತಾನು ಬ್ರಹ್ಮನಿಗಿಂತ ಭಿನ್ನನಲ್ಲ ಎಂಬ ಅನುಭವವನ್ನು ಪಡೆಯುವನು.

## ಸೃಷ್ಟಿ ಪ್ರಕ್ರಿಯೆ ಮತ್ತು ಕಾರಣವಾದ

ಬ್ರಹ್ಮವೇ ಮಾಯೋಪಾಧಿಯಿಂದ ಕೂಡಿ 'ಈಶ್ವರ'ನಾಗಿ ಜಗತ್ತಿನ ಸೃಷ್ಟಿಗೆ ಕಾರಣ ವಾಗುತ್ತದೆ. ಜಗತ್ತಿನ ಸೃಷ್ಟಿಯು ಇಚ್ಛಾಪೂರ್ವಕವಾಗಿರುತ್ತದೆ[3]. ಈಕ್ಷಣಪೂರ್ವಕವಾಗಿ[4] ಸೃಷ್ಟಿಯನ್ನು ಮಾಡುವ ಈಶ್ವರನು ನಿಮಿತ್ತಕಾರಣ, ಮಾಯೆಯನ್ನು ಹೊಂದಿರುವುದರಿಂದ ಬ್ರಹ್ಮವೇ ಉಪಾದಾನಕಾರಣ ಈ ರೀತಿಯಲ್ಲಿ ಬ್ರಹ್ಮವು ಜಗತ್ತಿನ ಉಪಾದಾನ ಹಾಗೂ ನಿಮಿತ್ತ ಕಾರಣವಾಗುವುದು. ಇಂತಹ ಈಶ್ವರನು ಸಂಕಲ್ಪಮಾಡಿ[5] ಮೊದಲು ಆಕಾಶವನ್ನು ನಂತರ ವಾಯು, ತೇಜಸ್ಸು, ಜಲ, ಪೃಥವಿ ಎಂಬ ಪಂಚಭೂತಗಳನ್ನು ಸೃಷ್ಟಿಮಾಡಿದನು[6].

---

೧ ಬೃಹಾರಣ್ಯಕೋಪನಿಷತ್, ೩. ೯. ೨೬.

೨ ಶ್ವೇತಾಶ್ವತರೋಪನಿಷತ್ ೪–೧೦.

೩ ಬಹುಸ್ಯಾಂ ಪ್ರಜಾಯೇಯ— ಛಾಂದೋಗ್ಯ ೬. ೨. ೩. ; ತೈತ್ತಿರೀಯ ೨. ೬.

೪ ಸ ಈಕ್ಷತ ಲೋಕಾನ್ನು ಸೃಜಾ ಇತಿ ॥ ಐತರೇಯೋಪನಿಷತ್ ೧. ೧.

೫ ಆತ್ಮಾ ವಾ ಇದಮಗ್ರೇಽಭೂತ್ಸ ಈಕ್ಷತ ಸೃಜಾ ಇತಿ ॥
ಸಂಕಲ್ಪೇನಾಸೃಜಲ್ಲೋಕಾನ್ ಸ ಏತಾನಿತಿ ಬಹ್ವೃಚಾಃ ॥
ವಿದ್ಯಾರಣ್ಯರ 'ಪಂಚದಶೀ, ದ್ವೈತವಿವೇಕ ಪ್ರಕರಣಂ. ಶ್ಲೋ. ೩.

೬ ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಃ ಸಂಭೂತಃ ॥
ಆಕಾಶಾದ್ವಾಯುಃ ವಾಯೋರಗ್ನಿಃ, ಅಗ್ನೇರಾಪಃ, ಅದ್ಭ್ಯಃ ಪೃಥಿವೀ ಪೃಥಿವ್ಯಾ ಓಷಧಯಃ
ತೈತ್ತಿರೀಯೋಪನಿಷತ್(ಬ್ರಹ್ಮಾನಂದವಲ್ಲೀ) ೧. ೧.

ಇವುಗಳಲ್ಲಿ ಆಕಾಶದಲ್ಲಿ ಶಬ್ದಗುಣ, ವಾಯುವಿನಲ್ಲಿ ಶಬ್ದ ಮತ್ತು ಸ್ಪರ್ಶ, ತೇಜಸ್ಸಿನಲ್ಲಿ ಶಬ್ದ, ಸ್ಪರ್ಶ ಮತ್ತು ರೂಪ ; ಜಲದಲ್ಲಿ ಶಬ್ದ, ಸ್ಪರ್ಶ, ರೂಪ ಮತ್ತು ರಸ, ಪೃಥಿವಿಯಲ್ಲಿ ಶಬ್ದ, ಸ್ಪರ್ಶ ರೂಪ, ರಸ, ಮತ್ತು ಗಂಧ ಈ ಗುಣಗಳಿರುವುವು.

ಈ ಪಂಚಭೂತಗಳು ತ್ರಿಗುಣಾತ್ಮಕವಾದ 'ಮಾಯೆ'ಯಿಂದ ಕೂಡಿವೆ[1]. ಮಾಯೆಯಲ್ಲಿ ರುವ ಧರ್ಮಗಳು ಅದರಿಂದ ಹುಟ್ಟಿದ ಕಾರ್ಯದಲ್ಲಿ ಸಂಕ್ರಮಣ ಹೊಂದುವುದು ಸಹಜ. ಪಂಚಭೂತಗಳ ಸಾತ್ವಿಕಾಂಶಗಳಿಂದ ಶ್ರೋತ್ರ, ತ್ವಕ್, ಚಕ್ಷುಸ್, ರಸನ ಮತ್ತು ಘ್ರಾಣ ಎಂಬ ಪಂಚೇಂದ್ರಿಯಗಳು[2] ; ಪಂಚಭೂತಗಳ ಸಾತ್ವಿಕಾಂಶಗಳ ಸಮ್ಮಿಳನದಿಂದ ಮನಸ್ಸು, ಬುದ್ಧಿ, ಅಹಂಕಾರ, ಚಿತ್ತಗಳೆಂಬ ನಾಲ್ಕು ಅಂತಃಕರಣಗಳು ಹುಟ್ಟುವುವು. ಪಂಚಭೂತಗಳ ರಜೋಗುಣಾಂಶಗಳಿಂದ ವಾಕ್, ಪ್ರಾಣಿ, ಪಾದ, ಪಾಯು ಮತ್ತು ಉಪಸ್ಥ ಎಂಬ ಐದು ಕರ್ಮೇಂದ್ರಿಯಗಳು ; ಪಂಚಭೂತಗಳ ರಜೋಗುಣಾಂಶಗಳ ಸಮ್ಮಿಳನದಿಂದ ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ ಎಂಬ ಪಂಚಪ್ರಾಣಗಳು ಜನಿಸುವುವು.

ತಮೋಗುಣ ಪ್ರಧಾನವಾದ ಅಪಂಚೀಕೃತ ಭೂತಗಳಿಂದ ಪಂಚೀಕೃತ ಭೂತಗಳು ಹುಟ್ಟುವುವು. ಪ್ರತಿಯೊಂದು ಭೂತವೂ ತನ್ನ ಅಂಶದಲ್ಲಿ ಅರ್ಧ ಮತ್ತು ಇತರ ನಾಲ್ಕು ಭೂತಗಳು$\frac{1}{8}$ + ಅಂಶವು ಸೇರಿ ಅರ್ಧವಾಗುತ್ತದೆ. ಉದಾಹರಣೆಗೆ ಆಕಾಶ $\frac{1}{2}$ + ಪೃಥಿವೀ$\frac{1}{8}$ + ಜಲ$\frac{1}{8}$ ಅಗ್ನಿ$\frac{1}{8}$ + ವಾಯು$\frac{1}{8}$ = ಆಕಾಶ. ಪ್ರತಿಯೊಂದು ಸ್ಥೂಲಭೂತವೂ ಪಂಚಭೂತಾತ್ಮಕ ವಾಗಿರುತ್ತದೆ. ಇದಕ್ಕೆ 'ಪಂಚೀಕರಣ[3]'ವೆಂದು ಹೆಸರು.

ಅಪಂಚೀಕೃತಭೂತಪಂಚಕವೇ ಬುದ್ಧಿ, ಮನಸ್ಸು, ದಶೇಂದ್ರಿಯಗಳು, ಪಂಚಪ್ರಾಣಗಳು ಸೇರಿ ಜೀವಾತ್ಮರಿಗೆ ಹದಿನೇಳು ಅವಯುವಗಳುಳ್ಳ ಲಿಂಗಶರೀರವಾಗಿ ಮೋಕ್ಷಪರ್ಯಂತ ವಿರುವುದು. ಹಿರಣಗರ್ಭನೆಂಬ ಪ್ರಥಮಜೀವನ ಲಿಂಗಶರೀರಕ್ಕೆ ಮಹತ್ತತ್ತ್ವವೆಂದೂ, ನಮ್ಮಗಳ ಲಿಂಗಶರೀರಕ್ಕೆ ಅಹಂಕಾರತತ್ತ್ವವೆಂದೂ, ವ್ಯವಹಾರ.

---

೧ ಅಜ್ಞಾನಂ ತು ಸದಸದ್ಭ್ಯಾಂ ಅನಿರ್ವಚನೀಯಂ ತ್ರಿಗುಣಾತ್ಮಕಂ ಜ್ಞಾನವಿರೋಧಿ ಭಾವರೂಪಂ ಯತ್ಕಿಂಚಿದಿತಿ ವದಂತಿ ॥

ಸದಾನಂದನ 'ವೇದಾಂತಸಾರ', ಪು. ೩,

೨ ದಾನಂದನ 'ವೇದಾಂತಸಾರ', ಪು. ೫.

೩ ದ್ವಿಧಾ ವಿಧಾಯ ಚೈಕೈಕಂ ಚತುರ್ಧಾ ಪ್ರಥಮಂ ಪುನಃ ।
ಸ್ವಸ್ವೇತರ ದ್ವಿತೀಯಾಂಶೈರ್ಯೋಜನಾತ್ ಪಂಚಪಂಚತೇ ॥

ಪಂಚದಶೀ, ೧

ಪಂಚೀಕೃತ ಪಂಚಭೂತಗಳಿಂದ ಬ್ರಹ್ಮಾಂಡವೂ, ಜರಾಯುಜ, ಅಂಡಜ. ಸ್ವೇದಜ, ಉದ್ಭಿಜಗಳೆಂಬ ನಾಲ್ಕು ವಿಧವಾದ ಸ್ಥೂಲಶರೀರಗಳೂ ಮತ್ತು ಅವುಗಳಿಗೆ ಯೋಗ್ಯವಾದ ಆಹಾರಾದಿಗಳ ಉತ್ಪತ್ತಿಯಾಗುವುದು[1].

ಜಗತ್ತಿನ ಬಗೆಗೆ ಕಾರ್ಯಕಾರಣವಾದ ವಿಚಾರವನ್ನು ಮಾಡಿದಾಗ, ಅಖಂಡ ಚೈತನ್ಯ ಸತ್ತಾಗೆ ಅತಿರಿಕ್ತವಾದ ಕಾರ್ಯರೂಪವಾದ ಜಗತ್ತು ಅಜ್ಞಾನಿಗಳ ದೃಷ್ಟಿಯಿಂದ ವ್ಯಾವಹಾರಿಕ ಸತ್ಯವಾದರೂ ಪಾರಮಾರ್ಥಿಕ ದೃಷ್ಟಿಯಿಂದ ಮಿಥ್ಯೆ. ತ್ರಿಕಾಲಗಳಲ್ಲಿ ಅಬಾಧಿತವಾಗಿರುವುದು ಪರಮಾರ್ಥಸತ್ಯವೆಂದೂ, ವ್ಯವಹಾರ ಕಾಲದಲ್ಲಿ ಬಾಧವಿಲ್ಲದಿರುವುದು ವ್ಯಾವಹಾರಿಕ ಸತ್ಯವೆಂದೂ, ಪ್ರತಿಭಾಸಸಮಯದಲ್ಲಿ ಮಾತ್ರವಿರುವುದು. ಪ್ರಾತಿಭಾಸಿಕಸತ್ಯವೆಂದೂ ವಸ್ತುಸತ್ತೆಯು ಮೂರು ವಿಧವಾಗಿರುವುದು. ಅದ್ವೈತ ದರ್ಶನದಂತೆ ಕಾರಣಸತ್ತಾ ಅವಿನಾಶಿ ಹಾಗೂ ನಿರ್ವಿಕಾರವಾಗಿರುವುದು ; ಅದರಲ್ಲಿ ಕಲ್ಪಿತವಾಗುವ ನಾನಾತ್ಮಕ ಪ್ರಪಂಚವು ಪರಮಾರ್ಥ ಸತ್ಯವಲ್ಲದಿದ್ದರೂ ವ್ಯಾವಹಾರಿಕ ಸತ್ಯವಾದುದು[2].

ಜಗತ್ತು ಮಾಯೆಯ ಪರಿಣಾಮವಾದರೂ, ಬ್ರಹ್ಮದ ವಿವರ್ತವಾದುದು. ಕಾರಣ ವಸ್ತುವಿನಲ್ಲಿರುವ ಸತ್ತೆಗೆ ಸಮಾನ ಸತ್ತೆಯನ್ನು ಹೊಂದಿದ ಕಾರ್ಯವನ್ನು ಪರಿಣಾಮವೆಂದೂ, ವಿಷಮವಾದ ಸತ್ತೆಯನ್ನು ಹೊಂದಿದ ಕಾರ್ಯವನ್ನು ವಿವರ್ತವೆಂದೂ ಹೇಳುವರು[3].

### ಪ್ರಮಾಣಗಳು

'ವ್ಯವಹಾರೇ ಭಾಟ್ಟನಯಃ' ಎಂಬ ಉಕ್ತಿಗನುಸಾರವಾಗಿ ಕುಮಾರಿಲ ಭಟ್ಟರು ಅಂಗೀಕರಿಸಿರುವ ಪ್ರತ್ಯಕ್ಷ, ಅನುಮಾನ, ಉಪಮಾನ, ಶಬ್ದ, ಅರ್ಥಾಪತ್ತಿ ಮತ್ತು ಅನುಪಲಬ್ಧಿ ಎಂಬ ಆರು ಪ್ರಮಾಣಗಳನ್ನು ಅದ್ವೈತಿಗಳು ಒಪ್ಪುವರು,

ಪ್ರತ್ಯಕ್ಷ ಪ್ರಮಾಣ :--ಪ್ರತ್ಯಕ್ಷ ಪ್ರಮೆಗೆ ಕರಣವಾಗಿರುವುದು ಪ್ರತ್ಯಕ್ಷ ಪ್ರಮಾಣ

---

೧ ಏತೇಭ್ಯಃ ಪಂಚೀಕೃತೇಭ್ಯಃಭೂತೇಭ್ಯ......ಬ್ರಹ್ಮಾಂಡಸ್ಯ ತದಂತರ್ವರ್ತಿಚತುರ್ವಿಧ ಸ್ಥೂಲ ಶರೀರಾಣಾಂ ತದುಚಿತಾನಾಂ ಅನ್ನಪಾನಾದೀನಾಂ ಚ ಉತ್ಪತ್ತಿರ್ಭವತಿ.

ಸದಾನಂದನ 'ವೇದಾಂತಸಾರ' ಪು, ೬

೨ ಸರ್ವವ್ಯವಹಾರಾಣಾಮೇವ......
ಸರ್ವೋ ಲೌಕಿಕೋ ವೈದಿಕಶ್ಚ ವ್ಯವಹಾರಃ ।

ಬ್ರಹ್ಮಸೂತ್ರ 'ಶಾಂಕರಭಾಷ್ಯ', ೨-೧-೪

೩ ಕಾರಣ ಸಲಕ್ಷಣೋಽನ್ಯಥಾಭಾವಃ ಪರಿಣಾಮಃ ತದ್ವಿಲಕ್ಷಣೋ ವಿವರ್ತಃ ।

ಸಿದ್ಧಾಂತಲೇಶಸಂಗ್ರಹ, ಪ್ರಥಮ ಪರಿಚ್ಛೇದ ಪು, ೫೪

ವಾಗುತ್ತದೆ. ಅದ್ವೈತಿಗಳು ಬ್ರಹ್ಮವೇ ಸಾಕ್ಷಾತ್ ಅಪರೋಕ್ಷರೂಪ ವಾಗಿರುವುದರಿಂದ ಚೈತನ್ಯವನ್ನೇ ಪ್ರತ್ಯಕ್ಷಪ್ರಮೆಯೆಂದು ಹೇಳುತ್ತಾರೆ.[1]

ಈ ರೀತಿ ಬ್ರಹ್ಮ ಚೈತನ್ಯವೇ ಪ್ರತ್ಯಕ್ಷ ಪ್ರಮೆಯೆಂದು ಸಿದ್ಧವಾದಾಗ್ಯೂ, ಅದು ಸಮಸ್ತ ದೇಶ, ಕಾಲ, ವಸ್ತುಗಳಲ್ಲಿರುವುದರಿಂದ ಅದರ ಅಭಿವ್ಯಕ್ತಿಗಾಗಿ ಯಾವುದಾದರೂ ಒಂದು ಸಾಧನ ಬೇಕೇ ಬೇಕು. ಇಲ್ಲದಿದ್ದರೆ ಬ್ರಹ್ಮ ಎಲ್ಲ ಕಡೆಯಲ್ಲಿಯೂ ವ್ಯಾಪ್ತವಾಗಿರುವುದರಿಂದ ಯಾವಾಗಲೂ ಪ್ರತ್ಯಕ್ಷಪ್ರಮೆ ನಮ್ಮಲ್ಲಿರಬೇಕಾಗುತ್ತದೆ. ಈ ರೀತಿಯ ಅತಿವ್ಯಾಪ್ತಿಯನ್ನು ಪರಿಹರಿಸಲು ಅಂತಃಕರಣವೃತ್ತಿ[2]ಯನ್ನು ಸಾಧನವೆಂದು ಅಂಗೀಕರಿಸಿ ಅದರಿಂದ ಕೂಡಿದ ಚೈತನ್ಯವು ನಿಯತ ದೇಶ, ಕಾಲ, ವಸ್ತುಗಳಲ್ಲಿರುವುದರಿಂದ ಸದಾ ಪ್ರತ್ಯಕ್ಷಪ್ರಮೆ ಇರುವುದಿಲ್ಲ ವೆಂದು ಅದ್ವೈತಿಗಳ ಅಭಿಪ್ರಾಯವಾಗಿದೆ.

ಪ್ರತ್ಯಕ್ಷವು ಜ್ಞಾನಪ್ರತ್ಯಕ್ಷ ಮತ್ತು ವಿಷಯಪ್ರತ್ಯಕ್ಷವೆಂದು[3]ಎರಡು ವಿಧವಾಗಿರುವುದರಿಂದ, ಪ್ರಮಾತೃ ಚೈತನ್ಯ, ಪ್ರಮಾಣಚೈತನ್ಯ, ವಿಷಯ ಚೈತನ್ಯವೆಂದು ಮೂರು ಚೈತನ್ಯಗಳನ್ನೊಪ್ಪಿ, ಪ್ರಮಾಣ ಚೈತನ್ಯ, ವಿಷಯ ಚೈತನ್ಯಗಳ ಅಭೇಧವನ್ನು ಜ್ಞಾನಪ್ರತ್ಯಕ್ಷವೆಂದೂ; ವಿಷಯ ಚೈತನ್ಯ ಮತ್ತು ಪ್ರಮಾತೃ ಚೈತನ್ಯಗಳ ಅಭೇದವನ್ನು ವಿಷಯ ಪ್ರತ್ಯಕ್ಷವೆಂದೂ ಹೇಳುತ್ತಾರೆ. ಈ ಎರಡು ಪ್ರತ್ಯಕ್ಷಗಳ ನಿಷ್ಕೃಷ್ಟಸ್ವರೂಪವು ಕ್ರಮವಾಗಿ ಈ ರೀತಿ ನಿರೂಪಿಸಲ್ಪಟ್ಟಿದೆ. ಒಂದು ವಸ್ತುವಿನ ಪ್ರತೀತಿಯಾಗುವಾಗ ವಸ್ತುಸ್ವರೂಪವು ಜ್ಞಾನದಿಂದ ತೋರುತ್ತದೆ; ಆದರೆ ಆಜ್ಞಾನದ ಸ್ವರೂಪವು ಮತ್ತೊಂದು ಸಾಧನದ ಸಹಾಯವಿಲ್ಲದೆ ಸ್ವಯಂ ತೋರುವುದರಿಂದ ಇದನ್ನು ಜ್ಞಾನ ಪ್ರತ್ಯಕ್ಷವೆನ್ನುತ್ತಾರೆ.[4] ಅಂತಃಕರಣವೃತ್ತಿಯು ಇಂದ್ರಿಯ ಮೂಲಕವಾಗಿ ವಿಷಯ(ಪದಾರ್ಥ)ವನ್ನು ಸೇರಿ ಆ ಪದಾರ್ಥದ ಆಕಾರವನ್ನು ತಾನು ತಾಳುತ್ತದೆ. ಆಗ

---

೧ ಪ್ರತ್ಯಕ್ಷಪ್ರಮಾಯಾಃ ಕರಣಂ ಪ್ರತ್ಯಕ್ಷಪ್ರಮಾಣಂ। ಪ್ರತ್ಯಕ್ಷಪ್ರಮಾ ಚಾತ್ರ ಚೈತನ್ಯಮೇವ।
ವೇದಾಂತ ಪರಿಭಾಷಾ। ಪ್ರತ್ಯಕ್ಷ ಪರಿಚ್ಛೇದ. ಪು.೭

(ADYAR Edition)

'ಯತ್ ಸಾಕ್ಷಾದಪರೋಕ್ಷಾದ್ಬ್ರಹ್ಮ'
ಬೃಹದಾರಣ್ಯಕೋಪನಿಷತ್. ೩.೪ ೧.

೨ ತಡಾಗೋದಕಂ ಛಿದ್ರಾನ್ನಿರ್ಗತ್ಯ...ಸ ಏವ ಪರಿಣಾಮೋ ವೃತ್ತಿರಿತ್ಯುಚ್ಯತೇ।
ವೇದಾಂತಪರಿಭಾಷಾ ; ಪ್ರತ್ಯಕ್ಷ ಪರಿಚ್ಛೇದ. ಪು೧-೩.

೩ ಕಿಂ ಜ್ಞಾನಗತ ಪ್ರತ್ಯಕ್ಷತ್ವಸ್ಯ ಪ್ರಯೋಜಕಂ ಚ್ಛಸಿ ಕಿಂ ವಾ ವಿಷಯಗತಸ್ಯ।
ವೇ. ಪ. ಪ್ರತ್ಯಕ್ಷ ಪರಿಚ್ಛೇದ, ಪು-೧೨,

೪ ವೇದಾಂತಪರಿಭಾಷಾ; ಪ್ರತ್ಯಕ್ಷ ಪರಿಚ್ಛೇದ ಪು-೨೦.

ಅಂತಃಕರಣ ವೃತ್ತ್ಯವಚ್ಛಿನ್ನ ಚೈತನ್ಯವೂ ವಿಷಯಾವಚ್ಛಿನ್ನ ಚೈತನ್ಯವೂ ಒಂದೇ ಆಗುತ್ತದೆ. ಇದನ್ನೇ ವಿಷಯ ಪ್ರತ್ಯಕ್ಷವೆನ್ನುತ್ತಾರೆ.[1]

ಪ್ರತ್ಯಕ್ಷವೂ ಸವಿಕಲ್ಪಕ ಮತ್ತು ನಿರ್ವಿಕಲ್ಪಕವೆಂದು ಎರಡು ವಿಧವಾಗಿದೆ. ಇವುಗಳ ಪೈಕಿ ವಿಶೇಷಣ-ವಿಶೇಷ್ಯಗಳ ಸಂಬಂಧದಿಂದ ಕೂಡಿದ ಪದಾರ್ಥಜ್ಞಾನವು ಸವಿಕಲ್ಪ ಪ್ರತ್ಯಕ್ಷವೆಂದೂ, ವಿಶೇಷಣ ವಿಶೇಷ್ಯಗಳ ಸಂಬಂಧವಿಲ್ಲದ ಪದಾರ್ಥಜ್ಞಾನವು ನಿರ್ವಿಕಲ್ಪ ಪ್ರತ್ಯಕ್ಷವೆಂದೂ ಉಕ್ತವಾಗಿದೆ.[2]

ಅನುಮಾನ ಪ್ರಮಾಣ:—ಅನುಮಿತಿ ಪ್ರಮಾಕರಣವನ್ನು ಅನುಮಾನವೆಂದು ಹೇಳುತ್ತಾರೆ. ಈ ಪ್ರಮೆಯು ವ್ಯಾಪ್ತಿಜ್ಞಾನದಿಂದ ಉಂಟಾಗುತ್ತದೆ[3] ಅದ್ವೈತಿಗಳು ಅನುಮಿತಿಯಲ್ಲಿ ಕರಣ (ಅಸಾಧಾರಣ ಕಾರಣ) ವಾಗಿರುವುದು ವ್ಯಾಪ್ತಿಜ್ಞಾನವೇ ಹೊರತು ಲಿಂಗಪರಾಮರ್ಶ (ಪರಾಮರ್ಶಜ್ಞಾನ)ವಲ್ಲ ಎಂದು ಅಭಿಪ್ರಾಯ ಪಡುತ್ತಾರೆ. ಪರ್ವತದಲ್ಲಿ ಧೂಮವನ್ನು ನೋಡಿದಾಗ ಹಿಂದೆ ಗೃಹೀತವಾಗಿದ್ದ ವ್ಯಾಪ್ತಿಜ್ಞಾನದ ಸಂಸ್ಕಾರವೇ 'ವಹ್ನಿಮಾನ್' ಎಂಬ ಜ್ಞಾನವನ್ನು ಹುಟ್ಟಿಸುತ್ತದೆ. ಪರ್ವತವನ್ನು ಕಣ್ಣಿನಿಂದಲೇ ನೋಡುತ್ತಿರುವುದರಿಂದ ಪರ್ವತದ ತೋರಿಕೆಗೆ ವ್ಯಾಪ್ತಿಜ್ಞಾನದ ಸಹಾಯ ಅನಗತ್ಯ. ಒಟ್ಟಿನಲ್ಲಿ 'ಪರ್ವತೋ ವಹ್ನಿಮಾನ್ ಎಂಬ ಜ್ಞಾನ ಒಂದು ಜ್ಞಾನವಲ್ಲ. ಪ್ರತ್ಯಕ್ಷ ಮತ್ತು ಅನುಮಿತಿ ರೂಪ, ಪರ್ವತಾಂಶದಲ್ಲಿ ಪ್ರತ್ಯಕ್ಷವಾಗಿಯೂ ವಹ್ನ್ಯಂಶದಲ್ಲಿ ಮಾತ್ರ ಅನುಮಿತಿರೂಪವೂ ಆಗುತ್ತದೆ.

ಈ ಅನುಮಾನವು ಸ್ವಾರ್ಥ ಮತ್ತು ಪರಾರ್ಥಎಂದು ಎರಡು ವಿಧವಾಗಿದೆ. ಪರಾರ್ಥವು ನ್ಯಾಯಸಾಧ್ಯವಾಗಿದೆ. ಅವಯವಸಮುದಾಯವನ್ನು ನ್ಯಾಯವೆಂದು ಕರೆಯುತ್ತಾರೆ. ಪ್ರತಿಜ್ಞಾ. ಹೇತು, ಉದಾಹರಣ. ಅಥವಾ ಉದಾಹರಣ, ಉಪನಯ, ನಿಗಮನ ಎಂದು ಅವಯವಗಳು ಮೂರೇ ಹೊರತು ನೈಯಾಯಿಕರಂತೆ ಐದಲ್ಲ ಎಂದು ಅದ್ವೈತಿಗಳ ಸಿದ್ಧಾಂತ[4]

ಉಪಮಾನ :—ಸಾದೃಶ್ಯಪ್ರಮೆಗೆ ಕರಣವಾಗಿರುವುದು ಉಪಮಾನವಾಗುತ್ತದೆ[5].

---

೧ ವೇದಾಂತ ಪರಿಭಾಷಾ, ಪ್ರತ್ಯಕ್ಷ ಪರಿಚ್ಛೇದ. ಪು-೨೫

೨ ವೇದಾಂತ ಪರಿಭಾಷಾ' ಪ್ರತ್ಯಕ್ಷ ಪರಿಚ್ಛೇದ. ಪು-೨೬, ೨೭

೩ ವೇದಾಂತ ಪರಿಭಾಷಾ, ಅನುಮಾನ ಪರಿಚ್ಛೇದ. ಪು- ೫೨

೪ ವೇದಾಂತ ಪರಿಭಾಷಾ, ಅನುಮಾನ ಪರಿಚ್ಛೇದ. ಪು- ೫೭

೫ ವೇದಾಂತ ಪರಿಭಾಷಾ, ಉಪಮಾನ ಪರಿಚ್ಛೇದ. ಪು-೯೨

ಆಗಮ ಪ್ರಮಾಣ :—ಯಾವ ವಾಕ್ಯದ ತಾತ್ಪರ್ಯವು ಇತರ ಪ್ರಮಾಣಗಳಿಂದ ಬಾಧಿತವಾಗದಿರುವುದೋ ಅದನ್ನು ವಾಕ್ಯಪ್ರಮಾಣವೆಂದು ಕರೆಯುತ್ತಾರೆ. ಈ ವಾಕ್ಯದಿಂದ ಉಂಟಾಗುವ ಜ್ಞಾನಕ್ಕೆ ಆಕಾಂಕ್ಷಾ, ಯೋಗ್ಯತಾ, ಆಸತ್ತಿ, ತಾತ್ಪರ್ಯಜ್ಞಾನ—ಇವು ಸಹಕಾರಿ ಕಾರಣಗಳು[1].

ಅರ್ಥಾಪತ್ತಿಃ :—ಉಪಪಾದ್ಯಜ್ಞಾನದಿಂದ ಉಪಪಾದಕ ಕಲ್ಪನೆಯು ಅರ್ಥಾಪತ್ತಿಯಾಗುತ್ತದೆ. ಹಗಲಿನಲ್ಲಿ ಊಟಮಾಡದಿರುವವನ ಸ್ಥೂಲವಾಗಿರುವಿಕೆಯು ರಾತ್ರಿ ಊಟವಿಲ್ಲದೆ ಸಾಧ್ಯವಿಲ್ಲವಾದ್ದರಿಂದ ರಾತ್ರಿ ಊಟವನ್ನು ನಿರ್ಣಯಿಸಲು ಸಹಾಯಕವಾಗುತ್ತದೆ. ಇಲ್ಲಿ ಪೀನತ್ವ ಉಪಪಾದ್ಯ, ರಾತ್ರಿಭೋಜನ ಉಪಪಾದಕವಾಗಿದೆ.

ನೈಯಾಯಿಕರಂತೆ ಅದ್ವೈತಿಗಳು ಅರ್ಥಾಪತ್ತಿಯನ್ನು ಅನುಮಾನದಲ್ಲಿ ಸೇರಿಸುವುದಿಲ್ಲ. ಅರ್ಥಾಪತ್ತಿಯನ್ನು ಪ್ರತ್ಯೇಕಪ್ರಮಾಣವಾಗಿ ಸ್ವೀಕರಿಸಿದ್ದಾರೆ[2].

ಅನುಪಲಬ್ಧಿ :—ಅಭಾವಜ್ಞಾನಕ್ಕೆ ಅಸಾಧಾರಣ ಕಾರಣವಾಗಿರುವುದೇ ಅನುಪಲಬ್ಧಿ ಪ್ರಮಾಣ[3].

## ಸತ್ಯತ್ವ ಮತ್ತು ಖ್ಯಾತವಾದ

ಜ್ಞಾನಗಳ ಸತ್ಯಾಸತ್ಯತೆಯನ್ನು ದಾರ್ಶನಿಕರು ಮೂರ್ವಿಕವಾಗಿ ವಿವೇಚಿಸಿ, ಅಖ್ಯಾತಿ ಅಸತ್‌ಖ್ಯಾತಿ, ಆತ್ಮಖ್ಯಾತಿ, ಅನ್ಯಥಾಖ್ಯಾತಿ ಮತ್ತು ಅನಿರ್ವಚನೀಯಖ್ಯಾತಿ ಎಂದು ಐದು ವಾದಗಳನ್ನು ಅಂಗೀಕರಿಸಿದ್ದಾರೆ. ಮೀಮಾಂಸಕರು ಅಖ್ಯಾತಿಯನ್ನೂ, ಮಾಧ್ಯಮಿಕ ಬೌದ್ಧರು ಅಸತ್‌ಖ್ಯಾತಿಯನ್ನೂ, ಯೋಗಾಚಾರ್ಯಬೌದ್ಧರು ಆತ್ಮಖ್ಯಾತಿಯನ್ನೂ, ತಾರ್ಕಿಕರು 'ಅನ್ಯಥಾಖ್ಯಾತಿ'ಯನ್ನೂ ಅದ್ವೈತಿಗಳು 'ಅನಿರ್ವಚನೀಯಖ್ಯಾತಿ'ಯನ್ನೂ ಅಂಗೀಕರಿಸಿದ್ದಾರೆ.

ಸಂಜೆ ನಸುಗತ್ತಲಿನಲ್ಲಿ ಹಗ್ಗವು ಹಾವಾಗಿ ತೋರುವಲ್ಲಿ, ಹಗ್ಗದಲ್ಲಿ ಹಾವಿನ ಜ್ಞಾನವು ಸತ್ಯವಾದುದಲ್ಲ. ಏಕೆಂದರೆ ದೀಪದ ಬೆಳಕಿನಲ್ಲಿ ಅದನ್ನು ಮತ್ತೆ ವೀಕ್ಷಿಸಿದರೆ ಸರ್ಪಜ್ಞಾನವು ಭಾಧಿತವಾಗಿ ಹಗ್ಗದ ಜ್ಞಾನವಾಗುತ್ತದೆ. ಆದುದರಿಂದ ಹಗ್ಗದಲ್ಲಿ ಹಾವಿನ ಜ್ಞಾನವನ್ನು "ಸತ್" ಎಂದು ಹೇಳಲು ಸಾಧ್ಯವಿಲ್ಲ, ಇದನ್ನು "ಅಸತ್" ಎಂದು ಹೇಳಲೂ

---

೧. ವೇದಾಂತ ಪರಿಭಾಷಾ, ಆಗಮ ಪರಿಚ್ಛೇದ ; ಪು. ೬೫

೨. ವೇದಾಂತ ಪರಿಭಾಷಾ, ಅರ್ಥಾಪತ್ತಿ ಪರಿಚ್ಛೇದ ; ಪು—೯೩

೩. ವೇದಾಂತ ಪರಿಭಾಷಾ, ಅನುಪಲಬ್ಧಿ ಪರಿಚ್ಛೇದ ; ಪು—೯೬

ಸಾಧ್ಯವಿಲ್ಲ. ಏಕೆಂದರೆ ಶಶಶೃಂಗದಂತೆ ರಜ್ಜುವಿನಲ್ಲಿ ಸರ್ಪವು ತೋರದಿರಬೇಕಾಗಿತ್ತು. ಆದರೆ ರಜ್ಜುವಿನಲ್ಲಿ ಸರ್ಪವು ತೋರಿದುದರಿಂದ 'ಅಸತ್' ಆಗಬಾರದು.

ಆದುದರಿಂದ ರಜ್ಜುವಿನಲ್ಲಿ ಸರ್ಪಜ್ಞಾನವು 'ಸತ್' ಆಗಲಿ, 'ಅಸತ್' ಆಗಲಿ ಪರಸ್ಪರ ವಿರೋಧವಿರುವುದರಿಂದ ಸದಸತ್ ಆಗಲಿ, ಆಗಿರದೆ ಇವೆಲ್ಲಕ್ಕಿಂತಲೂ ವಿಲಕ್ಷಣವಾಗಿ ''ಅನಿರ್ವಚನೀಯ''ವಾಗಿರುತ್ತದೆ. ಅಂತೆಯೇ ಈ ಜಗತ್ತಿಗೆ ಕಾರಣವಾದ ಮಾಯೆಯೂ ಕೂಡ 'ಸತ್' ಎಂದಾಗಲಿ 'ಅಸತ್' ಎಂದಾಗಲಿ 'ಸದಸತ್' ಎಂದಾಗಲಿ ನಿರ್ವಚನ ಮಾಡಲು ಸಾಧ್ಯವಿಲ್ಲದ್ದರಿಂದ ಅದು ''ಅನಿರ್ವಚನೀಯ''ವಾಗಿದೆ. ಮಾಯೆಯ ಸ್ವರೂಪವನ್ನು ಶಂಕರರು ವಿವೇಕಚೂಡಾಮಣಿಯಲ್ಲಿ ಸುಂದರವಾಗಿ ವರ್ಣಿಸಿ, ಅದು ಅನಿರ್ವಚನೀಯರೂಪ ಎಂದಿದ್ದಾರೆ

ಸನ್ನಾಪ್ಯಸನ್ನಾಪ್ಯುಭಯಾತ್ಮಿಕಾ ನೋ
ಭಿನ್ನಾಪ್ಯಭಿನ್ನಾಪ್ಯುಭಯಾತ್ಮಿಕಾ ನೋ ।
ಸಾಂಗಾಪ್ಯಸಂಗಾಪ್ಯುಭಯಾತ್ಮಿಕಾ ನೋ
ಮಹಾದ್ಭುತಾನಿರ್ವಚನೀಯರೂಪಾ ॥

ಅದ್ವೈತಿಗಳು ಭ್ರಮ ವಿಷಯದಲ್ಲಿ 'ಅನಿರ್ವಚನೀಯಖ್ಯಾತಿ' ಯನ್ನು ಅಂಗೀಕರಿಸಿ ಚೆನ್ನಾಗಿ ಪ್ರತಿಪಾದಿಸಿದ್ದಾರೆ.

## ಮೋಕ್ಷ ಸ್ವರೂಪ

ಅದ್ವೈತದರ್ಶನದಲ್ಲಿ ಮೋಕ್ಷವು ಹೊಸದಾಗಿ ಪಡೆಯುವ ಸ್ಥಿತಿ ಅಲ್ಲ. ಅದು ಆತ್ಮದ ಸಹಜಸಿದ್ಧ ಸ್ವರೂಪ. ಸ್ವಾಭಾವಿಕವಾಗಿ ಜೀವನು ನಿತ್ಯಶುದ್ಧ ಬುದ್ಧಮುಕ್ತನು. ಮುಕ್ತಿಯು ಪ್ರಾಪ್ಯವಾಗಲಿ ಅಥವಾ ಉತ್ಪಾದ್ಯವಾಗಲಿ ಅಲ್ಲ. ಬೃಹದಾರಣ್ಯಕೋಪನಿಷತ್ತಿಗೆ ಶಂಕರಾಚಾರ್ಯರು ಬರೆದ ಭಾಷ್ಯಕ್ಕೆ ಸುರೇಶ್ವರಾಚಾರ್ಯರು ವಾರ್ತಿಕ ಬರೆಯುತ್ತಾ ನಿದರ್ಶನದ ಮೂಲಕ ಮುಕ್ತಿಯ ಸ್ವರೂಪವನ್ನು ಹೀಗೆ ವಿವರಿಸಿದ್ದಾರೆ[1]. ಬಾಲ್ಯದಿಂದಲೂ ಬೇಡರ ಮಧ್ಯೆ ಬೆಳೆದ ರಾಜಕುಮಾರನು, ನಂತರ ಸ್ಮೃತಿಯಿಂದ ತಾನು ಬೇಡನಲ್ಲ, ರಾಜಕುಮಾರ ಎಂದರಿಯುವಂತೆ, ಜೀವಿಯು 'ತತ್ತ್ವಮಸಿ' ಇತ್ಯಾದಿ ಮಹಾವಾಕ್ಯದಿಂದ ಅಜ್ಞಾನ

---

೧. ರಾಜಸೂನೋಃ ಸ್ಮೃತಿಪ್ರಾಪ್ತಾ ವ್ಯಾಧಭಾವೋ ನಿವರ್ತತೇ ।
ಕಥೈವಮಾತ್ಮನೋಽಜ್ಞಸ್ಯ ತತ್ತ್ವಮಸ್ಯಾದಿ ವಾಕ್ಯತಃ ॥
(ಬೃಹದಾರಣ್ಯಕೋಪನಿಷತ್‌ಭಾಷ್ಯ. ಸುರೇಶ್ವರಾಚಾರ್ಯರ ವಾರ್ತಿಕ ೨. ೧. ೨೦)

ನಿವೃತ್ತಿಹೊಂದಿ, ತಾನು ಬ್ರಹ್ಮನಿಗಿಂತ ಭಿನ್ನನಲ್ಲ ಎಂದರಿತು ಸ್ವಸ್ವರೂಪನಾಗುವುದು. ಸಹಜಸ್ವರೂಪಕ್ಕೆ ಆವರಣವಾಗಿರುವ ಅಜ್ಞಾನನಿವೃತ್ತಿಯೇ ವೇದಾಂತದ ಗುರಿ ಎಂಬುದಾಗಿ ಶಂಕರಾಚಾರ್ಯರು ಹೇಳಿದ್ದಾರೆ[1].

ಬ್ರಹ್ಮದ ಅಪರೋಕ್ಷಜ್ಞಾನವೇ ಮೋಕ್ಷಸಾಧನ. ಶ್ರವಣದಿಂದಾದ ಬ್ರಹ್ಮಜ್ಞಾನವು ಅನುಭವದಲ್ಲಿ ಪರ್ಯವಸಾನವಾಗುವುದು[2] ; ಶ್ರುತ್ಯಾದಿಗಳೂ, ಅನುಭವಾದಿಗಳೂ ಬ್ರಹ್ಮದ ವಿಚಾರದಲ್ಲಿ ಪ್ರಮಾಣವಾಗಿರುವುವು.

ಅನುಭವಾವಸಾನವಾದ ಬ್ರಹ್ಮಜ್ಞಾನವು ಮೋಕ್ಷದ ಸಾಧನವೇ ವಿನಹ ಬರಿಯ ಶಾಬ್ದ ಜ್ಞಾನವಲ್ಲವೆಂಬುದು ಶಂಕರಾಚಾರ್ಯರ ಈ ಕೆಳಗಣ ಉಕ್ತಿಯಿಂದ ತಿಳಿದುಬರುವುದು.

ನ ಗಚ್ಛತಿ ವಿನಾ ಪಾನಂ ವ್ಯಾಧಿರೌಷಧಿಶಬ್ದತಃ ।
ವಿನಾಽಪರೋಕ್ಷಾನುಭವಂ ಬ್ರಹ್ಮಶಬ್ದೈರ್ನ ಮುಚ್ಯತೇ[3] ॥

ಸಗುಣ ಬ್ರಹ್ಮದ ಉಪಾಸನೆ, ಧಾರ್ಮಿಕ ಕರ್ಮಾಚರಣೆ, ಚಿತ್ತಶುದ್ಧಿ, ವಿವೇಕ, ವೈರಾಗ್ಯ ಇವು ಜ್ಞಾನಸಾಧನಗಳು.

ನಿಜವಾದ ಸಾಧಕನಿಗೆ ನಿತ್ಯಾನಿತ್ಯವಸ್ತುವಿವೇಕ, ಇಹಾಮುತ್ರ ಫಲಭೋಗವಿರಾಗ, ಶಮಾದಿಷಟ್ಕ ಸಂಪತ್ತು, ಮುಮುಕ್ಷುತ್ವ–ಈ ಸಾಧನ ಚತುಷ್ಟಯಗಳು ಅತ್ಯಗತ್ಯ[4]

ನಿತ್ಯ ಮತ್ತು ಅನಿತ್ಯವಸ್ತುಗಳ ವಿವೇಕವೆಂದರೆ ಬ್ರಹ್ಮಮಾತ್ರವೇ ನಿತ್ಯವಾದ ವಸ್ತು ಆದರಿಂದ ಭಿನ್ನವಾದಂತೆ ತೋರುವ ಎಲ್ಲವೂ ಅನಿತ್ಯ, ಎಂಬ ವಿವೇಚನೆ ಇಹ–ಪರಲೋಕಗಳಲ್ಲಿ

---

೧. ಅಸ್ಯ ಅನರ್ಥಹೇತೋಃ ಪ್ರಹಾಣಾಯ ಆತ್ಮೈಕತ್ವವಿದ್ಯಾಪ್ರತಿಪತ್ತಯೇ ಸರ್ವೇ ವೇದಾನ್ತಾ ಆರಭ್ಯಂತೇ ॥

'ಬ್ರಹ್ಮಸೂತ್ರ' ಶಾಂಕರಭಾಷ್ಯ. ಉಪೋದ್ಘಾತ (ಅಧ್ಯಾಸಪ್ರಕರಣ)

೨. ಅನುಭವಾವಸಾನತ್ವಾತ್ ಭೂತವಿಷಯತ್ವಾಚ್ಚ ಬ್ರಹ್ಮಜ್ಞಾನಸ್ಯ.

'ಬ್ರಹ್ಮಸೂತ್ರ,' ಶಾಂಕರಭಾಷ್ಯ, ೧–೧–೨

೩. ವಿವೇಕಚೂಡಾಮಣಿ, ಶ್ಲೋಕ, ೬೨.

೪. ಸಾಧನಾನಿ............ಮುಮುಕ್ಷುತ್ವಾನಿ.

ಸದಾನಂದನ 'ವೇದಾಂತಸಾರ.' ಪು. ೧.

ಭೋಗಾಸಕ್ತಿಯಿಲ್ಲದಿರುವುದು, ಶಮ, ದಮ, ಉಪರತಿ, ತಿತಿಕ್ಷಾ, ಸಮಾಧಾನ, ಶ್ರದ್ಧೆ ಮತ್ತು ಮುಕ್ತನಾಗಬೇಕೆಂಬ ತೀವ್ರಾಸಕ್ತಿ ಇವು ಅತ್ಯಗತ್ಯ.

'ಆತ್ಮಾ ವಾ ಅರೇ ದ್ರಷ್ಟವ್ಯಃ ಶ್ರೋತವ್ಯೋ ಮಂತವ್ಯೋ ನಿಧಿಧ್ಯಾಸಿತವ್ಯಃ[1]' ಎಂಬ ಉಪನಿಷತ್ತಿನ ವಾಕ್ಯವು ಆತ್ಮದರ್ಶನಕ್ಕೆ ಶ್ರವಣ, ಮನನ, ನಿಧಿಧ್ಯಾಸನಗಳನ್ನು ಹೇಳಿದೆ. ಇವು ಅಂತರಂಗದ ಸಾಧನಗಳೆಂದು ಪ್ರಸಿದ್ಧವಾಗಿವೆ.

ಶ್ರವಣ :—ಉಪನಿಷತ್ತಿನಲ್ಲಿ ಹೇಳಿರುವ 'ಪ್ರಜ್ಞಾನಂ ಬ್ರಹ್ಮ' 'ಅಹಂ ಬ್ರಹ್ಮಾಸ್ಮಿ,' 'ಅಯಮಾತ್ಮಾ ಬ್ರಹ್ಮ,' 'ತತ್ತ್ವಮಸಿ' ಮೊದಲಾದ ವಾಕ್ಯಗಳ ಸತ್ಯಾರ್ಥವನ್ನು ಗುರುಮುಖೇನ ಶ್ರವಣಮಾಡಿ ಉಪಕ್ರಮ, ಉಪಸಂಹಾರ ಮೊದಲಾದವುಗಳಿಂದ ಅದ್ವಿತೀಯವಾದ ಬ್ರಹ್ಮವಸ್ತುವಿನಲ್ಲಿಯೇ ತಾತ್ಪರ್ಯ ನಿರ್ಣಯ ಉಂಟಾಗುವಂತೆ ಮಾಡುವುದು[2].

ಮನನ :—ಹೀಗೆ ಉಪದಿಷ್ಟವಾದ ಜ್ಞಾನವು ಅಳವಡಬೇಕಾದರೆ ವಿಚಾರದ ಮೂಲಕ ಮನಸ್ಸಿನಲ್ಲಿ ಮನನ ಮಾಡಬೇಕು. ಮನನ ಕಾಲದಲ್ಲಿ ಕೆಲವೊಮ್ಮೆ ವಿಪರೀತ ಭಾವನೆ ಬರುವ ಸಂಭವವುಂಟು. ಇದನ್ನು ಯುಕ್ತಿಗಳ ಬಲದಿಂದ ಸಂಶಯಾದಿಗಳಿಗೆಡೆಗೊಡದಂತೆ ನಿವಾರಿಸಬೇಕು[3].

ನಿಧಿಧ್ಯಾಸನ :—'ನಿರಂತರವಾದ ಬ್ರಹ್ಮಾನುಸಂಧಾನವೇ ನಿಧಿಧ್ಯಾಸನ' ಕೆಲವೊಮ್ಮೆ ಅನಾದಿವಾಸನೆಯಿಂದ ವಿಷಯಗಳೆಡೆಗೆ ಹರಿಯುವ ಚಿತ್ತವನ್ನು ಸಂಯಮಗೊಳಿಸಿ ಅದನ್ನು ಆತ್ಮನಲ್ಲಿ ನೆಲೆಗೊಳಿಸಿ ಆತ್ಮಾನುಭೂತಿಯಾಗುವವರೆಗೂ ಧ್ಯಾನಪರನಾಗಬೇಕು. ಈಸಾಧನತ್ರಯವನ್ನು ಸುರೇಶ್ವರರು ಸಂಗ್ರಹವಾಗಿ ಹೀಗೆ ಹೇಳಿದ್ದಾರೆ–

ಶ್ರೋತವ್ಯಃ ಶ್ರುತಿವಾಕ್ಯೇಭ್ಯೋ ಮಂತವ್ಯಶ್ಚೋಪಪತ್ತಿಭಿಃ ।
ಮತ್ವಾ ಚ ಸತತಂ ಧ್ಯೇಯ ಏತೇ ದರ್ಶನಹೇತವಃ ॥

ಮಹಾವಾಕ್ಯಾರ್ಥದ ವಿಚಾರದಿಂದ ತತ್ತ್ವಸಾಕ್ಷಾತ್ಕಾರವನ್ನು ಹೊಂದುವಷ್ಟು ಪ್ರಜ್ಞೆಯಿಲ್ಲದ ಮಂದಾಧಿಕಾರಿಗಳಿಗೆ ಉಪಾಸನಾಮಾರ್ಗವು ಹೇಳಲ್ಪಟ್ಟಿದೆ.

---

೧. ಬೃಹದಾರಣ್ಯಕೋಪನಿಷತ್– ೨. ೪. ೫

೨. ಶ್ರವಣಂ ನಾಮ ಷಡ್ವಿಧಲಿಂಗೈರಶೇಷವೇದಾಂತಾನಾಮದ್ವಿತೀಯವಸ್ತುನಿ ತಾತ್ಪರ್ಯಾವಧಾರಣಂ ಸದಾನಂದನ ವೇದಾಂತಸಾರ' ಪು. ೧೨.

೩. 'ಬ್ರಹ್ಮಸೂತ್ರ' ಶಾಂಕರಭಾಷ್ಯ ೨. ೧. ೨.

'ಅಹಂ ಬ್ರಹ್ಮಾಸ್ಮಿ' ಎಂಬ ಅನುಭವವನ್ನು ಹೊಂದಿದ ಜೀವನ್ಮುಕ್ತನು ಅಂತರ್ಮುಖಿಯಾಗಿರಬಹುದು ಅಥವಾ ಅವನು ಬಹಿರ್ಮುಖನಾದರೂ ದೃಶ್ಯಜಗತ್ತು ಅವನನ್ನು ಭ್ರಮೆಗೊಳಿಸುವುದಿಲ್ಲ. ಪ್ರಾರಬ್ಧಕರ್ಮ ಮುಗಿಯುತ್ತಲೇ ಶರೀರವು ಲಯವಾಗಿ ಬ್ರಹ್ಮವಿದನು ಬ್ರಹ್ಮವೇ ಆಗಿ ಸ್ವಸ್ವರೂಪನಾಗುವನು. ಇದೇ ವಿದೇಹ ಮುಕ್ತಿ.

ಭಿದ್ಯತೇ ಹೃದಯಗ್ರಂಥಿಃ ಛಿದ್ಯಂತೇ ಸರ್ವಸಂಶಯಾಃ ।
ಕ್ಷೀಯಂತೇ ಚಾಸ್ಯ ಕರ್ಮಾಣಿ ತಸ್ಮಿನ್ ದೃಷ್ಟೇ ಪರಾವರೇ ॥
ಮುಂಡಕೋಪನಿಷತ್. ೨-೨-೮.

ಸ ಯೋ ಹ ವೈ ತತ್ಪರಮಂ ಬ್ರಹ್ಮವೇದ ಬ್ರಹ್ಮೈವ ಭವತಿ ।
ಮುಂಡಕೋಪನಿಷತ್. ೩-೨-೯.

"ಬ್ರಹ್ಮಭಾವಶ್ಚ ಮೋಕ್ಷಃ" ಶಂಕರಾಚಾರ್ಯರು.

## ಅದ್ವೈತ ತತ್ತ್ವ ವಿಕಾಸ

### ಬಾದರಾಯಣ (ಕ್ರಿ. ಶ. ೪೦೦ ?) —ಬ್ರಹ್ಮಸೂತ್ರ:

ಭಾರತೀಯ ವೇದಾಂತ ಪ್ರಸ್ಥಾನಗಳಲ್ಲಿ ಉಪನಿಷತ್ತು, ಗೀತೆಗಳಂತೆ ಪರಮ ಪ್ರಾಮಾಣ್ಯವಿರುವ ಮೂರನೆಯ ಪ್ರಸ್ಥಾನವೇ ಬ್ರಹ್ಮಸೂತ್ರ ಪ್ರಸ್ಥಾನ. "ಬ್ರಹ್ಮಸೂತ್ರ ಪದೈಶ್ಚಾಪಿ ಹೇತುಮದ್ಭಿರ್ವಿನಿಶ್ಚಿತೈಃ" ಎಂದು ಹೆಸರಿಸಿರುವುದು ಈ ಬ್ರಹ್ಮಸೂತ್ರಗಳನ್ನೇ ಎಂದೂ, ಆದ್ದರಿಂದ ಅದು ಗೀತೆಗಿಂತ ಪ್ರಾಚೀನವೆಂದೂ ಎಸ್. ಎನ್. ದಾಸಗುಪ್ತ ಮುಂತಾದವರು ವಾದಿಸುತ್ತಾರೆ. ಆದರೆ ಬೆಲವಲಕರ್ ಮುಂತಾದವರು ಅದು ಸಾಮಾನ್ಯವಾಗಿ ಔಪನಿಷದ ದರ್ಶನದ ಉಲ್ಲೇಖವೆಂದಷ್ಟೇ, ಭಾವಿಸುತ್ತಾರೆ. ಗೀತೆಯ ಅನಂತರ ಬಂದ ಬೌದ್ಧರ ಶೂನ್ಯವಾದ ವಿಜ್ಞಾನವಾದದ ಉಲ್ಲೇಖಗಳನ್ನು 'ಪೀಠಿಕೆ' ಯಲ್ಲಿ ವಿವರಿಸಿದಂತೆ ಕಡೆಗಣಿಸುವುದು ಸಾಧ್ಯವಿಲ್ಲ.

ಉಪನಿಷದ್ವಾಕ್ಯಗಳಲ್ಲಿ ಮೇಲ್ನೋಟಕ್ಕೆ ಕಾಣಸುವ ವಿರೋಧಗಳನ್ನೆಲ್ಲ ಪರಿಹರಿಸಿ, ಸಮನ್ವಯಮಾಡಿ ತತ್ತ್ವನಿರ್ಣಯ ಮಾಡುವ ವ್ಯವಸ್ಥಿತ ಕಾರ್ಯ ಈ ಬ್ರಹ್ಮಸೂತ್ರಕಾರರದು. ಅವರನ್ನು ಮುಂದಿನವರು ವೇದವ್ಯಾಸರೇ ಎಂದರೂ ಶಂಕರಾಚಾರ್ಯರು ಬಾದರಾಯಣರೆಂದೇ ವ್ಯವಹರಿಸಿರುವುದರಿಂದ ಬ್ರಹ್ಮಸೂತ್ರಕಾರರನ್ನು ವೇದವ್ಯಾಸರೆನ್ನುವುದಕ್ಕಿಂತ ಬಾದರಾಯಣರೆಂದೇ ಇಂದಿನ ವಿದ್ವಾಂಸರೂ ಹೆಚ್ಚಾಗಿ ವ್ಯವಹರಿಸುತ್ತಾರೆ. ವೇದಾಂತವೊಂದು ಮಾನ್ಯದರ್ಶನವೆನಿಸಿದ್ದೇ ಬ್ರಹ್ಮಸೂತ್ರದ ರಚನೆಯಿಂದ. ಅಲ್ಲದೆ ಕಾಲಾಂತರಗಳಲ್ಲಿ ಅನೇಕ ಮಹಾತ್ಮರಿಂದ ಹತ್ತಾರು ಭಾಷ್ಯಗಳ ರಚನೆಗೂ ಅದೇ ಮೂಲವಾಯಿತು.

ಅದ್ವೈತಪರಂಪರೆಯಂತೆ ಸರ್ವಉಪನಿಷದ್ವಾಕ್ಯಗಳಿಗೂ ಮುಖ್ಯವಾಗಿ ಇಲ್ಲವೇ ಗೌಣವಾಗಿ ಅದ್ವಿತೀಯ ಬ್ರಹ್ಮನಲ್ಲಿ ಮಾತ್ರ ತಾತ್ಪರ್ಯ, ಬ್ರಹ್ಮಸೂತ್ರದ ನಾಲ್ಕು ಅಧ್ಯಾಯಗಳನ್ನು

ಕ್ರಮವಾಗಿ 'ಸಮನ್ವಯ', 'ಅವಿರೋಧ', "ಸಾಧನ" "ಫಲ" ಎಂದು ವಿಭಾಗಿಸಲಾಗುತ್ತದೆ. ಸ್ಪಷ್ಟ ಬ್ರಹ್ಮಲಿಂಗವಾಕ್ಯಗಳು, ಅಸ್ಪಷ್ಟ ಬ್ರಹ್ಮಲಿಂಗ ವಾಕ್ಯಗಳು, ಬ್ರಹ್ಮಲಿಂಗಯುಕ್ತವಾದ ಉಪಾಸ್ಯಬ್ರಹ್ಮವಿಷಯಕ ವಾಕ್ಯಗಳು, ಸಂದಿಗ್ಧ + ಅವ್ಯಕ್ತಾದಿ ಪದಗಳು–ಇವುಗಳ ಸಮನ್ವಯವೇ ಮೊದಲ ಅಧ್ಯಾಯದ ವಿಷಯ. ಈ ಸಮನ್ವಯಕ್ಕೆ ಸ್ಮೃತಿತರ್ಕಾದಿವಿರೋಧಗಳ ಶಂಕಾಪರಿಹಾರ, ಸಾಂಖ್ಯಾದಿ ದರ್ಶನಾಂತರಗಳ ವಿರೋಧಪರಿಹಾರ, ಸೃಷ್ಟ್ಯಾದಿಶ್ರುತಿಗಳ ಮತ್ತು ಜೀವ ವಿಷಯಕ ಶ್ರುತಿಗಳ ಪರಸ್ಪರ, ವಿರೋಧ ಪರಿಹಾರ, ಇಂದ್ರಿಯಾದಿ ವಿಷಯ ಶ್ರುತಿಗಳ ವಿರೋಧಪ್ರತಿಕ್ಷೇಪ–ಇದು ಎರಡನೆಯ ಅಧ್ಯಾಯದ ವಿಷಯ ಜೀವನ ಪರಲೋಕ ಗಮನ, ವೈರಾಗ್ಯ, ತತ್–ತ್ವಂ ಪದಾರ್ಥಶೋಧನ, ನಿರ್ಗುಣಬ್ರಹ್ಮನಲ್ಲಿ ನಾನಾಶಾಖಾಪಠಿತ ಪುನರುಕ್ತದೋಷದ ಪರಿಹಾರ, ಸಗುಣ ವಿದ್ಯೆಗಳಲ್ಲಿ ಗುಣೋಪಸಂಹಾರ ಹಾಗೂ ಅನುಪ ಸಂಹಾರಗಳು ; ನಿರ್ಗುಣ ಬ್ರಹ್ಮವಿದ್ಯೆಯ ಬಹಿರಂಗ ಸಾಧನಗಳಾದ ಆಶ್ರಮಧರ್ಮ ಯಜ್ಞದಾನಾದಿಗಳು ಮತ್ತು ಅಂತರಂಗ ಸಾಧನಗಳಾದ ಶಮದಮನಿದಿಧ್ಯಾಸನಾದಿಗಳ ವಿವರಣೆ ಮೂರನೆಯ ಅಧ್ಯಾಯದ ವಿಷಯ. ನಾಲ್ಕನೆಯ ಫಲಾಧ್ಯಾಯದಲ್ಲಿ ಶ್ರವಣಾದಿಗಳಿಂದ ನಿರ್ಗುಣಬ್ರಹ್ಮವನ್ನು ಇಲ್ಲವೆ ಉಪಾಸನೆಗಳಿಂದ ಸಗುಣ ಬ್ರಹ್ಮವನ್ನು ಸಾಕ್ಷಾತ್ಕರಿಸಿದ ಜೀವನ್ಮುಕ್ತನ ವರ್ಣನೆ ಬರುತ್ತದೆ. ಮರಣಾನಂತರದ ಉತ್ಕ್ರಾಂತಿಯ ಚಿಂತನೆಯೂ ಬರುತ್ತದೆ.

ಭಾಷ್ಯಸಹಾಯವಿಲ್ಲದೆ ಬಾದರಾಯಣರ ಸೂತ್ರಗಳನ್ನು ಅರ್ಥ ಮಾಡುವುದು ಕಷ್ಟ. ಮೊತ್ತಮೊದಲಿಗೆ ಅರ್ಥಗರ್ಭಿತವೂ ಸಾರವತ್ತೂ ವಿಶ್ವತೋಮುಖವೂ ಆದ ವೇದಾಂತ ಸೂತ್ರ ರಚನೆ ಮಾಡಿದ ಋಷಿ ಬಾದರಾಯಣರಿಗೆ ಮುಂದಿನವರು ನಮಸ್ಕರಿಸುವುದು ಯೋಗ್ಯವೇ ಆಗಿದೆ :—

"ನಮಃ ಶ್ರುತಿಶಿರಃಪದ್ಮಷಂಡಮಾರ್ತಾಂಡ ಮೂರ್ತಯೇ ।
ಬಾದರಾಯಣಸಂಜ್ಞಾಯ ಮುನಯೇ ಶಮವೇಶ್ಮನೇ" ॥

"ವೇದಾಂತದರ್ಶನಂ ದರ್ಶನೇಷು ಸರ್ವೇಷು ದರ್ಶನೀಯತಮಂ ದರ್ಶನಮ್" ಎಂದೂ, "ತಾವದ್ಗರ್ಜಂತಿ ಶಾಸ್ತ್ರಾಣಿ ಯಾವದ್ವೇದಾಂತಕೇಸರೀ..." ಎಂದೂ ಈ ದರ್ಶನಕ್ಕೆ ಪ್ರತಿಷ್ಠೆಯನ್ನು ಗಳಿಸಿಕೊಟ್ಟವರಲ್ಲಿ ಬಾದರಾಯಣರು ಅಗ್ರಗಣ್ಯರು.

## ಗೌಡಪಾದ (ಸು. ಕ್ರಿ. ಶ. ೬೦೦) —ಮಾಂಡೂಕ್ಯೋಪನಿಷತ್ಕಾರಿಕೆ

ಔಪನಿಷದ ದರ್ಶನವೆಂದರೆ ಪ್ರಾಚೀನ ಕಾಲದಿಂದಲೂ ಅದ್ವೈತ ದರ್ಶನವೇ ಎಂಬ ಏಕಾಭಿಪ್ರಾಯವಿದ್ದುದನ್ನು ಬೌದ್ಧ, ಜೈನ, ದಾರ್ಶನಿಕರ ಪೂರ್ವಪಕ್ಷಗಳ ಸರಣಿಯು ಮೇಲಿಂದ ಇದೇ ಶತಮಾನದಲ್ಲಿ ಹಜಿಮೆ ನಕಮುರಾ ಎಂಬ ಜಪಾನಿ ವಿದ್ವಾಂಸರು

(ಟೋಕಿಯೋ ವಿಶ್ವ ವಿದ್ಯಾಲಯದ ಸಂಸ್ಕೃತ ಪ್ರಾಧ್ಯಾಪಕರು) ಸಂಶೋಧಿಸಿದ್ದಾರೆ.[1] ಬಾದರಾಯಣರ ಸೂತ್ರಗಳಿಗೆ ಶಂಕರಾಚಾರ್ಯರ ಪೂರ್ವದ ಅದ್ವೈತಪರ ವಿವರಣೆಗಳ ನಿರ್ದೇಶ ನಮಗೆ ಉಪಲಬ್ಧವಿಲ್ಲ ಟಂಕ ದ್ರಮಿಡಾದಿ ಭೇದಾಭೇದ ವಿವರಣೆಗಳು ಇದ್ದುವೆಂಬ ನಿರ್ದೇಶಗಳು ದೊರೆತಿವೆ, ಎಂದಿಷ್ಟರ ಮೇಲಿಂದಲೇ ಬಾದರಾಯಣರು ಭೇದಾಭೇದವಾದಿಗಳು ಎಂಬ ತೀರ್ಮಾನಕ್ಕೆ ಹಾರುವುದು ಸಮುಚಿತವಾಗದು. ಹೇಗೇ ಇರಲಿ, ಔಪನಿಷದ ತತ್ತ್ವವೆಂದರೆ ಬ್ರಹ್ಮಾದ್ವೈತವೊಂದೇ ಎಂದು ನಿಸ್ಸಂಶಯವಾಗಿ, ಖಚಿತವಾಗಿ, ಪದ್ಯಮಯವಾದ ಕಾರಿಕೆಗಳಲ್ಲಿ ಸ್ಥಾಪಿಸಿದ ಕೀರ್ತಿ ಗೌಡಪಾದರದು.

ಶಂಕರಾಚಾರ್ಯರು ತಮ್ಮ ಪರಮಗುರುಗಳೆಂದು ಗೌಡಪಾದರಿಗೆ ನಮಿಸಿದ್ದಾರೆ. "ಯಸ್ತಂ ಪೂಜ್ಯಾಭಿಪೂಜ್ಯಂ ಪರಮಗುರುಮಮುಂ ಪಾದಪಾತೈರ್ನತೋಽಸ್ಮಿ" (ಮಾಂಡೂಕ್ಯೋಪನಿಷತ್ಕಾರಿಕಾಭಾಷ್ಯ, ಚರಮಶ್ಲೋಕ). ಶಂಕರಾಚಾರ್ಯರ ಶಿಷ್ಯರಾದ ಸುರೇಶ್ವರರೂ ಗೌಡಪಾದರನ್ನು "ಏವಂ ಗೌಡೈರ್ದ್ರಾವಿಡೈರ್ನಃ ಪೂಜ್ಯೈರರ್ಥಃ ಪ್ರಭಾಷಿತಃ" ಎಂದು ಗೌರವಿಸಿದ್ದಾರೆ. ಸೂತ್ರಭಾಷ್ಯದಲ್ಲಿ (೧. ೪. ೧೪ ; ೨. ೧. ೯) ಶಂಕರರು ಗೌಡಪಾದರನ್ನು "ಸಂಪ್ರದಾಯವೇತ್ತೃ"ರೆಂದು ಉಲ್ಲೇಖಿಸಿದ್ದಾರೆ.

ಗೌಡಪಾದರ ಕಾರಿಕೆಗಳು ಮಾಂಡೂಕ್ಯೋಪನಿಷತ್ತಿನ ವಿವರಣೆಗೆಂದು ಪ್ರವೃತ್ತವಾಗಿದ್ದರೂ ಅವು ಸ್ವತಂತ್ರ ಕೃತಿಯೆನಿಸುವಷ್ಟು ವೈಶಿಷ್ಟ್ಯಪೂರ್ಣವಾಗಿವೆ. ಅವಕ್ಕೆ, 'ಆಗಮಶಾಸ್ತ್ರ'ವೆಂದೂ ಹೆಸರಿದೆ. ಈ ವೇಳೆಗೆ ಮಹಾವೈಯಾಕರಣಿ ಭರ್ತೃಹರಿಯ ಶಬ್ದಾದ್ವೈತವೂ ರಚಿತವಾಗಿತ್ತೆಂದೂ ತೋರಿಬರುತ್ತದೆ. ಅದ್ವೈತವಾದದ ವಿಕಾಸದಲ್ಲಿ ಭರ್ತೃಹರಿಯ ವಾಕ್ಯಪದೀಯಕ್ಕೂ ಮಾನ್ಯತೆ ಸಲ್ಲಬೇಕು.

ಗೌಡಪಾದರು ಮಾಂಡೂಕ್ಯದಂತೆ ಛಾಂದೋಗ್ಯ, ಬೃಹದಾರಣ್ಯಕಾದಿ ಉಪನಿಷತ್ತುಗಳಲ್ಲೂ ಸ್ಪಷ್ಟವಿರುವ ಅದ್ವೈತತತ್ತ್ವವನ್ನು ನಾಲ್ಕು ಅಧ್ಯಾಯಗಳಲ್ಲಿ-(೧) ಆಗಮ (೨) ವೈತಥ್ಯ (೩) ಅದ್ವೈತ (೪) ಅಲಾತಶಾಂತಿ-ವಿವರಿಸಿದ್ದಾರೆ. ಮೊದಲನೆಯದರಲ್ಲಿ ಮಾಂಡೂಕ್ಯೋಕ್ತ ಪ್ರಣವೋಪಾಸನೆಯ ವಿವರಣ ಇದೆ. ಅವಸ್ಥಾತ್ರಯಗಳಲ್ಲಿ ವಿಶ್ವ, ತೈಜಸ, ಪ್ರಾಜ್ಞ ಎಂಬ ಜೀವತ್ರಯವಿಭಾಗ, ಸೃಷ್ಟಿವಾದಗಳ ವಿಮರ್ಶೆ, ಪಾರಮಾರ್ಥಿಕವಾದ "ಶಾಂತ, ಶಿವ, ಅದ್ವೈತ" ನಿರ್ದೇಶನಗಳೂ ಇವೆ. ಎರಡನೆಯದರಲ್ಲಿ ಜಗತ್ತೆಲ್ಲಾ ಸ್ವಪ್ನೋಪಮ, ಮಿಥ್ಯೆ ; ಪ್ರಪಂಚೋಪಶಮವೇ ಅದ್ವೈತವೆಂಬ ತೀರ್ಮಾನವಿದೆ. ಮೂರನೆಯದರಲ್ಲಿ "ಮಾಯಾಮಾತ್ರಮಿದಂ" ದ್ವೈತಮದ್ವೈತಂ ಪರಮಾರ್ಥತಃ' ೧.೧೭) ಎಂಬುದನ್ನು ಸಮರ್ಥಿಸಲಾಗಿದೆ. ಕಡೆಯದರಲ್ಲಿ

1. Pratidanani, Mouton ; 1968, p. 513 of ಮತ್ತು Harvard Journal of Asiatic studies vol xiii 1955, pp. 74–104.

ಪತಸ್ತೋತ್ರಭಾಷ್ಯೆಯ ವರ್ಣನೆ ಬರುತ್ತವೆ. ಕಾರಣವಾದಗಳನ್ನೆಲ್ಲ ತಾತ್ತ್ವಿಕ ದೃಷ್ಟಿಯಿಂದ ಖಂಡಿಸಿ, ಶೂನ್ಯವಾದಿಗಳ ಸರಣಿಯಿಂದಲೇ "ಅಜಾತಿವಾದ"ವನ್ನು ಮಂಡಿಸಲಾಗಿದೆ. ಸ್ವಯಂಪ್ರಕಾಶ ಜ್ಞಾನವು ಜ್ಞಾತೃ-ಜ್ಞಾನ-ಜ್ಞೇಯಗಳೆಂಬ ತ್ರಿಪುಟಿಯ ಮೇರೆಯನ್ನು ಮೀರಿದ್ದೆನ್ನಲಾಗಿದೆ. ಜಗತ್ತಿನ ದ್ವೈತಜಾಲವೆಲ್ಲ ಮಾಯಾಕಲ್ಪಿತ. ಸದಸದನಿರ್ವಚನೀಯ. ಉರಿಯುವ ಪಂಜ ಚಲಿಸುವಾಗ ಚಕ್ರಭ್ರಮೆಯನ್ನು ಉಂಟುಮಾಡುತ್ತದೆ. ಆದರೆ ಭ್ರಮೆಗೆ ಅಧಿಷ್ಠಾನವೇ ಇಲ್ಲ ; ಅದು ಬರಿಯ ತೋರಿಕೆ ಮಾತ್ರ ಎಂದು ಪ್ರತಿಪಾದಿಸಲಾಗಿದೆ.

ಗೌಡಪಾದರು ಬೌದ್ಧರ ಶೂನ್ಯವಾದ ಹಾಗೂ ವಿಜ್ಞಾನವಾದ ಗ್ರಂಥಗಳನ್ನು ಓದಿ ಸಾಂವೃತಸತ್ಯ- ಪಾರಮಾರ್ಥಿಕ ಸತ್ಯ, ಅಜಾತಿವಾದ, ವ್ಯಾವಹಾರಿಕಪರಿಕಲ್ಪಿತ- ಅಥವಾ ಪ್ರಾತಿಭಾಸಿಕ, ಬಾಹ್ಯಾರ್ಥಶೂನ್ಯತಾ, ಮಾಯಾ ಇವೇ ಮುಂತಾದ ಕಲ್ಪನೆಗಳನ್ನೂ, ಇತರ ವಾದಖಂಡನ ತರ್ಕಗಳನ್ನೂ ಹೇಳುವಲ್ಲಿ ಬೌದ್ಧರಿಂದ ಪ್ರಭಾವಿತವಾಗಿರುವುದು ಸ್ಪಷ್ಟ. ಆದರೆ ಸಚ್ಚಿದಾನಂದಸ್ವರೂಪವಾದ ಬ್ರಹ್ಮಾದ್ವೈತದ, ಔಪನಿಷದ ಸಿದ್ಧಾಂತದ, ಅವರ ಸಮರ್ಥನೆಯೂ ಅಷ್ಟೇ ಗಮನಾರ್ಹವಾಗಿದೆ. (ಅವರನ್ನು ಪ್ರಚ್ಛನ್ನ ಬೌದ್ಧರೆನ್ನುವುದು ಯುಕ್ತವಲ್ಲ ; ಕೆಲವು ಬೌದ್ಧರೇ ಪ್ರಚ್ಛನ್ನ ಔಪನಿಷದರು ಎಂದು ಹೇಳಬೇಕಾಗುತ್ತದೆ. "ನೈತದ್ಬುದ್ಧೇನ ಭಾಷಿತಮ್" ಎಂದು ಅವರೇ ತಿಳಿಸುವಂತೆ "ಅಸ್ಪರ್ಶಯೋಗ"ದ ಪ್ರಕ್ರಿಯೆ ಗೌಡಪಾದರ ಚಿಂತನಾಫಲವೇ ಆಗಿದೆ. ಎಲ್ಲ ದ್ವೈತವಿರೋಧಿಗಳೂ ಉಪಶಮನಹೊಂದುವ ಪರಮಾದ್ವೈತತತ್ತ್ವದ ನೆಲೆ ಗೌಡಪಾದರದು.

ಸ್ವಸಿದ್ಧಾಂತವ್ಯವಸ್ಥಾಸು ದ್ವೈತಿನೋ ನಿಶ್ಚಿತಾ ದೃಢಮ್ ।
ಪರಸ್ಪರಂ ವಿರುಧ್ಯನ್ತೇ ತೈರಯಂ ನ ವಿರುಧ್ಯತೇ (೩. ೭)

## ಶಂಕರಾಚಾರ್ಯರು (ಕ್ರಿ.ಶ. ೭೮೮—೮೨೦)

ಭಾರತೀಯರು ಭಗವತ್ಪಾದರೆಂದೂ ಜಗದ್ಗುರುಗಳೆಂದೂ, ಸಾಕ್ಷಾತ್ ಶಂಕರನ ಅವತಾರವೆಂದೂ ಇಂದಿಗೂ ಗೌರವಿಸುವುದಿರಲಿ, ಡಾಯ್ಸನ್ ಮುಂತಾದ ಜರ್ಮನ್ ಪಂಡಿತರಿಂದ ಕೂಡ "ಜಗತ್ತಿನಲ್ಲೇ ಅತ್ಯಂತ ಮೇಲ್ಮಟ್ಟದ ತತ್ತ್ವಜ್ಞಾನಿ" ಎಂಬ ವರ್ಣನೆಗೆ ಪಾತ್ರರಾಗಿರುವವರು ಶಂಕರಾಚಾರ್ಯರು. ಇವರು ಪ್ರಸ್ಥಾನತ್ರಯಕ್ಕೂ ಆಧಾರಭೂತವಾಗಿರುವ ಭಾಷ್ಯಗಳ ರಚನೆ ಮಾಡಿದ ಮಹನೀಯರು. ಇವರನ್ನು ಕುರಿತು ಆನಂದಗಿರಿ, ಮಾಧವ, ಮುಂತಾದವರು ರಚಿಸಿರುವ ಹತ್ತಾರು 'ಶಂಕರ ವಿಜಯ' ಗ್ರಂಥಗಳಿದ್ದರೂ, ಅವುಗಳಲ್ಲಿ ಅನೈತಿಹಾಸಿಕ ಹಾಗೂ ಪೌರಾಣಿಕಾಂಶಗಳೇ ಹೆಚ್ಚಾಗಿವೆ. ಇಲ್ಲಿಂದ ದೂರಪ್ರಾಚ್ಯದೇಶಕ್ಕೆ ವಲಸೆ ಹೋದ ಪೂರ್ಣವರ್ಮನೆಂಬ ರಾಜನ ಕಾಲದಲ್ಲಿ ಸಂಸ್ಕೃತ ಶಾಸನವೊಂದು ದೊರೆತಿದ್ದು, ಅದರ ಲೇಖಕನು (ಕಾಲ ಕ್ರಿ.ಶ. ೯ನೆಯ ಶತಮಾನ) "ಲಬ್ಧಾಧೀತಶಾಸ್ತ್ರಂ ಶಂಕರಾಖ್ಯಾತ್

ಗುರೋರ್ಲೋಕೈಕಪೂಜಿತಾತ್" ಎಂದಿರುವುದರಿಂದ ಅವರ ಕಾಲದ ಕೆಳಮಿತಿ ಸಿದ್ಧವಾಗುತ್ತದೆ. ಅವನು ಸಾಕ್ಷಾತ್ ಶಿಷ್ಯನಾಗಿದ್ದನೆನಿಸುವುದರಿಂದ ಕಾಲದ ಮೇಲ್ಮಿತಿಯೂ ಸಿದ್ಧವಾಗುತ್ತದೆ. ಮಠಾಮ್ನಾಯಗಳ ಉಲ್ಲೇಖಗಳು ಪರಸ್ಪರ ವಿರೋಧಗಳಿಂದ ತುಂಬಿರುವುದರಿಂದ ಕಾಲ ನಿರ್ಣಯಕ್ಕೆ ಸಹಾಯಕವಾಗುವುದಿಲ್ಲ.

"ಅಷ್ಟವರ್ಷೇ ಚತುರ್ವೇದೀ ದ್ವಾದಶೇ ಸರ್ವಶಾಸ್ತ್ರವಿತ್ ।
ಷೋಡಶೇ ಕೃತವಾನ್ ಭಾಷ್ಯಂ ದ್ವಾತ್ರಿಂಶೇ ಮುನಿರಭ್ಯಗಾತ್ ॥

ಎಂಬ ಐತಿಹ್ಯವನ್ನು ಸಾಧಾರವೆಂದು ಭಾವಿಸಿ, ಪಂಡಿತರು ಶಂಕರಾಚಾರ್ಯರ ಕಾಲವನ್ನು ಕ್ರಿ.ಶ. ೭೮೮–೮೨೦ ಎಂದು ಬಹುಮತದಿಂದ ಅಂಗೀಕರಿಸುತ್ತಿದ್ದಾರೆ. ಬ್ರಹ್ಮಚರ್ಯದಿಂದಲೇ ಸಂನ್ಯಾಸಾಶ್ರಮ ಸ್ವೀಕರಿಸಿ, ಭಾರತದ ನಾಲ್ಕು ದಿಕ್ಕುಗಳಲ್ಲಿಯೂ ಸಂಚಾರ ಮಾಡಿ, ವಾದಿಗಳನ್ನು ಜಯಿಸಿ, ಬೌದ್ಧಾದಿಗಳನ್ನು ತಲೆಯೆತ್ತದಂತೆ ಖಂಡಿಸಿ, ಅದ್ವೈತತತ್ತ್ವದ ಭದ್ರಬುನಾದಿಯನ್ನು ನಿರ್ಮಿಸಿ, ಅದರ ಪ್ರಚಾರಾರ್ಥವಾಗಿ ಮಠಗಳನ್ನು ಸಂಸ್ಥಾಪಿಸಿ, ನಿತ್ಯಾಚರಣೆಗೆ ಉಪಯುಕ್ತವಾಗುವಂತೆ ಷಣ್ಮತಗಳ ಸಮನ್ವಯ ಕಲ್ಪಿಸಿದ ಮಹಾತ್ಮರು ಅವರು.

ಭಗವತ್ಪಾದರ ಶಾಸ್ತ್ರವೈದುಷ್ಯ, ಕಾವ್ಯನೈಪುಣ್ಯ, ಭಕ್ತಿವೈರಾಗ್ಯ ಸಂಪನ್ನತೆ, ಆತ್ಮಾನುಭವದ ಅನಂತಾನಂದ, ಭಾಷೆಯ ಪ್ರಸನ್ನಗಾಂಭೀರ್ಯ, ಜ್ಞಾನನಿಷ್ಠೆ—ಇವನ್ನು ಪ್ರಶಂಸಿಸದವರೇ ಇಲ್ಲ. ಒಂದು ಉದಾಹರಣೆ :—

ವಕ್ತಾರಮಾಸಾದ್ಯ ಯಮೇವ ನಿತ್ಯಾ ಸರಸ್ವತೀ ಸ್ವಾರ್ಥಸಮನ್ವಿತಾಸೀತ್ ।
ನಿರಸ್ತದುಸ್ತರ್ಕಕಲಂಕಪಂಕಾ ನಮಾಮಿ ತಂ ಶಂಕರಮರ್ಚಿತಾಂಘ್ರಿಮ್ ॥
(ಸಂಕ್ಷೇಪಶಾರೀರಕ, ೧. ೭)

ಸರಸ್ವತೀ ಅಥವಾ ವೇದಾಂತವಾಣಿ ಮಾನವರಿಗೆ ನಿತ್ಯನಿರಂತರ ಮೋಕ್ಷಾನಂದವನ್ನು ಕರುಣಿಸುವಂತಾದುದು ಶಂಕರಾಚಾರ್ಯರ ಭಾಷ್ಯದಿಂದಲೇ ಎಂದು ಇದರ ತಾತ್ಪರ್ಯ[1]. ಭಾಷ್ಯಕ್ಕೆ ಸೂತ್ರಕ್ಕಿಂತಲೂ ಹೆಚ್ಚಿನ ಬೆಲೆ. ಏಕೆಂದರೆ—

ಸೂತ್ರವಿದ್ದರೂ ಸಕಲಾರ್ಥಗಳನ್ನು ಕೂಡಿಸಿ ಪೋಣಿಸಿದ ವ್ಯಾಸರನ್ನು ಹೊಗಳಲೇಕೆ ? ಸೂತ್ರವಿಲ್ಲದೆಯೇ ಸಕಲಾರ್ಥವನ್ನು ಗ್ರಂಥದಲ್ಲಿ ಅಳವಡಿಸಿದ ಶಂಕರ, ಸುರೇಶ್ವರರನ್ನು ನುತಿಸಬೇಕು ಎಂದು ಆಲಂಕಾರಿಕವಾಗಿ ಮಧುಸೂದನ ಸರಸ್ವತಿಗಳು ಉದ್ಗರಿಸುತ್ತಾರೆ—

---

೧. ಶ್ರೀಮದ್ಭಗವತ್ಪೂಜ್ಯಪಾದೈಸ್ತು ವ್ಯಾವಹಾರಿಕತ್ವೇನ ಕರ್ಮಕಾಂಡ ಪ್ರಾಮಾಣ್ಯ ಪ್ರವೃತ್ತ್ಯಾದಿ ವ್ಯವಸ್ಥಾಪ್ಯ ವೇದಾಂತಾನಾಂ ತಾತ್ತ್ವಿಕಶುದ್ಧಾದ್ವೈತಪರತ್ವಂ ವ್ಯವಸ್ಥಾಪಿತಮಿತಿ ಸ್ವಾರ್ಥಸಮನ್ವಿತತ್ವಂ ಕೃತ್ಸ್ನವೇದಸ್ಯ ಸಂಪನ್ನಮಿತಿ ಮಹಿಮಾತಿಶಯಂ ದರ್ಶಯಿತುಂ ಯಮೇವೇತ್ಯೇಕಾರಃ ಪ್ರಯುಕ್ತಃ, ಮಧುಸೂದನಸರಸ್ವತಿ.

ನ ಸ್ತೌಮಿ ತಂ ವ್ಯಾಸಮಶೇಷಮರ್ಥಂ ಸಮ್ಯೆಜ್ಞ ಸೂತ್ರೈರಪಿ ಯೋ ಬಬಂಧ ।
ವಿನಾಪಿ ತೈಃ ಸಂಗ್ರಥಿತಾಖಿಲಾರ್ಥಂ ತಂ ಶಂಕರಂ ನೌಮಿ ಸುರೇಶ್ವರಂ ಚ ॥

(ಸಿದ್ಧಾಂತತತ್ತ್ವ ಬಿಂದು)

ಈ ಪ್ರಶಂಸೆಗಳು ಅತಿಶಯೋಕ್ತಿಗಳಲ್ಲ. ಏಕೆಂದರೆ ಪ್ರಸ್ಥಾನತ್ರಯಂಗಳಿಗೂ ಶಂಕರಾಚಾರ್ಯರು ಅದ್ವೈತಪರ ಭಾಷ್ಯರಚನೆ ಮಾಡುವವರೆಗೆ ಪೂರ್ವಮೀಮಾಂಸಾದಿ ದರ್ಶನಗಳ ಪ್ರಭಾವವೇ ಹೆಚ್ಚಾಗಿತ್ತು. ಜೀವನದಲ್ಲಿ ಧರ್ಮಸಾಧನೆಗೆ ವೇದೋಕ್ತ ವಿಹಿತ ಕರ್ಮಾಚರಣೆ ಪರಮಮುಖ್ಯವೆಂಬ ಭಾವನೆ ಜನರಲ್ಲಿ ಬೇರೂರಿತ್ತು. ತಾತ್ತ್ವಿಕವಿಚಾರಕ್ಕಾಗಲಿ, ಔಪನಿಷದ ತತ್ತ್ವಜ್ಞಾನದ ಸಾಕ್ಷಾತ್ಕಾರಕ್ಕಾಗಲಿ ಪ್ರಾಶಸ್ತ್ಯವಿರಲಿಲ್ಲ. ಇದನ್ನು ತಪ್ಪಿಸಿ, ಜ್ಞಾನನಿಷ್ಠೆಗೆ ಕರ್ಮನಿಷ್ಠೆಯೊಂದೇ ಪ್ರಯೋಜಕವೆಂಬ ಭಾವನೆಯನ್ನು ಸಡಿಲಿಸಿ, ಜ್ಞಾನ ಕರ್ಮ ಸಮುಚ್ಚಯವಾದವನ್ನು (ಅವರ ಪೂರ್ವದಲ್ಲಿ ಸೂತ್ರಗಳಿಗೆ ವಿವರಣೆ ಮಾಡಿದ ಬ್ರಹ್ಮದತ್ತ, ಭರ್ತೃ-ಪ್ರಪಂಚ ಮುಂತಾದವರ ಸಿದ್ಧಾಂತವಿದು) ಮೊದಲು ಖಂಡಿಸಿದವರೇ ಶಂಕರಾಚಾರ್ಯರು ಹಾಗೆಯೇ ಮೋಕ್ಷವಿಚಾರದಲ್ಲಿ ಒಂದೊಂದು ದರ್ಶನವೂ ಒಂದೊಂದು ತೀರ್ಮಾನವನ್ನು ಹೇಳುತ್ತಿದ್ದಾಗ ಅದನ್ನೆಲ್ಲ ಕೂಲಂಕುಷವಾಗಿ ಔಪನಿಷದ ದೃಷ್ಟಿಯಿಂದ ವಿಮರ್ಶಿಸಿ ಇದವಿತ್ಥವೆಂದು ಎಲ್ಲರಿಗೂ ಮನರಿಕೆಯಾಗುವಂತೆ ಅವನ್ನು ನಿರಾಕರಿಸಿದವರೂ ಅವರೇ. ಸಕಲ ದರ್ಶನಗಳಲ್ಲೂ ವೇದಾಂತದರ್ಶನಕ್ಕೆ ಮೂರ್ಧನ್ಯತೆ ಬಂದಿರುವುದು ಅವರ ಸೂತ್ರಭಾಷ್ಯ ಅಥವಾ ಶಾರೀರಕಭಾಷ್ಯದಿಂದಲೇ. ಅವರದು ಶುದ್ಧ ವಿಚಾರಮಾರ್ಗ, ಅಲ್ಲಿ ಪ್ರಸಕ್ತಾನು ಪ್ರಸಕ್ತವಾದ ಉಪನಿಷದ್ವಾಕ್ಯಗಳನ್ನೆಲ್ಲ ಸಸಂದರ್ಭವಾಗಿ ವಿವರಿಸಿ ಬ್ರಹ್ಮಾದ್ವೈತವನ್ನು ಸಾಧಿಸಿದ್ದಾರೆ. ಆಪಾತತಃ ದ್ವೈತ, ವಿಶಿಷ್ಟಾದ್ವೈತಪರವೆನಿಸುವ ಶ್ರುತಿಗಳಿಗೂ 'ದ್ವಾಸುಪರ್ಣಾ'..., 'ಯಸ್ಯ ಪೃಥಿವೀ ಶರೀರಂ' ಇತ್ಯಾದಿ (ಋಗ್ವೇದ ೧. ೧೬೪. ೨೦ ಮಂತ್ರ, ಬೃ, ಉಪ. ೩. ೭. ೨-೩) ಸ್ವರಸವಾಗಿ ಅದ್ವೈತಪರ ವಿವಕ್ಷೆಯನ್ನು ವಿವರಿಸಿ ತೋರಿಸಿದ್ದಾರೆ. ಗೌಡಪಾದರಿಗಿಂತ ಒಂದು ಹೆಜ್ಜೆ ಮುಂದೆ ಹೋಗಿ 'ಅಧ್ಯಾಸ' ಸ್ವರೂಪವನ್ನೂ, ವಿವರ್ತಕಾರಣ ಪ್ರಕ್ರಿಯೆಯನ್ನೂ ಪರಿಷ್ಕರಿಸಿದ್ದಾರೆ. ಪ್ರಪಂಚವನ್ನು ಶಶವಿಷಾಣದಂತೆ ಅಸತ್ತೆನ್ನದೆ ವ್ಯಾವಹಾರಿಕ ಸತ್ಯವೆಂದು ಹೇಳುವಾಗ ನಕಾರಾತ್ಮಕ ಪ್ರಣಾಳಿಕೆಗಿಂತ ವಿಧೇಯಾತ್ಮಕ ಪ್ರಣಾಳಿಕೆಗೆ ಒತ್ತುಕೊಟ್ಟಿದ್ದಾರೆ. ನಿರ್ಗುಣ ಬ್ರಹ್ಮಸಾಕ್ಷಾತ್ಕಾರ ಬಹುಜನರ ಕೈಗೆ ಎಟುಕಲಾರದಿದ್ದರೂ, ಅವರವರ ಯೋಗ್ಯತಾನುಸಾರ ಅವರಿಗೆಟುಕುವಂತಹ ಸಗುಣಬ್ರಹ್ಮೋಪಾಸನೆಗಳಿಗೆ ಬಾಗಿಲನ್ನು ತೆರೆದಿಟ್ಟಿದ್ದಾರೆ. ಜೀವನ್ಮುಕ್ತಿಗಂತೂ ಉಪನಿಷದ್ವಾಕ್ಯಗಳ ಶ್ರವಣಾದಿಗಳು ಮಾತ್ರ ಪ್ರಯೋಜಕ ವೆಂಬುದನ್ನುಹೆಜ್ಜೆ ಹೆಜ್ಜೆಗೂ ತೋರಿಸಿದ್ದಾರೆ.

ಅದ್ವೈತ ಪ್ರತಿಷ್ಠಾಪನ-ಪರಮಾಚಾರ್ಯರೆನಿಸಲು ಶಂಕರಾಚಾರ್ಯರ ಭಾಷ್ಯಗಳೇ ಸಾಕಾಗಿದ್ದರೂ ಲೋಕಾನುಗ್ರಹದೃಷ್ಟಿಯಿಂದ ಪ್ರೇರಿತವಾಗಿ 'ಮೋಹಮುದ್ಗರ',

'ಭಜಗೋವಿಂದ,' 'ಹರಿಮೀಡೆ,' 'ದಕ್ಷಿಣಾಮೂರ್ತಿಸ್ತೋತ್ರ' ಮುಂತಾದ ಲಲಿತಸುಭಗ ಸ್ತೋತ್ರಗಳನ್ನೂ, ಮಂದಮತಿಗಳನ್ನು ಮುನ್ನಡೆಸಲು 'ವಿವೇಕಚೂಡಾಮಣಿ', 'ಉಪದೇಶಸಾಹಸ್ರೀ', 'ದಶಶ್ಲೋಕೀ', 'ಆತ್ಮಬೋಧ,' 'ಸ್ವಾತ್ಮನಿರೂಪಣ,' 'ಅಪರೋಕ್ಷಾನುಭೂತಿ, ಮುಂತಾದ ಲಘುಕೃತಿಗಳನ್ನೂ, ಸನತ್ಸುಜಾತೀಯ ಭಾಷ್ಯ : ವಿಷ್ಣುಸಹಸ್ರನಾಮ ಭಾಷ್ಯ ಮುಂತಾದ ವಿವರಣೆಗಳನ್ನೂ ಬರೆದಿದ್ದಾರೆ ಸೌಂದರ್ಯಲಹರೀ ಸ್ತೋತ್ರಕಾವ್ಯವು ತಾಂತ್ರಿಕ ಅಂಶಗಳನ್ನೂ ಒಳಗೊಂಡಿದ್ದು ಅವರ ಸಾಂಕೇತಿಕವಾದ ದೇವೀ-ಉಪಾಸನಾಭಿರುಚಿಯನ್ನು ಅಭಿವ್ಯಕ್ತಗೊಳಿಸುತ್ತದೆ. ಅವರ ಹೆಸರಿನಲ್ಲಿ ದೊರೆಯುವ ರಚನೆಗಳ ಸಂಖ್ಯೆ ನಾನೂರನ್ನು ಮೀರುತ್ತದೆ. ಆದಿಶಂಕರರು ಅವುಗಳಲ್ಲಿ ಹೆಚ್ಚಿನವನ್ನು ರಚಿಸಿರಲಾರರು ಪೂಜೆಗೆಲ್ಲ ಅವರು ಕೊಡುವ ಅದ್ವೈತಸಾಕ್ಷಾತ್ಕಾರದ ಸಾಂಕೇತಿಕತೆ ಮಾತ್ರ ಅವಿಸ್ಮರಣೀಯ. ಒಂದು ಉದಾಹರಣೆ—

"ಅಖಂಡೇ ಸಚ್ಚಿದಾನಂದೇ ನಿರ್ವಿಕಲ್ಪೈಕರೂಪಿಣಿ ।
ಸ್ಥಿತೇಽದ್ವಿತೀಯಭಾವೇಽಸ್ಮಿನ್ ಕಥಂ ಪೂಜಾ ವಿಧೀಯತೇ ॥...
ಆತ್ಮಾತ್ವಂ ಗಿರಿಜಾ ಮತಿಃ ಸಹಚರಾಃ ಪ್ರಾಣಾಃ ಶರೀರಂ ಗೃಹಂ
ಪೂಜಾ ತೇ ವಿವಿಧೋಪಚಾರರಚನಾ ನಿದ್ರಾ ಸಮಾಧಿಸ್ಥಿತಿಃ ।
ಸಂಚಾರಸ್ತು ಪದೋಃ ಪ್ರದಕ್ಷಿಣವಿಧಿಃ ಸ್ತೋತ್ರಾಣಿ ಸರ್ವಾ ಗಿರೋ
ಯದ್ಯತ್ಕರ್ಮ ಕರೋಮಿ ತತ್ತದಖಿಲಂ ಶಂಭೋ ತವಾರಾಧನಮ್ ॥"

ವೇದಾಂತಾರ್ಥ ಯಾವುದು, ಯಾವುದಲ್ಲವೆಂದರಿಯಲು ಶಂಕರಾಚಾರ್ಯರ ಗ್ರಂಥಗಳೇ ಪ್ರಮಾಣ

"ವೇದಾಂತಾರ್ಥತದಾಭಾಸಕ್ಷೀರನೀರವಿವೇಕಿನಮ್ ।
ನಮಾಮಿ ಭಗವತ್ಪಾದಂ ಪರಹಂಸಧುರಂಧರಮ್ ॥" (ಕಲ್ಪತರು)

## ಶಂಕರೋತ್ತರ—ಅದ್ವೈತ ಗ್ರಂಥಗಳು

ವಾಸಿಷ್ಠರಾಮಾಯಣ :— ಯೋಗವಾಸಿಷ್ಠವೆಂದೂ ಇದಕ್ಕೆ ನಾಮಾಂತರವಿದೆ. ಇದೊಂದು ಶಾಸ್ತ್ರಗರ್ಭವಾದ ಬೃಹತ್ಕಾವ್ಯ. ಆನಂದವರ್ಧನನು (ಕ್ರಿ. ಶ. ೮೫೦) ತನ್ನದೆನ್ನುವ "ಯಾ ವ್ಯಾಪಾರವತೀ ರಸಾನ್ರಸಯಿತುಂ ಕಾಚಿತ್ಕವೀನಾಂ ನವಾ" ಎಂಬ ಪದ್ಯವೂ ಇದರಲ್ಲಿ ಬರುವುದರಿಂದ ಇದು ೯ನೆಯ ಶತಮಾನಕ್ಕಿಂತ ಹಿಂದಿನದಾಗಿರಲಾರದು. ಸರ್ವಜ್ಞಾತ್ಮನ ಸಂಕ್ಷೇಪ ಶಾರೀರಕದಲ್ಲಿ (ಕ್ರಿ. ಶ. ೯೦೦) "ಸಂಕಲ್ಪಪೂರ್ವಕಮ ಭೂದ್ರಘುನಂದನಸ್ಯ ನಾಹಂ ವಿಜಾನ ಇತಿ ಕಂಚನ ಕಾಲಮೇತತ್ । ಬ್ರಹ್ಮೋಪದೇಶಮುಪಲಭ್ಯ ನಿಮಿತ್ತಮಾತ್ರಂ ತಚ್ಚೋತ್ಸಸರ್ಜ ಸ ಕೃತೇ ಸತಿ ದೇವಕಾರ್ಯೇ" ಎಂದು ಇದರ ಉಲ್ಲೇಖ ಬರುತ್ತದೆ. ಮುಂದೆ ವಿದ್ಯಾರಣ್ಯ, ಮಧುಸೂದನಸರಸ್ವತೀ ಮುಂತಾದವರೂ ಅದ್ವೈತತತ್ತ್ವಕ್ಕೆ ಇದೊಂದು ಆಕರ ಗ್ರಂಥವೆಂದು ಭಾವಿಸಿ ಯೋಗವಾಸಿಷ್ಠ ಶ್ಲೋಕಗಳನ್ನು ಉದಾಹರಿಸುವುದನ್ನು ಕಾಣುತ್ತೇವೆ.

ಈ ಬೃಹತ್ಕೃತಿಯಲ್ಲಿ ೨೭,೬೮೭ ಶ್ಲೋಕಗಳಿವೆ. ಬ್ರಹ್ಮವಿದ್ಯೆಯನ್ನು ಜನಪ್ರಿಯಗೊಳಿಸುವುದೇ ಗ್ರಂಥದ ಮುಖ್ಯ ಉದ್ದೇಶ. ಅನೇಕ ಉಪಾಖ್ಯಾನಗಳನ್ನೂ ನಿತ್ಯಜೀವನದ ದೃಷ್ಟಾಂತಗಳನ್ನೂ ಇಲ್ಲಿ ಬಳಸಿಕೊಳ್ಳಲಾಗಿದೆ. ಯಾವ ಶಾಸ್ತ್ರಾಧಾರಕ್ಕೂ ಮನಸ್ಸು ಮಾಡದೆ ಅನುಭವವನ್ನೇ ಮುಖ್ಯವನ್ನಾಗಿ ಇಲ್ಲಿ ಹೇಳಲಾಗಿದೆ. ಇದರಲ್ಲಿ 'ವೈರಾಗ್ಯ', 'ಮುಮುಕ್ಷು ವ್ಯವಹಾರ' 'ಉತ್ಪತ್ತಿ', 'ಸ್ಥಿತಿ.' 'ಉಪಶಮ' 'ನಿರ್ವಾಣ' ಎಂಬ ಆರು ಕಾಂಡಗಳಿವೆ. ಪ್ರಪಂಚವು ದುಃಖಮಯವಾಗಿರುವುದಕ್ಕೆ ಮನುಷ್ಯನು ಆತ್ಮಜ್ಞಾನ ಪಡೆಯದಿರುವುದೇ ಕಾರಣ ಇದಕ್ಕೆ ಜ್ಞಾನಮಾರ್ಗದಂತೆ ಯೋಗ ಅಥವಾ ಚಿತ್ತನಿರೋಧವೂ ಸಾಧಕ. ಅವರವರ ರುಚ್ಯನುಸಾರ ಸಾಧಕರು ಒಂದನ್ನು ಆಯ್ದುಕೊಳ್ಳುತ್ತಾರೆ. ಆಧ್ಯಾತ್ಮಿಕವಿಕಾಸದಲ್ಲಿ ಏಳು ಸ್ತರಗಳಿವೆ–ಜಿಜ್ಞಾಸೆಯಿಂದ ಹಿಡಿದು ಸಾಕ್ಷಾತ್ಕಾರದವರೆಗೆ. ಐದನೆಯದರವರೆಗೆ ಸಂಸಾರಿಯು ನಿತ್ಯ ಕರ್ಮಗಳಲ್ಲೂ ತೊಡಗಿಕೊಂಡಿರಬಹುದು; ಆದ್ದರಿಂದ ಜ್ಞಾನೋಪದೇಶವನ್ನೂ ಮಾಡಬಹುದು. ಆದರೆ ಆರನೆಯ ಸ್ತರದಲ್ಲಿ ಅವನಿಗೆ ವಿಷಯಜ್ಞಾನ ಇಲ್ಲವಾಗುತ್ತದೆ. ಏಳನೆಯದರಲ್ಲಿ ಶರೀರಾತ್ಮಗಳ ಬೆಸುಗೆಯೂ ತಪ್ಪುತ್ತದೆ, ಕರ್ಮಗಳೆಲ್ಲ ಧ್ವಂಸವಾಗುತ್ತವೆ ತನ್ನ ಜೀವಿತ ಹೋಗಿ ಬ್ರಹ್ಮತ್ವಪ್ರಾಪ್ತಿಯಾಗುತ್ತದೆ. ಇದು ಗ್ರಂಥದ ಸಂದೇಶಸಾರ.

ಗ್ರಂಥದಲ್ಲಿ ಬೌದ್ಧ, ಔಪನಿಷದ ಹಾಗೂ ಕಾಶ್ಮೀರ ಶೈವ ದರ್ಶನಗಳ ಒಂದು ವಿಚಿತ್ರ ರಸಪಾಕವಿದೆಯೆಂದು ವಿದ್ವಾಂಸರು ಭಾವಿಸುತ್ತಾರೆ. ಇದರ ಒಂದು ಸಂಗ್ರಹವೇ 'ಲಘುಯೋಗ ವಾಸಿಷ್ಠ'. ಈ ಸಂಗ್ರಹವನ್ನು ಕಾಶ್ಮೀರಕನಾದ ಗೌಡಅಭಿನಂದನೆಂಬಾತನು ಮಾಡಿದ್ದಾನೆ.

ಶಂಕರೋತ್ತರ ಅದ್ವೈತ–ವೇದಾಂತ ಸಾಹಿತ್ಯವು ಎಷ್ಟೊಂದು ವಿಸ್ತಾರವಾಗಿದೆಯೆಂದರೆ ಡಾ॥ ರಾಘವನ್ ಅವರು ಈಚೆಗೆ ಪಟ್ಟಿಮಾಡಿರುವ ಗ್ರಂಥಗಳ ಹಸ್ತಪ್ರತಿಗಳ ಸಂಖ್ಯೆಯೇ ಕೆಲವು ಸಾವಿರದಷ್ಟಾಗುತ್ತದೆ. ನಮಗೆ ಅವುಗಳ ಪರಿಚಯ ಇಲ್ಲಿ ಅಪ್ರಸ್ತುತ. ಸ್ಥೂಲವಾಗಿ–ಭಾಷ್ಯದ ಮೇಲಿನ ಭಿನ್ನವ್ಯಾಖ್ಯಾಪ್ರಸ್ಥಾನಗಳಾದ ಭಾಮತೀ ಪ್ರಸ್ಥಾನ, ವಿವರಣಪ್ರಸ್ಥಾನ. ವಾರ್ತಿಕ ಪ್ರಸ್ಥಾನ ಇತ್ಯಾದಿಗಳದು ಒಂದು ವರ್ಗ; 'ಬ್ರಹ್ಮಸಿದ್ಧಿ', 'ನೈಷ್ಕರ್ಮ್ಯಸಿದ್ಧಿ', 'ಅದ್ವೈತಸಿದ್ಧಿ' ಇತ್ಯಾದಿ ಸ್ವತಂತ್ರ ಶಾಸ್ತ್ರೀಯ ಖಂಡನ–ಮಂಡನ ಪರವಾದ ಗ್ರಂಥಗಳದು ಎರಡನೆಯ ವರ್ಗ; ಜೀವನ್ಮುಕ್ತಿವಿವೇಕ', 'ಪಂಚದಶಿ' ಮೊದಲಾದ ಪ್ರಕರಣಗ್ರಂಥಗಳದು ಮೂರನೆಯ ವರ್ಗ; ಪ್ರಾಥಮಿಕ ಅಭ್ಯಾಸಿಗಳಿಗೆ ಪಠ್ಯಗ್ರಂಥವಾಗುವ ರೀತಿಯಲ್ಲಿ ರಚಿತವಾಗಿರುವ ವೇದಾಂತಸಾರ, ವೇದಾಂತಪರಿಭಾಷಾ ಮುಂತಾದುವುಗಳದು ನಾಲ್ಕನೆಯ ವರ್ಗ; ಎಂದಿಷ್ಟೇ ಇಲ್ಲಿ ಸಂಗ್ರಹವಾಗಿ ಹೇಳಬಹುದು. ಸಗುಣಬ್ರಹ್ಮವಾದವೇ ಪರಮಸಿದ್ಧಾಂತವೆಂದು ಕಾಲಕಾಲಕ್ಕೆ ಭಿನ್ನವೇದಾಂತ ಸಂಪ್ರದಾಯಗಳು ಉದಯಿಸಿದಂತೆಲ್ಲ ಅದ್ವೈತಲೇಖಕರು ಬಹ್ಮದ ಸಾಕ್ಷಾತ್ಕಾರ ಅಥವಾ ಅಪರೋಕ್ಷಾನುಭೂತಿಯ ಉನ್ನತ ಶಿಖರದಿಂದ ಕೆಳಗಿಳಿದು ಹೆಚ್ಚು ಹೆಚ್ಚಾಗಿ ವ್ಯಾವಹಾರಿಕ ಜೀವ-ಜಗತ್ತು-ಸೃಷ್ಟಿ-ಈಶ್ವರ–ಜೀವನ

"ಬ್ರಹ್ಮಸಿದ್ಧಿ"ಯಲ್ಲಿ ನಾಲ್ಕು ಭಾಗಗಳಿವೆ—'ಬ್ರಹ್ಮಕಾಂಡ', 'ತರ್ಕಕಾಂಡ', 'ನಿಯೋಗ ಕಾಂಡ', ಮತ್ತು 'ಸಿದ್ಧಿಕಾಂಡ' ಎಂದು. ಮೊದಲನೆಯದರಲ್ಲಿ ಬ್ರಹ್ಮಸ್ವರೂಪವನ್ನು ಹೇಳಿ, ಎರಡನೆಯದರಲ್ಲಿ ಭೇದವು ಪ್ರತ್ಯಕ್ಷವಾಗದೆಂದು ಸಾಧಿಸಿದ್ದಾರೆ. ಮೂರನೆಯದರಲ್ಲಿ ಶ್ರುತ್ಯರ್ಥವು ಕೇವಲ ವಿಧಿ ನಿಷೇಧಪರವೆಂಬ ಮೀಮಾಂಸಕರ ವಾದವನ್ನು ಖಂಡಿಸಿದ್ದಾರೆ. ಜಗತ್ತಿಗೆ ನಿಜವಾಗಿ ಅಸ್ತಿತ್ವವಿಲ್ಲವೆಂದೂ, ಜೀವನ ಅಜ್ಞಾನದಿಂದಷ್ಟೇ ಅದಕ್ಕೆ ಅಸ್ತಿತ್ವ ತೋರುವುದೆಂದೂ ತೋರಿದ್ದಾರೆ. ತಾರ್ಕಿಕವಾದಶೈಲಿ ಈ ಗ್ರಂಥದಲ್ಲಿ ಉದ್ದಕ್ಕೂ ವ್ಯಕ್ತವಾಗಿದೆ.

"ನೈಷ್ಕರ್ಮ್ಯಸಿದ್ಧಿ"ಯು 'ಕರ್ಮ' ಮತ್ತು 'ಜ್ಞಾನ'ಗಳಿಗಿರುವ ವಿರೋಧವನ್ನು ಸ್ಪಷ್ಟಪಡಿಸಿ ಜ್ಞಾನವು ಕರ್ಮಕ್ಕಿಂತ ಹೇಗೆ ಹೆಚ್ಚಿನದೆಂಬುದನ್ನೂ, ಜ್ಞಾನವು ಹೇಗೆ ಮೋಕ್ಷಕ್ಕೆ ಏಕೈಕ ಸಾಧನವೆಂಬುದನ್ನೂ ವಿವರಿಸುತ್ತದೆ; ಈ ಗ್ರಂಥವು ಗದ್ಯ–ಪದ್ಯಾತ್ಮಕವಾಗಿದೆ. ಇಲ್ಲಿರುವ ಅಧ್ಯಾಯಗಳು ನಾಲ್ಕು. ಮೊದಲನೆಯದರಲ್ಲಿ ಅವಿದ್ಯೆಯ ಸ್ವರೂಪ, ಕರ್ಮ–ಜ್ಞಾನಗಳ ವಿವೇಚನೆಯಿದೆ. ಎರಡನೆಯದರಲ್ಲಿ ಆತ್ಮಸಾಕ್ಷಾತ್ಕಾರದ ಸ್ವರೂಪವನ್ನು ಹೇಳಿದೆ. ಮೂರನೆಯದರಲ್ಲಿ ಅವಿದ್ಯೆಯ ಲಕ್ಷಣವೂ, ನಾಲ್ಕನೆಯದರಲ್ಲಿ ಜೀವನ್ಮುಕ್ತನ ಸ್ವರೂಪವೂ ಉಕ್ತವಾಗಿವೆ. ನೈಷ್ಕರ್ಮ್ಯಸಿದ್ಧಿಯ ಶೈಲಿ ಕಾವ್ಯಗುಣದಿಂದ ಕಂಗೊಳಿಸುತ್ತದೆ. ಉದಾಹರಣೆ :—

> ಬುದ್ಧಾದ್ವೈತಸತತ್ವಸ್ಯ ಯಥೇಷ್ಟಾಚರಣಂ ಯದಿ ।
> ಶುನಾಂ ತತ್ತ್ವದೃಶಾಂ ಚೈವ ಕೋ ಭೇದೋಽಶುಚಿಭಕ್ಷಣೇ ॥ (೪. ೬೨)
> ಯಥಾ ವಿಶುದ್ಧ ಆಕಾಶೇ ಸಹಸೈವಾಭ್ರಮಂಡಲಮ್ ।
> ಭೂತ್ವಾ ವಿಲೀಯತೇ ತದ್ವತ್ ಆತ್ಮನೀವಾಖಿಲಂ ಜಗತ್ ॥ (೨. ೬೮)

'ನೈಷ್ಕರ್ಮ್ಯಸಿದ್ಧಿ'ಯಲ್ಲದೆ 'ಬೃಹದಾರಣ್ಯಕ–ಭಾಷ್ಯವಾರ್ತಿಕ'ಎಂಬ ಬೃಹದ್ವಾರ್ತಿಕವೂ' 'ತೈತ್ತಿರೀಯ–ಭಾಷ್ಯವಾರ್ತಿಕ'ವೂ ಸುರೇಶ್ವರರ ಕೃತಿರತ್ನಗಳು. ಬೃಹದಾರಣ್ಯಕ ವಾರ್ತಿಕದ ಆರಂಭದ ಭಾಗವೇ 'ಸಂಬಂಧವಾರ್ತಿಕ'. ಇದರಲ್ಲಿಯೇ ೧೧೦೦ ಶ್ಲೋಕಗಳಿದ್ದು ವೈದಿಕಕರ್ಮಗಳ ಸಮಗ್ರ ವಿವೇಚನೆ ಬಂದಿದೆ. ಅವಿದ್ಯೆಗೆ ಜೀವನ ಬದಲು ಬ್ರಹ್ಮನೇ ಆಶ್ರಯವೆಂದು ನಿರ್ಣಯಿಸಿದ್ದರಿಂದ ಬೌದ್ಧರ ವಿಜ್ಞಾನವಾದಕ್ಕೂ ಅದ್ವೈತಕ್ಕೂ ಸುಸ್ಪಷ್ಟ ಅಂತರ ಪ್ರಥಮತಃ ನಿರ್ದಿಷ್ಟವಾಯಿತೆನ್ನಬಹುದು.

ಹಾಗೆಯೇ ಅವಿದ್ಯಾ ಕಾರ್ಯೋಪಾಧಿಯಾದ ಅಂತಃಕರಣದಲ್ಲಿ ಚಿದಾಭಾಸವೇ ಜೀವ; ಕಾರಣೋಪಾಧಿಯಾದ ಅವಿದ್ಯೆಯಲ್ಲಿ ಚಿದಾಭಾಸವೇ ಈಶ್ವರ. ಈ ಪ್ರತಿಬಿಂಬವು ಬಿಂಬಕ್ಕಿಂತ ಭಿನ್ನವಾದುದರಿಂದ ಅದು 'ಅಭಾಸ' (ತೋರಿಕೆ) ಮಾತ್ರ. ಇದೇ ಮಂಡನಾದಿಗಳ 'ಪ್ರತಿಬಿಂಬ ವಾದ'ಕ್ಕಿಂತ ಬೇರೆಯಾದ 'ಅಭಾಸವಾದ;

ಮೀಮಾಂಸಕರು ವಿಧಿಗೆ ಹೇಳುವ 'ಭಾವನಾ', 'ನಿಯೋಗ' ಮುಂತಾದ ಅರ್ಥ ಸರಿಯಲ್ಲವೆಂದೂ, ಇಷ್ಟಸಾಧನತ್ವವಷ್ಟೇ ಅರ್ಥವೆಂದೂ ವಿಸ್ತಾರವಾಗಿ ಉಪಪಾದಿಸಲಾಗಿದೆ ಮುಂದಿನವರ ದೃಷ್ಟಿಯಲ್ಲಿ ಭಾಷ್ಯಕಾರ ಶಂಕರರಿಗೆ ಸಮಾನವಾದ ಗೌರವ ವಾರ್ತಿಕಕಾರರಿಗೂ ಸಲ್ಲುತ್ತದೆ.

ಪದ್ಮಪಾದ (ಕ್ರಿ.ಶ. ೮೫೦):—ಇವರು ಶಂಕರರ ಸಾಕ್ಷಾತ್ ಶಿಷ್ಯರಲ್ಲಿ ಎರಡನೆಯವರು. 'ಪಂಚಪಾದಿಕಾ ಮತ್ತು 'ಆತ್ಮಬೋಧವ್ಯಾಖ್ಯಾನ' ಇವರ ಎರಡು ಕೃತಿಗಳು. ಸೂತ್ರಭಾಷ್ಯದ ಮೊದಲ ಐದು ಪಾದಗಳಿಗೆ ಮಾತ್ರ 'ಪಂಚಪಾದಿಕಾ' ಉಪಲಬ್ಧವಿದ್ದರೂ ಮುಂದೆ ಇದೇ ಪ್ರಕಾಶಾತ್ಮ ಮುಂತಾದವರ ವಿವರಣೆಗಳ ಮೂಲ "ವಿವರಣ"ವೆಂಬ ಅದ್ವೈತ ಪ್ರಸ್ಥಾನಕ್ಕೆ ಮೂಲಗ್ರಂಥವೆನಿಸಿತು. ವಿದ್ಯಾರಣ್ಯರ ವಿವರಣಪ್ರಮೇಯಸಂಗ್ರಹವೂ ಈ ಪ್ರಸ್ಥಾನಕ್ಕೆ ಸೇರಿದುದು. ಇವುಗಳ ವಿವರಗಳು ಮುಂದೆ ಬರುತ್ತವೆ.

ಮಾಯಾ, ಅವ್ಯಾಕೃತ, ಪ್ರಕೃತಿ, ಅಗ್ರಹಣ, ಅವ್ಯಕ್ತ, ತಮಃ, ಕಾರಣ, ಲಯ, ಶಕ್ತಿ ಮಹಾಸುಪ್ತಿ, ನಿದ್ರಾ, ಕ್ಷರ, ಆಕಾಶ—ಇವೆಲ್ಲ ಔಪನಿಷದ ಸಾಹಿತ್ಯದಲ್ಲಿ ಅವಿದ್ಯಾವಾಚಕಗಳೆಂದು ಪದ್ಮಪಾದರ ಅಭಿಪ್ರಾಯ. ಚಿತ್ರಕ್ಕೆ ಗೋಡೆ ಹೇಗೋ ಹಾಗೆ ಇದೇ ಜೀವತ್ವಾಪಾದಕ ಅದೇ ಜ್ಞಾನ-ಕ್ರಿಯಾ-ಶಕ್ತಿದ್ವಯಾಶ್ರಯ ಮತ್ತು ಕರ್ತೃತ್ವ-ಭೋಕ್ತೃತ್ವ-ಪ್ರತ್ಯಯ-ಜನಕ. ಸ್ವಯಂಪ್ರಕಾಶಬ್ರಹ್ಮವೇ ಈ ಅವಿದ್ಯಾಸಂಪರ್ಕದಿಂದ 'ಅಹಂಕಾರ'ವಾಗಿ ಮಾರ್ಪಡುತ್ತದೆ. ಶುದ್ಧ ಚೈತನ್ಯಪ್ರಕಾಶವೂ ಅವಿದ್ಯಾಶಕ್ತಿಗಳೊಡನೆ ಬೇರ್ಪಡಿಸಲಾರದ ಗ್ರಂಥಿಯಾಗುತ್ತದೆ—ಸಂಭಿನ್ನೋಭಯರೂಪದ ದೆಸೆಯಿಂದ, ಎಂಬುದು ಪದ್ಮಪಾದರ ಇನ್ನೊಂದು ಅಭಿಪ್ರಾಯ. ಅಜ್ಞಾನಾ ಅಥವಾ ಅವಿದ್ಯೆ 'ಜಡಾತ್ಮಿಕಾ ಶಕ್ತಿ' ಯೆಂದು ಅವರ ವಿವರಣೆಯಿದೆ. ಇದೇ ಮುಂದೆ ಭಾವರೂಪ ಜ್ಞಾನವೆಂಬ ಪ್ರಮೇಯಕ್ಕೆ ಪೋಷಕವಾಗುತ್ತದೆ[1]. ಪ್ರಮಾತೃ ಚೈತನ್ಯದ ಅಂತಃಕರಣ ವೃತ್ತಿಯ ಮತ್ತು ವಿಷಯ ಚೈತನ್ಯದ ಸಂಬಂಧವೇ ಪ್ರತ್ಯಕ್ಷವೆಂಬ ಹೊಸ ವಿಚಾರದ ಮೂಲವೂ ಇಲ್ಲಿದೆ. ಬ್ರಹ್ಮ-ಜೀವರಬಗೆಗೂ ಇಲ್ಲಿ ಪ್ರತಿಬಿಂಬವಾದ ಪುರಸ್ಕೃತವಾಗಿದೆ. ಹೀಗೆ ಪಂಚಪಾದಿಕೆ ಅದ್ವೈತದ ಇತಿಹಾಸದಲ್ಲಿ ಒಂದು ಮೌಲಿಕ ಗ್ರಂಥವಾಗಿದೆ. ತತ್ತ್ವಮಸೀತಿ ವಾಕ್ಯೇಬಿಂಬಸ್ಥಾನೀಯ ಬ್ರಹ್ಮಸ್ವರೂಪತಾ ಪ್ರತಿಬಿಂಬಸ್ಥಾನೀಯಸ್ಯ ಜೀವಸ್ಯೋಪದಿಶ್ಯತೇ—ಪಂಚಪಾದಿಕಾ. (ಪು.೨೨)

ವಾಚಸ್ಪತಿಮಿಶ್ರ (ಕ್ರಿ.ಶ. ೮೫೦) :—ಇವರ ಭಾಷ್ಯವ್ಯಾಖ್ಯಾನಕ್ಕೆ 'ಭಾಮತೀ' ಎಂದು ಹೆಸರು. ಇದಲ್ಲದೆ "ಬ್ರಹ್ಮಸಿದ್ಧಿ" ಗೂ ಇವರ ವ್ಯಾಖ್ಯಾನವಿದೆ. ಇವರು ಸಾಂಖ್ಯತತ್ತ್ವ

---

೧. ದೃಶ್ಯತೇ ಹಿ ಮಂದಪ್ರದೀಪೇ ವೇಶ್ಮನ್ಯಸ್ಪಷ್ಟಂ ರೂಪದರ್ಶನಮಿತರತ್ರ ಚ ಸ್ಪಷ್ಟಮ್. ತೇನ ಜ್ಞಾಯತೇ ಮಂದಪ್ರದೀಪೇ ವೇಶ್ಮನಿ ತಮಸೋಽಪೀಷದನುವೃತ್ತಿರಿತಿ—ತಥಾ ಛಾಯಾಯಾಮಪಿ ಔಷ್ಣ್ಯಂ ತಾರತಮ್ಯೇನೋಪಲಭ್ಯಮಾನಮಾತಪಸ್ಯಾಪಿ ತತ್ರಾವಸ್ಥಾನಂ ಸೂಚಯಂತಿ—ಪಂಚಪಾದಿಕಾ. ಪು. ೩

ಕೌಮುದೀ, ನ್ಯಾಯ ವಾರ್ತಿಕತಾತ್ಪರ್ಯಟೀಕಾ, ವಿಧಿವಿವೇಕ, ಯೋಗತತ್ತ್ವವೈಶಾರದೀ ಮುಂತಾಗಿ ಷಡ್ದರ್ಶನಗಳಲ್ಲೂ ಪ್ರಮಾಣ ಭೂತವಾದ ಗ್ರಂಥರಚನೆ ಮಾಡಿ ವಿಖ್ಯಾತವಾಗಿರುವ ಮಹನೀಯರು. ಅದ್ವೈತದಲ್ಲಿ 'ಭಾಮತೀ ಪ್ರಸ್ಥಾನ'ದ ಪ್ರವರ್ತಕರು. ಇವರು 'ನ್ಯಾಯಸೂಚಿನಿಬಂಧ'ವನ್ನು ೮೯೮ರಲ್ಲಿ ಮುಗಿಸಿದ್ದಾಗಿ ತಾವೇ ಉಲ್ಲೇಖಿಸಿರುವುದರಿಂದ ಕಾಲ ನಿಸ್ಸಂದಿಗ್ಧ.

ಭಾಮತೀ ಗ್ರಂಥದಲ್ಲಿ 'ಬ್ರಹ್ಮಸಿದ್ಧಿ'ಯ ಪ್ರಭಾವ ಕಾಣಿಸುತ್ತದೆ. 'ತತ್ತ್ವಮಸಿ' ಮುಂತಾದ ಮಹಾವಾಕ್ಯದ ಶ್ರವಣದಿಂದ ಪರೋಕ್ಷವಾದ ಬ್ರಹ್ಮಜ್ಞಾನವಷ್ಟೇ ಶಕ್ಯ; ಅದು ಅಪರೋಕ್ಷ ಅನುಭವವಾಗಲು ಪ್ರಸಂಖ್ಯಾನವೂ ಅಗತ್ಯವೆಂದು ಇವರೂ ಹೇಳುತ್ತಾರೆ. ಹಾಗೆಯೇ ಇವರ ಹೆಸರಿನಲ್ಲಿ ಪ್ರಸಿದ್ಧವಾಗಿರುವುದು 'ಅವಚ್ಛೇದವಾದ': ಏಕನಾದ ಆತ್ಮನೇ ಅನೇಕ ಅನಾತ್ಮಕಾರ್ಯೋಪಾಧಿಗಳಿಂದ ಕೂಡಿ ಜೀವರೆನಿಸುವನು; ಮಾಯಾವಚ್ಛಿನ್ನನಾಗಿ ತಾನೇ ಈಶ್ವರನೆನಿಸುವನು. ಏಕನೇ ಅನೇಕ ಅನಾತ್ಮಕಾರ್ಯಗಳಲ್ಲಿ ಅನುಪ್ರವೇಶ ಮಾಡುವುದರಿಂದ ಅನೇಕನಾಗಿ ತೋರುವನು, ಎನ್ನುವುದೇ ಅವಚ್ಛೇದವಾದಿಗಳ ಸಿದ್ಧಾಂತ.

ಇದರಂತೆ ಅವಿದ್ಯೆ ದ್ವಿವಿಧ–ಕಾರಣಾವಿದ್ಯೆ ಅಥವಾ ಮೂಲಾವಿದ್ಯೆ ಮತ್ತು ಕಾರ್ಯಾವಿದ್ಯೆ ಅಥವಾ ತೂಲಾವಿದ್ಯೆ ಎನ್ನುವುದೂ ಭಾಮತೀಕಾರರ ಮತವೇ. ಅನಾದಿಯಾದ ಮೊದಲನೆಯದು ನಿವೃತ್ತಿಯಾಗಲು ಬ್ರಹ್ಮಾನುಭವವೇ ಬೇಕು. ಭ್ರಾಂತಿ ಪರಿಹಾರವಾದರೆ ಆಗಂತುಕವಾದ ಎರಡನೆಯದು ನಿವೃತ್ತಿಯಾಗುತ್ತದೆ. ಮೊದಲನೆಯದು ಏಕ, ಎರಡನೆಯದು ಅನೇಕ.

ಜೀವಾಶ್ರಿತಮಾಯಾವಿಷಯೀಕೃತ ಬ್ರಹ್ಮನು ಸ್ವಯಮೇವ ಜಾಡ್ಯಾಶ್ರಯ ಪ್ರಪಂಚಾಕಾರವಾಗಿ ವಿವರ್ತ ಹೊಂದುವುದರಿಂದ ಅವನೇ ಪ್ರಪಂಚದ ಉಪಾದಾನ ಕಾರಣ; ಮಾಯೆ ಕೇವಲ ಸಹಕಾರಿಯಷ್ಟೇ ಎಂಬುದು ಭಾಮತೀಕಾರರ ಮತ್ತೊಂದು ಸಿದ್ಧಾಂತ. ಹೀಗೆ ಅದ್ವೈತವಾದದ ವಿಸ್ತರಣೆಯಲ್ಲಿ ವಾಚಸ್ಪತಿಮಿಶ್ರರ ಪಾತ್ರ ಗಣನೀಯವಾಗಿದೆ. ಅವರ ಶೈಲಿಯೂ ವೈಶದ್ಯ ಗಾಂಭೀರ್ಯಗಳಿಗೆ ಮಾದರಿಯಾಗುವಂತಿದೆ.

ವಿಮುಕ್ತಾತ್ಮ (ಕ್ರಿ. ಶ. ೮೭೦)—'ಇಷ್ಟಸಿದ್ಧಿ' :—ಸಂಕ್ಷೇಪಶಾರೀರಿಕದಲ್ಲಿ 'ಇಷ್ಟಸಿದ್ಧಿ' ಉಲ್ಲೇಖಿಸಲ್ಪಟ್ಟಿದೆಯಾದ್ದರಿಂದ ವಿಮುಕ್ತಾತ್ಮರು (ಸರ್ವಜ್ಞಾತ್ಮರಿಗಿಂತ ಸ್ವಲ್ಪವಾದರೂ) ಹಿಂದಿನವರೆಂದಾಗುತ್ತದೆ.

ಈ ಕೃತಿ ಪದ್ಯರೂಪದಲ್ಲಿ ರಚಿತವಾಗಿದ್ದು, ಅದಕ್ಕೆ ಸ್ವೋಪಜ್ಞವಾದ ಗದ್ಯ ಟೀಕೆಯೂ ಇದೆ.

"ಯಾನುಭೂತಿರಜಾಮೇಯಾನಂತಾತ್ಮಾನಂದವಿಗ್ರಹಾ।
ಮಹದಾದಿಜಗನ್ಮಾಯಾಚಿತ್ರಭಿತ್ತಿಂ ನಮಾಮಿ ತಾಮ್"(೧, ೧)

ಎಂದು ಗ್ರಂಥ ಆರಂಭವಾಗುತ್ತದೆ. ಜನ್ಮರಹಿತ, ಅಪ್ರಮೇಯ, ಅನಂತ, ಆತ್ಮಾನಂದ ಸ್ವರೂಪಿಯಾದ ಚೈತನ್ಯವೇ ಜಗನ್ಮಾಯೆ ಎಂಬ ಚಿತ್ರಕ್ಕೆ ಆಧಾರವಾದ ಗೋಡೆ. ಗೋಡೆಯು ಚಿತ್ರಲೇಖನದ ಸಾಧನವಾದ ಬಣ್ಣವಲ್ಲ, ಚಿತ್ರದ ಅವಯವವೂ ಅಲ್ಲ. ಗಡಿಗೆಯು ಮಣ್ಣಿನ ವಿಕಾರವೆನ್ನುವಂತೆ ಚಿತ್ರವು ಗೋಡೆಯ ವಿಕಾರವೆನ್ನಲೂಬಾರದು. ಕಳಿತ ಮಾವಿನಹಣ್ಣಿನ ಕೆಂಬಣ್ಣದಂತೆ ಚಿತ್ರವು ಗೋಡೆಯ ವರ್ಣಾಂತರವೂ ಅಲ್ಲ. ಚಿತ್ರ ಬರೆಯುವ ಮೊದಲೂ ಗೋಡೆಯಿರುತ್ತದೆ ಚಿತ್ರ ಅಳಿದರೂ ಗೋಡೆ ಉಳಿದಿರುತ್ತದೆ. ಆದರೆ ಗೋಡೆಯಿಲ್ಲದಿದ್ದರೆ ಚಿತ್ರವೇ ಇರಲಾರದು. ಹಾಗೆಯೇ ಶುದ್ಧ ಚೈತನ್ಯವು ಮಾಯೆಯ ಚಿತ್ರವಾದ ಜಗದಾಭಾಸಕ್ಕೆ ಆಶ್ರಯ. ಈ ದೃಷ್ಟಾಂತ ಮಾರ್ಮಿಕವಾಗಿದೆ.

ಅವಿದ್ಯಾವಿವೇಚನೆಯೇ ಈ ಗ್ರಂಥದ ಕೇಂದ್ರಬಿಂದು. ಅವಿದ್ಯೆ ಆತ್ಮನಿಷ್ಠ ಮತ್ತು ವಸ್ತುನಿಷ್ಠ. ಎಲ್ಲ ದೃಶ್ಯಗಳು, ಅವುಗಳ ಸಂಬಂಧಗಳು, ಸಂಬಂಧಾತೀತವಾದ ಶುದ್ಧ ಚೈತನ್ಯದ ಜೊತೆಗೆ ತೋರುವಿಕೆ—ಇವೆಲ್ಲ ಆ ಅವಿದ್ಯೆಯಲ್ಲಿಯೇ ಅಡಕವಾಗಿವೆ. ಈ ಜಗತ್ತು ವಾಸ್ತವಿಕವಲ್ಲ, ಅವಾಸ್ತವಿಕವೂ ಅಲ್ಲ; ಕೇವಲ ವ್ಯಾವಹಾರಿಕ. ಅವಿದ್ಯಾವಿಷಯ ಬ್ರಹ್ಮನಾದ್ದರಿಂದಲೇ ಬ್ರಹ್ಮಜ್ಞಾನದಿಂದ ಸ್ವವಿಷಯಕ ಅವಿದ್ಯೆ ನಷ್ಟವಾಗುತ್ತದೆ.

ಇಷ್ಟಸಿದ್ಧಿಯಲ್ಲಿ ನೈಯಾಯಿಕರ ಅನ್ಯಥಾಖ್ಯಾತಿವಾದವನ್ನು ಸಮರ್ಥ ತರ್ಕಗಳಿಂದ ನಿರಾಕರಿಸಲಾಗಿದೆ.

ಈ ಗ್ರಂಥದಲ್ಲಿ ಎಂಟು ಅಧ್ಯಾಯಗಳಿದ್ದು ಮೊದಲನೆಯದು ಬಹಳ ದೊಡ್ಡದಾಗಿದೆ. ಮಾಯೆ ಅನಿರ್ವಚನೀಯವೆಂಬುದನ್ನು ಇಲ್ಲಿ ಚೆನ್ನಾಗಿ ಸಮರ್ಥಿಸಲಾಗಿದೆ. ಬ್ರಹ್ಮಜ್ಞಾನಿಗೆ ಜೀವನ್ಮುಕ್ತಿಗೆ ಬಂದರೂ ಪ್ರಾರಬ್ಧಕರ್ಮ ತೀರುವವರೆಗೆ ಅವಿದ್ಯಾಲೇಶವುಳಿದೇ ಇರುತ್ತದೆಂದು ವಿಮುಕ್ತಾತ್ಮರ ಅಭಿಪ್ರಾಯ. ಒಮ್ಮೆ ಅವಿದ್ಯಾನಿವೃತ್ತಿ 'ಸತ್' ಅಲ್ಲ, 'ಅಸತ್' ಅಲ್ಲ, 'ಸದಸತ್' ಅಲ್ಲ, 'ಅನಿರ್ವಚನೀಯ'ವೂ ಅಲ್ಲ; ಆದ್ದರಿಂದ 'ಪಂಚಮಕೋಟಿಕ' ಎನ್ನಲಾಗಿದೆ. (೧) ಆದರೆ ಕಡೆಯ ಅಧ್ಯಾಯದಲ್ಲಿ 'ಅವಿದ್ಯೆ' ಹೇಗೆ 'ಅನಿರ್ವಚನೀಯ'ವೊ, ಅವಿದ್ಯಾ ನಿವೃತ್ತಿಯೂ ಹಾಗೆಯೇ ೧೨ ಅನಿರ್ವಚನೀಯವೆನ್ನಲಾಗಿದೆ.

ಸರ್ವಜ್ಞಾತ್ಮ (ಕ್ರಿ. ಶ. ೯೦೦) :— ಸರ್ವಜ್ಞಾತ್ಮ ಮುನಿಗಳು ಸುರೇಶ್ವರಾಚಾರ್ಯರ ಶಿಷ್ಯರು. ಇವರ ಗ್ರಂಥದ ಹೆಸರು 'ಸಂಕ್ಷೇಪ-ಶಾರೀರಕ'. ಇದು ನಾನಾ ಛಂದೋಬಂಧಗಳಲ್ಲಿ ರಚಿತವಾದ ಪದ್ಯಗಳನ್ನೊಳಗೊಂಡಿದೆ. ಇದರಲ್ಲಿ ನಾಲ್ಕು ಅಧ್ಯಾಯಗಳಿವೆ. ಮೊದಲನೆಯದರಲ್ಲಿ ೫೬೩ ಪದ್ಯಗಳೂ, ಎರಡನೆಯದರಲ್ಲಿ ೨೪೮ ಪದ್ಯಗಳೂ, ಮೂರನೆಯದರಲ್ಲಿ ೩೬೫ ಪದ್ಯಗಳೂ, ನಾಲ್ಕನೆಯದರಲ್ಲಿ ೬೩ ಪದ್ಯಗಳೂ ಇವೆ. ಇದರ ಮೇಲೆ ನೃಸಿಂಹಾಶ್ರಮ, ರಾಮತೀರ್ಥ ಮತ್ತು ಮಧುಸೂದನ ಸರಸ್ವತಿಗಳ ವ್ಯಾಖ್ಯೆಗಳಿವೆ.

ಶುದ್ಧಬ್ರಹ್ಮನೇ ಸಕಲಕ್ಕೂ ಕಾರಣ, ಮಾಯೆ ದ್ವಾರಕಾರಣ ಎಂಬಂಶದಲ್ಲಿಯೂ ಅವಿದ್ಯಾಧಿಷ್ಠಾನ ಅವಿದ್ಯಾನಿವೃತ್ತಿಗಳ ವಿಷಯದಲ್ಲಿಯೂ ಇವರು ಸುರೇಶ್ವರರನ್ನು ಅನುಸರಿಸಿದ್ದಾರೆ. 'ಶಬ್ದ' ಅಥವಾ ತತ್ತ್ವಮಸ್ಯಾದಿ ಮಹಾವಾಕ್ಯವು ಅಪರೋಕ್ಷವಾಗಿ ಬ್ರಹ್ಮಸಾಕ್ಷಾತ್ಕಾರವನ್ನು ಉಂಟುಮಾಡಬಲ್ಲದೆಂದೂ ಭಾವಿಸುತ್ತಾರೆ.

ಸರ್ವಜ್ಞಾತ್ಮರ ಇನ್ನೂ ಕೆಲವು ಅಭಿಪ್ರಾಯಗಳು ಹೀಗಿವೆ :— ಮಾಯೆ ಏಕರೂಪವೇ ಹೊರತು ಅನೇಕವಲ್ಲ. ಗೋತ್ವ ಮುಂತಾದ 'ಜಾತಿ' ಹೇಗೆ ಸಕಲ ವ್ಯಕ್ತಿಗಳಲ್ಲೂ ಅನುಗತವಾಗಿರುತ್ತಾ, ಕೆಲವೊಂದು ವ್ಯಕ್ತಿಗಳ, ನಷ್ಟವಾದರೂ ತಾನು ಸ್ವರೂಪವನ್ನು ಕಳೆದುಕೊಳ್ಳದೆ ಇರುವುದೋ ಹಾಗೆಯೇ ಒಬ್ಬ ಜೀವನು ಮುಕ್ತನಾದರೂ ತನ್ನ ಅಸ್ತಿತ್ವಕ್ಕೆ ಬಾಧೆಯಿಲ್ಲದೆ ಎಲ್ಲ ಜೀವರನ್ನೂ ವ್ಯಾಪಿಸುವ ಉಪಾಧಿಯೇ ಮಾಯೆ. (೨. ೧೩೨). ಅಂತಃಕರಣಗಳಲ್ಲಿ ಬ್ರಹ್ಮ ಪ್ರತಿಬಿಂಬಿಸಿದಾಗ ಜೀವರೆನಿಸುವರು ; ಅವಿದ್ಯೆಯಲ್ಲಿ ಬ್ರಹ್ಮ ಪ್ರತಿಬಿಂಬಿಸಿದಾಗ ಈಶ್ವರ ಮಾಯೆಯು ತನ್ನ ಆವರಣ ಮತ್ತು ವಿಕ್ಷೇಪ ಶಕ್ತಿಗಳಿಂದಾಗಿ, ತನ್ನ ಏಕಮೇವ ಆಶ್ರಯ ಹಾಗೂ ವಿಷಯನಾದ ಬ್ರಹ್ಮನು ಜೀವ, ಈಶ್ವರ ಹಾಗೂ ಜಗತ್ತುಗಳಾಗಿ ತೋರುವಂತೆ ಏರ್ಪಡಿಸುತ್ತದೆ (೧. ೨೦). ಸುಷುಪ್ತಿಯಲ್ಲಿ ಅವಿದ್ಯೆಯ ಸೂಕ್ಷ್ಮ ಆವರಣದ ಮೂಲಕವೇ ಬ್ರಹ್ಮವು ತನ್ನ ಸ್ವರೂಪಾನಂದವನ್ನು ಅನುಭವಿಸುತ್ತದೆ (ಸುರೇಶ್ವರರ ಪ್ರಕಾರ ಈ ಅವಿದ್ಯಾವರಣ ಸುಷುಪ್ತಿಯಲ್ಲಿಲ್ಲ). ಮೋಕ್ಷಕ್ಕೆ ಕರ್ಮವೂ ಆರಾದುಪಕಾರಕ. ಜೀವನ್ಮುಕ್ತನು ಕೈವಲ್ಯಪ್ರಾಪ್ತಿಗೆ ಮುನ್ನ ಅವಿದ್ಯಾಲೇಶವನ್ನುಳಿಸಿರುವ ಪ್ರಾರಬ್ಧಕರ್ಮ ಸವೆಯುವುದನ್ನು ಕಾಯಬೇಕು. ಕೈವಲ್ಯವು ಲೋಕಾಂತರಗಮನವಲ್ಲ ; ಬ್ರಹ್ಮೈಕ್ಯಭಾವ, ಪರಿಣಾಮವಾದವು ವಿವರ್ತವಾದಕ್ಕೆ ಪೂರ್ವಭೂಮಿ (೨. ೬೧).

ತತ್ತ್ವಮಸಿ ವಾಕ್ಯಕ್ಕೆ ಅಖಂಡಾರ್ಥತೆ ಹೇಗೆಂಬುದನ್ನು ಹೀಗೆ ವಿವರವಾಗಿ ಹೇಳಲಾಗಿದೆ–

ಸಾಮಾನಾಧಿಕರಣ್ಯಮತ್ರ ಭವತಿ ಪ್ರಾಥಮ್ಯಭಾಗನ್ವಯಃ
ಪಶ್ಚಾದೇವ ವಿಶೇಷಣೇತರತಯಾ ಪಶ್ಚಾದ್ವಿರೋಧೋದ್ಭವಃ ।
ಉತ್ಪನ್ನೇ ಚ ವಿರೋಧ ಏಕರಸಕೇ ವಸ್ತುನ್ಯಖಂಡಾತ್ಮಕೇ
ವೃತ್ತಿರ್ಲಕ್ಷಣಯಾ ಭವತ್ಯಯಮಿಹ ಜ್ಞೇಯಃ ಕ್ರಮಃ ಸೂರಿಭಿಃ ॥ ೧,೧೯೬

## ೧೦ ಮತ್ತು ೧೧ನೆಯ ಶತಮಾನಗಳು

ಈ ಶತಮಾನಗಳಲ್ಲಿ ಅನೇಕರು ಗ್ರಂಥರಚನೆ ಮಾಡಿದರೂ ಹೊಸ ವಿಚಾರಗಳನ್ನು ಮಂಡಿಸಿದವರು ಕಡಿಮೆ.

ಹಾಗೆ ಮಂಡಿಸಿದವರಲ್ಲಿ 'ಪದಾರ್ಥ–ತತ್ತ್ವ–ನಿರ್ಣಯ'ವನ್ನು ಬರೆದ ಗಂಗಾಪುರಿ ಭಟ್ಟಾರಕ ಒಬ್ಬ. ಇವನ ಮತದಂತೆ ಜಗತ್ತಿಗೆ ಬ್ರಹ್ಮನು ಅಪರಿಣಾಮಿ ಉಪಾದಾನ ಮತ್ತು

ಮಾಯೆ ಪರಿಣಾಮಿಯುಪಾದಾನ. ಆದ್ದರಿಂದಲೇ ಜಗತ್ತಿನಲ್ಲಿ ಸತ್ತ್ವ, ಜಾಡ್ಯ ಎರಡೂ ಗೋಚರವಾಗುತ್ತವೆ.

ಇನ್ನೊಬ್ಬನೆಂದರೆ ಪ್ರಕಟಾರ್ಥ-ವಿವರಣಕಾರ. ಪ್ರಕಟಾರ್ಥ-ವಿವರಣವು ಶಾಂಕರ ಸೂತ್ರಭಾಷ್ಯದ ವ್ಯಾಖ್ಯಾನ. ಈತನು ಮಾಯೆ-ಅವಿದ್ಯೆಗಳಿಗೆ ವ್ಯತ್ಯಾಸ ಸೂಚಿಸಿದ್ದಾನೆ. ಜಗತ್ತಿನ ಉಪಾದಾನಕಾರಣವಾದ ಮಾಯೆ ಏಕ ಮತ್ತು ಸರ್ವವ್ಯಾಪಕ, ಅವಿದ್ಯೆಯೆಂಬುದು ಮಾಯೆಯ ಒಂದು ಅಂಶ ಮಾತ್ರ; ಪ್ರತಿ ಜೀವನಿಗೂ ಭಿನ್ನವಾಗಿರುವ ಜೀವನ ಅಜ್ಞಾನಾಂಶ. ಮಾಯೆಯಲ್ಲಿ ಬ್ರಹ್ಮನ ಪ್ರತಿಬಿಂಬವೇ ಈಶ್ವರ. ಭಿನ್ನ ವೈಯಕ್ತಿಕ ಅಜ್ಞಾನಗಳಲ್ಲಿ ಬ್ರಹ್ಮನ ಪ್ರತಿಬಿಂಬವೇ ಜೀವರು. ಹೀಗೆ ಮಾಯೆ ಈಶ್ವರನಿಗೂ ಅವಿದ್ಯೆ ಜೀವನಿಗೂ ಉಪಾಧಿಗಳು. ವಿಷಯಾಕಾರವನ್ನು ತಳೆದ ಸಾಕ್ಷಿಚೈತನ್ಯದ ಪ್ರಭಾವವೇ ಪ್ರತ್ಯಕ್ಷ; ಅನುಮಾನಾದಿಗಳಲ್ಲಿ ಬಾಹ್ಯವಸ್ತುವಿಲ್ಲದೆಯೇ ವಿಷಯಜ್ಞಾನ ಬರುತ್ತದೆ.

## ೧೨ನೆಯ ಶತಮಾನ

### ಶ್ರೀ ಹರ್ಷ—ಖಂಡನಖಂಡಖಾದ್ಯ.

ಶ್ರೀ ಹರ್ಷನು ಪ್ರಖ್ಯಾತನಾದ ಮಹಾಕವಿ ಮತ್ತು ಮಹಾದಾರ್ಶನಿಕ. ಅವನು ವಿಶೇಷವಾಗಿ ಮತಾಂತರ-ಖಂಡನೆಯಲ್ಲಿ ನಿಸ್ಸೀಮನೆಂಬುದು 'ಖಂಡನಖಂಡಖಾದ್ಯ'ದಿಂದ ವ್ಯಕ್ತವಾಗುತ್ತದೆ. ನ್ಯಾಯ-ವೈಶೇಷಿಕರು ಪ್ರಮಾಣ-ಪ್ರಮೇಯಾದಿಗಳು ಸತ್ಯವೆನ್ನಲು ಹೇಳಬಹುದಾದ ಯುಕ್ತಿಗಳನ್ನೆಲ್ಲ ಆಳವಾಗಿ ವಿವೇಚಿಸಿ ಶ್ರೀಹರ್ಷನು ಖಂಡಿಸುತ್ತಾನೆ. ಎಲ್ಲವೂ ವ್ಯಾವಹಾರಿಕ ಹಾಗೂ ಮಿಥ್ಯಾಪ್ರಕಾಶಗಳೇ ಹೊರತು ಅವುಗಳೊಂದರಲ್ಲೂ ಪಾರಮಾರ್ಥಿಕ ತಥ್ಯವಿಲ್ಲವೆಂದು ಮಾರ್ಮಿಕವಾಗಿ ಈತನು ಎತ್ತಿ ತೋರಿಸುತ್ತಾನೆ. ಬೌದ್ಧರು ಆರಂಭಿಸಿದ್ದ ಪರನಿರಾಕರಣೆಯ ತರ್ಕಪದ್ಧತಿಯನ್ನೇ ಶ್ರೀ ಹರ್ಷನು ಯಶಸ್ವಿಯಾಗಿ ಅದ್ವೈತದರ್ಶನಕ್ಕೆ ಅಳವಡಿಸಿಕೊಂಡಿದ್ದಾನೆ. ಅಷ್ಟೇ ಅಲ್ಲದೆ ಮೀಮಾಂಸಕರ ಹಾಗೂ ಬೌದ್ಧರ ವಾದಗಳನ್ನೂ ಖಂಡಿಸಿದ್ದಾನೆ. ಶೂನ್ಯವಾದ-ವಿಜ್ಞಾನವಾದಗಳಿಗೂ ಬ್ರಹ್ಮವಾದಕ್ಕೂ ವ್ಯತ್ಯಾಸವನ್ನು ಸ್ಪಷ್ಟಪಡಿಸಿದ್ದಾನೆ. ವ್ಯಾವಹಾರಿಕ ಜಗತ್ತು ಅನಿರ್ವಚನೀಯ ಅಥವಾ ಆವಿದ್ಯಕವೆಂಬುದು ಸಾಮ್ಯ; ಆದರೆ ಸ್ವಯಂಪ್ರಕಾಶ ಬ್ರಹ್ಮತತ್ತ್ವವೇ ಅದಕ್ಕೆಲ್ಲ ಅಧಿಷ್ಠಾನವೆಂಬುದು ವೈಷಮ್ಯ. ಆದರೆ ಸಕಲ ದರ್ಶನಗಳ ಖಂಡನೆಗೂ ಶೂನ್ಯವಾದಿಗಳ ಹಾಗೂ ಅನಿರ್ವಚನೀಯವಾದ ಕ್ರಮವನ್ನನುಸರಿಸಿದರೆ ವಿಜಯ ಕಟ್ಟಿಟ್ಟದ್ದೆಂದು ಶ್ರೀಹರ್ಷನ ತೀರ್ಮಾನ:—

ತಥಾ ಹಿ ಯದಿ ದರ್ಶನೇಷು ಶೂನ್ಯ ವಾದಾನಿರ್ವಚನೀಯಪಕ್ಷಯೋರಾ
ಶ್ರಯಣಂ ತದಾ ತಾವದಮೂಷಾಂ ನಿರ್ಬಾಧೈವ ಸಾರ್ವಪಥೀನತಾ. (ಪು. ೨೨)

ನೈಯಾಯಿಕರ ಪೂರ್ವಪಕ್ಷದ ಬಗೆಗೆ ಅವನ ಅಪಹಾಸವನ್ನು ನೋಡಿ :—

ಯಂದಪಿ ನಿರ್ವಕ್ತುಮಸಾಮರ್ಥ್ಯೇಗಂರವ ಉಪಾಸ್ಯನ್ತಾಂಯೇಭ್ಯೋ ನಿರುಕ್ತಯಃ ಶಿಕ್ಷ್ಯನ್ತ ಇತ್ಯುಪಾಲಂಭವಚನಂ ತತ್ತದಾ ಶೋಭೇತ ಯದಿ ಮೇಯಸ್ವಭಾವಾನು ಗಾಮಿನೀಯಂ ಅನಿರ್ವಚನೀಯಂತೇತಿ ನ ಬ್ರೂಯಂಃ, ವಕ್ತೃದೋಷಾದಿತಿ ಚ ವದೇಯುಃ—ಪು. ೩೧-೩೨.

ಅವನ ಬ್ರಹ್ಮತತ್ತ್ವನಿಷ್ಠೆ ಹೀಗೆ ಮೂಡಿಬರುತ್ತದೆ—

ತತಃ ಪರಕೀಯ ರೀತ್ಯೇದಂ ಉಚ್ಯತೇ ಅನಿರ್ವಚನೀಯಂತ್ವಂ ವಿಶ್ವಸ್ಯ ಪರ್ಯವಸ್ಯತೀತಿ ; ವಸ್ತುತಸ್ತು ವಯಂ ಸರ್ವಪ್ರಪಂಚ-ಸತ್ತ್ವಾಸತ್ತ್ವ ವ್ಯವಸ್ಥಾಪನವಿ ನಿವೃತ್ತಾಃ ಸ್ವತಸ್ಸಿದ್ಧೇ ಚಿದಾತ್ಮನಿ ಬ್ರಹ್ಮತತ್ತ್ವೇ ಕೇವಲಂ ಭರಮಂವಲಂಬ್ಯ ಚರಿತಾರ್ಥಾಃ ಸುಖಂ ಆಸ್ಮಹೇ—ಪು. ೧೦೩-೪.

ಈ ವಾದ ವಿಜಯಕ್ಕಾಗಿ ಮೀಸಲಾದ ಉದ್ಗ್ರಂಥ ತುಂಬಾ ಪ್ರೌಢವಾಗಿದ್ದು ಗ್ರಂಥ ಗ್ರಂಥಿಗಳನ್ನೊಳಗೊಂಡಿದೆ. ಶ್ರೀ ಹರ್ಷನೇ ಹೇಳಿರುವುದನ್ನು ನೋಡಿ :—

ಗ್ರಂಥಗ್ರಂಥಿರಿಹ ಕ್ವಚಿತ್ ಕ್ವಚಿದಪಿ ನ್ಯಾಸಿ ಪ್ರಯತ್ನಾನ್ಮಯಾ
ಪ್ರಾಜ್ಞಂ ಮನ್ಯಮನಾ ಹಠೇನ ಪಠಿತೀ ಮಾಸ್ಮಿನ್ ಖಲಃ ಖೇಲತಂ ।
ಶ್ರದ್ಧಾರಾದ್ಧಗುರುಃ ಶ್ಲಥೀಕೃತದೃಢಗ್ರಂಥಿಃ ಸಮಾಸಾದಯಂ
ತ್ತ್ವೇತತ್ತರ್ಕರಸೋರ್ಮಿಮಜ್ಜನ ಸುಖೇಷ್ವಾಸಂಜನಂ ಸಜ್ಜನಃ ॥

'ಏಕಂ ಬ್ರಹ್ಮ' ಎಂಬುದೇ ಯಾರ ಬ್ರಹ್ಮಾಸ್ತ್ರವೋ. ಅವನಿಗೆ ವಾದದಲ್ಲಿ ಸೋಲೆಂಬುದಿಲ್ಲ :—

ಏಕಂ ಬ್ರಹ್ಮಾಸ್ತ್ರಮಾದಾಯ ನಾನ್ಯಂ ಗಣಯಂತಃ ಕ್ವಚಿತ್ ।
ನಾಸ್ತೇಽಸ್ಯ ಧೀರವೀರಸ್ಯ ಭಂಗಃ ಸಂಗರಕೇಲಿಷು ॥

'ಧೀರಾ ಯಥೋಕ್ತಮಪಿ ಕೀರವದೇತದುಕ್ತ್ವಾ ಲೋಕೇಷು ದಿಗ್ವಿಜಯಕೌತುಕ ಮಾತನುಧ್ವಮ್' ಎಂದು ಅವನ ಘೋಷಣೆ !

## ಚಿತ್ಸುಖ—'ತತ್ತ್ವಪ್ರದೀಪಿಕಾ' ಮತ್ತು 'ಖಂಡನಖಂಡಖಾದ್ಯ—ವ್ಯಾಖ್ಯಾ'

ಚಿತ್ಸುಖ ಗ್ರಂಥಕ್ಕೆ 'ಚಿತ್ಸುಖೀ' ಎಂಬ ನಾಮಾಂತರವೂ ಇದೆ. ಇದರಲ್ಲಿ ನಾಲ್ಕು ಅಧ್ಯಾಯಗಳಿವೆ. ಈತನು ಶ್ರೀಹರ್ಷನಷ್ಟೇ ವಾದಪಟುವಾದರೂ ಖಂಡನದಷ್ಟೇ ಸಿದ್ಧಾಂತ ಮಂಡನಕ್ಕೂ ಗಮನವಿತ್ತಿದ್ದಾನೆ. ಆತ್ಮನ 'ಸ್ವಪ್ರಕಾಶತ್ವ'. 'ಸಂವಿದ್ರೂಪತ್ವ', 'ಮಿಥ್ಯಾತ್ವ' 'ಅವಿದ್ಯಾ', 'ಯಥಾರ್ಥತ್ವ'ಗಳನ್ನು ಮೊದಲನೆಯ ಅಧ್ಯಾಯದಲ್ಲಿ ವಿವರಿಸಿದರೆ, ಎರಡನೆಯದರಲ್ಲಿ ನೈಯಾಯಿಕ ಪ್ರಮೇಯಗಳಾದ ಭೇದ, ಪೃಥಕ್ತ್ವ, ಗುಣ, ಕರ್ಮ, ಸಾಮಾನ್ಯ, ವಿಶೇಷ, ಸಮವಾಯ, ಪ್ರತ್ಯಕ್ಷ, ಸಂಶಯ. ಭ್ರಾಂತಿ, ಸ್ಮೃತಿ, ಅನುಮಾನ, ಪಕ್ಷಧರ್ಮತಾ, ಹೇತು, ಉಪಮಾನ, ಅರ್ಥಾಪತ್ತಿ, ಭಾವ, ಅಭಾವ, ದ್ವೈತ, ಪರಿಮಾಣ, ಕಾರಣತಾ, ಕಾಲ, ದಿಕ್ ಇತ್ಯಾದಿಗಳನ್ನು ಖಂಡಿಸಿದ್ದಾನೆ. ಮೂರನೆಯ ಅಧ್ಯಾಯವೇ ಎಲ್ಲಕ್ಕಿಂತ ಚಿಕ್ಕದು. ಇದರಲ್ಲಿ ಬ್ರಹ್ಮಸಾಕ್ಷಾತ್ಕಾರ ಹಾಗೂ ಅವಿದ್ಯಾನಿವೃತ್ತಿಗಳನ್ನು ವಿವೇಚಿಸಿದ್ದಾನೆ. ನಾಲ್ಕನೆಯ ಅಧ್ಯಾಯದಲ್ಲಿ ಮುಕ್ತಿಯ ವಿವರಣೆಯಿದೆ.

ಅವೇದ್ಯತ್ವೇ ಸತಿ ಅಪರೋಕ್ಷವ್ಯವಹಾರಯೋಗ್ಯತ್ವಂ ಸ್ವಯಂಪ್ರಕಾಶಲಕ್ಷಣಮ್
(ಪು: ೯.)

ಎಂಬುದು ಸ್ವಯಂಪ್ರಕಾಶದ ಲಕ್ಷಣ. ಇದು ಅಂತಃಕರಣವೃತ್ತಿಗಳಿಗೆ ಅನ್ವಯಿಸುವುದಿಲ್ಲ: ಏಕೆಂದರೆ ಅವು ಅವೇದ್ಯವಾದರೂ ಅಪರೋಕ್ಷವ್ಯವಹಾರ ಯೋಗ್ಯತ್ವವನ್ನು ಪಡೆದಿಲ್ಲ. ಅನುವ್ಯವಸಾಯಕ್ಕೂ ಅನ್ವಯಿಸುವುದಿಲ್ಲ. ಏಕೆಂದರೆ—

> ಘಟಜ್ಞಾನೋದಯಸಮಯೇ ಹಿ ಮನಸಿ ಕ್ರಿಯಾ, ತತೋ ವಿಭಾಗಃ, ತತಃ ಪೂರ್ವಸಂಯೋಗವಿನಾಶಃ,ತತ ಉತ್ತರ ಸಂಯೋಗೋತ್ಪತ್ತಿಃ, ತತೋ ಜ್ಞಾನಾಂತರಂ, ಇತಿ ಅನೇಕಕ್ಷಣವಿಲಂಬನೇ ಉತ್ಪದ್ಯಮಾನಸ್ಯ ಜ್ಞಾನಸ್ಯಅಪರೋಕ್ಷತಯಾ ಪೂರ್ವಜ್ಞಾನಗ್ರಾಹಕತ್ವಾನುಪಪತ್ತೇಃ (ಪು. ೧೭)

ಹೀಗೆ ಅವನ ವಾದ ಶೈಲಿ ತರ್ಕನಿಶಿತವಾಗಿದೆ. ಮುಂದೆ ದ್ವೈತ ಸಂಪ್ರದಾಯದ ವ್ಯಾಸರಾಯರು ಇದರ ಖಂಡನೆಗೆ ಉದ್ಯುಕ್ತರಾದುದನ್ನು ನೋಡುತ್ತೇವೆ.

## ಪ್ರಕಾಶಾತ್ಮ—'ಪಂಚಪಾದಿಕಾ ವಿವರಣ'

ಮುಂದಿನವರು ಈತನನ್ನೇ ವಿವರಣ ಪ್ರಸ್ಥಾನದ ಪ್ರಥಮಾಚಾರ್ಯನೆಂದು ಗೌರವಿಸುತ್ತಾರೆ. 'ವಿವರಣಕಾರ'ನೆಂದು ಈತನನ್ನು ಉಲ್ಲೇಖಿಸುತ್ತಾರೆ. ಈತನು ವ್ಯಾಖ್ಯಾಕಾರನಾದರೂ ಇವನ

ವಿವರಣೆಗೆ ವಿಶೇಷ ಬೆಲೆಯಿದೆ. ಅವಿಧ್ಯೆ ಭಾವರೂಪವೆಂಬುದನ್ನೀತನು ಸಿದ್ಧ ಮಾಡಿಕೊಟ್ಟವನು. ಅವಿದ್ಯೆ ಭಾವರೂಪವಾದುದರಿಂದ ಅಧ್ಯಾಸಕ್ಕೆ ಉಪಾದಾನಕಾರಣವೆನಿಸಬಲ್ಲದು ; ಬ್ರಹ್ಮನ ಆನಂದಸ್ವರೂಪವನ್ನು ಮುಚ್ಚಿಡಬಲ್ಲದು. 'ಆವರಣಶಕ್ತಿ' ಅಧಿಕವಾದಾಗ ಅಜ್ಞಾನವೇ 'ಅವಿದ್ಯೆ'ಯೆನಿಸಿದರೆ, 'ವಿಕ್ಷೇಪಶಕ್ತಿ' ಅಧಿಕವಾದಾಗ ಅದೇ 'ಮಾಯೆ' ಯೆನಿಸುತ್ತದೆ. ಅವಿದ್ಯೆಯ ಆಶ್ರಯ ಶುದ್ಧ ಚೈತನ್ಯ ; ಅದರ ಪರಿಣಾಮ ಜೀವರ ಮೇಲೆ. ಹೀಗೆ ಬ್ರಹ್ಮನೇ ಅವಿದ್ಯೆಗೆ ಆಶ್ರಯವೂ ಹೌದು, ವಿಷಯವೂ ಹೌದು. ಬ್ರಹ್ಮ ಅವಿಕಾರಿಯಾದ್ದರಿಂದ ಮಾಯೆಯೇ ಜಗತ್ತಿಗೆ ವಿಕಾರಿ ಉಪಾದಾನ ಕಾರಣ. ಮಾಯಾಶಬಲ ಬ್ರಹ್ಮನೇ ಜಗತ್ತಿನ ಅಭಿನ್ನ ನಿಮಿತ್ತೋಪಾದನ-ಕಾರಣ ಎಂದು ವಿವರಣ ಸಿದ್ಧಮಾಡಿದೆ. ಬ್ರಹ್ಮ ಮತ್ತು ಮಾಯೆ ಹೇಗೆ ಜಗತ್ತಿನ ಕಾರಣವೆನ್ನಲು ಮೂರು ರೀತಿಯಾಗಿ ವಿವರಣ ನಿದರ್ಶಿಸಿದೆ. ಎರಡು ದಾರಗಳನ್ನು ಹೊಸೆದು ಮಾಡಿದ ಒಂದೇ ಹಗ್ಗದಂತೆ ಬ್ರಹ್ಮಮಾಯೆಗಳ ಕಾರಣತ್ವವೆಂಬುದು ಮೊದಲನೆಯದು. ಮಾಯಾಶಕ್ತಿವಿಶಿಷ್ಟವಾದ ಬ್ರಹ್ಮ ಕಾರಣವೆನ್ನುವುದು ಎರಡನೆಯದು. ಬ್ರಹ್ಮ ಮಾಯೆಗೆ ಅಧಿಷ್ಠಾನವಷ್ಟೇ ; ವಾಸ್ತವವಾಗಿ ಉಪದಾನಕಾರಣ ಮಾಯೆಯೊಂದೇ ಎಂಬುದು ಮೂರನೆಯದು. ಅಲ್ಲದೆ ಅಂತಃಕರಣ ಹಾಗೂ ಸಂಸ್ಕಾರರೂಪವಾಗಿರುವ ಅವಿಧ್ಯೆಯಲ್ಲಿ ಬ್ರಹ್ಮನ ಪ್ರತಿಬಿಂಬರೇ ಜೀವರು ಎಂಬ ಪ್ರತಿಬಿಂಬವಾದ ಪ್ರಕಾಶಾತ್ಮನ ವಿಶೇಷ ಸಿದ್ಧಾಂತವೆನ್ನ ಬಹುದು. ಸುರೇಶ್ವರನ ಆಭ್ಯಾಸವಾದಕ್ಕೆ ಇದು ವಿಲಕ್ಷಣವಾಗಿದೆ.

ವಿವರಣಗ್ರಂಥಕ್ಕೆ ಅಖಂಡಾನಂದನ (ಕ್ರಿ.ಶ. ೧೩೫೦) 'ತತ್ತ್ವದೀಪನ', ನೃಸಿಂಹಾಶ್ರ ಮನ (೧೬ನೆಯ ಶತಮಾನ) 'ಪ್ರಕಾಶಿಕಾ' ಎಂಬ ವ್ಯಾಖ್ಯಾನಗಳಿವೆ. ೧೬ನೆಯ ಶತಮಾನದಲ್ಲಿ ಶಾಂಕರಸೂತ್ರಭಾಷ್ಯಕ್ಕೆ ವಿಸ್ತೃತ ವ್ಯಾಖ್ಯೆಯಾದ "ರತ್ನಪ್ರಭಾ" ಎಂಬದನ್ನು ರಚಿಸಿದ ಗೋವಿಂದಾನಂದನು ವಿವರಣದ ಅನುಯಾಯಿಯೇ ಆಗಿದ್ದಾನೆ. ವಿದ್ಯಾರಣ್ಯರು (೧೪ನೆಯ ಶತಮಾನ) ಕೂಡ ತಮ್ಮ "ವಿವರಣಪ್ರಮೇಯಸಂಗ್ರಹ" ಮತ್ತು 'ಪಂಚದಶೀ' ಗ್ರಂಥಗಳಲ್ಲಿ ವಿವರಣ ಪ್ರಸ್ಥಾನವನ್ನೇ ವಿವರಿಸಿದ್ದಾರೆ.

## ಅಮಲಾನಂದ—ಕಲ್ಪತರು

ವಿವರಣ ಪ್ರಸ್ಥಾನಕ್ಕೆ ಅನುಗುಣವಾಗಿ ಶಾಂಕರಭಾಷ್ಯವನ್ನು 'ರತ್ನಪ್ರಭಾ' ವಿವರಿಸಿದರೆ' ಭಾಮತೀ ಪ್ರಸ್ಥಾನಕ್ಕೆ ಅನುಗುಣವಾಗಿ ಅದನ್ನು ವಿವರಿಸುವ ವ್ಯಾಖ್ಯಾನವೇ ಅಮಲಾನಂದನ "ಕಲ್ಪತರು". ಬ್ರಹ್ಮಸೂತ್ರಶಾಂಕರಭಾಷ್ಯದ ಸಾಂಪ್ರದಾಯಿಕ ಅಧ್ಯಯನ ಕ್ರಮದಲ್ಲಿ ಇವೆರಡು ವ್ಯಾಖ್ಯಾನಗಳಿಗೂ ವಿಶೇಷ ಮಾನ್ಯತೆಯಿದೆ. 'ಜೀವಾಜ್ಞಾನಂಜಗದ್ಬೀಜಂ' ಎಂದು ಇವನ ಮತ.

## ಆನಂದಗಿರಿ–ಶಾಂಕರಭಾಷ್ಯವ್ಯಾಖ್ಯಾನ

ಮೇಲಿನ ಎರಡು ವ್ಯಾಖ್ಯಾನಗ್ರಂಥಗಳಂತೆಯೇ ಪ್ರಸಿದ್ಧಿಪಾತ್ರವಾಗಿರುವ ಇನ್ನೊಂದು ಭಾಷ್ಯವ್ಯಾಖ್ಯಾನ ಆನಂದಗಿರಿಯದು. ಇವನು ದ್ವಾರಕಾಮಠಾಧೀಶನಾಗಿದ್ದವನು ಮತ್ತು ಆನಂದಜ್ಞಾನನೆಂದೂ ನಾಮಾಂತರವುಳ್ಳವನು. ಬ್ರಹ್ಮಸೂತ್ರಭಾಷ್ಯಕ್ಕೆ ಮಾತ್ರವಲ್ಲದೆ ಈತನು ಈಶಾವಾಸ್ಯ, ಕೇನ, ಮುಂಡಕ, ಮಾಂಡೂಕ್ಯ, ತೈತ್ತಿರೀಯ, ಛಾಂದೋಗ್ಯ, ಬೃಹದಾರಣ್ಯಕ ಎಂಬ ಉಪನಿಷದ್ಭಾಷ್ಯಗಳಿಗೂ, ತೈತ್ತಿರೀಯ ಬೃಹದಾರಣ್ಯಕ ಭಾಷ್ಯವಾರ್ತಿಕಗಳಿಗೂ ಟೀಕೆ ಟಿಪ್ಪಣಿಗಳನ್ನು ರಚಿಸಿ ಪ್ರಖ್ಯಾತನಾಗಿದ್ದಾನೆ. ಇದಲ್ಲದೆ ಉಪದೇಶಸಾಹಸ್ರೀ, ವಾಕ್ಯವೃತ್ತಿ, ಆತ್ಮಜ್ಞಾನೋಪದೇಶ, ಸ್ವರೂಪನಿರ್ಣಯ, ಎಂಬ ಶಂಕರಾಚಾರ್ಯರ ಪ್ರಕರಣ ಗ್ರಂಥಗಳಿಗೂ ವಿವೃತಿಗಳನ್ನು ರಚಿಸಿದ್ದಾನೆ. ಇದಲ್ಲದೆ "ತರ್ಕಸಂಗ್ರಹ" ವೆಂಬ ಒಂದು ಸ್ವತಂತ್ರ ಗ್ರಂಥದಲ್ಲಿ ವೈಶೇಷಿಕರ ಪ್ರಮೇಯಗಳನ್ನೆಲ್ಲ ವೇದಾಂತ ದೃಷ್ಟಿಯಿಂದ ಖಂಡಿಸಿದ್ದಾನೆ.

## ೧೪ನೆಯ ಶತಮಾನ

ವಿದ್ಯಾರಣ್ಯ—ಇವರು ವಿಜಯನಗರ ಸಾಮ್ರಾಜ್ಯದ ಸಂಸ್ಥಾಪಕರೆಂದೂ, ರಾಜಗುರುಗಳೆಂದೂ, ಶೃಂಗೇರಿ ಮಠಾಧೀಶರೆಂದೂ ಪ್ರಖ್ಯಾತರಾದವರು. ಇವರ ಗ್ರಂಥಗಳಲ್ಲಿ ವೈಶದ್ಯ-ವೈದುಷ್ಯಗಳು ಸಮಪ್ರಮಾಣದಲ್ಲಿ ಸಮಾವಿಷ್ಟವಾಗಿವೆ. ಇವರು ರಚಿಸಿರುವ ವೇದಾಂತ ಗ್ರಂಥಗಳು ನಾಲ್ಕು-ಪಂಚದಶೀ, ಜೀವನ್ಮುಕ್ತಿವಿವೇಕ, ವಿವರಣಪ್ರಮೇಯಸಂಗ್ರಹ ಮತ್ತು ವಾರ್ತಿಕಸಾರ. ಮೊದಲ ಮೂರೂ ಪ್ರಕರಣ ಗ್ರಂಥಗಳು.

> ವಂದೇಽರಣ್ಯಮಿವಾನಂತವಿದ್ಯಾನ್ ಶಾಂತಿಸುಖಾರ್ಣವಾನ್ ।
> ತತ ಬ್ರಹ್ಮೈಕ್ಯ ವಿಜ್ಞಾನಾನ್ ವಿದ್ಯಾರಣ್ಯಮುನೀಶ್ವರಾನ್ ॥

ಎಂಬ ಪ್ರಸಿದ್ಧ ಪ್ರಶಸ್ತಿ ಪದ್ಯದ ಮೇಲಿಂದ ವಿದ್ಯಾರಣ್ಯರ ಮಹಿಮೆಯನ್ನೂಹಿಸಿಕೊಳ್ಳಬಹುದು. ಪಂಚದಶಿಯನ್ನು ಗುರುಗಳಾದ ಭಾರತೀತೀರ್ಥರೊಡನೆ ಕೂಡಿಕೊಂಡು ಬರೆದರೆಂದು ತೋರಿಸುವ ಕೆಲವು ಮಾತುಗಳು ವ್ಯಾಖ್ಯಾನಗಳಲ್ಲಿ ದೊರೆಯುತ್ತವೆ. ವಿದ್ಯಾರಣ್ಯರು ಪೂರ್ವಾಶ್ರಮದಲ್ಲಿ 'ಮಾಧವ' ಎಂಬ ಹೆಸರಿನಿಂದ ವಿಜಯನಗರದ ಅರಸರ ಮಂತ್ರಿಗಳಾಗಿದ್ದವರು; ಪ್ರಸಿದ್ಧ ವೇದಭಾಷ್ಯಕಾರ ಸಾಯಣನ ಸಹೋದರರು. ಇವರ ಗುರುಗಳು ವಿದ್ಯಾತೀರ್ಥರು. ಶಂಕರ ದಿಗ್ವಿಜಯವನ್ನೂ ಈ ಮಾಧವರೇ ಬರೆದರೆಂದು ಹೇಳುತ್ತಾರೆ; ಆದರೆ ಅದು ಸಾಯಣ ಪುತ್ರ ಮಾಧವನ ಕೃತಿಯೆಂದು ಈಗ ಸಿದ್ಧವಾಗಿದೆ. ಇದೇ ಮಾಧವನೇ ಸರ್ವದರ್ಶನಸಂಗ್ರಹದ ಕಡೆಗೆ ಬರುವ 'ಶಾಂಕರದರ್ಶನ'ವನ್ನೂ ಬರೆದಿರಬೇಕೆಂದೂ ಸಂಶೋಧಕರು ತೀರ್ಮಾನಿಸಿದ್ದಾರೆ. ಈಗಾಗಲೇ ಹೇಳಿದಂತೆ ವಿದ್ಯಾರಣ್ಯರು ವಿವರಣಪ್ರಸ್ಥಾನಕ್ಕೆ ಗೌರವವನ್ನು

ಸಂಪಾದಿಸಿಕೊಟ್ಟ ಮಹನೀಯರು. ಅವರ 'ಪಂಚದಶಿ' ಅದ್ವೈತವೇದಾಂತದ ದರ್ಶನದಲ್ಲಿ ಅತ್ಯಂತ ಜನಪ್ರಿಯ ಗ್ರಂಥವೆನಿಸಿದೆ. 'ಜೀವನ್ಮುಕ್ತಿವಿವೇಕವು' ನಾನಾ ಗ್ರಂಥಸಾರವನ್ನೊಳಗೊಂಡ ಉತ್ತಮ ಕೈಪಿಡಿಯಾಗಿದೆ. ಪ್ರಥಮಾಭ್ಯಾಸಿಗಳಿಗೂ ಅರ್ಥವಾಗುವ, ಅಕ್ಲಿಷ್ಟ ಬರವಣಿಗೆ, ವಿದ್ಯಾರಣ್ಯರದು.

ಪಂಚದಶಿಯಲ್ಲಿ ೧೫ ಅಧ್ಯಾಯಗಳಿವೆ. ಸಚ್ಚಿದಾನಂದಬ್ರಹ್ಮ ಯಾವಾಗಲೂ ಬದಲಾಗದೆ. ಭಿನ್ನವಾಗದೇ ಸ್ವಯಂಪ್ರಕಾಶವಾಗಿ ಮೆರೆಯುವುದನ್ನು ಮೊದಲು ಸಮರ್ಥಿಸಿ ಅದೇ ಆತ್ಮಸ್ವರೂಪವೆಂದು ನಿರ್ಣಯಿಸುತ್ತಾರೆ. ಎಲ್ಲರಿಗೂ ಅದೇ ಪ್ರಿಯ. ಆನಂದಸ್ವರೂಪ ವಾದ್ದರಿಂದ ಜೀವರಿಗೆ ಅದರ ಸಾಕ್ಷಾತ್ಕಾರವಾಗದ್ದಕ್ಕೆ ಅವಿದ್ಯೆಯೇ ಕಾರಣ.

ಬ್ರಹ್ಮ, ಈಶ್ವರ, ಜೀವರ ಜೊತೆಗೆ 'ಈಶ್ವರಸಾಕ್ಷಿ', ಜೀವಸಾಕ್ಷಿ' ಗಳನ್ನೂ ವಿದ್ಯಾರಣ್ಯರು ನಿರ್ದೇಶಿಸಿದ್ದಾರೆ. ಸ್ಥೂಲ, ಸೂಕ್ಷ್ಮ, ಕಾರಣ ಶರೀರಾಧ್ಯಾಸಗಳಿಗೆಲ್ಲ ಸಾಕ್ಷಿಯೇ ಅಧಿಷ್ಠಾನ ವೆಂದು ವಿವರಿಸಿದ್ದಾರೆ.

ಮಾಯೆಯನ್ನು ಇಲ್ಲಿ 'ಶಕ್ತಿ 'ಯೆಂದೇ ವ್ಯವಹರಿಸಲಾಗಿದೆ-'ಶಕ್ತಿರಸ್ತ್ಯೈಶ್ವರೀ ಕಾಚಿತ್ ಸರ್ವವಸ್ತು ನಿಯಾಮಿಕಾ' (೩. ೩೮) 'ಚಿಚ್ಛಾಯಾವೇಶತಃ ಶಕ್ತಿಃ ಚೇತನೇವ ವಿಭಾತಿಸಾ' (೩. ೪೦).

ಜಗತ್ತಿನ ತೋರಿಕೆಯನ್ನು ಚಿತ್ರಕ್ಕೆ ಹೋಲಿಸಲಾಗಿದೆ. ಬಿಳಿಯ ಭಿತ್ತಿಯೇ ಶುದ್ಧ ಬ್ರಹ್ಮ ; ಬಿಳಿಯ ಬಣ್ಣವೇ ಅಂತರ್ಯಾಮಿ ; ಕಪ್ಪು ಬಣ್ಣವೇ ಸೂತ್ರಾತ್ಮ ; ಮಿಕ್ಕ ವರ್ಣಾಂತರಗಳು ವಿರಾಟ್ ; ಅಲ್ಲಿ ತೋರುವ ಆಕೃತಿಗಳೇ ಜಗತ್ತಿನ ಚರಾಚರಗಳು. ಬ್ರಹ್ಮನೇ ಮಾಯೆಯಲ್ಲಿ ಪ್ರತಿಬಿಂಬಿಸಿ ಈ ಎಲ್ಲ ತೋರಿಕೆಗಳನ್ನುಂಟುಮಾಡುತ್ತಾನೆ. ಪಂಚಭೂತವಿವೇಕ, ಪಂಚ ಕೋಶ, ದ್ವೈತವಿವೇಕ, ಚಿತ್ರದೀಪ, ಧ್ಯಾನದೀಪ, ಇವು ಇಲ್ಲಿಯೇ ಪ್ರಥಮತಃ ಬರುವ ಕೆಲವು ಪ್ರಕರಣಗಳ ಹೆಸರುಗಳು.

'ಜೀವನ್ಮುಕ್ತಿವಿವೇಕ'ದಲ್ಲಿ ಜೀವನ್ಮುಕ್ತಿಗೆ ಹಿನ್ನೆಲೆಯಾಗಿ ವಿವಿದಿಷಾಸಂನ್ಯಾಸ, ವಿದ್ವತ್ಸಂನ್ಯಾಸ, ಆತ್ಮಾನಾತ್ಮವಿವೇಕ, ಇಹಾಮುತ್ರಾರ್ಥಫಲಭೋಗ ವಿರಾಗ, ಶಮದಮಾದಿ ಸಾಧನ ಸಂಪತ್ತು, ಮುಮುಕ್ಷುತ್ವಗಳ ವಿಶ್ಲೇಷಣೆ ಬರುವುದಲ್ಲದೆ ಭಗವದ್ಗೀತೆಯ ಸ್ಥಿತಪ್ರಜ್ಞ, ಗುಣಾತೀತ ಹಾಗೂ ವಾಸಿಷ್ಠರಾಮಾಯಣ - ಪ್ರಶಾಂತಸಾಧಕನ ಅನುಭವ ಓದುಗರಿಗೆ ಆಸಕ್ತಿ ಕೆರಳಿಸುವಂತೆ ಸುಂದರ ಭಾಷೆಯಲ್ಲಿ ಸಂಗೃಹೀತವಾಗಿವೆ.

ಅಖಂಡಾನಂದನ 'ತತ್ತ್ವದೀಪನ', ರಾಮಾದ್ವಯನ 'ವೇದಾಂತಕೌಮುದಿ' ಗಳು ಈ ಶತಮಾನದ ಇತರ ಉಲ್ಲೇಖನಾರ್ಹ ಕೃತಿಗಳು. ವೃತ್ತಿಜ್ಞಾನ ಲಕ್ಷಣವನ್ನು ಕೌಮುದಿಯಲ್ಲಿ ಹೀಗೆ ಹೇಳಿದೆ :—ವೃತ್ತೇರುಭಯಸಂಲಗ್ನತ್ವಾಚ್ಚ ತದಭಿವ್ಯಕ್ತಚೈತನ್ಯಸ್ಯಾಪಿ ತಥಾತ್ವೇನ ಮಯೇದಂ ವಿದಿತಮಿತಿ ಸಂಶ್ಲೇಷಪ್ರತ್ಯಯಃ.

## ಹದಿನೈದನೆಯ ಶತಮಾನ

### ಸದಾನಂದ–ವೇದಾಂತಸಾರ

ವೇದಾಂತ ಪ್ರಕ್ರಿಯೆಗಳನ್ನೆಲ್ಲ ಕ್ರಮವಾಗಿ ವಿಂಗಡಿಸಿ, ಸುಲಭವಾಗಿಯೂ ಸಂಗ್ರಹವಾಗಿಯೂ ಪ್ರಥಮಾಭ್ಯಾಸಿಗಳಿಗೆ ಉಪಯುಕ್ತವಾಗುವಂತೆ ವ್ಯವಸ್ಥಿತರೀತಿಯಿಂದ ಕೊಡುವ ಈ ಗ್ರಂಥವು ಭಾರತದಲ್ಲೆಲ್ಲ ತುಂಬಾ ಜನಪ್ರಿಯತೆಯನ್ನು ಗಳಿಸಿದೆ. ಇದಕ್ಕೆ ನೃಸಿಂಹಾಶ್ರಮ ಹಾಗೂ ರಾಮತೀರ್ಥರ ವ್ಯಾಖ್ಯಾನಗಳು ಉಪಲಬ್ಧವಿವೆ. ಅದ್ವೈತದಲ್ಲಿ ಬಂದ ಭಿನ್ನಪ್ರಸ್ಥಾನಗಳಲ್ಲಿ ಸಮನ್ವಯ ಕಲ್ಪಿಸುವ ಪ್ರಯತ್ನವನ್ನಿಲ್ಲಿ ಕಾಣಬಹುದು. ಅರಣ್ಯದಲ್ಲಿ ವ್ಯಷ್ಟಿಯನ್ನು ಗಮನಿಸಿ ಮರಗಳೆನ್ನುವಂತೆ ಅಜ್ಞಾನವೂ ವ್ಯಷ್ಟಿಯನ್ನು ಗಮನಿಸಿದಾಗ ಅನೇಕ; ಸಮಷ್ಟಿಯನ್ನು ಗಮನಿಸಿದಾಗ ಒಂದು ಅರಣ್ಯವೆನ್ನುವಂತೆ ಅಜ್ಞಾನವೂ ಏಕ. ಹೀಗೆಯೇ ಮಾಯೋಪಹಿತ ಈಶ್ವರ ಮತ್ತು ಅವಿದ್ಯೋಪಹಿತ ಪ್ರಾಜ್ಞ (ಸುಷುಪ್ತಾತ್ಮ)ರಿಗೂ ಸಮನ್ವಯ ಸಾಧಿಸಲಾಗಿದೆ. ವ್ಯಾವಹಾರಿಕ ಜೀವವೇ ವಿಜ್ಞಾನಮಯಕೋಶವೆಂದು ಸಮೀಕರಿಸಲಾಗಿದೆ. ವಿಶದವಾಗಿ ಪಂಚೀಕರಣ ಮತ್ತು ಭೂತಸೃಷ್ಟಿ–ಪ್ರಕ್ರಿಯೆಗಳನ್ನು ವಿವರಿಸಲಾಗಿದೆ) ಬ್ರಹ್ಮಸಾಕ್ಷಾತ್ಕಾರಕ್ಕೆ ಶ್ರವಣದಂತೆ ಯೋಗದ ಸವಿಕಲ್ಪಕ–ನಿರ್ವಿಕಲ್ಪಕ ಸಮಾಧಿಗಳ ಅಗತ್ಯವನ್ನು ಎತ್ತಿ ಹೇಳಲಾಗಿದೆ. ತತ್ತ್ವಮಸಿ ವಾಕ್ಯಾರ್ಥಕ್ಕೆ ಅನ್ವಯ–ವ್ಯತಿರೇಕ ವಿಧಾನವನ್ನು ಬಿಟ್ಟು ಅಧ್ಯಾರೋಪ–ಅಪವಾದ ವಿಧಾನವನ್ನು ಅನುಸರಿಸಲಾಗಿದೆ. ಹೀಗೆ ಸಂಗ್ರಹ ಗ್ರಂಥವಾದರೂ ವೇದಾಂತಸಾರದಲ್ಲಿ ನೂತನಾಂಶಗಳಿವೆ.

ನೃಹಿಂಹಾಶ್ರಮ–ಇವರು ಭಟ್ಟೋಜಿದೀಕ್ಷಿತರ ಸಹೋದರ ರಂಗೋಜಿಭಟ್ಟರ ಗುರುಗಳು. 'ವಿವರಣಭಾವಪ್ರಕಾಶಿಕಾ', 'ಭೇದಧಿಕ್ಕಾರ', ಸುಬೋಧಿನೀ (ಎಂಬ ವೇದಾಂತಸಾರವ್ಯಾಖ್ಯೆ ಇವರ ಕೃತಿಗಳು. ಇವುಗಳಲ್ಲಿ 'ಭೇದಧಿಕ್ಕಾರವು' ಸ್ವತಂತ್ರ ಕೃತಿ, ಖಂಡನ ಪರವಾಗಿದೆ.

## ಹದಿನಾರನೆಯ ಶತಮಾನ

### ಅಪ್ಪಯ್ಯದೀಕ್ಷಿತ–ಸಿದ್ಧಾಂತಲೇಶಸಂಗ್ರಹ

ಇವರು ೧೦೪ ಗ್ರಂಥಗಳನ್ನು ಬರೆದರೆಂದು ಪ್ರಖ್ಯಾತರಾದ ಮಹಾವಿದ್ವಾಂಸರು, ಸರ್ವತಂತ್ರ ಸ್ವತಂತ್ರರು. ಕಂಚಿಯ ಬಳಿಯ ಅಡ್ಯೆಯಪಾಲಂ ಇವರ ಸ್ಥಳ, 'ಅದ್ವೈತ ವಿದ್ಯಾ ಮುಕುರ'ವನ್ನು ಬರೆದ ರಂಗರಾಜಾಧ್ವರಿಯ ಪುತ್ರರು ಇವರು. ಶಿವಾನಂದನ 'ದೀಕ್ಷಿತ ವಂಶಾವಲಿ'ಯಂತೆ ಇವರ ಕಾಲ ೧೫೫೨-೧೬೨೬. ಆದರೆ ಪ್ರೊ. ಮಹಾಲಿಂಗಶಾಸ್ತ್ರಿಗಳ ಶಾಸನಾಧಾರಿತ ಸಂಶೋಧನೆಯಂತೆ ೧೫೨೦–೧೫೯೩. ಪೆನಗೊಂಡೆಯ ಚಿನ್ನತಿಮ್ಮ, ವೆಂಕಟಪತಿ, ವೆಲ್ಲೂರಿನ ಚಿನ್ನಬೊಮ್ಮ – ಈ ಅರಸರನ್ನು ಸ್ಮರಿಸಿದ್ದಾರೆ. ಚಿನ್ನಬೊಮ್ಮನು ಇವರಿಗೆ ಕನಕಾಭಿಷೇಕ ಮಾಡಿದ್ದನು. ಈ ಚಿನ್ನದಿಂದ ಜನ್ಮಸ್ಥಳದಲ್ಲಿ ಕಾಲಕಂಠೇಶ್ವರನ ದೇವಾಲಯವನ್ನು

ಇವರು ಮಾಡಿಸಿದರು. ಚೋಳದೇಶದ ಚೆಲ್ಲಪ್ಪ, ಮದುರೆಯ ಪಾಂಡ್ಯರಾಜ ಚಂದ್ರಶೇಖರರೂ ಇವರಿಗೆ ಸನ್ಮಾನಮಾಡಿದ್ದರು. ದ್ವೈತಮತದ ವಿಜಯೀಂದ್ರರ ಹಾಗೂ ವಿಶಿಷ್ಟಾದ್ವೈತ ಮತದ ತಾತಾಚಾರ್ಯರ ಸಮಕಾಲಿಕರು. ಚಿದಂಬರದ ನಟರಾಜನ ಸನ್ನಿಧಿಯಲ್ಲಿ ಮುಕ್ತರಾದರೆಂದು ಪ್ರತೀತಿಯಿದೆ.

ಅಪ್ಪಯ್ಯದೀಕ್ಷಿತರು ಭಾಮತೀಪ್ರಸ್ಥಾನದ ಪರಮನಿರ್ಣಯವೆನಿಸಿರುವ "ಪರಿಮಲ" ಎಂಬ ವ್ಯಾಖ್ಯಾನವನ್ನು ಅಮಲಾನಂದರ "ಕಲ್ಪತರು"ವಿಗೆ ರಚಿಸಿದ್ದಾರೆ. ಅದಕ್ಕಿಂತ ಹೆಚ್ಚಾಗಿ, ಶಂಕರೋತ್ತರ ಕಾಲದಲ್ಲಿ ಬೆಳೆದ ವೇದಾಂತತತ್ತ್ವದ ಹಲವು ಕವಲುಗಳನ್ನು ಸರಿಯಾಗಿ ಗಮನಿಸಿ, ವಿಂಗಡಿಸಿ, ಕ್ರಮಬದ್ಧವಾಗಿ ತತ್ತ್ವದ ಸಾರಸರ್ವಸ್ವವನ್ನೂ ಒಳಗೊಂಡ "ಸಿದ್ಧಾಂತಲೇಶ-ಸಂಗ್ರಹ"ದಿಂದ ಕೀರ್ತಿಭಾಜನರಾಗಿದ್ದಾರೆ.

"ನಾಜ್ಞಾನಂ ಶುದ್ಧಚೈತನ್ಯಾಶ್ರಯಮ್, ಕಿಂತು ಜೀವಾಶ್ರಯಂ ಬ್ರಹ್ಮ ವಿಷಯಂ ಚ",

"ನಯನಪಟಲವತ್ ಪುರುಷಾಶ್ರಿತಮೇವಾಜ್ಞಾನಂ ವಿಷಯಾವರಕಮ್, ವಿಷಯಾವಗುಂಠನಪಟವದ್ವಿಷಯಗತಮೇವಾಜ್ಞಾನಂ ತದಾವರಕಮ್"

"ವಸ್ತುನಸ್ಸಮಸತ್ತಾಕೋಽನ್ಯಥಾಭಾವಃ ಪರಿಣಾಮಃ, ತದಸಮಸತ್ತಾಕೋ ವಿವರ್ತಃ"

ಇವೇ ಮುಂತಾದ ಸೂತ್ರಪ್ರಾಯವಾದ ಸ್ಪಷ್ಟ ವಚನಗಳಿಂದ ವೇದಾಂತದ ಸೂಕ್ಷ್ಮಾರ್ಥಗಳು ಬುದ್ಧಿವೇದ್ಯವಾಗುವಂತೆ ಮಾಡುವಲ್ಲಿ ಯಶಸ್ವಿಯಾಗಿದ್ದಾರೆ. ಸಿದ್ಧಾಂತಭೇದಗಳನ್ನು ನಿರೂಪಿಸುವಲ್ಲಿ ನಿಷ್ಪಕ್ಷಪಾತತೆಯನ್ನು ತೋರಿಸಿದ್ದಾರೆ. ಇದು ಒಂದು ಉತ್ತಮ ಪಠ್ಯಗ್ರಂಥ.

## ಮಧುಸೂದನ ಸರಸ್ವತಿ-ಅದ್ವೈತಸಿದ್ಧಿ

ಅದ್ವೈತಸಿದ್ಧಿ, ಅದ್ವೈತರತ್ನರಕ್ಷಣ, ವೇದಾಂತಕಲ್ಪಲತಿಕಾ ಎಂಬ ಸ್ವತಂತ್ರಗ್ರಂಥಗಳನ್ನಲ್ಲದೆ ಇವರು ಸಿದ್ಧಾಂತಬಿಂದು ಮುಂತಾದ ವಿವರಣ ಗ್ರಂಥಗಳನ್ನೂ ಬರೆದಿದ್ದಾರೆ. ಸಿದ್ಧಿಗ್ರಂಥಗಳ ಸಾಲಿನಲ್ಲಿ ಶಿಖರಪ್ರಾಯವಾದ ಗ್ರಂಥವೇ "ಅದ್ವೈತಸಿದ್ಧಿ". ಅದ್ವೈತ ದರ್ಶನದ ಕಡೆಯ ಮಾತು ಅದೇ ಎನ್ನಬಹುದು. ವ್ಯಾಸತೀರ್ಥರು 'ನ್ಯಾಯಾಮೃತ'ದಲ್ಲಿ ಮಾಡಿದ್ದ ಮಿಥ್ಯಾತ್ವ ಖಂಡನಗಳಿಗೆಲ್ಲ ಸಮರ್ಥವಾಗಿ ಈ ಗ್ರಂಥದಲ್ಲಿ ಪರಿಹಾರಗಳನ್ನು ಹೇಳಲಾಗಿದೆ. ಇದಕ್ಕೂ ದ್ವೈತಾದ್ವೈತ ವಿವಾದವನ್ನು ಮುಂದುವರಿಸುವ 'ಲಘುಚಂದ್ರಿಕಾ', 'ಗುರುಚಂದ್ರಿಕಾ' ಮುಂತಾದ ವಿಸ್ತೃತ ವ್ಯಾಖ್ಯಾನಗಳಿವೆ. ಯಾವುದೇ ವಸ್ತು ಬಾಧಿತವಾಗುವವರೆಗೆ ಮಾತ್ರ ಸತ್ಯ. ಆತ್ಮಸಾಕ್ಷಾತ್ಕಾರವು ಪ್ರಾಪ್ತವಾದಾಗ ಜಗದಾಭಾಸವು ಮಿಥ್ಯೆಯೆನಿಸುತ್ತದೆ. ಮಿಥ್ಯಾತ್ವಕ್ಕೆ ಮಧುಸೂದನ ಸರಸ್ವತಿಗಳು ಐದು ವ್ಯಾಖ್ಯೆಗಳನ್ನು ನೀಡಿದ್ದಾರೆ–

೧) ಸದಸದ್ವಿಲಕ್ಷಣವಾಗಿರುವುದು  ೨) ತನ್ನ ಆಶ್ರಯದಲ್ಲಿಯೇ ಖಂಡಿಸಲ್ಪಡುವುದು
೩) ಸರಿಯಾದ ಜ್ಞಾನದಿಂದ ಬಾಧ್ಯವಾದುದು  ೪) ತನ್ನ ಅಭಾವವಿರುವಲ್ಲಿ ಭಾಸವಾಗುವುದು
೫) ಸದಸದ್ವಿಲಕ್ಷಣವಾದರೂ ಇದ್ದಂತೆ ತೋರುವುದು.

ಕಗ್ಗತ್ತಲೆಯಲ್ಲಿ ಪ್ರಕಾಶವು ಬಂದರೆ ಕತ್ತಲನ್ನು ನಾಶಪಡಿಸಿ ಪ್ರಕಟವಾಗುವಂತೆ, ಜ್ಞಾನ ಕೂಡ ವಸ್ತುವನ್ನು ಮೊದಲು ಆವರಿಸಿಕೊಂಡಿದ್ದ ಅಜ್ಞಾನವನ್ನು ಕಳೆದು ಆ ವಸ್ತುವನ್ನು ಚಿತ್ತದಲ್ಲಿ ಪ್ರಕಟಗೊಳಿಸುತ್ತದೆ. ಹೀಗೆ ಅಜ್ಞಾನವು ಸಾಕ್ಷಿಚೈತನ್ಯದಿಂದ ವ್ಯಕ್ತವಾಗುವುದೇ ಹೊರತು ಶುದ್ಧಚೈತನ್ಯದಿಂದಲ್ಲ. ಸಾಕ್ಷಿಚೈತನ್ಯವೆಂದರೆ ಅವಿದ್ಯೆಯು ಬೇರೆ ಬೇರೆ ಅವಸ್ಥೆಗಳಲ್ಲಿ ಪ್ರತಿಬಿಂಬಿತವಾದ ಶುದ್ಧಚೈತನ್ಯವೇ.

ಅದ್ವೈತಸಿದ್ಧಿಯು ವೇದಾಂತದ ಶಾಸ್ತ್ರಗ್ರಂಥಗಳಲ್ಲೆಲ್ಲ ಪ್ರೌಢವಾದುದು. ಪೂರ್ವಮೀಮಾಂಸೆಯ ಅನೇಕ ನ್ಯಾಯಗಳನ್ನು ಅದು ವಾದಸಮರ್ಥನೆಗೆ ಬಳಸಿಕೊಂಡಿದೆ ತಾರ್ಕಿಕರೂ ದ್ವೈತಿಗಳೂ ಅದ್ವೈತದ ಮೇಲೆ ನಡೆಸುತ್ತಿದ್ದ ರಭಸದ ದಾಳಿಯನ್ನು ಎದುರಿಸಿ ಪ್ರತಿಗೈಯುವ ಸಾಮರ್ಥ್ಯವನ್ನು ಅದು ಅದ್ವೈತ ಸಿದ್ಧಾಂತಕ್ಕೆ ತಂದು ಕೊಟ್ಟಿದೆಯೆನ್ನಬಹುದು.

ಅವರು ಬಾಲರ ಸುಖಬೋಧಕ್ಕೆಂದು ಬರೆದ ಮಿಕ್ಕ ಲಘುಗ್ರಂಥಗಳು ಕೂಡ ವೃದ್ಧರ ಗಂಭೀರ ವಿವೇಚನೆಗೆ ಯೋಗವಾಗುವಂತಿವೆ—

"ಬಾಲಾರ್ಥಂ ದಿಹಿತಾಪ್ಯಥಾಪಿ ಚ ಗುರೋಃ ಸಂದರ್ಭಗರ್ಭಾ ಗಿರೋ
ಬುಧ್ಯನ್ತೇ ಕಿಲ ಕೈಶ್ಚಿದೇವ ಸುಚಿರಾದ್ ವೃದ್ಧೈಃ ಸಮೃದ್ಧೈರಪಿ"
(ಬಿಂದು ಸಂದೀಪನ ವ್ಯಾಖ್ಯಾ)

## ಪ್ರಕಾಶಾನಂದ—ಸಿದ್ಧಾಂತಮುಕ್ತಾವಲೀ

ಅದ್ವೈತವಾದವು ಗೌಡಪಾದರ ಕಾಲದ ಸ್ಥಿತಿಗಿಂತ ದೂರ ಸಾಗಿ ಮಾಯಾಶಕ್ತಿವಿಶಿಷ್ಟ ಬ್ರಹ್ಮನ ವಿಚಾರವನ್ನೇ ಹೆಚ್ಚಾಗಿ ಮಾಡುತ್ತ ಹೋಗಿ ದ್ವೈತಪರತೆಯ ಕಡೆಗೆ ಮುಂದು ವರಿದಂತೆ ಮೇಲ್ನೋಟಕ್ಕೆ ತೋರುತ್ತದೆ. (ನೋಡಿ—ದಾಸ್‌ಗುಪ್ತಾ, ೨. ಪು. ೨೨೦) ಮಾಯೆ ಯೊಂದು ಜಗದುಪಾದಾನವಾದ ಭಾವಪದಾರ್ಥವೋ ಎಂಬಂತೆ ಮುಂದಿನವರ ವ್ಯಾಖ್ಯಾನ ಗಳಿರುತ್ತವೆ. ಇದಕ್ಕೆ ಹೇಸಿ, ಇದನ್ನು ಪೂರ್ಣವಾಗಿ ನಿವಾರಿಸಲು ಮಾಡಿದ ಮಹಾಪ್ರಯತ್ನ ಪ್ರಕಾಶಾನಂದನದು. ಈತನ ವಾದಕ್ಕೆ 'ದೃಷ್ಟಿ-ಸೃಷ್ಟಿ-ವಾದ'ವೆಂದು ಹೆಸರು. ಅವನ ಪ್ರಕಾರ ಕಾರ್ಯ-ಕಾರಣವಾದವೇ ನಿಜವಾಗಿ ವೇದಾಂತದಲ್ಲಿ ಅಸಂಗತ. ಅವಿದ್ಯೆ ಅನಿರ್ವಚ ನೀಯವೆಂದರೆ 'ಪ್ರತಿಪನ್ನೋಪಾಧಿಯಲ್ಲಿ ನಿಷೇಧಪ್ರತಿಯೋಗಿ'ಯೆಂದರ್ಥವೆನ್ನುತ್ತಾನೆ. ಅವನ ಇನ್ನೊಂದು ಕೊಡುಗೆಯೇ 'ಏಕ-ಜೀವ-ವಾದ' "ಬ್ರಹ್ಮಾಜ್ಞಾನಾಜ್ಜಗಜ್ಜನ್ಮ ಬ್ರಹ್ಮಣೋ

ಕಾರಣತ್ವತಃ। ಅಧಿಷ್ಠಾನತ್ವಮಾತ್ರೇಣ ಕಾರಣಂ ಬ್ರಹ್ಮಗೀಯತೇ॥". ಹಾಗೆಯೆ ಎಂತಲ್ಲ ಜಗತ್ತು ಶಶವಿಷಾಣದಷ್ಟೇ ತುಚ್ಛ ಇವನ ಪ್ರಕಾರ. ಪ್ರಾರಬ್ಧಕರ್ಮ ಮುಕ್ತನಿಗೆ ಉಳಿಯಲಾರದಾಗಿ, ಜೀವನ್ಮುಕ್ತಸ್ಥಿತಿಯೂ ಇಲ್ಲವೆನ್ನುತ್ತಾನೆ. ಮುಕ್ತನಲ್ಲದ ಗುರು ವೇದವಾಕ್ಯಗಳನ್ನು ಬೋಧಿಸಿ ಮುಕ್ತಿಬೋಧಕನಾಗಬಹುದು. " ಕಲ್ಪಿತೋಽಪ್ಯುಪದೇಷ್ಟಾ ಸ್ಯಾತ್ ಯಥಾಶಾಸ್ತ್ರಂ ಸಮಾದಿಶೇತ್''. ಹೀಗೆ ಈ ಗ್ರಂಥ ಅದ್ವೈತ ವಿಕಾಸದಲ್ಲಿ ಸ್ವತಂತ್ರ ದಿಕ್ಕನ್ನು ಹಿಡಿದಿದೆ.

## ಧರ್ಮರಾಜಾಧ್ವರಿ–ವೇದಾಂತ ಪರಿಭಾಷಾ

ಇವನು ಸಮರ್ಥ ವೇದಾಂತಿಯಿದ್ದಂತೆ ಪ್ರಬಲ ನೈಯಾಯಿಕನೂ ಆಗಿದ್ದನು. ವೇದಾಂತ ಶಾಸ್ತ್ರದ ಪ್ರಮಾಣ-ಪ್ರಮೇಯ ವಿಚಾರಗಳನ್ನೆಲ್ಲ ನವ್ಯನ್ಯಾಯ ಸಮ್ಮತವಾದ ನಿಷ್ಕೃಷ್ಟ ಭಾಷೆಯಲ್ಲಿ ಅಳವಡಿಸಿ ವೇದಾಂತದ ಶಾಸ್ತ್ರಮಹತ್ವವನ್ನು ಹೆಚ್ಚಿಸಿದ ಕೀರ್ತಿ ಧರ್ಮರಾಜಾಧ್ವರಿಯದು. ಇವನೂ ವಿವರಣ ಪ್ರಸ್ಥಾನದ ಅನುಯಾಯಿಯೇ. ಭಾರತದಲ್ಲೆಲ್ಲಾ ವೇದಾಂತದ ಉತ್ಕೃಷ್ಟ ಪಠ್ಯಗ್ರಂಥವೆಂದು ವೇದಾಂತಪರಿಭಾಷೆ ಖ್ಯಾತಿಪಡೆದಿದೆ. ಇವನು, ನ್ಯಾಯಶಾಸ್ತ್ರದಲ್ಲಿ 'ತತ್ತ್ವಚಿಂತಾಮಣಿ'ಗೆ 'ತರ್ಕಚೂಡಾಮಣಿ'ಯೆಂಬ ವ್ಯಾಖ್ಯೆಯನ್ನೂ ವೇದಾಂತದಲ್ಲಿ ಪಂಚಪಾದಿಕೆಗೆ ಒಂದು ವ್ಯಾಖ್ಯಾನವನ್ನೂ ರಚಿಸಿದ್ದಾನೆ. ಪ್ರಸಿದ್ಧವಾದ ಈ ಪಠ್ಯಗ್ರಂಥದ ಹೆಚ್ಚಿನ ವಿವರಣೆ ಅನಗತ್ಯ. ಇದಕ್ಕೂ ಅನೇಕ ವ್ಯಾಖ್ಯಾನಗಳು ದೊರೆತಿವೆ. ಅದರಲ್ಲಿ 'ಪ್ರಕಾಶಿಕಾ'ಕಾರನಾದ ಪೆದ್ದದೀಕ್ಷಿತನು ಧರ್ಮರಾಜಾಧ್ವರಿಯನ್ನು ಹೀಗೆ ಪ್ರಶಂಸೆ ಮಾಡಿದ್ದಾನೆ:—

ಯೇನಾಕಾರಿ ಕುವಾದಿವಾರಣಸೃಣಿಃ ಸತ್ತರ್ಕಚೂಡಾಮಣಿ–
ರ್ಯಸ್ಯಾಜ್ಞಾ ಧರಣೀಶಸಂಘಮುಕುಟೇ ಮಂದಾರಮಾಲಾಯಿತಾ ।
ಯಚ್ಛಿಷ್ಯಾಃ ಪ್ರತಿವಾದಿಮಲ್ಲಧಿಷಣಾಪಾಂಡಿತ್ಯಪಾಟಚ್ಚರಾಃ
ಸೋಽಯಂ ಸಜ್ಜನಕಲ್ಪಕೋ ವಿಜಯತೇ ಶ್ರೀಧರ್ಮರಾಜಾಧ್ವರೀ ॥

ಪ್ರತ್ಯಕ್ಷಾದಿ ಪ್ರಮಾಣಗಳ ಪ್ರಾಮಾಣ್ಯವೆಲ್ಲ ವ್ಯಾವಹಾರಿಕವೇ, ಉಪನಿಷದ್ವಾಕ್ಯ ಮಾತ್ರ ತತ್ತ್ವಾವೇದಕ ಎಂಬುದು ಇಲ್ಲಿಯೇ (ಪ್ರಕಾಶಿಕಾ) ಸ್ಪಷ್ಟವಾಗಿ ತಿಳಿದುಬರುತ್ತದೆ.

ಪ್ರತ್ಯಕ್ಷಾದಿಪ್ರಮಾಣಾನಾಂ ಪ್ರಾಮಾಣ್ಯಂ ವ್ಯಾವಹಾರಿಕಮ್ ।
ಅದ್ವೈತಾಗಮವಾಕ್ಯಂ ತು ತತ್ತ್ವಾವೇದನಲಕ್ಷಣಮ್ ॥

## ೧೭ನೆಯ ಶತಮಾನ

ಕೃಷ್ಣಾನಂದ–ಸಿದ್ಧಾಂತ ಸಿದ್ಧಾಂಜನ
ಭಟ್ಟೋಜಿದೀಕ್ಷಿತ–ತತ್ತ್ವಕೌಸ್ತುಭ (ತತ್ತ್ವದೀಪನವ್ಯಾಖ್ಯಾ)
ಲಕ್ಷ್ಮೀನೃಸಿಂಹ–ಆಭೋಗ (ಕಲ್ಪತರುವ್ಯಾಖ್ಯಾ)

## ೧೮ನೆಯ ಶತಮಾನ

ಸದಾನಂದ ಕಾಶ್ಮೀರಕ ಅದ್ವೈತಬ್ರಹ್ಮಸಿದ್ಧಿ

ಅದ್ವೈತಾನಂದ- ಬ್ರಹ್ಮವಿದ್ಯಾಭರಣ (ಸೂತ್ರಭಾಷ್ಯದ ವಿಸ್ತೃತವ್ಯಾಖ್ಯಾ)

ಇವನು ಹೆಚ್ಚಾಗಿ ಭಾಮತೀ ಪ್ರಸ್ಥಾನವನ್ನು ಅನುಸರಿಸಿದಲ್ಲಿ ವಿವರಣ ಪ್ರಸ್ಥಾನವನ್ನೂ ಸಮನ್ವಯಮಾಡಿಕೊಂಡಿದೆ.

## ೧೯ನೆಯ ಶತಮಾನ

ಗಂಗಾಧರ ಸರಸ್ವತೀ-ಸ್ವಾರಾಜ್ಯಸಿದ್ಧಿ

ಸಿದ್ಧಾಂತ ಬಿಂದು ಶೇಕರ (ಸಿದ್ಧಾಂತಲೇಶಸಂಗ್ರಹವ್ಯಾಖ್ಯಾ)

ಹೀಗೆ ಅದ್ವೈತವಿದ್ಯಾಪ್ರವಾಹ ಇಂದಿನವರೆಗೂ ಅವಿಚ್ಛಿನ್ನಧಾರೆಯಾಗಿ ಹರಿದು ಬಂದಿದೆ.

* * * *

೯

# ವಿಶಿಷ್ಟಾದ್ವೈತ ದರ್ಶನ

## ಐತಿಹಾಸಿಕ ಹಿನ್ನೆಲೆ :

ವೇದಾಂತ ದರ್ಶನದ ಪ್ರಕಾರಗಳಲ್ಲಿ ವಿಶಿಷ್ಟಾದ್ವೈತವೂ ಒಂದು. ಈ ಸಿದ್ಧಾಂತಕ್ಕೆ ಪ್ರಸ್ಥಾನತ್ರಯಗಳು ಮುಖ್ಯವಾಗಿ ಆಧಾರವಾಗಿವೆ. ಅತಿ ಪ್ರಾಚೀನವಾದ ಉಪನಿಷತ್ತಿನ ವಿಚಾರಧಾರೆಗನುಗುಣವಾಗಿ ಈ ಸಿದ್ಧಾಂತವು 'ಚಿದಚಿದ್ವಿಶಿಷ್ಟವಾದ ಬ್ರಹ್ಮವೊಂದೇ ತತ್ತ್ವ' ಎಂಬ ನಿರ್ಣಯಕ್ಕೆ ಬಂದಿದೆ. ಜೀವಾತ್ಮರುಗಳ ಮತ್ತು ಪ್ರಕೃತಿಯ ಸತತ್ತ್ವವನ್ನು ಅಂಗೀಕರಿಸಿದರೂ ಅವು ಬ್ರಹ್ಮವಸ್ತುವಿಗೆ ಸರ್ವಥಾ ಅಧೀನವಾಗಿ ಬ್ರಹ್ಮವನ್ನು ಬಿಟ್ಟು ಎಂದೂ ಇರಲಾರದವುಗಳೆಂದು ಎಂದರೆ–ಬ್ರಹ್ಮವಸ್ತುವಿಗೆ 'ಅಪೃಥಕ್ಸಿದ್ಧ ವಿಶೇಷಣ' ಗಳೆಂದು ಪ್ರತಿಪಾದಿಸಿ 'ಚೇತನಾಚೇತನಗಳೊಡನೆ ಕೂಡಿದ ಬ್ರಹ್ಮ ಒಂದೇ' ಎಂಬ ವಿಶಿಷ್ಟಾದ್ವೈತವನ್ನು ಸಾಧಿಸಿದೆ. ಉಪನಿಷ್ಪ್ರತಿಪಾದ್ಯವಾದ ಪರಬ್ರಹ್ಮವಸ್ತು ಶ್ರೀಮನ್ನಾರಾಯಣನೆಂದು ಇದರ ನಿರ್ಣಯ. ಈ ಸಿದ್ಧಾಂತದಲ್ಲಿ ಈಶ್ವರ ಭಾವನೆ ಪಾಂಚರಾತ್ರಾಗಮಗಳಲ್ಲಿ ಪ್ರತಿಪಾದಿಸಿರುವ ಭಾಗವತ ಸಂಪ್ರದಾಯಕ್ಕನುಗುಣವಾಗಿದೆ. ಈ ಸಿದ್ಧಾಂತದಲ್ಲಿ ಪಾಂಚರಾತ್ರಾಗಮಗಳ ಉಪದೇಶದ ಹಾಗೂ ಉಪನಿಷತ್ತುಗಳ ಉಪದೇಶದ ಸಮನ್ವಯವನ್ನು ಕಾಣಬಹುದು. ಋಗ್ವೇದದ ಪುರುಷಸೂಕ್ತ (೧೦–೯೦), ವಿಷ್ಣುಸೂಕ್ತ (೧–೨೨, ೨–೧೫೪, ೧–೧೫೬), ಮೊದಲಾದವುಗಳಲ್ಲಿಯೂ ಕಠ, ಮೈತ್ರೀ, ಮಹನಾರಾಯಣೀಯ ಮೊದಲಾದ ಉಪನಿಷತ್ತುಗಳಲ್ಲಿಯೂ ವಿಷ್ಣುಪಾರಮ್ಯವನ್ನು ಹೇಳಿದೆ. ಮಹಾಭಾರತದ ನಾರಾಯಣೀಯ, ವಿಷ್ಣುಪುರಾಣ ಮೊದಲಾದವೂ ವಿಷ್ಣುವಿನ ಪರತ್ವವನ್ನು ಪ್ರತಿಪಾದಿಸುತ್ತವೆ. ಭಗವದ್ಗೀತೆಯಲ್ಲಿಯೂ ವಾಸುದೇವ ಕೃಷ್ಣನ ಪರತ್ವದ ನಿರೂಪಣೆ ಇದೆ. ಇವುಗಳಲ್ಲೆಲ್ಲಾ ಕಂಡುಬರುವ ಈಶ್ವರ ಸ್ವರೂಪವು ವಿಶಿಷ್ಟಾದ್ವೈತದ ಈಶ್ವರಸ್ವರೂಪವಾಗಿ ರೂಪುಗೊಂಡಿದೆ.

ಅತಿ ಪ್ರಾಚೀನ ಕಾಲದಿಂದ ಪ್ರಚಾರದಲ್ಲಿದ್ದ ಈ ಸಿದ್ಧಾಂತದ ಪುನಸ್ಸಮರ್ಥನೆಯನ್ನು ಭಗವಾನ್ ರಾಮಾನುಜರು ಮಾಡಿದರು. ಅದ್ವೈತ ಸಿದ್ಧಾಂತದಲ್ಲಿ ಬೋಧಿಸಿದ ಜೀವ ಬ್ರಹ್ಮೈಕ್ಯಕ್ಕೆ ಪ್ರತಿಯಾಗಿ ಜೀವವು ಬ್ರಹ್ಮಕ್ಕಿಂತ ಪ್ರತ್ಯೇಕವಾದ ಸತ್ಯ ಎಂದು ಈ ದರ್ಶನ

ಒತ್ತಿ ಹೇಳಿತು. ರಾಮಾನುಜರಿಗೂ ಬಹಳ ಹಿಂದೆ ದಕ್ಷಿಣ ಭಾರತದಲ್ಲಿ ಜನಿಸಿದ 'ಆಳ್ವಾರರುಗಳ' ಎಂಬ ಸಂತರು ತಮ್ಮ ಭಕ್ತಿ ಪೂರ್ಣವಾದ ತಮಿಳು ಗಾಥೆಗಳಲ್ಲಿ ಶ್ರೀಮನ್ನಾರಾಯಣ ಪರತ್ವ, ಜೀವಬ್ರಹ್ಮಭೇಧ, ಭಗವದವತಾರಗಳ ಸತ್ಯತ್ವ, ಭಕ್ತಿ ಪ್ರಪತ್ತಿಗಳ ಮೋಕ್ಷೋಪಾಯತ್ವ, ಭಗವತ್ಪ್ರಾಪ್ತಿಯು ಪುರುಷಾರ್ಥತ್ವ ಮೊದಲಾದವುಗಳನ್ನು ಉಪದೇಶಿಸಿದ್ದಾರೆ. 'ದ್ರಾವಿಡ ಪ್ರಬಂಧಗಳು' ಎಂದು ಹೆಸರಾದ ಆಳ್ವಾರರುಗಳ ಈ ಹಾಡುಗಳು ತಮಿಳುವೇದ ಎಂದು ಅಂಗೀಕೃತವಾಗಿವೆ. ಈ ಸಿದ್ಧಾಂತವನ್ನು ಸಮರ್ಥಿಸುವಲ್ಲಿ ಈ ತಮಿಳು ವೇದ ಪ್ರಭಾವವೂ ಗಮನಾರ್ಹವಾಗಿ ಆಗಿದೆ. ಈ ಸಿದ್ಧಾಂತದ ಸ್ಥಾಪನೆಗೆ ಪ್ರಸ್ಥಾನತ್ರಯದ ತೆಯೆ ಈ ದ್ರಾವಿಡ ವೇದಾಂತವೂ ಆಧಾರವೆಂದು ಒಪ್ಪಲಾಗಿದೆ. ಆದುದರಿಂದಲೇ ಈ ಸಿದ್ಧಾಂತವನ್ನು 'ಉಭಯವೇದಾಂತ' ಎನ್ನುತ್ತಾರೆ.

ವಿಶಿಷ್ಟಾದ್ವೈತ ಸಿದ್ಧಾಂತವನ್ನು ಪ್ರವರ್ತನ ಗೊಳಿಸಿದವರಲ್ಲಿ ಮೂವರು ಆಚಾರ್ಯರು ಮುಖ್ಯರು. ಇವರು ನಾಥಮುನಿ, ಯಾಮುನಮುನಿ ಮತ್ತು ರಾಮಾನುಜರು. ನಾಥಮುನಿಗಳು (ಕ್ರಿ.ಶ. ೯ನೇ ಶತಮಾನದ ಉತ್ತರಾರ್ಧ) ರಚಿಸಿದ ಕೃತಿಗಳು ಇಂದು ಉಪಲಬ್ಧವಾಗಿಲ್ಲ. ಯಾಮುನಮುನಿಗಳು (ಕ್ರಿ.ಶ. ೧೦೫೦) ನಾಥಮುನಿಗಳ ಪೌತ್ರರು. ಈ ಸಿದ್ಧಾಂತಕ್ಕೆ ನಿರ್ದಿಷ್ಟವಾದ ರೂಪವೊಂದನ್ನು ತಂದು ಕೊಟ್ಟವರು ಇವರೇ. ಇವರು ಆಗಮ ಪ್ರಾಮಾಣ್ಯ, ಸಿದ್ಧಿತ್ರಯ, ಗೀತಾರ್ಥಸಂಗ್ರಹ, ಸ್ತೋತ್ರರತ್ನ ಮೊದಲಾದ ಕೃತಿಗಳನ್ನು ರಚಿಸಿದರು. ಈ ಸಿದ್ಧಾಂತದ ಸಮರ್ಥನೆಯನ್ನು ರಾಮಾನುಜರು(ಕ್ರಿ.ಶ. ೧೦೧೭–೧೧೩೭) ತಮ್ಮ ಶ್ರೀಭಾಷ್ಯ, ವೇದಾಂತಸಾರ, ವೇದಾಂತದೀಪ, ವೇದಾರ್ಥಸಂಗ್ರಹ, ಭಗವದ್ಗೀತಾಭಾಷ್ಯಮೊದಲಾದ ಕೃತಿಗಳ ಮೂಲಕವೂ ಮತ್ತು ತಮ್ಮ ಉಪದೇಶಗಳ ಮೂಲಕವೂ ಮಾಡಿದರು. ರಾಮಾನುಜರು ಈ ಕಾರ್ಯದಲ್ಲಿ ಅನುಪಮವಾದ ಯಶಸ್ಸನ್ನು ಪಡೆದರು. ಮುಂದೆ ಈ ದರ್ಶನವನ್ನು 'ರಾಮಾನುಜ ದರ್ಶನ' ಎಂದೇ ಕರೆಯತೊಡಗಿದರು. ರಾಮಾನುಜರ ನಂತರ ಅನೇಕರು ಈ ಸಿದ್ಧಾಂತದ ಬಗೆಗೆ ವ್ಯಾಪಕವಾಗಿ ಬರೆದಿದ್ದಾರೆ. ಅವುಗಳಲ್ಲಿ ಅನೇಕ ಗ್ರಂಥಗಳು ಕಳೆದು ಹೋಗಿವೆ. ಆದರೂ ಉಪಲಬ್ಧವಾಗಿರುವ ಗ್ರಂಥಗಳೂ ಅಪಾರವಾಗಿವೆ. ಇವರಲ್ಲಿ ಶ್ರೀವತ್ಸಾಂಕ ಚಿಹ್ನಮಿಶ್ರರು (ಕ್ರಿ. ಶ. ೧೨ನೆಯ ಶತಮಾನ). ಶ್ರೀಪರಾಶರಭಟ್ಟರು (ಕ್ರಿ. ಶ. ೧೨೦೦) ವಾತ್ಸ್ಯವರದಾಚಾರ್ಯರು (ಕ್ರಿ.ಶ. ೧೩ನೇ ಶತಮಾನ), ಸುದರ್ಶನ ಭಟ್ಟಾರಕರು ಮತ್ತು ಆತ್ರೇಯ ರಾಮಾನುಜರು (ಕ್ರಿ.ಶ. ೧೩ನೇ ಶತಮಾನ) ಮುಖ್ಯರಾದವರು, ಶ್ರೀ ಸುದರ್ಶನ ಭಟ್ಟಾರಕರು ಶ್ರೀಭಾಷ್ಯಕ್ಕೆ 'ಶ್ರುತಪ್ರಕಾಶಿಕೆ' ಎಂಬ ವ್ಯಾಖ್ಯಾನ ಬರೆದರು. ವೇದಾಂತ ದೇಶಿಕರೆಂದು ವಿಖ್ಯಾತರಾದ ಶ್ರೀಮದ್ವೇಂಕಟನಾಥರು(ಕ್ರಿ.ಶ. ೧೨೬೮–೧೩೬೯) ಈ ಸಿದ್ಧಾಂತ ಪತ್ರಿಪಾದಕರಲ್ಲಿ ರಾಮಾನುಜರ ನಂತರ ಬರುವ ಮಹಾವ್ಯಕ್ತಿ. ರಾಮಾನುಜರು ಪ್ರವರ್ತನ ಗೊಳಿಸಿದ ಸಿದ್ಧಾಂತವನ್ನು ಇವರು ಸರ್ವತೋಭದ್ರವಾಗಿ ಬಲಪಡಿಸಿದರು. ವೇಂಕಟನಾಥರ ಹಿರಿಯ ಸಮಕಾಲೀನರಾದ ಮೇಘನಾದಾರಿಸೂರಿಗಳು 'ನಯದ್ಯುಮಣಿ' ಎಂಬ

ಕೃತಿಯನ್ನು ರಚಿಸಿ ಈ ಸಿದ್ಧಾಂತದ ಪ್ರಮೇಯ ಪ್ರಮಾಣಗಳನ್ನು ನಿರೂಪಿಸಿದರು. ಶ್ರೀ ಪಿಳ್ಳೈಲೋಕಾಚಾರ್ಯರು ಈ ಕಾಲಕ್ಕೇ ಸೇರಿದವರು. ಇಲ್ಲಿಂದ ಮುಂದೆ ಬಂದವರು ಈ ಸಿದ್ಧಾಂತದ ಪ್ರಮೇಯಾಂಶಗಳನ್ನು ಸಂಸ್ಕೃತ ಮತ್ತು ತಮಿಳು ಭಾಷೆಗಳಲ್ಲಿ ನಿರೂಪಿಸುತ್ತಾ ಬಂದರು. ಸ್ವತಂತ್ರಕೃತಿಗಳೂ ವ್ಯಾಖ್ಯಾನ ಉಪವ್ಯಾಖ್ಯಾನಗಳೂ ಅಪಾರವಾಗಿ ಬೆಳೆದವು. ಹಿಂದಿನ ಆಚಾರ್ಯರುಗಳ ಕೃತಿಗಳ ವಿವರಣೆಯನ್ನು ಮುಂದೆ ಬಂದವರು ಬಹುಮುಖವಾಗಿ ಮಾಡಿದರು. ಕ್ರಿ.ಶ. ೧೬ನೆಯ ಶತಮಾನದಲ್ಲಿದ್ದ ರಂಗರಾಮಾನುಜರು ಉಪನಿಷತ್ತುಗಳಿಗೆ ಭಾಷ್ಯಗಳನ್ನು ಬರೆದರು. ಕ್ರಿ.ಶ. ೧೭ನೇ ಶತಮಾನದಲ್ಲಿದ್ದ ಶ್ರೀನಿವಾಸ ಎಂಬುವರು 'ಯತೀಂದ್ರ ಮತ ದೀಪಿಕಾ' ಎಂಬ ಕೃತಿಯನ್ನು ರಚಿಸಿದರು. ಈ ಸಿದ್ಧಾಂತವನ್ನು ಕುರಿತ ವಿವೇಚನೆಗಳೂ ವಿವರಣೆಗಳೂ ಅಂದಿನಿಂದ ಇಂದಿನವರೆಗೂ ಬೆಳೆಯುತ್ತಾ ಬಂದಿವೆ.

## ತತ್ತ್ವಸ್ವರೂಪ

ಈ ಸಿದ್ಧಾಂತದಲ್ಲಿ ತಿಳಿಯಬೇಕಾದ ಪ್ರಮೇಯ ಎಂದರೆ ಸರ್ವಕಾರಣ ಕಾರಣನೂ ಸರ್ವ ಚೇತನಾಚೇತನವಿಶಿಷ್ಟನೂ ಆದ ಶ್ರೀಮನ್ನಾರಾಯಣನೇ. 'ಯದ್ವಿಷಯೇಣ ಭ್ರಮೇಣ ಸಂಸರಾಮಃ ಯದ್ವಿಷಯೇಣ ತತ್ತ್ವಜ್ಞಾನೇನ ಅಪವರ್ಜ್ಯಾಮಹಿ ತದಿಹ ನಃ ಪ್ರಕರ್ಷೇಣ ಮೇಯಂ ಪ್ರಮೇಯಂ'ಎಂದು ವೇಂಕಟನಾಥರು ನ್ಯಾಯಪರಿಶುದ್ಧಿಯಲ್ಲಿ ಈ ಅಂಶವನ್ನು ತಿಳಿಸುತ್ತಾರೆ. ವೇಂಕಟನಾಥರು ತಮ್ಮ ನ್ಯಾಯ ಸಿದ್ಧಾಂಜನದಲ್ಲಿ 'ಅಶೇಷಚಿದಚಿತ್ಪ್ರಕಾರಂ ಬ್ರಹ್ಮ ಏಕಮೇವ, ತತ್ತ್ವಂ, ತತ್ರ ಪ್ರಕಾರ ಪ್ರಕಾರಿಣೋಃ ಪ್ರಕಾರಾಣಾಂ ಚ ಮಿಥೋಽತ್ಯಂತಭೇದೇಽಪಿ ವೈಶಿಷ್ಟ್ಯಾದಿವಿವಕ್ಷಯಾ ಏಕತ್ವವ್ಯಪದೇಶಃ ತದಿತರ ನಿಷೇಧಶ್ಚ'ಎಂದು ತತ್ತ್ವಸ್ವರೂಪವನ್ನು ಪ್ರತಿಪಾದಿಸಿದ್ದಾರೆ. ಚೇತನವರ್ಗ ಮತ್ತು ಅಚೇತನಗಳೊಡನೆ ಕೂಡಿದ ಬ್ರಹ್ಮವಸ್ತು ಒಂದೇ ತತ್ತ್ವ.ವಿಶೇಷ್ಯಕ್ಕೂ ವಿಶೇಷಣಗಳಿಗೂ ಭೇದವಿದ್ದರೂ, ವಿಶೇಷಣಗಳಲ್ಲಿಯೇ ಪರಸ್ಪರ ಭೇದ ವಿದ್ದರೂ ಆ ವಿಶೇಷಗಳೆಲ್ಲದರಿಂದ ಕೂಡಿದ ವಸ್ತು ಒಂದೇ ಆದ ಕಾರಣ 'ತತ್ತ್ವವು ಒಂದೇ ಎಂದು ಹೇಳಿ ತದಿತರವಾದುದನ್ನು ನಿಷೇಧಿಸಿದೆ. ಈ ದೃಷ್ಟಿಯಿಂದ ಈ ದರ್ಶನ 'ವಿಶಿಷ್ಟಾದ್ವೈತ' ವೆನಿಸಿದೆ. ಈ ದರ್ಶನದ ಅಸಾಧಾರಣವಾದ ವೈಶಿಷ್ಟ್ಯವನ್ನು ಹೀಗೆ ಹೇಳಬಹುದು-(೧) ಸರ್ವ ಶ್ರುತಿವಾಕ್ಯಗಳಿಗೂ ಮುಖ್ಯಾರ್ಥವನ್ನೇ ಹೇಳುವುದು (೨) ಬಹ್ಮವಸ್ತು ತನ್ನನ್ನುಳಿದ ಎಲ್ಲಕ್ಕೂ ಆತ್ಮವಾಗಿ ತನ್ನನ್ನುಳಿದುದೆಲ್ಲವನ್ನೂ ಶರೀರವನ್ನಾಗಿ ಹೊಂದಿದೆ ಎನ್ನುವುದು.ಶ್ರುತಿಗಳಲ್ಲಿ ಬರುವ ಭೇದಶ್ರುತಿಗಳು ಜೀವ ಪರಮಾತ್ಮರಿಗೆ ಭೇದವನ್ನು ಹೇಳುತ್ತವೆ. 'ತತ್ತ್ವಮಸಿ' ಮೊದಲಾದ ಶ್ರುತಿವಾಕ್ಯಗಳು ಜೀವ ಪರಮಾತ್ಮರಿಗೆ ಅಭೇದವನ್ನು ಹೇಳುತ್ತವೆ. ಇವೆಲ್ಲ ವಾಕ್ಯಗಳಿಗೂ ಮುಖ್ಯಾರ್ಥವನ್ನು ಹೇಳುವುದು ಇತರ ದರ್ಶನಗಳವರಿಗೆ ಕಷ್ಟವಾಗುತ್ತದೆ. ಆದರೆ ಈ ದರ್ಶನ ಬೃಹದಾರಣ್ಯಕೋಪನಿಷತ್ತಿನ ಅಂತರ್ಯಾಮಿ ಬ್ರಾಹ್ಮಣದ (೩-೭) ಆಧಾರದ ಮೇಲೆ ಬ್ರಹ್ಮವಸ್ತು ತನ್ನನ್ನುಳಿದ ಸಕಲ ಚೇತನಾ ಚೇತನ ಪದಾರ್ಥಗಳಲ್ಲಿ ಆತ್ಮವಾಗಿರುತ್ತಾ ಆ ಸಕಲ ಪದಾರ್ಥಗಳನ್ನೂ ತನಗೆ ಶರೀರವನ್ನಾಗಿ ಹೊಂದಿದೆ ಎಂಬ ತತ್ತ್ವವನ್ನು ಪ್ರತಿಪಾದಿಸಿ

ಬ್ರಹ್ಮವಸ್ತುವಿಗೂ ಇತರ ಪದಾರ್ಥಗಳಿಗೂ ಶರೀರ ಶರೀರಭಾವ ಸಂಬಂಧವನ್ನು ನಿರೂಪಿಸುತ್ತದೆ; ಹಾಗೂ ಆಪಾತತಃ ವಿರುದ್ಧವೆಂದು ತೋರುವ ಸಕಲ ಶ್ರುತಿವಾಕ್ಯಗಳಿಗೂ ಮುಖ್ಯಾರ್ಥವನ್ನು ಹೇಳುತ್ತದೆ. ಅಭೇದ ವಾಕ್ಯಗಳು ಸರ್ವಶರೀರಿಯಾದ ಬ್ರಹ್ಮವಸ್ತುವನ್ನು ಹೇಳುವುದರಿಂದಲೂ ಭೇದವಾಕ್ಯಗಳೂ ಜೀವ, ಜಗತ್ತು ಮತ್ತು ಪರಮಾತ್ಮ ಇವರ ಸ್ವರೂಪ ಸ್ವಭಾವಗಳಲ್ಲಿರುವ ಭೇದವನ್ನು ಹೇಳುವುದರಿಂದಲೂ ಈ ಎರಡು ಬಗೆಯ ವಾಕ್ಯಗಳಲ್ಲಿ ಯಾವ ವಿರೋಧವೂ ಇಲ್ಲವೆಂದು ಈ ಸಿದ್ಧಾಂತ ನಿಶ್ಚಯಿಸುತ್ತದೆ. ಈ ಸಿದ್ಧಾಂತ ಭೇದವನ್ನೂ, ಅಭೇದವನ್ನೂ ಹಾಗೆಯೇ, ಭೇದಾಭೇದವನ್ನೂ ಪರಸ್ಪರ ವಿರೋಧವಿಲ್ಲದೆ ಸಮರ್ಥಿಸುವುದನ್ನು ರಾಮಾನುಜರು ತಮ್ಮ ವೇದಾರ್ಥ ಸಂಗ್ರಹದಲ್ಲಿ 'ಸರ್ವಶರೀರತಯಾ ಸರ್ವಪ್ರಕಾರಂ ಬ್ರಹ್ಮೈವಾವಸ್ಥಿತಮಿತಿ ಅಭೇದಃ ಸಮರ್ಥಿತಃ ; ಏಕಮೇವ ಬ್ರಹ್ಮ ನಾನಾಭೂತಚಿದಚಿದ್ವಸ್ತುಪ್ರಕಾರಂ ನಾನಾತ್ವೇನ ಅವಸ್ಥಿತ ಮಿತಿ ಭೇದಾಭೇದೌ ; ಅಚಿದ್ವಸ್ತುನಶ್ಚ ಚಿದ್ವಸ್ತುನಶ್ಚ ಈಶ್ವರಸ್ಯಚ ಸ್ವರೂಪ ಸ್ವಭಾವವೈ ಲಕ್ಷಣ್ಯಾತ್ ಅಸಂಕರಾಚ್ಚ ಭೇದಃ ಸಮರ್ಥಿತಃ' ಎಂದು ನಿರೂಪಿಸಿದ್ದಾರೆ.

ಬ್ರಹ್ಮವಸ್ತುವಿಗೂ ಇತರ ಚೇತನಾಚೇತನ ಪದಾರ್ಥಗಳಿಗೂ ಶರೀರಿ ಶರೀರ ಸಂಬಂಧ ಹೇಳುವುದು ಈ ಸಿದ್ಧಾಂತದ ಪ್ರಧಾನ ಪ್ರತಿತಂತ್ರವಾಗಿದೆ. ಇಲ್ಲಿ ಶರೀರವೆಂದರೆ ಭೋಗಾಯತನವೆಂದಾಗಲೀ, ಅವಯವಗಳ ಸಂಘಾತವೆಂದಾಗಲೀ, ಕರ್ಮದಿಂದ ಬಂದುದೆಂದಾಗಲೀ ಅರ್ಥವಲ್ಲ. ಚೇತನಾಚೇತನಾತ್ಮಕವಾದ ಜಗತ್ತು ಈಶ್ವರನಿಗೆ ಅತ್ಯಂತ ಪರತಂತ್ರವಾಗಿದೆ ಯೆಂಬುದನ್ನು ತಿಳಿಸಲು ನಿರೂಪಿಸಿರುವ ಸಂಬಂಧ ಇದು. ಹೇಗೆ ಶರೀರದ ಇರುವಿಕೆಗೆ ಆತ್ಮವು ಆಧಾರವೋ, ಹೇಗೆ ಶರೀರವು ಆತ್ಮನಿಂದ ನಿಯಮಿಸಲ್ಪಡುತ್ತದೆಯೋ, ಹೇಗೆ ಶರೀರದಿಂದಾಗುವ ಪ್ರಯೋಜನ ಆತ್ಮನಿಗೆ ಆಗಿದೆಯೋ ಹಾಗೆ ಬ್ರಹ್ಮವಸ್ತು ಉಳಿದುದೆಲ್ಲಕ್ಕೂ ಆಧಾರ, ನಿಯಾಮಕ ಮತ್ತು ಶೇಷಿ ಎಂಬುದನ್ನು ಈ ಸಂಬಂಧ ತಿಳಿಸುತ್ತದೆ. ಇದರಿಂದ ಸಿದ್ಧವಾಗುವ ಅಂಶಗಳನ್ನು ಹೀಗೆ ಹೇಳಬಹುದು.

ಈ ಸಿದ್ಧಾಂತದಲ್ಲಿ ಪದಾರ್ಥವಿಭಾಗಮಾಡುವಾಗ ಚಿತ್, ಅಚಿತ್ ಮತ್ತು ಈಶ್ವರ ಎಂದು ತತ್ತ್ವತ್ರಯವನ್ನು ಹೇಳುವುದುಂಟು. ಪ್ರಾಪ್ಯವಾದ ಬ್ರಹ್ಮವಸ್ತು, ಪ್ರಾಪ್ತವಾದ

---

(೧) ಚಿದಚಿದ್ವಿಶಿಷ್ಟವಾದ ಬ್ರಹ್ಮವಸ್ತು ಒಂದೇ ; ಚೇತನ, ಅಚೇತನ ಮತ್ತು ಬ್ರಹ್ಮವಸ್ತುವಿನ ಸ್ವರೂಪಸ್ವಭಾವಗಳು ವಿಲಕ್ಷಣವಾದವು.

(೨) ಶರೀರದ ದೋಷ ಆತ್ಮನಿಗೆ ಸಂಬಂಧಿಸದ ಕಾರಣ ಬ್ರಹ್ಮವಸ್ತು ನಿರ್ವಿಕಾರವಾದುದು.

(೩) ಪರಮಾತ್ಮನು ಕರ್ಮಾಧ್ಯಕ್ಷನಾದ ಕಾರಣ ಶರೀರದಿಂದಾಗುವ ಸುಖದುಃಖಾದಿಗಳ ಸಂಬಂಧ ಅವನಿಗಿಲ್ಲ.

(೪) ಚೇತನಾಚೇತನಗಳು ಅವನಿಗೆ ಹೀಗೆ ಶರೀರವಾಗಿರುವುದು ಅವನ ಸರ್ವೇಶ್ವರತ್ವವನ್ನು ಸ್ಥಾಪಿಸುತ್ತದೆ.

ಜೀವ, ಪ್ರಾಪ್ತ್ಯ, ಪಾಯ ಪ್ರಾಪ್ತಿಯ ಫಲ ಮತ್ತು ಪ್ರಾಪ್ತಿ ವಿರೋಧಿ ಎಂಬ ಅರ್ಥ ಪಂಚಕವನ್ನು ನಿರೂಪಿಸುವುದೂ ಉಂಟು. ಇವು ಸಾಧಕರ ದೃಷ್ಟಿಯಿಂದ ಮಾಡಿದ ವಿಭಾಗ. ಈ ಸಿದ್ಧಾಂತದಲ್ಲಿ ಅಂಗೀಕರಿಸಿರುವ ಪದಾರ್ಥಗಳನ್ನೆಲ್ಲಾ ವ್ಯಾಪಕವಾಗಿ ವೇಂಕಟನಾಥರು ತತ್ತ್ವ ಮುಕ್ತಾಕಲಾಪದಲ್ಲಿ (೧-೬) ನಿರೂಪಿಸಿದ್ದಾರೆ. ಪ್ರಮೇಯವು ದ್ರವ್ಯ ಮತ್ತು ಅದ್ರವ್ಯ ಎಂದು ಎರಡು ಬಗೆ. ದ್ರವ್ಯವು ಜಡ, ಅಜಡ ಎಂದು ಎರಡು ಬಗೆ. ಜಡದ್ರವ್ಯವು ಅವ್ಯಕ್ತ, ಕಾಲ ಎಂದು ಎರಡು ವಿಧ. ಅಜಡದ್ರವ್ಯವು ಪ್ರತ್ಯಕ್ ಮತ್ತು ಪರಾಕ್ ಎಂದು ಎರಡು ಬಗೆ. ಪ್ರತ್ಯಕ್ ತತ್ತ್ವವು ಜೀವ, ಈಶ್ವರ ಎಂದು ಎರಡು ಬಗೆ. ಪರಾಕ್‌ತತ್ತ್ವವು ನಿತ್ಯವಿಭೂತಿ ಮತ್ತು ಧರ್ಮಭೂತಜ್ಞಾನ ಎಂದು ಎರಡು ಬಗೆ. ಅದ್ರವ್ಯವು ಸತ್ತ್ವ, ರಜಸ್ಸು, ತಮಸ್ಸು, ಶಬ್ದ, ಸ್ಪರ್ಶ, ರೂಪ, ರಸ, ಗಂಧ, ಶಕ್ತಿ ಮತ್ತು ಸಂಯೋಗ ಎಂದು ಹತ್ತು ಬಗೆ. ದ್ರವ್ಯವನ್ನು ಜಡ ಅಜಡ ಎಂದು ವಿಭಾಗ ಮಾಡಿರುವುದೂ, ಅಜಡದ್ರವ್ಯವು ಸ್ವಯಂಪ್ರಕಾಶವಾದ ನಿತ್ಯವಿಭೂತಿ ಮತ್ತು ಧರ್ಮಭೂತಜ್ಞಾನವನ್ನೊಳಗೊಂಡಿರುವುದೂ ಈ ದರ್ಶನದ ವೈಶಿಷ್ಟ್ಯ. ಇವೆಲ್ಲವೂ ಎಲ್ಲ ಅವಸ್ಥೆಗಳಲ್ಲಿಯೂ ಸತ್ಯವಾದವು ಎಂಬುದು ಈ ಸಿದ್ಧಾಂತದ ನೆಲೆ.

## ಜೀವಾತ್ಮರು

ಜೀವಾತ್ಮರು ಚೈತನ್ಯಸ್ವರೂಪರು. ದೇಹ, ಇಂದ್ರಿಯ, ಮನಸ್ಸು, ಪ್ರಾಣ ಮತ್ತು ಬುದ್ಧಿ ಇವುಗಳಿಗಿಂತ ಬೇರೆಯಾದವರು. ಇವರು ನಿತ್ಯರು. ಸತ್ಯಭೂತರಾದವರು. ಈಶ್ವರನಿಗಿಂತ ಬೇರೆಯಾದವರಾದರೂ ಯಾವ ಅವಸ್ಥೆಯಲ್ಲಿಯೂ ಅವನನ್ನು ಬಿಟ್ಟಿರಲಾರದವರು. ಇವರು ಅನಂತರು. ಒಂದೊಂದು ಶರೀರದಲ್ಲಿಯೂ ಬೇರೆ ಬೇರೆಯಾಗಿರುವವರು. ಹೇಗೆ ಜ್ಞಾನ ಸ್ವರೂಪರೋ ಹಾಗೆಯೇ ಜ್ಞಾನಕ್ಕೆ ಆಶ್ರಯರಾದವರು. ಆದುದರಿಂದ ಜ್ಞಾನಸ್ವರೂಪರು ಮತ್ತು ಜ್ಞಾನಗುಣಕರು. ಕರ್ತೃತ್ವ, ಭೋಕ್ತೃತ್ವ, ಜ್ಞಾತೃತ್ವಗಳನುಳ್ಳ ಇವರು ಅಣುಸ್ವರೂಪರು. 'ಜ್ಞಾನಾನಂದಮಯಸ್ತ್ವಾತ್ಮಾ ಶೇಷೋ ಹಿ ಪರಮಾತ್ಮನಃ' ಎಂದಂತೆ ಪರಮಾತ್ಮನಿಗೂ ಶೇಷಭೂತರಾದವರು ಆತ್ಮರುಗಳು ಬದ್ಧರು, ಮುಕ್ತರು ಮತ್ತು ನಿತ್ಯರು ಎಂದು ಮೂರು ಬಗೆ. ಅನಾದಿಯಾದ ಕರ್ಮದ ಕಾರಣ ಪ್ರಕೃತಿ ಸಂಬಂಧ ಹೊಂದಿ ಸಂಸಾರದಲ್ಲಿರುವವರು ಬದ್ಧರು ಸಾಧನಾನುಷ್ಠಾನಗಳನ್ನಾಚರಿಸಿ ಈಶ್ವರನನ್ನೊಲಿಸಿಕೊಂಡು ಈ ಸಂಸಾರದ ಸಂಬಂಧವನ್ನು ಕಳೆದುಕೊಂಡವರು ಮುಕ್ತರು ಎಂದೂ ಪ್ರಕೃತಿ ಸಂಬಂಧವನ್ನೇ ಹೊಂದಿರುವವರು ನಿತ್ಯರು. ಈ ಎಲ್ಲ ಬಗೆಯ ಆತ್ಮರುಗಳೂ ಭಗವಂತನಿಗೇ ಎಲ್ಲಾ ಅವಸ್ಥೆಗಳಲ್ಲಿಯೂ ಶೇಷಭೂತರಾದವರು.

## ಜಗತ್ತು

ಈ ಸಿದ್ಧಾಂತಕ್ಕನುಸಾರವಾಗಿ ಜಗತ್ತು ಸತ್ಯವಾದುದು. ಭೌತವಾದ ಈ ಜಗತ್ತು ಪ್ರಕೃತಿಯ ಪರಿಣಾಮವಾದುದು. ಇದಕ್ಕೆ ಅವ್ಯಕ್ತ, ಅಕ್ಷರ, ಮೂಲಪ್ರಕೃತಿ, ಅವಿದ್ಯಾ,

ಮಾಯಾ ಎಂಬ ಹೆಸರುಗಳಿವೆ. ಸತತವಾಗಿ ಪರಿಣಾಮ ಹೊಂದುವುದು ಪ್ರಕೃತಿಯ ಸ್ವಭಾವ. ಇದರ ಸ್ಥಿತಿ ಮತ್ತು ಪ್ರವೃತ್ತಿಯೂ ಈಶ್ವರನಿಗೆ ಅಧೀನವಾದುದು. ಈ ಪ್ರಕೃತಿ ದ್ರವ್ಯಕ್ಕೆ ಸತ್ವ, ರಜಸ್ಸು ಮತ್ತು ತಮಸ್ಸು ಎಂಬ ಮೂರು ಗುಣಗಳಿವೆ. ಈ ಗುಣಗಳನ್ನು, ಪ್ರಕೃತಿಯಿಂದ ಬೇರ್ಪಡಿಸುವುದಕ್ಕಾಗುವುದಿಲ್ಲವಾದರೂ ಇವು ಪ್ರಕೃತಿಗಿಂತ ಬೇರೆಯಾದವು. ಈಶ್ವರ ಸಂಕಲ್ಪಕ್ಕನುಸಾರವಾಗಿ ಈ ಪ್ರಕೃತಿ ಮಹತ್ತು ಅಹಂಕಾರ, ಇಂದ್ರಿಯಗಳು ಪಂಚತನ್ಮಾತ್ರಗಳು ಮತ್ತು ಪಂಚಭೂತಗಳಾಗಿ ಪರಿಣಾಮಹೊಂದಿ ಸಂಸಾರದೆಶೆಯಲ್ಲಿರುವ ಜೀವರುಗಳಿಗೆ ದೇಹೇಂದ್ರಿಯಗಳಾಗಿಯೂ, ಪಂಚಭೂತಾತ್ಮಕವಾದ ಬಾಹ್ಯಜಗತ್ತಾಗಿಯೂ ಪರಿಣಾಮ ಹೊಂದುತ್ತದೆ. ಇದು ಭಗವತ್ಸ್ವರೂಪವನ್ನು ಮರೆಸುತ್ತದೆ. ತನ್ನಲ್ಲಿಯೇ ಭೋಗ್ಯ ಬುದ್ಧಿಯನ್ನುಂಟುಮಾಡುತ್ತದೆ ಮತ್ತು ವಿಪರೀತಜ್ಞಾನವನ್ನುಂಟುಮಾಡುತ್ತದೆ. ಈ ಮಾಯೆಯನ್ನು ದಾಟಲು ಈಶ್ವರಾನುಗ್ರಹ ಅವಶ್ಯಕ.

## ಬ್ರಹ್ಮ

'ಬ್ರಹ್ಮಶಬ್ದೇನ ಸ್ವಭಾವತೋ ನಿರಸ್ತನಿಖಿಲದೋಷಃ ಅನವಧಿಕಾತಿಶಯಾಸಂಖ್ಯೇಯ ಕಲ್ಯಾಣಗುಣಗಣಃ ಪುರುಷೋತ್ತಮಃ ಅಭಿಧೀಯತೇ' ಎಂದು ರಾಮಾನುಜರು ಶ್ರೀಭಾಷ್ಯದಲ್ಲಿ (೧-೧-೧) ಬ್ರಹ್ಮವಸ್ತುವನ್ನು ನಿರೂಪಿಸಿದ್ದಾರೆ. ಪರಬ್ರಹ್ಮವಸ್ತು ಪುರುಷೋತ್ತಮನಾದ ನಾರಾಯಣ. ಚಿದಚಿತ್ತುಗಳಿಗೆ ಆಧಾರನೂ, ನಿಯಾಮಕನೂ, ಶೇಷಿಯೂ ಆದ ಈಶ್ವರನು ಇವನೇ. ಈ ಸಿದ್ಧಾಂತಕ್ಕನುಸಾರವಾಗಿ ಇವನೊಬ್ಬನೇ ಸ್ವತಂತ್ರವಾದ ತತ್ತ್ವ. ಜೀವರುಗಳೂ ಪ್ರಕೃತಿಯೂ ಇವನ ಪ್ರಕಾರಗಳಾಗಿ ಇವನಿಗೇ ಅತ್ಯಂತಪರತಂತ್ರರಾಗಿದ್ದಾರೆ. ಈ ಪ್ರಪಂಚಕ್ಕೆ ಇವನು ಅಭಿನ್ನ ನಿಮಿತ್ತೋಪಾದಾನ ಕಾರಣನಾಗಿದ್ದಾನೆ. ಬ್ರಹ್ಮವಸ್ತುವಿನ ಮಹಿಮೆಯನ್ನು ಮನಸ್ಸಿನಿಂದಾಗಲೀ ಮಾತಿನಲ್ಲಾಗಲೀ ತಿಳಿಯಲೂ ಹೇಳಲೂ ಸಾಧ್ಯವಿಲ್ಲ. ಬ್ರಹ್ಮವಸ್ತು ಸಗುಣವೇ ಆದುದು. ನಿರ್ಗುಣವಾಕ್ಯಗಳು ಅವನಲ್ಲಿ ಯಾವ ಹೇಯಗುಣವೂ ಇಲ್ಲವೆಂಬುದನ್ನು ತಿಳಿಸುತ್ತವೆ. 'ಬ್ರಹ್ಮವಸ್ತುನಿರ್ವಿಶೇಷಚಿನ್ಮಾತ್ರ'ವೆಂದು ಹೇಳುವ ವಾದವನ್ನು ಈ ದರ್ಶನ ಅಂಗೀಕರಿಸುವುದಿಲ್ಲ. ಈ ದರ್ಶನಕ್ಕನುಸಾರ ಬ್ರಹ್ಮವಸ್ತು ಚೈತನ್ಯ ಸ್ವರೂಪಿಯೂ ಆಗಿ 'ಚೈತನ್ಯ' ಅಥವಾ 'ಜ್ಞಾನ'ವೆಂಬ ಗುಣವನ್ನು ಹೊಂದಿದೆ. ಜ್ಞಾನವು ಧರ್ಮವಾದುದರಿಂದ ಅದಕ್ಕೆ ಆಶ್ರಯವಾದುದು ಒಂದಿದೆಯೆಂದೂ ಈ ದರ್ಶನ ಹೇಳುತ್ತದೆ. ಬ್ರಹ್ಮವಸ್ತುವಿಗೆ ಸತ್ಯತ್ವ, ಜ್ಞಾನತ್ವ, ಅನಂತತ್ವ ಆನಂದತ್ವ ಮತ್ತು ಅಮಲತ್ವ ಎಂಬುವು ಸ್ವರೂಪ ನಿರೂಪಕ ಧರ್ಮಗಳು. ನಿರೂಪಿತ ಸ್ವಭಾವವಿಶೇಷಗಳಾದ ಅನಂತವೂ ನಿರತಿಶಯವೂ ಆದ ಮಂಗಳ ಗುಣಗಣಗಳಿಗೆ ಅವನು ಆಶ್ರಯನಾಗಿ ಕಲ್ಯಾಣಗುಣ ಪೂರ್ಣನಾಗಿದ್ದಾನೆ. ಈಶ್ವರನು ವಿಭು. ಅವನ ಜ್ಞಾನಕ್ಕೆ ಎಂದೂ ಸಂಕೋಚವಿಲ್ಲ. ಬ್ರಹ್ಮವಸ್ತು ವಿಕಾರ

ದೂರವಾಗಿ ಎಂದೆಂದೂ ಶುದ್ಧವೇ ಆದುದು. ಪುರುಷೋತ್ತಮನಾದ ಈಶ್ವರನು ಸರ್ವಾಧಾರ, ಸರ್ವನಿಯಂತಾ, ಸರ್ವಶೇಷೀ ಮತ್ತು ಸರ್ವಶಕ್ತನೂ ಆಗಿರುವಂತೆ ಸರ್ವರಕ್ಷಕನೂ ಆಗಿದ್ದಾನೆ.

## ಸೃಷ್ಟಿಪ್ರಕ್ರಿಯೆ

ಈ ಸಿದ್ಧಾಂತವು ಸತ್ಕಾರ್ಯವಾದವನ್ನು ಪುರಸ್ಕರಿಸಿದೆ. ಬ್ರಹ್ಮಪರಿಣಾಮವಾದವನ್ನಾಗಲೀ, ಅವಸ್ಥಾವಾದವನ್ನಾಗಲೀ, ವಿಕಾರವಾದವನ್ನಾಗಲೀ ಈ ದರ್ಶನ ಅಂಗೀಕರಿಸುವುದಿಲ್ಲ. ಜಗತ್ಸತ್ಯತ್ವವನ್ನು ಎಲ್ಲ ಹಂತಗಳಲ್ಲಿಯೂ ಮಾನ್ಯ ಮಾಡಿರುವ ಈ ದರ್ಶನ ವಿವರ್ತವಾದವನ್ನು ಒಪ್ಪುವುದಿಲ್ಲ. ಬ್ರಹ್ಮವಸ್ತು ಸೃಷ್ಟಿಗೆ ಮೊದಲು ಒಂದೇ ಇದ್ದಿತು ಎಂದೂ, ಅದು ಅನೇಕವಾಗಲು ಸಂಕಲ್ಪಿಸಿತೆಂದೂ ಉಪನಿಷತ್ತು ಹೇಳುವುದನ್ನು ಅನುಸರಿಸಿ ಈ ದರ್ಶನ ಬ್ರಹ್ಮವಸ್ತುವೇ ಜಗತ್ತಿಗೆ ಉಪದಾನ ಕಾರಣ ಮತ್ತು ನಿಮಿತ್ತಕಾರಣ ಎಂದು ಪ್ರತಿಪಾದಿಸಿ, ಕಾರಣ ಮತ್ತು ಕಾರ್ಯಗಳಿಗೆ 'ಅನನ್ಯತ್ವ'ವನ್ನು ಹೇಳುತ್ತದೆ. ಸೂಕ್ಷ್ಮಾವಸ್ಥೆಯಲ್ಲಿದ್ದ ಚಿದಚಿತ್ತುಗಳೊಡನೆ ಬ್ರಹ್ಮವಸ್ತು ಕೂಡಿರುವ ಅವಸ್ಥೆ ಕಾರಣಾವಸ್ಥೆ. ಅದೇ ಬ್ರಹ್ಮ ಕಾರ್ಯಾವಸ್ಥೆಯಲ್ಲಿ ಸ್ಥೂಲಾವಸ್ಥೆಯನ್ನು ಪಡೆದ ಚಿದಚಿತ್ತುಗಳೊಡನೆ ಕೂಡಿರುವುದು. ಈ ಎರಡು ಅವಸ್ಥೆಗಳಲ್ಲಿಯೂ ಬ್ರಹ್ಮವಸ್ತು ಚಿದಚಿತ್ತುಗಳೊಡನೆ ಕೂಡಿದ್ದು ಅವುಗಳಿಗೆ ಆತ್ಮನಾಗಿರುತ್ತದೆ. ಸೂಕ್ಷ್ಮಾವಸ್ಥೆಯಲ್ಲಿದ್ದು ತನಗೆ ಶರೀರವಾಗಿರುವ ಚಿದಚಿತ್ತುಗಳನ್ನು ಸ್ಥೂಲಾವಸ್ಥೆಯನ್ನು ಪಡೆಯುವಂತೆ ತನ್ನ ಸಂಕಲ್ಪದಿಂದ ಮಾಡುವುದೇ ಸೃಷ್ಟಿ. ಸೃಷ್ಟಿಯಾದಾಗ ವಿಶೇಷ್ಯವಾದ ಬ್ರಹ್ಮವಸ್ತುವಿನಲ್ಲಿ ಯಾವ ವಿಕಾರವೂ ಉಂಟಾಗದು. ಸೃಷ್ಟಿಯಾದಾಗ ಬ್ರಹ್ಮವಸ್ತುವಿಗೆ ವಿಶೇಷಣವಾದ ಅಚೇತನ ಪರಿಣಾಮ ಹೊಂದುತ್ತದೆ. ಸಾಂಖ್ಯಸಿದ್ಧಾಂತದಲ್ಲಿ ಹೇಳುವಂತೆ ಮಹತ್ತು, ಅಹಂಕಾರ, ಪಂಚತನ್ಮಾತ್ರಗಳು, ಪಂಚಭೂತಗಳು, ಏಕಾದಶೇಂದ್ರಿಯಗಳೂ ಆಗಿ ಪ್ರಕೃತಿ ಪರಿಣಾಮ ಹೊಂದುತ್ತದೆ. ಆದರೆ ಈ ಎಲ್ಲ ಪರಿಣಾಮವೂ ಈಶ್ವರನ ಸಂಕಲ್ಪಕ್ಕನುಸಾರವಾಗುವುದೆಂದು ಈ ದರ್ಶನದ ಸಿದ್ಧಾಂತ. ಸೃಷ್ಟಿಯಾದಾಗ ಚೇತನರ ಸ್ವರೂಪದಲ್ಲಿ ಯಾವ ವಿಕಾರವೂ ಆಗುವುದಿಲ್ಲ. ಆದರೆ ಅವರ ಧರ್ಮಭೂತಜ್ಞಾನದಲ್ಲಿ ಸಂಕೋಚವುಂಟಾಗುತ್ತದೆ. ಯಾವ ಬಗೆಯ ಅಪುರುಷಾರ್ಥವೂ ಈಶ್ವರನಿಗೆ ಆಗುವುದಿಲ್ಲ. ಅದು ಯಾವಾಗಲೂ ವಿಕಾರ ದೂರವಾಗಿ, ಶುದ್ಧವಾಗಿರುತ್ತದೆ. ಅವಿಕಾರಿಯಾದ ಆತ್ಮವಸ್ತು ವಿಕಾರಾತ್ಮಕವಾದ ಸ್ಥೂಲ ಶರೀರದೊಡನೆ ಸಂಬಂಧಿಸಿರುವಂತೆ ಜಗತ್ಕಾರಣವಾದ ಬ್ರಹ್ಮವಸ್ತು ಚೇತನಾಚೇತನಗಳೊಡನೆ ಕಾರಣಾವಸ್ಥೆಯಲ್ಲಿಯೂ ಕಾರ್ಯಾವಸ್ಥೆಯಲ್ಲಿಯೂ ಸಂಬಂಧಿಸಿದ್ದರೂ ವಿಕಾರವಾವುದಕ್ಕೂ ಗುರಿಯಾಗದೆ ಶುದ್ಧವಾಗಿದೆ.

## ಪ್ರಮಾ ಮತ್ತು ಭ್ರಮೆ

'ಪ್ರಮಾ' ಎನ್ನುವುದನ್ನು ಈ ದರ್ಶನಕ್ಕನುಸಾರ 'ಯಥಾವಸ್ಥಿತ ವ್ಯವಹಾರಾನುಗುಣಂ ಜ್ಞಾನಂ ಪ್ರಮಾ' ಎಂದು ನ್ಯಾಯಪರಿಶುದ್ಧಿಯಲ್ಲಿ ನಿರೂಪಿಸಿದ್ದಾರೆ. 'ಯಥಾವಸ್ಥಿತ' ಎಂಬ

ಪದವು ಎಲ್ಲ ಅವಸ್ಥೆಗಳಲ್ಲಿಯೂ ಜ್ಞಾನವು ಸತ್ಯವಾಗಿರುವ ವಿಷಯವನ್ನು ಕುರಿತದ್ದು ಎಂಬುದನ್ನು ತಿಳಿಸುತ್ತದೆ. 'ವ್ಯವಹಾರಾನುಗುಣ' ಎಂಬ ಪದ ಜ್ಞಾನದ ಸಫಲತೆಯನ್ನು ಸೂಚಿಸುತ್ತದೆ. ವ್ಯವಹಾರವೆನ್ನುವುದು ಅಪೇಕ್ಷಿತವಾದುದರ 'ಉಪಾದಾನ'ಕ್ಕೂ ಅನಪೇಕ್ಷಿತ ವಾದುದರ 'ಹಾನ'ಕ್ಕೂ ಅನ್ವಯಿಸುತ್ತದೆ. ಜ್ಞಾನವು ಬಾಹ್ಯ ಸತ್ತೆಗೆ ಅನ್ವಯಿಸುವುದಲ್ಲದೆ ಜೀವನ ವ್ಯವಹಾರಕ್ಕೆ ಉಪಯುಕ್ತವೂ ಆಗಿರುವುದು. ಈ ದರ್ಶನದಲ್ಲಿ 'ಭ್ರಮೆ' ಎಂಬುವುದು ವಾಸ್ತವವಾಗಿ ಇಲ್ಲವೇ ಇಲ್ಲ. ಇತರರು ಭ್ರಮೆ ಎಂದು ಹೇಳುವ ಸ್ಥಳದಲ್ಲಿಯೂ ಸಹ ವಾಸ್ತವವಾಗಿ ಬಾಹ್ಯ ಸತ್ತೆಯನ್ನು ಹೊಂದಿರುವ ವಸ್ತುವನ್ನೇ ಗ್ರಹಿಸಲಾಗುತ್ತದೆ. ವಾಸ್ತವವಾಗಿ ಇಲ್ಲದ ಯಾವುದನ್ನೂ ಗ್ರಹಣ ಮಾಡುವುದಿಲ್ಲ. ಶಂಖ ಹಳದಿಯಾಗಿ ತೋರುವುದಕ್ಕೆ ಕಣ್ಣಿನಲ್ಲಿ ವಾಸ್ತವವಾಗಿರುವ ಕಾಮಾಲೆಯ ದೋಷ ಕಾರಣ. ಶಂಖವನ್ನು ಬೆಳ್ಳಿ ಎಂದು ತಿಳಿಯುವಲ್ಲಿ ಆ ಶಂಖದಲ್ಲಿ ಬೆಳ್ಳಿಯ ಅಂಶವೂ ಅತ್ಯಲ್ಪ ಪ್ರಮಾಣದಲ್ಲಿರುವುದು ಕಾರಣ ಮರುಭೂಮಿಯಲ್ಲಿ ಮೃಗಜಲ ಕಾಣುವುದಕ್ಕೂ ಪಂಚೀಕರಣ ಪ್ರಕ್ರಿಯೆಯಿಂದ ಅದರಲ್ಲಿ ಜಲ, ಅತ್ಯಲ್ಪ ಪ್ರಮಾಣದಲ್ಲಿ ವಾಸ್ತವವಾಗಿರುವುದೇ ಕಾರಣ. ದ್ವಿಚಂದ್ರದರ್ಶನಕ್ಕೆ ವಾಸ್ತವವಾದ ಕಣ್ಣಿನ ದೋಷವೇ ಕಾರಣ. ಇತರರು ಭ್ರಮೆ ಎಂದು ಹೇಳುವೆಡೆಯಲ್ಲೆಲ್ಲಾ ಇಲ್ಲದಿರುವುದು ಯಾವುದೂ ಕಂಡುಬರುವುದಿಲ್ಲ. ಕನಸಿನ ಅನುಭವವೂ ವಾಸ್ತವವಾದುದೇ. ಅವರವರ ಕರ್ಮಕ್ಕನುಸಾರವಾಗಿ ಆಯಾಪದಾರ್ಥಗಳನ್ನು ಭಗವಂತನು ಕನಸ್ಸಿನಲ್ಲಿ ಸೃಜಿಸುವನೆಂದು ಶ್ರುತಿಯು ಸಮರ್ಥಿಸುತ್ತದೆ. ದೋಷಗಳಾಗಿ ಕಂಡು ಬರುವುವೆಲ್ಲಾ ನಿಜವಾದ ಕಾರಣಗಳ ನಿಜವಾದ ಕಾರ್ಯಗಳು. 'ಯಥಾರ್ಥಂ ಸರ್ವವಿಜ್ಞಾನಂ ಇತಿ ವೇದವಿದಾಂ ಮತಂ' ಎಂದು ರಾಮಾನುಜರು ಶ್ರೀಭಾಷ್ಯದಲ್ಲಿ (೧-೧-೧) 'ಯಥಾರ್ಥ ಖ್ಯಾತಿ'ಯನ್ನು ಪ್ರತಿಪಾದಿಸಿದ್ದಾರೆ. ಭ್ರಮೆ ಎಂದು ಹೇಳುವ ತಪ್ಪುತಿಳುವಳಿಕೆಗಳು ಎರಡು ಬಗೆಯಾಗಿವೆ. ಬಾಹ್ಯಸತ್ತೆಯನ್ನು ವಿಷಯವನ್ನಾಗಿ ಉಳ್ಳವೂ ಪ್ರತ್ಯಕ್ಷ ಗೋಚರವಾದವೂ ಒಂದು ಬಗೆ. ಈ ಬಗೆಯ ತಪ್ಪು ತಿಳುವಳಿಕೆಗಳಿಗೆ ಇಂದ್ರಿಯ ದೋಷವೇ ಮೊದಲಾದ ಉಪಾಧಿಗಳು ಕಾರಣ. ಅದರಿಂದ ಆಯಾ ಪದಾರ್ಥಗಳ ಪದಾರ್ಥತ್ವವೂ, ಇತರ ಪದಾರ್ಥಗಳಿಗೂ ಅವಕ್ಕೂ ಇರುವ ಭೇದವೂ ಗ್ರಹಿಸದಿರುವುದು ಕಾರಣ. ಆ ಪದಾರ್ಥದ ಪದಾರ್ಥತ್ವಗ್ರಹಣ ಆದಾಗ ಭ್ರಮೆ ಜಾರುತ್ತದೆ. ಮತ್ತೊಂದು ಬಗೆಯ ತಪ್ಪು ತಿಳಿವಳಿಕೆಗೆ ನೈತಿಕ ಮತ್ತು ಧಾರ್ಮಿಕ ವಿಚಾರಗಳು ಸೇರುತ್ತವೆ. ಈ ಬಗೆಯ ಭ್ರಮೆಗೆ ರಜಸ್ಸು ಮತ್ತು ತಮಸ್ಸು ಕಾರಣ. ಜೀವಾತ್ಮನ ವಾಸ್ತವಿಕವಾದ ಸಂಸ್ಕಾರ ದೋಷಗಳು ಈ ಬಗೆಯ ಅಯಥಾರ್ಥವಾದ ಅರಿವಿಗೆ ಕಾರಣವಾಗುತ್ತವೆ. ಆದುದರಿಂದ ಭ್ರಮೆ ಎಂಬುದು ವಾಸ್ತವವಾಗಿಲ್ಲವೆಂದೂ, ಯಥಾರ್ಥವಾಗಿರುವುದರ ಗ್ರಹಣವೇ ಆಗುವುದೆಂದೂ, ಅವು ವ್ಯವಹಾರಕ್ಕೆ ಅನನುಗುಣವಾದಾಗ ಬಾಧಿತವಾಗುವುವೆಂದೂ ಈ ದರ್ಶನ ಪ್ರತಿಪಾದಿಸಿದೆ.

## ಕಾಲ

ಈ ಸಿದ್ಧಾಂತದಲ್ಲಿ ಕಾಲವನ್ನೂ ಒಂದು ಪದಾರ್ಥವೆಂದು ಅಂಗೀಕರಿಸಿದ್ದಾರೆ. ಇದೂ ಪ್ರಕೃತಿಯಂತೆ ಪರಿಣಾಮಕ್ಕೊಳಪಡುತ್ತದೆ. ಕ್ಷಣ, ದಿನ ಮೊದಲಾದವೆಲ್ಲ ಕಾಲದ ಪರಿಣಾಮಗಳು. ಕಾಲವು ಸ್ವತಂತ್ರವಾದುದಲ್ಲ. ಇದು ಪರಬ್ರಹ್ಮವಸ್ತುವಿಗೆ ಅಧೀನವಾದುದು. 'ಕಾಲಸ್ಯ ಪದಾರ್ಥ ವಿಶೇಷಣತಯೈವ ಪ್ರತೀತೇಃ ತಸ್ಯ ಪೃಥಗಸ್ತಿನಾಸ್ತಿತ್ವತ್ವಾದಯೋ ನ ವಕ್ತವ್ಯಾಃ' ಎಂದು ರಾಮಾನುಜರು ಶ್ರೀಭಾಷ್ಯದಲ್ಲಿ (೨-೨-೩೦) ಹೇಳುತ್ತಾರೆ. ಕಾಲ ನಿತ್ಯವಾದುದು. ಇದಕ್ಕೆ ಮೊದಲೂ ಇಲ್ಲ; ಕೊನೆಯೂ ಇಲ್ಲ. ಕಾಲಕ್ಕೆ ಸೃಷ್ಟಿಕಾರ್ಯ ಅನ್ವಯಿಸುವುದಿಲ್ಲ. ಈ ಪ್ರಪಂಚದೊಡನೆ ಸಂಬಂಧಿಸಿರುವಂತೆ ಇದು ನಿತ್ಯವಿಭೂತಿಯೊಡನೆಯೂ ಸಂಬಂಧಿಸಿದೆ.

## ನಿತ್ಯವಿಭೂತಿ

ಇದಕ್ಕೆ ಶುದ್ಧಸತ್ವ ಎಂಬ ಹೆಸರಿದೆ. ಇದು ಕೇವಲ ಸತ್ವದೊಡನೆ ಮಾತ್ರ ಕೂಡಿದೆ. ತ್ರಿಗುಣಾತ್ಮಕವಾದ ಪ್ರಕೃತಿಗಿಂತ ಇದು ವಿಲಕ್ಷಣವಾದುದು. ಇದು ನಿತ್ಯವೂ ಅಪರಿಚ್ಛಿನ್ನವೂ ಆದುದು. 'ರಜಸಃ ಪರಾಕೇ' ಎಂದು ಶ್ರುತಿ ಹೇಳಿರುವುದೂ, 'ವೈಕುಂಠ'ವೆಂದು ಹೇಳಿರುವುದೂ ಇದನ್ನೇ. ನಿತ್ಯರೂ ಮುಕ್ತರೂ ನಿರಂತರವಾಗಿ ಭಗವದನುಭವವನ್ನು ಹೊಂದಿ ಆನಂದಿಸುವ ದಿವ್ಯಧಾಮ ಇದು.

## ಧರ್ಮಭೂತಜ್ಞಾನ

ಆತ್ಮನು ಜ್ಞಾನಸ್ವರೂಪನೆಂದು ಶ್ರುತಿ ಹೇಳುವಂತೆಯೇ ಅವನು ಜ್ಞಾನವಿಶಿಷ್ಟನಾಗಿಯೂ ಇದ್ದಾನೆಂದು ಹೇಳುತ್ತದೆ. ಜ್ಞಾನವು ಅವನ ಗುಣವಾಗಿದೆ. ಈ ಜ್ಞಾನವನ್ನು 'ಧರ್ಮಭೂತ ಜ್ಞಾನ' ಎಂದು ಈ ದರ್ಶನ ಕರೆದಿದೆ. ಈ ಸಿದ್ಧಾಂತ ಅಂಗೀಕರಿಸುವ ಅಸಾಧಾರಣವಾದ ತತ್ತ್ವ ಇದು. ಎಲ್ಲ ಆತ್ಮರುಗಳೂ ಜ್ಞಾನಸ್ವರೂಪರೂ ಆಗಿರುವಂತೆ ಜ್ಞಾನವೆಂಬ ಗುಣವನ್ನೂ ಹೊಂದಿದ್ದಾರೆ. 'ನ ವಿಜ್ಞಾತುರ್ವಿಜ್ಞಾತೇಃ ವಿಪರಿಲೋಪೋ ವಿದ್ಯತೇ' ಎಂದು ಶ್ರುತಿ ಹೇಳುವಂತೆ ಈ ಜ್ಞಾನ ಅವರಿಗೆ ಅಪೃಥಕ್ಸಿದ್ಧ ವಿಶೇಷಣವಾಗಿದೆ. ಆತ್ಮರು ಜ್ಞಾನಸ್ವರೂಪರು. ಈ ಸ್ವರೂಪಜ್ಞಾನ ತನಗೆ ತಾನೇ ಪ್ರಕಾಶಿಸುತ್ತದೆ 'ಮಾಂ ಅಹಂ ಜಾನಾಮಿ' ಎಂಬುವಂಥದ್ದು ಇದು. ಅವರವರಿಗೆ ಅವರವರ ಆತ್ಮಸ್ವರೂಪವು 'ಅಹಂ' ಎಂಬ ಆಕಾರದಲ್ಲಿ ಪ್ರಕಾಶಿಸುತ್ತದೆ ಸ್ವಯಂ ಪ್ರಕಾಶವಾದ ಆತ್ಮಸ್ವರೂಪವನ್ನು ತಿಳಿಯಲು ಮತ್ತೊಂದರ ಅವಶ್ಯಕತೆ ಇಲ್ಲ. ಈ ಆತ್ಮಸ್ವರೂಪಕ್ಕೆ ಯಾವ ಕುಂದೂ ಉಂಟಾಗುವುದಿಲ್ಲ; ಸಂಕೋಚವಿಕಾಸಗಳಿರುವುದಿಲ್ಲ. ಈ ಆತ್ಮಸ್ವರೂಪಕ್ಕೆ ವಿಶೇಷಣವಾಗಿರುವ ಜ್ಞಾನವನ್ನು 'ಧರ್ಮಭೂತಜ್ಞಾನ' ಎಂದು ಹೇಳಿದೆ ಇದು ಸ್ವಯಂಪ್ರಕಾಶವಾದರೂ ತನ್ನನ್ನು ತಾನು ಅರಿಯಲಾರದು. ಇದಕ್ಕೆ 'ಅರ್ಥಪ್ರಕಾಶಕತ್ವ'

ಮುಖ್ಯವಾದ ಲಕ್ಷಣ, 'ಇದಂ ಜಾನಾಮಿ' ಎಂಬಂಥ ಅರಿವು ಈ ಧರ್ಮಭೂತ ಜ್ಞಾನದಿಂದ ಉಂಟಾಗುವುದು. ಇದು ತನ್ನನ್ನೂ ಇತರ ವಿಷಯಗಳನ್ನೂ ತನಗೆ ಆಶ್ರಯವಾದ ಆತ್ಮನಿಗೆ, ತಿಳಿಯಪಡಿಸುತ್ತದೆ. ಸುಖ, ದುಃಖ, ಇಚ್ಛಾ, ದ್ವೇಷ ಮೊದಲಾದವುಗಳೆಲ್ಲಾ ಧರ್ಮಭೂತ ಜ್ಞಾನದ ಬೇರೆ ಬೇರೆ ಪ್ರಕಾರಗಳೆಂದು ಈ ದರ್ಶನ ನಿರೂಪಿಸಿದೆ. ಈಶ್ವರನಿಗೂ ಹಾಗೆಯೇ ಎಲ್ಲ ಆತ್ಮರುಗಳಿಗೆ ಧರ್ಮವಾಗಿರುವ ಈ ಜ್ಞಾನ ಉಂಟು. ಈಶ್ವರನ ಧರ್ಮಭೂತಜ್ಞಾನಕ್ಕೆ ಯಾವಾಗಲೂ ಸಂಕೋಚವಿಲ್ಲ. ನಿತ್ಯರ ಮತ್ತು ಮುಕ್ತರ ಧರ್ಮಭೂತಜ್ಞಾನಕ್ಕೂ ಕುಂದು ಉಂಟಾಗುವುದಿಲ್ಲ. ಆದರೆ ಬದ್ಧಾವಸ್ಥೆಯಲ್ಲಿರುವ ಜೀವರುಗಳ ಧರ್ಮಭೂತಜ್ಞಾನಕ್ಕೆ ಸಂಕೋಚಾದಿಗಳುಂಟಾಗುವುದರಿಂದ ಇದು 'ಗುಣ'ವಾಗಿರುವಂತೆ 'ದ್ರವ್ಯ'ವೂ ಆಗಿದೆ ಎಂದು ಈ ದರ್ಶನ ನಿರೂಪಿಸುತ್ತದೆ.

## ಮೋಕ್ಷ

ಜೀವರುಗಳು ತಮ್ಮ ಅನಾದಿಯಾದ ಕರ್ಮದ ಕಾರಣ ತಮಗೆ ಬಂದೊದಗಿರುವ ಪ್ರಕೃತಿ ಸಂಬಂಧವನ್ನು ಹೋಗಲಾಡಿಸಿಕೊಂಡು ಪುನರ್ಜನ್ಮವಿಲ್ಲದವರಾಗಿ ತಮಗೆ ಪರಮ ಪ್ರಾಪ್ಯನಾದ ಭಗವಂತನನ್ನು ಸೇರಿ ಭಗವದನುಭವದ ಆನಂದವನ್ನನುಭವಿಸುವುದು ಮೋಕ್ಷ. ಈ ಭಗವದನುಭವದ ಆನಂದದ ಪರೀವಾಹವಾಗಿ ಚೇತನರು ಭಗವಂತನಿಗೆ ನಿತ್ಯಕೈಂಕರ್ಯವನ್ನು ಪರಮ ಪ್ರೀತಿಯಿಂದ ಸಲ್ಲಿಸುವರು. ಈ ದರ್ಶನಕ್ಕನುಸಾರವಾಗಿ ದೇಶವಿಶೇಷ ಪ್ರಾಪ್ತಿ ಪೂರ್ವಕ ಆಗುವುದು ಮುಕ್ತಿ. ಜೀವನ್ಮುಕ್ತಿಯನ್ನು ಈ ಸಿದ್ಧಾಂತ ಒಪ್ಪುವುದಿಲ್ಲ. ಮುಕ್ತನಲ್ಲಿ ಅಪಹತಪಾಪ್ಮತ್ವಾದಿ ಅಷ್ಟಗುಣಗಳ ಆವಿರ್ಭಾವವಾಗುವುದೆಂದೂ ಆಗ ಅವನು ತನ್ನ ಸಹಜವಾದ ಜ್ಞಾನಸ್ವರೂಪದಲ್ಲಿರುವನೆಂದೂ ಈ ದರ್ಶನ ಪ್ರತಿಪಾದಿಸುತ್ತದೆ. (ಬ್ರಹ್ಮಸೂತ್ರ ೪-೪-೬, ೪-೪-೭). ಭಗವಂತನೊಡನೆ ಸಮಾನ ಗುಣಕತ್ವವನ್ನು ಹೊಂದುವುದು ಸಾಯುಜ್ಯ. ಇಲ್ಲಿ ಐಕ್ಯವಿಲ್ಲ. ಜೀವರು ಯಾವದಾತ್ಮಭಾವಿಯಾಗಿ ಭಗವಂತನನ್ನು ಸೇವಿಸುತ್ತಿರುವರು. ಮುಕ್ತನನ್ನು ನಿರೂಪಿಸುವಾಗ 'ಸಾಯುಜ್ಯ' ಮತ್ತು 'ಸಾರ್ಷ್ಟಿತಾ' ಎಂಬ ಎರಡು ಪದಗಳನ್ನು ಶ್ರುತಿ ಹೇಳುತ್ತದೆ. ಆನಂದಾನುಭವದಲ್ಲಿ ಮುಕ್ತನೂ ಭಗವಂತನೂ ಸಮಾನವಾಗಿ ಭಾಗವಹಿಸುವರೆಂಬುದನ್ನು 'ಸಾಯುಜ್ಯ' ಪದ ಸೂಚಿಸುತ್ತದೆ. ಅವರ ಆನಂದಾನುಭವದಲ್ಲಿ ತಾರತಮ್ಯವಿಲ್ಲವೆಂಬುದನ್ನು 'ಸಾರ್ಷ್ಟಿತಾ' ಪದ ಹೇಳುತ್ತದೆ. ಮುಕ್ತನಿಗೆ ಜಗದ್ವ್ಯಾಪಾರವಿರುವುದಿಲ್ಲ. ಮುಕ್ತ್ಯವಸ್ಥೆಯಲ್ಲಿಯೂ ಜೀವರು ಭಗವಂತನಿಗೇ ಶೇಷಭೂತರಾಗಿರುವರು.

## ಮೋಕ್ಷಸಾಧನ

ಈ ದರ್ಶನಕ್ಕನುಸಾರವಾಗಿ ಮೋಕ್ಷೋಪಾಯವು ಭಕ್ತಿ ಅಥವಾ ಪ್ರಪತ್ತಿ. ಇವೆರಡು ಸ್ವತಂತ್ರವಾಗಿ ಮೋಕ್ಷೋಪಾಯಗಳಾಗುತ್ತವೆ. ಮೋಕ್ಷೋಪಾಯವಾದ ಭಕ್ತಿಯನ್ನು

ಭಕ್ತಿಯೋಗ ಎಂದು ಹೇಳಿದೆ. ಭಗವಂತನ ಸ್ವರೂಪ ರೂಪಗುಣಗಳನ್ನು ಕುರಿತು ಪ್ರೀತಿಪೂರ್ವಕವಾಗಿ ಮಾಡುವ ನಿರಂತರವಾಗಿ ಧ್ಯಾನ ಇದು. ಇದೂ ಒಂದು ಬಗೆಯ ಜ್ಞಾನವಿಕಾಸ. ಈ ಭಕ್ತಿಯೋಗಕ್ಕೆ ಕರ್ಮಯೋಗ ಮತ್ತು ಜ್ಞಾನಯೋಗಗಳು ಅಂಗಗಳು. ಈ ಸಿದ್ಧಾಂತಕ್ಕನುಸಾರ ಸಾಧನೆ ಕರ್ಮಯೋಗದಿಂದ ಆರಂಭವಾಗುತ್ತದೆ. ಜೀವಾತ್ಮಸ್ವರೂಪದ ಜ್ಞಾನಾನುಸಂಧಾನದೊಡನೆ, ಭಗವದಾರಾಧನೆ ಎಂಬ ಭಾವದಿಂದ, ಫಲಾಪೇಕ್ಷೆಯಿಲ್ಲದವನಾಗಿ ನಿಯತವಾಗಿ ಮಾಡುವ ಕರ್ಮ ಕರ್ಮಯೋಗವೆನಿಸುತ್ತದೆ. ಈ ಕರ್ಮಯೋಗ ನೇರವಾಗಿಯೋ ಅಥವಾ ಜ್ಞಾನಯೋಗದ ಮೂಲಕವೋ ಆತ್ಮಸಾಕ್ಷಾತ್ಕಾರವನ್ನುಂಟು ಮಾಡುತ್ತದೆ. ಜೀವಾತ್ಮನ ಪರಿಶುದ್ಧ ಸ್ವರೂಪವನ್ನು ಕುರಿತು ಮಾಡುವ ಚಿಂತನೆ ಜ್ಞಾನಯೋಗ. ಇದರಿಂದ ಜೀವಾತ್ಮಸಾಕ್ಷಾತ್ಕಾರವಾಗುವುದು. ಆತ್ಮಸಾಕ್ಷಾತ್ಕಾರವಾದಾಗ. ತಾನು ಭಗವಂತನಿಗೆ ಸೇರಿದವನು' ಎಂಬ ಅರಿವು ನಿಚ್ಚಳವಾಗುವುದು. ತನ್ನ ಶೇಷತ್ವವನ್ನು ಸಾಕ್ಷಾತ್ಕಾರ ಮಾಡಿಕೊಂಡಾಗ ಅವನು ತನ್ನ ಸ್ವಾಮಿಯಾದ ಭಗವಂತನನ್ನು ಸೇರಲು ಹಾತೊರೆಯುವನು. ಅಲ್ಲಿಂದ ಮುಂದೆ ಅವನು ಪರಮಾತ್ಮೋಪಾಸಕನಾಗುವನು. ತನಗೆ ಸರ್ವವಿಧ ಬಂಧುವೂ, ಗತಿಯೂ, ಸ್ವಾಮಿಯೂ ಆದ ದೇವನಲ್ಲಿ ನಿರತಿಶಯವಾದ ಪ್ರೀತಿಯನ್ನು ಮಾಡುವುದೇ ಭಕ್ತಿಯೋಗ, ಭಗವಂತನನ್ನು ಪಡೆಯಬೇಕೆಂಬ ಉತ್ಕಟೇಚ್ಛೆ 'ಪರಭಕ್ತಿ' ಎನಿಸುವುದು. ಈ ಭಕ್ತಿಯೋಗಕ್ಕೆ ಧ್ಯಾನ. ಉಪಾಸನ, ವೇದನ ಎಂದು ಹೆಸರು. ಉಪನಿಷತ್ತುಗಳಲ್ಲಿ ಹೇಳಿರುವ ೩೨ ಉಪಾಸನೆಗಳು ಭಕ್ತಿಯೋಗದ ಪ್ರಕಾರಗಳು, ಈ ಭಕ್ತಿಯೋಗವನ್ನು ವಿಚ್ಛೇದವಿಲ್ಲದಂತೆ ಬದುಕಿರುವರೆಗೂ ಅಭ್ಯಾಸ ಮಾಡಬೇಕು. ಭಕ್ತಿಯೋಗವು ಪೂರ್ಣವಾಗ ಬೇಕಾದರೆ ಭಗವಂತನಲ್ಲಿ ಶರಣಾಗತಿ ಮಾಡಬೇಕು. ಶರಣಾಗತಿ ಅಥವಾ ಪ್ರಪತ್ತಿಯಿಂದ ಸಹಕೃತವಾದ ಭಕ್ತಿಯೋಗ ಭಗವಂತನ ಪ್ರಸನ್ನತೆಯನ್ನುಂಟು ಮಾಡುತ್ತದೆ. ಪ್ರಸನ್ನನಾದ ಭಗವಂತನು ಸಾಧಕನಿಗೆ ಅನುಗ್ರಹ ಮಾಡಿ ಮೋಕ್ಷವನ್ನು ಕರುಣಿಸುವನು.

ಭಕ್ತಿಯೋಗವನ್ನನುಷ್ಠಿಸಲು ಜ್ಞಾನತಃ, ಶಕ್ತಿತಃ ಅಥವಾ ಶಾಸ್ತ್ರತಃ ಅಶಕ್ತರಾದವರ, ಅನುಷ್ಠಿಸಬಹುದಾದ ಮಾರ್ಗ 'ಶರಣಾಗತಿ' ಅಥವಾ 'ಪ್ರಪತ್ತಿ'. ಜಾತಿ. ಕುಲ. ಲಿಂಗ, ವಯಸ್ಸುಗಳ ಭೇದವಿಲ್ಲದೆ ಎಲ್ಲರೂ ಅನುಷ್ಠಿಸಬಹುದಾದ ಮಾರ್ಗವಿದೆಂದು ಈ ದರ್ಶನ ಪ್ರತಿಪಾದಿಸುತ್ತದೆ. ಇದಕ್ಕೆ ಆವಶ್ಯಕವಾಗಿ ಬೇಕಾದುದು ಪರಮಾತ್ಮನಲ್ಲಿ 'ಮಹಾವಿಶ್ವಾಸ' ಮತ್ತು ತನ್ನ ಅತ್ಯಂತ 'ಅಶಕ್ತತೆಯ' ಅರಿವು. ತನ್ನಿಂದಲಾಗಲೀ ಇತರರಿಂದಾಗಲೀ ಸಾಧಿಸಲಾಗದ ಅಪೇಕ್ಷೆಯೊಂದನ್ನು ಸಾಧಿಸಿ ಕೊಡಬೇಕೆಂದು ಸಮರ್ಥನೂ, ಸಹಜಮಿತ್ರನೂ, ಆದವನಲ್ಲಿ ಸಲ್ಲಿಸುವ ಬೇಡಿಕೆ ಇದು. ಈ ಪ್ರಪತ್ತಿಯನ್ನು ಶಾಸ್ತ್ರಗಳು ಪ್ರತಿಪಾದಿಸಿವೆ. ಕರ್ಮಯೋಗ, ಜ್ಞಾನಯೋಗ ಮತ್ತು ಭಕ್ತಿಯೋಗಗಳಲ್ಲಿ ಯಶಸ್ಸುಂಟಾಗ ಬೇಕಾದರೂ, ಈ 'ಪ್ರಪತ್ತಿ' ಅಥವಾ 'ಸರ್ವಸಮರ್ಪಣಭಾವ, ಭಗವಂತನಲ್ಲಿ ಆಗಬೇಕು, ಹೇಗೆ ಭಗವಂತನಲ್ಲಿ

ಮಾಡಿದ ಶರಣಾಗತಿ ಇತರ ಫಲಗಳನ್ನು ಭಗವಂತನಿಂದ ಕೊಡಿಸುವುದೋ ಹಾಗೆ ಮೋಕ್ಷವನ್ನು ಬೇಡಿ ಭಗವಂತನಲ್ಲಿ ಪ್ರಪತ್ತಿ ಮಾಡಿದರೆ ಆ ಪ್ರಪತ್ತಿಗೆ ಒಲಿದ ಭಗವಂತನು ಮೋಕ್ಷವನ್ನು ಕರುಣಿಸುವನು ಎಂದು ಈ ಸಿದ್ಧಾಂತ ನಿಶ್ಚಯಿಸಿದೆ. ಫಲಪ್ರದತ್ವವು ಭಗವಂತನಿಗೇ ಸೇರಿದ ಕಾರಣ ಮುಖ್ಯವಾಗಿ ಭಗವಂತನೇ ಮೋಕ್ಷೋಪಾಯ. ಅವನು 'ಸಿದ್ಧೋಪಾಯ' ನಾದರೆ ಅವನ ದಯೆಯನ್ನು ನಮ್ಮ ಮೇಲೆ ಹರಿಯಿಸುವ 'ಸಾಧ್ಯೋಪಾಯ'ಗಳು ಭಕ್ತಿ ಪ್ರಪತ್ತಿಗಳು.

## ಪ್ರಮಾಣಗಳು

ಈ ದರ್ಶನವು ಪ್ರತ್ಯಕ್ಷ, ಅನುಮಾನ ಮತ್ತು ಶಬ್ದ ಎಂಬ ಮೂರು ಪ್ರಮಾಣಗಳನ್ನು ಮಾತ್ರ ಅಂಗೀಕಾರ ಮಾಡಿದೆ. ಇತರ ದಾರ್ಶನಿಕರು ಹೇಳುವ ಇತರ ಪ್ರಮಾಣಗಳನ್ನು ಈ ಮೂರರೊಳಗೆ ಅಂತರ್ಭಾವ ಮಾಡಲಾಗಿದೆ. ಇಂದ್ರಿಯಾರ್ಥ ಸನ್ನಿಕರ್ಷದಿಂದ ಉಂಟಾಗುವ ಜ್ಞಾನ 'ಪ್ರತ್ಯಕ್ಷ'. ಇದು ನಿತ್ಯ ಮತ್ತು ಅನಿತ್ಯ ಎಂದು ಎರಡು ಬಗೆ. ಈಶ್ವರನ ಮತ್ತು ನಿತ್ಯಮುಕ್ತರ ಪ್ರತ್ಯಕ್ಷ ನಿತ್ಯವಾದದು. ಬದ್ಧಾವಸ್ಥೆಯಲ್ಲಿರುವವರ ಪ್ರತ್ಯಕ್ಷ 'ಅನಿತ್ಯಪ್ರತ್ಯಕ್ಷ'. ಅನಿತ್ಯಪ್ರತ್ಯಕ್ಷವು 'ಯೋಗಿಪ್ರತ್ಯಕ್ಷ' ಮತ್ತು 'ಅಯೋಗಿಪ್ರತ್ಯಕ್ಷ' ಎಂದು ಎರಡು ಬಗೆ. 'ಯೋಗಿ ಪ್ರತ್ಯಕ್ಷಂ ಪ್ರಕೃಷ್ಟಾದೃಷ್ಟವಿಶೇಷಜಂ ತತ್ ಯುಕ್ತಾವಸ್ಥಾಯಾಂ ಮನೋಮಾತ್ರ ಜನ್ಯಂ' (ನ್ಯಾ. ಪರಿಶುದ್ಧಿ. ಪು. ೯೫)ಎಂದು ವೇಂಕಟನಾಥರು ಇದನ್ನು ಹೇಳುತ್ತಾರೆ. ಯೋಗಿಗಳಿಗೆ ಮಾತ್ರ ಮಾನಸ ಪ್ರತ್ಯಕ್ಷವುಂಟು. ಅಯೋಗಿಗಳ ಅಥವಾ ಸಾಮಾನ್ಯ ಜನರ ಪ್ರತ್ಯಕ್ಷ ಐದು ಇಂದ್ರಿಯಗಳಿಗನುಸಾರವಾಗಿ ಐದು ಬಗೆಯಾಗಿರುವುದು. ಈ ಸಿದ್ಧಾಂತಕ್ಕನುಸಾರ ವಾಗಿಯೂ 'ಸವಿಕಲ್ಪಕ' ಮತ್ತು 'ನಿರ್ವಿಕಲ್ಪಕ' ಪ್ರತ್ಯಕ್ಷವೆಂಬ ವಿಭಾಗವುಂಟು, ಒಂದು ಜಾತಿಯ ಒಂದು ವಸ್ತುವನ್ನು ಮೊಟ್ಟಮೊದಲ ಬಾರಿ ಕಂಡಾಗ ಆಗುವ ಪ್ರತ್ಯಕ್ಷಾನುಭವ 'ನಿರ್ವಿಕಲ್ಪಕ ಪ್ರತ್ಯಕ್ಷ'. ಈ ಪ್ರತ್ಯಕ್ಷದಲ್ಲಿಯೂ ಯಾವುದೇ ಕೆಲವು ವಿಶೇಷಣಗಳ ಸಹಿತವಾಗಿಯೇ ವಸ್ತುವಿನ ಗ್ರಹಣವಾಗುತ್ತದೆ. ಎಲ್ಲ ವಿಶೇಷಣಗಳಿಂದಲೂ ಬಿಡಲ್ಪಟ್ಟ ವಸ್ತುವಿನ ಗ್ರಹಣವನ್ನು ಈ ದರ್ಶನ ಒಪ್ಪುವುದಿಲ್ಲ. ಹಿಂದೆ ನೋಡಿದ್ದ ವ್ಯಕ್ತಿಯ ಬೆಳಕಿನಲ್ಲಿ ಅದರ ನೆನಪಿನೊಡನೆ ಗ್ರಹಿಸುವ ಎರಡನೆಯ ವ್ಯಕ್ತಿಯ ಜ್ಞಾನ 'ಸವಿಕಲ್ಪಕ'. ಪ್ರತ್ಯಕ್ಷವು ಎಲ್ಲ ಹಂತಗಳಲ್ಲಿಯೂ ವಿಶೇಷಣಸಹಿತವಾದ ವಿಷಯವನ್ನು ಕುರಿತದ್ದು ಮತ್ತು ವಾಸ್ತವಿಕವಾದುದು ಎಂಬುದು ಈ ಸಿದ್ಧಾಂತದ ನಿಶ್ಚಯ.

## ಅನುಮಾನ

ಇತರ ದಾರ್ಶನಿಕರ ನಿರೂಪಣೆಯನ್ನು ಈ ದರ್ಶನದ ಅನುಮಾನ ನಿರೂಪಣೆ ಬಹುಮಟ್ಟಿಗೆ ಹೋಲುತ್ತದೆ. ಈ ಪ್ರಮಾಣದ ಬಗೆಗೆ ಈ ದರ್ಶನ ವಿಶಿಷ್ಟವಾಗಿ ಹೇಳುವುದನ್ನು ಮಾತ್ರ ಇಲ್ಲಿ ಗುರುತಿಸಬಹುದು. ವ್ಯಾಪ್ತಿ ಗ್ರಹಣಕ್ಕೆ 'ಭೂಯೋದರ್ಶನ' ಅವಶ್ಯಕ ಎಂದು ಇಲ್ಲಿ

ಹೇಳಲಾಗಿದೆ. ಎಲ್ಲ ಅನುಮಾನವೂ ಪರ್ಯವಸಾನದಲ್ಲಿ ಸ್ವಾರ್ಥಾನುಮಾನವೇ ಆಗುವ ಕಾರಣ ಅನುಮಾನವನ್ನು 'ಸ್ವಾರ್ಥ', 'ಪರಾರ್ಥ' ಎಂದು ಮಾಡುವ ವಿಭಾಗ ಸರಿಯಲ್ಲವೆಂದು ಇವರ ಮತ. ಇತರರು ಹೇಳುವ 'ಕೇವಲವ್ಯತಿರೇಕಿ' ಅನುಮಾನವನ್ನು ಈ ದರ್ಶನ ಒಪ್ಪುವುದಿಲ್ಲ. ಅದರಲ್ಲಿ 'ಸಪಕ್ಷ ಸತ್ವ'ವಿಲ್ಲದಿರುವುದೂ, 'ಸಾಧ್ಯಸಾಧನಗಳ ವ್ಯಾಪ್ತಿಗ್ರಹಣ' ವಾಗದಿರುವುದೂ ಇದಕ್ಕೆ ಕಾರಣ. ಈ ಸಿದ್ಧಾಂತ 'ಉಪಮಾನ'ವನ್ನು ಪ್ರತ್ಯೇಕವಾದ ಪ್ರಮಾಣ ವೆಂದು ಅಂಗೀಕರಿಸುವುದಿಲ್ಲ. ತರ್ಕ ಅನುಮಾನಕ್ಕಿಂತ ಬೇರೆಯಾದುದಲ್ಲವೆಂದು ಇವರ ಮತ.

## ಶಬ್ದ

ಶಬ್ದಪ್ರಮಾಣವು ಪ್ರತ್ಯಕ್ಷ ಮತ್ತು ಅನುಮಾನಗಳಿಗಿಂತ ಭಿನ್ನವಾದುದು. ಬ್ರಹ್ಮವಸ್ತುವನ್ನು ತಿಳಿಯಲು ಇದು ಒಂದೇ ಸಾಧನವಾಗಿದೆ. ಶಬ್ದವು ಮೀಮಾಂಸಕರು ಹೇಳುವಂತೆ ಕೇವಲ ಕಾರ್ಯಾರ್ಥವನ್ನೇ ಹೇಳುವುದಿಲ್ಲ. ಅದು ಸಿದ್ಧಾಂತವಸ್ತುವನ್ನು ಬೋಧಿಸಬಲ್ಲದು ಎಂಬುದು ಈ ದರ್ಶನದ ಸಿದ್ಧಾಂತ. ಈ ದರ್ಶನವು 'ಅಭಿಹಿತಾನ್ವಯವಾದ'ವನ್ನು ಅಂಗಿಕರಿಸುವುದಿಲ್ಲ. 'ಅನ್ವಿತಾಭಿಧಾನವಾದ'ವನ್ನು ಈ ಸಿದ್ಧಾಂತ ಪುರಸ್ಕರಿಸಿ ವಾಕ್ಯದಲ್ಲಿದ್ದಾಗಲೇ ಪದಗಳು ಅರ್ಥಕೊಡುವ ಶಕ್ತಿಯನ್ನು ಹೊಂದಿವೆಯೆಂದೂ, ಪರಸ್ಪರ ಅನ್ವಯ ವಾಕ್ಯದಲ್ಲಿ ಮಾತ್ರ ಉಂಟಾಗುವುದೆಂದೂ ಹೀಗೆ ವಾಕ್ಯದಲ್ಲಿ, ಅನ್ವಿತವಾದ ಪದಗಳಿಗೆ ಅರ್ಥಾಭಿಧಾನತ್ವವುಂಟೆಂದೂ ಪ್ರತಿಪಾದಿಸುತ್ತದೆ. ಪದಗಳಿಗೆ 'ವಿಶಿಷ್ಟಾರ್ಥಾಭಿಧಾಯಿತ್ವ'ವನ್ನು ಹೇಳುವುದರ ಮೂಲಕ ಸರ್ವ ಶಬ್ದಗಳೂ ಈಶ್ವರನನ್ನು ಬೋಧಿಸುವುವೆಂದು ಸಮರ್ಥಿಸಲಾಗಿದೆ. ಅಪೌರುಷೇಯವೂ ಪರಮ ಪ್ರಮಾಣವೂ ಆದ ವೇದಗಳ ಉಪದೇಶಕ್ಕೆ ವಿರುದ್ಧವಲ್ಲದ ಪುರಾಣೇತಿಹಾಸಗಳು ಮೊದಲಾದುವೂ ಪ್ರಮಾಣವೆಂದು ಅಂಗೀಕರಿಸಲಾಗಿದೆ.

## ದರ್ಶನ ಪ್ರತಿಪಾದಕರು

ಈ ದರ್ಶನವನ್ನು ಬಹಳ ಹಿಂದಿನ ಕಾಲದಿಂದಲೂ ಅನೇಕರು ಪ್ರತಿಪಾದಿಸಿದ್ದಾರೆ. ವೇದಾಂತದರ್ಶನಕ್ಕೆ ಮೂಲಾಧಾರವಾದವು ಉಪನಿಷತ್ತುಗಳು. ಈ ಉಪನಿಷತ್ತುಗಳ ವಾಕ್ಯಗಳೂ ಸುಲಭವಾಗಿ ಅರ್ಥವಾಗದೆ ಸಂದಿಗ್ಧವಾಗಿ ಕಂಡುಬಂದವು. ಆಪಾತತಃ ವಿರೋಧ ವಾಗಿರುವಂತೆ ಇಲ್ಲಿ ಅನೇಕವಾಕ್ಯಗಳು ಕಂಡು ಬರುತ್ತವೆ. ಕೆಲವು ವಾಕ್ಯಗಳು ಪ್ರಕೃತಿಯೇ ಜಗತ್ಕಾರಣವೆಂದು ಹೇಳುವಂತಿದ್ದರೆ ಮತ್ತೆ ಕೆಲವು ಜೀವಾತ್ಮನಿಗೆ ಪ್ರಾಧಾನ್ಯ ಕೊಡುವಂತೆ ಕಂಡುಬರುತ್ತವೆ. ಉಪನಿಷದ್ವಾಕ್ಯಗಳಲ್ಲಿ ಕಂಡುಬರುವ ಈ ಸಂದೇಹಾಂಶಗಳನ್ನೆಲ್ಲಾ ಪರಿಹರಿಸಿ ವೇದಾಂತದರ್ಶನವನ್ನು ಖಚಿತವಾಗಿ ನಿರೂಪಿಸಲು ಬಾದರಾಯಣರು ವೇದಾಂತ ಸೂತ್ರಗಳನ್ನು ರಚಿಸಿದರು. ಬಾದರಾಯಣರು ಈ ಸೂತ್ರಗಳಲ್ಲಿ ಬಹಳ ಸಂಗ್ರಹವಾಗಿ ವೇದಾಂತ

ದರ್ಶನದ ಮುಖ್ಯಾಂಶಗಳನ್ನು ಸೂಚಿಸಿದ್ದಾರೆ. ಈ ಸೂತ್ರಗಳು ನಾಲ್ಕು ಅಧ್ಯಾಯಗಳಲ್ಲಿವೆ. ಒಂದೊಂದು ಅಧ್ಯಾಯದಲ್ಲಿಯೂ ನಾಲ್ಕು ಪಾದಗಳಿವೆ. ಒಂದೊಂದು ಪಾದದಲ್ಲಿಯೂ ಅನೇಕ 'ಅಧಿಕರಣ'ಗಳಿವೆ. ಒಂದೊಂದು ಅಧಿಕರಣವೂ ಒಂದೊಂದು ವಿಷಯದ ವಿವೇಚನೆಗೆ ಮೀಸಲಾಗಿದೆ. ಒಂದೊಂದು ಅಧಿಕರಣದಲ್ಲಿಯೂ 'ವಿಷಯ', 'ಸಂಶಯ' 'ಪೂರ್ವಪಕ್ಷ' 'ಉತ್ತರ' ಮತ್ತು 'ನಿರ್ಣಯ' ಎಂಬ ಐದು ಅಂಶಗಳಿರುತ್ತವೆ. ಬಾದರಾಯಣರು. ತಮ್ಮ ಸೂತ್ರಗಳಲ್ಲಿ ವೇದಾಂತ ದರ್ಶನದ ಪ್ರತಿಪಾದನೆ ಮಾಡಿರುವಂತೆ ಇತರ ದರ್ಶನಗಳನ್ನು ಪರೀಕ್ಷಿಸಿ ಅವುಗಳ ದೋಷಗಳನ್ನು ಎತ್ತಿ ತೋರಿದ್ದಾರೆ. ಮೊದಲ ಅಧ್ಯಾಯಕ್ಕೆ ಸಮನ್ವಯಾಧ್ಯಾಯ ಎಂದೂ, ಎರಡನೆಯ ಅಧ್ಯಾಯಕ್ಕೆ ಅವಿರೋಧಾಧ್ಯಾಯ ಎಂದೂ, ಮೂರನೆಯ ಅಧ್ಯಾಯಕ್ಕೆ ಸಾಧನಾಧ್ಯಾಯವೆಂದೂ, ನಾಲ್ಕನೆಯ ಅಧ್ಯಾಯಕ್ಕೆ ಫಲಾಧ್ಯಾಯವೆಂದೂ ಹೇಳಲಾಗಿದೆ. ಬ್ರಹ್ಮವಸ್ತು ಜಗತ್ತಿಗೆ ಕಾರಣವೆನ್ನುವುದನ್ನು ಮೊದಲನೆಯ ಅಧ್ಯಾಯದಲ್ಲಿ ಸ್ಥಾಪಿಸಿ ಉಪನಿಷತ್ತುಗಳಲ್ಲಿ ಸತ್, ಆತ್ಮಾ, ಆಕಾಶ, ಜ್ಯೋತಿ, ದಹರ, ಭೂಮಾ ಎಂದೆಂದು ಬೇರೆ ಬೇರೆ ಮಾತುಗಳಲ್ಲಿ ಈ ಬ್ರಹ್ಮ ವಸ್ತುವನ್ನೇ ಹೇಳಿದೆ ಎಂದು ಸಮರ್ಥಿಸಲಾಗಿದೆ. ಎರಡನೆಯ ಅಧ್ಯಾಯದಲ್ಲಿ ಸಾಂಖ್ಯ, ಯೋಗ, ವೈಶೇಷಿಕ, ಬೌದ್ಧ, ಜೈನ, ಪಾಶುಪತ ಮೊದಲಾದ ದರ್ಶನಗಳಲ್ಲಿನ ದೋಷಗಳನ್ನು ತೋರಿ ಇಂಥ ದೋಷಗಳು ವೇದಾಂತ ದರ್ಶನಕ್ಕೆ ಸಂಭವಿಸುವುದಿಲ್ಲವೆಂದು ಸ್ಥಾಪಿಸಿದೆ. ಸಾಧನಸ್ವರೂಪವನ್ನು "ಮೂರನೆಯ ಅಧ್ಯಾಯದಲ್ಲಿಯೂ, ಫಲಸ್ವರೂಪವನ್ನು ನಾಲ್ಕನೆಯ ಅಧ್ಯಾಯದಲ್ಲಿಯೂ ನಿರೂಪಿಸಿದೆ.

ಬಾದರಾಯಣರು ತಮ್ಮ ಸೂತ್ರಗಳಲ್ಲಿ ತಮಗಿಂತ ಹಿಂದೆ ಇದ್ದ ಅನೇಕ ಆಚಾರ್ಯರುಗಳನ್ನೂ ಅವರ ಅಭಿಪ್ರಾಯಗಳನ್ನೂ ಉಲ್ಲೇಖಿಸಿದ್ದಾರೆ, ಬಾದರಿ, ಔಡುಲೋಮಿ, ಆತ್ಮರಥ್ಯದ ಕಾಶಕೃತ್ಸ್ನ, ಜೈಮಿನಿ ಮೊದಲಾದವರು ಇವರಲ್ಲಿ ಕೆಲವರು. ಬಾದರಾಯಣರ ಕಾಲ, ದೇಶ ವಿಚಾರಗಳನ್ನು ಖಚಿತವಾಗಿ ಹೇಳುವುದಕ್ಕಾಗುವುದಿಲ್ಲ. ಇವರ ಹೆಸರನ್ನು ಜೈಮಿನಿಗಳು ತಮ್ಮ ಪೂರ್ವಮೀಮಾಂಸಾ ಸೂತ್ರದಲ್ಲಿ ಉಲ್ಲೇಖಿಸಿದ್ದಾರೆ. ಈ ಮೂಲ ಸೂತ್ರಗಳ ಮೇಲೆ ಎಲ್ಲ ಭಾಷ್ಯಕಾರರೂ ಭಾಷ್ಯಗಳನ್ನು ರಚಿಸಿ ಅವರವರ ಸಿದ್ಧಾಂತಗಳನ್ನು ಸೂತ್ರಗಳ ಮೂಲಕ ಸ್ಥಾಪಿಸಿದ್ದಾರೆ.

## ಬೋಧಾಯನರು

ಇವರು ಬಾದರಾಯಣರ ಬ್ರಹ್ಮ ಸೂತ್ರಗಳಿಗೆ ವಿಸ್ತಾರವಾದವೃತ್ತಿಯನ್ನು ರಚಿಸಿದ್ದಾರೆಂದು ಗೊತ್ತಾಗುತ್ತದೆ. ರಾಮಾನುಜರು ತಮ್ಮ ಭಾಷ್ಯವನ್ನು ಈ ವೃತ್ತಿಯ ಆಧಾರದ ಮೇಲೆ ರಚಿಸಿದರು ಶ್ರೀ ಭಾಷ್ಯದಲ್ಲಿ ರಾಮಾನುಜರು ಈ ಗ್ರಂಥದಿಂದ ಉಲ್ಲೇಖಿಸಿದ್ದಾರೆ. "ಭಗವದ್ಬೋಧಾಯನ ಕೃತಾಂ ವಿಸ್ತೀರ್ಣಾಂ ಬ್ರಹ್ಮಸೂತ್ರವೃತ್ತಿಂ" ಎಂದು ಶ್ರೀ ಭಾಷ್ಯದ ಉಪಕ್ರಮದಲ್ಲಿ ಇವರನ್ನು

ರಾಮಾನುಜರು ಹೆಸರಿಸಿದ್ದಾರೆ. ಇವರೂ ಉಪವರ್ಷರೂ ಒಬ್ಬರೇ ಅಥವಾ ಬೇರೆ ಬೇರೆಯವರೇ ಎಂಬುದನ್ನು ಹೇಳುವುದಕ್ಕಾಗುವುದಿಲ್ಲ. ಇವರ ಕಾಲ ಯಾವುದು ಎಂಬುದನ್ನು ಖಚಿತವಾಗಿ ಹೇಳುವುದಕ್ಕಾಗುವುದಿಲ್ಲ. ಈಗ ಈ ವೃತ್ತಿಯು ಉಪಲಬ್ಧವಾಗಿಲ್ಲ.

## ಟಂಕಾಚಾರ್ಯರು

ಈ ಸಂಪ್ರದಾಯದಲ್ಲಿ 'ವಾಕ್ಯಕಾರ' ರೆಂದು ಇವರು ಪ್ರಸಿದ್ಧರಾಗಿದ್ದಾರೆ. ಇವರೂ ಬ್ರಹ್ಮನಂದಿಯೂ ಒಬ್ಬರೇ ಅಥವಾ ಬೇರೆ ಬೇರೆಯೆ ಎನ್ನುವ ವಿಚಾರದಲ್ಲಿ ಬಹಳ ಚರ್ಚೆ ಆಗಿದೆ. "ಕಲ್ಪತರು" ಗ್ರಂಥದಲ್ಲಿ ಉದಾಹರಿಸಿರುವ ಬ್ರಹ್ಮನಂದಿ ಅದ್ವೈತವನ್ನು ಪುರಸ್ಕರಿಸುವುದರಿಂದ ಬ್ರಹ್ಮನಂದಿಯೂ ಟಂಕಾಚಾರ್ಯರೂ ಒಬ್ಬರೇ ಇರಲಾರರೆಂದು ಹೇಳಲಾಗಿದೆ, ಇವರ ಹೆಸರನ್ನು ಯಾಮುನಾಚಾರ್ಯರೂ ಉಲ್ಲೇಖಿಸಿದ್ದಾರೆ. ಇವರು "ಛಾಂದೋಗ್ಯ"ಕ್ಕೆ ಭಾಷ್ಯ ಬರೆದಿದ್ದಾರೆಂದು ಹೇಳಲಾಗಿದೆ. ಈ ಕೃತಿ ಈಗ ಉಪಲಬ್ಧವಿಲ್ಲ. ಇವರ ಕಾಲದೇಶಾದಿಗಳೂ ಖಚಿತವಾಗಿ ಗೊತ್ತಾಗಿಲ್ಲ.

## ದ್ರಮಿಡಾಚಾರ್ಯರು

ಟಂಕಾಚಾರ್ಯರ "ಛಾಂದೋಗ್ಯಭಾಷ್ಯ"ಕ್ಕೆ ಇವರು ವ್ಯಾಖ್ಯಾನ ಬರೆದಿದ್ದರೆಂದು ಗೊತ್ತಾಗುತ್ತದೆ. ಬ್ರಹ್ಮಸೂತ್ರಗಳಿಗೂ ಭಾಷ್ಯ ಬರೆದಿದ್ದರೆಂಬುದನ್ನು ಆತ್ಮಸಿದ್ಧಿಯಲ್ಲಿ ಯಾಮುನರು ಹೇಳುವ, "ಭಗವತಾ ಬಾದರಾಯಣೇನ ಇದಮರ್ಥಾನ್ಯೇವ ಸೂತ್ರಾಣಿ ಪ್ರಣೀತಾನಿ ವಿವೃತಾನಿ ಚ ತಾನಿ ಪರಿಮಿತಗಂಭೀರಭಾಷಿಣಾ ದ್ರಮಿಡಭಾಷ್ಯಕೃತಾ. ವಿಸ್ತೃತಾನಿ ಚ ತಾನಿ ಗಂಭಿರನ್ಯಾಯಸಾಗರಭಾಷಿಣಾ ಶ್ರೀವತ್ಸಾಂಕಮಿಶ್ರೇಣಾಪಿ" ಎಂಬ ಮಾತುಗಳಿಂದ ತಿಳಿಯಬಹುದು. ರಾಮಾನುಜರು ತಮ್ಮ ಶ್ರೀಭಾಷ್ಯದಲ್ಲಿಯೂ, ವೇದಾರ್ಥಸಂಗ್ರಹದಲ್ಲಿಯೂ ಇವರ ಕೃತಿಗಳಿಂದ ಉಲ್ಲೇಖಗಳನ್ನು "ನಿರ್ವಚನಂ ಚ ಸ್ಮಾರ್ತಮುದಾಹೃತಂ ಭಾಷ್ಯಕಾರೇಣ" ಎಂದೂ, "ಭಾಷ್ಯಕೃತಾ ವ್ಯಾಖ್ಯಾತಂ ಚ" ಎಂದೂ ಹೇಳಿ ಕೊಟ್ಟಿರುವುದರಿಂದ ಇವರ ಕೃತಿಗಳು ಅವರಿಗೆ ಉಪಲಬ್ಧವಾಗಿದ್ದವೆಂದು ತಿಳಿಯಬಹುದು. ಈಗ ಇವರ ಕೃತಿಗಳು ಉಪಲಬ್ಧವಾಗಿಲ್ಲ ಶಂಕರರು ಉದಾಹರಿಸಿರುವ "ದ್ರವಿಡಭಾಷ್ಯಕಾರರೂ" ಇವರೂ ಬೇರೆ ಬೇರೆ ಯಾದವರೆಂದು ವಿದ್ವಾಂಸರ ಅಭಿಪ್ರಾಯ. ಇವರ ಕಾಲದ ಬಗೆಗೂ ಏನನ್ನೂ ನಿರ್ಧಿಷ್ಟವಾಗಿ ಹೇಳುವುದಕ್ಕಾಗುವುದಿಲ್ಲ.

## ನಾಥಮುನಿಗಳು

## (ಕ್ರಿ.ಶ. ೧೦ನೆಯ ಶತಮಾನ)

ವಿಶಿಷ್ಟಾದ್ವೈತ ಸಿದ್ಧಾಂತವನ್ನು ಸ್ಥಾಪನೆ ಮಾಡಿದ ಆಚಾರ್ಯತ್ರಯರಲ್ಲಿ ಇವರು ಮೊದಲನೆಯವರು. ಈಗಿನ ತಮಿಳುನಾಡಿನಲ್ಲಿರುವ ವೀರನಾರಾಯಣಪುರ ಇವರ ಜನ್ಮಸ್ಥಳ.

ಯೋಗದಶೆಯಲ್ಲಿ ಅವರು ನಮ್ಮಾಳ್ವಾರ್ರವರನ್ನು ಸಾಕ್ಷಾತ್ಕರಿಸಿಕೊಂಡರೆಂಬ ಸಂಪ್ರದಾಯವಿದೆ. ನಮ್ಮಾಳ್ವಾರ್ರವರ ಪ್ರಬಂಧಸಾಹಿತ್ಯವನ್ನು ಇವರು ಸಂಪಾದಿಸಿ ಸಂರಕ್ಷಿಸಿದರೆಂದು ಹೇಳಲಾಗಿದೆ. ಇವರು "ನ್ಯಾಯತತ್ತ್ವ", "ಪುರುಷನಿರ್ಣಯ" ಮತ್ತು "ಯೋಗರಹಸ್ಯ" ಎಂಬ ಕೃತಿಗಳನ್ನು ಬರೆದಿದ್ದರೆಂದು ಗೊತ್ತಾಗುತ್ತದೆ. ವೇಂಕಟನಾಥರು ತಮ್ಮ ನ್ಯಾಯ ಪರಿಶುದ್ಧಿಯಲ್ಲಿ "ನ್ಯಾಯತತ್ವದ" ಉಲ್ಲೇಖಮಾಡಿದ್ದಾರೆ. ಆದರೆ ಈ ಕೃತಿಗಳು ಯಾವುವೂ ಈಗಲೂ ಉಪಲಬ್ಧವಾಗಿಲ್ಲ. ಯಾಮುನಾಚಾರ್ಯರು ತಮ್ಮ ಸ್ತೋತ್ರರತ್ನದಲ್ಲಿ—

ಭೂಯೋ ನಮೋಽಪರಿಮಿತಾಚ್ಯುತ ಭಕ್ತಿತತ್ತ್ವ–
ಜ್ಞಾನಾಮೃತಾಬ್ಧಿ ಪರಿವಾಹಶುಭೈರ್ವಚೋಭಿಃ ।
ಲೋಕೇಽವತೀರ್ಣ–ಪರಮಾರ್ಥ–ಸಮಗ್ರಭಕ್ತಿ–
ಯೋಗಾಯ ನಾಥಮುನಯೇ ಯಮಿನಾಂ ವರಾಯ ॥

ಎಂದು ಇವರನ್ನು ಸ್ತುತಿಸಿದ್ದಾರೆ.

## ಯಾಮುನಾಚಾರ್ಯರು

(ಕ್ರಿ. ಶ. ೧೧ನೆಯ ಶತಮಾನದ ಉತ್ತರಾರ್ಧ)

ಇವರು ನಾಥಮುನಿಗಳ ಮೊಮ್ಮಕ್ಕಳು. ಮಹಾಭಾಷ್ಯಭಟ್ಟರಲ್ಲಿ ಇವರ ವಿದ್ಯಾಭ್ಯಾಸವಾಯಿತು. ವಾದದಲ್ಲಿ ಅಸಾಮಾನ್ಯಶಕ್ತಿಯನ್ನು ಹೊಂದಿದ್ದ ಇವರು ತಮ್ಮ ೧೨ನೆಯ ವಯಸ್ಸಿನಲ್ಲಿ ಆಕ್ಕಿಯಾಳ್ವಾರ್ ಎಂಬ ಮಹಾಪಂಡಿತನನ್ನು ವಾದದಲ್ಲಿ ಸೋಲಿಸಿ ರಾಜನ ವಿಶ್ವಾಸಕ್ಕೆ ಪಾತ್ರರಾದರು. ರಾಜಸನ್ಮಾನವನ್ನು ಪಡೆದು ರಾಜಭೋಗದಲ್ಲಿದ್ದ ಇವರನ್ನು ರಾಮಮಿಶ್ರರು ಬಹಳ ಪ್ರಯತ್ನ ಮಾಡಿ ಭೇಟಿಮಾಡಿ ಸಿದ್ಧಾಂತಪ್ರವರ್ತನಕ್ಕೆ ಪ್ರೇರಿಸಿದರು. ಯಾಮುನರು ಸಂಸಾರ ತ್ಯಾಗಮಾಡಿ ಸಂನ್ಯಾಸಿಗಳಾದರು. ಶ್ರೀರಂಗದಲ್ಲಿ ಆಚಾರ್ಯಪೀಠವನ್ನು ಇವರು ಅಲಂಕರಿಸಿದರು. ಇವರ "ಆಗಮಪ್ರಾಮಾಣ್ಯ", "ಮಹಾಪುರುಷನಿರ್ಣಯ", "ಆತ್ಮಸಿದ್ಧಿ", "ಈಶ್ವರಸಿದ್ಧಿ", "ಸಂವಿತ್ಸಿದ್ಧಿ", "ಗೀತಾರ್ಥಸಂಗ್ರಹ" "ಚತುಃಶ್ಲೋಕೀ", ಮತ್ತು "ಸ್ತೋತ್ರರತ್ನ" ಎಂಬ ಕೃತಿಗಳನ್ನು ರಚಿಸಿದ್ದಾರೆ. ವಿಶಿಷ್ಟಾದ್ವೈತ ಸಿದ್ಧಾಂತವನ್ನು ಸ್ಥಾಪಿಸಿದ ಆಚಾರ್ಯತ್ರಯರಲ್ಲಿ ಇವರು ಎರಡನೆಯವರಾಗಿದ್ದಾರೆ.

"ಮಹಾಪುರುಷನಿರ್ಣಯ" ಎಂಬಕೃತಿ ಉಪಲಬ್ಧವಾಗಿಲ್ಲ. "ಆಗಮಪ್ರಾಮಾಣ್ಯ" ಪಾಂಚರಾತ್ರಾಗಮದ ಪ್ರಾಮಾಣ್ಯವನ್ನು ಸ್ಥಾಪಿಸುತ್ತದೆ.

## ಆತ್ಮಸಿದ್ಧಿ

ಈ ಕೃತಿಯಲ್ಲಿ ಜೀವಾತ್ಮನ ಸ್ವರೂಪವನ್ನು ನಿಷ್ಕೃಷ್ಟವಾಗಿ ಯಾಮುನರು ನಿರೂಪಿಸಿದ್ದಾರೆ. ಗದ್ಯರೂಪದಲ್ಲಿರುವ ಈ ಕೃತಿಯಲ್ಲಿ ಮಧ್ಯೇ ಮಧ್ಯೇ ತಮ್ಮದೇ ಆದ ಕಾರಿಕೆಗಳನ್ನು ಇವರು ಕೊಟ್ಟಿದ್ದಾರೆ. ಆತ್ಮನ ಸ್ವರೂಪವನ್ನು ಒಂದು ಕಾರಿಕೆಯಲ್ಲಿ—

''ದೇಹೇಂದ್ರಿಯಮನಃಪ್ರಾಣಾದಿಭ್ಯೋಽನ್ಯೋಽನನ್ಯಸಾಧನಃ ।
ನಿತ್ಯೋವ್ಯಾಪೀ ಪ್ರತಿಕ್ಷೇತ್ರಮಾತ್ಮಾ ಭಿನ್ನಃ ಸ್ವತಃ ಸುಖೀ ।

(ಆ.ಸಿ. ೩.)

ಎಂದು ನಿರೂಪಿಸಿದ್ದಾರೆ. ದೇಹಾತ್ಮವಾದ, ಪ್ರಾಣಾತ್ಮವಾದ, ಇಂದ್ರಿಯಾತ್ಮವಾದ, ಮನಸ್ಸೇ ಆತ್ಮನೆಂಬವಾದ, ಬುದ್ಧ್ಯಾತ್ಮವಾದ–ಇವುಗಳನ್ನೆಲ್ಲಾ ಈ ಕೃತಿಯಲ್ಲಿ ಪರೀಕ್ಷಿಸಿ ನಿರಾಕರಿಸಿದ್ದಾರೆ. ಆತ್ಮನು ಚೈತನ್ಯಸ್ವರೂಪನೆಂದೂ, ಅವನಿಗೆ ಜ್ಞಾನವು ಗುಣವಾಗಿರುವುದೆಂದೂ ಇವರು ಸ್ಥಾಪಿಸಿದ್ದಾರೆ. ಯಾಮುನರ ಅಭಿಪ್ರಾಯದಂತೆ ಕೇವಲ ಜ್ಞಾನವೇ ಆತ್ಮವಾಗದು. ಅದು ಜ್ಞಾತೃವಾದ ಆತ್ಮನ ಧರ್ಮ ಮಾತ್ರ. ಯಾಮುನರು ಅದ್ವೈತವಾದವನ್ನು ವಿಸ್ತಾರವಾಗಿ ಪರೀಕ್ಷಿಸಿ ಜ್ಞಾತೃತ್ವವು ಅಧ್ಯಸ್ತವೆಂಬ ವಾದವನ್ನು ನಿರಾಕರಿಸಿದ್ದಾರೆ. ಮುಕ್ತಿಯಲ್ಲಿಯೂ ಅಹಮರ್ಥವು ಇರುವುದೆಂದು ಸಾಧಿಸಿ ಅದರ ನಿತ್ಯತ್ವವನ್ನೂ ಪ್ರತಿಪಾದಿಸಿದ್ದಾರೆ. ಯಾಮುನರು ಆತ್ಮನಾನಾತ್ವವನ್ನು ಪುರಸ್ಕರಿಸಿದ್ದಾರೆ. ''ಆತ್ಮಸಿದ್ಧಿ'' ಗ್ರಂಥವು ಪೂರ್ಣವಾಗಿ ಉಪಲಬ್ಧವಾಗಿಲ್ಲ. ದೊರೆತಿರುವ ಭಾಗದಲ್ಲಿ ಮಹತ್ವವುಳ್ಳ ಈ ವಿಚಾರಗಳೆಲ್ಲಾ ಇವೆ.

## ಈಶ್ವರಸಿದ್ಧಿ

ಈ ಕೃತಿಯು ಪ್ರಪಂಚವು ಒಬ್ಬ ಈಶ್ವರನ ಅಧೀನದಲ್ಲಿದೆಯೆಂಬುದನ್ನು ಸಾಧಿಸುತ್ತದೆ. 'ಉಪಪಾದಿತಮಾತ್ಮಚಿಂತಾಯಾಂ' ಎಂಬ ಮಾತುಗಳು ಇಲ್ಲಿ ಬರುವುದರಿಂದ ಆತ್ಮಸಿದ್ಧಿಯ ನಂತರ ಇದರ ರಚನೆ ಆಯಿತೆಂಬುದು ತಿಳಿಯುತ್ತದೆ. 'ಜಗತ್ತನ್ನು ಸೃಜಿಸುವ ಈಶ್ವರನೆಂಬುವನೊಬ್ಬನಿಲ್ಲ'' ಎಂಬ ಮೀಮಾಂಸಕರ ವಾದವನ್ನು ಸೂಚಿಸಿ ಇವಕ್ಕೆ ಪ್ರತಿಯಾಗಿ ನೈಯ್ಯಾಯಿಕರು ಹೇಳುವ ಉತ್ತರವನ್ನು ಇಲ್ಲಿ ಅನುವಾದಮಾಡಿದ್ದಾರೆ. ನೈಯ್ಯಾಯಿಕರ ವಾದವನ್ನು ನಿರೂಪಿಸಿದ ನಂತರ ಮುಂದೆ ಬರುವ ಗ್ರಂಥಭಾಗ ಉಪಲಬ್ಧವಾಗಿಲ್ಲ. ಆದುದರಿಂದ ಈ ನೈಯ್ಯಾಯಿಕರ ವಾದಕ್ಕೆ ಅವರ ಉತ್ತರ ಮತ್ತು ಸಿದ್ಧಾಂತ ಮೊದಲಾದವು ಹೇಗಿದ್ದವೆಂಬುದು ನಮಗೆ ಗೊತ್ತಾಗುವುದಿಲ್ಲ. ಈ ವಾದವನ್ನು ಅನುಸರಿಸಿ ನಿರೂಪಣೆ ಮಾಡಿರುವ ರಾಮಾನುಜರು ತಮ್ಮ ಶ್ರೀ ಭಾಷ್ಯದಲ್ಲಿ (೧–೧–೩) ಶ್ರುತಿಯಿಂದಲೇ ಈಶ್ವರನನ್ನು ಸಾಧಿಸಬೇಕೆಂದು ಸಿದ್ಧಾಂತ ಮಾಡಿರುವುದನ್ನು ಗಮನಿಸಬಹುದು.

## ಸಂವಿತ್ಸಿದ್ಧಿ

ಈ ಗ್ರಂಥ ಗ್ರಂಥಾರಂಭದಿಂದ ಉಪಲಬ್ಧವಾಗಿಲ್ಲ. ಗ್ರಂಥದ ಆದಿಭಾಗ ಮತ್ತು ಕೊನೆಯಭಾಗ ಕಳೆದು ಹೋಗಿರುವುದಲ್ಲದೆ ಮಧ್ಯದಲ್ಲಿಯೂ ಅನೇಕ ಭಾಗಗಳು ನಷ್ಟವಾಗಿ ಹೋಗಿವೆ. ಉಪಲಬ್ಧವಾಗಿರುವ ಭಾಗದಲ್ಲಿ ಈ ಸಿದ್ಧಾಂತದ ಅನೇಕ ಮುಖ್ಯಾಂಶಗಳ ವಿವೇಚನೆ ಇರುವುದರಿಂದ ಇದಕ್ಕೆ ಬಹಳ ಪ್ರಾಧಾನ್ಯವಿದೆ. ಈ ಕೃತಿಯಲ್ಲಿ ಅದ್ವೈತ ಸಿದ್ಧಾಂತದ ಪರೀಕ್ಷಣವನ್ನು ಯಾಮುನರು ವ್ಯಾಪಕವಾಗಿ ಮಾಡಿದ್ದಾರೆ. "ಏಕಮೇವಾದ್ವಿತೀಯಂ ಬ್ರಹ್ಮ" ಎಂಬ ವಾಕ್ಯದ ಅರ್ಥವನ್ನು ನಿರೂಪಿಸುತ್ತಾ ಬ್ರಹ್ಮವಸ್ತುವಿಗೆ ಸಮನಾದ ಅಥವಾ ಅಧಿಕವಾದ ವಸ್ತು ಮತ್ತೊಂದಿಲ್ಲವೆಂಬುದು ಅದರ ಅರ್ಥವೆಂದು ತೀರ್ಮಾನಿಸಿದ್ದಾರೆ. "ಆದ್ಯಂತವಾನ್ ಪ್ರಪಂಚೋಽತಃ ಸತ್‌ಕಕ್ಷ್ಯಾಂತರ್ನಿವೇಕ್ಷ್ಯತೇ" ಎಂದು ಹೇಳಿ ಪ್ರಪಂಚನಿಷೇಧವು ಸಲ್ಲದೆಂದು ವಾದಿಸಿದ್ದಾರೆ. 'ತತ್ತ್ವಮಸಿ' ವಾಕ್ಯಾರ್ಥ ವಿಚಾರವನ್ನು ಯಾಮುನರು ಪ್ರಸ್ತಾಪಿಸುತ್ತಾ ಅದ್ವೈತದರ್ಶನದ ನಿರೂಪಣೆ ಸರಿಯಲ್ಲವೆಂಬ ನಿಶ್ಚಯಕ್ಕೆ ಬಂದಿದ್ದಾರೆ. 'ಸಂವಿದೇಕತ್ವ', 'ಸಂವಿನ್ನಿತ್ಯತ್ವ', 'ಸಂವಿನ್ನಿರ್ಧರ್ಮಕತ್ವ' ಮೊದಲಾದವುಗಳು ಯುಕ್ತಿ ಯುಕ್ತವಲ್ಲವೆಂದು ನಿರೂಪಿಸಿ ಪ್ರಶ್ನೆ ಮಾಡದೆ ನಂಬುವವರಿಗೆ ಅವು ಸರಿಯೆಂದು —

'ಹಂತ ಬ್ರಹ್ಮೋಪದೇಶೋಽಯಂ ಶ್ರದ್ಧಧಾನೇಷು ಶೋಭತೇ ।<br>
ವಯಮಶ್ರದ್ಧಧಾನಾಃ ಸ್ಮೋ ಯೆ ಯುಕ್ತಿಂ ಪ್ರಾರ್ಥಯಾಮಹೇ ॥

ಎಂದು ಹೇಳಿದ್ದಾರೆ. ಅದ್ವೈತ ದರ್ಶನದಲ್ಲಿ ಪ್ರತಿಪಾದಿಸುವ 'ಅವಿದ್ಯೆ'ಯ ಪರೀಕ್ಷೆಯನ್ನು ಇವರು ಮಾಡುತ್ತಾ ಜೀವನಿಗಾಗಲೀ ಬ್ರಹ್ಮಕ್ಕಾಗಲೀ ಅದು ಸಂಬಂಧಿಸದೆಂದು ನಿರೂಪಿಸಿ 'ಆಶ್ರಯಾನುಪಪತ್ತಿ'ಯನ್ನು ತೋರಿಸಿದ್ದಾರೆ. ಈ ಗ್ರಂಥದ ಮುಂದಿನ ಭಾಗ ಉಪಲಬ್ಧ ವಾಗಿಲ್ಲ.

## ಗೀತಾರ್ಥ ಸಂಗ್ರಹ

ಇದು ಕೇವಲ ೩೨ ಶ್ಲೋಕಗಳನ್ನು ಹೊಂದಿದೆ. ಭಗವದ್ಗೀತೆಯ ೧೮ ಅಧ್ಯಾಯಗಳ ಅರ್ಥಗಳನ್ನು ೧೮ ಶ್ಲೋಕಗಳಲ್ಲಿ ಅಧ್ಯಾಯಕ್ಕೊಂದು ಶ್ಲೋಕದಂತೆ ಇಲ್ಲಿ ಸಂಗ್ರಹಿಸಿದ್ದಾರೆ. ಮೂರು ಷಟ್ಕಗಳ ವಿಚಾರ, ಕರ್ಮಯೋಗ, ಜ್ಞಾನಯೋಗ ಮತ್ತು ಭಕ್ತಿಯೋಗಗಳ ಲಕ್ಷಣ ಇವುಗಳನ್ನು ಉಳಿದ ಶ್ಲೋಕಗಳಲ್ಲಿ ನಿರೂಪಿಸಿದ್ದಾರೆ. ಈ ನಿರೂಪಣೆಗನುಸಾರವಾಗಿಯೇ ರಾಮಾನುಜರು ಗೀತಾಭಾಷ್ಯದಲ್ಲಿ ಗೀತಾರ್ಥಗಳನ್ನು ವಿವರಿಸಿದ್ದಾರೆ.

## ಸ್ತೋತ್ರರತ್ನ ಮತ್ತು ಚತುಃಶ್ಲೋಕೀ

ಕಾವ್ಯಮಯವಾಗಿ ತತ್ವವನ್ನು ಪ್ರತಿಪಾದಿಸುವುದೂ ಭಕ್ತಿಪೂರ್ಣವಾದುದೂ ಆದ ಸ್ತೋತ್ರ ಸ್ತೋತ್ರರತ್ನ. ಚತುಃಶ್ಲೋಕೀ ಸಿದ್ಧಾಂತದಲ್ಲಿ ಲಕ್ಷ್ಮೀತತ್ವವನ್ನು ಪ್ರತಿಪಾದಿಸುತ್ತದೆ.

ತಮ್ಮ ಕೃತಿಗಳಿಂದ ಯಾಮುನಾಚಾರ್ಯರು ಈ ಸಿದ್ಧಾಂತಕ್ಕೆ ನಿಷ್ಕೃಷ್ಟವಾದ ರೂಪವನ್ನು ತಂದುಕೊಟ್ಟರು. ರಾಮಾನುಜರು ಯಾಮುನರ ಮಾರ್ಗವನ್ನೇ ಅನುಸರಿಸಿ ಸಿದ್ಧಾಂತ ಸ್ಥಾಪನೆ ಮಾಡಿದರು. ರಾಮಾನುಜರ ವಿವರಣೆಗಳಿಗೆ ಯಾಮುನರ ಕೃತಿಗಳು ಮುಖ್ಯವಾದ ಆಧಾರಗಳಾಗಿವೆ.

## ರಾಮಾನುಜರು

### (ಕ್ರಿ.ಶ. ೧೦೧೭–೧೧೩೭)

ಈ ಸಿದ್ಧಾಂತವನ್ನು ಸ್ಥಾಪನೆ ಮಾಡಿದ ಆಚಾರ್ಯತ್ರಯರಲ್ಲಿ ಇವರು ಮೂರನೆಯವರು: ಯಾಮುನಾಚಾರ್ಯರ ಉತ್ತರಾಧಿಕಾರಿಗಳಾಗಿ ಶ್ರೀರಂಗದಲ್ಲಿ ಆಚಾರ್ಯಪೀಠವನ್ನಿವರು ಅಲಂಕರಿಸಿದ್ದರು. ತಮಿಳುನಾಡಿನಲ್ಲಿರುವ ಶ್ರೀ ಪೆರುಂಬೂದೂರು ಇವರ ಜನ್ಮಸ್ಥಳ. ಕಾಂಚೀ ಪುರದ ಹತ್ತಿರದ ಗ್ರಾಮವೊಂದರಲಿದ್ದ ಯಾದವಪ್ರಕಾಶರೆಂಬ ಅದ್ವೈತಾಚಾರ್ಯರಲ್ಲಿ ಇವರು ವೇದಾಂತಾಧ್ಯಯನವನ್ನು ಆರಂಭಿಸಿದರು. ಯಾದವಪ್ರಕಾಶರ ನಿರೂಪಣೆ ಇವರಿಗೆ ಸಮಾಧಾನವನ್ನುಂಟುಮಾಡದ ಕಾರಣ ಇವರ ಶಿಕ್ಷಣ ಅಲ್ಲಿಗೇ ನಿಂತಿತು. ಮುಂದೆ ಅನೇಕ ಆಚಾರ್ಯರುಗಳಿಂದ ಇವರು ತತ್ವೋಪದೇಶ ಪಡೆದರು. ಕಾಂಚೀಪೂರ್ಣರು, ಗೋಷ್ಠೀ ಪೂರ್ಣರು, ಮಹಾಪೂರ್ಣರು, ಮಾಲಾಧರರು ಮತ್ತು ಶ್ರೀ ಶೈಲಪೂರ್ಣರು ಇವರುಗಳಿಂದ ಸಿದ್ಧಾಂತದ ಪ್ರಮೇಯಗಳನ್ನಿವರು ತಿಳಿದರು. ಯಾಮುನಾಚಾರ್ಯರನ್ನು ತಮ್ಮ ಪರಮ ಗುರುಗಳೆಂದು ಇವರು ಸ್ವೀಕಾರಮಾಡಿ ಅವರ ಅಪೇಕ್ಷೆಗಳಲ್ಲೊಂದಾದ ಬ್ರಹ್ಮಸೂತ್ರಭಾಷ್ಯ ವನ್ನು ರಚಿಸಿದರು. ಯಾಮುನರ ತತ್ವ ನಿರೂಪಣೆಯ ಮಾರ್ಗದಲ್ಲೇ ನಡೆದು ಶ್ರುತಿಸ್ಮೃತಿಗಳ ಸಂಪ್ರದಾಯ ಮತ್ತು ಅನುಭವಗಳಿಗನುಸಾರವಾಗಿ ಈ ಸಿದ್ಧಾಂತದ ನಿರೂಪಣೆಯನ್ನು ನಿಷ್ಕೃಷ್ಟವಾದ ರೀತಿಯಲ್ಲಿ ಮಾಡಿ ದರ್ಶನಸ್ಥಾಪನಾಚಾರ್ಯರಾದರು.

ರಾಮಾನುಜರು 'ಶ್ರೀಭಾಷ್ಯ', 'ವೇದಾಂತಸಾರ', 'ವೇದಾಂತದೀಪ', 'ಭಗವದ್ಗೀತಾ ಭಾಷ್ಯ', 'ವೇದಾರ್ಥಸಂಗ್ರಹ', 'ಶರಣಾಗತಿಗದ್ಯ', 'ಶ್ರೀರಂಗಗದ್ಯ', 'ವೈಕುಂಠಗದ್ಯ' ಮತ್ತು 'ನಿತ್ಯಗ್ರಂಥ' ಎಂಬ ಒಂಬತ್ತು ಕೃತಿಗಳನ್ನು ರಚಿಸಿದ್ದಾರೆ. ವೇದಾಂತಸೂತ್ರಗಳಿಗೆ ರಾಮಾನುಜರು ಬರೆದ ಭಾಷ್ಯವೇ 'ಶ್ರೀಭಾಷ್ಯ'. ಇದರಲ್ಲಿ ವೇದಾರ್ಥಸಂಗ್ರಹದ ಉಲ್ಲೇಖ ವಿರುವುದರಿಂದ ಇದಕ್ಕಿಂತ ಮೊದಲು ರಚಿತವಾದುದು 'ವೇದಾರ್ಥ ಸಂಗ್ರಹ'. "ಶ್ರೀಭಾಷ್ಯ"

ಸಂಗ್ರಹರೂಪ 'ವೇದಾಂತ ದೀಪ'. 'ವೇದಾಂತಸಾರ' ಸೂತ್ರಾರ್ಥವನ್ನು ವಿವರಿಸುವ ಅತಿ ಸಂಕ್ಷಿಪ್ತವ್ಯಾಖ್ಯಾನ. ಭಗವದ್ಗೀತಾ ಭಾಷ್ಯದ ರಚನೆಯು ನಂತರ ಆದುದು 'ಶರಣಾಗತಿಗದ್ಯ'. ಶರಣಾಗತಿಗದ್ಯದ ನಂತರ 'ಶ್ರೀರಂಗಗದ್ಯ'ದ ರಚನೆಯಾಯಿತೆಂದು ವೇಂಕಟನಾಥರು ಹೇಳುತ್ತಾರೆ. 'ವೈಕುಂಠಗದ್ಯ' ಇವುಗಳ ನಂತರ ಆದುದು. 'ನಿತ್ಯಗ್ರಂಥ'ದಲ್ಲಿ ಶರಣಾಗತಿಗದ್ಯದ ಉಲ್ಲೇಖವಿರುವುದರಿಂದ ಅದು ಕೊನೆಯಲ್ಲಿ ರಚಿತವಾದುದಿರಬೇಕು.

## ಶ್ರೀಭಾಷ್ಯ

ಬ್ರಹ್ಮಸೂತ್ರಗಳಿಗೆ ರಾಮಾನುಜರು ರಚಿಸಿರುವ ವಿಖ್ಯಾತವಾದ ಭಾಷ್ಯ ಇದು. ಗುಣದಲ್ಲಿಯೂ ಗಾತ್ರದಲ್ಲಿಯೂ ಇದು ಹಿರಿದಾಗಿ ವಿಶಿಷ್ಟಾದ್ವೈತ ಸಿದ್ಧಾಂತವನ್ನು ಸಮರ್ಥನವಾಗಿ ಸಾಧಿಸಿದೆ. ರಾಮಾನುಜರ ಶ್ರೀಭಾಷ್ಯಕ್ಕನುಸಾರವಾಗಿ ೫೪೫ ಸೂತ್ರಗಳೂ, ೧೫೬ ಅಧಿಕರಣಗಳೂ ಇವೆ. ಬ್ರಹ್ಮಸೂತ್ರಗಳು ನಾಲ್ಕು ಅಧ್ಯಾಯಗಳಲ್ಲಿವೆ. ಒಂದೊಂದು ಅಧ್ಯಾಯದಲ್ಲಿಯೂ ನಾಲ್ಕು ಪಾದಗಳಿವೆ. ಇವು ಎಲ್ಲಾ ಭಾಷ್ಯಗಳಿಗೂ ಸಮಾನವಾಗಿವೆ. ಆದರೆ ಸೂತ್ರಗಳನ್ನು ಎಣಿಸುವಾಗ ಕೆಲವು ಸೂತ್ರಗಳನ್ನು ಸೇರಿಸಿ ಹೇಳುವುದರಿಂದಲೂ, ಕೆಲವು ಸೂತ್ರಗಳನ್ನು ಬಿಡಿಸಿ ಎರಡು ಮೂರು ಸೂತ್ರಗಳನ್ನಾಗಿಯೂ ಎಣಿಸುವುದರಿಂದಲೂ ಒಂದು ಭಾಷ್ಯಕ್ಕೂ ಮತ್ತೊಂದು ಭಾಷ್ಯಕ್ಕೂ ಸೂತ್ರಸಂಖ್ಯೆಯಲ್ಲಿ ವ್ಯತ್ಯಾಸವಾಗುತ್ತದೆ. ಸೂತ್ರಪಾಠ, ಅಧಿಕರಣಗಳು, ಅಧಿಕರಣದ ವಿಷಯ ವಾಕ್ಯಗಳು ಮುಂತಾದುವುಗಳಲ್ಲಿ ಶಂಕರಭಾಷ್ಯಕ್ಕೂ ರಾಮಾನುಜ ಭಾಷ್ಯಕ್ಕೂ ಅತ್ಯಂತ ಸಾಮ್ಯವಿದೆ. ಆದರೆ ಅವರು ತೆಗೆಯುವ ತೀರ್ಮಾನಗಳೂ ಬೇರೆ ಬೇರೆಯಾಗಿರುತ್ತವೆ. ಇದಕ್ಕೆ ಒಂದು ಉದಾಹರಣೆಯಾಗಿ ವಾಕ್ಯಾನ್ವಯಾಧಿಕರಣವನ್ನು ಕೊಡಬಹುದು (೧-೪-೧೯). ಶ್ರೀಭಾಷ್ಯದಲ್ಲಿ ರಾಮಾನುಜರು ಈ ಸಿದ್ಧಾಂತದ ಪ್ರಮೇಯಗಳನ್ನೆಲ್ಲಾ ಮೊದಲ ಸೂತ್ರವನ್ನು ವಿವರಿಸುವಾಗ ವಿಸ್ತಾರವಾಗಿ ನಿರೂಪಿಸಿದ್ದಾರೆ. ಅದ್ವೈತ ಸಿದ್ಧಾಂತವು ಪ್ರತಿಪಾದಿಸುವ ತತ್ತ್ವವನ್ನು ಇಲ್ಲಿ ವ್ಯಾಪಕವಾಗಿ ಪರೀಕ್ಷಿಸಿ ಅದು ಸಾಧುವಲ್ಲವೆಂದು ತಳ್ಳಿಹಾಕಿದ್ದಾರೆ' ಜಿಜ್ಞಾಸಾಧಿಕರಣದಲ್ಲಿ 'ಲಘುಪೂರ್ವಪಕ್ಷ', 'ಲಘುಸಿದ್ಧಾಂತ' ಎಂದೂ, 'ಮಹಾಪೂರ್ವಪಕ್ಷ 'ಮಹಾಸಿದ್ಧಾಂತ' ಎಂದೂ ಮುಖ್ಯವಾದ ಎರಡು ಭಾಗಗಳಿವೆ. 'ಅಥ' ಶಬ್ದದ ಅರ್ಥ ವಿವರಣೆಗೆ ಲಘುಪೂರ್ವ ಪಕ್ಷ ಲಘುಸಿದ್ಧಾಂತಗಳು ಸಂಬಂಧಿಸಿವೆ. ಕರ್ಮಜಿಜ್ಞಾಸೆಯ ಬಳಿಕವೇ ಬ್ರಹ್ಮಜಿಜ್ಞಾಸೆಯುಂಟಾಗುವುದು ಸಹಜವೆಂದು ಇಲ್ಲಿ ನಿಶ್ಚಯಿಸಿದ್ದಾರೆ. ಕರ್ಮಮೀಮಾಂಸೆಯೂ ಬ್ರಹ್ಮಮೀಮಾಂಸೆಯೂ ಕೂಡಿ ಒಂದೇಶಾಸ್ತ್ರವೆಂದೂ, ಅವು ಅಧ್ಯಾಯಭೇದ, ಷಟ್ಕಭೇದಗಳಿರುವಂತೆ ಇವೆಯೆಂದೂ, ಪೂರ್ವಭಾಗವಾದ ಕರ್ಮಕಾಂಡ ಭಗವಂತನನ್ನು ಆರಾಧಿಸುವ ಕರ್ಮಸ್ವರೂಪವನ್ನು ತಿಳಿಸುವುದೆಂದೂ, ಆ ಕರ್ಮಗಳಿಂದ ಆರಾಧ್ಯನಾದ ಪರಮಾತ್ಮಸ್ವರೂಪವನ್ನು ಉತ್ತರಭಾಗದ ವೇದಾಂತ ತಿಳಿಸುವುದೆಂದೂ, ಇವುಗಳಿಗೆ ಪರಸ್ಪರ ವಿರೋಧವಿಲ್ಲವೆಂದೂ 'ಶಾಸ್ತ್ರೈಕ್ಯಸಮರ್ಥನೆ'ಯನ್ನು ಮಾಡಿದ್ದಾರೆ. ಮಹಾಪೂರ್ವಪಕ್ಷದಲ್ಲಿ ಅದ್ವೈತ ಸಿದ್ಧಾಂತದ ಪ್ರಮೇಯವನ್ನು ಬಹಳ ಪ್ರಭಾವ ಪೂರ್ಣವಾಗಿ ನಿರೂಪಿಸಿ ಮಹಾಸಿದ್ಧಾಂತದಲ್ಲಿ

ಅಷ್ಟೇ ಪ್ರಭಾವಪೂರ್ಣವಾಗಿ ಅದನ್ನು ನಿರಾಕರಿಸಿದ್ದಾರೆ. 'ನಿರ್ವಿಶೇಷಚಿನ್ಮಾತ್ರವೇ ಬ್ರಹ್ಮ' ಎಂಬ ಅದ್ವೈತವಾದವನ್ನು ಪರೀಕ್ಷಿಸುತ್ತಾ ನಿರ್ವಿಶೇಷವಸ್ತುವಿಗೆ ಯಾವ ಪ್ರಮಾಣವೂ ಇರುವುದಿಲ್ಲವಾದುದರಿಂದ ಅದು ಯುಕ್ತವಲ್ಲವೆಂದು ಸಾಧಿಸಿದ್ದಾರೆ. 'ನಿರ್ವಿಷಯವಾದ ಸಂವಿತ್' ಇರಲಾರದೆಂದು ರಾಮಾನುಜರ ಸಿದ್ಧಾಂತ. ಬ್ರಹ್ಮವು ಅನಿರ್ವಚನೀಯವಾದ ಅವಿದ್ಯೆಯಿಂದ ತಿರೋಹಿತವಾಗಿದ್ದು ಮಿಥ್ಯಾ ಪ್ರಪಂಚವನ್ನು ಕಾಣುತ್ತಿದೆ ಎಂದು ಪೂರ್ವಪಕ್ಷಿಯು ಹೇಳುವ ಮತದಲ್ಲಿ ಆಶ್ರಯಾನುಪಪತ್ತಿ, ತಿರೋಧಾನಾನುಪಪತ್ತಿ, ಅವಿದ್ಯಾಸ್ವರೂಪಾನುಪಪತ್ತಿ, ಅನಿರ್ವಚನೀಯತ್ವಾನುಪಪತ್ತಿ ಪ್ರಮಾಣಾನುಪಪತ್ತಿ, ನಿವರ್ತಕಾನುಪಪತ್ತಿ ಮತ್ತು ನಿವೃತ್ತ್ಯನುಪಪತ್ತಿ ಎಂಬ ಏಳು ಅನುಪಪತ್ತಿಗಳಿವೆ ಎಂದು ರಾಮಾನುಜರು ಇಲ್ಲಿ ನಿರೂಪಿಸಿದ್ದಾರೆ. 'ತತ್ತ್ವಮಸಿ' ಎಂಬ ವಾಕ್ಯ ಪ್ರಕಾರದ್ವಯವು ವಿಶಿಷ್ಟವಾದ ಒಂದೇ ವಸ್ತುವನ್ನು ಹೇಳುವುದರಿಂದ ಸಾಮಾನಾಧಿಕರಣ್ಯವು ಸಿದ್ಧವಾಗುವುದು ಎಂದು ಇಲ್ಲಿ ನಿರೂಪಿಸಿದ್ದಾರೆ. ವಿಶಿಷ್ಟಾದ್ವೈತ ಸಿದ್ಧಾಂತದ ವಿವೇಚನೆಯನ್ನು ರಾಮಾನುಜರು 'ಮಹಾಸಿದ್ಧಾಂತ'ದಲ್ಲಿ ಬಹಳ ಯಶಸ್ವಿಯಾಗಿ ಮಾಡಿದ್ದಾರೆ. ಪಾಂಚರಾತ್ರಾಗಮದ ಪ್ರಾಮಾಣ್ಯವನ್ನು (೨-೨-೪೧) ಎರಡನೆಯ ಅಧ್ಯಾಯದಲ್ಲಿ ಎತ್ತಿ ಹಿಡಿದಿದ್ದಾರೆ. ಜೀವಾತ್ಮರುಗಳಿಗೆ ಕರ್ತೃತ್ವವುಂಟೆಂದೂ (II-೩-೩೩), ಪರಮಾತ್ಮನಿಂದ ಅದು ಅವನಿಗೆ ಕೊಡಲ್ಪಟ್ಟಿದೆಯೆಂದೂ (II-೩-೪೦), ಜೀವಾತ್ಮರು ಪರಮಾತ್ಮನ ಅಂಶವೆಂದೂ (II-೩-೪೨) ನಿರೂಪಿಸಿದ್ದಾರೆ. ಅಂಶಾಂಶಿಭಾವವಿದ್ದರೂ ಸ್ವಭಾವ ವೈಲಕ್ಷಣ್ಯವಿರುವುದೆಂದು ಜೀವಪರಮರ ಸಂಬಂಧದ ಬಗೆಗೆ ಹೇಳುತ್ತಾರೆ. ವಾಕ್ಯಾರ್ಥಜ್ಞಾನಕ್ಕಿಂತ ಬೇರೆಯಾದುದೂ, ಧ್ಯಾನ, ಉಪಾಸನ ಮೊದಲಾದ ಶಬ್ದಗಳಿಂದ ಹೇಳಲ್ಪಡುವುದೂ ಆದ ಜ್ಞಾನ ಮೋಕ್ಷೋಪಾಯವೆಂದು (೧. ೧-೧)ರಲ್ಲಿ ನಿರೂಪಿಸಿದ್ದಾರೆ. ರಾಮಾನುಜರು ಪೂರ್ವಪಕ್ಷನಿರಾಕರಣೆ ಮತ್ತು ಸಿದ್ಧಾಂತಸಮರ್ಥನೆಯ ಸರಣಿಯನ್ನು ಯಾಮುನಾಚಾರ್ಯರಿಂದ ಆರಿಸಿಕೊಂಡಿದ್ದರೂ ತಮ್ಮ ಸ್ವತಂತ್ರಯುಕ್ತ್ಯಾದಿಗಳನ್ನೂ ಜೋಡಿಸಿ ವಾದಿಸಿದ್ದಾರೆ.

## ವೇದಾಂತದೀಪ

ಇದು ಶ್ರೀ ಭಾಷ್ಯದ ಸಂಗ್ರಹ ರೂಪವಾಗಿದೆ. ಇಲ್ಲಿ ಪೂರ್ವಪಕ್ಷಗಳ ನಿರೂಪಣೆ ಮತ್ತು ಅವುಗಳ ನಿರಾಕರಣೆ ಭಾಷ್ಯದಲ್ಲಿರುವಂತೆ ವಿಸ್ತಾರವಾಗಿಲ್ಲ. ಬ್ರಹ್ಮಸೂತ್ರಗಳ ಎಲ್ಲಾ ಅಧಿಕರಣಗಳ ಅರ್ಥವಿವೇಚನೆಯನ್ನು ವಿಷಯವಾಕ್ಯ, ಸಂಶಯ, ಪೂರ್ವಪಕ್ಷ ಮತ್ತು ಸಿದ್ಧಾಂತಗಳ ನಿರೂಪಣೆಯೊಡನೆ ಇದು ಮಾಡುತ್ತದೆ.

## ವೇದಾಂತಸಾರ

ಬ್ರಹ್ಮಸೂತ್ರಗಳ ಅರ್ಥನಿರೂಪಣೆಯನ್ನು ಅತಿಸಂಗ್ರಹವಾಗಿ ಇದು ಮಾಡುತ್ತದೆ. ಶ್ರೀಭಾಷ್ಯದ ಪರಿಚಯವಿಲ್ಲದವರಿಗೂ ಇದು ಉಪಯುಕ್ತವಾಗಿದೆ.

## ಭಗವದ್ಗೀತಾಭಾಷ್ಯ

ಸ್ಮೃತಿಪ್ರಸ್ಥಾನವೆನಿಸಿದ ಭಗವದ್ಗೀತೆಗೆ ರಾಮಾನುಜರು ರಚಿಸಿರುವ ಭಾಷ್ಯ ಇದು. ಇದರ ಶೈಲಿ ಬಹಳ ಲಲಿತವಾಗಿ ಮನೋಹರವಾಗಿದೆ. 'ವೇದಾಂತೋದಿತಂ ಸ್ವವಿಷಯಂ ಜ್ಞಾನಕರ್ಮಾನುಗೃಹೀತಂ ಭಕ್ತಿಯೋಗಮವತಾರಯಾಮಾಸ' ಎಂದು ಪೀಠಿಕೆಯಲ್ಲಿ ಹೇಳಿ ಭಗವದ್ಗೀತೆಯ ಮುಖ್ಯೋಪದೇಶ ಭಕ್ತಿಯೋಗವೆಂದೂ, ಕರ್ಮಯೋಗ ಜ್ಞಾನಯೋಗಗಳು ಅದಕ್ಕೆ ಅಂಗವೆಂದೂ ನಿರೂಪಿಸಿದ್ದಾರೆ. ಹದಿನೆಂಟನೆಯ ಅಧ್ಯಾಯದ ೬೬ನೇ ಶ್ಲೋಕವನ್ನು ವಿವರಿಸುವಾಗ 'ಶರಣಾಗತಿ' ಭಕ್ತಿಯೋಗದ ಆರಂಭಕ್ಕೂ, ಸಫಲತೆಗೂ ಆವಶ್ಯಕವೆಂದು ನಿರೂಪಿಸಿದ್ದಾರೆ.

## ವೇದಾರ್ಥ ಸಂಗ್ರಹ

ಈ ಕೃತಿ ಉಪನಿಷದ್ಭಾಷ್ಯದ ಸ್ಥಾನದಲ್ಲಿದೆ. ರಾಮಾನುಜರು ಕ್ರಮವಾಗಿ ಉಪನಿಷತ್ತುಗಳಿಗೆ ಭಾಷ್ಯ ಬರೆದಿಲ್ಲ. ಆದರೆ ಮುಖ್ಯವಾದ ಎಲ್ಲ ಶ್ರುತಿವಾಕ್ಯಗಳ ವಿವೇಚನೆಯನ್ನು ಈ ಕೃತಿಯಲ್ಲಿ ಮಾಡಿದ್ದಾರೆ. ಇದು ಒಂದು ಸ್ವತಂತ್ರವಾದ ಪ್ರಕರಣ ಗ್ರಂಥದಂತೆಯೇ ಇದೆ. ಪರಮ ಪ್ರಮಾಣವಾದ ವೇದಗಳಿಗನುಸಾರವಾಗಿ ನಿರ್ಧರವಾಗುವ ತತ್ವಸ್ವರೂಪವನ್ನು ಇಲ್ಲಿ ನಿರೂಪಿಸಿದ್ದಾರೆ. ಇತರ ಪಕ್ಷಗಳ ನಿರಾಕರಣೆಯೊಡನೆ ಸಿದ್ಧಾಂತವನ್ನು ಸ್ಥಾಪಿಸುವ ಕ್ರಮವನ್ನು ಇಲ್ಲಿ ಅನುಸರಿಸಲಾಗಿದೆ. ಗ್ರಂಥದ ಆದಿಭಾಗದಲ್ಲಿ ಶಾಂಕರಮತ, ಭಾಸ್ಕರಮತ, ಮತ್ತು ಯಾದವಪ್ರಕಾಶರ ಮತವನ್ನು ನಿರೂಪಿಸಿ ಕ್ರಮವಾಗಿ ಇವುಗಳನ್ನು ಮುಂದೆ ಪರೀಕ್ಷಿಸಿದ್ದಾರೆ. ಹಾಗೂ ಇವುಗಳು ಸರಿಯಿಲ್ಲವೆಂದು ತೀರ್ಮಾನಿಸಿದ್ದಾರೆ. ಗ್ರಂಥದ ಮುಂದಿನ ಭಾಗ ಸ್ವಪಕ್ಷ ನಿರೂಪಣೆಗೆ ಮೀಸಲಾಗಿದೆ. ಬ್ರಹ್ಮಸ್ವರೂಪ, ಆತ್ಮಸ್ವರೂಪ, ಮೋಕ್ಷೋಪಾಯ, ಮೋಕ್ಷ ಸ್ವರೂಪ ಮೊದಲಾದುವನ್ನು ಶ್ರುತಿವಾಕ್ಯಗಳ ಆಧಾರದ ಮೇಲೆ ನಿರೂಪಣೆ ಮಾಡಿದ್ದಾರೆ. ವಿಶಿಷ್ಟಾದ್ವೈತ ದರ್ಶನದ ಪ್ರಮೇಯ ಪರಿಚಯವನ್ನು ಬಹು ಅಚ್ಚುಕಟ್ಟಾಗಿ ಕೃತಿ ಮಾಡಿ ಕೊಡುತ್ತದೆ.

## ಗದ್ಯತ್ರಯ

ಶರಣಾಗತಿ ಗದ್ಯ, ಶ್ರೀರಂಗಗದ್ಯ ಮತ್ತು ವೈಕುಂಠಗದ್ಯ ಎಂಬ ಮೂರು ಚಿಕ್ಕ ಚಿಕ್ಕ ಕೃತಿರತ್ನಗಳಲ್ಲಿ ಶರಣಾಗತಿಯ ಅಥವಾ 'ಪ್ರಪತ್ತಿಯ' ಮೋಕ್ಷೋಪಾಯತ್ವವನ್ನು ಪ್ರತಿಪಾದಿಸಿದ್ದಾರೆ. ಭಕ್ತಿಯೋಗವನ್ನು ಪೂರ್ಣಗೊಳಿಸಲು 'ಪ್ರಪತ್ತಿ' ಹೇಗೆ ಆವಶ್ಯಕವೋ ಹಾಗೆಯೇ ಅದು ಸ್ವತಂತ್ರವಾಗಿಯೂ ಮೋಕ್ಷೋಪಾಯವಾಗಬಲ್ಲದು ಎಂಬುದನ್ನು ಇಲ್ಲಿ

ನಿರೂಪಿಸಿದ್ದಾರೆ. ರಾಮಾನುಜರ ನಿರತಿಶಯವಾದ ಭಗವತ್ಪ್ರೇಮದ ಪರೀವಾಹಗಳಾಗಿವೆ. ಈ ಮೂರು ಗದ್ಯಗಳು. ಭಗವಂತನಲ್ಲಿ ನಿತ್ಯಕೈಂಕರ್ಯವನ್ನು ಪಡೆಯುವುದು ಪರಮ ಪುರುಷಾರ್ಥವೆಂದು ಇಲ್ಲಿ ರಾಮಾನುಜರು ಸ್ಪಷ್ಟಪಡಿಸಿದ್ದಾರೆ.

ನಿತ್ಯಗ್ರಂಥ ವೆಂಬುದು ಭಗವಂತನ ಆರಾಧನೆಯ ಕ್ರಮವನ್ನು ನಿರೂಪಿಸುವ ಕೃತಿ

ವಿಶಿಷ್ಟಾದ್ವೈತ ಸಿದ್ಧಾಂತಕ್ಕೆ ನಿರ್ದಿಷ್ಟವಾದ ಆಕಾರವನ್ನು ಕೊಟ್ಟವರು ರಾಮಾನುಜರು. ಶ್ರುತಿ ಸ್ಮೃತಿಗಳ ಪ್ರಮಾಣವನ್ನು ಕ್ರೋಢೀಕರಿಸಿ ಯುಕ್ತಿಯುಕ್ತವಾಗಿ ಇವರು ನಿರೂಪಿಸಿದರು. ತಮ್ಮ ಕಾಲದಲ್ಲಿ ಪ್ರಚಾರದಲ್ಲಿದ್ದ ಅದ್ವೈತವಾದವನ್ನೂ, ಭೇದಾಭೇದವಾದವನ್ನೂ ಪರೀಕ್ಷಿಸಿ ಅವುಗಳನ್ನು ನಿರಾಕರಿಸಿ ವಿಶಿಷ್ಟಾದ್ವೈತದ ಪುನಸ್ಸಮರ್ಥನೆಯನ್ನು ಮಾಡಿದರು. ಸಾಮಾನಾಧಿಕರಣ್ಯ, ಪ್ರಕಾರಿ–ಪ್ರಕಾರಭಾವ, ಶರೀರಿ–ಶರೀರಭಾವ ಮೊದಲಾದವುಗಳ ಮೂಲಕ ಇವರು ಈ ಸಿದ್ಧಾಂತವನ್ನು ಯುಕ್ತಿಯುಕ್ತವಾಗಿ ಸ್ಥಾಪಿಸಿದರು.

## ಶ್ರೀವತ್ಸಾಂಕಚಿಹ್ನಮಿಶ್ರರು
### (ಕ್ರಿ. ಶ. ೧೧ನೆಯ ಶತಮಾನದ ಉತ್ತರಾರ್ಧ)

ಇವರು ರಾಮಾನುಜರ ಮುಖ್ಯ ಶಿಷ್ಯರಲ್ಲಿ ಒಬ್ಬರು. ಇವರಿಗೆ 'ಕೂರೇಶ'ರೆಂಬ ಹೆಸರೂ ಇತ್ತು. ರಾಮಾನುಜರು ಭಾಷ್ಯರಚನೆ ಮಾಡಿದಾಗ ಇವರು ಅದನ್ನು ಬರೆದುಕೊಂಡರು. ಇವರು ಬರೆದ ಐದು ಸ್ತೋತ್ರಗಳು ಪಂಚಸ್ತವಗಳೆಂದು ವಿಖ್ಯಾತವಾಗಿವೆ. 'ಶ್ರೀಸ್ತವ.' 'ವೈಕುಂಠಸ್ತವ,' 'ಅತಿಮಾನುಷಸ್ತವ', 'ಸುಂದರಬಾಹುಸ್ತವ' ಮತ್ತು 'ವರದರಾಜಸ್ತವ ಎಂಬುವು ಅವು. ಈ ಸ್ತೋತ್ರಗಳಲ್ಲಿ ಈ ಸಿದ್ಧಾಂತದ ಮುಖ್ಯಾಂಶಗಳನ್ನು ಇವರು ನಿರೂಪಿಸಿದ್ದಾರೆ. ಭಗವಂತನ ಸಗುಣತ್ವ, ಭಕ್ತಿಪ್ರಪತ್ತಿಗಳ ಮೋಕ್ಷೋಪಾಯತ್ವ, ವಿಭವ ಹಾಗೂ ಅರ್ಚಾವತಾರಗಳ ಸೌಲಭ್ಯ ಇವುಗಳನ್ನೆಲ್ಲಾ ಈ ಸ್ತೋತ್ರಗಳಲ್ಲಿ ಕಾವ್ಯಮಯವಾಗಿ ವರ್ಣಿಸಿದ್ದಾರೆ. ಪರತತ್ವವು ನಾರಾಯಣನೆಂಬುದನ್ನು ಕೆಳಗಿನ ಶ್ಲೋಕದಲ್ಲಿ ಹೇಳಿದ್ದಾರೆ–

ಯನ್ಮೂಲಕಾರಣಮುಬುಧ್ಯತ ಸೃಷ್ಟಿವಾಕ್ಯೈಃ
ಬ್ರಹ್ಮೇತಿ ವಾ ಸದಿತಿ ವಾತ್ಮಗಿರಾಥ ವಾ ತತ್ ।
ನಾರಾಯಣಸ್ತ್ವಿತಿ ಮಹೋಪನಿಷದ್ಬ್ರವೀತಿ
ಸೌಬಾಲಿಕೀ ಪ್ರಭೃತಯೋಽಪ್ಯನುಜಗ್ಮುರೇನಾಂ ॥ (ವೈಕುಂಠಸ್ತವ. ೨೬)

## ಪರಾಶರಭಟ್ಟರು
### (ಕ್ರಿ: ಶ. ೧೨ನೆಯ ಶತಮಾನ)

ಇವರು ಕೂರೇಶರ ಪುತ್ರರು, ರಾಮಾನುಜರ ಪ್ರೇರಣೆಯಂತೆ ಇವರು

'ವಿಷ್ಣುಸಹಸ್ರನಾಮ ಭಾಷ್ಯ' ವನ್ನು ಬರೆದರು. ಶ್ರುತಿಸ್ಮೃತಿಗಳ ಆಧಾರಕ್ಕನುಸಾರವಾಗಿ ನಾಮನಿರ್ವಚನ ಮಾಡಿರುವ ಈ ಭಾಷ್ಯ ಅತ್ಯಂತ ಬೋಧಪ್ರದವಾಗಿದೆ. ಪೂರ್ವಶತಕ ಮತ್ತು ಉತ್ತರ ಶತಕಗಳಲ್ಲಿ ಒಟ್ಟು ೨೩೨ ಶ್ಲೋಕಗಳನ್ನುಳ್ಳ 'ಶ್ರೀರಂಗರಾಜಸ್ತವ' ಎಂಬುದು ಇವರ ಮತ್ತೊಂದು ಅಮೂಲ್ಯಕೃತಿ. 'ಶ್ರೀಗುಣರತ್ನಕೋಶ', 'ಅಷ್ಟಶ್ಲೋಕೀ' ಇವು ಇತರ ಸ್ತೋತ್ರಗಳು. ಇವುಗಳಲ್ಲಿ ಈ ಸಿದ್ಧಾಂತದ ಪ್ರಮೇಯಾಂಶಗಳ ನಿರೂಪಣೆಯೂ ಇದೆ. 'ತತ್ತ್ವರತ್ನಾಕರ' ಮತ್ತು 'ಅಧ್ಯಾತ್ಮಖಂಡದ್ವಯ ವಿವರಣ' ಎಂಬ ಕೃತಿಗಳನ್ನು ಇವರು ಬರೆದಿದ್ದರೆಂದು ಕಂಡು ಬರುತ್ತದೆ.

## ಶ್ರೀವರದವಿಷ್ಣುಮಿಶ್ರ

### (ಕ್ರಿ.ಶ. ೧೩ನೆಯ ಶತಮಾನ)

ಇವರು 'ಮಾನಯಾಥಾತ್ಮ್ಯನಿರ್ಣಯ' ಎಂಬ ಕೃತಿಯನ್ನು ಬರೆದಿದ್ದರೆಂದು ಕಂಡು ಬರುತ್ತದೆ. ವೇಂಕಟನಾಥರು ತಮ್ಮ ನ್ಯಾಯಸಿದ್ಧಾಂತದಲ್ಲಿ 'ಉಕ್ತಂ ಚ ಮಾನಯಾಥಾತ್ಮ್ಯನಿರ್ಣಯೇ ಪ್ರತ್ಯಕ್ಷಲಕ್ಷಣಾನಂತರಂ ವರದವಿಷ್ಣುಮಿಶ್ರೈಃ' ಎಂದು ಇವರನ್ನು ಉಲ್ಲೇಖಿಸಿದ್ದಾರೆ. ಇವರೂ ವಾತ್ಸ್ಯವರದಾಚಾರ್ಯರೂ ಒಬ್ಬರೇ ಎಂದು ಖಚಿತವಾಗಿ ಹೇಳುವುದಕ್ಕೆ ಆಗುವುದಿಲ್ಲ

## ಶ್ರೀ ವಿಷ್ಣುಚಿತ್ತರು

ಇವರು ವಾತ್ಸ್ಯವರದಾಚಾರ್ಯರ ಗುರುಗಳು. ನಮ್ಮಾಳ್ವಾರ್‌ರವರ ದ್ರಾವಿಡ ಪ್ರಬಂಧಗಳಿಗೆ ವ್ಯಾಖ್ಯಾನ ಬರೆದ ಕುರುಕೇಶ್ವರರ ಶಿಷ್ಯರು. ವೇಂಕಟನಾಥರು ಇವರ ಕೃತಿಗಳಿಂದ ಉಲ್ಲೇಖಿಸಿದ್ದಾರೆ. ಇವರ ಕಾಲ ಕ್ರಿ.ಶ. ೧೩ನೆಯ ಶತಮಾನ. 'ಪ್ರಮೇಯ ಸಂಗ್ರಹ' ಮತ್ತು 'ಸಂಗತಿಮಾಲಾ' ಎಂಬ ಎರಡು ಕೃತಿಗಳನ್ನು ಇವರು ರಚಿಸಿದ್ದಾರೆ.

## ವಾತ್ಸ್ಯವರದಾಚಾರ್ಯ

### (ಕ್ರಿ.ಶ. ೧೩ನೆಯ ಶತಮಾನ)

ರಾಮಾನುಜರ ಸಿದ್ಧಾಂತವನ್ನು ವ್ಯಾಪಕವಾಗಿ ಉಪದೇಶಿಸಿದ ಆಚಾರ್ಯರುಗಳಲ್ಲಿ ಇವರು ಮುಖ್ಯರಾದವರು. ರಾಮಾನುಜರ ಸೋದರಳಿಯಂದಿರಾದ ವಾತ್ಸ್ಯವರದ ವಿಷ್ಣ್ವಾಚಾರ್ಯರ ಪೌತ್ರರು ಇವರು. ದೇವರಾಜಗುರು ಇವರ ತಂದೆ. 'ವರದಾಹ್ವಯಮಂಡನೇ ಮನೀಷೀ ಯತಿಬೃಂದಾರಕಭಾಗಿನೇಯಪೌತ್ರಃ' ಎಂದು ಈ ವಿಷಯವನ್ನು ಇವರು ಹೇಳಿಕೊಂಡಿದ್ದಾರೆ. ಇವರಿಗೆ 'ನಡಾದೂರ್ ಅಮ್ಮಾಳ್' ಎಂಬ ಹೆಸರೂ ಇತ್ತು.

ಇವರು ವಿಷ್ಣು ಚಿತ್ತರ ಶಿಷ್ಯರು. ಕ್ರಿ.ಶ. ಹದಿಮೂರನೆಯ ಶತಮಾನದ ಕೊನೆಯ ಕಾಲದಲ್ಲಿ ಇವರು ಕಂಚಿಯಲ್ಲಿ ವೇದಾಂತಶಾಸ್ತ್ರವನ್ನು ಬೋಧಿಸುತ್ತಾ ಇದ್ದರು. ಸುದರ್ಶನ ಭಟ್ಟಾರಕರು, ಆತ್ರೇಯರಾಮಾನುಜರು ಮೊದಲಾದವರು ಇವರ ಶಿಷ್ಯರಾಗಿದ್ದರು. ಇವರು ಹದಿನೇಳು ಕೃತಿಗಳನ್ನು ಬರೆದಿರುವರೆಂದು ತಿಳಿದುಬರುತ್ತದೆ. ಇವುಗಳಲ್ಲಿ 'ಪ್ರಪನ್ನ ಪಾರಿಜಾತ,' 'ಪ್ರಮೇಯ ಮಾಲಾ', 'ಪ್ರಮೇಯಸಾರ', 'ಜ್ಞಾನಸಾರ', 'ರಹಸ್ಯಸಂಗ್ರಹ', 'ಚತುರ್ಲಕ್ಷಣ ಸಂಗ್ರಹ', 'ಪರತತ್ತ್ವನಿರ್ಣಯ', 'ಶ್ರೀಭಾಷ್ಯಸಂಗ್ರಹ', 'ತತ್ತ್ವಸಾರ' ಮೊದಲಾದವು ಮುಖ್ಯವಾದವು. ಇವುಗಳಲ್ಲಿ 'ಪ್ರಸನ್ನಪಾರಿಜಾತ' ಹತ್ತು ಪದ್ಧತಿಗಳನ್ನುಳ್ಳ ಸಣ್ಣ ಗ್ರಂಥ. ಇದು ಪದ್ಯರೂಪದಲ್ಲಿದೆ. ಇದರಲ್ಲಿ 'ಪ್ರಪತ್ತಿಯ' ಮೋಕ್ಷೋಪಾಯತ್ವವನ್ನು ಸ್ಥಾಪಿಸಿದ್ದಾರೆ. ಈ ವಿಷಯವನ್ನು ಕುರಿತ ಮುಂದಿನ ಅನೇಕ ಕೃತಿಗಳಿಗೆ ಇದು ಆಧಾರವಾಗಿದೆ. 'ತತ್ವಸಾರ' ವೆಂಬುದು ೧೦೪ ಪದ್ಯಗಳನ್ನುಳ್ಳ ಚಿಕ್ಕ ಆದರೆ ಮಹತ್ವ ಪೂರ್ಣವಾದ ಕೃತಿ. ಶ್ರೀಭಾಷ್ಯದ ಕೆಲವು ಪ್ರಮುಖ ಅಧಿಕರಣಗಳಲ್ಲಿ ಸಾಧಿಸಿದ ಮುಖ್ಯಾರ್ಥಗಳನ್ನೂ ವೈಶಿಷ್ಟ್ಯವನ್ನೂ ಈ ಕೃತಿ ವಿವರಿಸಿದೆ. ಜಿಜ್ಞಾಸಾಧಿಕರಣ, ಜನ್ಮಾದ್ಯಧಿಕರಣ, ಈಕ್ಷತ್ಯಧಿಕರಣ, ಆನಂದಮಯಾಧಿಕರಣ, ದೇವತಾಧಿಕರಣ, ಪರಾಯತ್ತಾಧಿಕರಣ, ಮೊದಲಾದವು ಈ ಅಧಿಕರಣಗಳಲ್ಲಿ ಕೆಲವು. ಈ ವಿವರಣೆಗೆ ಪೋಷಕವಾಗಿ ಅದ್ವೈತ ಸಿದ್ಧಾಂತದ ಅಭಿಪ್ರಾಯಗಳನ್ನು ಪರೀಕ್ಷಿಸಿ ಜೀವೇಶ್ವರಭೇದ ಮೊದಲಾದವನ್ನು ಸ್ಥಾಪಿಸಿದ್ದಾರೆ. ಈ ಕೃತಿಯ ೪೯ನೇ ಶ್ಲೋಕದಿಂದಾರಂಭಿಸಿ ಅದ್ವೈತವಾದದ ನಿರಾಕರಣ ಮಾಡಿದ್ದಾರೆ. ಸಿದ್ಧಾಂತದ ಮುಖ್ಯಾಂಶಗಳಾದ 'ನಾರಾಯಣಪರತ್ವ', 'ಜೀವೇಶ್ವರ ಭೇದ', 'ಅರ್ಚಿರಾದಿಸ್ವರೂಪ', 'ನಿತ್ಯಕೈಂಕರ್ಯ' ಮೊದಲಾದವನ್ನು ಸ್ಥಾಪಿಸಿದ್ದಾರೆ. ವೇಂಕಟನಾಥರು 'ಅಧಿಕರಣಸಾರಾವಳೀ' 'ತತ್ತ್ವಮುಕ್ತಾಕಲಾಪ' ಮೊದಲಾದ ಕೃತಿಗಳನ್ನು ರಚಿಸಲು ಈ ಕೃತಿ ಸ್ಫೂರ್ತಿಯನ್ನು ಕೊಟ್ಟಿರಬಹುದೆಂದು ತೋರುತ್ತದೆ.

## ಸುದರ್ಶನ ಭಟ್ಟಾರಕರು.

(ಕ್ರಿ.ಶ. ೧೩ನೆಯ ಶತಮಾನ)

ಇವರು ವಾತ್ಸ್ಯವರದಾಚಾರ್ಯರ ಶಿಷ್ಯರು. ಕೂರೇಶರ ಪುತ್ರರಾದ ವೇದವ್ಯಾಸಭಟ್ಟರ ಪೌತ್ರರು. ಇವರಿಗೆ 'ವೇದವ್ಯಾಸ' ಎಂಬ ಮತ್ತೊಂದು ಹೆಸರೂ ಇತ್ತು. ಕ್ರಿ.ಶ. ೧೩ನೆಯ ಶತಮಾನದ ಉತ್ತರಾರ್ಧಕ್ಕೆ ಸೇರಿದವರು ಇವರು. ವಾತ್ಸ್ಯವರದಾಚಾರ್ಯರ ಪ್ರವಚನ ಗಳನ್ನು ಇವರು ಗ್ರಹಿಸಿ ಯಥಾವತ್ತಾಗಿ ಅವುಗಳನ್ನು ಪ್ರಕಾಶ ಗೊಳಿಸಿದರು. ಶ್ರೀ ಭಾಷ್ಯಕ್ಕೆ 'ಶ್ರುತಪ್ರಕಾಶಿಕೆ' ಎಂಬ ಮಹತ್ವಪೂರ್ಣವಾದ ವ್ಯಾಖ್ಯಾನವನ್ನು ಇವರು ರಚಿಸಿದ್ದಾರೆ. ಈ ಶ್ರುತಪ್ರಕಾಶಿಕೆಯ ಹಸ್ತಪ್ರತಿಯನ್ನೂ, ಇವರ ಇಬ್ಬರು ಪುತ್ರರನ್ನೂ ವೇದಾಂತದೇಶಿಕರು ಶ್ರೀರಂಗಕ್ಕೆ ತುರುಷ್ಕರ ಧಾಳಿಯುಂಟಾದಾಗ ಸಂರಕ್ಷಿಸಿದರು. ಇವರು 'ಶ್ರುತಪ್ರಕಾಶಿಕಾ', 'ತಾತ್ಪರ್ಯದೀಪಿಕಾ', ಶ್ರುತದೀಪಿಕಾ', ಶುಕಪಕ್ಷೀಯ' 'ಸುಬಾಲೋಪನಿಷದ್ಭಾಷ್ಯ', 'ಶರಣಾ ಗತಿಗದ್ಯವ್ಯಾಖ್ಯಾನ ' ಮೊದಲಾದ ಕೃತಿಗಳನ್ನು ರಚಿಸಿದ್ದಾರೆ. 'ತಾತ್ಪರ್ಯದೀಪಿಕೆ'

ವೇದಾರ್ಥಸಂಗ್ರಹದ ಮೇಲಿನ ವ್ಯಾಖ್ಯಾನ. 'ಶ್ರುತದೀಪಿಕೆ' ಬ್ರಹ್ಮಸೂತ್ರಗಳ ಮೇಲಿನ ವ್ಯಾಖ್ಯಾನ. 'ಶುಕಪಕ್ಷೀಯಂ' ಭಾಗವತದ ಮೇಲಿನ ವ್ಯಾಖ್ಯಾನವಾಗಿದ್ದು ಬ್ರಹ್ಮಸೂತ್ರಗಳನ್ನು ಭಾಗವತದ ಮೂಲಕ ವಿವರಿಸುವುದಾಗಿದೆ. ಉದ್ದಾಮವಾದ ವ್ಯಾಖ್ಯಾನಗಳನ್ನು ನಿರ್ಮಾಣಮಾಡಿ ರಾಮಾನುಜರ ಕೃತಿರತ್ನಗಳ ಅರ್ಥಗಳನ್ನರಿಯಲು ಇವರು ಬಹಳ ಉಪಕಾರ ಮಾಡಿದ್ದಾರೆ. ಶ್ರುತಪ್ರಕಾಶಿಕಾಚಾರ್ಯ', 'ವ್ಯಾಸಾರ್ಯ' ಎಂದು ಬಹುಮಾನದಿಂದಲೂ ಗೌರವದಿಂದಲೂ ಇವರನ್ನು ಮುಂದಿನವರು ಉಲ್ಲೇಖಿಸಿದ್ದಾರೆ. ಒಂದೊಂದು ಅಧಿಕರಣದ ಕೊನೆಯಲ್ಲಿ ಇವರು ಭಾಷ್ಯಕಾರರ ಅಭಿಪ್ರಾಯಗಳನ್ನು ಇತರರ ಅಭಿಪ್ರಾಯಗಳೊಡನೆ ವಿವೇಚಿಸಿ ಭಾಷ್ಯಕಾರರ ನಿರೂಪಣೆಯ ಮಹತ್ವವನ್ನು ಸ್ಥಾಪಿಸಿದ್ದಾರೆ.

## ಆತ್ರೇಯರಾಮಾನುಜರು

(ಕ್ರಿ.ಶ. ೧೩ನೆಯ ಶತಮಾನ)

ಇವರೂ ಸಹ ವಾತ್ಸ್ಯವರದಾಚಾರ್ಯರ ಶಿಷ್ಯರು. ವೇಂಕಟನಾಥರು ಇವರ ಶಿಷ್ಯರು. ಭಗವದ್ರಾಮಾನುಜರ ಆಪ್ತ ಶಿಷ್ಯರಲ್ಲೊಬ್ಬರಾದವರೂ, ತಮ್ಮದಾದ ಕೌಶಲದ ಕಾರಣ 'ವೇದಾಂತೋದಯನ'ರೆಂದು ಪ್ರಸಿದ್ಧರಾದವರೂ ಆದ ಪ್ರಣತಾರ್ತಿಹರಾಚಾರ್ಯರು (ಕಿಡಾಂಬಿ ಆಚ್ಚಾನ್) ಇವರ ಪ್ರಪಿತಾಮಹರು. ಆತ್ರೇಯರಾಮಾನುಜರ ವಾದಕೌಶಲ ಅನುಪಮವಾಗಿದ್ದ ಕಾರಣ ಇವರಿಗೆ 'ವಾದಿಹಂಸಾಂಬುವಾಹ' ಎಂಬ ಪ್ರಶಸ್ತಿ ಇತ್ತು. ವಿಶಿಷ್ಟಾದ್ವೈತ ಪ್ರವರ್ತನವನ್ನು ಇವರು ವ್ಯಾಪಕವಾಗಿ ಮಾಡಿದರು. ಇವರು ಮೂರು ಕೃತಿಗಳನ್ನು ಬರೆದಿದ್ದರೆಂದು ಗೊತ್ತಾಗುತ್ತದೆ. ಆದರೆ ಈಗ ಉಪಲಬ್ಧವಾಗಿರುವುದು 'ನ್ಯಾಯಕುಲಿಶ' ಎಂಬ ಒಂದೇ ಒಂದು ಕೃತಿ. ಇದು ಜಟಿಲವಾದ ಗದ್ಯಶೈಲಿಯಲ್ಲಿದೆ. ಇದರಲ್ಲಿ ಹದಿಮೂರು ವಾದಗಳಿವೆ. ಇವುಗಳಲ್ಲಿ 'ಸಿದ್ಧಾರ್ಥವ್ಯುತ್ಪತ್ತಿಸಮರ್ಥನವಾದ', 'ಸ್ವತಃ ಪ್ರಾಮಾಣ್ಯ ನಿರ್ಣಯವಾದ,' 'ಸ್ವಯಂಪ್ರಕಾಶವಾದ,' 'ಈಶ್ವರಾನುಮಾನಭಂಗವಾದ,' 'ಸತ್ಕಾರ್ಯವಾದ' ಮೊದಲಾದವು ವೇದಾಂತ ದರ್ಶನದ ಎಲ್ಲ ಶಾಖೆಗಳವರಿಗೂ ಸಮಾನ ವಾಗಿಯೇ ಇವೆ. 'ಖ್ಯಾತಿ ನಿರೂಪಣವಾದ,' 'ಸಾಮಾನಾಧಿಕರಣ್ಯ ಲಕ್ಷಣವಾದ' ಮೊದಲಾದುವು ಅದ್ವೈತ ಸಿದ್ಧಾಂತವನ್ನೂ ಭೇದಾಭೇದ ಸಿದ್ಧಾಂತವನ್ನೂ ಪರೀಕ್ಷಿಸಿ ನಿರಾಕರಿಸುವುವು. ಈ ಕೃತಿಗೆ 'ನ್ಯಾಯಕುಲಿಶ'ವೆಂಬ ಹೆಸರು ಅನ್ವರ್ಥವಾಗಿದೆ.

## ಶ್ರೀರಾಮಮಿಶ್ರರು

(ಕ್ರಿ.ಶ. ೧೩ನೆಯ ಶತಮಾನ)

ಇವರಿಗೆ 'ಸೋಮಾಷಿ ಆಂಡಾನ್' ಎಂಬ ಹೆಸರೂ ಇತ್ತು. 'ಶ್ರೀ ಭಾಷ್ಯ ವಿವರಣ' ಮತ್ತು 'ವೇದಾರ್ಥ ಸಂಗ್ರಹ ವಿವರಣ' ಎಂಬ ಎರಡು ಕೃತಿಗಳನ್ನು ಇವರು ಬರೆದಿದ್ದರೆಂದು

ಗೊತ್ತಾಗುತ್ತದೆ. 'ಷಡರ್ಥ ಸಂಕ್ಷೇಪ'ವೆಂಬ ಕೃತಿಯನ್ನೂ ಇವರು ಬರೆದಿದ್ದರೆಂದ ಹೇಳಲಾಗಿದೆ. ವೇಂಕಟನಾಥರು ತಮ್ಮ 'ನ್ಯಾಯಸಿದ್ಧಾಂಜನ'ದಲ್ಲಿ 'ತತ್ರೈವಮುಕ್ತಂ ಜನ್ಮಾದ್ಯಧಿಕರಣೇ ವಿವರಣಕಾರೈಃ' ಎಂದೂ, 'ಅಯಮೇವಾರ್ಥೋ ವೇದಾರ್ಥ ಸಂಗ್ರಹ ವಿವರಣೇಪ್ಯುಕ್ತಃ' ಎಂದೂ ಇವರ ಕೃತಿಗಳನ್ನು ಉಲ್ಲೇಖಿಸಿದ್ದಾರೆ.

## ಮೇಘನಾದಾರಿಸೂರಿಗಳು

(ಕ್ರಿ. ಶ. ೧೩ನೇ ಶತಮಾನದ ಕೊನೆಯ ಭಾಗ.)

ಇವರು ವೇಂಕಟನಾಥರ ಹಿರಿಯ ಸಮಕಾಲೀನರು. ರಾಮಾನುಜರ ನಂತರದ ಕಾಲದಲ್ಲಿ ಈ ಸಿದ್ಧಾಂತದ ಪ್ರಮೇಯ ಮತ್ತು ಪ್ರಮಾಣಗಳನ್ನು ಖಚಿತವಾಗಿ ಪ್ರತಿಪಾದಿಸಿದವರಲ್ಲಿ ಇವರೂ ಮುಖ್ಯರಾದವರು. ಶ್ರೀಭಾಷ್ಯದ ಮೇಲಿನ ವ್ಯಾಖ್ಯಾನವಾದ 'ನಯಪ್ರಕಾಶಿಕಾ' 'ಶ್ರೀಭಾಷ್ಯ ಭಾವಪ್ರಬೋಧ' ಎಂಬ ಗ್ರಂಥಗಳಲ್ಲಿ ಶ್ರೀಭಾಷ್ಯದ ಅರ್ಥ ವಿಶೇಷಗಳನ್ನು ನಿರೂಪಿಸಿದ್ದಾರೆ. 'ನಯದ್ಯುಮಣಿ' ಎಂಬುದು ಈ ಸಿದ್ಧಾಂತದ ಪ್ರಮಾಣ ಪ್ರಮೇಯಗಳನ್ನು ನಿಷ್ಕೃಷ್ಟವಾಗಿ ಪ್ರತಿಪಾದಿಸುವ ಅಮೂಲ್ಯ ಕೃತಿ. 'ಮುಮುಕ್ಷೂಪಾಯ ಸಂಗ್ರಹ'ವೆಂಬುದು ಮೋಕ್ಷೋಪಾಯವನ್ನು ನಿರೂಪಿಸುವ ಚಿಕ್ಕಗ್ರಂಥ. ಇದರಲ್ಲಿ ಇವರು ಪ್ರಪತ್ತಿಯ ವಿಚಾರದಲ್ಲಿ ಹೇಳಿರುವ ವಿಚಾರಗಳು ಗಮನಾರ್ಹವಾಗಿವೆ. ಪ್ರಪತ್ತಿಗೂ ತ್ರೈವರ್ಣಿಕರಿಗೇ ಅಧಿಕಾರವೆಂದೂ ಅದನ್ನು ದಿನವೂ ಮಾಡಬೇಕೆಂದೂ, ಇಲ್ಲಿ ಹೇಳಿರುವುದು ಇತರರ ಅಭಿಪ್ರಾಯಕ್ಕಿಂತ ಬೇರೆಯಾಗಿದೆ.

## ವೇಂಕಟನಾಥರು

(ಕ್ರಿ. ಶ. ೧೨೬೮–೧೩೬೯)

ರಾಮಾನುಜರ ನಂತರ ಬಂದ ವಿಶಿಷ್ಟಾದ್ವೈತಾಚಾರ್ಯರಲ್ಲಿ ವೇಂಕಟನಾಥರು ಬಹಳ ಮುಖ್ಯರಾದವರು. ಇವರಿಗೆ 'ಸರ್ವತಂತ್ರಸ್ವತಂತ್ರ', 'ಕವಿತಾರ್ಕಿಕಸಿಂಹ', 'ವೇದಾಂತದೇಶಿಕ' ಎಂಬ ಪ್ರಶಸ್ತಿಗಳಿದ್ದವು. ಕವಿಶ್ರೇಷ್ಠರೂ, ತಾರ್ಕಿಕಸಿಂಹರೂ, ಅನುಪಮ ಭಕ್ತರೂ ಆಗಿದ್ದ ಇವರ ಜನ್ಮಸ್ಥಳ ಇಂದಿನ ತಮಿಳು ನಾಡಿನಲ್ಲಿರುವ ಕಂಚಿಯ ಹತ್ತಿರದ 'ತೂಪ್ಪಿಲ್' ಎಂಬ ಅಗ್ರಹಾರ. ಇವರ ತಂದೆ ಅನಂತಸೂರಿಗಳು ಆತ್ರೇಯರಾಮಾನುಜರು ಇವರ ಸೋದರಮಾವಂದಿರೂ, ಇವರ ಆಚಾರ್ಯರೂ ಆಗಿದ್ದರು. ಬಾಲ್ಯದಲ್ಲಿಯೇ ವಾತ್ಸ್ಯವರದಾಚಾರ್ಯರ ಅನುಗ್ರಹಕ್ಕೆ ಪಾತ್ರರಾದ ಇವರು 'ವಿಂಶತ್ಯಬ್ದೇ ವಿಶ್ರುತನಾನಾವಿಧವಿದ್ಯಃ' ಎಂದು ಅವರೇ ಹೇಳಿಕೊಂಡಿರುವಂತೆ ಬಹಳ ಚಿಕ್ಕವಯಸ್ಸಿನಲ್ಲಿಯೇ ಅನುಪಮವಾದ ಪಾಂಡಿತ್ಯವನ್ನು ಪಡೆದುಕೊಂಡರು. ಪರಮವೈರಾಗ್ಯಶಾಲಿಗಳಾಗಿದ್ದ ಇವರು ಇತರರ ಮನ್ನಣೆಯನ್ನು ಬಯಸದೆ ಆದರ್ಶಯುತವಾದ ಜೀವನವನ್ನು ನಡೆಸಿದರು. ನಮ್ಮ ನಾಡಿನ ಕೆಲವೇ

ಮಂದಿ 'ಶತಾಧಿಕ ಗ್ರಂಥನಿರ್ಮಾತೃ'ಗಳಲ್ಲಿ ಇವರೂ ಒಬ್ಬರು. ಇವರು ಬಹುಮುಖವಾಗಿ ಈ ಸಿದ್ಧಾಂತದ ಪ್ರವರ್ತನಕ್ಕೆ ಶ್ರಮಿಸಿದರು. ಪೂರ್ವಾಚಾರ್ಯರುಗಳ ಕೃತಿಗಳಿಗೆ ವ್ಯಾಖ್ಯಾನಗಳನ್ನು ಬರೆದು ಅವುಗಳ ಅರ್ಥಗ್ರಹಣಕ್ಕೆ ಸಹಾಯ ಮಾಡಿದರು. ಪ್ರಕರಣಗ್ರಂಥಗಳನ್ನೂ ವಾದಗ್ರಂಥಗಳನ್ನೂ ನಿರ್ಮಾಣ ಮಾಡಿ ಸಿದ್ಧಾಂತದ ಸ್ವರೂಪವನ್ನು ಖಚಿತವಾಗಿ ನಿರೂಪಿಸಿದರು. ಉತ್ತಮಕೋಟಿಯ ಕಾವ್ಯ ನಾಟಕಗಳನ್ನು ರಚಿಸಿ ಅನುಪಮವಾದ ಯಶಸ್ಸಿಗೆ ಪಾತ್ರರಾದರು. ಅನೇಕ ಸ್ತೋತ್ರಗಳನ್ನೂ ರಚಿಸಿದರು.

ತತ್ತ್ವಟೀಕೆ, ತಾತ್ಪರ್ಯಚಂದ್ರಿಕೆ. ಗೀತಾರ್ಥಸಂಗ್ರಹರಕ್ಷೆ, ಸ್ತೋತ್ರರತ್ನಭಾಷ್ಯ, ಈಶೋಪನಿಷದ್ಭಾಷ್ಯ. ಸರ್ವಾರ್ಥಸಿದ್ಧಿ ಮೊದಲಾದವು ಇವರು ರಚಿಸಿದ ವಿಖ್ಯಾತವ್ಯಾಖ್ಯಾನಗಳು. ನ್ಯಾಯಸಿದ್ಧಾಂಜನ, ನ್ಯಾಯಪರಿಶುದ್ಧಿ, ತತ್ತ್ವಮುಕ್ತಾಕಲಾಪ, ನಿಕ್ಷೇಪರಕ್ಷಾ, ಇವು ಪ್ರಕರಣ ಗ್ರಂಥಗಳು. 'ಶತದೂಷಿಣೀ' ವಿಖ್ಯಾತವಾದ ವಾದಗ್ರಂಥ. ತಮಿಳಿನಲ್ಲಿ ಬರೆದ 'ರಹಸ್ಯತ್ರಯಸಾರ' ತತ್ತ್ವಗ್ರಂಥ, ಗೋಪಾಲವಿಂಶತಿ, ದಯಾಶತಕ ಮೊದಲಾದವು ಸ್ತೋತ್ರಗಳು. ಯಾದವಾಭ್ಯುದಯ, ಹಂಸಸಂದೇಶ, ಸಂಕಲ್ಪಸೂರ್ಯೋದಯ, ಪಾದುಕಾಸಹಸ್ರ ಮೊದಲಾದವು ಕಾವ್ಯನಾಟಕಗಳು. ತಮಿಳಿನಲ್ಲಿ ಬರೆದ ಗಾಥಾ ಸಂಗ್ರಹ 'ದೇಶಿಕ ಪ್ರಬಂಧ'.

## ತತ್ತ್ವಟೀಕೆ

ಶ್ರೀ ಭಾಷ್ಯದ ಮೇಲೆ ಇವರು ಬರೆದಿರುವ ವ್ಯಾಖ್ಯಾನ ಇದು. ದುರದೃಷ್ಟವಶಾತ್ ಇದು ಸಮಗ್ರವಾಗಿ ದೊರಕಿಲ್ಲ. ಜಿಜ್ಞಾಸಾಧಿಕರಣದ ಮಹಾಸಿದ್ಧಾಂತದಲ್ಲಿ 'ಏಕವಿಜ್ಞಾನದಿಂದ ಸರ್ವವಿಜ್ಞಾನ' ವೆಂಬ ವಾಕ್ಯದ ಅರ್ಥನಿರೂಪಣೆಯ ಪ್ರಕರಣದವರೆಗೆ ಮಾತ್ರ ಇದ ಉಪಲಬ್ಧವಾಗಿದೆ. ಉಳಿದ ಭಾಗ ಕಳೆದು ಹೋಗಿದೆ. ಈ ವ್ಯಾಖ್ಯಾನ ಮಾಡುವಾಗ ವಿಚಾರ ಮಾಡಿದ ಅಂಶಗಳನ್ನೆಲ್ಲಾ ಮಧ್ಯೇ ಮಧ್ಯೇ ಸ್ವಂತ ಕಾರಿಕೆಗಳಲ್ಲಿ ಸಂಗ್ರಹಿಸಿದ್ದಾರೆ. ಇಂಥ ೫೪೧ ಕಾರಿಕೆಗಳು ಈ ವ್ಯಾಖ್ಯಾನದಲ್ಲಿ ಈಗ ದೊರಕಿವೆ.

'ತಾತ್ಪರ್ಯಚಂದ್ರಿಕೆ'ಯು ರಾಮಾನುಜರ ಗೀತಾಭಾಷ್ಯದ ಮೇಲಿನ ವ್ಯಾಖ್ಯಾನ ಭಾಷ್ಯದ ಸ್ವಾರಸ್ಯವನ್ನು ಈ ವ್ಯಾಖ್ಯಾನ ಬಹಳ ಪ್ರಭಾವ ಪೂರ್ಣವಾಗಿ ಮನಗಾಣಿಸುತ್ತದೆ. ಯಾಮುನಾಚಾರ್ಯರ ಸ್ತೋತ್ರರತ್ನಕ್ಕೆ ಇವರು ರಚಿಸಿರುವ 'ಸ್ತೋತ್ರರತ್ನಭಾಷ್ಯ' ವಿಶಿಷ್ಟವಾದ ಶೈಲಿಯಲ್ಲಿದ್ದು ಈ ಸಿದ್ಧಾಂತದ ಪ್ರಮೇಯವನ್ನೆಲ್ಲಾ ಖಚಿತವಾಗಿ ಪ್ರತಿಪಾದಿಸುತ್ತದೆ. 'ಕಿರಿಯ ಶ್ರೀಭಾಷ್ಯ' ಎಂಬ ಪ್ರಸಿದ್ಧಿಯನ್ನು ಇದು ಪಡೆದು ಕೊಂಡಿದೆ. ಈಶಾವಾಸ್ಯೋಪನಿಷತ್ತಿಗೆ ಇವರು ರಚಿಸಿರುವ ಭಾಷ್ಯ ಬಹಳ ಉಪಯುಕ್ತವಾಗಿದೆ.

## ತತ್ವಮುಕ್ತಾಕಲಾಪ

ಈ ಸಿದ್ಧಾಂತದ ಪ್ರಮೇಯಾಂಶಗಳನ್ನು ಇತರ ದಾರ್ಶನಿಕರ ಮಾದರಿಯಲ್ಲಿ ವಿಭಾಗ, ಲಕ್ಷಣ, ಪರೀಕ್ಷೆಗಳ ಮೂಲಕ ನಿರೂಪಿಸುವ ಸ್ವತಂತ್ರ ಕೃತಿಗಳನ್ನು ವೇಂಕಟನಾಥರು ರಚಿಸಿದರು. ಇವುಗಳಲ್ಲಿ 'ತತ್ವಮುಕ್ತಾಕಲಾಪ' ಸ್ರಗ್ಧರಾ ವೃತ್ತದ ಶ್ಲೋಕಗಳಲ್ಲಿ ರಚಿತವಾಗಿದೆ. ಈ ಕೃತಿಯಲ್ಲಿ ೫೦೦ ಶ್ಲೋಕಗಳಿವೆ. ಐದು ಸರಗಳಿವೆ. ಜಡದ್ರವ್ಯಸರ, ಜೀವಸರ, ನಾಯಕ ಸರ, ಬುದ್ಧಿಸರ ಮತ್ತು ಅದ್ರವ್ಯಸರ ಎಂಬವು ಅವು ಪ್ರಕೃತಿ ಮತ್ತು ಕಾಲಗಳ ವಿಚಾರವನ್ನು ಮೊದಲನೆಯ ಸರದಲ್ಲಿಯೂ, ಜೀವಾತ್ಮರ ಸ್ವರೂಪ, ಪರಮಾತ್ಮಸ್ವರೂಪ, ಜ್ಞಾನ ಸ್ವರೂಪ ಮತ್ತು ಅದ್ರವ್ಯಗಳ ಸ್ವರೂಪ ಇವುಗಳನ್ನು ಉಳಿದ ನಾಲ್ಕು ಸರಗಳಲ್ಲೂ ಕ್ರಮವಾಗಿ ಪ್ರತಿಪಾದಿಸಿದ್ದಾರೆ. ಪ್ರಕೃತಿಯ, ವಿಕಾರ ವಿಭಾಗಗಳು, ತನ್ಮಾತ್ರಗಳು, ಇಂದ್ರಿಯಗಳು ಮತ್ತು ಪಂಚಮಹಾಭೂತಗಳ ಸೃಷ್ಟಿಯ ಪ್ರಕಾರ. ಪ್ರಕೃತಿಯು ಈಶ್ವರನಿಗೇ ಅಧೀನವಾಗಿರುವ ವಿಚಾರ ಇವುಗಳನ್ನೆಲ್ಲಾ ಪ್ರತಿಪಾದಿಸಿ ಇತರರು ಹೇಳುವ ಪರಮಾಣುಕಾರಣವಾದ, ಕ್ಷಣಿಕವಾದ, ಏಕೇಂದ್ರಿಯವಾದ ಮೊದಲಾದವನ್ನು ನಿರಾಕರಿಸಿದ್ದಾರೆ. ಜೀವಾತ್ಮರ ಸ್ವರೂಪ ಶೋಧನೆಯನ್ನು ಸಮಗ್ರವಾಗಿ ಎರಡನೆಯ ಸರದಲ್ಲಿ ಮಾಡಿದ್ದಾರೆ. ಬ್ರಹ್ಮವಸ್ತು ವಾಚ್ಯ ಮತ್ತು ವೇದ್ಯವೆಂದೂ, ಅದು ಗುಣಪರಿಪೂರ್ಣವೆಂದೂ, ದೋಷದೂರವೆಂದೂ, ಅದು ನಾರಾಯಣ ಶಬ್ದವಾಚ್ಯವಾದುದೆಂದೂ ಹೇಳಿ ಈಶ್ವರನ ಸ್ವರೂಪ. ರೂಪ, ಗುಣ, ವಿಭೂತಿಗಳ ನಿರೂಪಣೆ ಮಾಡಿದ್ದಾರೆ ಮೂರನೆಯ ಸರದಲ್ಲಿ, ಬುದ್ಧಿ ಸರದಲ್ಲಿ ಧರ್ಮಭೂತ ಜ್ಞಾನಕ್ಕೆ ಪ್ರಾಮಾಣ್ಯಾಪ್ರಾಮಾಣ್ಯ ವ್ಯವಸ್ಥೆಯುಂಟೆಂದೂ, ಸಿದ್ಧಾಂತದಲ್ಲಿ, 'ಅಖ್ಯಾತಿಸಂವಲಿತ ಯಥಾರ್ಥಖ್ಯಾತಿ' ಎಂದೂ ನಿರೂಪಿಸಿ 'ಖ್ಯಾತ್ಯಂತರ' ಗಳ ನಿರಾಕರಣೆ ಮಾಡಿದ್ದಾರೆ. ವಿಶಿಷ್ಟಾದ್ವೈತ ಸಿದ್ಧಾಂತದಲ್ಲಿ ತಿಳಿಯ ಬೇಕಾದ ಪ್ರಧಾನಾಂಶಗಳನ್ನೆಲ್ಲಾ ಈ ೫೦೦ ಶ್ಲೋಕಗಳಲ್ಲಿ ಬಹಳ ಸಂಗ್ರಹವಾಗಿ ಆದರೆ ಪ್ರಭಾವಪೂರ್ಣವಾಗಿ ಪ್ರತಿಪಾದಿಸಿದ್ದಾರೆ. ರಾಮಾನುಜರ ಕಾಲದಿಂದ ವೇಂಕಟನಾಥರ ಕಾಲದವರೆಗೆ ಬೆಳೆದಿದ್ದ ವಿಚಾರ ಸರಣಿಯ ಪರಿಚಯ ಇಲ್ಲಿ ನಮಗಾಗುತ್ತದೆ. ಜಟಿಲವಾದ ಮತ್ತು ಅರ್ಥಗರ್ಭಿತವಾದ ಈ ಕೃತಿಗೆ ವೇಂಕಟನಾಥರೇ 'ಸರ್ವಾರ್ಥಸಿದ್ಧಿ' ಎಂಬ ವ್ಯಾಖ್ಯಾನವನ್ನು ರಚಿಸಿದ್ದಾರೆ.

## ನ್ಯಾಯಸಿದ್ಧಾಂಜನ

ಇದು ಒಂದು ಪ್ರಕರಣ ಗ್ರಂಥ. ತತ್ತ್ವಮುಕ್ತಾಕಲಾಪದಲ್ಲಿ ಪದ್ಯರೂಪದಲ್ಲಿ ಪ್ರತಿಪಾದಿಸಿರುವುದನ್ನೇ ಇಲ್ಲಿ ಗದ್ಯರೂಪದಲ್ಲಿ ನಿರೂಪಿಸಿದ್ದಾರೆ. ಇದು ಪ್ರಮೇಯ ನಿರೂಪಣೆಗೆ ಮೀಸಲಾದ ಕೃತಿ. ಇದರಲ್ಲಿ ಜಡದ್ರವ್ಯ, ಜೀವ, ಈಶ್ವರ, ನಿತ್ಯವಿಭೂತಿ. ಬುದ್ಧಿ ಮತ್ತು ಅದ್ರವ್ಯ ಎಂಬ ಆರು ಪರಿಚ್ಛೇದಗಳಿವೆ. ಕೊನೆಯ ಪರಿಚ್ಛೇದ ಪೂರ್ಣವಾಗಿ ಉಪಲಬ್ಧವಾಗಿಲ್ಲ. ಈಶ್ವರ ಪರಿಚ್ಛೇದದಲ್ಲಿ ಶ್ರೀದೇವಿಯ ಸ್ವರೂಪ ನಿರೂಪಣೆ ಇದೆ.

## ನ್ಯಾಯಪರಿಶುದ್ಧಿ

ಇದು ಪ್ರಮಾಣ ನಿರೂಪಣೆಗೆ ಮೀಸಲಾದ ಕೃತಿ. ಪ್ರತ್ಯಕ್ಷಾಧ್ಯಾಯ, ಅನುಮಾನಾಧ್ಯಾಯ, ಶಬ್ದಾಧ್ಯಾಯ ಎಂಬ ಮೂರು ಅಧ್ಯಾಯಗಳಲ್ಲಿ ಪ್ರಮಾಣ ನಿರೂಪಣೆ ಮಾಡಿ, ಕೊನೆಯ ಪ್ರಮೇಯಾಧ್ಯಾಯದಲ್ಲಿ ಅತಿ ಸಂಗ್ರಹವಾಗಿ ಪ್ರಮೇಯದ ನಿರೂಪಣೆ ಮಾಡಿದ್ದಾರೆ. ರಾಮಾನುಜರ ನಂತರ ಈ ಸಿದ್ಧಾಂತದ ವಿವೇಚನೆ ನಡೆಸಿದ ಅನೇಕ ಕೃತಿಗಳ ಮತ್ತು ಕೃತಿಕಾರರ ಉಲ್ಲೇಖ ಈ ಕೃತಿಯಲ್ಲಿದೆ. ಪ್ರತಿಯೊಂದು ಪ್ರಮಾಣದ ಬಗೆಗೆ ನಿಷ್ಕೃಷ್ಟವಾದ ನಿರೂಪಣೆ ಇದ್ದು ಯಾವ ಸಂಶಯಕ್ಕೂ ಅವಕಾಶವಿಲ್ಲದಿರುವುದು ಈ ಕೃತಿಯ ವೈಶಿಷ್ಟ್ಯ.

## ನಿಕ್ಷೇಪರಕ್ಷೆ

ಶರಣಾಗತಿ ಸಿದ್ಧಾಂತದ ಸಮರ್ಥನೆಗೆ ಈ ಕೃತಿ ರಚಿತವಾಗಿದೆ. ಶರಣಾಗತಿ ಅಥವಾ ಪ್ರಪತ್ತಿಯ ಮೇಲೆ ಹತ್ತು ಆಕ್ಷೇಪಗಳನ್ನು ಪೂರ್ವಪಕ್ಷದಲ್ಲಿ ಎತ್ತಿ ಅವುಗಳಿಗೆಲ್ಲಾ ಸಮರ್ಪಕವಾದ ಉತ್ತರಗಳನ್ನು ಕೊಟ್ಟಿದ್ದಾರೆ. 'ಪ್ರಪತ್ತಿ' ಅಥವಾ 'ಶರಣಾಗತಿ'ಯ ಮೋಕ್ಷೋಪಾಯತ್ವವನ್ನು ಇದು ಸ್ಥಾಪಿಸುತ್ತದೆ.

## ಪಾಂಚರಾತ್ರರಕ್ಷೆ

ಮೂರು 'ಅಧಿಕಾರ' ಅಥವಾ ಅಧ್ಯಾಯಗಳನ್ನುಳ್ಳ ಈ ಕೃತಿ ಪಾಂಚರಾತ್ರಾಗಮದ' ಪ್ರಾಮಾಣ್ಯವನ್ನು ಸ್ಥಾಪಿಸುತ್ತದೆ.

## ಶತದೂಷಣೀ

ವೇಂಕಟನಾಥರು ರಚಿಸಿದ ವಿಖ್ಯಾತವಾದ 'ವಾದಗ್ರಂಥ' ಇದು. ಅದ್ವೈತ ಸಿದ್ಧಾಂತದ ಮೇಲೆ ಪ್ರಬಲವಾದ ಆಕ್ಷೇಪಣೆಗಳನ್ನು ಈ ಕೃತಿ ಮಾಡುತ್ತದೆ. ಇದರಲ್ಲಿ ನೂರು ವಾದಗಳಿದ್ದವೋ ಇಲ್ಲವೋ ತಿಳಿಯದು. ಈಗ ಉಪಲಬ್ಧವಾಗಿರುವ ಭಾಗದಲ್ಲಿ ೬೬ ವಾದಗಳಿವೆ. 'ಶತ'ವೆಂಬ ಹೆಸರು ಅನೇಕಾರ್ಥದಲ್ಲಿ ಪ್ರಯುಕ್ತವಾಗಿರಬಹುದು. ವೇಂಕಟನಾಥರ ಅನುಪಮವಾದ ವಾದ ಸಾಮರ್ಥ್ಯವನ್ನೂ ಪಾಂಡಿತ್ಯವನ್ನೂ ಈ ಕೃತಿ ತೋರುತ್ತದೆ. ಇಲ್ಲಿ ಬರುವ ವಾದಗಳಲ್ಲಿ 'ಸಾಧನ ಚತುಷ್ಟಯಪೂರ್ವವೃತ್ತತ್ವಭಂಗವಾದ ', ' ಸಂವಿನ್ನಿರ್ವಿಕಾರತ್ವಾನುಮಾನಭಂಗವಾದ ', 'ಸಂವಿದಾತ್ಮತ್ವಭಂಗವಾದ', 'ಅಹಮರ್ಥಾತ್ಮತ್ವಸಮರ್ಥನವಾದ', 'ಜೀವನ್ಮುಕ್ತಿಭಂಗವಾದ' ಮೊದಲಾದುವು ಕೆಲವು ವಾದಗಳ ಹೆಸರುಗಳು. ರಾಮಾನುಜರು ತಮ್ಮ ಶ್ರೀ ಭಾಷ್ಯದ ಮಹಾ ಸಿದ್ಧಾಂತದಲ್ಲಿ ಮಾಡಿರುವ ವಾದಗಳು ಈ ಕೃತಿಯ ರಚನೆಗೆ ಆಧಾರವಾಗಿವೆ. ಅದ್ವೈತ ಸಿದ್ಧಾಂತದ ವ್ಯಾಪಕವಾದ ಪರೀಕ್ಷಣವನ್ನಿಲ್ಲಿ ಮಾಡಲಾಗಿದೆ.

ವಿಶಿಷ್ಟಾದ್ವೈತ ಸಿದ್ಧಾಂತದ ನಿರೂಪಣೆಯ ಇತಿಹಾಸದಲ್ಲಿ ವೇಂಕಟನಾಥರಿಗೆ ಬಹಳ ಮುಖ್ಯವಾದ ಸ್ಥಾನವಿದೆ. ತಮ್ಮ ಹಿಂದಿನ ಆಚಾರ್ಯರುಗಳು ಪ್ರತಿಪಾದಿಸಿದುದನ್ನೆಲ್ಲಾ ಪರಿಶೀಲಿಸಿ ಅವುಗಳನ್ನೇ ಸ್ಪಷ್ಟವಾಗಿ ವಿವರಿಸಿದರು ಇವರು. ಅಲ್ಲದೆ ಅವರು ಸೂಚಿಸಿ ಬಿಟ್ಟಿದ್ದ ಹಲವಾರು ಅಂಶಗಳನ್ನು ಇವರು ನಿಖರವಾಗಿ ನಿರೂಪಿಸಿದರು. ವೇಂಕಟನಾಥರಿಗಿಂತ ಹಿಂದೆ ಇದ್ದ ಅನೇಕರ ಕೃತಿಗಳ ಉಲ್ಲೇಖಗಳು ಇವರ ಕೃತಿಯಲ್ಲಿ ಹೇರಳವಾಗಿ ದೊರೆಯುತ್ತವೆ. ಈ ಸಿದ್ಧಾಂತದ ವಿಸ್ತಾರ ಮತ್ತು ಗಾಢತೆಯ ಪರಿಚಯ ಇವರ ಕೃತಿಗಳಿಂದ ಆಗುತ್ತದೆ.

## ಮಹಾಚಾರ್ಯ

## (ಕ್ರಿ.ಶ. ೧೬ನೆಯ ಶತಮಾನ)

ಇವರು ಅಪ್ಪಯ್ಯ ದೀಕ್ಷಿತರ ಸಮಕಾಲೀನರಾಗಿದ್ದರು. ವೇದಾಂತದೇಶಿಕರ 'ಶತದೂಷಣಿ'ಗೆ ವಿಖ್ಯಾತವಾದ 'ಚಂಡಮಾರುತ'ವೆಂಬ ವ್ಯಾಖ್ಯಾನವನ್ನು ಇವರು ಬರೆದಿದ್ದಾರೆ. ವೇಂಕಟನಾಥರ ನಂತರ ಬಂದ ಕೃತಿಕಾರರಲ್ಲಿ ಅನೇಕ ಗ್ರಂಥಗಳನ್ನು ರಚಿಸಿದ ಕೆಲವೇ ಮಂದಿಗಳಲ್ಲಿ ಇವರು ಒಬ್ಬರು ಇವರ ಕೃತಿಗಳಲ್ಲಿ 'ಅವಿದ್ಯಾವಿಜಯ' 'ಪರಿಕರವಿಜಯ' 'ಪಾರಾಶರ್ಯವಿಜಯ' 'ಬ್ರಹ್ಮವಿದ್ಯಾವಿಜಯ' ಮತ್ತು 'ಸದ್ವಿದ್ಯಾವಿಜಯ' ಎಂಬ ಐದು ಕೃತಿಗಳಿಗೆ 'ವಿಜಯ ಪಂಚಕ' ಎಂಬ ಹೆಸರು ವಿಖ್ಯಾತವಾಗಿದೆ. ಇವರು 'ಸರ್ವಾರ್ಥಸಿದ್ಧಿ'ಯ ಮೇಲೆ 'ತಾತ್ಪರ್ಯ ಪ್ರಕಾಶಿಕಾ' ಎಂಬ ವ್ಯಾಖ್ಯಾನವನ್ನು ಬರೆದಿದ್ದಾರೆ. 'ಬ್ರಹ್ಮಸೂತ್ರಭಾಷ್ಯೋಪನ್ಯಾಸ', 'ಉಪನಿಷತ್‌ಮಂಗಳದೀಪಿಕಾ' ಮೊದಲಾದುವು ಇವರ ಇತರ ಕೃತಿಗಳಲ್ಲಿ ಕೆಲವು. ಆಳವಾದ ಪಾಂಡಿತ್ಯ ಮತ್ತು ನಿಶಿತವಾದ ವಾದಶೈಲಿ ಇವರ ವೈಶಿಷ್ಟ್ಯ.

## ರಂಗರಾಮಾನುಜಮುನಿಗಳು

## (ಕ್ರಿ.ಶ. ೧೬ನೆಯ ಶತಮಾನದ ಉತ್ತರಾರ್ಧ)

ಈ ಸಿದ್ಧಾಂತಕ್ಕನುಸಾರವಾದ ಉಪನಿಷದ್ಭಾಷ್ಯಗಳಿಲ್ಲವೆಂಬ ಕೊರತೆಯನ್ನು ಹೋಗಲಾಡಿಸಿದವರು ಇವರು. ಮದರಾಸು ನಗರದ ಹತ್ತಿರದ ವೇಲಾಮೂರು ಇವರ ಜನ್ಮಸ್ಥಳ. ಇವರು ಜ್ಞಾನಾಬ್ಧಿಬ್ರಹ್ಮತಂತ್ರಪರಕಾಲ ಸ್ವಾಮಿಗಳಿಂದ ಸಂನ್ಯಾಸ ಸ್ವೀಕಾರ ಮಾಡಿ ಕಾಂಚೀಪುರದಲ್ಲಿ ನೆಲಸಿದರು. ಇವರು ಅರವತ್ತು ಗ್ರಂಥಗಳನ್ನು ರಚಿಸಿದ್ದಾರೆಂದು ಕಂಡು ಬರುತ್ತದೆ. ಕೇನ, ಕಠ, ಪ್ರಶ್ನ, ಮುಂಡಕ ಮಾಂಡೂಕ್ಯ, ತೈತ್ತಿರೀಯ, ಛಾಂದೋಗ್ಯ, ಬೃಹದಾರಣ್ಯಕ, ಮಂತ್ರಿಕಾ, ಅಥರ್ವಶಿಖಾ. ಕೌಷೀತಕಿ, ಶ್ವೇತಾಶ್ವತರ ಮತ್ತು ಅಗ್ನಿರಹಸ್ಯ–ಇವುಗಳಿಗೆ ಇವರು ಭಾಷ್ಯವನ್ನು ಬರೆದಿದ್ದಾರೆ. ಶ್ರೀ ಭಾಷ್ಯದ ಮೇಲೆ 'ಮೂಲಭಾವಪ್ರಕಾಶಿಕಾ' ಎಂಬ ವ್ಯಾಖ್ಯಾನವನ್ನೂ, ಶ್ರುತಪ್ರಕಾಶಿಕೆಯ ಮೇಲೆ 'ಭಾವ ಪ್ರಕಾಶಿಕಾ' ಎಂಬ ವ್ಯಾಖ್ಯಾನವನ್ನೂ

ಬರೆದಿದ್ದಾರೆ' 'ನ್ಯಾಯಸಿದ್ಧಾಂಜನ ವ್ಯಾಖ್ಯಾನ', 'ವಿಷಯವಾಕ್ಯದೀಪಿಕೆ', 'ದ್ರವಿಡ ಪ್ರಬಂಧಗಳ ವ್ಯಾಖ್ಯಾನ' ಇವು ಇವರ ಇತರ ಕೃತಿಗಳಲ್ಲಿ ಕೆಲವು. ಇವರಿಗೆ ಇತರ ದರ್ಶನಗಳ ಪರಿಚಯ ಬಹಳ ಚೆನ್ನಾಗಿತ್ತು. ಉಪನಿಷತ್ತುಗಳಿಗೆ ಭಾಷ್ಯ ರಚಿಸುವಾಗ ಉಪಯುಕ್ತವಾದ ರೀತಿಯಲ್ಲಿ ಉಚಿತ ಸ್ಥಳಗಳಲ್ಲಿ ಶ್ರೀ ಭಾಷ್ಯ ಸೂಕ್ತಿಗಳನ್ನು ಉದಾಹರಿಸಿ ಲಲಿತವಾದ ಶೈಲಿಯಲ್ಲಿ ವಿವರಿಸಿದ್ದಾರೆ. ಯುಕ್ತವಾದುದನ್ನು ಇತರರಿಂದ ಸ್ವೀಕರಿಸಿ, ವಿವರಿಸುವಾಗ ಸಮುಚಿತವಾದ ಅರ್ಥಗಳನ್ನು ನಿರೂಪಿದ್ದಾರೆ. 'ದಶೋಪನಿಷದ್ಭಾಷ್ಯಕಾರ'ರೆಂದು ಇವರು ಪ್ರಸಿದ್ಧರಾಗಿದ್ದಾರೆ.

## ವಾಧೂಲ ಶ್ರೀನಿವಾಸಾಚಾರ್ಯ

(ಕ್ರಿ.ಶ. ೧೭ನೆಯ ಶತಮಾನ)

ಇವರು ಮಹಾಚಾರ್ಯರ ಶಿಷ್ಯರು. ಸ್ವಾಮಿಪುಷ್ಕರಿಣೀಗೋವಿಂದಾಚಾರ್ಯರ ಪುತ್ರರು. ಇವರು 'ಯತೀಂದ್ರ ದೀಪಿಕಾ' ಎಂಬ ವಿಶಿಷ್ಟಾದ್ವೈತ ಸಿದ್ಧಾಂತದ ಕೈಪಿಡಿ ಯನ್ನು ಬರೆದಿದ್ದಾರೆ. ಇವರು ತಮ್ಮ ಕೃತಿಯನ್ನು 'ಶಾರೀರಕಪರಿಭಾಷೆ' ಎಂದು ಹೇಳಿಕೊಂಡಿದ್ದಾರೆ. ಇವರಿಗೆ ಧರ್ಮರಾಜಾಧ್ವರಿಯ 'ವೇದಾಂತಪರಿಭಾಷೆ'ಯ ಪರಿಚಯವಿದ್ದಂತೆ ಕಂಡು ಬರುತ್ತದೆ. ಯತೀಂದ್ರಮತದೀಪಿಕೆಯಲ್ಲಿ ಈ ಸಿದ್ಧಾಂತದ ಪ್ರಮಾಣ ಪ್ರಮೇಯಂಗಳ ಮುಖ್ಯಾಂಶಗಳನ್ನೆಲ್ಲಾ ಸಂಗ್ರಹವಾಗಿ, ನಿರೂಪಿಸಿದ್ದಾರೆ. ಈ ಕೃತಿಯಲ್ಲಿರುವ ಹತ್ತು 'ಅವತಾರ'ಗಳಲ್ಲಿ ಪ್ರತ್ಯಕ್ಷ, ಅನುಮಾನ, ಶಬ್ದ, ಪ್ರಕೃತಿ, ಕಾಲ, ನಿತ್ಯ, ವಿಭೂತಿ, ಧರ್ಮಭೂತಜ್ಞಾನ, ಜೀವ, ಈಶ್ವರ ಮತ್ತು ಅದ್ರವ್ಯ–ಇವುಗಳನ್ನು ಕ್ರಮವಾಗಿ ವಿವೇಚಿಸಿದ್ದಾರೆ. ಗ್ರಂಥಾಂತ್ಯದಲ್ಲಿ ಈ ಸಿದ್ಧಾಂತವನ್ನು ಪ್ರತಿಪಾದಿಸುವ ಪ್ರಮುಖ ಕೃತಿಗಳ ಹೆಸರುಗಳನ್ನು ಹೇಳಿರುವುದು ಗಮನಾರ್ಹವಾಗಿದೆ.

ಕ್ರಿ.ಶ. ಹದಿನೆಂಟನೆಯ ಶತಮಾನದಲ್ಲಿಯೂ ಅನೇಕ ಕೃತಿಗಳು ಈ ಸಿದ್ಧಾಂತದ ವಿವರಣೆಗಾಗಿ ರಚಿಸಲ್ಪಟ್ಟವು. ಇವರಲ್ಲಿ ಸುರಪುರಂ ಅಣ್ಣಯಾಚಾರ್ಯರು 'ಆನಂದತಾರತಮ್ಯಖಂಡನಂ' 'ತತ್ವಗುಣಾದರ್ಶ'. ಮೊದಲಾದ ಕೃತಿಗಳನ್ನು ಬರೆದಿದಾ ರೆ.

## ಸುರಪುರಂವೆಂಕಟಾಚಾರ್ಯ

(ಕ್ರಿ. ಶ. ೧೮ನೆಯ ಶತಮಾನ)

ಇವರು 'ಜಗನ್ಮಿಥ್ಯಾತ್ವಖಂಡನ', 'ಸಿದ್ಧಾಂತ ರತ್ನಾವಳೀ' ಮತ್ತು 'ಸಿದ್ಧಾಂತ ವೈಜಯಂತೀ' ಮೊದಲಾದ ಕೃತಿಗಳನ್ನು ರಚಿಸಿದ್ದಾರೆ. ಸುರಪುರಂ ಶ್ರೀನಿವಾಸಾಚಾರ್ಯ ರೆಂಬುವರು 'ಜಿಜ್ಞಾಸಾದರ್ಪಣ' ಮೊದಲಾದ ಹತ್ತೊಂಬತ್ತು ಕೃತಿಗಳನ್ನು ಬರೆದಿದ್ದಾರೆ.

ಬುಚ್ಚಿ ವೆಂಕಟಾಚಾರ್ಯರ 'ವೇದಾಂತಕಾರಿಕಾವಳೀ' ಗಮನಾರ್ಹವಾದ ಮತ್ತೊಂದು ಕೃತಿ. ನವೀನ ನ್ಯಾಯದ ಶೈಲಿಯನ್ನನುಸರಿಸಿ ಅನೇಕ ಕೃತಿಗಳನ್ನು ಮುಂದಿನವರು ಬರೆದರು. ಇವರಲ್ಲಿ ತಿರುನಾರಾಯಣಪುರದಲ್ಲಿದ್ದ ಅನಂತಾಚಾರ್ಯರು ರಚಿಸಿದ 'ಅನಂತಾಳ್ವಾರ್‌ವಾದಾವಳಿ' ಮುಖ್ಯವಾದುದು.

ಹೀಗೆ ವಿಶಿಷ್ಟಾದ್ವೈತ ದರ್ಶನದ ಪ್ರವರ್ತನ ಆಳ್ವಾರರುಗಳ ಕಾಲದಿಂದ ಇಂದಿನವರೆಗೂ ಅಖಂಡವಾಗಿ ನಡೆದುಕೊಂಡು ಬಂದಿದೆ. ಈ ದರ್ಶನವನ್ನು ಪ್ರತಿಪಾದಿಸುವ ಅನೇಕ ಕೃತಿಗಳು ಆತ್ಯಂತಿಕವಾಗಿ ನಷ್ಟವಾಗಿ ಹೋಗಿವೆ. ಹಾಗೆ ನಷ್ಟವಾಗಿ ಹೋಗಿ ಉಳಿದು ಬಂದಿರುವ ಕೃತಿಗಳೂ ಅಪಾರವಾಗಿವೆ. ಸಂಸ್ಕೃತ ಮತ್ತು ತಮಿಳು ಭಾಷೆಗಳಲ್ಲಿ ಅನೇಕ ಗ್ರಂಥಗಳು ಬಂದಿವೆ. ಇವುಗಳಲ್ಲಿ ಬಹಳ ಮುಖ್ಯವಾದ ಸಂಸ್ಕೃತ ಗ್ರಂಥಗಳ ಸೂಕ್ಷ್ಮಪರಿಚಯವನ್ನು ಇಲ್ಲಿ ಮಾಡಿಕೊಟ್ಟಿದೆ.

* * * *

# ೧೦

# ಶಕ್ತಿವಿಶಿಷ್ಟಾದ್ವೈತದರ್ಶನ

ಶಕ್ತಿ ವಿಶಿಷ್ಟಾದ್ವೈತವು ಶೈವದರ್ಶನಗಳ ವಿಕಾಸಕ್ರಮದಲ್ಲಿ ಅತ್ಯಂತ ಮಹತ್ವಸ್ಥಾನ ಪಡೆದಿದೆ. ವೇದ, ಆಗಮ, ಉಪನಿಷತ್ ಪರಂಪರೆಯಿಂದ ಮೂಡಿಬಂದ ಭಾರತದ ಸಾಂಸ್ಕೃತಿಕ ಇತಿಹಾಸದಲ್ಲಿ ಶೈವಧರ್ಮಕ್ಕೆ ಗಮನಾರ್ಹವಾದ ಸ್ಥಾನವಿದೆ. ಈ ಶೈವ ದರ್ಶನಗಳಿಗೆ ವೇದ ಸಮ್ಮತವೆನಿಸಿರುವ ಕಾಮಿಕಾದಿವಾತುಲಾಂತವಾದ ಇಪ್ಪತ್ತೆಂಟು ಶಿವಾಗಮಗಳು ಮೂಲ.

ಶೈವಸಂಸ್ಕೃತಿ ಪ್ರಾಗೈತಿಹಾಸಿಕ ಎಂದು ಕೆಲವರು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ. ಅದು ಸುಮಾರು ಐದು ಸಾವಿರ ವರ್ಷಗಳಿಗೂ ಹಿಂದಿನದೆಂದು ಹೇಳಲಾಗಿರುವ ಹರಪ್ಪ ಮೊಹೆಂಜೋದಾರೋ ಕಣಿವೆಗಳ ಸಂಶೋಧನೆಗಳಿಂದ ತಿಳಿದು ಬರುತ್ತದೆ.

ಶೈವದರ್ಶನವು ಶಿವಾಗಮಗಳಲ್ಲಿ ಉಕ್ತವಾದ ಶಿವಾದಿಪೃಥಿವ್ಯಂತವಾದ ಮೂವತ್ತಾರು ತತ್ತ್ವಗಳಿಂದ ಆರಂಭವಾಗುತ್ತದೆ. ಈ ಕಲ್ಪನೆಯು ಶ್ರೀನಂದಿಕೇಶ್ವರ ಶಿವಾಚಾರ್ಯರ[1] (ಕಾಲ ಅನಿರ್ದಿಷ್ಟ) ಮಾಹೇಶ್ವರ ಸೂತ್ರಕಾರಿಕೆಗಳಲ್ಲಿಯೂ ಕಂಡುಬರುತ್ತದೆ. ಅ–ಇ–ಉ(ಣ್)

೧ ನಂದಿಕೇಶ್ವರ ಕಾರಿಕೆಗಳಿಗೆ ಉಪಮನ್ಯುಕೃತ 'ತತ್ತ್ವವಿಮರ್ಶಿನೀ' ಎಂಬ ವ್ಯಾಖ್ಯೆಯಿದೆ. ಅದರಲ್ಲಿ ಶಿವನು ನಂದಿಕೇಶ್ವರ, ವ್ಯಾಘ್ರಪಾದ ಮುಂತಾದವರ ಪ್ರಾರ್ಥನೆಯಂತೆ ಡಮರುನಿನಾದ ವ್ಯಾಜದಿಂದ ಪಾಣಿನಿ ಅಷ್ಟಾಧ್ಯಾಯಿಯ ಪ್ರಾರಂಭದಲ್ಲಿ ಬರುವ ಚತುರ್ದಶ ಸೂತ್ರಾತ್ಮಕತತ್ತ್ವವನ್ನು ಉಪದೇಶಿಸಿದ ನಂದಿಕೇಶ್ವರನು ವ್ಯಾಘ್ರಪಾದಾದಿಗಳ ಬೇಡಿಕೆಯಂತೆ ಆ ಮಾಹೇಶ್ವರ ಸೂತ್ರಗಳಲ್ಲಿರುವ ರಹಸ್ಯಾರ್ಥವನ್ನು ೨೭ ಕಾರಿಕೆಗಳಲ್ಲಿ ಪ್ರಕಾಶಪಡಿಸಿದನು. ಇದರಿಂದ ನಂದಿಕೇಶ್ವರನು ಪಾಣಿನಿಗೆ ಗುರುವೆನಿಸಿದ್ದಾನೆ. (ಡಾ॥ ಕಾಂತಿಚಂದ್ರಪಾಂಡೇಯ ಅವರ 'ಶೈವದರ್ಶನ ಬಿಂದು' (ಪು. ೬೭. ೬೭) ವಾರಣಾಸೇಯ ಸಂಸ್ಕೃತ ವಿಶ್ವವಿದ್ಯಾಲಯ ಪ್ರಕಾಶನ. ಸಂವತ್ ೨೦೨೧.

ಮುಂತಾದ ಮಹಾಹೇಶ್ವರ ಸೂತ್ರಗಳಲ್ಲಿ[1] ಶಿವಾದಿ ಪೃಥಿವ್ಯಂತವಾದ ಮುವತ್ತಾರು ತತ್ತ್ವಗಳು ಅಭಿವ್ಯಂಜಿತವಾಗಿರುವುದು ಕಂಡುಬರುತ್ತದೆ. ನಂದಿಕೇಶ್ವರನ

ಅಕಾರಃ ಬ್ರಹ್ಮರೂಪಃ ಸ್ಯಾನ್ನಿರ್ಗುಣಃ[2] ಸರ್ವವಸ್ತುಷು ।
ಚಿತ್ಕಲಾಮಿಂ ಸಮಾಶ್ರಿತ್ಯ ಜಗದ್ರೂಪ ಉಣೇಶ್ವರಃ ॥ ೩ ॥
ಅಕಾರಃ ಸರ್ವವರ್ಣಾಗ್ರ್ಯಃ ಪ್ರಕಾಶಃ ಪರಮೇಶ್ವರಃ ।
ಆದ್ಯಮಂತ್ಯೇನ ಸಂಯೋಗಾತ್ ಅಹಮಿತ್ಯೇವ ಜಾಯತೇ ॥ ೪ ॥

ಎಂಬ ಉಕ್ತಿಯನ್ನು ಶ್ರೀರೇಣುಕಾಚಾರ್ಯರ

ಅಕಾರಃ ಶಿವ ಆಖ್ಯಾತೋ ಹಂಕಾರಃ ಶಕ್ತಿರುಚ್ಯತೇ ।
ಶಿವಶಕ್ತಿಮಯಂ ಬ್ರಹ್ಮ ಸ್ಥಿತಮೇಕಮಹಂ ಪದೇ ॥

(—ಸಿ.ಶಿ.ಪರಿ. ೨೦)

ಎಂಬ ಮಾತು ಸಮರ್ಥಿಸುತ್ತದೆ.

ಕಾಶ್ಮೀರ ಶೈವದಾರ್ಶನಿಕರಾದ ಸೋಮಾನಂದ, ಅಭಿನವಗುಪ್ತ, ಮೊದಲಾದವರು 'ವೇದಗಳಂತೆ ಆಗಮಗಳುಕೂಡ "ಈಶ್ವರೀಯವಾಣಿ" ಮತ್ತು "ಅನಾದಿ" ಎಂದಿದ್ದಾರೆ. ಆಗಮಗಳ ಉಗಮ ಮತ್ತು ಪರಂಪರೆಯನ್ನು ಸೋಮಾನಂದನು (ಕ್ರಿ. ಶ. ಸಂ. ೯೦೦) ತನ್ನ "ಶಿವದೃಷ್ಟಿ" ಎಂಬ ಗ್ರಂಥಲ್ಲಿ ಸೂಚಿಸಿದ್ದಾನೆ.

ಶೈವಾಗಮಗಳನ್ನು ಆಶ್ರಯಿಸಿರುವ ಲಕುಲೀಶಪಾಶುಪತದರ್ಶನಪ್ರವರ್ತಕ ಲಕುಲೀಶನು (ಕ್ರಿ.ಶ. ೨೦೦) ಮಥುರಾ ಮತ್ತು ಗುಜರಾತ್ ಸೋಮನಾಥ ದೇವಾಲಯಗಳಲ್ಲಿರುವ ಸ್ತಂಭ ಲೇಖನಗಳಲ್ಲಿ ಉಲ್ಲಿಖಿತನಾಗಿದ್ದಾನೆ.

ಅಭಿನವಗುಪ್ತನು ಶ್ರೀಸಿದ್ಧಾಂತ ತಂತ್ರವನ್ನು ಅನುಸರಿಸಿ ಶೈವಾದ್ವೈತ, ಶಿವದ್ವೈತ, ಶೈವದ್ವೈತಾದ್ವೈತ ದರ್ಶನಗಳು ಕ್ರಮವಾಗಿ ತ್ರ್ಯಂಬಕ, ಅಮರ್ದಕ ಮತ್ತು ಶ್ರೀನಾಥ

---

೧. ಮಾಹೇಶ್ವರ ಸೂತ್ರಗಳನ್ನು 'ಸೋಽಯಮಕ್ಷರಸಮಾಮ್ನಾಯೋ ಬ್ರಹ್ಮರಾಶಿಃ, ಎಂದು ಪತಂಜಲಿಯೂ, ಬ್ರಹ್ಮತತ್ತ್ವಮೇವಶಬ್ದರೂಪತಯಾ ಪ್ರತಿಭಾತಿ' ಎಂದು ಕೈಯಟನೂ, ಹೇಳಿರುವುದಲ್ಲದೆ ನಾಗೋಜಿಭಟ್ಟನು 'ಅಕಾರಃ ಸರ್ವವರ್ಣಾಗ್ರ್ಯಃ ಪ್ರಕಾಶಃ ಪರಮೇಶ್ವರಃ' ಎಂದು ನಂದಿಕೇಶ್ವರ ಕಾರಿಕೆಯನ್ನು ಉದ್ಧರಿಸಿದ್ದಾನೆ.

೨. ಇಲ್ಲಿ 'ನಿರ್ಗುಣ' ಎಂದರೆ ಹೇಯಗುಣ ರಹಿತ ಎಂದು ಅರ್ಥ.

ಎಂಬುವರಿಂದ ಕಲಿಯುಗದಲ್ಲಿ ಏಕಕಾಲದಲ್ಲಿ ಪ್ರಕಾಶಿತವಾದವು ಎಂದಿದ್ದಾನೆ[1]. ಸೂತಸಂಹಿ ಯಲ್ಲಿ ಉಕ್ತವಾಗಿರುವ 'ಭೇದಾಭೇದಸ್ತಥಾ, ಭೇದೋ ಭೇದ ಏತೇ ಮತಾಸ್ತ್ರಯಃ' ಎಂಬು ಇದನ್ನು ಸಮರ್ಥಿಸುತ್ತದೆ.

ಶೈವದ್ವೈತ ದರ್ಶನವು 'ಪಾಶುಪತದರ್ಶನ' ಮತ್ತು ''ಸಿದ್ಧಾಂತಶೈವದರ್ಶನ'' ಎಂ ಎರಡು ಬಗೆ. ಇವುಗಳಲ್ಲಿ ಮೊದಲನೆಯದು ಬಾದರಾಯಣರ ''ಪತ್ಯಧೀಕರಣ'' ದ ನಿರಾಕೃತವಾಗಿದೆ. ಕಾಮಿಕಾದಿವಾತುಲಾಂತವಾದ ಇಪ್ಪತ್ತೆಂಟು ಶಿವಾಗಮಗಳಿಗೆ 'ಸಿದ್ಧಾಂ ಎಂಬ ಹೆಸರಿದೆ[2]. ಸಿದ್ಧಾಂತ ಶೈವವು ಭೋಜ ದೇವನ 'ತತ್ತ್ವಪ್ರಕಾಶಿಕೆ' ಮುಂತಾದ ಗ್ರಂ ಗಳಲ್ಲಿ ಪ್ರತಿಪಾದಿತವಾಗಿದೆ.

ಶೈವಾದ್ವೈತವನ್ನು ಸಮರ್ಥಿಸುವ ಕಾಶ್ಮೀರ ಶೈವ ದರ್ಶನವನ್ನು 'ಪ್ರತ್ಯಭಿಜ್ಞಾದರ್ಶ ಎಂದು ಕರೆಯಲಾಗಿದೆ. ಲಕುಲೀಶ–ಪಾಶುಪತ ದರ್ಶನವು ''ಶೈವದ್ವೈತಾದ್ವೈತ''ವೆನಿಸಿ ಇದು ಮೇಲೆ ಹೇಳಿದ ಶೈವಗಳಿಗಿಂತ ಕೆಲವು ಅಂಶಗಳಲ್ಲಿ ಭಿನ್ನವಾಗಿದೆ. ಲಕುಲೀಶಪಾ ಪತದ ಪ್ರಭಾವವು ಶ್ರೀಕಂಠಶಿವಾಚಾರ್ಯರ ವಿಶಿಷ್ಟಾದ್ವೈತದ ಮೇಲೆ ಬಿದ್ದಿರುವುದಲ್ಲ ಶ್ರೀಕಂಠ ಮತ್ತು ಶ್ರೀ ರಾಮಾನುಜರ ವಿಶಿಷ್ಟಾದ್ವೈತಗಳು ತಾತ್ವಿಕ ವಿಚಾರಗಳಲ್ಲಿ ನಿಕ ಸಂಬಂಧವನ್ನು ಹೊಂದಿವೆ.

''ವಿಶೇಷಾದ್ವೈತ''ವೆಂದು ಪ್ರಖ್ಯಾತವಾಗಿರುವ ಶ್ರೀಪತಿ ಪಂಡಿತಾರಾಧ್ಯರ ವೀರಶೈ ದರ್ಶನವು ಈ ಶ್ರೇಣಿಯಲ್ಲಿ ಪ್ರಮುಖವಾದುದು. ಈ ದರ್ಶನದ ಮೇಲೆ ಲಕುಲೀಶಪಾಶುಪ ಶ್ರೀಕಂಠ ಮತ್ತು ಶ್ರೀರಾಮಾನುಜ ದರ್ಶನಗಳ ಪ್ರಭಾವವು ಹೆಚ್ಚಾಗಿ ಬಿದ್ದಿದೆಯಾದರ ಇದು ಅನೇಕ ವಿಷಯಗಳಲ್ಲಿ ತನ್ನದೇ ಆದ ಕೆಲವು ವೈಶಿಷ್ಟ್ಯಗಳನ್ನು ಹೊಂ '' ಶಕ್ತಿವಿಶಿಷ್ಟಾದ್ವೈತದರ್ಶನ '' ವೆಂದು ಪ್ರಖ್ಯಾತವಾಗಿದೆ. ಶ್ರೀಕರಭಾಷ್ಯದ ಪ್ರಾರಂಭದ ಹೇಳಿರುವ—

---

೧. ತೇಷಾಂ ಕ್ರಮೇಣ ತನ್ಮಧ್ಯೇ ಭ್ರಷ್ಟಂ ಕಾಲಾಂತರಾದ್ಯದಾ ।
ತದಾ ಶ್ರೀಕಂಠನಾಥಾಜ್ಞಾವಶಾತ್ ಸಿದ್ಧಾ ಅವಾತರನ್ ॥
ತ್ರ್ಯಂಬಕಾಮರ್ದಕಾಭಿಖ್ಯ ಶ್ರೀನಾಥಾ ಅದ್ವಯೇ ದ್ವಯೇ ।
ದ್ವಯಾ ದ್ವಯೇ ಚ ನಿಪುಣಾಃ ಕ್ರಮೇಣ ಶಿವಶಾಸನೇ ॥
(ತಂತ್ರಾಲೋಕ ೩೬, ಆಹ್ನಿ

೨. ಸಿದ್ಧಾಂತಾಖ್ಯೇ ಮಹಾತಂತ್ರೇ ಕಾಮಿಕಾದ್ಯೇ ಶಿವೋದಿತೇ (ಸಿ. ಶಿ. ಪರಿ. ೫)

ಶ್ರುತ್ಯೈಕದೇಶ ಪ್ರಾಮಾಣ್ಯಂ ದ್ವೈತಾ[1]ದ್ವೈತಮತಾದಿಷು ।
ದ್ವೈತಾದ್ವೈತಮತೇ ಶುದ್ಧೇ ವಿಶೇಷಾದ್ವೈತ ಸಂಜ್ಞಕೇ ।
ವೀರಶೈವೈಕ ಸಿದ್ಧಾಂತೇ ಸರ್ವಶ್ರುತಿಸಮನ್ವಯಃ ॥

ಎಂಬ ಉಕ್ತಿಯು ಈ ದರ್ಶನದ ವೈಶಿಷ್ಟ್ಯವನ್ನು ಸೂಚಿಸುತ್ತದೆ. ಮುಂದೆ ಈ ಸಿದ್ಧಾಂತವು ಶಿವಶರಣರಕಾಲದಲ್ಲಿ ಬಸವೇಶ್ವರ, ಚನ್ನಬಸವೇಶ್ವರ, ಅಲ್ಲಮಪ್ರಭು, ಸಿದ್ಧರಾಮ ಮತ್ತು ಅನಂತರ ಬಂದ ತೋಂಟದಸಿದ್ಧಲಿಂಗೇಶ್ವರ ಮುಂತಾದ ಅನುಭಾವಿಗಳಿಂದ ಸಾಕಷ್ಟು ಪರಿಷ್ಕೃತವಾಗಿ ಜನಜನಿತವಾಗಿರುವುದು ವಚನಶಾಸ್ತ್ರದಲ್ಲಿ ಕಂಡುಬರುತ್ತದೆ.

## ತತ್ತ್ವಸರೂಪ

ಶಕ್ತಿವಿಶಿಷ್ಟಾದ್ವೈತ ದರ್ಶನವು ಪತಿ-ಪಶು-ಪಾಶ ಎಂಬ ಪದಾರ್ಥತ್ರಯವನ್ನು ಅವಲಂಬಿಸಿದೆ. ಈ ಸಿದ್ಧಾಂತದಲ್ಲಿ ಪತಿ (ಬ್ರಹ್ಮ)ಯು, ಕೇವಲ ನಿರ್ಗುಣವಲ್ಲ. ಅದು ಚಿದಚಿತ್ ಶಕ್ತಿವಿಶಿಷ್ಟ ; ಆದ್ದರಿಂದಲೇ ಅದನ್ನು ಸಕಲ, ಸಕಲನಿಷ್ಕಲ ಮತ್ತು ನಿಷ್ಕಲ ಎಂದು ಕರೆಯಲಾಗಿದೆ. ಇಲ್ಲಿ ಉಕ್ತವಾಗಿರುವ 'ಶಬಲಬ್ರಹ್ಮ'ವನ್ನು 'ಪುರುಷಂ ಕೃಷ್ಣ ಪಿಂಗಲಂ' ಮುಂತಾದ ಶ್ರುತಿಗಳು ಸಮರ್ಥಿಸಿವೆ. ಪಶು (ಜೀವ)ವು ಶಿವನ ಅಂಶ ಮತ್ತು ಶಕ್ತಿವಿಶಿಷ್ಟ. ಪಾಶವೇ ಜಗತ್ತು. ಅದು ಶಿವಾದಿ ಪೃಥಿವ್ಯಂತವಾದ ಮೂವತ್ತಾರು ತತ್ತ್ವಾತ್ಮಕವಾದದ್ದು ಮತ್ತು ಸತ್ಯ. ಶಿವಾಂಶರೂಪ ಜೀವನು ಷಟ್‌ಸ್ಥಲ ಮಾರ್ಗದಿಂದ ಪರಶಿವ ಬ್ರಹ್ಮಸಾಮರಸ್ಯವನ್ನು ಹೊಂದುವನೆಂಬುದು ಶಕ್ತಿವಿಷ್ಟಾದ್ವೈತ ದರ್ಶನದ ಹೃದಯ. ಇದರ ಸ್ಥೂಲ ಸ್ವರೂಪವನ್ನು ಶ್ರೀಪತಿ ಪಂಡಿತರು ತಮ್ಮ ಭಾಷ್ಯದ 'ಅಥ' ಶಬ್ದ ನಿರ್ವಚನ ಸಮಯದಲ್ಲಿ ಹೀಗೆ ಹೇಳಿದ್ದಾರೆ.

"ನಿಗಮಾಗಮೋಭಯವೇದಾಂತಪ್ರತಿಪಾದಿತ :— ಭಕ್ತಿ ಕ್ರಿಯಾಜ್ಞಾನಕಾಂಡತ್ರಯ ವಿಹಿತ — ಸ್ಥೂಲಸೂಕ್ಷ್ಮಚಿದಚಿತ್‌ಪ್ರಪಂಚಪ್ರಕಾಶಕ — ಷಟ್‌ಸ್ಥಲಪರಶಿವಸಾಕ್ಷಾತ್ಕಾರ ಕಾರಣ — ಬಹುಜನ್ಮಕೃತಶಿವಾರ್ಪಿತಯಜನಯಾಜನತಪೋಧ್ಯಾನಾದ್ಯನೇಕಪುಣ್ಯಾಪೂರ್ವ ಫಲಕ — ಶರೀರತ್ರಯಗತ — ಮಲತ್ರಯಧ್ವಂಸಕ — ಕಾರುಣ್ಯ ಕಲ್ಯಾಣ ಕೈವಲ್ಯ ವಿಭೂತಿತ್ರಯ ಯುಕ — ಅಷ್ಟಾವರಣ — ಪಂಚಾಚಾರ ಸದ್ಗುರು ಕರುಣಾಕಟಾಕ್ಷಲಬ್ಧ — ಶಕ್ತಿಪಾತಾದ್ಯವ ಚ್ಛಿನ್ನಪರಶಿವೇಷ್ಟಲಿಂಗಧಾರಣಾತ್ಮಕ — ಪಾಶುಪತದೀಕ್ಷಾನಂತರ್ಯಮಿತ್ಯಥ ಶಬ್ದಾರ್ಥೋ ನಿರ್ಣೀಯತೇ"

(— ಶ್ರೀಕರ ಭಾಷ್ಯಂ ಅ. ೧, ಅ. ೧, ಸೂ. ೧.)

---

[1] 'ದ್ವೈತ'ವೆಂದರೆ ಪ್ರಾಯಃ ಆನಂದತೀರ್ಥರಿಗಿಂತ ಪೂರ್ವದಲ್ಲಿ ಪ್ರಚಲಿತವಿದ್ದ ದ್ವೈತ ಸಿದ್ಧಾಂತ

ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತ ಪ್ರತಿಪಾದಕರು ರೇಣುಕಾದಿ ಆಚಾರ್ಯರು ಎಂಬುದು ಸಂಪ್ರದಾಯ. ಈ ಸಿದ್ಧಾಂತತತ್ತ್ವಗಳು ಶಿವಯೋಗಿಶಿವಾಚಾರ್ಯರ (ಕಾಲ ಅನಿರ್ದಿಷ್ಟ) "ಸಿದ್ಧಾಂತಶಿಖಾಮಣಿ"ಯಲ್ಲಿ ಸ್ಪಷ್ಟವಾಗಿ ಉಲ್ಲೇಖಿತವಾಗಿವೆ. ಈ ದಿಸೆಯಲ್ಲಿ ಶ್ರೀಪತಿ ಪಂಡಿತರ (ಕ್ರಿ. ಶ. ಸು. ೧೧೬೦) ಶ್ರೀಕರಭಾಷ್ಯವು ಉಲ್ಲೇಖನೀಯ. 'ಶ್ರೀಕರಭಾಷ್ಯದಲ್ಲಿ ಶಕ್ತಿವಿಶಿಷ್ಟಾದ್ವೈತ' ದರ್ಶನವು 'ವಿಶೇಷಾದ್ವೈತ' ಎಂಬ ಪರ್ಯಾಯ ನಾಮದಿಂದ ಪ್ರತಿಪಾದಿತವಾಗಿದೆಯಾದರೂ ಈ ಸಿದ್ಧಾಂತಕ್ಕೆ 'ಶಕ್ತಿವಿಶಿಷ್ಟಾದ್ವೈತ' ಎಂಬ ಹೆಸರು ಬಹು ಸ್ವರಸವಾಗಿ ಅನ್ವಯವಾಗುತ್ತದೆ. ಆದ್ದರಿಂದಲೇ ಈ ದರ್ಶನಪ್ರತಿಪಾದಕ ಗ್ರಂಥಗಳಲ್ಲಿ ಈ ಪದವು ಮೇಲಿಂದ ಮೇಲೆ ಉಲ್ಲೇಖಿಸಲ್ಪಟ್ಟಿದೆ[1].—

## ಶಕ್ತಿ ವಿಶಿಷ್ಟಾದ್ವೈತ ಪದನಿರ್ವಚನ

ವೀರಶೈವದರ್ಶನ ಗ್ರಂಥಗಳಲ್ಲಿ ಈ ಸಿದ್ಧಾಂತಕ್ಕೆ (೧) ಶಕ್ತಿವಿಶಿಷ್ಟಾದ್ವೈತ, (೨) ವಿಶೇಷಾದ್ವೈತ, (೩) ವಿಶಿಷ್ಟಾದ್ವೈತ, (೪) ಶಿವಾದ್ವೈತ (೫) ದ್ವೈತಾದ್ವೈತ ಅಥವಾ ಭೇದಾಭೇದ, (೬) ಶಿವಯೋಗ, ಮತ್ತು (೭) ಷಟ್‌ಸ್ಥಲ ಸಿದ್ಧಾಂತ ಇತ್ಯಾದಿ ಪದಗಳು ಪ್ರಯುಕ್ತವಾಗಿವೆ. ಅವುಗಳ ನಿರ್ವಚನವು ಹೀಗಿದೆ.

## ಶಕ್ತಿ ವಿಶಿಷ್ಟಾದ್ವೈತಂ

'ಶಕ್ತಿಶ್ಚ ಶಕ್ತಿಶ್ಚ ಶಕ್ತೀ ; ತಾಭ್ಯಾಂ ವಿಶಿಷ್ಟೌ ಜೀವೇಶೌ ; ತಯೋರದ್ವೈತಂ. ಇಲ್ಲಿ ಶಕ್ತಿಯು ಸ್ಥೂಲಚಿತ್–ಸ್ಥೂಲ ಅಚಿತ್ ಎಂದೂ, ಸೂಕ್ಷ್ಮಚಿತ್–ಸೂಕ್ಷ್ಮಅಚಿತ್ ಎಂದೂ, ನಾಲ್ಕು ಬಗೆ. ಶಕ್ತಿಶ್ಚ ಶಕ್ತಿಶ್ಚ ಶಕ್ತೀ ಎಂಬಲ್ಲಿ ಮೊದಲ ಶಕ್ತಿ ಪದಕ್ಕೆ 'ಸ್ಥೂಲಚಿದಚಿದಾತ್ಮಕ ಶಕ್ತಿ' ಎಂದೂ, ಎರಡನೆಯ ಶಕ್ತಿ ಪದಕ್ಕೆ 'ಸೂಕ್ಷ್ಮಚಿದಚಿದಾತ್ಮಕ ಶಕ್ತಿ' ಎಂದೂ ಅರ್ಥ. ಸ್ಥೂಲಚಿತ್=ಕಿಂಚಿಜ್ಞತ್ವ, ಸ್ಥೂಲ ಅಚಿತ್=ಕಿಂಚಿತ್ ಕರ್ತೃತ್ವ ; ಅದರಂತೆ ಸೂಕ್ಷ್ಮಚಿತ್ ಸರ್ವಜ್ಞತ್ವ, ಸೂಕ್ಷ್ಮಅಚಿತ್=ಸರ್ವಕರ್ತೃತ್ವ ವೆಂದು ಅರ್ಥ. ಪ್ರಕೃತ ಜೀವನು ಕಿಂಚಿಜ್ಞತ್ವ

---

೧ 1. "ಶಕ್ತಿ ವಿಶೇಷ ವಿಶಿಷ್ಟ ಶಿವಾದ್ವೈತಂ" (ಶ್ರೀಕರಭಾಷ್ಯಂ. ಪು. ೩೫೮ ಸಂ ೧)

2. 'ತಸ್ಮಾತ್ ಶಕ್ತಿವಿಶಿಷ್ಟಸ್ಯ ಜಿಜ್ಞಾಸಾ ಬ್ರಹ್ಮಣಃ ಸ್ಫುಟಂ'-ಕ್ರಿಯಾಸಾರ (ಉ.೧)

3. ವೀರಶೈವಸಿದ್ಧಾಂತಸ್ಯ ಲಿಂಗಾಂಗಸಾಮರಸ್ಯಾತ್ಮಕ ಪರಿಣಾಮ್ಯುಪಾದಾನರೂಪಶಕ್ತಿ ವಿಶಿಷ್ಟಶಿವಾದ್ವೈತಸ್ಯ ಸಕಲದ್ವೈತ ವಿಲಕ್ಷಣತ್ವೇನ ಸಾಧನೀಯಂತಯಾ"

—ವೀರಶೈವಾನಂದ ಚಂದ್ರಿಕಾ (ಪು.೨

ಮತ್ತು ಕಿಂಚಿತ್ ಕರ್ತೃತ್ವ ಶಕ್ತಿ ವಿಶಿಷ್ಟ ; ಶಿವನು ಸರ್ವಜ್ಞತ್ವ ಮತ್ತು ಸರ್ವಕರ್ತೃತ್ವ ಶಕ್ತಿವಿಶಿಷ್ಟ. ಈ ಬಗೆಯ ಸ್ಥೂಲ ಚಿದಚಿತ್ ಶಕ್ತಿವಿಶಿಷ್ಟ ಜೀವನಿಗೂ ಮತ್ತು ಸೂಕ್ಷ್ಮ ಚಿದಚಿತ್ ಶಕ್ತಿವಿಶಿಷ್ಟ ಶಿವನಿಗೂ ಆಗುವ ಅದ್ವೈತ ಎಂದರೆ "ನದೀಸಮುದ್ರ ನ್ಯಾಯ"ದಂತೆ ಏರ್ಪಡುವ ಸಾಮರಸ್ಯವೇ ಶಕ್ತಿವಿಶಿಷ್ಟಾದ್ವೈತ. ಇಲ್ಲಿ ಚಿದಚಿತ್ ಶಕ್ತಿಗಳಿಗೆ ವಿಶೇಷಣವಾದ ಸೂಕ್ಷ್ಮಶಬ್ದಕೆ 'ಸ್ವಭಾವ ನಿರ್ಮಲ' ಎಂದು ಅರ್ಥ. 'ಸ್ಥೂಲ' ಶಬ್ದಕ್ಕೆ' 'ಅಶುದ್ಧ' ಎಂದು ಅರ್ಥ.

## ೨. ವಿಶೇಷಾದ್ವೈತಂ

ವಿಶ್ವ ಶೇಷಶ್ಚ ವಿಶೇಷೌ = ಶಿವ-ಜೀವೌ ; ತಯೋರದ್ವೈತಂ 'ವಿಃಪಕ್ಷಿಪರಮಾತ್ಮನೋಃ' ವಿಃ = ಶಿವ ; ಶೇಷಃ = ಶಿವಾಂಶಜೀವ.

## ೩: ವಿಶಿಷ್ಟಾದ್ವೈತಂ

ವಿಶಿಷ್ಟಂ ಚ ವಿಶಿಷ್ಟಂ ಚ ವಿಶಿಷ್ಟೇ-ಲಿಂಗಾಂಗೇ, ತಯೋರದ್ವೈತಂ. ಇಲ್ಲಿ ಮೊದಲ ವಿಶಿಷ್ಟಪದಕ್ಕೆ ಚಿಚ್ಛಕ್ತಿವಿಶಿಷ್ಟಲಿಂಗಸಂಜ್ಞಿಕಪರಶಿವನೆಂದೂ, ಎರಡನೆಯವಿಶಿಷ್ಟಪದಕ್ಕೆ ಚಿತ್ತಶಕ್ತಿ ವಿಶಿಷ್ಟಶಿವಾಂಶರೂಪ ಅಂಗಸಂಜ್ಞಿಕ ಜೀವನೆಂದೂ ಅರ್ಥ. ಈ ಉಭಯಶಕ್ತಿವಿಶಿಷ್ಟ ಲಿಂಗಾಂಗಳಿಗೆ ಆಗುವ ಅದ್ವೈತವೇ ವಿಶಿಷ್ಟಾದ್ವೈತ.

## ೪. ಶಿವಾದ್ವೈತಂ

ಶಿವೇ ಅದ್ವೈತಂ = ಶಿವಾದ್ವೈತಂ ಅಥವಾ ಶಿವಶ್ಚ ಶಿವಶ್ಚ ಶಿವೌ, ತಯೋರದ್ವೈತಂ = ಶಿವಾದ್ವೈತಂ.

"ಈ ಷಡು ಸ್ಥಲಮಾರ್ಗವು ದ್ವೈತಾದ್ವೈತದ ಪರಿವರ್ತನೆಯಲ್ಲ. ಅದೇನುಕಾರಣವೆಂದಡೆ ಇದು ಶಿವಾದ್ವೈತಮಾರ್ಗವಾದ ಕಾರಣ (ತೋಂಟದ, ಸಿದ್ಧಲಿಂಗೇಶ್ವರ ವಚನ) ಇಲ್ಲಿ ನಿಷೇಧಿಸಿರುವ ದ್ವೈತಾದ್ವೈತವು ಷಟ್‌ಸ್ಥಲೇತರಲಕುಲೀಶ ಪಾಶುಪತರು ಹೇಳುವ "ದ್ವೈತಾದ್ವೈತ" ವೆಂದು ಭಾವಿಸಬೇಕು."

## ೫. ದ್ವೈತಾದ್ವೈತಂ

'ಭಕ್ತಾದಿ ಶರಣಾಂತ ಪಂಚಸ್ಥಲೇಷು ಶಿವ-ಜೀವಯೋಃ, ದ್ವೈತಸಿದ್ಧಿಃ, ಐಕ್ಯಸ್ಥಲೇ "ಯಥಾ ನದ್ಯಃ, ಇತಿವತ್ ಅದ್ವೈತಸಿದ್ಧಿಶ್ಚ"

(—ಶ್ರೀಕರಭಾಷ್ಯಂ ಪು. ೧೭೭, ಸ. ೨)

## ೬ ಶಿವಯೋಗಃ

ಶಿವೇ ಯೋಗಃ ಶಿವಯೋಗಃ (ಶಿವಾದ್ವೈತಪರಿಭಾಷಾ).

## ೭ ಷಟ್‌ಸ್ಥಲಸಿದ್ಧಾಂತಃ

ಶಿವದೀಕ್ಷಿತನಾದ ಅಂಗ (ಸಾಧಕ) ನು ಭಕ್ತ್ಯಾದಿ ಐಕ್ಯಾಂತವಾದ ಆರು ಸ್ಥಳಗಳಲ್ಲಿ ಶ್ರದ್ಧಾದಿ ಷಟ್‌ಭಕ್ತಿಗಳ ಸಾಧನೆಯಿಂದ ಲಿಂಗಾಂಗಸಾಮರಸ್ಯವನ್ನು ಹೊಂದುವುದು.

## ಪಶುಸ್ವರೂಪ.

ಇಲ್ಲಿ ಪಶು ಎಂದರೆ ಜೀವ. ಅವನು ಶಿವನ ಅಂಶ ಮತ್ತು ಶಕ್ತಿವಿಶಿಷ್ಟ ಎಂದು ಹೇಳಲಾಯಿತು. ಇದನ್ನು "ಅಖಂಡ ಜ್ಯೋತಿರ್ಮಯ ಮಹಾಲಿಂಗವೆನಿಸಿದ ಪರಶಿವಬ್ರಹ್ಮವು ತನ್ನ ಸ್ವಲೀಲಾ ಸ್ವತಂತ್ರತೆಯಿಂದ ತನ್ನ ತಾನರ್ಚಿಸಿ ಕೊಳ್ಳುವ ಒಂದು ಲೀಲಾ ವಿಲಾಸದಿಂದ ತನ್ನ ಅಖಂಡ ಚಿಚ್ಛಕ್ತಿಯ ಸಹಸ್ರಾಂಶದೊಳಗೊಂದು ಅಂಶವನ್ನು ಬೇರ್ಪಡಿಸಿತು. ಅದೇ ಆತ್ಮವಾಯಿತು" ಎಂದು ವಚನಶಾಸ್ತ್ರದಲ್ಲಿ ವರ್ಣಿಸಲಾಗಿದೆ.

''ಯಥಾ ಸಂದೀಪ್ತಾತ್ ಪಾವಕಾತ್ ವಿಸ್ಫುಲಿಂಗಾಃ
ಸಹಸ್ರಶಃ ಪ್ರಭವಂತೇ (ಸರೂಪಾಃ) ।
ತಥಾಕ್ಷರಾತ್ ವಿವಿಧಾಃ ಸೌಮ್ಯಭಾವಾಃ
ಪ್ರಜಾಯಂತೇ ತತ್ರಚೈವಾಪಿಯಂತಿ ॥ (ಮು, ೨.೧.೧)
'ಅಂಶೋ ನಾನಾ ವ್ಯಪದೇಶಾತ್' (ಬ್ರ.ಸೂ. (೨-೩-೪೦)
'ಅನಾದ್ಯವಿದ್ಯಾ ಸಂಬಂಧಾತ್ ತದಂಶೋ ಜೀವನಾಮಕಃ' (ಸಿ.ಶಿ.)
'ಮಮೈವಾಂಶೋ ಜೀವಲೋಕೇ ಜೀವಭೂತಸ್ಸನಾತನಃ ॥
(ಭಗವದ್ಗೀತೆ. ೧೮-೭)

ಮುಂತಾದ ಉಕ್ತಿಗಳು ಇದನ್ನು ಸಮರ್ಥಿಸುತ್ತವೆ. ಶ್ರೀಕರಭಾಷ್ಯದಲ್ಲಿ ಜೀವಸ್ವರೂಪವನ್ನು ಕುರಿತು ಹೀಗೆ ಹೇಳಿದೆ.—

"ಅನಾದಿ ಸ್ವಾಭಾವಿಕ ಮಾಯಾಪಾಶಬದ್ಧ ಘೋರಾಪಾರ ನಿಸ್ಸಾರ ಸಂಸಾರ ವ್ಯಾಪಾರ ತಾಪತ್ರಯಾನಲದಂದಹ್ಯಮಾನ- ನಾನಾಶರೀರಪ್ರವೇಶನಿರ್ಗಮನವರ್ಣಾಶ್ರಮಾಭಿಮಾನ ವಿಶಿಷ್ಟ -ಕಾಮಕ್ರೋಧಾದ್ಯನುಸ್ಯೂತ-ಸುಖದುಃಖಾದ್ಯಾಶ್ರಯತ್ವಂ ಜೀವತ್ವಂ'' ಎಂದು, ಇದನ್ನೇ ವಚನ ಶಾಸ್ತ್ರದಲ್ಲಿ ''ನೀವು ನಿಮ್ಮ ಸ್ವಲೀಲೆಯಿಂದ ಜಗದ ಲೀಲಾವೈಭವಂಗಳ ನಟಿಸಬೇಕೆಂದು

ನಿಮ್ಮಲ್ಲಿ ನೆನಹಂ ದೋರಲು ಆ ನೆನಹಂ ನಿರ್ಧರಿಸಿ ಚಿತ್ತೆನಿಸಿತಂ" ಎಂದು ಹೇಳಿದೆ. ''ಪರಬ್ರಹ್ಮದಲ್ಲಿ ತೋರಂವ ಅಸ್ಮಿ-ಪ್ರಕಾಶೇ-ನಂದಾವಿಃ'' ಎಂಬ ಅನುಭವವೇ ವಿಮರ್ಶಶಕ್ತಿ. "ಅಸ್ಮಿ ಎಂಬ ನೆನಹಂ ನಿರ್ಧರಿಸಿ ಈ ಬೆಳಗು ಗಟ್ಟಿಗೊಂಡು ಚಿತ್ತೆನಿಸಿತ್ತು'' ಆ ಚಿತ್ತಶಕ್ತಿವಿಶಿಷ್ಟನೇ ಜೀವಾತ್ಮ. ಪರಶಿವನಂ ಚಿಚ್ಛಕ್ತಿ ವಿಶಿಷ್ಟ.

## ಪತಿಸ್ವರೂಪ

ವೀರಶೈವದಲ್ಲಿ ಪತಿ ಎಂದರೆ ಪರಬ್ರಹ್ಮ. ಅವನನ್ನು ಲಿಂಗ. ಸ್ಥಲ, ಬಯಲು, ಸಹಜ, ಮತ್ತು ಶೂನ್ಯ ಮುಂತಾಗಿ ಕರೆಯಲಾಗಿದೆ. ಏಕವೇವಾದ್ವಿತೀಯವಾದುದೂ ಸಚ್ಚಿದಾನಂದ ಲಕ್ಷಣದಿಂದ ಕೂಡಿದುದೂ ಆದ ಶಿವತತ್ತ್ವವನ್ನೇ ವೀರಶೈವರು 'ಸ್ಥಲ' ಎಂದು ಕರೆದಿದ್ದಾರೆ[1]. ಆ ಶಿವತತ್ತ್ವವು ಎಲ್ಲ ತತ್ತ್ವಗಳ ಸ್ಥಿತಿಲಯಂಗಳಿಗೆ ಸ್ಥಾನಭೂತವಾಗಿರುವುದರಿಂದ ಸ್ಥಲವೆಂದು ಉಕ್ತವಾಗಿದೆ.

ಸ್ಥೀಯತೇ ಲೀಯತೇಯತ್ರ ಜಗದೇತಚ್ಚರಾಚರಂ ।
ತದ್ಬ್ರಹ್ಮ ಸ್ಥಲಮಿತ್ಯುಕ್ತಂ ಸ್ಥಲತತ್ತ್ವವಿಶಾರದೈಃ ॥

ಎಂಬ ಆಗಮೋಕ್ತಿಯು ಇದನ್ನು ಸಮರ್ಥಿಸುತ್ತದೆ. ಶಿವಶಬ್ದವೂ ಕೂಡ "ಶೇರತೇ ಅಸ್ಮಿನ್ ಭುವನಾನಿ ಇತಿ ಶಿವಃ" ಎಂಬ ವ್ಯುತ್ಪತ್ತಿಯಂತೆ ಸಕಲ ಲೋಕಗಳಿಗೆ ಆಧಾರ ಭೂತ ವಾದವಸ್ತು ಎಂಬ ಅರ್ಥವನ್ನೇ ಬೋಧಿಸುತ್ತದೆ.

ಈ ಪರಶಿವ ಬ್ರಹ್ಮವನ್ನೇ ಶಿವಾಗಮಂಗಳು ಲಿಂಗವೆಂದು ಕರೆದಿವೆ[2]. ಚರಾಚರಾತ್ಮಕವಾದ ಜಗತ್ತು ಪ್ರಳಯದಲ್ಲಿ ಎಲ್ಲಿ ಅಡಗಿದ್ದು ಮತ್ತೆ ಸೃಷ್ಟಿಯಲ್ಲಿ ಎಲ್ಲಿ ಯಾವುದರ ದೆಶೆಯಿಂದ ವ್ಯಕ್ತವಾಗುವುದೋ ಅದೇ ಲಿಂಗತತ್ತ್ವ, 'ಯತೋ ವಾ ಇಮಾನಿ ಭೂತಾನಿ ಜಾಯಂತೇ, ಯೇನ ಜಾತಾನಿ ಜೀವಂತಿ, ಯತ್ಪ್ರಯಂತ್ಯಭಿಸಂವಿಶಂತಿ, ತದ್ವಿಜಿಜ್ಞಾಸಸ್ವ, ತದ್ಬ್ರಹ್ಮ' (ತೈ.ಉ.೩.೧) ಎಂಬ ಶ್ರುತಿಯು ಇದೇ ಅರ್ಥವನ್ನು ಸಮರ್ಥಿಸುತ್ತದೆ. 'ಜನ್ಮಾದ್ಯಸ್ಯ ಯತಃ ಎಂಬ ಬ್ರಹ್ಮಸೂತ್ರದ ಶ್ರೀಕರ ಭಾಷ್ಯದಲ್ಲಿ ಈ ವಿಚಾರವು ವಿಸ್ತಾರವಾಗಿ ಪ್ರತಿಪಾದಿತವಾಗಿದೆ.

---

೧. ಏಕ ಏವ ಪರಂ ಬ್ರಹ್ಮ ಸಚ್ಚಿದಾನಂದಲಕ್ಷಣಂ
ಶಿವತತ್ತ್ವ ಶಿವಾಚಾರ್ಯೈಃ ಸ್ಥಲಮಿತ್ಯಾಹುರಾದರಾತ್ ॥ (ಅನು. ಸೂ. ೨.೨.)

೨. ಲೀನಂ ಪ್ರಪಂಚರೂಪಂ ಹಿ ಸರ್ವಮೇತತ್ ಚರಾಚರಂ ।
ಸರ್ಗಾದೌ ಗಮ್ಯತೇ ಭೂಯಃ ತಸ್ಮಾಲ್ಲಿಂಗ ಮುದೀರಿತಂ ॥ (ಸೂಕ್ಷ್ಮಾಗಮ,ಪ. ೬)
'ಲೀಯಂತೇ ಯತ್ರ ಗಮ್ಯಂತೇ ತಲ್ಲಿಂಗಂ ಬ್ರಹ್ಮಕೇವಲಂ' (ಸಿ.ಶಿ.ಮಣಿ. ೧೨-೩೩)

ಚರಾಚರ ಸೃಷ್ಟಿಗೆ ಕಾರಣವಾದ ಪರಶಿವ ಬ್ರಹ್ಮದ 'ಲಿಂಗ' 'ಸ್ಥಲ'ಗಳ ನೈಜ ಸ್ಥಿತಿಯನ್ನು 'ಸಹಜ' ಎಂದು ಈ ದರ್ಶನವು ಕರೆದಿದೆ. ಈ ಸಹಜವನ್ನೇ 'ಶೂನ್ಯ' ನಿಶ್ಶೂನ್ಯ, ಬಯಲು, ನಿರ್ವಯಲು ಎಂದು ಶಿವಶರಣರು ಕರೆದಿದ್ದಾರೆ[1]. ಇದು ಪರಮಾತ್ಮನು ತನ್ನಲ್ಲಿ ಸರ್ವಶಕ್ತಿಯನ್ನು ಅಳವಡಿಸಿಕೊಂಡು ಸ್ವಶಕ್ತಿಕ್ಷೋಭೆಯಿಲ್ಲದ ಸ್ಥಿತಿಯನ್ನು ವರ್ಣಿಸುತ್ತದೆ. ಅದೇ ಶೂನ್ಯ, ನಿಶ್ಶೂನ್ಯ, ಬಯಲು. ಅಲ್ಲಿ ಕಾಲವಿಲ್ಲ ; ಕಲೆಯಿಲ್ಲ ; ಕಲ್ಪವಿಲ್ಲ ; ಸೃಷ್ಟಿ, ಸ್ಥಿತಿ, ಲಯಗಳಿಲ್ಲ. ಏನೇನೂ ಇಲ್ಲದ ಆ ಸ್ಥಿತಿ ಬಯಲೇ ! ಅದು ನಿಶ್ಶೂನ್ಯವೇ ! ಆದರೆ ಅದು ಏನೂ ಇಲ್ಲದ ಬಯಲಲ್ಲ ; ಸಾಮಾನ್ಯ ಶೂನ್ಯವಲ್ಲ. ಎಲ್ಲವನ್ನೂ ಒಳಗೊಂಡ ನಿಶ್ಶೂನ್ಯ. ನಿಸ್ತರಂಗಸಮುದ್ರವು ಸ್ವಸ್ಥವಾಗಿರುವಂತೆ ತನ್ನಲ್ಲಿ ತಾನು ಲೀಯವಾದಸ್ಥಿತಿ. ಆದರೆ ಇದು ಬೌದ್ಧಧರ್ಮದ ಶೂನ್ಯ (void) ವಲ್ಲ.

ಈ ಸ್ಥಿತಿಯನ್ನು 'ಸರ್ವಶೂನ್ಯ ನಿರಾಲಂಬಸ್ಥಲ' ಎಂದು ಶರಣರು ಕರೆದಿದ್ದಾರೆ. ಆಗ ಸರ್ವಶೂನ್ಯವಸ್ತು ತನ್ನ ಘನತೆಯ ತಾನರಿಯದೆ, ಇದಿರರಿಯದೆ, ಏನೇನೂ ಅರಿಯದೆ ತಾನೇತಾನಾಗಿದ್ದಿತ್ತು ಎಂಬುದನ್ನು ಸಿದ್ಧಲಿಂಗಶಿವಯೋಗಿಗಳು 'ನಿರಾಲಂಬ' ಎಂದು ಕರೆದಿದ್ದಾರೆ. ಅದು ಅಸ್ತಿತ್ವವಿಲ್ಲದ ಶೂನ್ಯವಲ್ಲ. ಅದು ಎಲ್ಲವನ್ನೂ ಒಳಗೊಂಡ ಪರಿಪೂರ್ಣ ಮತ್ತೊಂದಕ್ಕೆಡೆಯಿಲ್ಲದೆ ತಾನೇ ತಾನಾಗಿ ಎಲ್ಲವನ್ನೂ ತುಂಬಿಕೊಂಡಿರುವ ಶೂನ್ಯ ಅದು.

ನಿರಾಮಯಂ ನಿರಾಕಾರಂ ನಿರ್ಗುಣಂ ನಿರ್ಮಲಂ ಶಿವಂ ।
ತಸ್ಮಾಲ್ಲಿಂಗಂ ಪರಂ ಬ್ರಹ್ಮ ಸಚ್ಚಿದಾನಂದಲಕ್ಷಣಂ (ಸೂಕ್ಷ್ಮಆಗಮ ಪ. ೬)

ಎಂಬ ಸ್ಥಿತಿ. ಋಗ್ವೇದ ನಾಸದೀಯಸೂಕ್ತವು ಹೇಳುವ "ಪೂರ್ವದಲ್ಲಿ ಸದಸತ್ತುಗಳಾಗಲಿ, ಆಕಾಶಾಂತರಿಕ್ಷಗಳಾಗಲಿ, ಹಗಲು ರಾತ್ರಿಗಳಾಗಲಿ, ಅಮೃತ್-ಮೃತ್ಯುಗಳಾಗಲಿ ಇರದ[2] ಸ್ಥಿತಿಯೇ ಅದು. ಇದನ್ನೇ ಪ್ರಭುದೇವರ "ಗುಹೇಶ್ವರಾ ನೀನೊಬ್ಬನೇ ಇದ್ದೆಯಲ್ಲಾ ಇಲ್ಲದಂತೆ" ಎಂಬ

ಟಿ. ಇಲ್ಲಿಯ ಟಿಪ್ಪಣಿಗಳು

---

೧. "ಸಹಜದಿಂದೆ ನಿರಾಲಂಬವಾಯಿತ್ತು, ನಿರಾಲಂಬದಿಂದೆ ನಿರಾಳವಾಯಿತ್ತು, ನಿರಾಳದಿಂದ ನಿರವಯವಾಯಿತ್ತು, ನಿರವಯದಿಂದ ಅನಾದಿಯಾಯಿತ್ತು. ಅನಾದಿಯಲ್ಲಿ ಮೂರ್ತಿಯಾದನೊಬ್ಬ ಶರಣ. ಆ ಶರಣನ ಮೂರ್ತಿಯಿಂದ-ಸದಾಶಿವ-ಶಿವ-ರುದ್ರ-ವಿಷ್ಣು-ಬ್ರಹ್ಮ-ಸಕಲಜಗತ್ತುಗಳು ಹುಟ್ಟಿಬೆಳೆದವು". (ಪ್ರಭುದೇವರ ವಚನ)

೨. ನಾ ಸದಾಸೀನ್ನೋಽಸದಾಸೀತ್ತದಾನೀಂ ನಾಸೀದ್ರಜೋ ನೋ ವ್ಯೋಮಾ ಪರೋ ಯತ್ ।
ಸಮೃತ್ಯುರಾಸೀದಮೃತಂ ನ ತರ್ಹಿ ನ ರಾತ್ರ್ಯಾ ಅಹ್ನ ಆಸೀತ್ಪ್ರಕೇತಃ ॥
(ಋ. ನಾಸದೀಯಸೂಕ್ತ)

ಆದರೆ ಹೀಗಿದ್ದ ಪರಬ್ರಹ್ಮವು ತನ್ನ ತಾನರ್ಚಿಸಿಕೊಳ್ಳುವ ಒಂದು ವಿಲಾಸದಿಂದ ತನ್ನ ಅಖಂಡ ಚಿಚ್ಛಕ್ತಿಯ ಸಹಾಯದಿಂದ 'ಬಹುಸ್ಯಾಂ ಪ್ರಜಾಯೇಯ' ಎಂದು ಸಂಕಲ್ಪಿಸಿತು.[1] ಆ ಪರಬ್ರಹ್ಮದಲ್ಲಿ ಸಹಜವಾಗಿ ಅಡಗಿದ್ದ ಸ್ವಶಕ್ತಿಯ ಸ್ಫುರಣವೇ ಈ ಸಂಕಲ್ಪ. ಇದನ್ನು ನಾಸದೀಯಸೂಕ್ತದಲ್ಲಿ 'ಆಸೀದವಾತಂ ಸ್ವಧಯಾ ತದೇಕಂ' ಎಂದು ವರ್ಣಿಸಲಾಗಿದೆ. ವಾಯುವೇ ಇಲ್ಲದ ಆ ಸ್ಥಿತಿಯೂ ಅದು ತನ್ನಲ್ಲಿದ್ದ ಸ್ವಶಕ್ತಿ (ಸ್ವಧಯಾ) ಸಹಾಯದಿಂದ ಆಸೀತ್ ಚೈತನ್ಯ ಸ್ಫುರಣೆಯುಳ್ಳದ್ದಾಗಿತ್ತು. ಈ ಸ್ಥಿತಿಯನ್ನು—

ಸನ್ ಹೃದಯ ಪ್ರಕಾಶೋ ಭವನಕ್ರಿಯಯಾ ಭವತಿ ಕರ್ತಾ ।
ಸೈವ ಕ್ರಿಯಾ ವಿಮರ್ಶಃ ಸ್ವಸ್ಥಾ ಕ್ಷುಭಿತಾ ವಿಶ್ವವಿಸ್ತಾರಾ ॥

(ಸಾರಸ್ವತಸೂತ್ರ–ಶಿವಾದ್ವೈತಮಂಜರೀ)

ಎನ್ನಲಾಗಿದೆ.

ಆತ್ಮ ಪ್ರಕಾಶವೆಂಬ ಈ ಹೃದಯ ಪ್ರಕಾಶವೇ ವಿಮರ್ಶಶಕ್ತಿ. ಅದು ಚೇತನಾಚೇತನ ಪ್ರಪಂಚ ಚಿತ್ರ ನಿರ್ಮಾಣಕ್ಕೆ ಭಿತ್ತಿಯೆನಿಸಿಕೊಂಡಿದೆ.

ಸ್ಥಲಶಬ್ದವಾಚ್ಯವೂ ಶಕ್ತಿ ವಿಶಿಷ್ಟವೂ ಆಗಿರುವ ಪರಶಿವ ಬ್ರಹ್ಮವು 'ಸಚ್ಚಿದಾನಂದ ಸ್ವರೂಪ' ಎಂದು ವರ್ಣಿಸಲಾಗಿದೆ. ಅದು ಪ್ರಪಂಚಕ್ಕೆ ಕಾರಣವಾಗಿ ತನಗನ್ಯವಿಲ್ಲದಂದರಿಂದ ಸದ್ರೂಪ, ಜಗತ್ತಿನ ತೋರಿಕೆಗೆ ಹೇತುವಾಗಿ ತನ್ನ ತೋರಿಕೆಗೆ ಪ್ರಮಾಣಾದಿ ಸಾಧನವನ್ನು ಬಯಸದಿರುವುದರಿಂದ ಚಿದ್ರೂಪ ; ಪ್ರಪಂಚವು ಅನುಭವಿಸುವ ಆನಂದಕ್ಕೆಲ್ಲ ಮೂಲ ಕಾರಣವಾಗಿರುವುದರಿಂದ ಆನಂದ ಸ್ವರೂಪವಾಗಿದೆ.

ಶಿವನಿಗೆ ಈ ಸಚ್ಚಿದಾನಂದ ಸ್ವರೂಪದ ಎಚ್ಚರವು ಸ್ವತಃ ಸಿದ್ಧ. ಆ ಎಚ್ಚರವನ್ನೇ 'ವಿಮರ್ಶಶಕ್ತಿ' ಎಂದಿರುವುದು. ಆದರಿಂಪಲೇ ಅಸ್ಮಿ. ಪ್ರಕಾಶೇ, ನಂದಾಮಿ, ಎಂಬ ಸತ್-ಚಿತ್-ಆನಂದಗಳ ಅನುಭವವು ಇವನಿಗೆ ಇರುವುದು. ಈ ಶಕ್ತಿಯಿಲ್ಲದಿದ್ದರೆ ಇವನು ಜಡನಾಗ ಬೇಕಾಗುವುದು. ಹೀಗೆ ಚೇತನನಾದ ಪರಶಿವನು ತನ್ನ ವಿಮರ್ಶಶಕ್ತಿ ವಿಲಾಸದಿಂದ ಜಗತ್ತಿನ ಸೃಷ್ಟಿಸ್ಥಿತಿಲಯಾದಿಗಳಿಗೆ ಕಾರಣನಾಗಿರುವುದು, ಚಂದ್ರ–ಚಂದ್ರಿಕೆ, ಸೂರ್ಯ–ಪ್ರಕಾಶ,

---

೧, ತದೀಯಾ ಪರಮಾ ಶಕ್ತಿಃ ಸಚ್ಚಿದಾನಂದಲಕ್ಷಣಾ ।
ಸಮಸ್ತಲೋಕನಿರ್ಮಾಣಸಮವಾಯಸ್ವರೂಪಿಣೀ ॥ (ಸಿ. ಶಿ)

ಕುಸುಮ–ಗಂಧಾದಿಗಳಂತೆ. ಈ ಶಕ್ತಿಯು ಶಿವನಲ್ಲಿ ಸಹಜವಾಗಿರುತ್ತದೆ. 'ಪರಾಸ್ಯಶಕ್ತಿರ್ವಿವಿಧೈವ ಶ್ರೂಯತೇ (ಶ್ವೇತಾ [1]), ಮುಂತಾದ ಶ್ರುತಿಗಳು ಶಿವನಿಗೆ ಶಕ್ತಿ ವಿಶಿಷ್ಟತ್ವವನ್ನು ಸಾರುತ್ತವೆ, ಶ್ರೀಕರಭಾಷ್ಯದಲ್ಲಿ ಬ್ರಹ್ಮಲಕ್ಷಣವನ್ನು ಹೀಗೆ ನಿರೂಪಿಸಿದೆ :—

"ವೇದಾಗಮೋಭಯವೇದಾಂತ ಪ್ರತಿಪಾದಿತ, ಸ್ವಾಭಾವಿಕಾನಂತಶಕ್ತಿ ವಿಶಿಷ್ಟ, ಜಗದುಭಯಕಾರಣ, ಪಶುಪಾಶನಿಯಾಮಕ, ಸಕಲ–ನಿಷ್ಕಲ, ಸ್ಥೂಲ–ಸೂಕ್ಷ್ಮಚಿದಚಿತ್–ಪ್ರಕಾಶಕ, ಸತ್ಯಜ್ಞಾನಾನಂತ ಕಲ್ಯಾಣಗುಣವಿಭವಾಶ್ರಯತ್ವಂ ಬ್ರಹ್ಮತ್ವಂ" ಎಂದು.

## ಪಾಶಸ್ವರೂಪ

ಪಾಶವೆಂದರೆ ಜಗತ್ತು. ಅದೂ ಶಕ್ತಿವಿಶಿಷ್ಟ ಪುತ್ತು ಬ್ರಹ್ಮದ ಪರಿಣಾಮ. ಪರಿಣಾಮವು ಎರಡು ವಿಧ. ವಿಕೃತಪರಿಣಾಮ ಮತ್ತು ಅವಿಕೃತಪರಿಣಾಮ ಎಂದು. ಕ್ಷೀರವು ದಧಿ ರೂಪದಿಂದ ಪರಿಣಮಿಸಿದಾಗ ಅದು ತನ್ನ ಕ್ಷೀರತ್ವವನ್ನು ಕಳೆದು ಕೊಂಡು ದಧಿಯಾಗಿ ಪರಿಣಮಿಸುತ್ತದೆ. ಪೂರ್ವರೂಪಪರಿತ್ಯಾಗ ಪೂರ್ವಕ ರೂಪಾಂತರ ಪ್ರಾಪ್ತಿಯೇ ವಿಕೃತಪರಿಣಾಮ. ಅಧಿಷ್ಠಾನ ವಸ್ತುವಿನ ಅನ್ಯಥಾಭಿವ್ಯಕ್ತಿಗೆ ವಿವರ್ತವೆಂದು ಹೆಸರು. ಅವಿದ್ಯೆಯೇ ಜಗದ್ರೂಪವಾಗಿ ಪರಿಣಮಿಸುವುದು ಎಂಬಲ್ಲಿ ಅವಿದ್ಯೆ ತನ್ನ ಅವಿದ್ಯಾತ್ವವನ್ನು ಬಿಡದೆ ಜಗದ್ರೂಪವಾಗಿದೆ. ಇಲ್ಲಿ ಜಗತ್ತು ಅವಿದ್ಯೆಯ ಪರಿಣಾಮ; ಬ್ರಹ್ಮದ ವಿವರ್ತ ಎಂಬುದು ಅದ್ವೈತಿಗಳ ಮತ. ಆದ್ದರಿಂದಲೇ ಅಲ್ಲಿ ಅವಿದ್ಯೆಯೂ ಮಿಥ್ಯೆ, ಜಗತ್ತೂ ಮಿಥ್ಯೆ. ಆದರೆ ಶಿವಾದ್ವೈತದಲ್ಲಿ ಶಿವನ ಶಿವತ್ವಕ್ಕೆ ಚ್ಯುತಿಯಿಲ್ಲದೆ, ಶಿವನಿಂದ ಜಗದುತ್ಪತ್ತಿಯನ್ನು ಅಂಗೀಕರಿಸಿರುವುದರಿಂದ ಜಗತ್ತು ಸತ್ಯ[2]" ಘಟಕಾರ್ಯಕ್ಕೆ ಮೃತ್ ಉಪಾದಾನಕಾರಣ, ಕುಲಾಲ ನಿಮಿತ್ತಕಾರಣ. ಉಪಾದಾನಕಾರಣ

---

೧. "ಪ್ರಜ್ಞಾಚ ತಸ್ಮಾತ್ ಪ್ರಸೃತಾ ಪುರಾಣೀ (ಶ್ವೇತಾ–೪ ೧೮)
'ಮಾಯಾಂ ತು ಪ್ರಕೃತಿಂ ವಿದ್ಯಾತ್ ಮಾಯಿನಂ ತು ಮಹೇಶ್ವರಂ (ಶ್ವೇ ೪–೧೦)
'ಪಂ ಶಿವಂ ಪರಮಂ ಬ್ರಹ್ಮಪ್ರಾಪ್ನೋತೀತಿ ಸ್ವಭಾವತಃ'
ಮಾಯೇತಿ ಪ್ರೋಚ್ಯತೇ ಲೋಕೇ ಬ್ರಹ್ಮನಿಷ್ಠಾಶಿನಾತನೀ (ಶ್ರೀಕರಭಾಷ್ಯ ಪು. ೩೮೨. ೧.)
'ನಮಃ ಸೋಮಾಯ ಚ (ರುದ್ರಾಧ್ಯಾಯ)
' ಉಮಾಸಹಾಯಂ ಪರಮೇಶ್ವರಂ ಪ್ರಭುಂ' (ಕೈವಲ್ಯ ಉ.)
ತದೀಯಾ ಪರಮಾ ಶಕ್ತಿಃ ಸಚ್ಚಿದಾನಂದಲಕ್ಷಣಾ ।—
ತಥಾ ಶಕ್ತಿರ್ವಿಮರ್ಶಾಖ್ಯಾ ಪ್ರಕಾಶೇ ಬ್ರಹ್ಮಣಿ ಸ್ಥಿತಾ ॥ (ಸಿ. ಶಿ. ಪರಿ. ೨೦)
"ಲಿಂಗವೆಂಬುದು ಪರಶಿವ ಶಕ್ತಿಯುಂಕ್ತ"
ಲಿಂಗವೆಂಬುದು ಪರಶಿವನ ನಿಜ ದೇಹ .........
ಉರಿಲಿಂಗ ಪೆದ್ದಿ ವಿಶ್ವೇಶ್ವರಾ ॥ (ಉರಿಲಿಂಗಪೆದ್ದಿ ವಚನಗಳು)

೨. ಶಿವತತ್ತ್ವಾತ್ ಸಮುತ್ಪನ್ನಂ ಜಗದಸ್ಮಾತ್ ನ ಭಿದ್ಯತೇ ।
ತೇನೋರ್ಮಿಬುದ್ಬುದಾಕಾರೋಯಥಾ ಸಿಂಧೋರ್ನ ಭಿದ್ಯತೇ, (ಸಿ.ಶಿ.ಪರಿ, ೧೦)

ಸ್ವರೂಪಕ್ಕೆ ಚ್ಯುತಿಯಿಲ್ಲದೆ, ಅದರಿಂದ ವ್ಯವಹಾರಯೋಗ್ಯವೆನಿಸಿದ ಕಾರ್ಯೋತ್ಪತ್ತಿಯೇ ಅವಿಕೃತಪರಿಣಾಮ 'ಸ್ವರ್ಣಕುಂಡಲ'ಸ್ಥಲದಲ್ಲಿ ಉಪಾದಾನ ಕಾರಣವಾದ ಸ್ವರ್ಣತ್ವಕ್ಕೆ ನಾಶ ವಿಲ್ಲದೆ, ಅದಕ್ಕೆ ಭಿನ್ನವಾಗಿ, 'ಕುಂಡಲ' ಎಂದು ಮುಂತಾಗಿ ವ್ಯವಹರಿಸಲು ಯೋಗ್ಯವಾದ ಕುಂಡಲೋತ್ಪತ್ತಿಯು ಕಂಡುಬರುತ್ತದೆ. ಸುವರ್ಣವು ಕುಂಡಲ ರೂಪವಾಗಿ ಪರಿಣಾಮ ಹೊಂದಿದರೂ ಅಲ್ಲಿ ಸ್ವರ್ಣಾಪೇಕ್ಷಿಗೆ ಸ್ವರ್ಣವಿದ್ದೇ ಇದೆ. ಅದಿಷ್ಠಾನ ಸುವರ್ಣತ್ವಕ್ಕೆ ಚ್ಯುತಿ ಬಂದಿಲ್ಲ. ಅದರಂತೆ ಶಿವನು ತನ್ನ ಶಕ್ತ್ಯಂಶದಿಂದ ಜಗತ್ತಿಗೆ ಉಪಾದಾನಕಾರಣನೂ, ಸ್ವಾಂಶದಿಂದ ನಿಮಿತ್ತಕಾರಣನೂ ಆಗಿರುವುದರಿಂದ ಜಗತ್ತಿಗೆ ಶಿವನು ಅಭಿನ್ನ ನಿಮಿತ್ತೋಪಾದಾನ ಕಾರಣನೆನಿಸಿದ್ದಾನೆ. ಹೀಗೆ ಹೇಳಿದ್ದರಿಂದ ಶಿವನಿಗೆ ವಿಕಾರೇತ್ಯಾದಿ ದೋಷಗಳು ಸಂಭವಿಸುವುದಿಲ್ಲ. "ಸ್ವೇಚ್ಛಯಾ ಸ್ವಚಿತ್ತೇ ವಿಶ್ವಮುನ್ಮೀಲಯತಿ" ಎಂಬ ಶಕ್ತಿಸೂತ್ರವೂ, 'ಸ್ವಶಕ್ತಿ ಪ್ರಚಯೋಽಸ್ಯ ವಿಶ್ವಂ" ಎಂಬ ಶಿವಸೂತ್ರವೂ ಜಗತ್ತು ಶಿವನ ಪರಿಣಾಮವೆಂಬುದನ್ನು ಸಮರ್ಥಿಸುತ್ತವೆ. 'ಶಕ್ತ್ಯಾ ಪ್ರಪಂಚಸೃಷ್ಟಿಃ ಸ್ಯಾತ್" ಎಂಬ ಅನುಭವಸೂತ್ರವೂ ಈ ಪರಿಣಾಮವಾದವನ್ನೇ ಪುಷ್ಟೀಕರಿಸಿದೆ.

ಆತ್ಮಶಕ್ತಿವಿಕಾಸೇನಾ ಶಿವೋ ವಿಶ್ವಾತ್ಮನಾ ಸ್ಥಿತಃ ।
ಕುಟೀಭಾವಾದ್ಯಥಾ ಭಾತಿ ಪಟಃ ಸ್ವಸ್ಯ ಪ್ರಸಾರಣಾತ್ ॥ ೬೫ ॥

(ಸಿ. ಶಿ. ಪರಿ. ೨೦)

"ಯಥೋರ್ಣನಾಭಿಃ ಸೃಜತೇ ಗೃಹ್ಣತೇ ಚ" (ಮುಂ ೧. ೧. ೮) ಮುಂತಾದ ಉಕ್ತಿಗಳು ಜಗತ್ತು ಶಿವನ ಪರಿಣಾಮ ಎಂಬುದನ್ನು ಹೇಳುತ್ತವೆ.

ಜಗತ್ತು ಶಕ್ತಿವಿಶಿಷ್ಟ–ಕಾರಣಗುಣಾಃ ಕಾರ್ಯೇ ಸಂಕ್ರಾಮಂತಿ ಎಂಬ ನ್ಯಾಯದಂತೆ ಜಗತ್ತು ಶಕ್ತಿವಿಶಿಷ್ಟ ಬ್ರಹ್ಮದ ಪರಿಣಾಮವಾದ್ದರಿಂದ ಜಗತ್ತೂ ಶಕ್ತಿವಿಶಿಷ್ಟವೇ ಆಯಿತು. ಆದ್ದರಿಂದಲೇ ಶಕ್ತಿರಹಿತವಾದ ಯಾವ ಪದಾರ್ಥವೂ ಲೋಕದಲ್ಲಿಲ್ಲ. ಪೃಥ್ವಿಯಲ್ಲಿ ಧಾರಣ ಶಕ್ತಿ, ಜಲದಲ್ಲಿ ಆಪ್ಯಾಯನಶಕ್ತಿ, ತೇಜಸ್ಸಿನಲ್ಲಿ ಜ್ವಲನ ಶಕ್ತಿ, ವಾಯುವಿನಲ್ಲಿ ಸಂಚಲನ ಶಕ್ತಿ, ಆಕಾಶದಲ್ಲಿ ವ್ಯಾಪನ ಶಕ್ತಿ, ಆತ್ಮನಲ್ಲಿ ಬುದ್ಧಿಶಕ್ತಿಯ ಇರುವುದು ಸರ್ವಶ್ರುತ.

ಶಕ್ತಯೋಽಸ್ಯ ಜಗತ್ ಕೃತ್ಸ್ನಂ ಶಕ್ತಿಮಾಂಸ್ತು ಮಹೇಶ್ವರಃ ।
ಶಕ್ತಿಸ್ತು ಶಕ್ತಿಮದ್ರೂಪಾತ್ ವ್ಯತಿರೇಕಂ ನ ಗಚ್ಛತಿ ।
ತಾದಾತ್ಮ್ಯಮನಯೋರ್ನಿತ್ಯಂ ವಹ್ನಿದಾಹಕಯೋರಿವ ॥

ಮುಂತಾದ ಉಕ್ತಿಗಳು ಈ ಅಂಶವನ್ನು ದೃಢಪಡಿಸುತ್ತವೆ. ಶಿವನು 'ನಿರ್ಗುಣ' ಮತ್ತು 'ನಿಸ್ಸಂಗ' ಎಂಬ ಶ್ರುತಿಗಳಿಗೆಹೇಯ ಗುಣರಹಿತ ಮತ್ತು ಸಂಸಾರಸಂಗದೂರ ಎಂದು ಇಲ್ಲಿ ಅರ್ಥೈಸಲಾಗಿದೆ.

''ಅಸದ್ವಾ ಇದಮಗ್ರ ಆಸೀತ್-ತತೋ ವೈ ಸದಜಾಯತ' ಎಂಬಲ್ಲಿ ಅಸತ್ ಎಂದರೆ ಮಿಥ್ಯೆ (ಅಭಾವ) ಯಲ್ಲ, ಅವ್ಯಕ್ತ ಎಂದು ಅರ್ಥ. ಏಕೆಂದರೆ ಅಭಾವದಿಂದ ಭಾವಪದಾರ್ಥಗಳು ಹುಟ್ಟುವುದಾದರೂ ಹೇಗೆ? ಅದಕ್ಕಾಗಿ ಅಸತ್ ಎಂಬುದಕ್ಕೆ ಅವ್ಯಕ್ತ ಎಂದು ಹೇಳಲಾಗಿದೆ. ಬೇಸಗೆಯಲ್ಲಿ ತೃಣಬೀಜಗಳು ನೆಲದಲ್ಲಿ ಅವ್ಯಕ್ತದಿಂದಿದ್ದು ಮಳೆಗಾಲದಲ್ಲಿ ಮೊಳೆಯುವಂತೆ. ''ದೃಶ್ಯತೇ ತು'' (ಬ್ರ.ಸ. ೨-೧-೬) ಎಂಬ ಸೂತ್ರದ ಶ್ರೀಕರಭಾಷ್ಯ ಮತ್ತು

'ಸತ್ಪ್ರಜ್ಞಾನ ಘನಾನಂದೇ ಶಿವೇ ಪರಮಕಾರಣೇ ।
ಚರಾಚರ ಜಗಜ್ಜಾಲಂ ಗ್ರೀಷ್ಮೇ ಕ್ಷ್ಮಾಲೀನ ಬೀಜವತ್ ॥
ಸೂಕ್ಷ್ಮ ರೂಪೇಣ ಸಂಸ್ಥಿತ್ಯ ಪುನರಸ್ಯ ಚಿಕೀರ್ಷಯಾ ।
ಸ್ಥೂಲತ್ವೇನ ಬಹಿರ್ಯಾತಂ

ಮುಂತಾದ ಉಕ್ತಿಗಳು ಈ ಅರ್ಥವನ್ನು ಪುಷ್ಟೀಕರಿಸುತ್ತವೆ. ಜಗತ್ತು ಸತ್ಯ ಎಂಬ ವಿಷಯವನ್ನು ಕುರಿತ—

''ಅವ್ಯಕ್ತಾದೀನಿ ಭೂತಾನಿ ವ್ಯಕ್ತಮಧ್ಯಾನಿ ಭಾರತ ।
ಅವ್ಯಕ್ತನಿಧನಾನ್ಯೇವ'' (ಗೀತೆ. ೨-೨೮)

" ನಾಸತೋ ವಿದ್ಯತೇ ಭಾವೋ ನಾಭಾವೋ ವಿದ್ಯತೇ ಸತಃ " (ಗೀತೆ. ೨-೧೬)
''ತದನನ್ಯತ್ವಂ ಆರಂಭಣ ಶಬ್ದಾದಿಭ್ಯಃ'' (ಬ್ರಂ. ಸೂ. ೨-೧-೧೪)
''ಅಸದಿತಿ ಚೇನ್ನ ಪ್ರತಿಷೇಧ ಮಾತ್ರತ್ವಾತ್'' (ಬ್ರಂ. ಸೂ. ೨-೨. ೭)

ಮುಂತಾದ ಬ್ರಹ್ಮಸೂತ್ರಗಳ ಶ್ರೀಕರಭಾಷ್ಯದಲ್ಲಿ ಈ ಅಂಶವನು ದೃಢಪಡಿಸಲಾಗಿದೆ.

## ಶಕ್ತಿವಿಶಿಷ್ಟಾದ್ವೈತದ ಭೇದಾಭೇದವಾದ

ಈ ಸಿದ್ಧಾಂತವು ಭೇದಾಭೇದ ಅಥವಾ ದ್ವೈತಾದ್ವೈತವಾದವನ್ನು ಒಪ್ಪಿದೆ. ಇಲ್ಲಿ ಶಿವ-ಶಕ್ತಿಗಳಿಗೆ ಮತ್ತು ಶಿವ-ಜೀವರಿಗೆ ಭೇದಾಭೇದವನ್ನು ಸಮರ್ಥಿಸಲಾಗಿದೆ.

ಏಷಾ ಶಕ್ತಿಃ ಶಿವಾ ಹ್ಯೇತಚ್ಛಕ್ತಿಮಾನುಚ್ಯತೇ ಶಿವಃ ।
ಶಕ್ತಿ ಶಕ್ತಿ ಮಿತೋರ್ಭೇದಂ ವದಂತಿ ಪರಮಾರ್ಥತಃ ॥
ಅಭೇದಂ ಚಾನ ಪಶ್ಯಂತಿ ಯೋಗಿನಸ್ತತ್ತ್ವಚಿಂತಕಾಃ ॥

ಶಿವಶಕ್ತಿಗಳಿಗೆ ಇರುವ ಭೇದಾಭೇದವು ಪಾರಮಾರ್ಥಿಕ.

ಸಾ ಮಮೇಚ್ಛಾ ಪರಾಶಕ್ತಿರವಿಯುಕ್ತಾ ಸ್ವಭಾವಜಾ ।
ವಹ್ನೇರೂಷ್ಮೇವ ವಿಜ್ಞೇಯಾ ರಶ್ಮಿರೂಪಾರವೇರಿವ ॥
ಸರ್ವಸ್ಯ ಜಗತೋಽಪ್ಯಸ್ಯ ಸಾ ಶಕ್ತಿಃ ಕಾರಣಾತ್ಮಿಕಾ ॥

(ಮೃತ್ಯುಂಜಯ ಭಟ್ಟಾರಕೇ)

ಶಿವ–ಜೀವರಿಗೆ ಭೇದಾಭೇದ ಸಮರ್ಥನ

ಶಿವಶಕ್ತಿಗಳಿಗೆ ಭೇದಾಭೇದವು ಸ್ವಾಭಾವಿಕವಿರುವಂತೆ ಶಿವ–ಜೀವರಿಗೂ ಭೇದಾಭೇದವು ಪಾರಮಾರ್ಥಿಕವೇ ಆಗಿದೆ.

ಯಥಾ ಸುದೀಪ್ತಾತ್ ಪಾವಕಾದ್ವಿಸ್ಫುಲಿಂಗಾಃ ಸಹಸ್ರಶಃ ಪ್ರಭವಂತೇ ಸರೂಪಾಃ ।
ತಥಾಕ್ಷರಾದ್ವಿವಿಧಾಃ ಸಾಮ್ಯಭಾವಾಃ ಪ್ರಜಾಯಂತೇ
ತತ್ರಚೈವಾಪಿಯಂತಿ ॥ (ಮುಂಡಕ)

ಇಲ್ಲಿ ಅಗ್ನಿ ಮತ್ತು ಅಗ್ನಿಕಣಗಳಿಗೆ ಕೇವಲ ಭೇದವನ್ನಾಗಲಿ ಅಥವಾ ಕೇವಲ ಅಭೇದವನ್ನಾಗಲಿ ಹೇಳುವುದಕ್ಕೆ ಆಗುವುದಿಲ್ಲ. ಬದಲಾಗಿ ಭೇದಾಭೇದವನ್ನೇ ಹೇಳಬೇಕು. ಏಕೆಂದರೆ ಎರಡಕ್ಕೂ ಅಭೇದವನ್ನು ಹೇಳಿದರೆ ಅಗ್ನಿಯಿಂದಾಗುವ ಪಾಕಾದಿ ಕಾರ್ಯಗಳು ಅಗ್ನಿಕಣದಿಂದಲೂ ಆಗಬೇಕಾಗುತ್ತವೆ. ಅದರಂತೆ ಕೇವಲ ಭೇದವೂ ಘಟಿಸುವುದಿಲ್ಲ. ಎಂದರೆ ಅಗ್ನಿ ಭಿನ್ನವಾದ ಜಲಾದಿಗಳಿಂದ ದಾಹವು ಹುಟ್ಟದಿರುವಂತೆ ಅಗ್ನಿಕಣಗಳಿಂದಲೂ ದಾಹವು ಹುಟ್ಟಬಾರದು. ಆದರೆ ಅಗ್ನಿಕಣವು ಅರಳೆ ಮುಂತಾದ ರಂಜಕವಸ್ತುವನ್ನು ಸೇರಿ ದಾಹ ವುಂಟಾಗುವುದು ಸರ್ವಶ್ರುತ. ಆದ್ದರಿಂದ ಅಗ್ನಿ–ಅಗ್ನಿಕಣಗಳಿಗೆ ಭೇದಾಭೇದವನ್ನು ಒಪ್ಪುವುದು ಅಗತ್ಯ. ಇದರಂತೆ ಬ್ರಹ್ಮನಿಗೂ ತದಂಶರೂಪಜೀವರಿಗೂ ಅತ್ಯಂತ ಅಭೇದವು ಸಿದ್ಧಿಸುವುದಿಲ್ಲ. ಹಾಗೆ ಸಿದ್ಧಿಸಿದರೆ ಬ್ರಹ್ಮದಲ್ಲಿರುವ ಸರ್ವಜ್ಞತ್ವಾದಿಗಳೂ ಜೀವಿಗಳಲ್ಲಿಯೂ ಇರಬೇಕಾಗುತ್ತದೆ. ಇನ್ನು ಅವರಿಗೆ ಅತ್ಯಂತ ಭೇದವನ್ನೂ ಒಪ್ಪಲಾಗುವುದಿಲ್ಲ. ಹಾಗೆ ಒಪ್ಪಿದರೆ, ಬ್ರಹ್ಮಭಿನ್ನವಾದ ಘಟಾದಿಗಳಿಂದ ಜ್ಞಾನವು ಉದಿಸದಿರುವಂತೆ ಜೀವಿಗಳಿಗೂ ಜ್ಞಾನವು ಇರಬಾರದು ಎಂದಾಗುತ್ತದೆ. ಆದರೆ ಜೀವರು ಘಟಪಟಾದಿಜ್ಞಾನವುಳ್ಳವರೆಂಬುದು ಎಲ್ಲರ ಅನುಭವದಲ್ಲಿದೆ. ಆದ್ದರಿಂದ ಈ ಸಿದ್ಧಾಂತವು ಭೇದಾಭೇದವಾದವನ್ನು ಅಂಗೀಕರಿಸಿದೆ.

ಶ್ರುತಿಗಳಲ್ಲಿ 'ದ್ವಾಸುಪರ್ಣಾ' (ಮುಂ. ೩.೩. ೧) ಮುಂತಾದ ಶ್ರುತಿಗಳು ಶಿವ–ಜೀವರಿಗೆ ಭೇದ (ದ್ವೈತ)ವನ್ನು ಹೇಳಿವೆ. ಅದರಂತೆ 'ತತ್ತ್ವಮಸಿ' (ಛಾಂ ೬–೮–೭)'ಅಯಮಾತ್ಮಾ ಬ್ರಹ್ಮ' (ಬೃ೨–೫–೧೯) ಮುಂತಾದುವು ಅದ್ವೈತ (ಅಭೇದ)ವನ್ನು ಹೇಳಿವೆ. ಈ ಎರಡೂ ಬಗೆಯ ಶ್ರುತಿಗಳಿಗೂ ಸಮನ್ವಯವನ್ನು ಈ ಸಿದ್ಧಾಂತವು ಒಪ್ಪಿದೆ. ಆದ್ದರಿಂದಲೇ

ಶ್ರೀಕರ ಭಾಷ್ಯದಲ್ಲಿ "ವೀರಶೈವೈಕಸಿದ್ಧಾಂತೇ ಸರ್ವಶ್ರುತಿ ಸಮನ್ವಯಃ" ಎಂದು ಭೇದಾಭೇದವನ್ನು ಸಮರ್ಥಿಸಲಾಗಿದೆ. ಕ್ರಿಯಾಸಾರದಲ್ಲಿ—

ಅಗ್ನಿಸ್ಫುಲಿಂಗಯೋರ್ನಾಸ್ತಿ ಯಥಾಽಭೇದಃ ಸ್ವರೂಪತಃ ।
ಅಗ್ನಿತ್ವೇನ ಕಣತ್ವೇನ ಭೇದೋಽಪಿ ಸ್ಫುರತಿ ಕ್ವಚಿತ್
ಯಥಾಽಹಿಕುಂಡಲಮಿತಿ ಭೇದಾಽಭೇದೌ ತಥಾಽತ್ರ ಚ ॥

(ಕ್ರಿ. ಸಾರ. ಉ. ೧)

ಎಂಬ ಬ್ರಹ್ಮಸೂತ್ರಕಾರಿಕೆಯಲ್ಲಿ 'ಅಗ್ನಿ-ಸ್ಫುಲಿಂಗ' 'ಅಹಿ-ಕುಂಡಲ' ದೃಷ್ಟಾಂತಗಳಿಂದ ಒಂದೇ ವಸ್ತುವಿನಲ್ಲಿ ಭೇದ ಮತ್ತು ಅಭೇದಗಳಿಗೆ ವಿರೋಧವಿಲ್ಲವೆಂದು ನಿರೂಪಿಸಲಾಗಿದೆ. ಶ್ರೀಕರಭಾಷ್ಯದಲ್ಲಿ "ಭಕ್ತಾದಿಶರಣಾಂತವಾದ ಐದು ಸ್ಥಲಗಳಲ್ಲಿ ಶಿವ-ಜೀವರಿಗೆ ಭೇದ ಸಿದ್ಧಿಯೂ, ಐಕ್ಯ ಸ್ಥಲದಲ್ಲಿ ಅದ್ವೈತಸಿದ್ಧಿಯೂ ಘಟಿಸುವುದು" (ಶ್ರೀಕರಭಾಷ್ಯವು ೧೭೭. ಸಂ ೨) ಎಂದು ಹೇಳಿದೆ. ಕೀಟವು ನಿರಂತರ ಭ್ರಮರಚಿಂತನದಿಂದ[1] ಗುಣರೂಪಗಳಲ್ಲಿ ಭ್ರಮರವೇ ಆಗುವಂತೆ ಶಿವದೀಕ್ಷಾಸಂಸ್ಕಾರದಿಂದ ಶುದ್ಧನಾದ ಅಂಗನೆನಿಸಿದ ಜೀವನು ಷಟ್‌ಸ್ಥಲ ಸಾಧನೆಯಿಂದ ಸರ್ವಜ್ಞತ್ವಾದಿಗುಣ ಪರಿಪೂರ್ಣ ಶಿವನೇ ಆಗಿ ಲಿಂಗಾಂಗ ಸಾಮರಸ್ಯರೂಪ ಮುಕ್ತಿಯನ್ನೈದುವನು.

## ಸೃಷ್ಟಿ ಪ್ರಕ್ರಿಯೆ ಮತ್ತು ಕಾರಣವಾದ
## ಪ್ರವೃತ್ತಿಮಾರ್ಗ

ಆಗಮಗಳಲ್ಲಿ ಶಿವನಿಗೆ ಮೂರು ಅವಸ್ಥೆಗಳು ಉಕ್ತವಾಗಿವೆ. ಅವು ಕ್ರಮವಾಗಿ ಸ್ವಸ್ಥಾ-ಕ್ಷುಭಿತಾ-ವಿಶ್ವವಿಸ್ತಾರಾ ಎಂದು ಹೇಳಲಾಯಿತು. ಪ್ರಳಯವು ಶಿವನ ಸ್ವಸ್ಥಾವಸ್ಥೆ. ಪ್ರಳಯದಲ್ಲಿ ಶಿವನು ತಾನೇ ತಾಗಿರುವುದು ಅವನ ಸ್ವಸ್ಥಾವಸ್ಥೆ. ಇದು ಶಿವಶರಣರು ಹೇಳುವ ಸಹಜಸ್ಥಿತಿ.

ಈ ಸ್ವಸ್ಥಾವಸ್ಥೆಯಲ್ಲಿ ಮತ್ತೆ ಶೂನ್ಯ, ನಿಶ್ಶೂನ್ಯ, ಬಯಲು ಮತ್ತು ನಿರ್ವಯಲು ಎಂಬ ಪ್ರಭೇಧಗಳನ್ನು ಶಿವಶರಣರು ಕಂಡಿದ್ದಾರೆ. ಇದು ಭಾರತೀಯ ದರ್ಶನಕ್ಕೆ ಶಿವಶರಣರ ವಿಶಿಷ್ಟಕೊಡುಗೆ. ಈ ಅಂಶವನ್ನು ಬ್ರಹ್ಮಸ್ವರೂಪ ನಿರೂಪಣೆಯಲ್ಲಿ ಸೂಚಿಸಲಾಗಿದೆ. ಸರ್ವ ಶೂನ್ಯ ನಿರಾಲಂಬ ಎಂದಿರುವುದು ಈ ಸ್ಥಿತಿಗಳನ್ನೇ.

---

೧ ಭ್ರಮದ್ ಭ್ರಮರ ಚಿಂತಾಯಾಂ ಕೀಟೋಽಪಿ ಭ್ರಮರಾಯತೇ ॥
ಮಾನವಃ ಶಿವಯೋಗೇನ ಶಿವೋ ಭವತಿ ಕೇವಲಂ ॥ (—ಶಿವಾಗಮ)

ಪರಬ್ರಹ್ಮನಿಗೆ ಸೃಜಿಸಬೇಕೆಂಬ ಬಯಕೆಯಾಗುವುದು ಕ್ಷುಭಿತಾವಸ್ಥೆ. 'ಬಹುಸ್ಯಾಂ ಪ್ರಜಾಯೇಯ', 'ಸ ಏಕಾಕೀ ನ ರಮತೇ ಸ ದ್ವಿತೀಯಮೈಚ್ಛತ್', 'ಲೋಕವತ್ತುಲೀಲಾ ಕೈವಲ್ಯಂ' ಮುಂತಾದ ಶ್ರುತಿ ಸೂತ್ರಗಳು ಈ ಸ್ಥಿತಿಯನ್ನು ವರ್ಣಿಸಿವೆ.

ಸಿದ್ಧಲಿಂಗ ಶಿವಯೋಗಿಗಳು-ತತ್ತ್ವಾತ್ಮಕವಾದ ಸೃಷ್ಟಿಯ ಬಗೆಯನ್ನು ಕುರಿತು—

ಲೋಕಾದಿ ಲೋಕಂಗಳೇನೂ ಇಲ್ಲದಂದು
ಏಕಮೇವ ಪರಬ್ರಹ್ಮವು ತಾನೊಂದೇ ನೋಡಾ ।
ಅದು ತನ್ನನ್ನು ನೆನೆಯದೆ ಇದಿರನು ನೆನೆಯದೆ
ನೆನಹು ನಿಷ್ಪತ್ತಿಯಹಾಗಿದ್ದಿತ್ತು ನೋಡಾ ।
ಆ ನೆನಹಿಲ್ಲದ ಘನವಸ್ತು ನೆನೆದ ನೆನಹೇ
ಸಾವಯವವಾಗಿ ಚಿತ್ತೆನಿಸಿ ಕೊಂಡಿತ್ತು ॥

ಎಂದು ಹೇಳಿರುವುದು ಗ್ರಾಹ್ಯವಾಗಿದೆ. ಶಿವಯೋಗಿಗಳ ವಚನದಂತೆ ಸರ್ವಶೂನ್ಯ ನಿರಾಲಂಬ ಸ್ಥಲದಿಂದ ಸೃಷ್ಟಿಯ ಉನ್ಮುಖಸ್ಥಿತಿಯ ಕಲ್ಪನೆ ಸ್ಪಷ್ಟವಾಗುತ್ತದೆ. ಈ ಉನ್ಮುಖಸ್ಥಿತಿಯೇ ಕ್ಷುಭಿತಾವಸ್ಥೆ[1] ಎಂದರೆ ಬ್ರಹ್ಮದಲ್ಲಿ ಅವ್ಯಕ್ತವಾಗಿ ಅಡಗಿದ್ದ ಚಿಚ್ಛಕ್ತಿಯ ಸ್ಫುರಣೆ. ಇದು ಸೃಷ್ಟಿಯ ಆರಂಭ ಸೂಚನೆ. ಮೂರನೆಯದು 'ವಿಶ್ವವಿಸ್ತಾರಾ'ವಸ್ಥೆ. ಇಲ್ಲಿ ಶಿವನು ಷಟ್ ತ್ರಿಂಶತ್ ತತ್ತ್ವಾತ್ಮಕವಾಗಿ ಪರಿಣಮಿಸುವನು. ಈ ಕ್ರಮವು ಹೀಗಿದೆ—

ತತ್ತ್ವಗಳು ೩೬

ಶುದ್ಧತತ್ತ್ವಗಳು—೫. ಶಿವ ಶಕ್ತಿ-ಸದಾಶಿವ-ಈಶ್ವರ-ಶುದ್ಧವಿದ್ಯಾ
ಮಿಶ್ರತತ್ತ್ವಗಳು ೭. ಮಾಯಾ-ಕಲಾ-ವಿದ್ಯಾ-ರಾಗ-ಕಾಲ-ನಿಯತಿ-ಪುರುಷ.
ಅಶುದ್ಧತತ್ತ್ವಗಳು ೨೪. ಪ್ರಕೃತಿ

| | |
|---|---|
| ಬುದ್ಧಿ—ಅಹಂಕಾರ—ಮನಸ್ಸು— | ಅಂತಃಕರಣತ್ರಯ |
| ಶ್ರೋತ್ರ—ತ್ವಕ್—ನೇತ್ರ—ಜಿಹ್ವಾ—ಘ್ರಾಣ— | ಜ್ಞಾನೇಂದ್ರಿಯ ಪಂಚಕ. |
| ವಾಕ್—ಪಾಣಿ—ಪಾದ—ಪಾಯು—ಉಪಸ್ಥ— | ಕರ್ಮೇಂದ್ರಿಯ ಪಂಚಕ |
| ಶಬ್ದ—ಸ್ಪರ್ಶ—ರೂಪ—ರಸ—ಗಂಧ— | ತನ್ಮಾತ್ರ ಪಂಚಕ |
| ಆಕಾಶ—ವಾಯು—ವಹ್ನಿ—ಜಲ—ಪೃಥಿವೀ— | ಭೂತಪಂಚಕ |

---

೧ 'ಕ್ಷುಭಿ ಕಿಂಚಿತ್ ಚಲನೇ'

## ಸೃಷ್ಟಿಕ್ರಮಂ

ಪರಶಿವಬ್ರಹ್ಮವು ಷಟ್‌ತ್ರಿಂಶತ್ ತತ್ತ್ವಾತ್ಮಕವಾಗಿ ಪರಿಣಮಿಸುವ ಕ್ರಮವು ಹೀಗಿದೆ–

ಶಿವನ ಇಚ್ಛಾ (ವಿಮರ್ಶ) ಶಕ್ತಿಗೆ ಜ್ಞಾನಶಕ್ತಿಯು ಅಂತರಂಗ ; ಕ್ರಿಯಾಶಕ್ತಿಯು ಬಹಿರಂಗ. ಪರಶಿವ ಬ್ರಹ್ಮವು ಇಚ್ಛಾಶಕ್ತಿಯು ಅಂತರಂಗವಾದ ಜ್ಞಾನಶಕ್ತಿಯನ್ನು ಪ್ರವೇಶಿಸಿ 'ಸರ್ವಜ್ಞೋಽಹಂ' ಎಂಬ ಅಭಿಮಾನ ತಳೆಯಲು 'ಶಿವತತ್ತ್ವ' ವೆನಿಸುತ್ತದೆ. ಅದೇ ಬ್ರಹ್ಮವು ಇಚ್ಛಾಶಕ್ತಿಯು ಬಹಿರಂಗವೆನಿಸಿದ ಕ್ರಿಯಾಶಕ್ತಿಯನ್ನು ಪ್ರವೇಶಿಸಿ, ಸರ್ವಕರ್ತಾಽಹಂ' ಎಂಬ ಅಭಿಮಾನತಳೆಯಲು 'ಶಕ್ತಿತತ್ತ್ವ' ವೆನಿಸುತ್ತದೆ.

ಮುಂದೆ ಶಕ್ತಿತತ್ತ್ವವು ಇಚ್ಛಾಶಕ್ತಿಯು ಅಂತರಂಗ ಜ್ಞಾನಶಕ್ತಿಯನ್ನು ಪ್ರವೇಶಿಸಿ 'ಅಹಮಿದಂ' ಎಂಬ ಅಭಿಮಾನ ತಳೆದು ಸದಾಶಿವತತ್ತ್ವವಾಗಿಯೂ, ಇಚ್ಛಾಶಕ್ತಿಯ ಬಹಿರಂಗ ಕ್ರಿಯಾಶಕ್ತಿಯನ್ನು ಪ್ರವೇಶಿಸಿ 'ಅಹಮಿದಂ' ಎಂಬ ಅಭಿಮಾನ ತಳೆದು 'ಈಶ್ವರತತ್ತ್ವ' ವಾಗಿಯೂ ಪರಿಣಮಿಸುತ್ತದೆ.

ಮತ್ತೆ ಈ ಶಕ್ತಿತತ್ತ್ವವು 'ಸಾಗರ ತರಂಗನ್ಯಾಯ'ದಂತೆ ಅಭೇದಹೊಂದಿ 'ಅಹಮಿದಂ' ಎಂದರೆ 'ಅಹಂ' ಎಂಬ ಅಹಂಕಾರಕ್ಕೂ 'ಇದಂ' ಎಂಬ ಪ್ರಪಂಚಕ್ಕೂ ಅಭೇದ ಜ್ಞಾನಪಡೆದು 'ಶುದ್ಧವಿದ್ಯಾತತ್ತ್ವ'ವೆನಿಸುತ್ತದೆ.

ಶುದ್ಧವಿದ್ಯಾತತ್ತ್ವವು ಮಯೂರಾಂಡರಸನ್ಯಾಯದಂತೆ ಭಾವೀಪ್ರಪಂಚ ನಿರ್ಮಾಣಕ್ಕೆ ಕಾರಣವಾದ ಸೂಕ್ಷ್ಮಪದಾರ್ಥಗಳಲ್ಲಿ ಅನ್ಯೋನ್ಯಾಭಾವರೂಪ ಭೇದಬುದ್ಧಿ ತಳೆದು 'ಮಾಯಾತತ್ತ್ವ'ವೆನಿಸುತ್ತದೆ.

ಮುಂದಿನ ಕಲಾ-ಅವಿದ್ಯಾದಿ ಐದು ತತ್ತ್ವಗಳು ಪುರುಷತತ್ತ್ವಕ್ಕೆ ಆವರಕ(ಕಂಚುಕ)ಗಳು. ಇವುಗಳಿಂದ ಆವೃತವಾದ ಪುರುಷತತ್ತ್ವವು ಕಂಚುಕಿ. ಪರಶಿವನ ಇಚ್ಛಾಶಕ್ತಿಯೋಗದಿಂದ ಆವಿರ್ಭವಿಸಿದ ಶಿವಾಂಶವೇ ಮಾಯಾಶಕ್ತಿಯಲ್ಲಿ ಪ್ರವೇಶಿಸಿ 'ಪುರುಷತತ್ತ್ವ'ವೆನಿಸಿತು. ಈ ಪುರುಷತತ್ತ್ವಕ್ಕೆ ಮಾಯಾಮಲ ಸಂಬಂಧದಿಂದ ಅಜ್ಞಾನವುದಿಸಿ ಅದು ಜೀವವೆನಿಸಿತು.

## ಮಲಾವರಣ

ಶಿವಾಂಶವೇ ಜೀವವಾದ್ದರಿಂದ ಜೀವನಿಗೆ ಶಿವನಲ್ಲಿದ್ದ ಪೂರ್ಣತ್ವವು ಅಜ್ಞಾನದಿಂದ ಮರೆಯಾಗಿ 'ಅಪೂರ್ಣೋಽಹಂ' ಎಂಬ ಅನುಭವವಾಗಿ 'ಆಣವಮಲವೂ', ಸರ್ವಜ್ಞತ್ವವು ಮರೆಯಾಗಿ 'ಕಿಂಚಿಜ್ಞೋಽಹಂ' ಎಂಬ ಅನುಭವವುಂಟಾಗಿ ಮಾಯಾಮಲವೂ, ಸರ್ವಕರ್ತೃತ್ವವು ಮರೆಯಾಗಿ 'ಕಿಂಚತ್ಕರ್ತಾಽಹಂ, ಎಂಬ ಅನುಭವವುಂಟಾಗಿ 'ಕಾರ್ಮಮಲ'ವೂ ಆವರಿಸುತ್ತವೆ

ಪುರುಷನ ಕಿಂಚಿತ್‌ಕರ್ತೃತ್ವ ಸ್ವರೂಪಶಕ್ತಿಯೇ 'ಕಲಾತತ್ತ್ವ'. ಕಿಂಚಿಜ್ಞತ್ವ ರೂಪ ಶಕ್ತಿಯೇ 'ಅವಿದ್ಯಾತತ್ತ್ವ', 'ಅಪೂರ್ಣತ್ವಶಕ್ತಿಯೇ' 'ರಾಗತತ್ತ್ವ', 'ಅನಿತ್ಯತ್ವರೂಪ ಶಕ್ತಿಯೇ' 'ಕಾಲತತ್ತ್ವ', ಅವ್ಯಾಪಕತ್ವಶಕ್ತಿಯೇ 'ನಿಯತಿತತ್ತ್ವ', ಕಾರ್ಯೋನ್ಮುಖ್ಯ ಗರ್ಭಿತವಾದ ಇಚ್ಛಾಶಕ್ತಿಯು ಸ್ವಗತಜ್ಞಾನಶಕ್ತಿ ಕ್ರಿಯಾಶಕ್ತಿಗಳಲ್ಲಿ ಅನ್ಯೋನ್ಯಾಭಾವರೂಪ ಭೇದಬುದ್ಧಿ ಪ್ರಧಾನ ಮಾಯಾತತ್ತ್ವದಲ್ಲಿ ಪ್ರತಿಸ್ಫುರಿಸಲು ಪ್ರಕೃತಿತತ್ತ್ವವೆನಿಸುತ್ತದೆ. ಈ ಪ್ರಕೃತಿತತ್ತ್ವವೇ ಸುಖ-ದುಃಖ-ಮೋಹಗಳಿಗೆ ಕಾರಣವಾದ ಸತ್ವರಜಸ್ತಮೋಗುಣ ಸಾಮ್ಯಾವಸ್ಥೆ ತಳೆದು 'ಪ್ರಕೃತಿತತ್ತ್ವ'ವೆನಿಸುತ್ತದೆ. ಇದು ಮುಮ್ಮುಂದಿನ ಬುದ್ಧಿ-ಅಹಂಕಾರದಿಂದ ಹಿಡಿದು ಪೃಥಿವೀತತ್ತ್ವದವರೆಗಿನ ೨೩ ತತ್ತ್ವಗಳಿಗೆ ಕಾರಣವೆನಿಸಿ, ಚರಾಚರಾತ್ಮಕ ಸೃಷ್ಟಿರಚನೆ ಏರ್ಪಟ್ಟಿತು. ಈ ಕ್ರಮವನ್ನು —

ಶಕ್ತ್ಯಂಡವ್ಯುತ್ಪಿಂಡಮುಪಾದದಾನೋ
ಮಾಯಾಂಡಚಕ್ರಭ್ರಮಣಕ್ರಮೇಣ ।
ಮೂಲಾಂಡದಂಡೇನ ಮಹಂರ್ವಿಧತ್ತೇ
ಬ್ರಹ್ಮಾಂಡಭಾಂಡಂ ಭಗವಾನ್ ಕುಲಾಲಃ ॥

ಎಂಬ ಅಭಿಯುಕ್ತೋಕ್ತಿಯು ಸುಂದರವಾಗಿ ಚಿತ್ರಿಸಿದೆ.

## ಪ್ರಮಾಣಗಳು

ವೀರಶೈವವು ಮುವತ್ತಾರು ತತ್ತ್ವಗಳು ಮತ್ತು ತತ್ತ್ವಾತೀತ ವಸ್ತುವಿನ ಸ್ವರೂಪ ಸಂಬಂಧಗಳನ್ನು ಯಾವ ಪ್ರಮಾಣಗಳಿಂದ ನಿರ್ಧರಿಸುವುದೆಂಬುದು ಮಹತ್ವದ ವಿಷಯ. ಏಕೆಂದರೆ ಷಟ್‌ಸ್ಥಲವು ಅನುಭವಪ್ರಮಾಣ ಸಿದ್ಧಾಂತವಾದರೂ ಅಲ್ಲಿ ಶಾಸ್ತ್ರೀಯ ತತ್ತ್ವ ವಿವೇಚನೆಯಿದೆ. ಇಲ್ಲಿ ಪ್ರಮೆ ಉಂಟು. ಯಥಾರ್ಥಜ್ಞಾನಕ್ಕೆ ಪ್ರಮೆ ಎನ್ನಲಾಗಿದೆ. ನಿತ್ಯಾನಿತ್ಯ ವಸ್ತುಗಳ ಸ್ವರೂಪವನ್ನು ತಿಳಿದು ಕಡೆಗೆ ಸರ್ವಶೂನ್ಯನಿರಾಲಂಬವಾದ ಸಹಜಸ್ಥಿತಿಯೇ ಮೂಲ ಎಂಬುದು ಅನುಭವ ವೇದ್ಯವಾಗುತ್ತದೆ. ಇದೇ ಪ್ರಮೆ. ಇದಕ್ಕೆ ಆಶ್ರಯನಾದವನು ಪ್ರಮಾತೃ (ಜೀವಾತ್ಮ) ವು. ವಿಷಯವು ಪ್ರಮೇಯ. ಅಲ್ಲಿ ಉಂಟಾಗುವ ಜ್ಞಾನವೇ ಪ್ರಮಿತಿ. ಹೀಗೆ ಪ್ರಮಾಣ, ಪ್ರಮೇಯ. ಪ್ರಮಾತೃ, ಪ್ರಮಿತಿ ಎಂಬ ನಾಲ್ಕು ಬಗೆಯಲ್ಲಿ ವಸ್ತುವನ್ನು ನಿರ್ಣಯಿಸಲಾಗುತ್ತದೆ. ಇಲ್ಲಿ ಅನುಬಂಧ ಚತುಷ್ಟಯವುಂಟು. ಲಿಂಗ-ಅಂಗಗಳಲ್ಲಿ ಸಾಮರಸ್ಯವನ್ನು ಪಡೆವುದೇ ವಿಷಯ. ಮಲತ್ರಯವನ್ನು ಕಳೆದು ಮುಕ್ತನಾಗುವುದೇ ಪ್ರಯೋಜನ. ಅಷ್ಟಾವರಣ-ಪಂಚಾಚಾರನಿಷ್ಠನಾಗಿ ಷಟ್‌ಸ್ಥಲ ನಿರತನಾದವನೇ ಅಧಿಕಾರಿ. ಲಿಂಗಾಂಗಸಾಮರಸ್ಯವೆಂಬ ವಿಷಯಕ್ಕೂ ಶಾಸ್ತ್ರಕ್ಕೂ ಇರುವ ಪ್ರತಿಪಾದ್ಯಪ್ರತಿಪಾದಕ ಭಾವವೇ ಸಂಬಂಧ. ಹೀಗೆ ಮಾಡುವ ತತ್ತ್ವವಿವೇಚನೆಗೆ ಪ್ರಮಾಣಗಳು ಅಗತ್ಯ.

ವೀರಶೈವವು ಪ್ರತ್ಯಕ್ಷ, ಅನುಮಾನ ಮತ್ತು ಶಬ್ದ ಎಂಬ ಮೂರು ಪ್ರಮಾಣಗಳನ್ನು

## ಸೃಷ್ಟಿಕ್ರಮಂ

ಪರಶಿವಬ್ರಹ್ಮವು ಷಟ್‌ತ್ರಿಂಶತ್ ತತ್ತ್ವಾತ್ಮಕವಾಗಿ ಪರಿಣಮಿಸುವ ಕ್ರಮವು ಹೀಗಿದೆ–

ಶಿವನ ಇಚ್ಛಾ (ವಿಮರ್ಶ) ಶಕ್ತಿಗೆ ಜ್ಞಾನಶಕ್ತಿಯು ಅಂತರಂಗ ; ಕ್ರಿಯಾಶಕ್ತಿಯು ಬಹಿರಂಗ. ಪರಶಿವ ಬ್ರಹ್ಮವು ಇಚ್ಛಾಶಕ್ತಿಯು ಅಂತರಂಗವಾದ ಜ್ಞಾನಶಕ್ತಿಯನ್ನು ಪ್ರವೇಶಿಸಿ 'ಸರ್ವಜ್ಞೋಽಹಂ' ಎಂಬ ಅಭಿಮಾನ ತಳೆಯಲು 'ಶಿವತತ್ತ್ವ' ವೆನಿಸುತ್ತದೆ. ಅದೇ ಬ್ರಹ್ಮವು ಇಚ್ಛಾಶಕ್ತಿಯ ಬಹಿರಂಗವೆನಿಸಿದ ಕ್ರಿಯಾಶಕ್ತಿಯನ್ನು ಪ್ರವೇಶಿಸಿ, ಸರ್ವಕರ್ತಾಽಹಂ' ಎಂಬ ಅಭಿಮಾನತಳೆಯಲು 'ಶಕ್ತಿತತ್ತ್ವ' ವೆನಿಸುತ್ತದೆ.

ಮುಂದೆ ಶಕ್ತಿತತ್ತ್ವವು ಇಚ್ಛಾಶಕ್ತಿಯ ಅಂತರಂಗ ಜ್ಞಾನಶಕ್ತಿಯನ್ನು ಪ್ರವೇಶಿಸಿ 'ಅಹಮಿದಂ' ಎಂಬ ಅಭಿಮಾನ ತಳೆದು ಸದಾಶಿವತತ್ತ್ವವಾಗಿಯೂ, ಇಚ್ಛಾಶಕ್ತಿಯ ಬಹಿರಂಗ ಕ್ರಿಯಾಶಕ್ತಿಯನ್ನು ಪ್ರವೇಶಿಸಿ 'ಅಹಮಿದಂ' ಎಂಬ ಅಭಿಮಾನ ತಳೆದು 'ಈಶ್ವರತತ್ತ್ವ' ವಾಗಿಯೂ ಪರಿಣಮಿಸುತ್ತದೆ.

ಮತ್ತೆ ಈ ಶಕ್ತಿತತ್ತ್ವವು 'ಸಾಗರ ತರಂಗನ್ಯಾಯ'ದಂತೆ ಅಭೇದಹೊಂದಿ 'ಅಹಮಿದಂ' ಎಂದರೆ 'ಅಹಂ' ಎಂಬ ಅಹಂಕಾರಕ್ಕೂ 'ಇದಂ' ಎಂಬ ಪ್ರಪಂಚಕ್ಕೂ ಅಭೇದ ಜ್ಞಾನಪಡೆದು 'ಶುದ್ಧವಿದ್ಯಾತತ್ತ್ವ'ವೆನಿಸುತ್ತದೆ.

ಶುದ್ಧವಿದ್ಯಾತತ್ತ್ವವು ಮಯೂರಾಂಡರಸನ್ಯಾಯದಂತೆ ಭಾವೀಪ್ರಪಂಚ ನಿರ್ಮಾಣಕ್ಕೆ ಕಾರಣವಾದ ಸೂಕ್ಷ್ಮಪದಾರ್ಥಗಳಲ್ಲಿ ಅನ್ಯೋನ್ಯಾಭಾವರೂಪ ಭೇದಬುದ್ಧಿ ತಳೆದು 'ಮಾಯಾತತ್ತ್ವ'ವೆನಿಸುತ್ತದೆ.

ಮುಂದಿನ ಕಲಾ-ಅವಿದ್ಯಾದಿ ಐದು ತತ್ತ್ವಗಳು ಪುರುಷತತ್ತ್ವಕ್ಕೆ ಆವರಕ(ಕಂಚುಕ)ಗಳು ಇವುಗಳಿಂದ ಆವೃತವಾದ ಪುರುಷತತ್ತ್ವವು ಕಂಚುಕಿ. ಪರಶಿವನ ಇಚ್ಛಾಶಕ್ತಿಯೋಗದಿಂದ ಆವಿರ್ಭವಿಸಿದ ಶಿವಾಂಶವೇ ಮಾಯಾಶಕ್ತಿಯಲ್ಲಿ ಪ್ರವೇಶಿಸಿ 'ಪುರುಷತತ್ತ್ವ'ವೆನಿಸಿತು. ಈ ಪುರುಷತತ್ತ್ವಕ್ಕೆ ಮಾಯಾಮಲ ಸಂಬಂಧದಿಂದ ಅಜ್ಞಾನವುದಿಸಿ ಅದು ಜೀವಿವೆನಿಸಿತು.

## ಮಲಾವರಣ

ಶಿವಾಂಶವೇ ಜೀವವಾದ್ದರಿಂದ ಜೀವನಿಗೆ ಶಿವನಲ್ಲಿದ್ದ ಪೂರ್ಣತ್ವವು ಅಜ್ಞಾನದಿಂದ ಮರೆಯಾಗಿ 'ಅಪೂರ್ಣೋಽಹಂ' ಎಂಬ ಅನುಭವವಾಗಿ 'ಆಣವಮಲವೂ', ಸರ್ವಜ್ಞತ್ವವು ಮರೆಯಾಗಿ 'ಕಿಂಚಿಜ್ಞೋಽಹಂ' ಎಂಬ ಅನುಭವವುಂಟಾಗಿ ಮಾಯಾಮಲವೂ, ಸರ್ವಕರ್ತೃತ್ವವು ಮರೆಯಾಗಿ 'ಕಿಂಚತ್ಕರ್ತಾಽಹಂ, ಎಂಬ ಅನುಭವವುಂಟಾಗಿ 'ಕಾರ್ಮಮಲ'ವೂ ಆವರಿಸುತ್ತವೆ

ಅಂಗನು ಸ್ವಸ್ವರೂಪವಾದ ಲಿಂಗವನ್ನು ಆರಾಧಿಸಿದಾಗ ಆ ಆರಾಧನೆಯೊಳಗಿನ ಭಕ್ತಿಯೇ ಬೆಳೆದು ಲಿಂಗವಾಗಿ, ಕಡೆಗೆ ಅದೇ ಸಚ್ಚಿದಾನಂದ ಸ್ವರೂಪವನ್ನು ಪಡೆಯುತ್ತದೆ. ಈ ಭಕ್ತಿಯು ಎರಡಿಲ್ಲದ ಕೂಟ ವಿಲಕ್ಷಣ. ಅದು ತನ್ನನ್ನು ತಾನು ಅರ್ಚಿಸಿಕೊಳ್ಳುವ, ಪೂಜಿಸಿಕೊಳ್ಳುವ. ತನ್ನನ್ನೇ ತಾನು ಕಂಡುಕೊಳ್ಳುವ ಭಕ್ತಿಯು ಸ್ವಲೀಲಾನಂದವಿಲಾಸ. ಆದುದರಿಂದ ವೀರಶೈವದ ಮೋಕ್ಷಸ್ವರೂಪವೆಂದರೆ ಸಹಜ, ಬಯಲು, ಶೂನ್ಯ, ನಿಶ್ಶೂನ್ಯ ಎಂದದ್ದು.

ಇಲ್ಲಿ ಆತ್ಮನು ಸ್ವಲೀಲಾನಂದವಿಲಾಸದಲ್ಲಿರುವನು. ಆ ಸ್ವಲೀಲಾನಂದವಿಲಾಸದಲ್ಲಿರುವ ಕ್ರಿಯೆಯೇ ಭಕ್ತಿ. ಸ್ವಲೀಲಾನಂದವಿಲಾಸಕ್ರಿಯೆಯೆಂದರೆ ಜ್ಞಾನ. ಎಂದರೆ, ಭಕ್ತಿಯೇ ಜ್ಞಾನವೆಂದು ಅರ್ಥವಾಯಿತು. ಇದನ್ನೇ ಕ್ರಿಯಾಜ್ಞಾನಸಾಮರಸ್ಯ ಎಂದು ಹೇಳುವರು. ಇದೇ ಮೋಕ್ಷ. ಈ ಭಕ್ತಿಯನ್ನು ವೀರಶೈವವು ಪಂಚಮ ಪುರುಷಾರ್ಥವೆಂದು ಬಣ್ಣಿಸಿದೆ.

ಭಕ್ತಿಶ್ರೈಶಿವಪ್ರಸಾದಜನನೀಭವನಂ ಶಿವನ ಪ್ರಸಾದವಾ
ಭಕ್ತಿಗೆ ಜನ್ಮಭೂಮಿವಿವಂಲಾಂಕುರ ಬೀಜದವೋಲ್ ಪರಸ್ಪರಂ
ವ್ಯಕ್ತಮಿದಿಂತು ನೋಳ್ಪೊಡದು ತಾನೆ ನಿರಂತರಮಪ್ಪ ಮುಕ್ತಿಯಾ
ಮುಕ್ತಿಯೆ ಶುದ್ಧನಿಷ್ಕಳನಿಜೈಕ್ಯಪದಂ

ಎಂದು ಮುಗ್ಗಮಾಯಿದೇವಾಚಾರ್ಯರು ಭಕ್ತಿಯ ಸ್ವರೂಪವನ್ನು ಬಣ್ಣಿಸಿದ್ದಾರೆ. ಪಂಚಮ ಪುರುಷಾರ್ಥವೆನಿಸಿದ ಈ ಭಕ್ತಿಯು ಕ್ರಿಯಾಜ್ಞಾನ ಸಾಮರಸ್ಯವನ್ನು ಪಡೆದಿರುತ್ತದೆ. ಇದು ಮೋಕ್ಷ ಸ್ವರೂಪ. ಇದೇ ಲಿಂಗಾಂಗ ಸಾಮರಸ್ಯ.

## ಮೋಕ್ಷೋಪಾಯ

ಪ್ರತಿಯೊಂದು ಮತತತ್ತ್ವ ಸಿದ್ಧಾಂತವೂ ಜೀವ, ಜಗತ್ತು, ದೇವರು ಇವುಗಳ ಸ್ವರೂಪವನ್ನೂ ಪರಸ್ಪರ ಸಂಬಂಧವನ್ನೂ ಪ್ರತಿಪಾದಿಸಿರುವುದಲ್ಲದೆ, ಬಂಧ, ಬಂಧಕಾರಣ, ಮೋಕ್ಷ ಮತ್ತು ಮೋಕ್ಷೋಪಾಯ ಎಂಬ ಚತುರ್ವ್ಯೂಹವನ್ನು ನಿರ್ಣಯಿಸಿದೆ. ಷಟ್‌ಸ್ಥಲಮಾರ್ಗವು ಉಪಾಸನಾಪ್ರಧಾನವಾದ ಸಿದ್ಧಾಂತವಾದರೂ ಇಲ್ಲಿ ತತ್ತ್ವಬದ್ಧವಾಗಿ ಇದನ್ನು ಪ್ರತಿಪಾದಿಸಲಾಗಿದೆ. ಈ ಷಟ್‌ಸ್ಥಲಮಾರ್ಗದಲ್ಲಿ ವೀರಶೈವವು ಬಗೆದಿರುವ ಲಿಂಗಾಂಗಗಳ (ಶಿವ–ಜೀವರ) ಮತ್ತು ಜಗತ್ತಿನ ಸ್ವರೂಪವು ಪ್ರತಿಪಾದಿತವಾಗಿದೆ.

ಷಟ್‌ಸ್ಥಲ ಸಿದ್ಧಾಂತದೃಷ್ಟಿಯಿಂದ ಆಣವಾದಿಮಲತ್ರಯದಿಂದ ಜೀವನು ಬಂಧಿತನಾಗಿರುವುದೇ ಬಂಧ. ಮಲತ್ರಯವೇ ಬಾಧಕಾರಣ. ಜೀವನು ಲಿಂಗಾಂಗಸಾಮರಸ್ಯವನ್ನು ಪಡೆವುದೇ ಮೋಕ್ಷ. ಜೀವನು ಲಿಂಗಧಾರಣಾತ್ಮಕವಾದ ಶಿವದೀಕ್ಷೆಯಿಂದ ಮಲತ್ರಯವಿಮುಕ್ತನಾಗಿ ಷಟ್‌ಸ್ಥಲಮಾರ್ಗದಲ್ಲಿ ನಡೆವುದೇ ಮೋಕ್ಷೋಪಾಯ.

ವೀರಶೈವವು ಇತರ ಶೈವಗಳಂತೆ ೩೬ ತತ್ತ್ವಗಳನ್ನು ಒಪಿದೆಯಾದರೂ ಇಲ್ಲಿ ಆ ತತ್ತ್ವಗಳ ವಿವೇಚನೆಯು ಷಟ್‌ಸ್ಥಲ ಸಿದ್ಧಾಂತಕ್ಕೆ ಅನುಗುಣವಾಗಿ ನಿರೂಪಿತವಾಗಿದೆ. ಇವುಗಳ ವಿಭಾಗಕ್ರಮವು ಹೀಗಿದೆ. ಇಲ್ಲಿ ಶಿವಾದಿ ನಿಯತಿತತ್ತ್ವದವರೆಗಿನ ೧೧ ತತ್ತ್ವಗಳನ್ನು ಲಿಂಗತತ್ತ್ವಗಳೆಂದೂ, ಪುರುಷತತ್ತ್ವದಿಂದ ಪೃಥಿವೀವರೆಗಿನ ೨೫ ತತ್ತ್ವಗಳನ್ನು ಅಂಗತತ್ತ್ವಗಳೆಂದೂ ಕರೆಯಲಾಗಿದೆ.

ಲಿಂಗತತ್ತ್ವಗಳು—ಶಿವತತ್ತ್ವ ೧, ಕರ್ಮಸಾದಾಖ್ಯ, ಕರ್ತೃಸಾದಾಖ್ಯ, ಮೂರ್ತಿಸಾದಾಖ್ಯ, ಅಮೂರ್ತಿಸಾದಾಖ್ಯ, ಶಿವಸಾದಾಖ್ಯ, ೫, ನಿವೃತ್ತಿಕಲೆ, ಪ್ರತಿಷ್ಠಾಕಲೆ, ವಿದ್ಯಾಕಲೆ, ಶಾಂತಿಕಲೆ ಶಾಂತ್ಯತೀತಕಲೆ—೫, ಇವು ಒಟ್ಟಿಗೆ ೧೧ ಲಿಂಗತತ್ತ್ವಗಳು.

ಅಂಗತತ್ತ್ವಗಳು—ಆತ್ಮತತ್ತ್ವ ೧, ಪೃಥಿವ್ಯಾದಿಭೂತಗಳು—೫, ಗಂಧಾದಿ ವಿಷಯಗಳು—೫ ವಾಗಾದಿಕರ್ಮೇಂದ್ರಿಯಗಳು. ೫. ಘ್ರಾಣಾದಿಜ್ಞಾನೇಂದ್ರಿಯಗಳು ೫, ಚಿತ್ತಾದಿ ಅಂತಃಕರಣಗಳು. ೪ ಒಟ್ಟು ೨೫. ಇಲ್ಲಿ ಪಂಚಭೂತಗಳು, ಪಂಚತನ್ಮಾತ್ರಗಳು, ಪಂಚಪ್ರಾಣಗಳನ್ನೂ ಸೇರಿಸಿ ೨೫ ಅಂಗತತ್ತ್ವಗಳೆಂದು ಕೆಲವರು ಹೇಳುತ್ತಾರೆ.

## ಶಿವದೀಕ್ಷೆ

ಮಾನವನು ಅನೇಕ ಜನ್ಮಗಳಲ್ಲಿ ಮಾಡಿದ ಸುಕೃತ ವಿಶೇಷದಿಂದ ಅವನ ಪಾಪವು ಅಳಿದು ಶಿವನಲ್ಲಿ ಭಕ್ತಿ ಉದಿಸುತ್ತದೆ[1]. ನಿಜವನ್ನು ಮರೆತು, ಅಜ್ಞಾನದಲ್ಲಿ ಸಿಲುಕಿ, ಜನನ ಮರಣಗಳಲ್ಲಿ ತೊಳಲುತ್ತಿರುವ ಜೀವನಿಗೆ ಪೂರ್ವಸುಕೃತದಿಂದ ನಿಜದತ್ತದೃಷ್ಟಿ ಹರಿಯುತ್ತದೆ. ಈ ರಸನಿಮಿಷವೇ ಪಿಂಡೋದಯದ ಮಂಗಲ ಮುಹೂರ್ತ. ಪಾಪಮುಕ್ತನೂ ಶುದ್ಧಾಂತಃಕರಣನೂ ಆದ ಬದ್ಧಜೀವಿಗೆ 'ಪಿಂಡ' ಎಂದು ಈ ಸಿದ್ಧಾಂತವು ಕರೆದಿದೆ. ಭಕ್ತಸ್ಥಲದ ಆರಂಭವು ಪಿಂಡಸ್ಥಲದಿಂದಲೇ! ಆಗಲೇ ಆತ್ಮನಿಗೆ ಸ್ವಸ್ವರೂಪವನ್ನು ತಿಳಿಯುವ ಬಯಕೆ ಮೂಡುತ್ತದೆ.

---

೧. ಅನೇಕಜನ್ಮಶುದ್ಧಾನಾಂ ಶ್ರೌತಸ್ಮಾರ್ತಾನುವರ್ತಿನಾಂ ।
ನರಾಣಾಂ ಕ್ಷೀಣಪಾಪಾನಾಂ ಶಿವೇ ಭಕ್ತಿಃ ಪ್ರಜಾಯತೇ ॥

(ಕ್ರಿಯಾಸಾರ ೧–೧೪)

ಶರಣಲಿಂಗಸಂಬಂಧವು ಕ್ಷೀರವ ಮರೆಗೊಂಡಿಪ್ಪ ತುಪ್ಪದಂತೆ ; ಬೀಜದೊಳಗಡಗಿರ್ದ ವೃಕ್ಷದಂತೆ. ಕ್ಷೀರದಲ್ಲಿ ತುಪ್ಪ ಹೊರಬರಬೇಕಾದರೆ, ಬೀಜದೊಳಗಿನ ವೃಕ್ಷ ಹೊರಬರಲು ಅನೇಕ ಸಂಸ್ಕಾರಗಳು ಅಗತ್ಯ. ಅದರಂತೆ ಆತ್ಮನಲ್ಲಿ ಅಡಗಿದ್ದ ಶರಣ–ಲಿಂಗ ಸಂಬಂಧವು ಪ್ರಕಟವಾಗಲು ಅನೇಕ ಸಂಸ್ಕಾರಗಳು ಬೇಕು.

ಶುದ್ಧಾಂತಃಕರಣನಾದ ದೇಹಿಯು ಸ್ವಸ್ವರೂಪವನ್ನು ಅರಿವುದು ಪಿಂಡಜ್ಞಾನ ಸ್ಥಳದಲ್ಲಿ ಪಿಂಡದ ಮಧ್ಯದಲ್ಲಿ ಉದಯಿಸುವ ಜ್ಞಾನವು ಅನುಪಮ. ಆಗ ಅವನು ತಾನು ಸಚ್ಚಿದಾನಂದ ಸ್ವರೂಪದ ಚಿದಂಶವೆಂದು ಆನಂದಿಸುವನಲ್ಲದೆ ಅವನಿಗೆ ಸಂಸಾರದ ಬಗೆಗೆ ಹೇಯ ಭಾವನೆ ಮೂಡುತ್ತದೆ. ಇದು ಸಂಸಾರಹೇಯ ಸ್ಥಳ.

## ಶಕ್ತಿಪಾತ

ಸಂಸಾರಹೇಯ ಭಾವನೆಯಿಂದ ಆತ್ಮನ ಮೇಲೆ ತೀಕ್ಷ್ಣವಾದ ಶಿವಕೃಪಾರೂಪ 'ಶಕ್ತಿಪಾತ' ವಾಗುತ್ತದೆ; ಎಂದರೆ ಯಾರ ಮೇಲೆ ಶಿವಕೃಪೆಯಾಗುತ್ತದೆಯೋ ಅವನಲ್ಲಿ ಮುಕ್ತಿಯಲ್ಲಿ ಔತ್ಸುಕ್ಯ, ಭವಸ್ಥಿತಿಯಲ್ಲಿ ದ್ವೇಷ, ಶಿವಭಕ್ತರಲ್ಲಿ, ಶಿವಶಾಸ್ತ್ರಗಳಲ್ಲಿ ಭಕ್ತಿ, ಶ್ರದ್ಧೆಗಳು ಮೂಡುತ್ತವೆ. ಇದೇ ಶಕ್ತಿಪಾತ. ಅವಿಚ್ಛಿನ್ನವಾದ ಈ ಲಕ್ಷಣಗಳನ್ನು ಗುರ್ತಿಸಿದ ಗುರುವು ಅವನಿಗೆ ಶಿವದೀಕ್ಷೆ ಮಾಡುತ್ತಾನೆ[1].

ದೀಯತೇ ಚ ಶಿವಜ್ಞಾನಂ ಕ್ಷೀಯತೇ ಪಾಶಬಂಧನಂ ।
ಯಸ್ಮಾದತಃ ಸಮಾಖ್ಯಾತಾ ದೀಕ್ಷೇತೀಯಂ ವಿಚಕ್ಷಣೈಃ ॥

(ಸಿ. ಶಿ. ೬–೧೧)

ಪಾಶಬಂಧವನ್ನು ಕತ್ತರಿಸಿ ಶಿವಜ್ಞಾನವನ್ನು ದಯಪಾಲಿಸುವುದೇ ದೀಕ್ಷೆ. ಇದು ವೇಧಾ, ಮನು ಮತ್ತು ಕ್ರಿಯಾ ಎಂದು ಮೂರು ಬಗೆ. "ಶ್ರೀ ಗುರುವು ಕೃಪಾದೃಷ್ಟಿಯಿಂದ ನೋಡಿ

---

೧. 'ಶಕ್ತಿಪಾತಂ ಸಮಾಲೋಕ್ಯ ದೀಕ್ಷಯಾ ಯೋಜಯೇದಮುಂ'

(—ಕ್ರಿಯಾಸಾರ ೧.೧೪)

"ಯೇಷಾಂ ಶರೀರಿಣಾಂ ಶಕ್ತಿಃ ಪತತ್ಯೇವ ನಿವೃತ್ತಯೇ ।
ತೇಷಾಂ ತಲ್ಲಿಂಗಂ, ಔತ್ಸುಕ್ಯಂ ಮುಕ್ತೌ, ದ್ವೇಷೋ ಭವಸ್ಥಿತಾ ॥
ಭಕ್ತಿಶ್ಚ ಶಿವಭಕ್ತೇಷು, ಶ್ರದ್ಧಾತಚ್ಛಾಸಕೇ ಶಿವೇ ।
ಏಭಿರ್ಲಕ್ಷೈರವಿಚ್ಛಿನ್ನೈಃ ಶಕ್ತಿಪಾತೋ ಮಹಾತ್ಮಭಿಃ ।
ಅನುಮೇಯಃ ಸ ದೀಕ್ಷೈಶ್ಚ ಶಕ್ತಿಪಾತಾನುಸಾರತಃ ।

ಶಿಷ್ಯನ ಮಸ್ತಕದ ಮೇಲೆ ತನ್ನ ಹಸ್ತಕಮಲವನ್ನಿರಿಸುವುದೇ ವೇಧಾದೀಕ್ಷೆ. ಇದರಿಂದ ಶಿಷ್ಯನ ಆಣವಮಲವು ಅಳಿಯುತ್ತದೆ. ತರುವಾಯ ಗುರುವು ಷಡಧ್ವ ಕ್ರಮದಂತೆ ಲಿಂಗಾಂಗಗಳನ್ನು ಶುದ್ಧಗೊಳಿಸಿ, ತನ್ನ ಯೋಗದೃಷ್ಟಿಯಿಂದ ಶಿಷ್ಯನ ಹೃದಯಕಮಲದಲ್ಲಿರುವ ಪ್ರಾಣಲಿಂಗ ಕಲೆಯನ್ನು ಆಕರ್ಷಿಸಿ, ವಿಧ್ಯುಕ್ತವಾಗಿ ಸಂಸ್ಕರಿಸಿದ ಲಿಂಗದಲ್ಲಿ ತುಂಬಿ, ಅದನ್ನು ಶಿಷ್ಯನಿಗೆ ಧಾರಣಮಾಡಿ, ಪಂಚಾಕ್ಷರ ಮಹಾಮಂತ್ರವನ್ನು ಉಪದೇಶಿಸುವುದು ಮಂತ್ರದೀಕ್ಷೆ. ಇದು ಮಾಯಾಮಲವನ್ನು ಕಳೆಯುತ್ತದೆ. ದೀಕ್ಷಾಂಗವಾಗಿ ಎಸಗುವ ಮಂಡಲಿ-ಕಲಶಸ್ಥಾಪನಾದಿಗಳೇ ಕ್ರಿಯಾದೀಕ್ಷೆ. ಇದು ಕಾರ್ಮಮಲವನ್ನು ಕಳೆಯುತ್ತದೆ. ಕ್ರಿಯಾಸಿದ್ಧನಾದ ಗುರುವು ಶಿಷ್ಯನ ಸ್ಥೂಲಶರೀರ (ತ್ಯಾಗಾಂಗ)ದಲ್ಲಿ ಇಷ್ಟಲಿಂಗವನ್ನು ಧಾರಣ ಮಾಡುವುದರ ಜೊತೆಗೆ ಅವನ ಸೂಕ್ಷ್ಮಶರೀರ (ಭೋಗಾಂಗ)ದಲ್ಲಿ ಪ್ರಾಣಲಿಂಗವನ್ನೂ, ಕಾರಣಶರೀರ (ಯೋಗಾಂಗ)ದಲ್ಲಿ ಭಾವಲಿಂಗವನ್ನೂ ಧರಿಸುವುದಲ್ಲದೆ, ಶಿಷ್ಯನ ಪಂಚಜ್ಞಾನೇಂದ್ರಿಯ ಮತ್ತು ಪಂಚಕರ್ಮೇಂದ್ರಿಯಗಳಲ್ಲಿ ಕ್ರಮವಾಗಿ ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ ಪ್ರಸಾದಲಿಂಗಗಳನ್ನೂ, ಮನಸ್ಸಿನಲ್ಲಿ ಮಹಾಲಿಂಗವನ್ನೂ ಧಾರಣ ಮಾಡುತ್ತಾನೆ. ಇದರಿಂದ ಜೀವನು ಸರ್ವಾಂಗಲಿಂಗಿಯೆನಿಸುವನು.

## ಷಟ್‌ಸ್ಥಲಸೋಪಾನ—ಲಿಂಗಾಂಗಸಾಮರಸ್ಯ

ಭಕ್ತನನ್ನು ಉದ್ಧರಿಸಲು ಬಂದ ಭಕ್ತಿಯು, ಅಂಗವನ್ನು ಆಶ್ರಯಿಸಿ ಶ್ರದ್ಧಾ-ನಿಷ್ಠಾ ಅವಧಾನ-ಅನುಭವ-ಆನಂದ ಮತ್ತು ಸಮರಸ ಎಂಬ ಪ್ರಭೇದಗಳನ್ನು ತಳೆದು ಕ್ರಮವಾಗಿ ಭಕ್ತ-ಮಹೇಶ-ಪ್ರಸಾದಿ-ಪ್ರಾಣಲಿಂಗಿ ಶರಣ ಮತ್ತು ಐಕ್ಯ ಎಂಬ ಸ್ಥಳಗಳಲ್ಲಿ ಅಂಗವನ್ನು ಮುನ್ನಡೆಸಿ ಲಿಂಗಸಮರಸವನ್ನಾಗಿ ಮಾಡುತ್ತದೆ.

ಭಕ್ತಾದಿ ಷಟ್‌ಸ್ಥಲ (ಅಂಗಸ್ಥಲ)ಗಳು ಅವಾಂತರ ಭೇದದಿಂದ ೪೪ ಪ್ರಭೇದ ತಳೆಯುತ್ತದೆ. ಅದರಂತೆ ಆಚಾರಾದಿ ಲಿಂಗಸ್ಥಲಗಳು ೫೭ ಸ್ಥಲಗಳಾಗಿ ಒಟ್ಟು ಏಕೋತ್ತರಶತ (೧೦೧) ಸ್ಥಲಗಳಾಗುತ್ತವೆ. ಪಿಂಡ, ಪಿಂಡಜ್ಞಾನಾದಿ ಜ್ಞಾನಶೂನ್ಯಾಂತವಾದ ಈ ಏಕೋತ್ತರಶತ ಸ್ಥಲಗಳಲ್ಲಿ ಅನುಭವ-ಅನುಷ್ಠಾನಗಳನ್ನು ನಡೆಯಿಸಿದ ಅಂಗನು ಕಡೆಯಲ್ಲಿ ನದೀ ಸಮುದ್ರ ನ್ಯಾಯದಂತೆ ಲಿಂಗಾಂಗ ಸಾಮರಸ್ಯರೂಪ ಮುಕ್ತಿಯನ್ನು ಪಡೆದು ಅಖಂಡಾನಂದವನ್ನು ಅನುಭವಿಸುತ್ತಾನೆ.

ಯಥಾ ನದ್ಯಃ ಸ್ಯಂದಮಾನಾಃ ಸಮುದ್ರೇ ಅಸ್ತಂಗಚ್ಛಂತಿ ನಾಮರೂಪೇ ವಿಹಾಯ ।
ತಥಾ ವಿದ್ವಾನ್ನಾಮರೂಪಾದ್ವಿ ಮುಕ್ತಃ ಪರಾತ್ಪರಂಪುರುಷಮುಪೈತಿ ದಿವ್ಯಂ ॥

ಎಂಬ ಶ್ರುತಿಯು ಈ ಸ್ಥಿತಿಯನ್ನು ಸುಂದರವಾಗಿ ಚಿತ್ರಿಸಿದೆ. ಈ ಬಗೆಯ ಮುಕ್ತಿಸಾಧನೆಗೆ ಅಂಗವಾಗಿ ಅಷ್ಟಾವರಣ, ಪಂಚಾಚಾರಗಳು ಈ ಸಿದ್ಧಾಂತದಲ್ಲಿ ಉಕ್ತವಾಗಿವೆ. ವೀರಶೈವಕ್ಕೆ "ಅಷ್ಟಾವರಣವೇ ಅಂಗ. ಪಂಚಾಚಾರಗಳೇ ಪ್ರಾಣ. ಷಟ್‌ಸ್ಥಳವೇ ಆತ್ಮ" ಎಂಬ ಅನುಭವೋಕ್ತಿಯು ಇವುಗಳ ಅಗತ್ಯವನ್ನು ಸಾರುತ್ತದೆ.

> ಅಷ್ಟಾವರಣವಿಜ್ಞಾನೀ ಪಂಚಾಚಾರಪರಾಯಣಃ ।
> ವೈದಿಕಂ ಕರ್ಮ ಕುರ್ವೀತ ಜ್ಞಾನೈಕಫಲಸಾಧನಂ ॥

(-ಕ್ರಿಯಾಸಾರಉ ೩ ೨೬೪)

## ಶಕ್ತಿವಿಶಿಷ್ಟಾದ್ವೈತ ಪ್ರತಿಪಾದಕ ಸಾಹಿತ್ಯ

### ೧ ಸಿದ್ಧಾಂತಶಿಖಾಮಣಿ

ಸಿದ್ಧಾಂತ ಶಿಖಾಮಣಿ ವೀರಶೈವ ಸಿದ್ಧಾಂತದ ಪ್ರಕರಣ ಗ್ರಂಥ. ಈ ಕೃತಿ ಷಟ್‌ಸ್ಥಲತತ್ತ್ವ ಪ್ರತಿಪಾದಕ ಗ್ರಂಥಗಳಲ್ಲಿ ಶಿಖಾಮಣಿಯೆನಿಸಿದೆ. ಏಕೋತ್ತರಶತ ಸ್ಥಲಗಳನ್ನು ಒಂದೆಡೆ ವಿಚಾರ ಮಾಡಿರುವ ಗ್ರಂಥಗಳಲ್ಲಿ ಇದು ಮೊದಲನೆಯದು.

ಸಿದ್ಧಾಂತ ಶಿಖಾಮಣಿಯ ಕರ್ತೃ ಶಿವಯೋಗಿ ಶಿವಾಚಾರ್ಯರು. ಶಿವಯೋಗಿ ಶಿವಾಚಾರ್ಯರ ಕಾಲದ ಬಗೆಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ. ಸಿದ್ಧಾಂತ ಶಿಖಾಮಣಿಯ ವಸ್ತು ಶಿವಾದ್ವೈತ ಸಿದ್ಧಾಂತ ಪ್ರತಿಪಾದನ. ಆಚಾರ್ಯರೇಣುಕರು ಅಗಸ್ತ್ಯಮಹರ್ಷಿಗೆ ಈ ಸಿದ್ಧಾಂತವನ್ನು ಉಪದೇಶಿಸಿದರು. ಅಗಸ್ತ್ಯರು ಬ್ರಹ್ಮಸೂತ್ರಗಳಿಗೆ 'ಸೂತ್ರವೃತ್ತಿ'ಯನ್ನು ಬರೆದರು. ಮುನಿಚಂದ್ರವೃತ್ತಿಯ ಆಧಾರದ ಮೇಲೆ ಶ್ರೀಪತಿಪಂಡಿತಾರಾಧ್ಯರು 'ಶ್ರೀಕರಭಾಷ್ಯ'ವನ್ನು ರಚಿಸಿದುದಾಗಿ ತಮ್ಮ ಭಾಷ್ಯದ ಪ್ರಾರಂಭದಲ್ಲಿ ಹೇಳಿದ್ದಾರೆ. ಸಿದ್ಧಾಂತ ಶಿಖಾಮಣಿಯು ಶ್ರೀಕರಭಾಷ್ಯದಲ್ಲಿ ಅನೇಕ ಕಡೆ ಪ್ರಮಾಣವಾಗಿ ಉದ್ಧೃತವಾಗಿರುವುದರಿಂದ ಇದು ಶ್ರೀಕರಭಾಷ್ಯಕರ್ತೃ ಶ್ರೀಪತಿಪಂಡಿತ (ಕ್ರಿ.ಶ.ಸು. ೧೦೧೦)ರ ಕಾಲಕ್ಕಿಂತ ಹಿಂದಿನದು ಇರಬೇಕು ಎಂದು ಊಹಿಸಲಾಗಿದೆ.

ಸಿದ್ಧಾಂತ ಶಿಖಾಮಣಿಯಲ್ಲಿ ೨೧ ಪರಿಚ್ಛೇದಗಳೂ, ೧೯೩೪ ಶ್ಲೋಕಗಳೂ ಇವೆ. ಗ್ರಂಥದ

---

೧. ಅಗಸ್ತ್ಯಮುನಿಚಂದ್ರೇಣ ಕೃತಾಂ ವೈಯಾಸಿಕೀಂ ಶುಭಾಂ ।
ಸೂತ್ರವೃತ್ತಿಂ ಸಮಾಲೋಕ್ಯ ಕೃತಂ ಭಾಷ್ಯಂ ಶಿವಂಕರಮ್ ॥

(ಶ್ರೀಕರಭಾಷ್ಯಮಂಗಲಾಚರಣ ೧೭)

ಪ್ರಾರಂಭದ ನಾಲ್ಕು ಪರಿಚ್ಛೇದಗಳಲ್ಲಿ ಕ್ರಮವಾಗಿ ಕವಿವಂಶವರ್ಣನ, ಜಗತ್ಸೃಷ್ಟಿ, ರೇಣುಕರ ಭೂತಲಾವತರಣಕಾರಣ, ರೇಣುಕಾಗಸ್ತ್ಯ ಸಂಭಾಷಣಗಳು ಮತ್ತು ಕಡೆಯ ಪರಿಚ್ಛೇದದಲ್ಲಿ ವಿಭೀಷಣಾಭೀಷ್ಟಪ್ರಧಾನ, ರೇಣುಕರ ಲಿಂಗೈಕ್ಯಾದಿಗಳು ವರ್ಣಿತವಾಗಿವೆ. ಇನ್ನುಳಿದ ಪರಿಚ್ಛೇದಗಳಲ್ಲಿ ಪಿಂಡಾದಿ-ಜ್ಞಾನಶೂನ್ಯಾಂತವಾದ ನೂರೊಂದು ಸ್ಥಲಗಳು ಉಕ್ತವಾಗಿವೆ.

## ಸಿದ್ಧಾಂತಶಿಖಾಮಣಿಯ ವಿಷಯಸಂಗ್ರಹ

ಸಿದ್ಧಾಂತಶಿಖಾಮಣಿಯು ರೇಣುಕಾಗಸ್ತ್ಯಸಂವಾದ ರೂಪವಾಗಿದೆ. ಅದರಲ್ಲಿ ಬರುವ ಸಿದ್ಧಾಂತವಿಷಯವನ್ನು ಹೀಗೆ ಸಂಗ್ರಹಿಸಬಹುದು—

ರುಚಿಭೇದದಿಂದ ಸಿದ್ಧಾಂತಗಳು ಹಲವು ಬಗೆ. ಅವುಗಳಲ್ಲಿ ಸಾಂಖ್ಯ, ಯೋಗ, ಪಾಂಚರಾತ್ರ, ವೇದ ಮತ್ತು ಪಾಶುಪತ ಎಂಬುವು ಮುಖ್ಯ. ಈ ಸಾಂಖ್ಯಾದಿಗಳಿಗೆವೇದವೇ ಮುಖ್ಯ. ಆದರೆ ಪಾಂಚರಾತ್ರಾದಿಗಳು ವೇದೈಕದೇಶಗಳು. ಶೈವವು ಮಾತ್ರ ವೇದಮಯ. ಶೈವಕ್ಕೆ 'ಸಿದ್ಧಾಂತ' ಎಂಬುದು ನಾಮಾಂತರ. ಸಿದ್ಧಾಂತ ಮತ್ತು ವೇದಗಳು ಏಕಾರ್ಥ ಪ್ರತಿಪಾದಕವಾದ್ದರಿಂದ ಅವೆರಡೂ ಒಂದೇ। ಕಾಮಿಕಾದಿ ವಾತುಲಾಂತವಾದ ಸಿದ್ಧಾಂತಾಗಮದ ಉತ್ತರ ಭಾಗದಲ್ಲಿ ವೀರಶೈವವು ಉಕ್ತವಾಗಿದೆ.

ಶೈವವಿದ್ಯೆಯಲ್ಲಿ ಪರಿಣತಿಯುಳ್ಳವರು ವೀರಶೈವರು. ಈ ವಿದ್ಯೆಯನ್ನು ಅಭ್ಯಸಿಸಿ, ಹೇಯವಾದ ಮಾಯೆಯನ್ನು ತ್ಯಜಿಸಿದವನು ವೀರಮಾಹೇಶ್ವರ. ವೇದಾಂತಜನ್ಯಜ್ಞಾನವೇ ವಿದ್ಯೆ ; ಆ ವಿದ್ಯೆಯಲ್ಲಿ ವಿಹರಿಸುವವನೇ ವೀರ. 'ವೀರಶೈವರು' ಜ್ಞಾನಪ್ರಧಾನವಾಗಿ ಆರಾಧಿಸುವವರು. ಕ್ರಿಯಾಪ್ರಧಾನವಾಗಿ ಯಜಿಸುವವರು ವೀರಮಾಹೇಶ್ವರರು. ಜ್ಞಾನಕ್ರಿಯೆಗಳಿಗೆ ಸಮುಸಮುಚ್ಚಯವನ್ನು ವೀರಶೈವವು ಒಪ್ಪಿರುವುದರಿಂದ ಇವರಿಬ್ಬರಿಗೂ ಭೇದವಿಲ್ಲ. ಸ್ಥಲ ನಿಷ್ಪತ್ತಿಗಾಗಿ ಈ ಭೇದವನ್ನು ಸೂಚಿಸಲಾಗಿದೆ.

ಭಕ್ತಾದಿಸ್ಥಲಭೇದದಿಂದ ವೀರಶೈವವು ಆರು ಬಗೆ. ಭಕ್ತ-ಮಾಹೇಶ-ಪ್ರಸಾದಿ-ಪ್ರಾಣ ಲಿಂಗಿ-ಶರಣ ಮತ್ತು ಐಕ್ಯ ಎಂದು, ಸ್ಥಲಗಳು ಆರು. ಭಕ್ತಸ್ಥಲದ ಒಳಭೇದಗಳು ಹದಿನೈದು.

## ಭಕ್ತಸ್ಥಲ

ಹಿಂದಿನ ಅನೇಕ ಜನ್ಮಗಳಲ್ಲಿ ಮಾಡಿದ ಪುಣ್ಯ ವಿಶೇಷದಿಂದ ಪಾಪವಳಿದು ಪವಿತ್ರನಾದ ಜೀವಿಗೆ 'ಪಿಂಡ' ಎಂದು ಹೆಸರು. ದೇಹವು ಬೇರೆ, ಆತ್ಮವುಬೇರೆ ಎಂದು ತಿಳಿದವನು ಪಿಂಡಜ್ಞಾನಿ ; ಇದರಿಂದ ಅವನಿಗೆ ಅನಿತ್ಯವಾದ ಪ್ರಪಂಚವ್ಯಾಪಾರಗಳಲ್ಲಿ ಹೇಯಬುದ್ಧಿಯು ಉದಿಸುತ್ತದೆ. ; ಶಿವಭಕ್ತಿಬಲಿಯುತ್ತದೆ. ಭಕ್ತಿಯು ಸ್ವಭಾವದಿಂದ ಅವನ ಮೇಲೆ

ಶಿವಕೃಪಾರೂಪವಾದ ' ಶಕ್ತಿಪಾತ ' ವಾಗುತ್ತದೆ. ಇದರಿಂದ ಜೀವಿಯಲ್ಲಿ ಲೋಕವಿಲಕ್ಷಣವಾದ ನಡೆ–ನುಡಿಗಳುಂಟಾಗಿ ಗುರುವಿಗೆ ಶರಣಾಗುತ್ತಾನೆ. ಶಕ್ತಿಪಾತವನ್ನು ಗುರ್ತಿಸಿದ ಗುರು ಶಿಷ್ಯನಿಗೆ ವಿಧ್ಯುಕ್ತವಾಗಿ ಲಿಂಗಧಾರಣಾತ್ಮಕವಾದ ಶಿವದೀಕ್ಷೆ ಎಸಗುತ್ತಾನೆ[1]. ಗುರುವಿನ ಆದೇಶದಂತೆ ಅಷ್ಟಾವರಣ, ಪಂಚಾಚಾರ ನಿಷ್ಠೆಬಲಿತ ಭಕ್ತನೇ ಮುಂದೆ ಮಾಹೇಶ್ವರನೆನಿಸುತ್ತಾನೆ.

## ಮಾಹೇಶ್ವರಸ್ಥಲ (೯)

ಈ ಸ್ಥಲದಲ್ಲಿ ಸಾಧಕನಿಗೆ ಲಿಂಗನಿಷ್ಠೆ ಗಟ್ಟಿಗೊಂಡು ಪೂರ್ವಾಶ್ರಯ ನಿರಸನವಾಗುತ್ತದೆ. ಇದರಿಂದ ಅವನು ತನ್ನ ಹಿಂದಿನ ಪ್ರಾಕೃತವರ್ಣ ಮತ್ತು ಆಶ್ರಮಗಳಲ್ಲಿ ಜಿಗುಪ್ಸೆಹೊಂದಿ ತನ್ನ ಶಿವಾಶ್ರಮದಲ್ಲಿ ಅತಿಶಯವನ್ನು ಗಳಿಸಿ '' ಅತಿವರ್ಣಾಶ್ರಮಿ '' ಎನಿಸುತ್ತಾನೆ. ಶಿವದೀಕ್ಷಿತರಾದವರನ್ನೆಲ್ಲ ಸಮಭಾವನೆಯಿಂದ ಕಾಣುವುದೇ ಆ ಅತಿಶಯ. ಆಗ ಅವನು ಪುನರ್ಜಾತನೆನಿಸಿ ' ಭಕ್ತದೇಹಿಕ ಲಿಂಗಸ್ಥಲ ' ವನ್ನು ಮುಟ್ಟುತ್ತಾನೆ.

## ಪ್ರಸಾದಿಸ್ಥಲ (೭)

ಶಿವನನ್ನು ಭಕ್ತದೇಹಿಕನೆಂದು ತಿಳಿದುದರ ಫಲವೇ ಮನಸ್ಸಿನ ಪ್ರಸನ್ನತೆ. ಈ ಪ್ರಸನ್ನತೆ ಶಿವಾನುಗ್ರಹದ ಫಲ. ಇದರಿಂದ ಅವನಿಗೆ ಗುರು-ಲಿಂಗ-ಜಂಗಮ–ಭಕ್ತ–ಶರಣ–ಪ್ರಸಾದಿಸ್ಥಲಗಳ ಮಾಹಾತ್ಮ್ಯವು ಗೋಚರವಾಗುತ್ತದೆ. ಹೀಗೆ ಮನಃಪರಿಪಾಕವನ್ನು ಪಡೆದಪ್ರಸಾದಿಯೇ ಜ್ಞಾನ ಯೋಗಬಲದಿಂದ ಪ್ರಾಣಲಿಂಗಿ ಎನಿಸುತ್ತಾನೆ.

## ಪ್ರಾಣಲಿಂಗಿಸ್ಥಲ (೫)

ಇಲ್ಲಿ ಸಾಧಕನಿಗೆ ಪ್ರಾಣವೇ ಲಿಂಗ, ಲಿಂಗವೇ ಪ್ರಾಣವೆಂಬ ಭಾವವು ದೃಢವಾಗಿ, ಶಿವಯೋಗವು ಸಿದ್ಧಿಸುತ್ತದೆ. ಮುಂದೆ ಶಿವಯೋಗ ಸಮಾಧಿ, ಲಿಂಗಜಯ, ಅಂಗಲಿಂಗ ಸ್ಥಳಗಳು ಅಳವಟ್ಟು ಅವನು ಭಾವಸಾಮಾಗ್ರಿಗಳಿಂದ ಲಿಂಗಯಜನದಲ್ಲಿ ತೊಡಗಿ ತುರ್ಯನೆನಿಸುತ್ತಾನೆ. ಜ್ಞಾನಪರಿಪಾಕಾವಸ್ಥೆಯಿಂದ ಈ ಪ್ರಾಣಲಿಂಗಿಯೇ 'ಶರಣ' ನಾಗುತ್ತಾನೆ.

## ಶರಣಸ್ಥಳ (೪)

ಜ್ಞಾನಸ್ವರೂಪನಾದ ಅಂಗನೇ ಸತಿ, ಜ್ಞೇಯ ರೂಪವಾದ ಲಿಂಗವೇ ಪತಿ. ಇವರಿಬ್ಬರ

---

೧ ಶಕ್ತಿಪಾತಂ ಸಮಾಲೋಕ್ಯ ದೀಕ್ಷಯಾ ಯೋಜಯೇದಮುಂ— (ಸಿ.ಶಿ. ಪರಿ. ೬.೧೧)

ಸಾಮರಸ್ಯದಲ್ಲಿ ಒದಗುವ ಅಲೌಕಿಕಾನಂದವು ಶರಣನದು. ಈಗ ಅವನಿಗೆ ತಾಮಸವು ಸಂಪೂರ್ಣವಾಗಿ ನಿರಸನವಾಗಿದೆ. ಜ್ಞಾನೋದಯದ ಮಿಂಚಿನ ಬೆಳಗು ಮೂಡಿದೆ. ಇಂಥ ಶರಣನಿಗೆ ಶೀಲಸಂಪಾದನವು ಸುಲಭ. ತಾಮಸ ಗುಣವು ಭವದ ಬೀಜ. ಅದು ಅಳಿದ ಮೇಲೆ ಉದಿಸುವ ಶುದ್ಧಸತ್ವವು ಹುರಿದ ಬೀಜ. ಇದು ಜ್ಞಾನಯೋಗಕ್ಕೆ ಸಹಕಾರಿ. ಶರಣನು ಶಮದಮಾದಿ ದೈವೀಗುಣಗಳಿಗೆ ಆಶ್ರಯ.

## ಐ ಕ್ಯ ಸ್ಥ ಳ (೪)

ಬಾಹ್ಯವನ್ನು ಮರೆತು ಇಷ್ಟ-ಪ್ರಾಣ-ಭಾವಲಿಂಗಗಳ ಯೋಗದಲ್ಲಿ ತಲ್ಲೀನನಾದ ಶರಣನು ಶಿವಾನಂದಾನುಭವ ಸಂತೃಪ್ತನಾಗಿ ಶಿವನೊಡನೆ ಸಮರಸನಾಗುವುದರಿಂದ ಅವನು ಐಕ್ಯನೆನಿಸುತ್ತಾನೆ. ಅವನೇ ಜೀವನ್ಮುಕ್ತ. ಐಕ್ಯನಿಗೆ ಆಚಾರವೇ ಸಂಪತ್ತು. ಆಚಾರವೇ ಮಹತ್ತು. ಅವನಿಗೆ ದೇಹವಿದ್ದರೂ ದೇಹಾಭಿಮಾನವಿಲ್ಲ. ಆತನ ಕರಣ ವೃತ್ತಿಗಳೆಲ್ಲವೂ ಶಿವನಲ್ಲಿ ಕೇಂದ್ರೀಕೃತವಾಗಿರುತ್ತವೆ. ವಿಶ್ವವು ಶಿವಮಯವೆಂಬ ಭಾವವು ಬಲಿತುದರ ಫಲವಾಗಿ ಅವನಿಗೆ ಏಕಭಾಜನ ಸ್ಥಲವು ಸಿದ್ಧಿಸಿರುತ್ತದೆ. ಇಲ್ಲಿ ಪೂಜ್ಯ-ಪೂಜಕ-ಪೂಜೆಗಳು ಏಕತ್ವವನ್ನು ಹೊಂದಿ ಸಹಭಾಜನಸ್ಥಲವನ್ನು ಮುಟ್ಟಿರುತ್ತವೆ. ವಿಶ್ವವನ್ನು ಸ್ವಸ್ವರೂಪವೆಂದು ತಿಳಿದವನೇ ನಿಜಲಿಂಗೈಕ್ಯನೆನಿಸುವನು.

ಇಲ್ಲಿಗೆ ಅಂಗಸ್ಥಳದ ೪೪ ಸ್ಥಳಗಳನ್ನು ಸಾಧಕನು ಹೊಂದಿ ಲಿಂಗ ಸ್ಥಳಗಳಿಗೆ ಅರ್ಹತೆ ಪಡೆದಿರುತ್ತಾನೆ.

## ಲಿಂಗಸ್ಥಳಗಳು (೫೭)

ಇಲ್ಲಿ ''ಗುರುಸ್ಥಲ''ವೊದಲು, ''ಜ್ಞಾನಶೂನ್ಯಸ್ಥಲ"ವು ಕಡೆಯಾಗಿ ಐವತ್ತೇಳು ಸ್ಥಳಗಳು ಇರುತ್ತವೆ. ಇವುಗಳ ಮನೋಜ್ಞವಾದ ವಿವರಣವು ಈ ಭಾಗದಲ್ಲಿ ಪ್ರತಿಪಾದಿತವಾಗಿದೆ. ಜೀವನ್ಮುಕ್ತನು ಮುಂದೆ ತನ್ನ ವಿದೇಹ ಮುಕ್ತಿಯವರೆಗೆ ಹೇಗೆ ವರ್ತಿಸಬೇಕೆಂಬ ವಿಧಿ ವಿಧಾನಗಳು ಸುಂದರವಾಗಿ ಉಕ್ತವಾಗಿವೆ. ಜೀವನ್ಮುಕ್ತನಿಗೂ ಅಹಿಂಸೆ, ಸತ್ಯ, ಅಸ್ತೇಯ ಮುಂತಾದ ಸದಾಚಾರಗಳು ಮುಖ್ಯ.

ಜ್ಞಾನಾಮೃತೇನ ತೃಪ್ತೋಽಪಿ ಯೋಗೀ ಧರ್ಮಂ ನ ಸಂತ್ಯಜೇತ್ ।
ಆಚಾರಂ ಮಹತಾಂ ದೃಷ್ಟ್ವಾ ಪ್ರವರ್ತಂತೇ ಹಿ ಲೌಕಿಕಾಃ ॥

ಮುಂತಾಗಿ ನೀಡಿರುವ ಉಕ್ತಿಗಳು ಸರ್ವಗ್ರಾಹ್ಯವಾಗಿವೆ. ಹೀಗೆ ಮುಂದೆ ಕಡೆಯ ಜ್ಞಾನ ಶೂನ್ಯಸ್ಥಲವನ್ನು ಮುಟ್ಟಿದ ಶಿವಯೋಗಿಯು ವಿದೇಹದಲ್ಲಿ ಜಲದಲ್ಲಿ ಜಲ, ವಹ್ನಿಯಲ್ಲಿ

ವಿಷ್ಣು ಬರೆದಂತೆ ಲಿಂಗಾಂಗ ಸಾಮರಸ್ಯವನ್ನು ಹೊಂದುವ ಹೃದಯಸ್ಪರ್ಶಿವರ್ಣನವು ಸಿದ್ಧಾಂತ ಶಿಖಾಮಣಿಯ ವಸ್ತು.

## ೨ ಶ್ರೀಕರಭಾಷ್ಯ

(ಕ್ರಿ. ಶ. ಸು. ೧೦೬೦)

ಶ್ರೀಕರಭಾಷ್ಯಕರ್ತೃ ಶ್ರೀಪತಿಪಂಡಿತಾರಾಧ್ಯರು. ಇವರು ಬ್ರಹ್ಮಸೂತ್ರಗಳ ಮೇಲೆ ವೀರಶೈವಸಿದ್ಧಾಂತ ಪರವಾಗಿ ರಚಿಸಿರುವ ವ್ಯಾಖ್ಯಾನವೇ ಶ್ರೀಕರಭಾಷ್ಯ.

ಶ್ರೀಪತಿಪಂಡಿತರು ತಮ್ಮ ಭಾಷ್ಯರಚನೆಗೆ ಅಗಸ್ತ್ಯಮುನಿಕೃತ "ವೈಯಾಸಿಕ ಸೂತ್ರ ವೃತ್ತಿ"ಯು ಆಧಾರವೆಂದು ಭಾಷ್ಯದ ಪ್ರಾರಂಭದಲ್ಲಿ ಹೇಳಿಕೊಂಡಿದ್ದಾರೆ. 'ಮುನಿಚಂದ್ರವೃತ್ತಿ' "ಲಘುಸೂತ್ರವೃತ್ತಿ" ಎಂಬ ಹೆಸರುಗಳು ಈ ವೃತ್ತಿಗೆ ಇರುವುದಾಗಿ ತಿಳಿದು ಬಂದಿದೆ.

ಪಾಲ್ಕುರಿಕೆ ಸೋಮನಾಥಕವಿ (ಕಿ.ಶ.ಸು. ೧೧೯೫)ಯ ಬಸವಪುರಾಣ, ಮಲ್ಲಿಕಾರ್ಜುನ ಪಂಡಿತಾರಾಧ್ಯಚರಿತ್ರ (ಕಿ.ಶ.ಸು. ೧೧೬೦)ರ 'ಶಿವತತ್ತ್ವಸಾರ ಮತ್ತು ಬೆಜವಾಡದ ಮಲ್ಲೇಶ್ವರ ದೇವಾಲಯದಲ್ಲಿರುವ ಶಿಲಾಶಾಸನಗಳನ್ನು ಆಧರಿಸಿ ಶ್ರೀಪತಿಪಂಡಿತರ ಕಾಲವನ್ನು (ಕ್ರಿ.ಶ.ಸು. ೧೦೬೦) ಎಂದು ವಿದ್ವಾಂಸರು ನಿರ್ಧರಿಸಿದ್ದಾರೆ.

ಶ್ರೀಕರಭಾಷ್ಯದಲ್ಲಿ ಉಕ್ತವಾಗಿರುವ ವೀರಶೈವಸ್ವರೂಪವು ಪ್ರಾಚೀನ ವೀರಶೈವಕ್ಕೆ ಸೇರಿದ್ದು. ಏಕೆಂದರೆ ಇಲ್ಲಿ ಉಲ್ಲಿಖಿತವಾಗಿರುವ ಗ್ರಂಥಗಳು, ಗ್ರಂಥಕಾರರು ಮತ್ತು ಭಾಷ್ಯೋಕ್ತವಾದ ಅನೇಕ ಆಚಾರ ವಿಚಾರಗಳು ಬಹುತೇಕ ಶಿವಶರಣಯುಗಪರಿಷ್ಕೃತ ವೀರಶೈವಕ್ಕಿಂತ ಕೆಲವು ವಿಷಯಗಳಲ್ಲಿ ಭಿನ್ನವಾಗಿವೆ.

ಭಾಷ್ಯದ ಪ್ರಾರಂಭದಲ್ಲಿ ರೇವಣಸಿದ್ಧ ಗುರುವನ್ನು 'ರೇವಣ ಕಲ್ಪವೃಕ್ಷಂ' ಎಂದು ಸ್ತುತಿಸಿ, ತರುವಾಯ ಮರುಳಸಿದ್ಧ ಮತ್ತು ಏಕೋರಾಮಸಿದ್ಧರನ್ನು ಸ್ತುತಿಸಲಾಗಿದೆ.

ಭಾಷ್ಯದ ಉದ್ದೇಶವನ್ನು ಕುರಿತು ಆಚಾರ್ಯರು

ಶ್ರುತ್ಯೈಕದೇಶಪ್ರಾಮಾಣ್ಯಂ ದ್ವೈತಾದ್ವೈತಮತಾದಿಷು ।
ದ್ವೈತಾದ್ವೈತ ಮತೇ ಶುದ್ಧೇ ವಿಶೇಷಾದ್ವೈತಸಂಜ್ಞಿಕೇ ॥
ವೀರಶೈವೈಕಸಿದ್ಧಾಂತೇ ಸರ್ವಶ್ರುತಿಸಮನ್ವಯಃ ॥೧೪॥

ಎಂದು ಹೇಳಿ

ವಿಶಬ್ದೇನೋಚ್ಯತೇ ಶಂಭುಃ "ಹಂಸ ಹಂಸೇ,'ತಿ ಮಂತ್ರತಃ।
ಶೇಷಶಬ್ದೇನ ಶಾರೀರೋ "ಯಥಾಗ್ನೇ" ರೀತಿ ಮಂತ್ರತಃ॥
ಅದ್ವೈತೇನ ಭವೇದ್ಯೋಗೋ "ಯಥಾ ನದ್ಯ" ಇತಿ ಶ್ರುತೇಃ॥

ಎಂದು ಭಾಷ್ಯದ ಮೂಲ ಉದ್ದೇಶವನ್ನು ಈ ಕಾರಿಕೆಯಲ್ಲಿ ವ್ಯಕ್ತಪಡಿಸಿದ್ದಾರೆ. ವೀರಶೈವ ಸಿದ್ಧಾಂತವನ್ನು ಭಾಷ್ಯಕಾರರು "ವಿಶೇಷಾದ್ವೈತ" ಎಂದು ಕರೆದು ಆ ಪದಕ್ಕೆ ಅರ್ಥನಿರ್ವಚನವನ್ನು ಕೂಡ ಅವರು ಹೀಗೆ ಮಾಡಿದ್ದಾರೆ.

"ವಿಶ್ಚ ಶೇಷಶ್ಚ ವಿಶೇಷೌ, ತಯೋರದ್ವೈತಂ–ವಿಶೇಷಾದ್ವೈತಂ ಇತಿ ನಿರುಕ್ತಿಃ. ತತ್ರಾದ್ವೈತಪದೇನ ಭ್ರಮರಕೀಟವಜ್ಜೀವಸ್ಯ ಸ್ವಾಭಾವಿಕಭೇದನಿವೃತ್ತಿರುಪದಿಶ್ಯತೇ। "ಹಂಸ ಹಂಸೇತಿ ಯೋ ಬ್ರೂಯಾತ್" ಇತ್ಯಾದಿ ಶ್ರುತಿಷು "ವಿಶ್ಚ ಕ್ಷ್ವಪಿ ವ್ಯೋಮ್ನಿ ವಾತೇ ಪರಮಾತ್ಮನಿ ಪಕ್ಷಿಣಿ" ಇತಿ ನೈಘಂಟುಕೇಷು ವಿಶಬ್ದಸ್ಯ ಪರಮಾತ್ಮವಾಚಕತ್ವೇನ ಸ್ಪಷ್ಟೋಪದೇಶಾತ್।... ವಿಶಬ್ದೇನ ಜಗತ್ಕಾರಣತ್ವಂ ಬ್ರಹ್ಮಲಕ್ಷಣಂ ಸೂಚಿತಂ। ಶೇಷಶಬ್ದೇನ "ಯಥಾಗ್ನೇಃ" ಇತಿ ಶ್ರುತಿಷು ಪರಮೇಶ್ವರಾಂಶತ್ವಸ್ಯ ಜೀವಾನಾಂ ವ್ಯಪದೇಶಾತ್ ಜೀವೋಽಭಿಧೀಯತೆ, ಅದ್ವೈತ ಪದೇನ 'ಯಥಾ ನದ್ಯಃ' ಇತ್ಯಾದಿ ಶ್ರುತಿಸಿದ್ಧಸಾಮಂಜಸ್ಯಂ ಜೀವಬ್ರಹ್ಮಣೋರುಪದಿಷ್ಟಂ". (ಶ್ರೀಕರಭಾಷ್ಯ ಪು. ೨೭೬. ಸಂ. ೧)

ಬ್ರಹ್ಮವಿದ್ಯೆಗೆ ಅಧಿಕಾರಿ ಯಾರು ? ಎಂಬ ಪ್ರಶ್ನೆಗೆ ಭಾಷ್ಯದಲ್ಲಿ "ಅಥಾತೋ ಬ್ರಹ್ಮಜಿಜ್ಞಾಸಾ" ಎಂಬ ಸೂತ್ರಭಾಷ್ಯದಲ್ಲಿ ಕೊಟ್ಟಿರುವ "ನಿಗಮಾಗಮೋಭಯವೇದಾಂತ ಪ್ರತಿಪಾದಿತ ....... ಅಷ್ಟಾವರಣ, ಪಂಚಾಚಾರ ಸದ್ಗುರು ಕರುಣಾಕಟಾಕ್ಷ ಲಬ್ಧಶಕ್ತಿಪಾತಾದ್ಯವಚ್ಛಿನ್ನ ಪರಶಿವೇಷ್ಟಲಿಂಗಧಾರಣಾತ್ಮಕಪಾಶುಪತದೀಕ್ಷಾನಂತರ್ಯಂ ..." ಎಂಬ ಉಕ್ತಿಯಲ್ಲಿ ವೀರಶೈವಸಿದ್ಧಾಂತದ ಸ್ಥೂಲಸ್ವರೂಪವನ್ನು ಸುಂದರವಾಗಿ ಹೇಳಲಾಗಿದೆ. ಅದರಂತೆ ಜಿಜ್ಞಾಸಾಧಿಕರಣಕ್ಕೆ ಕೊಟ್ಟಿರುವ ವಿಷಯ ವಾಕ್ಯವು ತೈತ್ತಿರೀಯಶ್ರುತಿಪ್ರಸಿದ್ಧವೇ ಆಗಿದೆ. 'ಯಶ್ಛಂದಸಾಂ ವೃಷಭೋ ವಿಶ್ವರೂಪಃ... ಅಮೃತಸ್ಯ ದೇವಧಾರಣೋಭೂಯಾಸಂ...... ಶ್ರುತಂ ಮೇ ಗೋಪಾಯ (ತೈ. ಶಿಕ್ಷಾ, ೪)' ಎಂಬಲ್ಲಿ ಲಿಂಗಧಾರಣವು ಮೋಕ್ಷಕ್ಕೆ ಅತ್ಯಗತ್ಯ ಎಂಬುದನ್ನು ಭಾಷ್ಯಕಾರರು ಮಂತ್ರಾರ್ಥ ಸಹಿತ ವಿವರಿಸಿರುತ್ತಾರೆ.

ಮುಂದೆ ಭಾಷ್ಯಕಾರರು ಮೀಮಾಂಸಾ ಶಾಸ್ತ್ರಪ್ರಕ್ರಿಯೆಯನ್ನು ಅನುಸರಿಸಿ 'ದೇವ ಧಾರಣೋ ಭೂಯಾಸಂ' ಎಂಬಲ್ಲಿ ಯಾವ ವಿಧಿಯು ಉಕ್ತವಾಗಿದೆ ?. ಅದೇನು ಅಪೂರ್ವ ವಿಧಿಯೇ ? ನಿಯಮ ವಿಧಿಯೇ ? ಅಥವಾ ಪರಿಸಂಖ್ಯಾ ವಿಧಿಯೇ ? ಮುಂತಾಗಿ ದಾರ್ಶನಿಕವಾಗಿ ಪೂರ್ವಪಕ್ಷವನ್ನು ಮಾಡಿಕೊಂಡು ಸಪ್ರಮಾಣವಾಗಿ ಮೂರು ವಿಧಿಗಳೂ ಲಿಂಗಧಾರಣವನ್ನು ಪ್ರತಿಪಾದಿಸುತ್ತವೆ ಎಂದು ವಿಶದೀಕರಿಸಿದ್ದಾರೆ. ಲಿಂಗಧಾರಣವನ್ನು ಮುಖ್ಯಾರ್ಥವಾಗಿ ಮಾಡಿಕೊಳ್ಳಬೇಕು ಎಂಬ ವಿಷಯವಾಗಿಯೂ ಕೂಡ ಅದೇನು ಅಂತರ್ಲಿಂಗ ಧಾರಣವೇ?

ಬಹಿರ್ಲಿಂಗಧಾರಣವೇ ? ಅಥವಾ ಪ್ರಣವಧಾರಣವೇ? ಎಂದು ಆಶಂಕಿಸಿಕೊಂಡು ಸಿದ್ಧಾಂತ ಮಾಡಲಾಗಿದೆ. ಇದರಂತೆ 'ಸರ್ವಾನನ ಶಿರೋಗ್ರೀವಃ' (ಶ್ವೇ. ೩. ೧೧)' 'ಅಯಂ ಮೇ ಹಸ್ತೋ ಭಗವಾನ್' (ಋ. ೮-೧-೨೫) 'ಯಾ ತೇ ರುದ್ರ ಶಿವಾ ತನೂಃ' (ತೈ. ಸಂ ೪-೫೪) ''ತ್ರ್ಯಂಬಕಂ ಯಜಾಮಹೇ'' (ತೈ. ಸಂ. ೧-೮-೬-೧-೧) 'ಸೋಮಾ ರುದ್ರಾ' (ತೈ.ಸಂ. ೧೮-೨೨-೪೨) 'ಪವಿತ್ರಂ ತೇ' (ಋ. ೭-೩-೮) ''ಸರ್ವಲಿಂಗಗ್‍ಂಸ್ಥಾಪಯತಿ'' ಮುಂತಾದ ಮಂತ್ರಗಳಿಗೆ ಭಾಷ್ಯಕಾರರು ಉಪಬೃಂಹಣವಾಕ್ಯ ಪೂರ್ವಕವಾಗಿ ಮಾಡಿರುವ ವ್ಯಾಖ್ಯಾನವು ಅವರ ಸರ್ವತೋಮುಖ ಪಾಂಡಿತ್ಯಕ್ಕೆ ನಿದರ್ಶನವಾಗಿದೆ.

'ಲಕ್ಷಣಪ್ರಮಾಣಾಭ್ಯಾಂ ವಸ್ತುಸಿದ್ಧಿಃ' ಎಂಬ ನ್ಯಾಯವನ್ನು ಅನುಸರಿಸಿ 'ಜನ್ಮಾದ್ಯಧಿಕರಣ'ದಲ್ಲಿ ಪರಶಿವಬ್ರಹ್ಮಲಕ್ಷಣವನ್ನೂ, ಶಾಸ್ತ್ರಯೋನಿತ್ವಾಧಿಕರಣದಲ್ಲಿ ಬ್ರಹ್ಮವು ಶಾಸ್ತ್ರೈಕ ಸಮಧಿಗಮ್ಯ ಎಂದೂ ಶಾಸ್ತ್ರಕ್ಕೆ ಮೂಲ ಎಂದೂ ಸಯುಂಕ್ತಿಕವಾಗಿ ಪ್ರತಿಪಾದಿಸಲಾಗಿದೆ.

ನಾಲ್ಕನೆಯ ಅಧಿಕರಣವು ಸಮನ್ವಯಾಧಿಕರಣ. ಇಲ್ಲಿ ಉಪಕ್ರಮೋಪಸಂಹಾರಾದಿ ವೇದಾಂತ ತಾತ್ಪರ್ಯ ಲಿಂಗಗಳಿಂದ ಎಲ್ಲ ಶ್ರುತಿಗಳಿಗೂ ಬ್ರಹ್ಮದಲ್ಲಿಯೇ ಸಮನ್ವಯ ಎಂದು ಸಿದ್ಧಿ ಮಾಡಲಾಗಿದೆ.

ಭಾಷ್ಯದ ಮೊದಲ ಪಾದದ ಮುಂದಿನ ಅಧಿಕರಣಗಳಲ್ಲಿ ವೀರಶೈವ ಪರಿಭಾಷೆಯೆನಿಸಿರುವ ಆಚಾರಲಿಂಗ, ಗುರುಲಿಂಗ. ಶಿವಲಿಂಗ, ಚರಲಿಂಗ, ಪ್ರಸಾದಲಿಂಗ ಮತ್ತು ಮಹಾಲಿಂಗಗಳ ಹಾಗೂ ಇಷ್ಟಪ್ರಾಣಾದಿತ್ರಿವಿಧೋಪಾಸನವನ್ನು ಪ್ರತ್ಯೇಕ ಸೂತ್ರಭಾಷ್ಯಗಳಲ್ಲಿ ಸಪ್ರಮಾಣವಾಗಿ ನಿರೂಪಿಸಲಾಗಿದೆ.

ಶ್ರೀಕರಭಾಷ್ಯದಲ್ಲಿ ಇತರ ಭಾಷ್ಯ ವಿಲಕ್ಷಣವಾಗಿ ಉಲ್ಲೇಖನೀಯ ವಿಚಾರವೆಂದರೆ ಬ್ರಹ್ಮ ವಿದ್ಯಾಧಿಕಾರಿನಿರ್ಣಯ. ಬಾದರಾಯಣರು ಪ್ರಮಿತಾಧಿಕರಣದಲ್ಲಿ 'ಹೃದ್ಯಪೇಕ್ಷಯಾ ತು ಮನುಷ್ಯಾಧಿಕಾರತ್ವಾತ್'' ಎಂದು ಹೇಳಿದ್ದಾರೆ. ಈ ಸೂತ್ರ ಭಾಷ್ಯದಲ್ಲಿ 'ಪರಶಿವನು ಸಾಧಕರನ್ನು ಅನುಗ್ರಹಿಸುವುದಕ್ಕಾಗಿಯೇ ಅಂಗುಷ್ಠ ಮಾತ್ರ ಪರಿಮಾಣವನ್ನು ಪಡೆದು ಮಾನವ ಹೃದಯಾಕಾಶದಲ್ಲಿ ನೆಲೆಸಿರುವುದರಿಂದಲೂ, ಸಂಸಾರಹೇಯಬುದ್ಧಿಯುದಿಸಿ ಅರ್ಥಿತ್ವ ಶಕ್ತತ್ವಾದಿಗಳು ಮಾನವರಿಗೆ ಮಾತ್ರವೇ ಇರುವುದರಿಂದಲೂ, ಮಾನವಸಾಮಾನ್ಯಕ್ಕೂ ಹಿತವನ್ನು ಮಾಡಬೇಕೆಂದು ಶ್ರುತಿಹೇಳುವುದರಿಂದಲೂ. ಎಲ್ಲ ಮಾನವರಿಗೂ ಬ್ರಹ್ಮವಿದ್ಯಾಧಿಕಾರವುಂಟು ಎಂದು ಆಚಾರ್ಯರು ಸಾರಿದ್ದಾರೆ. ಇಲ್ಲಿ ಮುಂದೆ ಬರುವ ಅಪಶೂದ್ರಾಧಿಕರಣದಲ್ಲಿ ಉಪನಯನಾಧಿಕಾರವುಳ್ಳ ತ್ರೈವರ್ಣಿಕರಿಗೆ ಮಾತ್ರವೇ ಬ್ರಹ್ಮವಿದ್ಯಾಧಿಕಾರವನ್ನು ನಿರ್ಣಯಿಸಿದೆಯಾದರೂ ಮುಂದೆ 'ವಿಧುರಾಧಿಕರಣ' ದಲ್ಲಿ (ಬ್ರ.ಸೂ. ೧,೩,೪, ೧೦-೩೬-೩೯) ಬರುವ ಸೂತ್ರ ಭಾಷ್ಯಗಳಲ್ಲಿ ನಾಲ್ಕು ಆಶ್ರಮಗಳಿಗೂ ಅತೀತರಾದ ಅನಾಶ್ರಮಿಗಳಿಗೂ ಶಿವನ

ಧ್ಯಾನ-ಧಾರಣ-ಪೂಜಾಧಿಕಾರವನ್ನು ವಸಂ. ಶೌನಕಾದಿಸ್ಮೃತಿ ಪುರಾಣಗಳಲ್ಲಿ ಹೇಳಿರುವುದಲ್ಲದೆ, ಎಲ್ಲ ಮುಮುಕ್ಷುಗಳಿಗೂ 'ಸರ್ವಲಿಂಗಗ್ಂಸ್ಥಾಪಯಂತಿ. ಎಂದು ಲಿಂಗಧಾರಣವನ್ನು ಹೇಳಿರುವುದರಿಂದ ಮಾನವ ಸಾಮಾನ್ಯಕ್ಕೂ ಬ್ರಹ್ಮವಿದ್ಯಾಧಿಕಾರವುಂಟು ಎಂದೂ ನಿರ್ಣಯಿಸಲಾಗಿದೆ. ಮೇಲಾಗಿ ಮೌನಾಧಿಕರಣ (೩. ೪. ೧) ದಲ್ಲಿ ಅತ್ಯಾಶ್ರಮ ಸ್ವರೂಪವನ್ನು ಮಹಾಪಾಶುಪತವೆನಿಸಿದ ವೀರಶೈವಕ್ಕೆ ಅನ್ವಯಿಸಿ, ಅತ್ಯಾಶ್ರಮಸ್ಥರಾದ ಮಾನವರೆಲ್ಲರಿಗೂ ಬ್ರಹ್ಮವಿದ್ಯಾಧಿಕಾರತ್ವಂ ಸರ್ವಾಶ್ರಮಿಣಾಂ ಸಿದ್ಧಂ' ಉಂಟು ಎಂದು ಸಾಧಿಸಲಾಗಿದೆ.

ಇವೇ ಮುಂತಾದ ಅನೇಕ ವಿಚಾರಗಳಲ್ಲಿ ತನ್ನದೇ ಆದ ನಿಲವನ್ನು ಹೊಂದಿರುವ ಶ್ರೀಕರಭಾಷ್ಯವು ಪ್ರಾಚೀನ ವೀರಶೈವದ ರೂಪು-ರೇಷೆಗಳನ್ನು ಗುರುತಿಸಲು ದಾರಿದೀಪವಾಗಿದೆ.

## ೩. ಶ್ರೀಕಂಠಭಾಷ್ಯ

ಶ್ರೀಕಂಠಭಾಷ್ಯಕರ್ತರು ಶ್ರೀಕಂಠಶಿವಾಚಾರ್ಯರು ಎಂಬುದು ಭಾಷ್ಯಾರಂಭದಲ್ಲಿ ಬರುವ

ವ್ಯಾಸಸೂತ್ರಮಿದಂ ನೇತ್ರಂ ವಿದುಷಾಂ ಬ್ರಹ್ಮಸಿದ್ಧಯೇ ।
ಪೂರ್ವಾಚಾರ್ಯೈಃ ಕಲುಷಿತಂ ಶ್ರೀಕಂಠೇನ ಪ್ರಸಾಧ್ಯತೇ ॥

ಎಂಬ ಶ್ಲೋಕದಿಂದ ವೇದ್ಯವಾಗುತ್ತದೆ.

ಶ್ರೀಕಂಠಭಾಷ್ಯಕ್ಕೆ ಅಪ್ಪಯ್ಯ ದೀಕ್ಷಿತರ "ಶಿವಾರ್ಕಮಣಿದೀಪಿಕಾ'' ಎಂಬ ಪ್ರೌಢವಾದ ಬೃಹದ್‌ವ್ಯಾಖ್ಯಾನವಿದೆ. ಇದರಲ್ಲಿ ದೀಕ್ಷಿತರು (ಕ್ರಿ. ಶ. ಸು. ೧೭೦೦) ಮೀಮಾಂಸಾನ್ಯಾಯ ಗಳನ್ನು ಪ್ರದರ್ಶಿಸಿ ಭಾಷ್ಯಕಾರರ ಅಭಿಮತವನ್ನು ಸಮರ್ಥಿಸಿದ್ದಾರೆ. 'ಶಿವ' ಶಬ್ದ ವ್ಯುತ್ಪತ್ತಿ, ಶಿವನಿಗಿರುವ ಅಷ್ಟಾಭಿದಾನ, ಅಂತರ್ಗಣಿಕಭೇದ ಮುಂತಾದ ಅನೇಕ ವಿಷಯಗಳು ಈ ದೀಪಿಕೆ ಪ್ರಕಾಶದಲ್ಲಿ ಸ್ಪಷ್ಟವಾಗಿ ಕಾಣುವಂತಾಗಿರುವುದು ದೀಕ್ಷಿತರ ಸರ್ವತೋಮುಖ ಪ್ರಖರ ಪಾಂಡಿತ್ಯ ಮತ್ತು ಅನುಭವಗಳಿಂದ ಎಂದರೆ ಅತ್ಯುಕ್ತಿಯಲ್ಲ. ಇಲ್ಲಿ ಯಥೋಚಿತವಾಗಿ ಶಿವಪುರಾಣಾದಿ ಗಳಿಂದಲೂ ಶಿವಾದ್ವೈತವನ್ನು ಪ್ರತಿಪಾದಿಸಲಾಗಿದೆ.

ಮಾಧವೀಯ ಶಂಕರವಿಜಯದಲ್ಲಿ (ಸರ್ಗ.೧೫) ಬರುವ ಬ್ರಹ್ಮಸೂತ್ರ ಶಿವಸೂತ್ರ ಭಾಷ್ಯ ಕರ್ತೃ ನೀಲಕಂಠರೂ ಶ್ರೀಕಂಠರೂ ಒಬ್ಬರೇ ಎಂದು ಕೆಲವರು ವಾದಿಸುತ್ತಾರೆ. ಆಂಧ್ರ, ಕರ್ನಾಟಕ, ಮಹಾರಾಷ್ಟ್ರ ಪ್ರಾಂತಗಳಲ್ಲಿ ಹೆಚ್ಚಾಗಿ ನೆಲೆಸಿರುವ ವೀರಶೈವ ಆರಾಧ್ಯ ಬ್ರಾಹ್ಮಣರಿಗೆ ಪೂಜ್ಯರೆನಿಸಿರುವ ರೇವಣ ಮುಂತಾದ ಹನ್ನೆರಡು ಮಂದಿ[1] ಆಚಾರ್ಯರಲ್ಲಿ ಪರಿಗಣಿತ ರಾಗಿರುವ ನೀಲಕಂಠರೇ ಶ್ರೀಕಂಠಶಿವಾಚಾರ್ಯರೆಂದು ಹೇಳಲಾಗಿದೆ. ಶ್ರೀಮುದಿಗೊಂಡ ನಾಗಲಿಂಗಾರಾಧ್ಯರು ನೀಲಕಂಠರು ಮತ್ತು ಶ್ರೀಕಂಠರು ಒಬ್ಬರೇ ಎಂದೂ' ಶ್ರೀಕಂಠಭಾಷ್ಯವೂ

ನೀಲಕಂಠಭಾಷ್ಯವೂ ಒಂದೇ ಎಂದೂ ಭಾವಿಸಿದ್ದಾರೆ. ಇವರು ಅಪ್ಪಯ್ಯದೀಕ್ಷಿತರ ಶಿವಾರ್ಕಮಣಿ ದೀಪಿಕೆಯನ್ನು ಸಂಗ್ರಹಿಸಿ "ಶಿವಚಿಂತಾಮಣಿ ಪ್ರಭೆ"[2] ಎಂಬ ಹೆಸರಿನಿಂದ ಶ್ರೀಕಂಠಭಾಷ್ಯವನ್ನು ವ್ಯಾಖ್ಯಾನಿಸಿದ್ದಾರೆ.

ಇನ್ನು "ಕ್ರಿಯಾಸಾರ" ಎಂಬ ಗ್ರಂಥಕ್ಕೂ ಮೂಲವೆನಿಸಿರುವ ನೀಲಕಂಠಭಾಷ್ಯವೇ ಶ್ರೀಕಂಠಭಾಷ್ಯವೆಂದು ಕೆಲವರು ಭಾವಿಸಿದ್ದಾರೆ[3]. ಆದರೆ ಕ್ರಿಯಾಸಾರದ ಪ್ರತಿಯೊಂದು ಅಧಿಕರಣದಲ್ಲಿಯೂ ಲಿಂಗಧಾರಣಕ್ಕೆ ಪ್ರಾಧಾನ್ಯವಿದ್ದು, ಅಷ್ಟಾವರಣ, ಪಂಚಾಚಾರಗಳ ಪ್ರತಿಪಾದನೆಯಿದೆ. ಶ್ರೀಕಂಠಭಾಷ್ಯದಲ್ಲಿ ಈ ಅಂಶಗಳ ಉಲ್ಲೇಖವಿಲ್ಲ. ಮಾತ್ರವಲ್ಲದೆ ಶ್ರೀಕಂಠರ ಶಿವಾದ್ವೈತವು ಶಿವಸಾರೂಪ್ಯ (ಸಾಮ್ಯ) ಮುಕ್ತಿ ಪ್ರಧಾನವಾದ ಶೈವವಿಶಿಷ್ಟಾದ್ವೈತ. ಕ್ರಿಯಾ ಸಾರದಲ್ಲಿ ಹೇಳಿರುವ ವಿಶಿಷ್ಟಾದ್ವೈತವು "ಲಿಂಗಾಂಗ ಸಾಮರಸ್ಯಾತ್ಮಕ"[4] ವಿಶಿಷ್ಟಾದ್ವೈತ ಅದು ದ್ವೈತಾದ್ವೈತವೂ ಆಗಿದೆ[5]. ಮೇಲಾಗಿ ಶ್ರೀಕರಭಾಷ್ಯದಲ್ಲಿ ಶ್ರೀಕಂಠರ ವಿಶಿಷ್ಟಾದ್ವೈತವನ್ನು ನಿರಾಕರಿಸಲಾಗಿದೆ. ಈ ಕಾರಣಗಳಿಂದ ಶ್ರೀಕಂಠಭಾಷ್ಯವು ವೀರಶೈವಸಿದ್ಧಾಂತ ಪ್ರತಿಪಾದಕ ವೆನಿಸುವುದಿಲ್ಲ. ಆದರೆ ಶ್ರೀಕಂಠ ಭಾಷ್ಯೋಕ್ತವಾದ ಶಿವಾಧಿಕ್ಯ ಮುಂತಾದ ಅನೇಕ ವಿಚಾರಗಳು ವೀರಶೈವಸಿದ್ಧಾಂತಕ್ಕೆ ಪೋಷಕವಾಗಿರುವುದರಿಂದ ಶ್ರೀಪತಿಪಂಡಿತರೂ ಸಹ ಅವರನ್ನು "ಶ್ರೀಕಂಠ ಶಿವಾರಾಧ್ಯ"ರೆಂದು ಗೌರವಿಸಿ, ಅವರ ಭಾಷ್ಯದ ಅನೇಕಾಂಶಗಳನ್ನು ಸ್ವೀಕರಿಸಿರುವುದರಿಂದ ಶ್ರೀಕಂಠಭಾಷ್ಯವು ವೀರಶೈವತತ್ತ್ವಜಿಜ್ಞಾಸುಗಳಿಗೆ ಅವಲೋಕನೀಯವೇ ಆಗಿದೆ.

---

೧ ರೇವಣೋ ಮರುಳಶ್ಚೈವ ಏಕೋರಾಮಸ್ಸಿದ್ಧಾಸ್ತ್ರಯಃ ಸ್ಮೃತಾಃ ।
ಶ್ವೇತಾಚಾರ್ಯೋ ಲಾಕುಲೀಶೋ ನೀಲಕಂಠೋ ಜಗದ್ಗುರುಃ ॥
ಉದ್ಭಟಃ ಕೋಟಿಪಲ್ಲಿಶ್ಚ ವೇಮಾರಾಧ್ಯಃ ಪ್ರಕೀರ್ತಿತಃ ।
ಶ್ರೀಪತಿರ್ಮುಂಚನಶ್ಚೈವ ಮಲ್ಲಿಕಾರ್ಜುನ ಪಂಡಿತಃ–ನೀಲಕಂಠಭಾಷ್ಯಪೀಠಿಕಾ

(ಪು. ೪)

೨ ಓರಿಯೆಂಟ್ ಪವರ್ ಪ್ರೆಸ್, ತೆನಾಲಿ, ೧೯೫೦,

೩ 'ವೀರಶೈವದ ಉಗಮ ಮತ್ತು ಪ್ರಗತಿ'–ಶ್ರೀ. ಟಿ. ಎನ್. ಮಲ್ಲಪ್ಪನವರು, ನಿವೃತ್ತ ಹೈಕೋರ್ಟ ನ್ಯಾಯಮೂರ್ತಿಗಳು

೧೯೭೭–(ಪು. ೧೭೧–೧೯೮)

೪ ಲಿಂಗಾಂಗಸಾಮರಸ್ಯೇನ ಶಿವಭಾವಸಮನ್ವಿತೈಃ

(ಕ್ರಿಯಾಸಾರ ಉ, ೧, ೪೪)

೫ ಯಥಾಹಿಕುಂಡಲಮಿಂತಿ ಭೇದಾಭೇದೌ ತಥಾತ್ರ ಚ

(ಕ್ರಿಯಾಸಾರ ಉ. ೧. ೬೫)

## ಶ್ರೀಕಂಠಭಾಷ್ಯಪ್ರಮೇಯಸಂಗ್ರಹ

ಶ್ರೀಕಂಠಮತದಲ್ಲಿ ಪತಿ ಅಪರ ಪರ್ಯಾಯ ಬ್ರಹ್ಮವು ಸಗುಣ. ಶಕ್ತಿಯು ಆ ಬ್ರಹ್ಮದ ಗುಣ ಅಥವಾ ಧರ್ಮ, ಇದು ಸತ್ಕಾರ್ಯವಾದವನ್ನು ಒಪ್ಪುತ್ತದೆ. ಶ್ರೀಕಂಠರು ಇಪ್ಪತ್ತೆಂಟು ಶಿವಾಗಮ ಪ್ರಾಮಾಣ್ಯವನ್ನೂ, ಪತಿ-ಪಶು-ಪಾಶ ಎಂಬ ತತ್ತ್ವತ್ರಯವನ್ನೂ ಒಪ್ಪುತ್ತಾರೆ. ಚಿದಚಿದಾತ್ಮಕ ಚೇತನಾಚೇತನರೂಪ ಜೀವ-ಜಗತ್ತುಗಳು ಪತಿಶಕ್ತಿಯಲ್ಲಿರುವುದಾಗಿ ಇಲ್ಲಿ ಪ್ರತಿಪಾದಿಸಲಾಗಿದೆ. ಒಟ್ಟಿನಲ್ಲಿ ಚಿದಚಿತ್ತುಗಳೆಂಬ ಪಶು-ಪಾಶಗಳು ಶರೀರಿಗೆ ಶರೀರದಂತೆ ಗೌಣ.

ಶ್ರೀಕಂಠಮತದಲ್ಲಿ ಕಾರ್ಯ-ಕಾರಣಗಳಿಗೆ ಅಪೃಥಕ್ ಸಿದ್ಧತ್ವವನ್ನು ಹೇಳಿದೆ. ಜಗತ್ತಿನ ಜನ್ಮ-ಸ್ಥಿತಿ-ಪ್ರವೃತ್ತಿಗಳು ಬ್ರಹ್ಮನಿಗೆ ಅಪೃಥಕ್ ಸಿದ್ಧವಾದ್ದರಿಂದ ಜಗತ್ತು ಬ್ರಹ್ಮನಿಗಿಂತ ಬೇರೆ ಅಲ್ಲ. ಪಾಲಕನು ನಿತ್ಯನಾದ್ದರಿಂದ ಅವನು ಪಾಲಿಸುವ ಜಗತ್ತೂ ನಿತ್ಯವೇ. ಶ್ರೀಕಂಠರು ಅಂತರ್ಗಣಿಕ ಭೇದವನ್ನು ಒಪ್ಪಿರುವ ವಿಚಾರವು ಅಪ್ಪಯ್ಯ ದೀಕ್ಷಿತರ ಶಿವಾರ್ಕಮಣಿದೀಪಿಕೆಯಿಂದ ತಿಳಿದು ಬರುತ್ತದೆ[1] ಅಲ್ಲಿ ಅಂತರ್ಗಣಿಕಭೇದ ಎಂದರೆ-''ಗಣಃ—ಸಮೂಹಃ, ಅಂತರ್ವಿದ್ಯಮಾನೋ ಗಣಃ ಅಂತರ್ಗಣಃ ಅಂತರ್ಗಣೇ ವಿದ್ಯತ ಇತಿ ಅಂತರ್ಗಣಿಕಃ, ಅಂತರ್ಗಣಿಕಶ್ಚಾಸೌ ಭೇದಶ್ಚ ಅಂತರ್ಗಣಿಕಭೇದಃ ಶಿವಾಂತರ್ಗತ ಪಶುಪಾಶ ರೂಪಗಣನಿಷ್ಠಃ". ಇದನ್ನು ಶ್ರೀರಾಮಾನುಜದರ್ಶನದಲ್ಲಿ 'ಸ್ವಗತಭೇದ' ಎಂದು ಕರೆಯಲಾಗಿದೆ.

ಶ್ರೀಕಂಠದರ್ಶನವು ಪತಿ-ಪಾಶ-ಪಶು ಎಂಬ ಪದಾರ್ಥತ್ರಯವನ್ನು ಮಾತ್ರವಲ್ಲದೆ ಜೀವನ ಅಣುತ್ವ, ಶಿವಸಾಮ್ಯರೂಪ ಮೋಕ್ಷ, ಮೋಕ್ಷದಲ್ಲಿ ಸರ್ವಜ್ಞತ್ವ ಮತ್ತು ಸರ್ವಕರ್ತೃತ್ವಗಳ ಅಭಿವ್ಯಕ್ತಿಗಳನ್ನು ಒಪ್ಪಿದೆ.

## ೪ ಶಿವಾದ್ವೈತ ಮಂಜರೀ

### (ಕ್ರಿ.ಶ.ಸು ೧೨ನೆಯ ಶತಮಾನ)

ವೀರಶೈವ ಸಿದ್ಧಾಂತ ಪ್ರತಿಪಾದಕವಾದ ಗ್ರಂಥಗಳಲ್ಲಿ ಶಿವಾದ್ವೈತ ಮಂಜರಿಯೂ ಒಂದು, ಕರ್ತೃ ಸ್ವಪ್ರಭಾನಂದ ಶಿವಾಚಾರ್ಯರು. ಗ್ರಂಥದ ಕಡೆಯಲ್ಲಿ 'ಬ್ರಹ್ಮವಿದ್ಯಾಚಾರ್ಯ ನಾಥಾನಂದ ಮುನೀಂದ್ರ ಶಿಷ್ಯ' ಎಂದು ಹೇಳಲಾಗಿದೆ. ಇವರ ದೇಶ ಕಾಲಾದಿಗಳು ಸ್ಪಷ್ಟವಾಗಿಲ್ಲ. ಗುರು-ಶಿಷ್ಯರ ಹೆಸರುಗಳು, ಗ್ರಂಥಶೈಲಿ ಮುಂತಾದವುಗಳಿಂದ ಇವರು ಶೈವ ಪ್ರಚಾರವು ಅಧಿಕವಾಗಿದ್ದ ಕಾಶ್ಮೀರನಿವಾಸಿಗಳಿರಬೇಕೆಂದೂ, ಕ್ರಿ ಶ.ಸು,. ೧೧-೧೨ನೆಯ ಶತಮಾನದಲ್ಲಿದ್ದಿರ ಬಹುದೆಂದೂ ಊಹಿಸಲಾಗಿದೆ.

---

೧ ಶಿವಾರ್ಕಮಣಿದೀಪಿಕಾ (ಪು. ೩೧)

ಶಿವಾದ್ವೈತಮಂಜರಿಯಲ್ಲಿ ಮೂರು ಮಂಜರಿಗಳಿವೆ. ಮೊದಲನೆಯ ಮಂಜರಿಯು ಬ್ರಹ್ಮಸೂತ್ರಶಾಂಕರಭಾಷ್ಯದ ಪ್ರಾರಂಭದಲ್ಲಿ ಬರುವ ಅಧ್ಯಾಸ ನಿರೂಪಣೆಯ ಅನುವಾದ. ಎರಡನೆಯ ಮಂಜರಿಯಲ್ಲಿ ಅದ್ವೈತದ ಮೇಲೆ ಅನೇಕ ಆಕ್ಷೇಪಗಳನ್ನು ಹೇಳಿ ಅದ್ವೈತವನ್ನು ನಿರಾಕರಿಸಲಾಗಿದೆ. ಮೂರನೆಯ ಮಂಜರಿಯು ವೀರಶೈವ ಸಿದ್ಧಾಂತ ನಿರೂಪಣಕ್ಕೆ ಮುಡಿಪು.

ಪರಶಿವ ಬ್ರಹ್ಮವು ಶಕ್ತಿವಿಶಿಷ್ಟ ಎಂಬ ಅಂಶವು 'ಪರಾಸ್ಯ ಶಕ್ತಿಃ ವಿವಿಧೈವ ಶ್ರೂಯತೇ' ಮುಂತಾದ ಶ್ರುತಿಗಳಿಂದ ತಿಳಿದು ಬರುವುದು ಸರಿಯಷ್ಟೆ! ಅದನ್ನು ಶಿವಾದ್ವೈತ ಮಂಜರಿಯಲ್ಲಿ ಹೀಗೆ ನಿರೂಪಿಸಲಾಗಿದೆ.—

''ಸನ್‌ಹೃದಯಪ್ರಕಾಶಃ......ವಿಶ್ವವಿಸ್ತಾರಾ'' ಎಂಬ ಕಾರಿಕೆಯನ್ನು ಈ ಹಿಂದೆ ವ್ಯಾಖ್ಯಾನಿಸಿರುವಂತೆ 'ಪ್ರಕಾಶ ಸ್ವಭಾವವುಳ್ಳ ಈ ಆತ್ಮಸ್ವರೂಪವೇ ಚೇತನಾಚೇತನಾತ್ಮಕವಾದ ಪ್ರಪಂಚವೆಂಬ ಚಿತ್ರದ ಸದ್ಭಾವಕ್ಕೆ ಭಿತ್ತಿಯಾಗಿದೆ. ಅದನ್ನೇ ಹೃದಯಂ ತದ್ವಿಜಾನೀಯಾತ್ ವಿಶ್ವಸ್ಯಾಯತನಂ ಮಹತ್' (ತೈ.) ಎಂಬ ಶ್ರುತಿಯು ಸಮರ್ಥಿಸಿದೆ. ಆತ್ಮ ಪ್ರಕಾಶವನ್ನು 'ಸನ್' (ಅಸ್ತೀತಿ ಅಂಗೀಕರಣೀಯಃ) 'ಇರುತ್ತದೆ' ಎಂದು ಒಪ್ಪಬೇಕು. ಇಲ್ಲದಿದ್ದರೆ ಸಂಪೂರ್ಣ ಪ್ರಪಂಚವೇ ಇಲ್ಲವೆಂದಾಗುತ್ತದೆ. ಮಾತ್ರವಲ್ಲ ಪ್ರಪಂಚದಲ್ಲಿರುವ ತನಗೂ ಅಸ್ತಿತ್ವವೇ ಇರುವುದಿಲ್ಲ. ಆದುದರಿಂದ 'ಸನ್'' ಎಂದು ಒಪ್ಪಬೇಕು. ಇದರಿಂದ ಸತ್ತಾರೂಪವಾದ ಭವನಕ್ರಿಯೆಗೆ ಹೃದಯಪ್ರಕಾಶವು ಕರ್ತೃವೆನಿಸಿಕೊಳ್ಳುವುದು. ಈ ಭವನಕ್ರಿಯೆ ಚಿದ್ರೂಪವಾಗಿಯೂ, ಆನಂದ ರೂಪವಾಗಿಯೂ ಇರುವ ಬ್ರಹ್ಮಸ್ವರೂಪದಲ್ಲಿ ವಿಶ್ರಾಂತಿ ಪಡೆದು 'ವಿಮರ್ಶ' ಎನಿಸಿಕೊಳ್ಳುವುದು. ಈ ವಿಮರ್ಶೆಯೇ ಅಸ್ಮಿ–ಪ್ರಕಾಶೇ–ನಂದಾಮಿ ಎಂದು ಬೆಳಗುವುದು. ಈ ಅನುಭವವು ಇಲ್ಲದಿದ್ದರೆ ಬ್ರಹ್ಮದ ಪ್ರಕಾಶವು ಸ್ಫಟಿಕಾದಿಗಳ ಪ್ರಕಾಶದಂತೆ ಜಡವಾಗಬೇಕಾಗುವುದು.

ಭವನಕ್ರಿಯೆಯು (ಸದ್ರೂಪ ಬ್ರಹ್ಮವು) ಸ್ವಸ್ಥತೆಯನ್ನು ಬಿಟ್ಟು 'ಬಹುಸ್ಯಾಂ ಪ್ರಜಾಯೇಯ' ಎಂದು ಸೃಷ್ಟ್ಯಾದಿ ಕಾರ್ಯೋನ್ಮುಖವಾಗಿ ಕ್ಷೋಭೆಯನ್ನು ಪಡೆದು 'ವಿಶ್ವವಿಸ್ತಾರ' ಎಂಬ ಅವಸ್ಥೆಯನ್ನು ಹೊಂದಿ ವಿಶ್ವಾಕಾರವಾಗಿ ಪರಿಣಮಿಸುವುದು.

ಮುಂದೆ ಗ್ರಂಥಕಾರರು ಶಿವಪಾರಮ್ಯವನ್ನು ಪ್ರತಿಪಾದಿಸಿ ಬಾದರಾಯಣರ ಬ್ರಹ್ಮಸೂತ್ರಗಳ ಐದು ಅಧಿಕರಣಗಳಿಗೆ ಶಿವಾದ್ವೈತಪರವಾಗಿ ವ್ಯಾಖ್ಯಾನಿಸುತ್ತಾರೆ. 'ಉತ್ತಮಾಧಿಕಾರಿಣಂ ಪ್ರತಿ ಈ ಕ್ಷತ್ಯಂತೈವ ಬ್ರಹ್ಮವಿದ್ಯಾ, ಮಧ್ಯಮಾಧಿಕಾರಿಣಂ ಪ್ರತಿ ಪಂಚಪಾದಿಕಾ, ಅವಶಿಷ್ಟಂ ಶಾಸ್ತ್ರಂ ಸರ್ವೇಷಾಂ' ಎಂಬ ಅಧಿಕಾರಿತಾರತಮ್ಯವನ್ನು ಹೇಳಿರುವುದು ಇಲ್ಲಿಯ ವಿಶೇಷ. ಮುಂದೆ ಷಟ್‌ಸ್ಥಲ ಸ್ವರೂಪ, ಲಿಂಗಾಂಗಸಾಮರಸ್ಯ ಪ್ರಕಾರ ಮತ್ತು ವಿಮರ್ಶಶಕ್ತಿವಿಶಿಷ್ಟ ಬ್ರಹ್ಮವು

ಷಟ್‌ತ್ರಿಂಶತ್ತತ್ತ್ವಾತ್ಮಕವಾಗಿ ಪರಿಣಮಿಸುವ ಪ್ರಕಾರವನ್ನು ವಿಸ್ತರಿಸಲಾಗಿದೆ. ಕಡೆಯಲ್ಲಿ 'ಶಿವೋಽಹಂ' ಎಂಬ ಮಂತ್ರವನ್ನು ಸರ್ವದಾ ಅನುಸಂಧಾನ ಮಾಡಬೇಕು ಎಂದು ಸೂಚಿಸಿದೆ.

## ೫ ತತ್ತ್ವ ಪ್ರಕಾಶ

(ಕ್ರಿ. ಶ. ಸು. ೧೧ನೆಯ ಶತಮಾನ)

ಶೈವಸಿದ್ಧಾಂತ ತತ್ತ್ವನಿರ್ಣಯಕ್ಕೆ ಆಧಾರವಾದ ಪ್ರಕರಣ ಗ್ರಂಥವಿದು, ಕರ್ತೃ ಭೋಜದೇವ. (ಕ್ರಿ. ಶ. ಸಂ. ೧೦೧೮–೧೦೬೦) ಗುರು–ಉತ್ತುಂಗ ಶಿವಾಚಾರ್ಯ, 'ಸರ್ವಾಗಮಾರ್ಥನಿರ್ಣೇತಾ' ಎಂಬುದು ಬಿರುದು. ಇದಕ್ಕೆ ಶ್ರೀಕುಮಾರ ಎಂಬುವರ 'ತಾತ್ಪರ್ಯದೀಪಿಕೆ', ಅಘೋರ ಶಿವಾಚಾರ್ಯ ವಿರಚಿತ ವ್ಯಾಖ್ಯೆ, ಕನ್ನಡದಲ್ಲಿ 'ಪರ್ವತಸ್ವಾಮಿ' ಎಂಬುವರ ಟೀಕೆಗಳಿವೆ.

## ತತ್ತ್ವಪ್ರಕಾಶಿಕೆಯ ಪ್ರಮೇಯ ಸಂಗ್ರಹ

'ತತ್ತ್ವಪ್ರಕಾಶ'ವು ದ್ವೈತಶೈವಭೇದಗಳಲ್ಲಿ ಒಂದಾದ 'ಸಿದ್ಧಾಂತಶೈವದರ್ಶನ' ಪ್ರಭೇದಕ್ಕೆ ಸೇರಿದ್ದು. ಇದರಲ್ಲಿ ಶೈವದರ್ಶನಕ್ಕೆ ಮೂಲವಾದ ಮೂವತ್ತಾರು ತತ್ತ್ವಗಳ ವಿವರಣವಿದೆ.

ಸಿದ್ಧಾಂತಶೈವವು ಮಹಾಮಾಯೆ, ಪುರುಷ ಮತ್ತು ಶಿವ ಎಂಬ ಮೂರು ಪ್ರಧಾನ ತತ್ತ್ವಗಳನ್ನು ಒಪ್ಪಿದೆ. ಇದನ್ನೇ ಪತಿ, ಪಶು ಮತ್ತು ಪಾಶ ಎಂದು ಹೆಸರಿಸಲಾಗಿದೆ. ಪತಿ ತತ್ತ್ವಗಳಲ್ಲಿ ಶಿವ–ಶಕ್ತಿ–ಮಂತ್ರಮಹೇಶ–ಮಂತ್ರೇಶ ಮತ್ತು ಮಂತ್ರ ಎಂಬ ಐದು ತತ್ತ್ವಗಳು ಅಡಗಿವೆ. ವಿಜ್ಞಾನಾಕಲ, ಪ್ರಳಯಾಕಲ, ಸಕಲರು ಉಕ್ತರಾಗಿದ್ದಾರೆ. ಪಾಶತತ್ತ್ವದಲ್ಲಿ ಮಲ–ನಿರೋಧ ಶಕ್ತಿ–ಮಾಯಾ–ಬಿಂದು–ಕರ್ಮ ಎಂಬ ಐದು ತತ್ತ್ವಗಳು ಅಂತರ್ಗತವಾಗಿವೆ.

ಇಲ್ಲಿಯ ಪತಿ ವಿಶ್ವೋತ್ತೀರ್ಣ, ಎಲ್ಲ ಜೀವಕೋಟಿಯ ಪತಿ, ಪಾಲಕ, ಸರ್ವಶಕ್ತ, ಆತ್ಮಿಕ, ಸರ್ವವ್ಯಾಪಿ, ನಿತ್ಯ, ಅನಾದ್ಯಂತ, ಅನಾದಿಮುಕ್ತ, ನಿರ್ಮಲ, ಚಿದ್ಘನ, ಪ್ರಭು, ಅಕಾರಣ ಕಾರಣ. ಆತ ಜಗತ್ತಿಗೆ ನಿಮಿತ್ತಕಾರಣ. ಆವನ ಶಕ್ತಿಗಳು ಉಪಾದಾನ ಕಾರಣ.

ಶಿವಶಕ್ತಿಗಳಿಗೆ ಇರುವ ಸಂಬಂಧವು ಚಂದ್ರಚಂದ್ರಿಕೆಗಳಂತೆ ಅವಿನಾಭಾವ. ಶಿವಶಕ್ತಿಗಳೆರಡೂ ಚಿತ್ ಸ್ವರೂಪ. ಇವರಿಬ್ಬರಿಗೂ ಧರ್ಮ–ಧರ್ಮಿಸಂಬಂಧವುಂಟು. ಶಿವನಿಗೆ ಪರಾಪೇಕ್ಷೆಯಿಲ್ಲ. ಶಕ್ತಿಗೆ ಪರಾಪೇಕ್ಷೆ ಅಗತ್ಯ.

ಪಶು :—ಜ್ಞಾನಕ್ರಿಯಾಶಕ್ತಿಯುಕ್ತ, ನಿತ್ಯ. ಅವನ ಅಪರಿಮಿತಜ್ಞಾನಕ್ರಿಯಾಶಕ್ತಿಗಳು ಮುಕ್ತಿಯಲ್ಲಿ ಅಭಿವ್ಯಕ್ತವಾಗುತ್ತವೆ. ಆದ್ದರಿಂದಲೇ ಅವನು ಶಿವಸಾಮ್ಯವನ್ನು ಹೊಂದುತ್ತಾನೆ.

ಪಶು ಮೂರುವಿಧ-ವಿಜ್ಞಾನಾಕಲ, ಪ್ರಳಯಾಕಲ ಮತ್ತು ಸಕಲ ಎಂದು ವಿಜ್ಞಾನಾಕಲರು ಆಣವಮಲದೆಶೆಯನ್ನು ಅನುಸರಿಸಿ ಮಂತ್ರ, ಮಂತ್ರೇಶ-ಮಂತ್ರಮಹೇಶ ಎಂದು ಕರೆಯಲ್ಪಡುತ್ತಾರೆ. ಇವರು ಕಲಾದಿ ತತ್ತ್ವವಳಿದು ನಷ್ಟಮಲರಾಗಿ ಮಂತ್ರಯುತರಾಗುತ್ತಾರೆ. ಪ್ರಳಯಾಕಲನು ಆಣವ-ಕಾರ್ಮಮಲಯುಕ್ತ ಪಶು. ಮೂರೂ ಮಲವಿರುವ ಪಶುಸಕಲ.

ಪಾಶ :— ಈ ಪಾಶವೇ ಪಶು-ಪತಿ ಭೇದಕ್ಕೆ ಕಾರಣ. ಇದರಲ್ಲಿ ಮಲ-ಮಾಯಾ-ಕರ್ಮ-ನಿರೋಧಶಕ್ತಿ-ಬಿಂದು ಎಂಬ ಐದು ಅವಾಂತರ ಪದಾರ್ಥಗಳಿವೆ. ಇವಕ್ಕೂ ಮೋಕ್ಷಕ್ಕೂ ಸಂಬಂಧ. ಮಾಯೆ ಮತ್ತು ಕಾರ್ಮ ಮಲಗಳು ನಷ್ಟವಾಗಿ ಆಣವಮಲವುಳ್ಳ ಪಶುಗಳು ವಿಜ್ಞಾನಾಕಲರೆನಿಸುತ್ತಾರೆ. ಇವರು ಶುದ್ಧ ಸೃಷ್ಟಿಯಲ್ಲಿ ಬೈಂದವ ಶರೀರಗಳನ್ನು ಪಡೆದು ಆಣವಮಲದ ಅವಸ್ಥೆಗಳಿಂದ ವಿದ್ಯಾ-ಈಶ್ವರ-ಸದಾಶಿವ ಮುಂತಾದ ಭೂಮಿಕೆಗಳಲ್ಲಿ ಮಂತ್ರ-ಮಂತ್ರೇಶ-ಮಂತ್ರ ಮಹೇಶ ಶಬ್ದಗಳಿಂದ ಕರೆಯಲ್ಪಡುತ್ತಾರೆ.

ಮೋಕ್ಷ :—ಮೋಕ್ಷವು ಪರ ಮತ್ತು ಅಪರ ಎಂದು ಎರಡು ವಿಧ. ಪರಮೋಕ್ಷವು ಶಿವಸಾಮ್ಯರೂಪ. ಮಲಾವೃತನಾದ ಪಶು ಕ್ರಿಯಾ-ಚರ್ಯಾ ಯೋಗಾನುಷ್ಠಾನದಿಂದ ಮಲಮುಕ್ತನಾಗಿ ಶಿವಕೃಪೆಯಿಂದ ಆಣವಮಲವು ಕಳಚಲು ಅಪರಿಮಿತಜ್ಞಾನ ಕ್ರಿಯಾಶಕ್ತಿಗಳು ಅಭಿವ್ಯಕ್ತವಾಗಿ ಶಿವಸಾಮ್ಯವು ಲಭಿಸುತ್ತದೆ. ಮುಕ್ತನು ಶಿವನಿಗಿಂತ ಬೇರೆಯೇ ಇರುವುದರಿಂದ ಇದು ದ್ವೈತದರ್ಶನ. ಶಿವಾರಾಧನೆಯಿಂದ ದುಃಖವು ದೂರವಾಗುವುದೆಂದು ಇವರ ಅಭಿಮತ.

## ೬. ಕ್ರಿಯಾಸಾರ

**(ಕ್ರಿ.ಶ.ಸು. ೧೪ನೆಯ ಶತಮಾನ)**

ಕ್ರಿಯಾಸಾರದ ಕರ್ತೃ ನೀಲಕಂಠ ಶಿವಾಚಾರ್ಯರು ; ತಾಯಿ ಚನ್ನಮ್ಮ ; ತಂದೆ ಮಲ್ಲಯ್ಯ ದೇವರು. ಕಾಲ ಕ್ರಿ.ಶ.ಸು. ೧೪೦೦.

ಕ್ರಿಯಾಸಾರಕ್ಕೆ ನಿರ್ವಾಣ ಮಂತ್ರಿರಾಜನು (ಕ್ರಿ.ಶ.ಸು. ೧೭೨೫) ರಚಿಸಿರುವ 'ಕ್ರಿಯಾಸಾರ ಸರ್ವಸ್ವಭೂಷಣ' ಎಂಬ ವ್ಯಾಖ್ಯಾನವಿದೆ. ಇದರ ಎರಡು ಉಪದೇಶಗಳು ಅಚ್ಚಾಗಿವೆ. ನಿರ್ವಾಣ ಮಂತ್ರಿಯು ತನ್ನ ವ್ಯಾಖ್ಯಾನದ ಪ್ರಾರಂಭದಲ್ಲಿ ಕೆಳದಿ ರಾಜಾಸ್ಥಾನ ಮಹಾಪಂಡಿತ ಮೌನಪ್ಪಪಂಡಿತರ ಪ್ರೀತ್ಯರ್ಥವಾಗಿ ವ್ಯಾಖ್ಯೆಯನ್ನು ಬರೆದಂತೆ ಹೇಳಿಕೊಂಡಿದ್ದಾನೆ.

ನೀಲಕಂಠಶಿವಾಚಾರ್ಯರು 'ಸಕಲಾಗಮಾರ್ಥವಿವರಣ' ಮತ್ತು 'ಭಾಷಾಪ್ರಬಂಧ' ಎಂಬ ಮತ್ತೆರಡು ಗ್ರಂಥಗಳನ್ನೂ ಬರೆದಿರುವಂತೆ ತಿಳಿದು ಬಂದಿದೆ. ಆದರೆ ಅವು ಸಿಕ್ಕಿಲ್ಲ.

ಕ್ರಿಯಾಸಾರದಲ್ಲಿ ೩೩ ಉಪದೇಶಗಳಿವೆ. ಇವುಗಳಲ್ಲಿ ಮೊದಲ ನಾಲ್ಕು ಉಪದೇಶಗಳು ಬ್ರಹ್ಮಸೂತ್ರ ನೀಲಕಂಠ ಭಾಷ್ಯದ ನಾಲ್ಕು ಅಧ್ಯಾಯಗಳ ಕಾರಿಕಾರೂಪ ವ್ಯಾಖ್ಯಾನ.

ಕ್ರಿಯಾಸಾರಕ್ಕೆ ಪೂರ್ವದ ನೀಲಕಂಠ ಶಿವಾಚಾರ್ಯರು ಬರೆದ ನೀಲಕಂಠಭಾಷ್ಯವು ಮೂಲ. ಆದರೆ ಅದೂ ಸಿಕ್ಕಿಲ್ಲ. ಈ ಬಗೆಗೆ

"ನೀಲಕಂಠ ಶಿವಾಚಾರ್ಯನಾಮ್ನಾ ಭಾಷ್ಯಮಂಚೀಕರತ್ ।
ವಿಶಿಷ್ಟಾದ್ವೈತ ಸಿದ್ಧಾಂತ ಪ್ರತಿಪಾದನಮುತ್ತಮಮ್ ॥
ಮಯಾಪಿ ತಸ್ಯ ತಾತ್ಪರ್ಯಂ ಶ್ರೋತೄಣಾಂ ಸುಖಬುದ್ಧಯೇ ॥
ಕಾರಿಕಾರೂಪತಃ ಸರ್ವಂ ಕ್ರಮೇಣೈವ ನಿಬಧ್ಯತೇ ॥

ಎಂದು ಹೇಳಲಾಗಿದೆ.

ಗ್ರಂಥಕಾರರು ಪ್ರಾರಂಭದಲ್ಲಿ ವೀರಶೈವ ಶಬ್ದ ನಿರುಕ್ತಿಯನ್ನು ಮೂರು ವಿಧವಾಗಿ ಮಾಡಿದ್ದಾರೆ. (೧) ಶಿವಜೀವೈಕ್ಯ ಬೋಧಕವಾದ ವಿದ್ಯೆಯಲ್ಲಿ ರಮಿಸುವವನೇ ವೀರಶೈವ (೨) ವಿಕಲ್ಪವಿಲ್ಲದುದೇ ವೀರಶೈವ (೩) ವಿರೋಧ ರಹಿತವಾದುದೇ ವೀರಶೈವ.

ಇಲ್ಲಿಯ ಅನುಬಂಧ ಚತುಷ್ಟಯ-ವಿಷಯ-'ಅಮೃತಸ್ಯ ದೇವಧಾರಣೋ ಭೂಯಾಸಂ, ಎಂಬ ಶ್ರುತಿ ; ಫಲ-ಲಿಂಗಾಂಗಸಾಮರಸ್ಯ ; ಪಿಂಡಾದಿಜ್ಞಾನಶೂನ್ಯಾಂತವಾದ ಏಕೋತ್ತರ ಶತಸ್ಥಲಾತ್ಮಕವಾದ ಷಟ್‌ಸ್ಥಲ ಮತ್ತು ಅಷ್ಟಾವರಣ-ಪಂಚಾಚಾರಾದಿಗಳನ್ನು ಭಕ್ತಿಯಿಂದ ಕೇಳ ಬಯಸುವವನೇ ಅಧಿಕಾರಿ ; ವಿಷಯ ಮತ್ತು ಶಾಸ್ತ್ರಗಳಿಗೆ ಇರುವ ಪ್ರತಿಪಾದ್ಯಪ್ರತಿಪಾದಕ ಭಾವವೇ ಸಂಬಂಧ.

ಬ್ರಹ್ಮಸ್ವರೂಪಕ್ಕೆ—

ಶಿವ ಏವ ಪರಂ ತತ್ತ್ವಂ ಶಿವ ಏವ ಪರಂ ಮಹಃ ।
ಶಿವ ಏವ ಪರಂ ಜ್ಯೋತಿಃ ಶಿವ ಏವ ಪರಾತ್ಪರಃ ।
ಶಿವ ಏವ ಪರಂ ಲಿಂಗಂ ಲಿಂಗರೂಪೀ ಶಿವಃ ಸ್ವಯಂ ।
ಸರ್ವವೇದಾಂತವಾಕ್ಯಾನಾಂ ಪ್ರತಿಪಾದ್ಯಃ ಶಿವಃ ಸ್ವಯಂ ।

ಶಿವನು ತತ್ತ್ವ ಮಸ್ಯಾದಿ ವಾಕ್ಯ ಸ್ವರೂಪಿ, ನಿಷ್ಕಲ, ಅದ್ವಿತೀಯ, ಸತ್ಯಜ್ಞಾನಾನಂದ ಮುಂತಾದ ಅಸಾಧಾರಣ ಲಕ್ಷಣಲಕ್ಷಿತನು. ಗುರುಕಾರುಣ್ಯದಿಂದ ಇಂಥ ಪರಶಿವ ಬ್ರಹ್ಮ ಸ್ವರೂಪವನ್ನು ಗುರುಮುಖದಿಂದ ಅರಿತು ಶಿವದೀಕ್ಷೆ ಪಡೆಯಬೇಕು. ಧರ್ಮವು ಎರಡು ವಿಧ; ಒಂದು ಪಶುಧರ್ಮ, ಮತ್ತೊಂದು ಪತಿಧರ್ಮ. ಪಶುಧರ್ಮವೆಂದರೆ ಫಲಾಪೇಕ್ಷೆಯಿಂದ ಮಾಡುವ ಕರ್ಮಗಳು. ಇದನ್ನು ಪಿಪೀಲಿಕಾಮಾರ್ಗ ಎಂದು ಕರೆಯಲಾಗಿದೆ. ಪತಿಧರ್ಮವು ವಿಹಂಗಮಮಾರ್ಗ; ವಿಹಂಗಮಮಾರ್ಗವು ಶೀಘ್ರ ಫಲಪ್ರದ; ವೀರಶೈವದ್ದು ವಿಹಂಗಮ ಮಾರ್ಗ.

ಶಾಸ್ತ್ರದ ವಿಷಯು ಜೀವ–ಬ್ರಹ್ಮ ಐಕ್ಯ. ಮುಕ್ತಿಯೇ ಪ್ರಯೋಜನ.

''ನ ಜೀವಬ್ರಹ್ಮಣೋರೈಕ್ಯಂ ಸೂತ್ರಸ್ಯ ಸ್ವರಸತಃ ಸ್ಫುರೇತ್ ।
ಇತಿ ವ್ಯಾಚಕ್ಷತೇ ಶಕ್ತಿವಿಶಿಷ್ಟಂ ವಿಷಯುಸ್ತ್ವಿತಿ ॥
ಯಥಾ ಘಟ ಇತಿ ಜ್ಞಾನೇ ಘಟತ್ವಂ ಸ್ಯಾದ್ವಿಶೇಷಣಮ್ ॥
ತಥಾ ಬ್ರಹ್ಮಣಿ ವೈಶಿಷ್ಟ್ಯಂ ಶಕ್ತೇರಿತ್ಯಭಿಧೀಯತಾಮ್ ॥

## ಭೇದಾಽಭೇಧ

ಅಗ್ನಿಸ್ಫುಲಿಂಗಯೋರ್ನಾಸ್ತಿ ಯಥಾ ಭೇದಃ ಸ್ವರೂಪತಃ ।
ಅಗ್ನಿತ್ವೇನ ಕಣತ್ವೇನ ಭೇದೋಽಪಿ ಸ್ಫುರತಿ ಕ್ವಚಿತ್ ।
ಯಥಾಹಿಕುಂಡಲಮಿತಿ ಭೇದಾಭೇದೌ ತಥಾತ್ರ ಚ ॥
ತಸ್ಮಾಚ್ಛಕ್ತಿವಿಶಿಷ್ಟಸ್ಯಜಿಜ್ಞಾಸಾ ಬ್ರಹ್ಮಣಃ ಸ್ಫುಟಮ್ ॥
ಷಟ್‌ಸ್ಥಲಜ್ಞಾನಮಪ್ಯತ್ರ ಮೋಕ್ಷಸಾಧನಮುಚ್ಯತೇ ॥

ಎಂಬ ಮಾತುಗಳಲ್ಲಿ ಬ್ರಹ್ಮಸ್ವರೂಪ, ಜೀವಲಕ್ಷಣ, ಜೀವಬ್ರಹ್ಮರಿಗೆ ಮತ್ತು ಶಿವಶಕ್ತಿಗಳಿಗೆ ಇರುವ ಭೇದಾಭೇದ ಸಂಬಂಧ ಮತ್ತು ಷಟ್‌ಸ್ಥಲ ಜ್ಞಾನಾನುಷ್ಠಾನಗಳು ಮೋಕ್ಷಕ್ಕೆ ಸಾಧನ ಮುಂತಾದ ವಿಷಯುಗಳು ಸ್ಫುಟವಾಗಿ ಉಕ್ತವಾಗಿವೆ.

ಮುಂದೆ ಪ್ರಮಿತಾಧಿಕರಣ ಮತ್ತು ಅಪಶೂದ್ರಾಧಿಕರಣಗಳಲ್ಲಿ ಜಾತ್ಯಾ ಶೂದ್ರರಿಗೆ ಬ್ರಹ್ಮವಿದ್ಯಾಧಿಕಾರವಿಲ್ಲವೆ ? ಎಂದು ವಿಚಾರ ಮಾಡಿ ''ಸಂಸ್ಕಾರೈಃ ಸಂಸ್ಕೃತಾ ಯೇ ಚ ತೇ ಸರ್ವೇಽಪ್ಯಧಿಕಾರಿಣಃ'' (೮೧–೩೩೪–೩೫) ಎಂಬ ಕಾರಿಕೆಯುಲ್ಲಿ ಸಂಸ್ಕಾರವಿಲ್ಲದ ಶೂದ್ರರಿಗೆ ಬ್ರಹ್ಮವಿದ್ಯಾಧಿಕಾರವಿಲ್ಲವೇ ಹೊರತು ಶಕ್ತಿಪಾತ ಲಕ್ಷಣಗಳಿಂದ ಗುರುಕೃಪೆಗೆ ಪಾತ್ರರಾಗಿ ಶಿವದೀಕ್ಷಾಸಂಸ್ಕಾರವನ್ನು ಪಡೆದ ಸರ್ವರಿಗೂ ಬ್ರಹ್ಮವಿದ್ಯಾಧಿಕಾರವುಂಟೆಂದು ನಿರ್ಣಯಿಸಲಾಗಿದೆ.

## ಕರಪೀಠಾರ್ಚನಸಮರ್ಥನ

ವೀರಶೈವ ಸಂಪ್ರದಾಯಸಿದ್ಧವಾಗಿ ಶಿವಲಿಂಗವನ್ನು ಹಸ್ತಪೀಠದಲ್ಲಿಟ್ಟು ಅರ್ಚಿಸುವುದರ ಅಗತ್ಯವನ್ನು ಹೀಗೆ ಹೇಳಿದೆ—

ಏತದೈಶ್ವರ್ಯ ವಿಭವಂ ಲಿಂಗಂ ಬ್ರಹ್ಮಹೃದಂಬುಜೇ ।
ಸಾಮರಸ್ಯ ವಿಧಾನೇನ ಧಾರ್ಯಂ ಪೂಜ್ಯಂ ಮುಮುಕ್ಷುಭಿಃ ॥

ತಸ್ಮಾತ್ ಸರ್ವಪ್ರಯತ್ನೇನ ಸರ್ವಕರ್ಮಣಿ ಮಾನವಃ ।
ಪರಿವೃತ್ಯ ಯಥಾಕಾಲಂ ಕರಪೀಠೇ ತು ಪೂಜಯೇತ್ ॥ (೧–೪೫೫)

ಶೈವಾಗಮ ಮತ್ತು ಬ್ರಹ್ಮಸೂತ್ರಗಳಿಗೆ ಏಕಾರ್ಥತ್ವವನ್ನು ಹೀಗೆ ಸಮರ್ಥಿಸಲಾಗಿದೆ—

" ವೀರಶೈವಾಗಮಾಖ್ಯಾತಪದಾರ್ಥಾನಾಂ ಪರಸ್ಪರಂ ।
ಆಗಮೇಷು ಪದಾರ್ಥಾ ಯೇ ತ ಏವ ವ್ಯಾಸಸೂತ್ರಕೇ ।
ಶಬ್ದಭೇದೇನ ವಕ್ಷ್ಯಂತೇ ಸಂಜ್ಞಾಭಂಗ್ಯಂತರೇಣ ಚ ॥ ೪೮೦ ॥

ಎಂದು ಹೇಳಿ, ವೀರಶೈವ ಸಿದ್ಧಾಂತಪ್ರಸಿದ್ಧವಾದ ಆಚಾರಾದಿ ಷಡ್‌ಲಿಂಗಸ್ಥಳಗಳನ್ನೂ, 'ಜೀವ ಮುಖ್ಯ ಪ್ರಾಣಲಿಂಗ' ಸೂತ್ರೋಕ್ತ ತ್ರಿವಿಧೋಪಾಸನೆಯನ್ನೂ ಹೇಳಲಾಗಿದೆ.

## ೭ ವಿಶೇಷಾರ್ಥಪ್ರಕಾಶಿಕೆ—ಶಿವಾನುಭವಸೂತ್ರ

## (ಕ್ರಿ. ಶ. ಸು. ೧೪೩೦)

ಈ ಎರಡು ಗ್ರಂಥಗಳ ಕರ್ತೃ ಮಗ್ಗೆ ಮಾಯಿದೇವ ಶಿವಾಚಾರ್ಯರು. ಕಾಲ ಕ್ರಿ. ಶ. ಸು. ೧೪೩೦. ಅನುಭವ ಸೂತ್ರದ ಪ್ರಾರಂಭವಲ್ಲಿ ಇವರ ವಂಶ ಕ್ರಮವು ಉಕ್ತವಾಗಿದೆ.

ವಿಶೇಷಾರ್ಥಪ್ರಕಾಶಿಕೆ ಮತ್ತು ಅನುಭವಸೂತ್ರಗಳು ಪೂರ್ವೋತ್ತರ ವಿಭಾಗಗಳಿಂದ ಕೂಡಿದ ಶಿವಸಿದ್ಧಾಂತದ ಒಂದೇ ಗ್ರಂಥವೆಂದು ವಿಶೇಷಾರ್ಥಪ್ರಕಾಶಿಕೆಯು ಕಡೆಯಲ್ಲಿ ಹೇಳಿದೆ. ವಿಶೇಷಾರ್ಥಪ್ರಕಾಶಿಕೆಯು ಗುರು–ಶಿಷ್ಯ ಸಂವಾದಾತ್ಮಕವಾಗಿದೆ. ಇದರಲ್ಲಿ ಐದು ಅಧಿಕರಣಗಳೂ, ೪೬೭ ಕಾರಿಕೆಗಳೂ ಇವೆ. ಷಟ್‌ಸ್ಥಲಬ್ರಹ್ಮೋಪದೇಶ, ಶಿವಲಿಂಗಾರ್ಚನ ಕ್ರಮ, ಪ್ರಸಾದಸದ್ಭಾವ, ಷಟ್‌ಸ್ಥಲ ಬ್ರಹ್ಮ ಪುರಶ್ಚರಣ ಮತ್ತು ಅವಸಾನವಿಧಿಗಳು ಇಲ್ಲಿಯ ವಿಷಯ.

ಗ್ರಂಥವ ಪ್ರಾರಂಭದಲ್ಲಿ ಐಪುರ ಸೋಮೇಶಸ್ತುತಿಯಿದೆ. " ಸೋಮ " ಎಂದರೆ ಮಹಾ ಮಂತ್ರ ಸ್ವರೂಪ.

ನಮಶ್ಶಬ್ದ ಉಮಾ ಸಾಕ್ಷಾತ್ ಶಿವಶಬ್ದಃ ಶಿವಸ್ಸ್ವಯಂ ।
ಅಯಂಶಬ್ದಸ್ತಯೋರ್ಯೋಗಸ್ಸೋಮಂ ತಂ ಸಮುಪಾಸ್ಮಹೇ ॥

ಶಿವನೇ ಲಿಂಗ, ಉಮೆಯೇ ಅಂಗ, ಇವೆರಡರಿಂದ ಕೂಡಿದವನೇ ಸೋಮ. ಗುರು, ಶಿಷ್ಯನಿಗೆ ವಿಧ್ಯುಕ್ತವಾಗಿ ಶಿವದೀಕ್ಷೆಯನ್ನೆಸಗಿ, ಅವನಲ್ಲಿ ಜ್ಞಾನಾಭಿವೃದ್ಧಿಯಾಗುವುದಕ್ಕಾಗಿ ಶಕ್ತಿಪಾತವನ್ನುಂಟುಮಾಡಿ, ಮಹಾಮಂತ್ರೋಪದೇಶ ಮಾಡಬೇಕು. ಪಂಚಾಕ್ಷರೀಮಂತ್ರವು

ಪ್ರಣವವೂ ಸೇರಿ ಷಡಕ್ಷರವೆನಿಸುತ್ತದೆ. ಅದು ಷಡಂಗಲಿಂಗಸಂಯುಕ್ತ, ಷಟ್‌ಸ್ಥಲ ಬ್ರಹ್ಮ ವರ್ಚಸ್ಸುಳ್ಳದ್ದು. ಶಿವಾನುಭವಸೂತ್ರದಲ್ಲಿ ಉಕ್ತವಾಗಿರುವ ಕ್ರಮದಂತೆ ಅರ್ಥವಿವರಣ ಮಾಡಬೇಕು.

ದ್ವಿತೀಯಾಧಿಕರಣದಲ್ಲಿ ಶಿವಲಿಂಗಾರ್ಚನ ಕ್ರಮವು ಉಕ್ತವಾಗಿದೆ. ಪೂಜಾ ಮತ್ತು ಉಪಚಾರಗಳು ಸೇರಿ ಒಟ್ಟು ಮೂವತ್ತಾರು. ಇವುಗಳಲ್ಲಿ ಪೂಜೆ ಹನ್ನೆರಡು ವಿಧ. ಉಪಚಾರ ಗಳು ೨೪. ಈ ಪೂಜೋಪಚಾರಗಳು (೧೨+೨೪=೩೬) ಷಟ್‌ತ್ರಿಂಶತ್ತತ್ತ್ವಾತ್ಮಕವೇ ಆಗಿವೆ. ಅರ್ಚನ ಮತ್ತು ಅರ್ಪಣಗಳಿಗೆ ಹೆಚ್ಚು ಅಂತರವಿಲ್ಲ, ಕ್ರಿಯಾವಿಶೇಷ ಮಾತ್ರವೇ ಅಲ್ಲಿ ಭೇದ. ದ್ರವ್ಯಶುದ್ಧಿಗಾಗಿ ಅರ್ಚನ, ಅರ್ಪಣದಿಂದ ದ್ರವ್ಯಶುದ್ಧಿ, ಅರ್ಪಣವಾದ ಮೇಲೆ ಅದೇ ಪ್ರಸಾದ ವೆನಿಸುತ್ತದೆ. ಲಿಂಗಕ್ಕೆ ವಿಭೂತ್ಯಭ್ಯುಕ್ಷಣದಿಂದ ಪೃಥಿವಿ, ಸ್ನಪನದಿಂದ ಜಲ, ಅಂಗಾರ ತಾಪನದಿಂದ ವಹ್ನಿ, ಧೂಪವ್ಯಜನದಿಂದ ವಾಯು, ಧೂಪಧೂಮದಿಂದ ಆಕಾಶ, ಗಂಧಧಾರಣ ದಿಂದ ಚಂದ್ರ, ಕರ್ಪೂರದೀಪದಿಂದ ಚಂದ್ರಿಕೆ. ಅಕ್ಷತೆಗಳಿಂದ ನಕ್ಷತ್ರಗಳು, ಪುಷ್ಪಧಾರಣದಿಂದ ಸೂರ್ಯ, ಘೃತದೀಪದಿಂದ ಬಿಸಿಲು, ದೀಪವನ್ನು ಎಲ್ಲೆಡೆಯೂ ಬೆಳಗುವುದರಿಂದ ತತ್ತದಂಶೋದ್ಭವವಾದ ಶೀತೋಷ್ಣಾದಿಗಳು ಶುದ್ಧವಾಗುತ್ತವೆ. ನೈವೇದ್ಯದಿಂದ ಜೀವಾತ್ಮನೂ, ತಾಮ್ಬೂಲದಿಂದ ಗುಣತ್ರಯಗಳೂ, ವಸ್ತ್ರಧಾರಣದಿಂದ ದಶದಿಕ್ಕುಗಳೂ ಶುದ್ಧಿಯಾಗಿ ಶಿವಾರ್ಪಿತವಾಗಿ ಪ್ರಸಾದವೆನಿಸುತ್ತವೆ. ಆ ಪ್ರಸಾದ ಸೇವನೆಯಿಂದ ಪ್ರಸಾದತನುವೆನಿಸಿದ ಭಕ್ತರಿಗೆ ಪರಶಿವ ಸಾಮರಸ್ಯ ಲಭಿಸುತ್ತದೆ.

ಶಾಂತಿರ್ವಾರಿ ಸುಖಂ ಶಮುಸ್ಸುಮನಸಃ ಶ್ರೀಖಂಡ ಪಿಂಡೋಕ್ಷತಾ ।
ಜ್ಞಾನಂ ಕೇಸರಮಾತ್ಮನಾಮ ಕುಸುಮಂ ಧೂಪೋ ಭವೇತ್ ಸೌರಭಂ ।
ದೀಪಃ ಕಾಂತಿರಥಾರ್ಚನಾರತಿ ಮಹಾನೈವೇದ್ಯ ರೂಪಂ ತತಃ ।
ತಾಂಬೂಲಂ ನಿಜಭಕ್ತಿರಾಗರಸ ಏವೇತ್ಯಷ್ಟಧಾ ಪೂಜನಮ್ ॥

ಇದು ಸಾಮಾನ್ಯವಾಗಿ ದೇವತಾರ್ಚನ ರಹಸ್ಯ, ಇನ್ನು ಮುಂದೆ ಹೇಳುವ ವೀರಶೈವರ ಅರ್ಚನಾಕ್ರಮವು ಷಟ್‌ಸ್ಥಲಾತ್ಮಕವಾಗಿದೆ, ಎಂದು ಮುಂತಾಗಿ ಅನೇಕ ವಿಶೇಷಾರ್ಥ ರಹಸ್ಯಗಳನ್ನು ಇದರಲ್ಲಿ ವಿವರಿಸಲಾಗಿದೆ.

## ೮ ಶಿವಾನುಭವಸೂತ್ರ

ಇದರಲ್ಲಿ ಎಂಟು ಅಧಿಕರಣಗಳೂ, ೪೬೮ ಸೂತ್ರಕಾರಿಕೆಗಳೂ ಇವೆ. ಪ್ರಾರಂಭದಲ್ಲಿ ಷಡಧ್ವಶುದ್ಧಿ, ಷಡಕ್ಷರೀವಿದ್ಯೆ, ಷಡಂಗ ಭಕ್ತಿ ಮತ್ತು ಷಟ್‌ಸ್ಥಲ ಬ್ರಹ್ಮಕ್ಕೆ ಜಯವನ್ನು ಕೋರಲಾಗಿದೆ. ಉಮೆಯನ್ನು ಕುರಿತು—

ಯಸ್ಯಾವಶಾತ್ರಯಂ ನಾಮ ವ್ಯತ್ಯಸ್ತಪ್ರಣವಾತ್ಮಕಂ ।
ಬಭೌ ಹ್ರಸ್ವದಯಂ ದೀರ್ಘಂ ದ್ವಿವಶಾತ್ರತ್ವಾತ್ ಉಮೈ ವ ಸಾ ॥

"ತಯಾ ಉಮಯಾ ಸಾರ್ಧಂ ಉಪಾಸಿತತ್ವಾತ್ ಶಿವಃ, ಸದಾನಂದ ಚಿದಾತ್ಮ ಸಂಜ್ಞಃ ಸೋಮ ಇತಿ ಪ್ರಶಸ್ಯತೇ'' ಎಂದು ಐಪುರ ಸೋಮನನ್ನು ಸ್ತುತಿಸಲಾಗಿದೆ.' ಇಲ್ಲಿ ವಂಶಪರಂಪರೆ, ಸ್ಥಲ ನಿರ್ದೇಶ, ಲಿಂಗಾಂಗ ಸ್ಥಲ ನಿರೂಪಣ, ಲಿಂಗಾಂಗ ಸಂಯೋಗವಿಧಿ, ಸರ್ವಾಂಗ ಲಿಂಗ ಸಾಹಿತ್ಯ, ಅರ್ಪಣ ಸದ್ಭಾವ, ಮತ್ತು ಕ್ರಿಯಾವಿಶ್ರಾಂತಿ ಎಂಬ ಎಂಟು ಅಧಿಕರಣಗಳಿವೆ.

ಸಚ್ಚಿದಾನಂದಾತ್ಮಕವಾದ ಏಕಮೇವ ಪರಂಬ್ರಹ್ಮವೆನಿಸಿದ ಶಿವತತ್ತ್ವವನ್ನು ಸ್ಥಲ ಎಂದು ಕರೆಯಲಾಗಿದೆ. ಪ್ರಾಕೃತವಾದ ಈ ವಿಶ್ವವು ಮೊದಲು ಎಲ್ಲಿ ಅಡಗಿದ್ದು ಮತ್ತೆ ಕಡೆಯಲ್ಲಿ ಎಲ್ಲಿ ಲೀನವಾಗುವುದೋ ಅದೇ ಸ್ಥಲ. ಆ ಬಗೆಯ ಸ್ಥಲವು ಸ್ವಶಕ್ತಿ ಕ್ಷೋಭವಶಾತ್ರದಿಂದ ಲಿಂಗಸ್ಥಲ ಮತ್ತು ಅಂಗಸ್ಥಲ ಎಂದು ಇರ್ತೆರನಾಯಿತು. ತನಗೆ ತಾನೇ ಉಪಾಸ್ಯೋಪಾಸಕ ವಾಗಿರಬೇಕೆಂಬುದು ಅದರ ಉದ್ದೇಶ. ಸ್ಥಲವು ಹೇಗೆ ಎರಡಾಯಿತೋ ಅದರಂತೆ ಆ ಸ್ಥಲದಲ್ಲಿ ಅವಿನಾಭಾವದಿಂದಿರುವ ಶಕ್ತಿಯೂ ಕಲಾ-ಭಕ್ತಿ ಎಂದು ಎರಡಾಯಿತು. ಕಲೆಯು ಲಿಂಗಸ್ಥಲವನ್ನೂ, ಭಕ್ತಿಯುಅಂಗಸ್ಥಲವನ್ನೂ ಆಶ್ರಯಿಸಿತು, ಮಹಾನಲವು ದೀಪಿಕೆಯಾಗುವಂತೆ ಜಗತ್ ಸೃಷ್ಟಿಗೆ ಕಾರಣವಾದ ಶಕ್ತಿಯೇ ಭಕ್ತರನ್ನು ಉದ್ಧರಿಸಲು ಭಕ್ತಿಯೆನಿಸಿತು. ಆ ಭಕ್ತಿಯು ಮಹತ್ತುಳ್ಳದ್ದು. ಸಚ್ಚಿದಾನಂದರೂಪ, ಭುಕ್ತಿಮುಕ್ತಿಫಲಪ್ರದ, ಶಕ್ತಿಯೇ ಭಕ್ತಿ; ಭಕ್ತಿಯೇ ಶಕ್ತಿ, ಎರಡಕ್ಕೂ ಹೆಚ್ಚು ಅಂತರವಿಲ್ಲ. ಆದರೆ ಶಕ್ತಿಯು ಪ್ರವೃತ್ತಿ, ಭಕ್ತಿಯು ನಿವೃತ್ತಿ, ಶಕ್ತಿಯು ಅಧೋಮುಖಿ, ಭಕ್ತಿಯು ಊರ್ಧ್ವಮುಖಿ ; ಹೀಗೆ ವಿಚಾರ ಮಾಡಿದರೆ ಗುಣಾಂಶದಲ್ಲಿ ಶಕ್ತಿಗಿಂತ ಭಕ್ತಿಯೇ ಮಿಗಿಲು, ಎಂದು ಹೇಳಿದ ಆಚಾರ್ಯರು ಈ ಭಕ್ತಿಯು ಶ್ರದ್ಧಾ, ನಿಷ್ಠಾ, ಅವಧಾನ, ಅನುಭವ, ಆನಂದ ಮತ್ತು ಸಮರಸ ಎಂಬ ಪ್ರಭೇದ ಗಳಿಂದ ಕ್ರಮವಾಗಿ ಭಕ್ತಿ-ಮಾಹೇಶ-ಪ್ರಸಾದಿ-ಪ್ರಾಣಲಿಂಗಿ-ಶರಣ ಮತ್ತು ಐಕ್ಯ ಎಂಬ ಆರು ಸ್ಥಲಗಳಲ್ಲಿ ಸಾಧಕನನ್ನು ಮುನ್ನುಂದೆ ಕೊಂಡೊಯ್ದು ಲಿಂಗಾಂಗಸಾಮರಸ್ಯಾತ್ಮಕ ನಿತ್ಯಾನಂದ ರೂಪ ಮುಕ್ತಿಯನ್ನು ನೀಡುವುದೆಂದು ಸಿದ್ಧಾಂತಿಸಲಾಗಿದೆ. ಇಲ್ಲಿ ದಾಸೋಽಹ, ಕರ್ಮ, ಜ್ಞಾನ, ಭಕ್ತಿಗಳ ಅರ್ಥವಿಶೇಷಗಳನ್ನು ವಿವರಿಸಿ, ಭಕ್ತಿಯನ್ನು ಪಂಚಮ ಪುರುಷಾರ್ಥ ವೆಂದು ಪ್ರಶಂಸಿಸಲಾಗಿದೆ.

## ಲಿಂಗಧಾರಣಚಂದ್ರಿಕೆ

(ಕ್ರಿ. ಶ. ಸಂ. ೧೭ನೆಯ ಶತಮಾನ)

ಲಿಂಗಧಾರಣ ಚಂದ್ರಿಕೆ ಕರ್ತೃ-ನಂದಿಕೇಶ್ವರ ಶಿವಾಚಾರ್ಯರು. ಕಾಲ (ಕ್ರಿ. ಶ. ಸಂ. ೧೭೦೦ ಎಂಬುದು ಊಹೆ. ಈ ಗ್ರಂಥಕ್ಕೆ ಕಾಶಿಯ ಮಹಾಪಂಡಿತ ಶಿವಕುಮಾರಮಿಶ್ರರು 'ಶರತ್'' ಎಂದು ಸಂಸ್ಕೃತದಲ್ಲಿಯೂ, ಪಂಡಿತರತ್ನಂ ಶಿರಶಿಗುರುಶಾಂತಶಾಸ್ತ್ರಿಗಳು

ಕನ್ನಡದಲ್ಲಿಯೂ, ಲಿಂ. ಎಂ. ಆರ್. ಸಾಖರೆಯವರು ಇಂಗ್ಲೀಷಿನಲ್ಲಿಯೂ ವ್ಯಾಖ್ಯಾನಗಳನ್ನು ಮಾಡಿರುತ್ತಾರೆ.

ವೀರಶೈವದ ಬಾಹ್ಯಚಿಹ್ನೆಗಳಲ್ಲಿ ಲಿಂಗಧಾರಣವು ಮುಖ್ಯ. ಈ ಸಿದ್ಧಾಂತದಲ್ಲಿ ಆತ್ಮ ಶಕ್ತಿಯ ಆವಿರ್ಭಾವಕ್ಕಾಗಿ ಇಷ್ಟ, ಪ್ರಾಣ, ಭಾವಲಿಂಗಗಳ ಧಾರಣವನ್ನು ಹೇಳಿದೆ. ಇಷ್ಟ ಲಿಂಗವು ಸಕಲ, ಪ್ರಾಣಲಿಂಗವು ಸಕಲನಿಷ್ಕಲ, ಭಾವಲಿಂಗವು ನಿಷ್ಕಲ ; ಇಷ್ಟಲಿಂಗವು ಚಕ್ಷುರಾದಿ ಇಂದ್ರಿಯಗೋಚರ, ಪ್ರಾಣಲಿಂಗವು ಮನೋಗೋಚರ ಭಾವಲಿಂಗವು ಅತೀಂದ್ರಿಯ. ಭಾವ-ಪ್ರಾಣಲಿಂಗಾರ್ಚನವು ಇಷ್ಟಲಿಂಗಾರಾಧನೆಯ ಮೂಲಕವೇ ಸಿದ್ಧಿಸಬೇಕು.

ಅಂತರ್ಧಾರಯಿತುಂ ಲಿಂಗಮಶಕ್ತಶ್ಶಕ್ತ ಏವ ವಾ ।
ಬಾಹ್ಯಂ ತು ಧಾರಯೇಲ್ಲಿಂಗಂ ತದ್ರೂಪಮಿತಿ ನಿಶ್ಚಯಾತ್

(— ಸಿ. ಶಿ. ಪರಿ-೩೨)

ಎಂಬ ಉಕ್ತಿಯಂತೆ ಬಾಹ್ಯ ಲಿಂಗಧಾರಣವು ಅಗತ್ಯ.

ಗ್ರಂಥಕಾರರು ಲಿಂಗಧಾರಣವು ವೈದಿಕವೇ ? ಎಂಬ ಸಂದೇಹ ನಿವಾರಣಕ್ಕಾಗಿ ಲಿಂಗ ಧಾರಣವು ವೇದ, ಉಪನಿಷತ್ತು, ಆಗಮಗಳು, ಮನ್ವಾದಿಸ್ಮೃತಿಗಳು, ಅಲಂಕಾರಾದಿ ಶಾಸ್ತ್ರಗಳು ಮತ್ತು ಭಾರತಾದಿ ಇತಿಹಾಸಗಳಲ್ಲಿ ಉಕ್ತವಾಗಿರುವುದರಿಂದ ಅದು ಮುಮುಕ್ಷುಗಳಿಗೆ ಅಗತ್ಯ ಎಂಬುದನ್ನು ಇಲ್ಲಿ ಸಿದ್ಧಾಂತ ಮಾಡಿದ್ದಾರೆ. ಸಂದರ್ಭಾನುಸಾರ ಪೂರ್ವಮೀಮಾಂಸೆಯ ಅನೇಕ ನ್ಯಾಯಗಳನ್ನು ದೃಷ್ಟಾಂತವಾಗಿ ತೋರಿಸಿ ಲಿಂಗಧಾರಣವನ್ನು ಸ್ಥಿರಪಡಿಸಲಾಗಿದೆ.

ಇದರಲ್ಲಿ ಪೂರ್ವಾರ್ಧ ಮತ್ತು ಉತ್ತರಾರ್ಧವೆಂಬ ಎರಡು ವಿಭಾಗಗಳಿವೆ. ಮೊದಲನೆಯ ಭಾಗದಲ್ಲಿ ಸ್ವತಃ ಪ್ರಮಾಣವೆನಿಸಿದ ವೇದ ಮಂತ್ರಗಳಿಂದ ಲಿಂಗಧಾರಣವನ್ನು ಸ್ಥಿರಪಡಿಸಿ ಅನಂತರ ಸ್ಮೃತಿ ತರ್ಕವ್ಯಾಕರಣಾಲಂಕಾರಾದಿ ಶಾಸ್ತ್ರಗಳಿಂದ ಸಮರ್ಥಿಸಲಾಗಿದೆ. ಉತ್ತರಾರ್ಧದಲ್ಲಿ ಲಿಂಗಧಾರಿಯ ಮೃತದೇಹವನ್ನು ಖನನ (ಸಮಾಧಿ) ಮಾಡಬೇಕಲ್ಲದೆ ದಹನ ಮಾಡ ಬಾರದೆಂದೂ, ಖನನವು ವೇದೋಕ್ತವೆಂದೂ ಸಮರ್ಥಿಸಿ, ಲಿಂಗವಂತ ಮೃತರಿಗೆ ಪ್ರೇತತ್ವ ವಿಲ್ಲದ್ದರಿಂದ ಸಾಪಿಂಡ್ಯಾದಿ (ಶಾಸ್ತ್ರ) ಕರ್ಮಗಳನ್ನು ನಿರಾಕರಣ ಮಾಡಿ, ಮೂವತ್ತಾರ ತತ್ತ್ವಗಳ ಸಂಯೋಜನೆಯ ಮೂಲಕ ಮುಕ್ತಸ್ನಾನದ ವಿಧಾನವನ್ನು ತೋರಿಸಲಾಗಿದೆ.

## ಅಂತರ್ಲಿಂಗಧಾರಣ ಸಮರ್ಥನ

ದಹರಾಕಾಶ (ಹೃದಯ ಪುಂಡರೀಕ)ದಲ್ಲಿರುವ ಜ್ಯೋತಿರ್ಮಯವಾದ ಶಿವಚೈತನ್ಯವನ್ನು

ಧ್ಯಾನಿಸುವುದೇ ಅಂತರ್ಧಾರಣ. 'ದಹರಂ ವಿಪಾಪ್ಮಂ...ಗಗನಂ ಯದಸ್ತಿತದುಪಾಸಿತವ್ಯಂ' ಎಂಬ ತೈ. ಶ್ರುತಿಯು ಹೃದಯಾಕಾಶದಲ್ಲಿರುವ ವಸ್ತುವನ್ನು ಉಪಾಸಿಸು ಎಂದು ಧಿಸಿದೆ. "ಯೋ ವೇದಾದೌ...ಯಃಸಃ ಮಹೇಶ್ವರಃ" ಎಂಬ ಶುತ್ರಿಯು ಹೃದಯಾಕಾಶದಲ್ಲಿರುವ ವಸ್ತು ಮಹೇಶ್ವರ ರೂಪ ಎಂದು ಸ್ಪಷ್ಟಪಡಿಸಿದೆ. ಮಹೇಶ್ವರ ಪದವು ಶಿವನಿಗೆ ರೂಢನಾಮ. ಯೋಗಾರ್ಥಕ್ಕಿಂತ ರೂಢಿಯು ಪ್ರಬಲವಾದ್ದರಿಂದ 'ಮಹೇಶ್ವರ' ನೆಂದರೆ ಪರಶಿವನೇ! ಮುಂದಿನ 'ಋತಂ ಸತ್ಯಂ...ವಿರೂಪಾಕ್ಷಾಯ ವೈನಮಃ' ಎಂಬುದು ಆ ಪರಶಿವನು ಶಕ್ತಿವಿಶಿಷ್ಟ (ಕೃಷ್ಣ ಪಿಂಗಲ)ವಾದ ಪರಮೇಶ್ವರನೆಂದು ಸ್ಪಷ್ಟಪಡಿಸಲಾಗಿದೆ. ಮುಂದೆ ಅದೇ ತೈತ್ತಿರೀಯದ ನಾರಾಯಣಾನುವಾಕ, ಕೈವಲ್ಯೋಪನಿಷತ್, ಕಠ, ಶ್ವೇತಾಶ್ವತರಾದಿ ಉಪನಿಷನ್ಮಂತ್ರಗಳು ಇದೇ ವಿಷಯವನ್ನು ಸಮರ್ಥಿಸಿವೆ. 'ಭಾಗವಶುನ್ಯಾಯ'ದಿಂದ ಅರ್ಥನಿಶ್ಚಯ ಮಾಡಲಾಗಿದೆ. ಮುಂದೆ 'ಲಿಂಗೇ ಸಂಪುಷ್ಟಿಃ' ಎಂಬ ಶ್ರುತಿಯಂತೆ ಹೃದಯಾಕಾಶದಲ್ಲಿ ಉಪಾಸ್ಯವಸ್ತು ಪರಶಿವನು ಲಿಂಗರೂಪದಿಂದಿರುವುದರಿಂದ ಅಂತರ್ಲಿಂಗ ಧಾರಣವು ಶ್ರುತಿ ವಿಹಿತ.

## ೧೦ ವೀರಶೈವಾನಂದಚಂದ್ರಿಕೆ

(ಕ್ರಿ.ಶ.ಸು. ೧೭೫೦)

ಕರ್ತೃ ಶ್ರೀಮನ್ ಮರಿತೋಂಟದಾರ್ಯರು. ಇವರು ಕೆಳದಿಯ ಬಸವಪ್ಪನಾಯಕ (ಕ್ರಿ.ಶ. ೧೭೫೦)ನಿಗೆ ಇದನ್ನು ಉಪದೇಶಿಸಿದಂತೆ ಉಕ್ತವಾಗಿದೆ. ಇದರಲ್ಲಿ ವಾದಕಾಂಡ, ಕ್ರಿಯಾಕಾಂಡ ಮತ್ತು ಕಥಾಕಾಂಡ ಎಂಬ ಮೂರು ವಿಭಾಗಗಳಿವೆ.

ಮೊದಲನೆಯ ಕಾಂಡದಲ್ಲಿ ವೀರಶೈವರು ಆಚರಿಸುವ ಕ್ರಿಯೆಗಳನ್ನು ಸಪ್ರಮಾಣವಾಗಿ ವಿವರಿಸಲಾಗಿದೆ. ವಾದಕಾಂಡದಲ್ಲಿ ಪೂರ್ವಪಕ್ಷಿಗಳು ಮಾಡುವ ಆಕ್ಷೇಪಗಳನ್ನು ಪೂರ್ವಮೀಮಾಂಸೋದಾಹರಣಗಳಿಂದ ಖಂಡಿಸಿ, ವೀರಶೈವದ ಉತ್ಕೃಷ್ಟತೆಯನ್ನು ಸಿದ್ಧಮಾಡಿದೆ. ಕಡೆಯ ಕಥಾಕಾಂಡದಲ್ಲಿ ಲಿಂಗಾಂಗ ಸಾಮರಸ್ಯ ಸಿದ್ಧಾಂತವನ್ನು ಅವಲಂಬಿಸಿ ಮುಕ್ತರಾದ ಶರಣರ ಕಥಾಕಲಾಪವನ್ನು ಪ್ರಸ್ತಾಪಿಸಿದೆ. ಈ ಗ್ರಂಥದ ಮತ್ತೊಂದು ವೈಶಿಷ್ಟವೆಂದರೆ ಪದಾರ್ಥ ಲಕ್ಷಣವನ್ನು ಹೇಳುವ ನೈಯಾಯಿಕರಂತೆ ಇಲ್ಲಿಯೂ ಅಂಗಲಕ್ಷಣ, ಅಂಗವಿಭಾಗ ಲಕ್ಷಣ, ಲಿಂಗಲಕ್ಷಣ ಮತ್ತು ಲಿಂಗವಿಭಾಗ ಲಕ್ಷಣಗಳನ್ನು ವಿವರಿಸಲಾಗಿದೆ.

ಅನುಬಂಧಚತುಷ್ಟಯ—ಶುದ್ಧಾಂತಃ ಕರಣವುಳ್ಳಲಿಂಗ (ಜೀವ)ನು ಲಿಂಗ (ಪರಶಿವ)ದಲ್ಲಿ ಸಾಮರಸ್ಯವನ್ನು ಪಡೆವುದೇ ವಿಷಯ. ಆಣವಾದಿ ಪಾಶವಿಚ್ಛೇದ ಪೂರ್ವಕ ಶಿವತ್ವ ಸಮಾವೇಶರೂಪಕೈವಲ್ಯ ಲಕ್ಷ್ಮಿಯನ್ನು ಪಡೆವುದೇ ಪ್ರಯೋಜನ. ಗುರುಮುಖದಿಂದ ಲಿಂಗಧಾರಣಾತ್ಮಕ ಶಿವದೀಕ್ಷೆ ಹೊಂದಿ ಅಷ್ಟಾವರಣ-ಪಂಚಾಚಾರ ನಿಷ್ಠನಾಗಿ ಮುಮುಕ್ಷುವಾದವನೇ ಅಧಿಕಾರಿ ಲಿಂಗಾಂಗಸಾಮರಸ್ಯರೂಪ ವಿಷಯಕ್ಕೂ ಶಾಸ್ತ್ರಕ್ಕೂ ಇರುವ ಪ್ರತಿಪಾದ್ಯ ಪ್ರತಿಪಾದಕ ಭಾವನೇ ಸಂಬಂಧ.

ಬ್ರಹ್ಮವು ಚಿನ್ಮಾತ್ರಸ್ವರೂಪ. ಆದರೂ ಬ್ರಹ್ಮದಲ್ಲಿ ಸ್ವಾಭಾವಿಕ ಶಕ್ತಿಯನ್ನು ಒಪ್ಪಬೇಕು. ಶಕ್ತಿಶೂನ್ಯವಾದ ನಿರ್ಗುಣಬ್ರಹ್ಮವು ಏನನ್ನೂ ಮಾಡಲಾರದು. 'ಪರಾಸ್ಯಶಕ್ತಿಃ' ಮುಂತಾದ ಶ್ರುತಿಗಳು ಶಕ್ತಿಯನ್ನು ಸಮರ್ಥಿಸಿವೆ. ಮೇಲಿನ ಶ್ರುತಿಯಲ್ಲಿರುವ ಶಕ್ತಿಪದವು ಅದ್ವೈತಿಗಳ ಅವಿದ್ಯಾವಾಚಕವಲ್ಲ, ಅದನ್ನು ಅವರು ಅವಿದ್ಯೆ, ಮಾಯೆ ಮುಂತಾಗಿ ಕರೆಯುತ್ತಾರೆ, ಅವಿದ್ಯೆಯು ಬಾಹ್ಯೇಂದ್ರಿಯ ಗೋಚರವಲ್ಲ, 'ಅವಿದ್ಯಾಂಸಾಕ್ಷಾತ್ಕರೋಮಿ' ಎಂಬ ಅನುಭವವು ಯಾರಿಗೂ ಬರುವುದಿಲ್ಲ. ಅದರಂತೆ ಅದು "ಸ್ಮೃತಿರೂಪಃ, ಪರತ್ರ ಪೂರ್ವದೃಷ್ಟಾವಭಾಸಃ" ಮುಂತಾದ ಅಧ್ಯಾಸ ಲಕ್ಷಣಗಳೂ ಅವಿದ್ಯೆಗೆ ಅನ್ವಯಿಸುವುದಿಲ್ಲ. ಎದುರಿಗಿರುವ ಹಗ್ಗವನ್ನು ನೋಡಿದವನಿಗೆ ಹಿಂದೆ ಕಂಡ ಹಾವಿನ ನೆನಪು ಬಂದು 'ಇದು ಸರ್ಪ' ಎನ್ನುತ್ತಾನೆ. ಅದರಂತೆ ಅಧಿಷ್ಠಾನಬ್ರಹ್ಮದಲ್ಲಿ ಬ್ರಹ್ಮಭಿನ್ನಸ್ಥಲದಲ್ಲಿ ಪ್ರಪಂಚವನ್ನು ಆರೋಪಿಸಲಾಗುವುದಿಲ್ಲ. ಏಕೆಂದರೆ ಬ್ರಹ್ಮಭಿನ್ನ ಪ್ರದೇಶವೆಲ್ಲಿದೆ ? ಮುಂತಾದ ದೃಷ್ಟಾಂತಗಳಿಂದ ಅಧ್ಯಾಸವನ್ನು ನಿರಾಕರಿಸಿ, ಬ್ರಹ್ಮಪರಿಣಾಮವಾದ ಜಗತ್ತನ್ನು ಸತ್ಯ ಎಂದು ಸಾಧಿಸಲಾಗಿದೆ. 'ಪೂರ್ವರೂಪವನ್ನು ಬಿಡದೆ ಮತ್ತೊಂದು ರೂಪ ಪಡೆವುದೇ ಪರಿಣಾಮ', . ಸುವರ್ಣವು ತನ್ನಸುವರ್ಣತ್ವವನ್ನು ಬಿಡದೆ ಆಭರಣ ರೂಪು ತಳೆದಂತೆ. ಬ್ರಹ್ಮಜೀವರು ಮಾಯಾ ಅವಿದ್ಯೋಪಾಧಿಕರಲ್ಲ ಎಂಬ ಅನೇಕ ದೃಷ್ಟಾಂತಗಳಿಂದ ಸಿದ್ಧಮಾಡಿದೆ.

ಮುಂದೆ ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತವನ್ನು ಅನುಸರಿಸಿ ಬ್ರಹ್ಮಸೂತ್ರದ ಚತುಸ್ಸೂತ್ರಿಗೆ ವ್ಯಾಖ್ಯಾನಮಾಡಿ ವೀರಶೈವ ಪರಿಭಾಷೆಯೆನಿಸಿದ ಅಷ್ಟಾವರಣಾದಿಗಳನ್ನು ವಿಸ್ತಾರವಾಗಿ ನಿರೂಪಿಸಲಾಗಿದೆ.

## ೧೧ ಶಿವಾದ್ವೈತಪರಿಭಾಷಾ

(ಕ್ರಿ.ಶ. ೧೯ನೆಯ ಶತಮಾನ)

ಕರ್ತೃಪೂವಲ್ಲೀ ಬೃಹನ್ಮಠದ ಚರಪಟ್ಟಾಧ್ಯಕ್ಷ ಶ್ರೀನೀಲಕಂಠ ಶಿವಾಚಾರ್ಯರು. ಇವರು ತರ್ಕವೇದಾಂತ, ಸಾಂಖ್ಯಾಲಂಕಾರ ಪದವೀಧರರು. ಶಿವಾದ್ವೈತ ಸಿದ್ಧಾಂತಕ್ಕೆ ಸಂಬಂಧಿಸಿದ ಪಾರಿಭಾಷಿಕ ಪದಗಳಿಗೆ ಲಕ್ಷಣಗಳನ್ನು ಹೇಳಿ ಸಿದ್ಧಾಂತಸ್ವರೂಪವನ್ನು ತೋರುವುದು ಇದರ ಉದ್ದೇಶ. ಹತ್ತು ಪ್ರಕರಣಗಳಿವೆ.

ಉದ್ದೇಶ-ಲಕ್ಷಣಪರೀಕ್ಷಾ ಪೂರ್ವಕ ಪದಾರ್ಥಪ್ರತಿಪತ್ತಿಯು ಪಂಡಿತರಿಗೆ ಸಮ್ಮತ ವಾದುದು. ಶಿವಾದ್ವೈತವು ಶಿವ-ಜೀವ-ಶಕ್ತಿ ಎಂಬ ತತ್ತ್ವತ್ರಯುವನ್ನು ಒಪ್ಪುತ್ತದೆ.

ಶಿವ-ಲಿಂಗ-ಬ್ರಹ್ಮ-ಪರಮ-ಸ್ಥಳಗಳು ಶಿವಶಬ್ದ ಪರ್ಯಾಯ ಪದಗಳು. ಶಿವನು ಒಬ್ಬನೇ. ಜೀವನಿಗೆ ಅಂಗ-ಪುರುಷ-ಸಂಸಾರಿ-ಕ್ಷೇತ್ರಜ್ಞ ಎಂಬ ಪರ್ಯಾಯ ಪದಗಳುಂಟು. ಅವನು ಪ್ರತಿ ಶರೀರದಲ್ಲಿಯೂ ಬೇರೆ ಬೇರೆ ಇದ್ದಾನೆ. ಆ ಜೀವನು ಅಣು. ಜೀವನಲ್ಲಿ ಸ್ತ್ರೀ ಪುರುಷ ಭೇದವಿಲ್ಲ. ಅನಾದಿಕರ್ಮವಶದಿಂದ ಆಯಾಶರೀರ ಧರಿಸಿ ಸ್ತ್ರೀ, ಪುರುಷ ಭೇಧ ತಳೆಯುತ್ತಾನೆ.

ಶಕ್ತಿಯುಂ ಸೂಕ್ಷ್ಮ-ಸ್ಥೂಲಾತ್ಮಕ ವಿಶ್ವವೇ. ಅದು ಪರಾ-ಪ್ರಜ್ಞಾ-ವಿಮರ್ಶ-ಧರ್ಮ-ಮಾಯಾ-ಪ್ರಕೃತಿ ಮುಂತಾದ ಪ್ರಭೇದಗಳಿಂದ ಕರೆಯಲ್ಪಡುತ್ತದೆಯಾದರೂ ಸಾಮಾನ್ಯವಾಗಿ ಶುದ್ಧಾ-ಶುದ್ಧಾ, ಶುದ್ಧಾ ಮತ್ತು ಅಶುದ್ಧಾ ಎಂದು ಶಕ್ತಿಯು ಮೂರು ವಿಧ. ಈ ಶಕ್ತಿಯುಂ ಚಂದ್ರ-ಚಂದ್ರಿಕೆಯಂತೆ ಕುಸುಮ-ಸೌರಭಗಳಂತೆ, ಪರಶಿವ ಬ್ರಹ್ಮದಲ್ಲಿ ಅವಿನಾಭಾವದಿಂದ ಸ್ಥಿರವಾಗಿದೆ. ಶುದ್ಧವು ಶಕ್ತಿ-ಸದಾಶಿವ-ಈಶ್ವರ-ಶುದ್ಧವಿದ್ಯೆ ಎಂದು ನಾಲ್ಕು ವಿಧ. ಶುದ್ಧಾ ಶುದ್ಧವು ಮಾಯಾ-ಕಲಾ-ಅವಿದ್ಯಾ-ರಾಗ-ಕಾಲ-ನಿಯತಿ ಎಂದು ಆರು ವಿಧ. ಈ ಆರು ತತ್ತ್ವಗಳೇ ಜೀವಾತ್ಮನಿಗೆ ಸ್ವಸ್ವರೂಪ ಆವರಕವಾಗಿ ಷಟ್ ಕಂಚುಕವೆನಿಸಿವೆ. ಇದರಿಂದ ಈ ಜೀವನು ಅಜ್ಞನೆನಿಸಿದ್ದಾನೆ. ಆದ್ದರಿಂದ ಜೀವನು ಶುದ್ಧಾಶುದ್ಧನೇ.

ಅಶುದ್ಧವೆಂದರೆ ಪ್ರಕೃತಿಯಿಂದ ಪೃಥವೀವರೆಗೆ ಇರುವ ೨೪ ತತ್ವಗಳು. ಹೀಗೆ ಒಟ್ಟು ತತ್ವಗಳು ಮುವತ್ತಾರು.

ಇಲ್ಲಿ ಹೇಳಿರುವ ಪಾರಿಭಾಷಿಕಪದಗಳಿಗೆ ಹೇಳಿರುವ ಲಕ್ಷಣಗಳಲ್ಲಿ ಕೆಲವನ್ನು ಹೀಗೆ ಉದಾಹರಿಸಬಹುದು. ಸೂಕ್ಷ್ಮಚಿದಚಿದ್ರೂಪಶಕ್ತಿವಿಶಿಷ್ಟತ್ವಂ ಪರಶಿವಸ್ಯಲಕ್ಷಣಂ. ಸ್ಥೂಲ ಚಿದಚಿದ್ರೂಪ ಶಕ್ತಿವಿಶಿಷ್ಟತ್ತ್ವಂ ಜೀವಾತ್ಮನೋ ಲಕ್ಷಣಂ. ಉಪಾದಾನತ್ವಂ ಅಪೃಥಕ್ಸಿದ್ಧ ಧರ್ಮತ್ವಂ ಶಕ್ತೇಃ ಲಕ್ಷಣ.

ಮೇಲೆ ಹೇಳಿದ ಜೀವಾತ್ಮನ ಸ್ಥೂಲ ಚಿದಚಿದ್ರೂಪಶಕ್ತ್ಯಂತರ್ಗತಚಿಚ್ಛಕ್ತಿಯುಂ ಜ್ಞಾನದ ಪರ್ಯಾಯ. ಶಕ್ತಿವಿಶೇಷವೇ ಜ್ಞಾನ. ಅಜ್ಞಾನವು ನಾಲ್ಕು ವಿಧ-ಅನುಭವ, ಸ್ಮೃತಿ, ಸಂಶಯ, ವಿಪರ್ಯಯ ಎಂದು ಹೇಳಿ ಶಿವಾದ್ವೈತ ಸಿದ್ಧಿಗೆ ಅಗತ್ಯವಾದ ಪ್ರತ್ಯಕ್ಷ, ಅನುಮಾನ ಮತ್ತು ಶಬ್ದ ಎಂಬ ಮೂರು ಪ್ರಮಾಣಗಳ ಸ್ವರೂಪವನ್ನು ಪ್ರತ್ಯೇಕ ಪ್ರಕರಣಗಳಲ್ಲಿ ನಿರೂಪಿಸಲಾಗಿದೆ. ಮುಂದೆ ಕಾರ್ಯಕಾರಣಭಾವ, ಷಟ್ ತ್ರಿಂಶತ್‌ತತ್ತ್ವ ನಿರೂಪಣ, ಪರಶಿವನಿಗೆ ಸರ್ವಶರೀರತ್ವನಿರೂಪಣ, ಶಿವಾದ್ವೈತ, ಲಿಂಗಾಂಗಸಾಮರಸ್ಯನಿರೂಪಣ ಎಂಬ ಪ್ರಕರಣಗಳಲ್ಲಿ ಶಿವಾದ್ವೈತ ಪರಿಭಾಷೆಯು ಉಕ್ತವಾಗಿದೆ.

## ಉಪನಿಷದ್ಭಾಷ್ಯಗಳು

(ಕ್ರಿ ಶ. ೧೭ನೆಯ ಶತಮಾನ)

### ೧೨ ಮಹಾನಾರಾಯಣೋಪನಿಷತ್‌ಶೈವಭಾಷ್ಯ

ಕರ್ತೃ ವೃಷಭ (ಬಸವ) ಪಂಡಿತಾರಾಧ್ಯರು. ಇವರು ತಮ್ಮ ತೈತ್ತಿರೀಯೋಪನಿಷತ್ ಭಾಷ್ಯದ ಪ್ರಾರಂಭದಲ್ಲಿ ಶ್ರೀಪತಿ ಪಂಡಿತರನ್ನು ಕುರಿತು

ವೇದವ್ಯಾಸಂ ಸೂತ್ರಕಾರಂ ದೂರ್ವಾಸಂ ವೃತ್ತಿಕಾರಕಂ ।
ಭಾಷ್ಯಕೃತ್ಪಂಡಿತಾರಾಧ್ಯಂ ಪ್ರಪದ್ಯೇಪಾಶಮುಕ್ತಯೇ ॥

ಎಂದು ಹೇಳಿಕೊಂಡಿದ್ದಾರೆ. ಬ್ರಹ್ಮಸೂತ್ರಗಳಿಗೆ ದೂರ್ವಾಸ ವೃತ್ತಿಯೊಂದು ಇದ್ದದ್ದು ಇದರಿಂದ ವೇದ್ಯವಾಗುತ್ತದೆ. ಇದು ಪ್ರಾಯಃ ಶ್ರೀ ಪತಿಪಂಡಿತರು ಹೇಳುವ ಅಗಸ್ತ್ಯಋಷಿಯ ಸೂತ್ರವೃತ್ತಿಗಿಂತ ಬೇರೆ ಇರಬಹುದು. ಈ ಬಸವಪಂಡಿತರು ಬರೆದಿರುವ ತೈತ್ತಿರೀಯೋಪನಿಷತ್ ಭಾಷ್ಯವು ತೆಲುಗು ಅಕ್ಷರದಲ್ಲಿ ಅಚ್ಚಾಗಿದೆ. ತೈತ್ತಿರೀಯೋಪನಿಷತ್ತಿನ ಕಡೆಯ ಪ್ರಶ್ನೆಯೇ ಮಹಾನಾರಾಯಣೋಪನಿಷತ್ತು. ಇದು ಕಾಶಿಯ ಜಂಗಮವಾಡಿಮಠದ ಪತಿಯಿಂದ (೧೯೨೮) ಅಚ್ಚಾಗಿದೆ.

ಭಾಷ್ಯಕಾರರು "ರೇವಣ್ಣಸಿದ್ಧಮರುಳಸಿದ್ಧೈಕೋರಾಮಸಿದ್ಧಪಂಡಿತಾರಾಧ್ಯಾದಯಃ ಸಹಸ್ರಶೀರ್ಷಂ ದೇವಮಿತ್ಯಾದಿ ಪರಶಿವಧರ್ಮ ಪ್ರತಿಪಾದಕವಾಕ್ಯಾನಾಂ ನಾರಾಯಣಾತ್ಮಕ ವಿಷ್ಣೋಃ ಪ್ರತಿಪಾದಕತ್ವೇಽಪಿ ಏತದನುವಾಕಸ್ಯ ಶಿವಪರತ್ವೇನ ಕಶ್ಚಿದಪಿ ದೋಷಃ—ಶಿವಸ್ಯ ಶಕ್ತತ್ವೇನ, ವಿಷ್ಣೋಃ ಶಕ್ತಿತ್ವೇನ ಸ್ಪಷ್ಟಮುಪದಿಷ್ಟತ್ವಾತ್, ಶಕ್ತಿಶಕ್ತಿಮತೋಃ ಅಭೇದಾತ್" ಎಂದು ಹೇಳಿಕೊಂಡಿದ್ದಾರೆ.

ಇಲ್ಲಿ ಬರುವ ನಾರಾಯಣಾನುವಾಕಕ್ಕೆ ಶೈವಪರವಾಗಿ ಭಾಷ್ಯವನ್ನು ಬರೆಯುತ್ತಾ– "ನನು ಏತದನುವಾಕೇ ಪರಶಿವಬೋಧಕ ಶಿವಶಂಭ್ವಾದಿ ಶಬ್ದಾನಾಂ ಸತ್ವೇಽಪಿ. ವಿಷ್ಣ್ವೇಕಾಂತಿಕ ನಾರಾಯಣ ಶಬ್ದದರ್ಶನಾತ್ ಸಾಕ್ಷಾದ್ವಿಷ್ಣು ಪರತ್ವಮೇವೈತದನುವಾಕಸ್ಯೇತಿ ಚೇದುಚ್ಯತೆ–ಪಂಡಿತಾರಾಧ್ಯವೇಮಾರಾಧ್ಯೋದ್ಭಟಾರಾಧ್ಯ— ನೀಲಕಂಠಾಚಾರ್ಯ — ಭಾಸ್ಕರಭಟ್ಟಾಚಾರ್ಯಾದಿ ಶ್ರೌತವೀರಶೈವಸಿದ್ಧಾಂತಸ್ಥಾಪಕಪೂರ್ವಾಚಾರ್ಯೈಃ ಸರ್ವಶೈವಶಾಸ್ತ್ರಜ್ಞಾನಧುರಂಧರಹರದತ್ತಾಚಾರ್ಯಾಪ್ಪಯ್ಯದೀಕ್ಷಿತಾದಿ ಮಹದ್ಭಿಶ್ಚ ಪಾಣಿನೀಯಶಾಸ್ತ್ರರೀತ್ಯಾ ಶಿವೇಣತ್ವಬಾಧಾನಿರಸನಂ ಕೃತ್ವಾ, ಸಹಸ್ರಶೀರ್ಷಾನುವಾಕಸ್ಯ ಶಿವಪರತ್ವೇನ ಬಹುಧಾರಾದ್ಧಾಂತಿತಂ" ಮುಂತಾಗಿ ಪೂರ್ವಾಚಾರ್ಯರನ್ನು ನೆನೆದಿರುವುದರಿಂದ ಇವರ ಕಾಲವು ಕ್ರಿ.ಶ. ಸು, ೧೭೦೦ ಇರಬಹುದು.

## ೧೩. ಈಶಾವಾಸ್ಯೋಪನಿಷತ್ ಶಾಂಕರೀವ್ಯಾಖ್ಯಾ

(ಕ್ರಿ.ಶ. ೧೯ನೆಯ ಶತಮಾನ)

೮೦॥ ಉಮಚಿಗಿ ಶಂಕರಶಾಸ್ತ್ರಿಗಳು (ಕ್ರಿ ಶ.ಸು. ೧೮೫೦–೧೯೩೫) ಸಂಸ್ಕೃತದಲ್ಲಿ ವ್ಯಾಖ್ಯಾನಿಸಿರುವ ಈಶ–ಕೇನ–ಮುಂಡಕ–ಸಿದ್ಧಾಂತಶಿಖಾ ಉಪನಿಷತ್ತುಗಳೂ, ಬ್ರಹ್ಮಸೂತ್ರಕಾರಿ ಕಾರೂಪವಾದ 'ಕ್ರಿಯಾಸಾರ'ಕ್ಕೆ ಬರೆದಿರುವ ಇವರ ವ್ಯಾಖ್ಯಾನವು 'ಬ್ರಹ್ಮಸೂತ್ರ ವೃತ್ತಿ' (ಪ್ರಥಮೋಪದೇಶ) ಎಂದೂ ಪ್ರಕಟವಾಗಿದೆ.

'ಈಶಾವಾಸ್ಯಂ' ಎಂದು ಉಪನಿಷತ್ತು ಆರಂಭವಾಗಿದೆ. ಆದ್ದರಿಂದ ಈ ಉಪನಿಷತ್ತಿಗೆ ಅದೇ ಹೆಸರು ಬಂದಿದೆ. ಈಶಾವಾಸ್ಯದಲ್ಲಿ ಹದಿನೆಂಟು ಮಂತ್ರಗಳಿವೆ. ಭಾಷ್ಯಕಾರರು ಶಾಂಕರೀ ವ್ಯಾಖ್ಯಾನದ ಉದ್ದೇಶವನ್ನು ಕುರಿತು—

"ಈಶಾವಾಸ್ಯಂ'' ಮುಂತಾದ ಮಂತ್ರಗಳು ಕರ್ಮ ಮತ್ತು ಜ್ಞಾನ ಇವೆರಡೂ ಮುಕ್ತಿಗೆ ಸಾಧನ ಎಂದು ಹೇಳುತ್ತವೆ. ಇವುಗಳಲ್ಲಿ ಶಿವಲಿಂಗಧಾರಣ, ಶಿವಾರ್ಚನ, ಶಿವಧ್ಯಾನ, ಶಿವಮಂತ್ರಜಪ ಮುಂತಾದುವು ಪತಿ ಕರ್ಮಗಳು. ಅನಿತ್ಯವಾದ ಸ್ವರ್ಗಸ್ವಾರಾಜ್ಯಾದಿ ಫಲಗಳನ್ನು ಕೊಡುವ ಜ್ಯೋತಿಷ್ಟೋಮಾದಿ ಯಜ್ಞಗಳು ಪಶುಕರ್ಮಗಳು.

'ವಿದ್ಯಾಂ ಚಾವಿದ್ಯಾಂ ಚ' ಎಂಬ ಮಂತ್ರವು ಮುಕ್ತಿಗೆ ಪತಿಕರ್ಮ ಮತ್ತು ಜ್ಞಾನ ಇವೆರಡೂ ಕಾರಣವೆಂದು ಹೇಳುವುದರಿಂದಲೂ, 'ತೇನ ತ್ಯಕ್ತೇನ ಭುಂಜೀಥಾಃ'' ಎಂಬುದು ''ಶಿವಾರ್ಪಿತ ಪ್ರಸಾದವನ್ನು ಮಾತ್ರ ಸೇವಿಸಬೇಕು" ಎಂದು ಹೇಳಿ ಪತಿಕರ್ಮ ಮತ್ತು ಜ್ಞಾನಕ್ಕೆ ಸಹಕಾರಿಗಳಾಗಿರುವುದರಿಂದಲೂ ಮುಮುಕ್ಷುವಾದ ವೀರಶೈವನಿಗೆ ಈ ಬಗೆಯ ಕರ್ಮ-ಜ್ಞಾನಗಳೆರಡೂ ಮುಖ್ಯವೆಂದು ಹೇಳಿ ಈ ಉಪನಿಷತ್ತು ವೀರಶೈವಸಿದ್ಧಾಂತಸಾರವನ್ನು ಹೃದಯಂಗಮವಾಗಿ ಪ್ರತಿಪಾದಿಸುತ್ತದೆ.

ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ ಪೂರ್ಣಮುದಚ್ಯತೇ ।
ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೇ ॥

ಎಂಬ ಶಾಂತಿಮಂತ್ರಕ್ಕೆ ಶಾಂಕರೀ ವ್ಯಾಖ್ಯೆ ಹೀಗಿದೆ—

(ಅದಃ) ತತ್ ಪದಾರ್ಥವೆನಿಸಿರುವ ಲಿಂಗವು (ಪೂರ್ಣಂ) ಎಲ್ಲೆಡೆಯೂ ತುಂಬಿದೆ. (ಇದು) ತ್ವಂಪದಾರ್ಥವಾದ ಲಿಂಗ (ಜೀವ)ವು ತನ್ನಲ್ಲಿರುವ ಶಕ್ತಿಯು ವಿಕಾಸವಾದಾಗ ಅದೂ (ಪೂರ್ಣಂ) ಎಲ್ಲೆಡೆಯೂ ತುಂಬುವುದು. (ಪೂರ್ಣಾತ್) ಸರ್ವಜ್ಞತ್ವ ಸರ್ವಕರ್ತೃತ್ವವುಳ್ಳ ಪರಶಿವಬ್ರಹ್ಮಕ್ಕಿಂತಲೂ ಚೈತನ್ಯ ಪರಿಪೂರ್ಣವಾದ ಅಂಗಸ್ಥಲವು (ಉದಚ್ಯತೇ) ಬೇರೆಯಾಗುತ್ತದೆ. ಆದ್ದರಿಂದ ಕಿಂಚಿಜ್ಞತ್ವ ಕಿಂಚಿತ್‌ಕರ್ತೃತ್ವವುಳ್ಳ ಅಂಗನು ಷಟ್‌ಸ್ಥಲ ಮಾರ್ಗದಿಂದ (ಪೂರ್ಣಸ್ಯ) ಪರಶಿವಲಿಂಗದ (ಪೂರ್ಣಂ) ಪರಿಪೂರ್ಣ ಸ್ವರೂಪವನ್ನು (ಆದಾಯ)ಗಳಿಸಿ (ಪೂರ್ಣಮೇವ) ಸರ್ವವ್ಯಾಪಕ ಪರಶಿವ ಸ್ವರೂಪವಾಗಿಯೇ (ಅವಶಿಷ್ಯತೇ) ಉಳಿಯುವನು.

ಎಂದರೆ ಅಂಗವೆನಿಸಿದ ಜೀವನು ವಸ್ತುತಃ ಶಿವಾಂಶವೇ. ಆದರೆ ಅನಾದಿ ಕರ್ಮವಶದಿಂದ ಅವನು ಸರ್ವಜ್ಞತ್ವ ಮುಂತಾದ ಷಡಂಗ ಪರಿಪೂರ್ಣಬ್ರಹ್ಮದಿಂದ ಈಗ ಬೇರೆಯಾಗಿದ್ದಾನೆ.

ಇಂಥ ಲಿಂಗವು ಗುರುಮುಖದಿಂದ ಶಿವದೀಕ್ಷೆ ಪಡೆದು ಷಟ್‌ಸ್ಥಲದ ಹಾದಿ ಹಿಡಿದು ಭಕ್ತಮಹೇಶಾದಿ ಆರು ಸ್ಥಲಗಳಲ್ಲಿ ಮುನ್ನಡೆದು ಜೀವಗುಣಗಳು ಅಳಿದು ಶಿವಗುಣಗಳನ್ನು ಗಳಿಸಿ "ನೀರಿನಲ್ಲಿ ನೀರು ಬೆರೆದಂತೆ" ಶಿವಸಮರಸನಾಗಿ ಸುಖಿಸುವನು. ಇದಕ್ಕೆ ಲಿಂ॥ ಶಿರಸಿ ಗುರು ಶಾಂತಶಾಸ್ತ್ರಿಗಳು ಮತ್ತು ಶ್ರೀ ಎಂ. ಜಿ. ನಂಜುಂಡಾರಾಧ್ಯರ ಕನ್ನಡ ಭಾಷಾಂತರಗಳು ಇವೆ.

## ೧೪ ಕೇನೋಪನಿಷತ್‌ಶಾಂಕರೀವ್ಯಾಖ್ಯೆ

ಈ ಉಪನಿಷತ್ತು 'ಕೇನ' ಎಂಬ ಪ್ರಶ್ನಾರ್ಥಕ ಪದದಿಂದ ಆರಂಭವಾಗಿರುವುದರಿಂದ ಇದಕ್ಕೆ 'ಕೇನ' ಎಂದು ಹೆಸರು ಬಂದಿದೆ.

ಇದರಲ್ಲಿ ನಾಲ್ಕು ಖಂಡಗಳೂ, ಮುವತ್ತು ಮೂರು ಮಂತ್ರಗಳೂ ಇವೆ. "ಆಪ್ಯಾಯಂತು 'ಮಮಾಂಗಾನಿ-ಉಪನಿಷತ್ಸುಧರ್ಮಾಸ್ತೇ ಮಯಿ ಸಂತು" ಎಂಬ ಶಾಂತಿ ಮಂತ್ರಕ್ಕೆ ಶಿವಾದ್ವೈತ ಪರವಾದ ಭಾಷ್ಯಾರ್ಥವಿದು "ದೇಹವೇ ನಾನು, ಇಂದ್ರಿಯಗಳು ನನ್ನವು ಎಂಬ ಅಭಿಮಾನವು ಕಾಮಕ್ರೋಧಾದಿ ದುಷ್ಟಗುಣಗಳಿಗೆ ಮೂಲ. ಇದು ಜೀವನ ಭವಕ್ಕೆ ಕಾರಣವಾಗುತ್ತದೆ. ಆದ್ದರಿಂದ ಈ ಅಭಿಮಾನವು ನಷ್ಟವಾಗಬೇಕು. ಈ ದೇಹ, ಈ ಇಂದ್ರಿಯಗಳು ನನ್ನವಲ್ಲ, ಅವು ಶಿವಶಕ್ತಿಗೆ ಸಂಬಂಧಿಸಿದವು. ಶರೀರೇಂದ್ರಿಯಾದಿಗಳೆಲ್ಲವೂ ಕಾರಣ ರೂಪವಾದ ಶಕ್ತಿಯಲ್ಲಿ ಲಯವಾಗಲಿ, ಅವು ಶಿವವಾಗಲಿ; ಎಂದು ಶಿವಲಿಂಗರೂಪ ಬ್ರಹ್ಮದಲ್ಲಿ ಲಯಚಿಂತನೆ ಮಾಡುವಾತನೇ ಜೀವನ್ಮುಕ್ತನು. ಅವನ ದೇಹೇಂದ್ರಿಯಾದಿಗಳೆಲ್ಲವೂ ಶಿವಸ್ವರೂಪವನ್ನೇ ಹೊಂದುವವು. ಗುರುಮುಖದಿಂದ ಅರ್ಪಣಸದ್ಭಾವವಿಧಾನವನ್ನು ತಿಳಿದು, ಶಬ್ದ ಸ್ಪರ್ಶಾದಿಗಳನ್ನು ಗ್ರಹಿಸುವ ಶ್ರೋತ್ರ ಮುಂತಾದ ಇಂದ್ರಿಯಗಳನ್ನು ಆಯಾ ಇಂದ್ರಿಯ ಗಳಲ್ಲಿರುವ ಮಹಾಲಿಂಗ, ಪ್ರಸಾದಲಿಂಗಾದಿಗಳಲ್ಲಿ ಸಮರ್ಪಣ ಮಾಡುವುದರಿಂದ ಆಯಾ ವಿಷಯಗಳೆಲ್ಲವೂ ಲಿಂಗರೂಪವಾಗಿಯೇ ತೋರುವುವು, ನಾನಾದರೋ ಅಂಥ ಆ ಲಿಂಗವನ್ನು ನಿರಾಕರಿಸೆನು. ಆ ಲಿಂಗವೂ ನನ್ನನ್ನು ದೂರ ಮಾಡದಿರಲಿ. ಇದರಿಂದ ನನ್ನ ಬಂಧವು ಕಳಚಿ ನಿತ್ಯಾನಂದವುಂಟಾಗಲಿ".

ಇಲ್ಲಿಯ ಮೊದಲನೆಯ ಮಂತ್ರದಲ್ಲಿ ಇಷಿತ ಮತ್ತು ಪ್ರೇಷಿತ ಎಂಬ ಒಂದೇ ಅರ್ಥದ ಎರಡು ಕ್ರಿಯಾಪದಗಳಿವೆ. "ಅಂತಃಕರಣ ಬಹಿಃಕರಣಗಳೆಲ್ಲಕ್ಕೂ ಪ್ರೇರಕನು ಯಾರು ? ಒಂದೊಂದೇ ಕರಣ (ಇಂದ್ರಿಯ)ಕ್ಕೆ ಪ್ರೇರಕನು ಯಾರು ?" ಎಂಬ ಅರ್ಥವು ಇದರಿಂದ ವೇದ್ಯ ವಾಗುತ್ತದೆ. ಯಾರ ಪ್ರೇರಣೆಯಿಂದ ಪ್ರಾಣವು ಶರೀರದ ಆಯಾ ಸ್ಥಾನವನ್ನು ಹೊಂದುತ್ತದೆ? ಇಂದ್ರಿಯ ವ್ಯಾಪಾರಕ್ಕಿಂತ ಮೊದಲೇ ಪ್ರಾಣವು ಪ್ರವರ್ತಿಸುವುದರಿಂದ ಅದಕ್ಕೆ ಪ್ರಥಮ ಎಂದು ಹೇಳಲಾಗಿದೆ. ಯಾರ ಪ್ರೇರಣೆಯಿಂದ ವಾಗಿಂದ್ರಿಯದಿಂದ ವೈಖರೀವಾಕ್ (ಶಬ್ದವು) ಹುಟ್ಟುತ್ತದೆ ? ಚಕ್ಷುರಾದಿಜ್ಞಾನೇಂದ್ರಿಯ ಪ್ರೇರಕನು ಯಾರು ?

ಇಲ್ಲಿ ವಾಗಿಂದ್ರಿಯವು ಎಲ್ಲ ಕರ್ಮೇಂದ್ರಿಯಗಳಿಗೂ, ಚಕ್ಷುಃಶ್ರೋತ್ರಗಳು ಎಲ್ಲ ಜ್ಞಾನೇಂದ್ರಿಯಗಳಿಗೂ ಉಪಲಕ್ಷಣ. ವೀರಶೈವ ಸಿದ್ಧಾಂತಕ್ಕೆ ಅನುಗುಣವಾಗಿ ಶಿವದೀಕ್ಷಾ ಕಾಲದಲ್ಲಿ ಆಯಾ ಇಂದ್ರಿಯಗಳಲ್ಲಿ ಆಚಾರಾದಿ ಲಿಂಗಗಳನ್ನು ಸ್ಥಾಪಿಸಿರುವುದರಿಂದ ಅವುಗಳಿಗೆಲ್ಲಾ ಆಯಾ ಲಿಂಗರೂಪ ಪರಶಿವನೇ ಪ್ರೇರಕನೆಂದೂ, ಈ ಕರ್ಮಜ್ಞಾನೇಂದ್ರಿಯಗಳೆಲ್ಲಕ್ಕೂ ಊರ್ಧ್ವಲಿಂಗ ಸ್ವರೂಪವಾದ ಪರಶಿವ ಬ್ರಹ್ಮವೇ ಪ್ರೇರಕವೆಂದೂ, ಅರ್ಥೈಸಲಾಗಿದೆ.

ಭಾಷ್ಯಕಾರರ ಸರ್ವತೋಮುಖವಾದ ಪಾಂಡಿತ್ಯ, ಪರಿಪಕ್ವ ಪ್ರೌಢಭಾಷ್ಯಶೈಲಿಗಳು ಈ ಉಪನಿಷತ್ತಿನಲ್ಲಿ ಸ್ಪಷ್ಟವಾಗಿವೆ.

"ಪ್ರತಿಬೋಧವಿದಿತಂ ಮತಂ'' ಎಂಬಲ್ಲಿ "ಪ್ರತಿಬೋಧನಾಮ ಲಿಂಗಾಂಗ ಸಾಮರಸ್ಯ ರೂಪ ಶಿವಾದ್ವೈತ ಜ್ಞಾನಂ'' ಎಂದೂ ಅದಕ್ಕೆ "ಅಪರೋಕ್ಷ ವಿಮರ್ಶಾಪರಪರ್ಯಾಯ ಚಿಚ್ಛಕ್ತಿರೂಪ" ವೆಂದೂ ಮುಂತಾಗಿ ಮಾಡಿರುವ ನಿರ್ವಚನವು ಸಹೃದಯ ಹೃದ್ಯವಾಗಿದೆ.

ನಾಲ್ಕನೇ ಖಂಡದಲ್ಲಿನ ಹೈಮವತೀ ಉಮೆಯು ಮೂಲಕ ಇಂದ್ರಾದಿಗಳು ಪ್ರಬೋಧಿತ ರಾದ ಆಖ್ಯಾಯಿಕೆಯು ಶಿವಾದ್ವೈತಕ್ಕೆ ಸ್ವರಸವಾಗಿ ಇಲ್ಲಿ ಅನ್ವಯವಾಗಿರುವುದನ್ನು ಭಾಷ್ಯಕಾರರು ವ್ಯಕ್ತಮಾಡಿರುವುದು ಮನನೀಯ. ಇದಕ್ಕೆ ಲಿಂ॥ ಶಿರಸಿ, ಅವರ ಕನ್ನಡ ಟಿಪ್ಪಣಿಯಿದೆ.

## ೧೫ ಮುಂಡಕೋಪನಿಷತ್ ವೀರಶೈವಭಾಷ್ಯಂ

ಮುಂಡಕೋಪನಿಷತ್ ಭಾಷ್ಯವು ಸಿದ್ಧಾಂತದೃಷ್ಟಿಯಿಂದ ಹಾಗೂ ಭಾಷ್ಯಶೈಲಿಯ ದೃಷ್ಟಿಯಿಂದ ಮಹತ್ವಪಡೆದಿದೆ. ಭಾಷ್ಯಕಾರರ ಪಾಂಡಿತ್ಯ ಮತ್ತು ಅನುಭವಗಳು ಇಲ್ಲಿ ಮತ್ತಷ್ಟು ಪರಿಪಕ್ವ ಹೊಂದಿರುವುದು ಕಂಡುಬರುತ್ತದೆ.

ಈ ಉಪನಿಷತ್ತಿನಲ್ಲಿ ಉಕ್ತವಾಗಿರುವ ಶಿರೋವ್ರತ (ಮು. ೩-೨-೧೦) ವೂ ಅಥರ್ವ ಶಿರಸ್ಸಿನಲ್ಲಿ ಉಕ್ತವಾಗಿರುವ ಪಾಶುಪತಾಭಿಧ ಶಿರೋವ್ರತವೂ ಒಂದೇ ಎನ್ನಲಾಗಿದೆ.

ಏತದ್ವೇದಶಿರೋನಿಷ್ಠಾಃ ಪ್ರಾಹುಃ ಪಾಶುಪತಂ ಮುನೇ ।
ಕೇಚಿತ್ ಶಿರೋವ್ರತಂ ಪ್ರಾಹುಃ ಕೇಚಿದತ್ಯಾಶ್ರಮಂ ಬುಧಾಃ ॥
(ಕ್ರಿಯಾಸಾರ-೩-೨೭ ಪು ೧೮೩)

ಭಾಷ್ಯದಲ್ಲಿ "ಯೈಸ್ತು ಅಧಿಕಾರಿಭಿಃ ಶಿರೋವ್ರತಂ-ಶಿರಸಿ ವ್ರತಂ ಲಿಂಗಧಾರಣಾತ್ಮಕಂ ಮಹಾವ್ರತಂ 'ಮುಖೇ ಮಂತ್ರೋಹೃದಿಧ್ಯಾನಂ ಮಸ್ತಕೇ ಲಿಂಗಧಾರಣಂ'ಇತಿಗೌತಮಸ್ಮೃತೇಃ ಯಂದ್ವಾ ಶಿರಸಿ-ಅಥರ್ವಶಿರಸಿ, ವ್ರತಂ-ಉಪದಿಷ್ಟಂ ಲಿಂಗಧಾರಣಾತ್ಮಕಂ ಮಹಾಪಾಶುಪತವ್ರತಂ

ವಿಧಿವತ್ ವಿಧಿಮನತಿಕ್ರಮ್ಯ ನಿಗಮಾಗಮೋಕ್ತ ವಿಧಾನೇನೇತ್ಯರ್ಥಃ, ಚೀರ್ಣಂ ಆಚರಿತಂ ತೇಷಾಮೇವ ಉಕ್ತಾಧಿಕಾರಿಣಾಮೇವ, ಏತಾಂ-ಪೂರ್ವೋಕ್ತಾಂ ಬ್ರಹ್ಮವಿದ್ಯಾಂ, ವದೇತ್ ಬ್ರೂಯಾತ್ ।'' ಎಂದು ಮುಂತಾಗಿ ''ಶಿರೋವ್ರತವು ಲಿಂಗಧಾರಣಾತ್ಮಕ ಪಾಶುಪತವ್ರತ'' ಎಂದು ಸಾಧಿಸಲಾಗಿದೆ. ಉಪನಿಷತ್ತಿನ ಪ್ರಾರಂಭದಲ್ಲಿ ಬರುವ "ಪರಾಪರ" ವಿದ್ಯೆಗಳ ವಿಚಾರವನ್ನು ಕುರಿತು ವಿವರಿಸುವಾಗ ಪಂಚಾಕ್ಷರೀ ವಿದ್ಯೆಯೇ ಮಂತ್ರಮಾತೃವೆನಿಸಿರುವ ಪರಾವಿದ್ಯೆ ; ಉಳಿದ ಋಗಾದಿವೇದಗಳು ಅಪರವಿದ್ಯೆ ಎಂದು ಮಾಡಿರುವ ವ್ಯಾಖ್ಯಾನವು ಹೃದ್ಯವಾಗಿದೆ. ಮುಂದೆ "ನಾಯಮಾತ್ಮಾಬಲಹೀನೇನ ಲಭ್ಯಃ" "ನ ಚ ಪ್ರಮಾದಾತ್ ತಪಸೋವಾಪ್ಯಲಿಂಗಾತ್" (ಮು ೩-೨-೪) ಎಂಬ ಮಂತ್ರಭಾಷ್ಯದಲ್ಲಿ "ಲಿಂಗಧಾರಣಾತ್ಮಕ ಶಿವದೀಕ್ಷೆಯಿಲ್ಲದವನಿಗೆ ಭಗವತ್ ಸಾಕ್ಷಾತ್ಕಾರವು ಲಭ್ಯವಾಗುವುದಿಲ್ಲ" ಎಂಬುದನ್ನು ಯುಕ್ತಿಪ್ರಮಾಣಗಳಿಂದ ಸಿದ್ಧಾಂತ ಮಾಡಲಾಗಿದೆ. ಭಾಷ್ಯದ ಪ್ರತಿಯೊಂದು ಮಂತ್ರದಲ್ಲಿಯೂ ತನ್ನದೇ ಆದ ವೈಶಿಷ್ಟ್ಯವನ್ನು ಪ್ರದರ್ಶಿಸಲಾಗಿದೆ.

ಇದರಲ್ಲಿ ಮೂರು ಮುಂಡಕಗಳೂ, ಪ್ರತಿಮುಂಡಕದಲ್ಲಿಯೂ ಎರಡೆರಡು ಖಂಡಗಳಂತೆ ಆರು ಖಂಡಗಳೂ, ಒಟ್ಟು ೬೪ ಮಂತ್ರಗಳೂ ಇವೆ. ಈ ಭಾಷ್ಯಕ್ಕೆ ಶ್ರೀ ಎಂ. ಜಿ. ನಂಜುಂಡಾರಾಧ್ಯರ ಕನ್ನಡ ಟಿಪ್ಪಣಿಯೂ ಇದೆ.

## ೧೬. ಸಿದ್ಧಾಂತಶಿಖೋಪನಿಷತ್ ವೀರಶೈವಭಾಷ್ಯಂ

ಉಮಾಪತಿ ಶಂಕರಶಾಸ್ತ್ರಿಗಳು ಬರೆದಿರುವ ಉಪನಿಷತ್ ಭಾಷ್ಯಗಳಲ್ಲಿ ಇದು ಕಡೆಯದು. ಇದರಲ್ಲಿ ಒಟ್ಟು ೨೪ ಮಂತ್ರಗಳಿವೆ ವೀರಶೈವಾಚಾರಕೌಸ್ತುಭದಲ್ಲಿ ವೀರಶೈವ ಸಿದ್ಧಾಂತ ಪ್ರತಿಪಾದಕವಾದ ಉಪನಿಷತ್ತುಗಳಲ್ಲಿ "ಶ್ರೀರುದ್ರ ಬೃಹದಾರಣ್ಯ ಶ್ವೇತಾಶ್ವತರಮುಂಡಕಾಃ । ...ಸುಸಿದ್ಧಾಂತ ಶಿಖಾಮುಖ್ಯಾಃ" ಎಂದು ಸಿದ್ಧಾಂತ ಶಿಖೆಯನ್ನು ಪರಿಗಣಿಸಲಾಗಿದೆ.

'ಶನ್ನೋ ಮಿತ್ರಶ್ಶಂ ವರುಣಃ' ಎಂಬುದು ಇಲ್ಲಿಯ ಶಾಂತಿ ಮಂತ್ರ. ''ಓಮಿತಿ ಬ್ರಹ್ಮ ವಾಚಕಂ, ತದ್ವಾಚ್ಯೋ ಮಿತ್ರಃ ಸರ್ವಭೂತೇಷು '' ಮೇದ್ಯತಿ ಸ್ನಿಹ್ಯತೀತಿ ಮಿತ್ರಃ'' ತಿಲೇ ತೈಲಮಿವ ಕ್ಷೀರೇ ಸರ್ಪಿರಿವ ಸ್ನೇಹೇನ ಅವಿನಾಭಾವೇನ ವರ್ತಮಾನಃ ''ಞಿಮಿದಾ ಸ್ನೇಹನೇ ಇತಿ ಧಾತೋಃ'' ಸರ್ವಪ್ರಾಣಿಹೃದಯಾಂತರ್ಯಾಮಿತ್ವೇನ ಪ್ರೇರಕಃ ಪ್ರಾಣಲಿಂಗರೂಪ ಈಶ್ವರಃ ಇತ್ಯರ್ಥಃ । 'ಸ ಏಷೋಽಂತರ್ಹೃದಯ ಆಕಾಶಃ 'ಇತಿ ಶ್ರುತೇಃ' 'ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ' ಇತಿ ಕೃಷ್ಣಗೀತೋಕ್ತೇಃ ಸಃ ಅಸ್ಮಾಕಂ ಶಂ ಸುಖಕೃತ್ ಶಂಕರ ಇತ್ಯರ್ಥಃಭವತು ಅಸ್ತು' ಎಂದು ಮುಂತಾಗಿ ಮಾಡಿರುವ ವ್ಯಾಖ್ಯೆಯು ಭಾಷ್ಯಕಾರರ ಪರಿಪಕ್ವಾನುಭವಕ್ಕೆ ನಿದರ್ಶನವಾಗಿದೆ.

ಇದು ಶಿವಕುಮಾರನು ಪರಮಶಿವಭಕ್ತನಾದ ಭರದ್ವಾಜಋಷಿಗೆ ಬೋಧಿಸಿದ ಶಿವ ಸಿದ್ಧಾಂತರೂಪವಾಗಿದೆ.

"ಅತ್ಯಾಶ್ರಮಿತ್ವಾತ್ ಗಣವಂಶಜಾನಾಂ ಲಿಂಗಾಂಗಸಂಗಿನಾಂ ತತ್ರಾಜನ್ಮಾಂತದೀಕ್ಷಾ ಯಥಾ ಗಂಗಾ ಶಿವಸಂಗಾತ್ತಥೈವ ನ ಸೂತಕಂ ವಾ ನಾಪ್ಯಶುಚಿತ್ವಮೇಷಾಂ" (೧) ಎಂಬ ಮಂತ್ರಕ್ಕೆ ಮಾಡಿರುವ ವ್ಯಾಖ್ಯೆಯು ತುಂಬಾ ವಿಚಾರ ಪರಿಪ್ಲುತವಾಗಿದೆ. ಇಲ್ಲಿ ಲಿಂಗಧಾರಣವು ಯಾವಜ್ಜೀವ ಮಹಾವ್ರತವಾದ್ದರಿಂದ ಜಾತಾಶೌಚಾದಿ ಸೂತಕಗಳ ಕಾಲದಲ್ಲಿಯೂ ಲಿಂಗಪೂಜಾನುಷ್ಠಾನಗಳಿಗೆ ಭಂಗಬಾರದ ಪ್ರಯುಕ್ತ "ಲಿಂಗಧಾರಣೇ ತತ್ಪೂಜಾಯಾಮಪಿ ಆ ಶೌಚವಿಧಾನಾಭಾವಾತ್'' ತದುಕ್ತಂ ಸಿದ್ಧಾಂತಾಗಮೇ—

ಸ್ವೇಷ್ಟಲಿಂಗೈಕಪೂಜಾಯಾಂ ನೈವಾಶೌಚಂ ವಿಧೀಯತೇ ।
ಪೌಂಡರೀಕೇ ರಜಸ್ತ್ರೀಣಾಂ ಸ್ವಾಗ್ನಿಹೋತ್ರೇ ಯಥಾ ತಥಾ ॥

ಮುಂತಾಗಿ ಉದಾಹರಿಸಿ ವೀರಶೈವಕ್ಕೆ ಸೂತಕಾದಿಗಳ ನಿಷೇಧದ ಔಚಿತ್ಯವನ್ನು ಸೂಚಿಸಿರುವುದು ಗ್ರಾಹ್ಯವಾಗಿದೆ. ಇನ್ನು ಶಿವಪಾರಮ್ಯ ಅಷ್ಟಾವರಣಾದಿಗಳ ವಿವರಣ ಮುಂತಾದವು ಮನನೀಯವಾಗಿವೆ.

## ೧೭ ಬ್ರಹ್ಮಸೂತ್ರವೃತ್ತಿ

ಉಮಚಗಿ ಶಂಕರಶಾಸ್ತ್ರಿಗಳ ಪಾಂಡಿತ್ಯಾನುಭವಗಳಿಗೆ ಒರೆಗಲ್ಲಿನಂತಿರುವ "ಬ್ರಹ್ಮಸೂತ್ರಶಾಂಕರೀ'' ವೃತ್ತಿಯು ವೀರಶೈವ ಸಿದ್ಧಾಂತದ ಹೃದಯವನ್ನು ವ್ಯಕ್ತಮಾಡುವಲ್ಲಿ ಕೃತಕೃತ್ಯವಾಗಿದೆ. ಶಾಸ್ತ್ರಿಗಳು ಹೇಳುವಂತೆ 'ನೀಲಕಂಠಶಿವಾಚಾರ್ಯವಿರಚಿತ ನೀಲಕಂಠ ಭಾಷ್ಯಕಾರಿಕಾರೂಪ ಕ್ರಿಯಾಸಾರಸ್ಯ ವ್ಯಾಖ್ಯಾಮಪಿ ಬ್ರಹ್ಮಸೂತ್ರವೃತ್ತಿ ನಾಮ್ನಾ ವಿರಚಯ್ಯ' ಎಂಬುದರಿಂದ ಇದು ಕ್ರಿಯಾಸಾರಕ್ಕೆ ವ್ಯಾಖ್ಯಾನರೂಪವಾಗಿದೆ.

ಕ್ರಿಯಾಸಾರದ ಮೊದಲ ೪ ಉಪದೇಶಗಳು ಬ್ರಹ್ಮಸೂತ್ರಗಳ ೪ ಅಧ್ಯಾಯಗಳ ಕಾರಿಕಾರೂಪ ವ್ಯಾಖ್ಯಾನ. ಅದರಲ್ಲಿ ಶ್ರೀಶಾಸ್ತ್ರಿಗಳ ವೃತ್ತಿಯು ಮೊದಲನೆಯ ಅಧ್ಯಾಯದ ೪ನೆಯ ಪಾದ ೧೬ ಸೂತ್ರಗಳವರೆಗೆ ಮಾತ್ರ ರಚಿತವಾಗಿದೆ. ಇದು ಮೈಸೂರಿನ ಶಂಕರವಿಲಾಸ ಸಂಸ್ಕೃತ ಪಾಠಶಾಲೆಯ ಆಶ್ರಯದಲ್ಲಿ ಶ್ರೀ ಎಂ. ಜಿ. ನಂಜುಂಡಾರಾಧ್ಯರ ಸಂಪಾದಕತ್ವದಲ್ಲಿ ಪ್ರಕಟವಾಗಿದೆ. ಇದರಲ್ಲಿ ವೃತ್ತಿಕಾರರ ಪಾಂಡಿತ್ಯ ಅನುಭವ ಮತ್ತು ಪ್ರತಿಭೆಗಳು ಚೆನ್ನಾಗಿ ಅಭಿವ್ಯಕ್ತವಾಗಿವೆ. ಮೇಲಾಗಿ ಶಾಸ್ತ್ರಹೃದಯವನ್ನು ಆಮೂಲಾಗ್ರವಾಗಿ ಅರಿತಿರುವ ಶಾಸ್ತ್ರಿಗಳು ಇಲ್ಲಿನ ಅಪಶೂದ್ರಾಧಿಕರಣಕ್ಕೆ ಮಾಡಿರುವ ವ್ಯಾಖ್ಯೆಯು ಎಂದೆಂದಿಗೂ ಮಾನ್ಯವಾಗುವಂತಹುದು. ಹಿಂದಿನ ಭಾಷ್ಯಕಾರರು ಸ್ತ್ರೀ ಶೂದ್ರರಿಗೆ ಬ್ರಹ್ಮವಿದ್ಯಾಧಿಕಾರವಿಲ್ಲವೆಂದು ಸಾರಿರುವುದನ್ನು ಸಪ್ರಮಾಣವಾಗಿ ನಿರಾಕರಿಸಿ ವೀರಶೈವಸಿದ್ಧಾಂತವು ಶಕ್ತಿಪಾತ ಪರಿಪೂತಾಂತಃಕರಣರಾದ ಎಲ್ಲ

ಮುಮುಕ್ಷುಗಳಿಗೂ (ಜಾತಿ ಮತ-ಲಿಂಗಭೇದಗಳ ಅಂತರವಿಲ್ಲದೆ) ಬ್ರಹ್ಮವಿದ್ಯಾಧಿಕಾರವುಂಟು ಎಂಬುದನ್ನು ಅನೇಕ ಯುಕ್ತಿಪ್ರಮಾಣಗಳಿಂದ ಸಿದ್ಧಪಡಿಸಿರುವುದನ್ನು ಇಲ್ಲಿ ಘೋಷಿಸಲಾಗಿದೆ.

ಕಾಂಚನಂ ರಜತಂ ತಾಮ್ರಂ ಲೋಹಂ ಚೇತಿ ಚತುಷ್ಟಯಂ
ಯದ್ವದೇತಿ ಸುವರ್ಣತ್ವಂ ರಸವೇಧಪ್ರಭಾವತಃ ॥
ತದ್ವತ್ ಶೂದ್ರಾದಿಪಾತ್ರಂ ಹಿ ಶಿವಮಹಾತ್ಮ್ಯಾತ್ಮಕೇ ನ ತಂ ।
ವಿದ್ವದ್ರಸೇನ ಮಹತಾ ಪರಬ್ರಹ್ಮತ್ವಮೆಂತ್ಯಲಂ
ಶಿವಸಂಸ್ಕಾರ ಸಂಪನ್ನಂ ಹ್ಯಯಂ ಶೂದ್ರೋ ಹ್ಯಯಂ ದ್ವಿಜಃ
ಲಿಂಗಭೇದಃ ಕೃತೋ ಯೇನ ರೌರವಂ ನರಕಂ ವ್ರಜೇತ್ ॥

ಮುಂತಾದ ಪ್ರಮಾಣಗಳನ್ನು ನಿದರ್ಶಿಸಿ ಸುದೀರ್ಘವಾಗಿ ವ್ಯಾಖ್ಯಾನಿಸಲಾಗಿದೆ. ಇದು ಭಾರತೀಯ ದರ್ಶನಕ್ಕೆ ವೀರಶೈವದ ವಿಶಿಷ್ಟ ಕೊಡುಗೆ.

## ಕೈವಲ್ಯೋಪನಿಷತ್‌ಸಾದಾಶಿವಭಾಷ್ಯಂ

(ಕ್ರಿ. ಶ. ೧೯೦೦)

ಕೈವಲ್ಯೋಪನಿಷತ್ತಿಗೆ ವೀರಶೈವ ಸಿದ್ಧಾಂತ ಪರವಾಗಿ ಭಾಷ್ಯವನ್ನು ಬರೆದಿರುವ ಲಿಂ॥ ಪಟ್ಟಾಧ್ಯಕ್ಷ ಶ್ರೀ ಸದಾಶಿವ ಶಿವಾಚಾರ್ಯಸ್ವಾಮಿಗಳು ಶ್ರೋತ್ರಿಯ ಬ್ರಹ್ಮನಿಷ್ಠರು. ಭಾಷ್ಯದ ಮೊದಲಲ್ಲಿ ಮಾಡಿಕೊಂಡಿರುವ ವಿಜ್ಞಾಪನೆಯಲ್ಲಿ—"ಪಕ್ಷ ಪ್ರತಿಪಕ್ಷಖಂಡನ ಮಂಡನಾದಿ ಗಹನಶಾಸ್ತ್ರೀಯ ವಾಕ್ಯರಚನಾ ಬುದ್ಧಿಮಂತ್ಸೃಜ್ಯ, ತದ್ವದನುಕರಣಪದ್ಧತಿಮಾತ್ರ ಮನುಸೃತ್ಯ ಉಪಲಬ್ಧೈರ್ನಿಗಮಾಗಮಾದ್ಯನೇಕ ಪ್ರಾಮಾಣ್ಯೈಸ್ಸಾಕಂ ಶಿವಾದ್ವೈತ ಸಿದ್ಧಾಂತಾನುಸಾರೇಣ ಕೈವಲ್ಯೋಪನಿಷತ್ಸಾದಾಶಿವಭಾಷ್ಯಂ ತಾವದ್ವಿರಚಿತಮಸ್ಮಾಭಿಃ" ಎಂಬ ಭಾಷ್ಯಕಾರರ ಆಶಯವು ಮಾನ್ಯವೂ ಅನುಕರಣೀಯವೂ ಆಗಿದೆ. ಈ ಉಪನಿಷತ್ತಿನಲ್ಲಿ ೨೫ ಮಂತ್ರಗಳಿವೆ. "ಸಹನಾವವತು ನ ಎಂಬುದು ಶಾಂತಿ ಮಂತ್ರ". ಇದು ಪಿತಾಮಹನು ಆಶ್ವಲಾಯನನಿಗೆ ಮಾಡಿದ ಬ್ರಹ್ಮವಿದ್ಯೋಪದೇಶರೂಪವಾಗಿದೆ.

ಶ್ರದ್ಧಾ-ಭಕ್ತಿ-ಜ್ಞಾನಯೋಗಗಳ ಮೂಲಕ ಬ್ರಹ್ಮಸಾಕ್ಷಾತ್ಕಾರ ಎಂಬ ವಿಷಯವೇ ಇಲ್ಲಿನ ವಸ್ತು. ಶ್ರದ್ಧಾಭಕ್ತಿಯ ಸ್ವರೂಪ, ಧ್ಯಾನಯೋಗ ಸಾಧನೆಯ ಸ್ಥಾನ, ಯೋಗಾನುಷ್ಠಾನ ವಿಧಾನ, ಪರಬ್ರಹ್ಮಸ್ವರೂಪ, ಜೀವನ ಜಾಗ್ರದಾವ್ಯವಸ್ಥೆಗಳು, ಶಿವಾರ್ಚನಾದಿ ಯೋಗಾನುಷ್ಠಾನಗಳಿಂದ ಬ್ರಹ್ಮಾನುಭಾವವನ್ನು ಪಡೆದು ಜೀವನ್ಮುಕ್ತನ ಅನುಭವಗಳು ಇಲ್ಲಿ ನೂರಾರು ಪ್ರಮಾಣವಚನಗಳಿಂದ ಸಮರ್ಥಿಸಲ್ಪಟ್ಟು ಹೃದಯಂಗಮವಾಗಿ ನಿರೂಪಿಸಲಾಗಿದೆ.

ಬ್ರಹ್ಮ ಶತರುದ್ರೀಯವೆಂದು ಕರೆಯಲ್ಪಡುವ ಕೈವಲ್ಯೋಪನಿಷತ್ತಿನ ಫಲಶ್ರುತಿಯಿಂದ ಈ ಉಪನಿಷತ್ತು ಮುಗಿದಿದೆ.

ವೀರಶೈವಸಿದ್ಧಾಂತ ಪ್ರತಿಪಾದಕವಾದ ಕೆಲವು ಗ್ರಂಥಗಳು

೨೦ ಆಗಮಗಳು-ವಾತುಲೋತ್ತರವರ್ಣಭೇದಾದಿದರ್ಶಕಪತ್ರ.
ವಾತುಲ ಶುದ್ಧಾಖ್ಯತಂತ್ರ.

೨೧ ಸೂಕ್ಷ್ಮತಂತ್ರ

೨೨ ದೇವೀಕಾಲೋತ್ತರ ಜ್ಞಾನಾಚಾರ ಬೋಧಕ ಪಟಲ

೨೩ ಪಾರಮೇಶ್ವರತಂತ್ರ

೨೪ ವೀರಾಗಮ (ಅಪ್ರಕಟಿತ)

೨೫ ಸೋಮನಾಥಭಾಷ್ಯ-ಪಾಲ್ಕುರಿಕೆ ಸೋಮನಾಥ ವಿರಚಿತ (ಅಪ್ರಕಟಿತ)

೨೬ ಶ್ರುತಿಸಾರಭಾಷ್ಯ-ಶಿವಪೂಜಾಲಿಂಗಭೂಪಾಲಶಿವಯೋಗೀಂದ್ರ ವಿರಚಿತ

೨೭ ಶಿವಾದ್ವೈತದರ್ಪಣ-ಹೂಲಿ ನೀಲಕಂಠಶಿವಾಚಾರ್ಯರು

೨೮ ಪಂಡಿತಾರಾಧ್ಯಚಾರಿತ್ರ (ವಾದಕಾಂಡ)-ಪಾಲ್ಕುರಿಕೆ ಸೋಮನಾಥಕೃತ,
ಸಂಸ್ಕೃತ-ಗುರುರಾಜಕೃತ.

೨೯ ವೇದಾಂತಸಾರ ವೀರಶೈವ ಚಿಂತಾಮಣಿ-ನಿಟ್ಟೂರು ನಂಜಣಾರ್ಯವಿರಚಿತ

೩೦ ವೀರಶೈವೋತ್ಕರ್ಷ } ಶ್ರೀಚನ್ನಬಸವೇಶ್ವರ ವಿರಚಿತ
,, ದೀಪಿಕಾ

೩೧ ಸಿದ್ಧಾಂತ ಸುಧಾಕರ (ವಾದಗ್ರಂಥ)-ಉಮಚಗಿ ಶಂಕರಶಾಸ್ತ್ರಿ

೩೨ ಶಿವತತ್ತ್ವರತ್ನಾಕರ—ಕೆಳದಿ ಬಸವರಾಜ

೩೩ ಸಿದ್ಧಲಿಂಗ ವಿಜಯಂ ಮಹಾಕಾವ್ಯಂ (೨೦-೨೬ ಸರ್ಗಗಳು)
ಲಿಂ॥ ಪಗಡದಿನ್ನಿ ಪಂ॥ ಬಸವರಾಜಶಾಸ್ತ್ರಿ ವಿರಚಿತ

೩೪ ಶ್ರೀಕರಭಾಷ್ಯದ ಅಧಿಕೃತ ಮುದ್ರಣವು ಈಗತಾನೆ (೧೯೭೮) ಮೈಸೂರು ವಿಶ್ವವಿದ್ಯಾಲಯ (ಓ. ಆರ್. ಐ.) ದ ಆಶ್ರಯದಲ್ಲಿ ಶ್ರೀ ಎಂ. ಜಿ. ನಂಜುಂಡಾರಾಧ್ಯರ ಸಂಪಾದಕತ್ವದಲ್ಲಿ ವಿಸ್ತಾರವಾದ ಭೂಮಿಕೆಯೊಡನೆ ಎರಡು ಸಂಪುಟಗಳಲ್ಲಿ ಪ್ರಕಟವಾಗಿದೆ.

* * * *

೧೧

# ದ್ವೈತದರ್ಶನ

ಪೀಠಿಕೆ :

ಶ್ರೀಮಧ್ವಾಚಾರ್ಯರ ಸಿದ್ಧಾಂತವನ್ನು ದ್ವೈತಸಿದ್ಧಾಂತ ಅಥವಾ ದ್ವೈತದರ್ಶನವೆಂದು ಕರೆಯಲಾಗುತ್ತದೆ. ದ್ವೈತ ಎಂಬ ಪದಕ್ಕೆ ಭೇದ ಎಂಬ ಅರ್ಥವಿದ್ದು ಇದು ಸಾಂಖ್ಯಾದಿ ದರ್ಶನಗಳಿಗೆ ಅನ್ವಯಿಸಬಹುದಾದರೂ ಮಧ್ವಾಚಾರ್ಯರ ಸಿದ್ಧಾಂತಕ್ಕೆ ಮಾತ್ರ ಈ ಹೆಸರನ್ನು ಬಳಸುವುದು ಇತ್ತೀಚಿನ ರೂಢಿಯಾಗಿದೆ. ನಿರೀಶ್ವರ ಸಾಂಖ್ಯ, ಸೇಶ್ವರಸಾಂಖ್ಯ, ನ್ಯಾಯ ವೈಶೇಷಿಕ ದರ್ಶನಗಳು ಜೈಮಿನೀಯ ಮೀಮಾಂಸಾದರ್ಶನ ಇವೆಲ್ಲವೂ ಜೀವ-ಈಶ್ವರ ಇತ್ಯಾದಿ ಪದಾರ್ಥಗಳಲ್ಲಿ ಭೇದವನ್ನು ಒಪ್ಪುವುದರಿಂದ ದ್ವೈತದರ್ಶನಗಳೇ ಆಗಿವೆ. ಆದರೂ ಸ್ವತಂತ್ರ ಮತ್ತು ಅಸ್ವತಂತ್ರ ಎಂಬ ಎರಡು ತತ್ತ್ವಗಳನ್ನು ಒಪ್ಪಿ ಅವುಗಳಿಗೆ ಪರಸ್ಪರವಾಗಿ ಅತ್ಯಂತವಾದ ಪಾರಮಾರ್ಥಿಕ ಭೇದವನ್ನು ಅಂಗೀಕರಿಸಿ, ಅವೆರಡರ ಸಮರ್ಥನೆ ಮತ್ತು ವಿವರಣೆಗಳಲ್ಲಿ ದ್ವೈತ ದರ್ಶನವು ತೊಡಗುವುದರಿಂದ ಇದಕ್ಕೆ ಮಾತ್ರವೇ ದ್ವೈತದರ್ಶನ ಅಥವಾ ದ್ವೈತಸಿದ್ಧಾಂತ ವೆಂಬ ಹೆಸರು ಪ್ರಚಲಿತವಾಗಿದೆ.

ಸ್ವತಂತ್ರಮಸ್ವತಂತ್ರಂ ಚ ದ್ವಿವಿಧಂ ತತ್ತ್ವಮಿಷ್ಯತೇ ।
ಸ್ವತಂತ್ರೋ ಭಗವಾನ್ ವಿಷ್ಣುಃ ಭಾವಾಭಾವೌ ದ್ವಿಧೇತರತ್ ॥

ತತ್ತ್ವಸಂಖ್ಯಾನ, ಶ್ಲೋ. ೧.

ಸ್ವತಂತ್ರ ಮತ್ತು ಅಸ್ವತಂತ್ರವೆಂದು ತತ್ತ್ವವು ಎರಡು ವಿಧ. ಭಗವಂತನಾದ ವಿಷ್ಣು ಒಬ್ಬನೇ ಸ್ವತಂತ್ರ ತತ್ತ್ವ. ಅಸ್ವತಂತ್ರ ತತ್ತ್ವವು ಭಾವ ಅಭಾವ ಎಂದು ಎರಡು ವಿಧ. ಈ ರೀತಿಯು ವಿಭಾಗವನ್ನು ಮಾಡಿ ಅನಂತರ ಭಾವ ಪದಾರ್ಥವು ಚೇತನ ಮತ್ತು ಅಚೇತನವೆಂದು ಎರಡು ವಿಧ ಇತ್ಯಾದಿ ರೀತಿಯಿಂದ ಈ ದರ್ಶನದಲ್ಲಿ ಪದಾರ್ಥ ವಿವೇಚನೆಯನ್ನು ಮಾಡಲಾಗಿದೆ. "ಪದಾರ್ಥಃ ದ್ವಿವಿಧಃ ಭಾವಃ ಅಭಾವಶ್ಚೇತಿ, ಭಾವಃ ಷಡ್ವಿಧಃ ದ್ರವ್ಯಗುಣಕರ್ಮಸಾಮಾನ್ಯ ವಿಶೇಷ ಭೇದಾತ್". ಇತ್ಯಾದಿ ಕ್ರಮದಿಂದ ಹೊರಟಿರುವ ಪದಾರ್ಥ ವಿಭಾಗವನ್ನು ಮೇಲಿನ ವಿಭಾಗವು ಹೋಲುತ್ತದೆ. ದ್ವೈತದರ್ಶನದಲ್ಲಿ ಎರಡು ಸ್ವತಂತ್ರವಾದ ಪದಾರ್ಥಗಳನ್ನು

ಒಪ್ಪುವುದಿಲ್ಲ. ಎಲ್ಲರೂ ಸ್ವತಂತ್ರರಾದರೆ ಎಲ್ಲರಿಗೂ ನಿತ್ಯಸುಖ ಅಥವಾ ನಿತ್ಯದುಃಖವುಂಟಾಗ ಬೇಕಾಗುತ್ತದೆ. ಎಲ್ಲವೂ ಅಸ್ವತಂತ್ರವಾದರೆ, ಯಾರ ವ್ಯವಹಾರ, ಪ್ರಯತ್ನಗಳೂ ನಡೆಯಲಾರವು. ಸಾಂಖ್ಯಮತದಂತೆ ಅಂಧಪಂಗುನ್ಯಾಯದಿಂದ, ವ್ಯವಹಾರಗಳು ನಡೆಯಲಾರವು.



1 ಪಂಗ್ವಂಧವದುಭಯೋರಪಿ ಸಂಯೋಗಸ್ತತ್ಕೃತಃ ಸರ್ಗಃ-ಸಾಂಖ್ಯಕಾರಿಕಾ, ಈಶ್ವರ ಕೃಷ್ಣ, ಎಲ್ಲವೂ ಅಸ್ವತಂತ್ರವಾದರೆ ಆ ಅಸ್ವತಂತ್ರತತ್ವಗಳಿಗೆ ಪರಸ್ಪರಸಂಬಂಧವುಂಟಾಗಲು ಸಾಧ್ಯವಿಲ್ಲ—ಈ ರೀತಿಯ ವಿಚಾರಸರಣಿಯಿಂದ ಈ ದರ್ಶನವು ಮುಂದುವರಿಯುತ್ತದೆ. ಸ್ವತಂತ್ರವಾದ ಪರಬ್ರಹ್ಮತತ್ತ್ವವು ಒಂದೇ. ಪರಿಪೂರ್ಣವಾದ ಎರಡು ಸ್ವತಂತ್ರತತ್ತ್ವಗಳು ಇರಲು ಸಾಧ್ಯವಿಲ್ಲ. ಪ್ರಕೃತಿ, ಪುರುಷ(ಜೀವ), ಕಾಲ, ಕರ್ಮ, ಸ್ವಭಾವ ಎಲ್ಲವೂ ಸತ್ಯ ಮತ್ತು ಪರಮಾತ್ಮನ ಅಧೀನ. ಆದುದರಿಂದ ಆ ಪರಬ್ರಹ್ಮವಸ್ತುವನ್ನು ಏಕಮೇವಾದ್ವಿತೀಯಮ್ (ಛಾಂದೋಗ್ಯ) ಎಂಬಲ್ಲಿ ಅದ್ವಿತೀಯವೆಂದೂ, ಸರ್ವಂಖಲ್ವಿದಂ ಬ್ರಹ್ಮ ಪುರುಷ ಏವೇದಂ ಸರ್ವಂ (ಪುರುಷಸೂಕ್ತ) ಎಂಬಲ್ಲಿ ಸರ್ವವೆಂದೂ ಕರೆಯಲಾಗಿದೆ. ಮಂತ್ರ, ಬ್ರಾಹ್ಮಣ, ಆರಣ್ಯಕ, ಉಪನಿಷತ್ ಎಲ್ಲವೂ ಪರಮಮುಖ್ಯ ವೃತ್ತಿಯಿಂದ ಪರಬ್ರಹ್ಮವನ್ನೇ ಪ್ರತಿಪಾದಿಸುತ್ತವೆ. ಕರ್ಮಕಾಂಡ ಸಹಿತವಾದ ಸಮಸ್ತವೇದವೂ ಸ್ವರ, ವರ್ಣ. ಪದ, ವಾಕ್ಯ, ಮಹಾವಾಕ್ಯ, ಪ್ರಕರಣ, ಸಮಗ್ರಗ್ರಂಥ ಮುಂತಾದರೂಪದಿಂದ ಪರಬ್ರಹ್ಮವನ್ನೇ ಪ್ರತಿಪಾದಿಸುತ್ತವೆ. ಎಲ್ಲಾ ಕರ್ಮಗಳಿಂದಲೂ ಅವನೇ ಆರಾಧ್ಯನು, ಜೀವರು ಸರ್ವವಿಧದಿಂದಲೂ ಅಸ್ವತಂತ್ರರಾದರೂ ಇಲ್ಲಿ ನಿರಾಶಾವಾದಕ್ಕೆ ಸ್ಥಾನವಿಲ್ಲ. ಪರಮಾತ್ಮನು ಜೀವರಿಗೆ, ಅವರವರ ಯೋಗ್ಯತೆಗನುಗುಣವಾಗಿ ಸ್ವಾತಂತ್ರ್ಯವನ್ನು ಕರುಣಿಸಿದ್ದಾನೆ. ಇದನ್ನು ದತ್ತಸ್ವಾತಂತ್ರ್ಯವೆಂದು ಹೇಳುತ್ತಾರೆ. ಜೀವನು ಈ ಸ್ವಾತಂತ್ರ್ಯವನ್ನು ಉಪಯೋಗಿಸಿಕೊಂಡು, ಪರಮಾತ್ಮನಿಂದ ಪ್ರೇರಿತನಾಗಿ ತಾನು ಕರ್ತವ್ಯವನ್ನು ಮಾಡುತ್ತೇನೆಂದು ಸಂಕಲ್ಪಿಸಿ ದೃಢಪ್ರಯತ್ನವನ್ನು ಸತತವಾಗಿ ಮಾಡುತ್ತಾ ಉನ್ನತ ಸ್ಥಾನವನ್ನು ಗಳಿಸಬಹುದು. (ಪ್ರಯತ್ನಮೇಕಮಗ್ರತೋ ನಿಧಾಯ ಭೂತಿಮಾಪ್ನುಮಃ [ಮಹಾ. ಭಾ.ತಾ.ನಿ.]) 'ಪ್ರಯತ್ನ ಒಂದನ್ನೇ ಮುಂದಿಟ್ಟುಕೊಂಡು ನಾವು ಅಭಿವೃದ್ಧಿಯನ್ನು ಪಡೆಯೋಣ' ಎಂದು. ಈ ದರ್ಶನವು ಸಾರುತ್ತದೆ. ಜೀವಾತ್ಮರು ಅನಂತರಾಗಿದ್ದಾರೆ. ಅವರು ಈ ಸಂಸಾರಾವಸ್ಥೆಯಲ್ಲಿ ಬದ್ಧರಾಗಿದ್ದಾರೆ. ಪರಮಾತ್ಮನ ತತ್ತ್ವಜ್ಞಾನದಿಂದ ಅವನಲ್ಲಿ ಭಕ್ತಿಯುಂಟಾಗಿ ಅವನನ್ನು ಗುರೂಪದೇಶದಿಂದ ತಿಳಿದು ಧ್ಯಾನಿಸಬೇಕು. ಯೋಗ್ಯಗುರುಗಳು ಅವರವರಿಗೆ ಧ್ಯಾನಿಸಲು ಯೋಗ್ಯವಾದ ಪರಮಾತ್ಮನ ಒಂದು ರೂಪವನ್ನು ಉಪದೇಶಿಸುತ್ತಾರೆ. ಇದನ್ನು 'ಬಿಂಬರೂಪ'ವೆನ್ನುತ್ತಾರೆ. ಜೀವನು ಪ್ರತಿಬಿಂಬನು. ಈ ಬಿಂಬರೂಪದ ಧ್ಯಾನದಿಂದ' ಅಪರೋಕ್ಷಜ್ಞಾನ ಉಂಟಾಗುತ್ತದೆ. ಅನಂತರ ಪರಮಾತ್ಮನ ಪ್ರಸಾದದಿಂದ ಜೀವಾತ್ಮನ ಲಿಂಗದೇಹ ನಿವೃತ್ತಿಯಾಗಿ ತನ್ನ ಸ್ವರೂಪಾನಂದಾವಿರ್ಭಾವ ರೂಪವಾದ ಮೋಕ್ಷವನ್ನು

ಹೊಂದುತ್ತಾನೆ. ಆತ್ಮನ ಬಂಧ ಮುಕ್ತಾವಸ್ಥೆಗಳೆರಡೂ ಸತ್ಯವಾಗಿವೆ. (ಆತ್ಮನಃ ಬಂಧಮುಕ್ತಾವಸ್ಥೇ ಪರಮಾರ್ಥತ ಏವ ಸತ್ಯಭೂತೇ ಸರ್ವೇಷಾಂ ದ್ವೈತವಾದಿನಾಂ, ಶಾಂ,ಗೀ, ೧೨-೨,ಸ ದುಃಖೀ ಸ ಸುಖೀ ಚೈವ ಸ ಪಾತ್ರಂ ಬಂಧಮೋಕ್ಷಯೋಃ ಮಹಾ, ಭಾರ, ಅನುಶಾಸನ,)

## ದ್ವೈತದರ್ಶನದ ಸಾರಸಂಗ್ರಹ

ಈ ಸಿದ್ಧಾಂತದಲ್ಲಿ (೧) ಶ್ರೀಮನ್ನಾರಾಯಣನೇ ಸರ್ವೋತ್ತಮನು. (೨) ಜಗತ್ತು ಪರಮಾರ್ಥವಾಗಿ ಸತ್ಯ. (೩) ಜೀವರೆಲ್ಲರೂ ಪರಮಾತ್ಮನಿಗಿಂತ ಪಾರಮಾರ್ಥಿಕವಾದ ಭೇದವುಳ್ಳವರು. (೪) ಎಲ್ಲಾಜೀವರೂ ನಾರಾಯಣನ ದಾಸರು, (೫) ಜೀವರಲ್ಲಿ ಪರಸ್ಪರವಾಗಿ ತಾರತಮ್ಯವಿದೆ. (೬) ಜೀವಾತ್ಮನ ಸ್ವರೂಪಾನಂದದ ಆವಿರ್ಭಾವವೇ ಮುಕ್ತಿಯು, (೭) ನಿರ್ಮಲವಾದ ಭಕ್ತಿಯೇ ಮುಕ್ತಿಗೆ ಮುಖ್ಯವಾದ ಉಪಾಯ, (೮) ಪ್ರತ್ಯಕ್ಷ, ಅನುಮಾನ, ಆಗಮ (ಶಬ್ದ) ಗಳೆಂದು ಮೂರೇ ಪ್ರಮಾಣಗಳು (೯) ನಾರಾಯಣನನ್ನು ವೇದಗಳಿಂದ ಮಾತ್ರವೇ ತಿಳಿಯಲು ಸಾಧ್ಯ. ಈ ಒಂಬತ್ತು ಪ್ರಮೇಯಗಳನ್ನು ನವರತ್ನಗಳೆಂದೂ ಹೇಳುತ್ತಾರೆ. ಶ್ರೀಮನ್ಮಧ್ವಮತೇ ಹರಿಃ ಪರತರಃ ಸತ್ಯಂ ಜಗತ್ ತತ್ತ್ವತೋ ಭಿನ್ನಾ ಜೀವ-ಗಣಾ ಹರೇರನು ಚರಾ ನೀಚೋಚ್ಚ ಭಾವಂಗತಾಃ। ಮುಕ್ತಿ ನೈಜಸುಖಾನುಭೂತಿರಮಲಾ ಭಕ್ತಿಶ್ಚ ತತ್ಸಾಧನಂ ಹ್ಯಕ್ಷಾದಿ ತ್ರಿತಯಂ ಪ್ರಮಾಣ ಮಖಿಲಾಮ್ನಾಯೈಕವೇದ್ಯೋ ಹರಿಃ, ಎಂಬ ಶ್ಲೋಕವು ಈ ಒಂಬತ್ತು ಪ್ರಮೇಯಗಳ ಸಂಗ್ರಹ ರೂಪವಾಗಿದೆ.

೧) ಜೀವಪರಮಾತ್ಮರ ಭೇದ (೨) ಜೀವರಲ್ಲಿ ಪರಸ್ಪರ ಭೇದ (೩) ಜಡ ಮತ್ತು ಪರಮಾತ್ಮರ ಭೇದ (೪) ಜಡಗಳಿಗೆ ಪರಸ್ಪರ ಭೇದ (೫) ಜಡಜೀವರಲ್ಲಿ ಭೇದ ಎಂಬ ಐದು ಭೇದಗಳನ್ನು ಮೋಕ್ಷಾಪೇಕ್ಷಿಗಳು ಅವಶ್ಯವಾಗಿ ತಿಳಿಯಬೇಕು. ಜೀವೇಶಯೋರ್ಭಿದಾಚೈವ ಜೀವಭೇದಃ ಪರಸ್ಪರಂ। ಜಡೇಶಯೋರ್ಜಡಾನಾಂ ಚ ಜಡಜೀವ ಭಿದಾ ತಥಾ॥ ಪಂಚಭೇದಾ ಇಮೇ ನಿತ್ಯಾಃ ಸರ್ವಾವಸ್ಥಾಸು ಸರ್ವಶಃ। ಮುಕ್ತಾನಾಂ ಚ ನ ಹೀಯಂತೇ—(ಮಹಾಭಾರತ ತಾ. ನಿ. ಅ, ೧ ಶ್ಲೋ. ೩೧) ವಿಷ್ಣುವಿನ ಸರ್ವೋತ್ತಮತ್ವ ಎಂಬ ಒಂದು ಮುಖ್ಯತತ್ವವನ್ನು ಪ್ರತಿಪಾದಿಸಿ ಅದಕ್ಕೆ ಅನುಗಾಮಿಗಳಾದ ಇತರ ತತ್ತ್ವಗಳನ್ನು ಪ್ರತಿಪಾದಿಸುವುದು ಈ ದರ್ಶನದಲ್ಲಿ ಮುಖ್ಯವಾಗಿ ಕಂಡು ಬಂದಿದೆ. ಈ ಸಿದ್ಧಾಂತದ ಪ್ರತಿಪಾದನೆಗಾಗಿ ವೇದ, ಬ್ರಾಹ್ಮಣ, ಆರಣ್ಯಕ, ಉಪನಿಷತ್ತುಗಳು, ಪುರಾಣಗಳು ಮುಂತಾದ ಅನೇಕ ಗ್ರಂಥಗಳ ವಾಕ್ಯಗಳನ್ನು ಈ ದರ್ಶನದಲ್ಲಿ ಉದಾಹರಿಸಲಾಗಿದೆ,

## ದರ್ಶನದ ವಿಕಾಸ

ವೇದ ನಾಲ್ಕು ಸಂಹಿತೆಗಳಲ್ಲಿ ಅಲ್ಲಲ್ಲಿ ಬರುವ ವಿಷ್ಣುವಿನ ಉಲ್ಲೇಖಗಳನ್ನು, ಜಗತ್ತಿನ ಸತ್ಯತೆಯ ಉಲ್ಲೇಖಗಳನ್ನು ಈ ದರ್ಶನದಲ್ಲಿ ಪ್ರಧಾನವಾಗಿ ಇಟ್ಟುಕೊಳ್ಳಲಾಗಿದೆ, ಬ್ರಾಹ್ಮಣ

ಗಳಲ್ಲಿಯೂ ಆರಣ್ಯಕಗಳಲ್ಲಿಯೂ ಈ ಉಲ್ಲೇಖಗಳು ಅಲ್ಲಲ್ಲಿ ಕಂಡುಬರುತ್ತಿವೆ. ಉಪನಿಷತ್ತು ಗಳಲ್ಲಿ ಕೆಲವು ವಾಕ್ಯಗಳನ್ನು ಬಿಟ್ಟರೆ ಉಳಿದ ಎಲ್ಲಾ ಭಾಗವೂ ಹಿಂದೆ ಹೇಳಿರುವ ಪಂಚಭೇದಾತ್ಮಕವಾದ ಪ್ರಪಂಚವನ್ನೇ ಪ್ರತಿಪಾದಿಸುತ್ತದೆಯೆಂದು ಈ ದರ್ಶನದವರ ನಂಬುಗೆಯಿದೆ. ಅನೇಕ ಖಿಲಶ್ರುತಿಗಳು ಮತ್ತು ಪಂಚರಾತ್ರಗಳ ಆಧಾರದಿಂದ 'ಪರಬ್ರಹ್ಮವು ನಾರಾಯಣ,ವಾಸುದೇವ, ಸಂಕರ್ಷಣ, ಪ್ರದ್ಯುಮ್ನ,ಅನಿರುದ್ಧ ಎಂಬ ಐದು ರೂಪಗಳನ್ನು ಸ್ವೀಕರಿಸಿ, ಅವುಗಳ ಮೂಲಕವೇ ಪ್ರಪಂಚದ ಸೃಷ್ಟಿಸ್ಥಿತಿಲಯಗಳನ್ನು ಮಾಡುತ್ತದೆ'ಯೆಂದು ಈ ದರ್ಶನವಲ್ಲಿ ಪ್ರತಿಪಾದಿಸಲಾಗಿದೆ. ಮಹಾಭಾರತ ಮೋಕ್ಷಧರ್ಮ, ಮತ್ತು ಇತರ ಪುರಾಣಗಳಲ್ಲಿಯೂ ಅಲ್ಲಲ್ಲಿ ಪಂಚರಾತ್ರ ಮತ್ತು ಅದರ ತತ್ತ್ವಗಳ ಬಗ್ಗೆ ಉಲ್ಲೇಖವಿದೆ. ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದ-ಮಹಾಭಾರತ, ಪಂಚರಾತ್ರ, ಮತ್ತು ಮೂಲರಾಮಾಯಣ ಎಂಬ ಏಳುಗ್ರಂಥಗಳೂ ಪರಮಪ್ರಮಾಣವೆಂದು ಭಾವಿಸಬೇಕು. ಇವನ್ನು ಅನುಸರಿಸಿರುವ ಪುರಾಣ ಗ್ರಂಥಗಳೂ ಪ್ರಮಾಣಗಳು.ಈ ವಿಷಯದಲ್ಲಿ ಆಧಾರವಾಗಿ ಅನೇಕ ವಾಕ್ಯಗಳನ್ನು ಉದಾಹರಿಸಲಾಗಿದೆ. ಬ್ರಹ್ಮಸೂತ್ರಗಳು ಮತ್ತು ಭಗವದ್ಗೀತೆಯಲ್ಲಿ ದ್ವೈತದರ್ಶನದ ಅನೇಕ ಅಂಶಗಳಿವೆ, ಭಗವದ್ಗೀತೆಯ ಭಕ್ತಿಸಿದ್ಧಾಂತವು ದ್ವೈತದರ್ಶನಕ್ಕೆ ಹೆಚ್ಚು ಪುಷ್ಟಿಯನ್ನು ಕೊಟ್ಟಿದೆ.

ಭಾಗವತ ಪುರಾಣದಲ್ಲಿ ಹೇಳಿರುವ ಧರ್ಮವೇ ದ್ವೈತದರ್ಶನದ ತಿರುಳು. ನಾರಾಯಣನೇ ಮಹಿದಾಸನೆಂಬ ಅವತಾರವನ್ನು ತಾಳಿ ಪಂಚರಾತ್ರವನ್ನು ಉಪದೇಶಿಸಿದನೆಂದು ಭಾಗವತದಲ್ಲದೆ. ತೃತಿಯಮೃಷಿಸರ್ಗಂ ವೈ ದೇವರ್ಷಿತ್ವಮುಪೇತ್ಯ ಸಃ । ತಂತ್ರಂಸಾತ್ವತಮಾಚಷ್ಟ ನೈಷ್ಕರ್ಮ್ಯಂ ಕರ್ಮಣಾಂಯತಃ॥ ಭಾ. ಸ್ಕಂ ೧, ಅ. ೩, ಶ್ಲೋ. ೮.

ಋಗಾದ್ಯಾಭಾರತಂ ಚೈವ ಪಂಚರಾತ್ರಮಥಾಖಿಲಂ ।
ಮೂಲರಾಮಾಯಣಂ ಚೈವ ಶಾಸ್ತ್ರಮಿತ್ಯಭಿಧೀಯತೇ ॥

ಭಾಗವತ ಪುರಾಣದಲ್ಲಿ ಹೇಳಿರುವ ಧರ್ಮವೇ ದ್ವೈತದರ್ಶನದ ತಿರುಳು. ನಾರಾಯಣನೇ ಮಹಿದಾಸನೆಂಬ ಅವತಾರವನ್ನು ತಾಳಿ ಪಂಚರಾತ್ರವನ್ನು ಉಪದೇಶಿಸಿದನೆಂದು ಭಗವತದಲ್ಲಿ ಕಂಡುಬರುತ್ತದೆ,

ಮಹಿದಾಸಾಭಿದೋ ಜಜ್ಞ ಇತರಾಯಾಸ್ತಪೋಬಲಾತ್ ।
ಸಾಕ್ಷಾತ್ ಸ ಭಗವಾನ್ ವಿಷ್ಣುಃ ಯಸ್ತಂತ್ರಂ ವೈಷ್ಣವಂ ವ್ಯಧಾತ್ ॥
ತೃತೀಯಮೃಷಿಸರ್ಗಂ ನೈ ದೇವರ್ಷಿತ್ವಮುಪೇತ್ಯ ಸಃ॥
ತಂತ್ರಂ ಸಾತ್ತ್ವತಮಾಚಷ್ಟ ನೈಷ್ಕರ್ಮ್ಯಂ ಕರ್ಮ ಣಾಂ ಯತಃ ॥

ಹೀಗೆ ಪುರಾಣ ಮತ್ತು ಇತಿಹಾಸಗಳೂ ವೇದದ ಅರ್ಥವನ್ನೇ ವಿಸ್ತಾರವಾಗಿ ಹೇಳುತ್ತವೆ, ಪುರಾಣದಲ್ಲಿ ಬಂದಿರುವ ಕಥೆಗಳಿಂದ ವೇದೋಕ್ತವಾದ ತತ್ವನಿರೂಪಣೆಯು

ಉಪಬೃಂಹಿತವಾಗಿದೆಯೆಂದು ಹೇಳಿರುವುದರಿಂದ ಪುರಾಣಗಳು ದರ್ಶನದ ವಿಕಾಸಕ್ರಮ ಸೂಚಕಗಳು. ಬ್ರಹ್ಮಸೂತ್ರಗಳು ಇತರ ಎಲ್ಲಾ ದರ್ಶನಗಳ ತತ್ತ್ವಗಳನ್ನು ವಿಮರ್ಶಿಸಿ ವೇದ, ಉಪನಿಷತ್ತು, ಭಗವದ್ಗೀತೆ, ಇತಿಹಾಸ, ಪುರಾಣಗಳ ನಿಶ್ಚಿತವಾದ ಸಿದ್ಧಾಂತವನ್ನು ನಿರೂಪಿಸುತ್ತವೆ.

ಯಥಾರ್ಥವಚನಾನಾಂ ಚ ಮೋಹಾರ್ಥಾನಾಂ ಚ ಸಂಶಯಂ ।
ಅಪನೇತುಂ ಹಿ ಭಗವಾನ್ ಬ್ರಹ್ಮಸೂತ್ರಮಚೀಕ್ಲೃಪತ್ ॥
ತಸ್ಮಾತ್ ಸೂತ್ರಾರ್ಥಮಾಗೃಹ್ಯ ಕರ್ತವ್ಯಃ ಸರ್ವನಿರ್ಣಯಃ ।

ಎಂಬ ವಚನದಿಂದ ಈ ವಿಷಯವು ತಿಳಿದು ಬರುತ್ತದೆ. ಈ ದರ್ಶನದಲ್ಲಿ ಮೋಕ್ಷದಲ್ಲಿ ಎಲ್ಲಾ ಜೀವರಿಗೆ ಸಾಮ್ಯವನ್ನು ಒಪ್ಪುವುದಿಲ್ಲ. ಜೀವ ಈಶ್ವರರಿಗೆ ಸ್ವಾಮಿಭೃತ್ಯಭಾವವಿದೆ. 'ದಾಸೋಽಹಂ' ಎಂಬ ಭಾವದಿಂದ ಮಾಡಿದ ಉಪಾಸನೆಯಿಂದ ಮೋಕ್ಷದಲ್ಲಿಯೂ ದಾಸಸ್ವಾಮಿ ಭಾವವೇ ಇರುತ್ತದೆ, ಜೀವಬ್ರಹ್ಮರಿಗೆ ಶರೀರ ಶರೀರಿಭಾವ, ಶೇಷಶೇಷಿಭಾವವಿದೆಯೆಂಬ ಮಾತಿಗೆ ಸ್ವಾಮಿಭೃತ್ಯಭಾವ, ನಿಯಮ್ಯ ನಿಯಾಮಕಭಾವವಿದೆಯೆಂದಷ್ಟೇ ಅರ್ಥ. ಸಾತ್ತ್ವಿಕ, ರಾಜಸ, ತಾಮಸರೆಂಬ ಮೂರು ವಿಧ ಜೀವರಿರುವರು. ಅವರಲ್ಲಿ ಸಾತ್ತ್ವಿಕರಿಗೆ ಮಾತ್ರವೇ ಮೋಕ್ಷ. ರಾಜಸರಿಗೆ ನಿತ್ಯನರಕ. ತಾಮಸರಿಗೆ ಅಂಧತಮಸ ಎಂಬ ನಿತ್ಯನರಕ ಪ್ರಾಪ್ತಿಯಾಗುತ್ತದೆ. ಜೀವಸ್ವರೂಪವೇ ಮೂರು ಬಗೆಯಾಗಿರುವುದರಿಂದ ಅವರ ಸ್ವರೂಪಕ್ಕೆ ಅನುಗುಣವಾಗಿ ಮೂರು ವಿಧದ ಸ್ವರೂಪಸ್ಥಿತಿಯಿಂದ ಅವರಿರುತ್ತಾರೆ.

## ಪ್ರಮಾಣಪ್ರಮೇಯವಿಚಾರಗಳು

ಈ ದರ್ಶನಕ್ಕನುಸಾರವಾಗಿ ಯಥಾರ್ಥವೇ ಪ್ರಮಾಣವು, ಯಥಾರ್ಥವೆಂದರೆ ವಸ್ತುವು ಹೇಗೆ-ಇದೆಯೋ ಹಾಗೆಯೇ ಅದನ್ನು ವಿಷಯೀಕರಿಸುವುದು ತಿಳಿಯುವುದು ಎಂದು ಅರ್ಥ. ಜ್ಞಾನವೂ ಅದಕ್ಕೆ ಸಾಧನವಾದ ಇಂದ್ರಿಯಗಳೂ ಯಥಾರ್ಥವಾದಾಗ ಪ್ರಮಾಣವೆನಿಸುತ್ತವೆ. ಭ್ರಾಂತಿ, ಸಂಶಯಗಳಲ್ಲಿ ವಸ್ತುವು ಹೇಗೆ ಇದೆಯೋ ಅದರಂತೆ ವಸ್ತುವು ಗೋಚರಿಸದಿರುವುದರಿಂದ ಅವು ಯಥಾರ್ಥವಲ್ಲ, ಹಾಗೂ ಪ್ರಮಾಣವೂ ಅಲ್ಲ. ಕಪ್ಪೆಚಿಪ್ಪನ್ನು ನೋಡಿದಾಗ ಇದು ಬೆಳ್ಳಿ ಎಂಬ ಜ್ಞಾನವುಂಟಾಗುತ್ತದೆ, ಇದು ಭ್ರಾಂತಿ. ಭ್ರಾಂತಿಯಲ್ಲಿ ತೋರತಕ್ಕ ಬೆಳ್ಳಿಯು ದೇಶಾಂತರದಲ್ಲಿ ಇದೆಯೆಂದು ವೈಶೇಷಿಕರೇ ಮುಂತಾದವರು ಹೇಳುತ್ತಾರೆ. ಅದು ಅನಿರ್ವಚನೀಯವಾದ ರಜತವೆಂದು ಅದ್ವೈತವಾದಿಗಳು ಹೇಳುತ್ತಾರೆ. ಆ ಬೆಳ್ಳಿಯು ಜ್ಞಾನಸ್ವರೂಪವೆಂದು ವಿಜ್ಞಾನವಾದಿಗಳೂ, ಅಲ್ಲಿಯೇ ತತ್ಕಾಲದಲ್ಲಿ ಬೆಳ್ಳಿಯೊಂದು ಹುಟ್ಟುತ್ತದೆಯೆಂದು ಭಾಸ್ಕರರೂ ಹೇಳುತ್ತಾರೆ. ಎಲ್ಲಾ ರೀತಿಯಿಂದಲೂ, ಎಲ್ಲಿಯೂ ಇಲ್ಲದಿರತಕ್ಕ ಬೆಳ್ಳಿಯು ನನಗೆ ಮುತ್ತಿನ ಚಿಪ್ಪಿನಲ್ಲಿ ತೋರಿತು ಎಂಬುದಾಗಿ ಭ್ರಾಂತಿಯು

ಕಳೆದಾಗ ಅನುಭವ ಉಂಟಾಗುತ್ತದೆ. ಇದರಿಂದ ನಮಗೆ ಕಂಡಿರುವ ಬೆಳ್ಳಿಯು ಅತ್ಯಂತ ಅಸತ್ ಎಂದು ತಿಳಿದು ಬರುತ್ತದೆ. ಸ್ಮರಣವೂ ಪ್ರಮಾಣವೇ ಆಗಿದೆ. ಇದುವರೆಗೆ ಯಥಾರ್ಥವೆನಿಸಿ ಕೊಂಡಿರುವ ಪ್ರಮಾಣದ ವಿಚಾರವನ್ನು ಮಾಡಿದ್ದಾಯಿತು.

ಅಯಥಾರ್ಥವಾದುದು ಅಪ್ರಮಾಣವು. ಸಂಶಯ, ಭ್ರಾಂತಿಗಳು ಅಯಥಾರ್ಥ ವೆನಿಸುತ್ತವೆ. ತರ್ಕವೆಂಬ ಅಯಥಾರ್ಥಾನುಭವವಿದೆ. ಎಂಬ ಅಭಿಪ್ರಾಯವು ಸರಿಯಲ್ಲ. 'ಪರ್ವತದಲ್ಲಿ ಬೆಂಕಿ ಇಲ್ಲದಿದ್ದರೆ ಅಲ್ಲಿ ಹೊಗೆ ಇಲ್ಲದೇ ಹೋಗಬೇಕಾದೀತು' ಎಂಬ ಆಕಾರದ ತರ್ಕವು ಒಂದು ರೀತಿಯ ಅನುಮಾನವೇ ಆಗಿದೆ. ಪ್ರಮಾಣವು ಕೇವಲ ಪ್ರಮಾಣ ಮತ್ತು ಅನುಪ್ರಮಾಣವೆಂದು ಎರಡು ವಿಧ.ನ್ಯಾಯವೈಶೇಷಿಕ ದರ್ಶನಗಳಲ್ಲಿ ಯಥಾರ್ಥಾನುಭವ ಎಂದು ಪ್ರಸಿದ್ಧವಾಗಿರುವ ಜ್ಞಾನವನ್ನೇ ಇಲ್ಲಿ ಕೇವಲ ಪ್ರಮಾಣವೆಂದು ಹೇಳಲಾಗಿದೆ. ಈ ದರ್ಶನವು ದೇವತಾಸಂಬಧವನ್ನು ಹೊಂದಿಯೇ ಪ್ರವೃತ್ತವಾಗಿರುವುದರಿಂದ ಕೇವಲ ಪ್ರಮಾಣವನ್ನು ವಿಭಾಗ ಮಾಡುವಾಗ ದೇವತಾಸಂಬಂಧವೂ ಬಂದಿರುತ್ತದೆ. ಈಶ್ವರಜ್ಞಾನ, ಲಕ್ಷ್ಮೀಜ್ಞಾನ, ಯೋಗಿಜ್ಞಾನ, ಅಯೋಗಜ್ಞಾನವೆಂದು ಕೇವಲಜ್ಞಾನವು ನಾಲ್ಕು ವಿಧವಾಗಿದೆ. ಎಲ್ಲಾ ವಿಷಯಗಳನ್ನೂ ಯಾವಾಗಲೂ ಒಳಗೊಂಡಿರುವ ಈಶ್ವರನ ಸ್ವರೂಪವೇ ಆಗಿರುವ ಜ್ಞಾನವೇ ಈಶ್ವರಜ್ಞಾನವು. ಈಶ್ವರನೆಂದರೆ ಲಕ್ಷ್ಮೀಪತಿಯಾದ ಶ್ರೀಮನ್ನಾರಾಯಣ. ಈಶ್ವರ ಮತ್ತು ಅವನ ಗುಣಕ್ರಿಯಾದಿಗಳನ್ನು ಪೂರ್ಣವಾಗಿ ಒಳಗೊಂಡಿರದಿದ್ದರೂ ಉಳಿದ ಎಲ್ಲಾ ವಿಷಯಗಳನ್ನೂ ಒಳಗೊಂಡಿರುವ ಜ್ಞಾನವೇ ಚಿತ್‌ಪ್ರಕೃತಿಯ (ಮಹಾಲಕ್ಷ್ಮಿಯ) ಜ್ಞಾನವು ಬ್ರಹ್ಮದೇವನು ಸೃಷ್ಟಿಕರ್ತನು. ಅವನ ಪದವಿಗೆ ಬರಲು ಯೋಗ್ಯರಾದ ಅನೇಕ ಜೀವರಿದ್ದಾರೆ.ಅವರೇ ಋಜುಯೋಗಿಗಳು. ಅಹಂಕಾರತತ್ತ್ವಾದಿಗಳ ಅಭಿಮಾನಿದೇವತೆಗಳೇ ತಾತ್ವಿಕ ಯೋಗಿಗಳು. ಉಳಿದ ದೇವತೆಗಳು ಅತಾತ್ವಿಕಯೋಗಿಗಳು. ಇವರ ಜ್ಞಾನವೇ ಯೋಗಿಜ್ಞಾನವು. ಉಳಿದ ಎಲ್ಲಾ ಜೀವರು ಅಯೋಗಿಗಳು. ಅವರು ಮುಕ್ತಿಯೋಗ್ಯರು, ನಿತ್ಯಸಂಸಾರಿಗಳು, ತಮೋಯೋಗ್ಯರು ಎಂದು ಮೂರು ವಿಧವಾಗಿದ್ದಾರೆ. ಅವರ ಜ್ಞಾನವು ಅಯೋಗಿಜ್ಞಾನವು. ನಮ್ಮ ಅನುಭವಕ್ಕೆ ಬರುವ ಈ ಪ್ರಪಂಚದಲ್ಲಿರುವ ಜೀವರೇ ಅಯೋಗಿಗಳು. ಅವರಲ್ಲದೆ ತಾತ್ವಿಕಋಜು ಇತ್ಯಾದಿ ದೇವತೆಗಳ ಜ್ಞಾನವನ್ನೂ ಕೇವಲ ಪ್ರಮಾಣ ಎಂದು ವಿಭಾಗಿಸಿರುವುದು ಈ ದರ್ಶನದ ಒಂದು ವೈಶಿಷ್ಟ್ಯವು. ಅನುಪ್ರಮಾಣವು ಪ್ರತ್ಯಕ್ಷ, ಅನುಮಾನ, ಆಗಮವೆಂದು ಮೂರು ವಿಧವಾಗಿದೆ. ದೋಷವಿಲ್ಲದ ವಿಷಯ ಮತ್ತು ಇಂದ್ರಿಯಗಳ ಸನ್ನಿಕರ್ಷ (ಸಂಬಂಧ)ವೇ ಪ್ರತ್ಯಕ್ಷವು. ಇಂದ್ರಿಯವು ಆತ್ಮಸ್ವರೂಪೇಂದ್ರಿಯ ಮತ್ತು ಪ್ರಾಕೃತ ಎಂದು ಎರಡು ವಿಧ. ಈಗ ಇರುವ ಇಂದ್ರಿಯಗಳು ಪ್ರಾಕೃತೇಂದ್ರಿಯಗಳು. ಅವುಗಳಿಂದ ಉಂಟಾಗುವ ಜ್ಞಾನವೇ ವೃತ್ತಿಜ್ಞಾನವು. ಇದು ಅಂತಃಕರಣದ ಪರಿಣಾಮರೂಪ ಮತ್ತು ಅನಿತ್ಯವಾಗಿದೆ. ಸ್ವರೂಪೇಂದ್ರಿಯವು ಮುಕ್ತಿಯಲ್ಲಿ ಮಾತ್ರವೇ ಅಭಿವ್ಯಕ್ತವಾಗುತ್ತದೆ. ಬಾಹ್ಯವಾದ ಕಣ್ಣು ಮುಂತಾದ ಐದು ಜ್ಞಾನೇಂದ್ರಿಯಗಳು ಅಂತರವಾದ ಮನಸ್ಸು,

ಇವುಗಳಲ್ಲದೆ, ಆತ್ಮಸ್ವರೂಪೇಂದ್ರಿಯವಾದ ಸಾಕ್ಷಿ, ಇವಿಷ್ಟು ಪ್ರತ್ಯಕ್ಷರೂಪವಾದ ಅನುಪ್ರಮಾಣಗಳು. ಇದು ಬಟ್ಟೆ ಎಂಬ ಜ್ಞಾನವು ಬಂದ ಮೇಲೆ ನಾನು ಬಟ್ಟೆಯನ್ನು ತಿಳಿದೆನು ಎಂಬ ಎರಡನೆಯ ಜ್ಞಾನವುಂಟಾಗುತ್ತದೆ. ಇದೇ ಸಾಕ್ಷಿ-ಆತ್ಮಸ್ವರೂಪಭೂತಜ್ಞಾನ. ಇದಕ್ಕೆ ಸಾಧನವಾದ ಆತ್ಮಸ್ವರೂಪೇಂದ್ರಿಯವೇ ಸಾಕ್ಷಿ. ಸಾಕ್ಷಿಯ ಅನುಭವವು ಬಹಳ ಬಲವತ್ತಾದುದು ಅದು ಎಲ್ಲಾ ರೀತಿಯಿಂದಲೂ ಅಬಾಧಿತವಾಗಿರುತ್ತದೆ. ಆತ್ಮ ಸ್ವರೂಪ, ಆತ್ಮನ ಧರ್ಮಗಳು, ಅವಿದ್ಯೆ, ಮನಸ್ಸು, ಮನಸ್ಸಿನ ವ್ಯಾಪಾರಗಳು, ಬಾಹ್ಯೇಂದ್ರಿಯಗಳಿಂದ ಉಂಟಾಗುವ ಜ್ಞಾನ, ಸುಖ, ದುಃಖ ಮುಂತಾದುವುಗಳು, ಕಾಲ, ದಿಕ್ಕು ಮುಂತಾದುವುಗಳು ಈ ಸಾಕ್ಷೀಂದ್ರಿಯಕ್ಕೆ ವಿಷಯವಾಗುತ್ತವೆ. ಜ್ಞಾನದ ಪ್ರಾಮಾಣ್ಯ ಅಪ್ರಾಮಾಣ್ಯಗಳೂ ಸಾಕ್ಷಿಗೆ ಗೋಚರವಾಗುತ್ತವೆ.

ಜ್ಞಾನವೆಲ್ಲವೂ ಸವಿಕಲ್ಪಕವೇ ಹೊರತು ನಿರ್ವಿಕಲ್ಪಕ ಜ್ಞಾನವೆಂಬುದಿಲ್ಲ. ಪ್ರತ್ಯಕ್ಷವು ವಸ್ತುವಿನ ಸ್ವರೂಪವನ್ನು ಮಾತ್ರ ತಿಳಿಸುತ್ತದೆ. ಆ ವಸ್ತುವು ಇಷ್ಟಸಾಧನವಾಗಿದ್ದರೆ ಅದರಲ್ಲಿ ಅನುಮಾನಪ್ರಮಾಣದಿಂದ ಪ್ರವೃತ್ತಿಯುಂಟಾಗುತ್ತದೆ. ಅನಿಷ್ಟಸಾಧನವಾಗಿದ್ದರೆ ನಿವೃತ್ತಿಯುಂಟಾಗುತ್ತದೆ. ಕೆಲವು ವಸ್ತುಗಳ ವಿಷಯದಲ್ಲಿ ಔದಾಸೀನ್ಯ ಬುದ್ಧಿಯುಂಟಾಗುತ್ತದೆ.

ದೋಷವಿಲ್ಲದ ಯುಕ್ತಿಯೇ ಅನುಮಾನ ಪ್ರಮಾಣವು. ಸಾಹಚರ್ಯನಿಯಮದಿಂದ ಈ ಯುಕ್ತಿಯನ್ನು ಸರಿಯಾಗಿ ತಿಳಿಯಬೇಕು. ಕಾರ್ಯಾನುಮಾನ, ಕಾರಣಾನುಮಾನ, ಅಕಾರ್ಯಕಾರಣಾನುಮಾನವೆಂದು ಅನುಮಾನವು ಮೂರು ವಿಧವಾಗಿದೆ. ಹೊಗೆಯು ಬೆಂಕಿಯ ಕಾರ್ಯ. ಕಾರ್ಯವಾದ ಹೊಗೆಯನ್ನು ಕಂಡಾಗ ಆ ಸ್ಥಳದಲ್ಲಿ ಬೆಂಕಿಯಿದೆಯೆಂದು ತಿಳಿಯುವುದು ಕಾರ್ಯಾನುಮಾನವು. ದಟ್ಟವಾದ ಅನುಕೂಲವಾದ ಗಾಳಿಯ ಸಂಚಾರದಿಂದ ಕೂಡಿದ ಮೋಡಗಳನ್ನು ನೋಡಿ ಮಳೆಯು ಬರಲಿದೆ ಎಂದು ತಿಳಿಯುವುದೇ ಕಾರಣಾನುಮಾನವು, ರಸವನ್ನು ತಿಳಿದಾಗ ಆ ವಸ್ತುವಿನ ರೂಪದ ಜ್ಞಾನ ಉಂಟಾಗುತ್ತದೆ. ಇದು ಅಕಾರ್ಯಕಾರಣಾನುಮಾನವು. ದೃಷ್ಟಾನುಮಾನ ಮತ್ತು ಸಾಮಾನ್ಯತಃದೃಷ್ಟಾನುಮಾನವೆಂದೂ ಅನುಮಾನವನ್ನು ಎರಡು ವಿಧವಾಗಿ ವಿಭಾಗಿಸಬಹುದು. ಧೂಮದಿಂದ ವಹ್ನಿಯನ್ನು ತಿಳಿಯುವಾಗ ಇದು ಪ್ರತ್ಯಕ್ಷಕ್ಕೆ ಯೋಗ್ಯವಾದ ಅರ್ಥವನ್ನು ತಿಳಿಸುವ ಅನುಮಾನವಾದ್ದರಿಂದ ದೃಷ್ಟಾನುಮಾನವು. ಒಬ್ಬನಿಗೆ ಇರುವ ರೂಪಜ್ಞಾನದಿಂದ ಅವನಿಗೆ ಕಣ್ಣು ಇದೆಯೆಂದು ತಿಳಿಯುವುದು ಸಾಮಾನ್ಯತಃದೃಷ್ಟಾನುಮಾನವು. ಪ್ರತ್ಯಕ್ಷಕ್ಕೆ ಅಯೋಗ್ಯವಾದ ವಸ್ತುವನ್ನು ತಿಳಿಸುವ ಅನುಮಾನವೇ ಸಾಮಾನ್ಯತಃದೃಷ್ಟಾನುಮಾನ. ಕಣ್ಣು ಪ್ರತ್ಯಕ್ಷಕ್ಕೆ ಅಯೋಗ್ಯ.

ತರ್ಕವೆಂದರೆ ಅಯಥಾರ್ಥಾನುಭವವಲ್ಲ. ಯಾವುದಾದರೊಂದು ವಿಷಯವನ್ನು ಒಪ್ಪಿಕೊಂಡರೆ ಅದರ ನಿಯತಸಹಚಾರವುಳ್ಳ ಮತ್ತೊಂದು ವಿಷಯವನ್ನು ಒಪ್ಪಿಕೊಳ್ಳಬೇಕಾಗುತ್ತದೆ.

ಎಂದು ಸಮರ್ಥಿಸುವುದೇ ತರ್ಕ. ವಿರೋಧ, ಅಸಂಗತಿ, ನ್ಯೂನ, ಆಧಿಕ್ಯ, ಸಂವಾದ, ಅನುಕ್ತಿ ಎಂಬುದಾಗಿ ಅನುಮಾನಕ್ಕೆ ಆರು ದೋಷಗಳು ಬರುತ್ತವೆ. ತಾರ್ಕಿಕರು ಹೇಳುವ ನಿಗ್ರಹ ಸ್ಥಾನಗಳು, ಹೇತ್ವಾಭಾಸಗಳು, ಜಾತ್ಯುತ್ತರಗಳು, ಛಲ ಇವೆಲ್ಲವೂ ಆರರಲ್ಲಿಯೇ ಸೇರುತ್ತವೆ.

ನಿರ್ದೋಷವಾದ ಶಬ್ದವೇ ಆಗಮಪ್ರಮಾಣವು. ಇದೇ ಶಬ್ದಪ್ರಮಾಣವು. ಅಬೋಧಕವಾದ, ವಿಪರೀತ ಬೋಧಕವಾದ ಶಬ್ದವು ಪ್ರಮಾಣವಾಗುವುದಿಲ್ಲ, ವಿಭಕ್ತ್ಯಂತವಾದ ವರ್ಣಗಳಿಗೆ ಪದವೆಂದು ಹೆಸರು. ಗೋವು ಮುಂತಾದ ಪದಗಳಿಗೆ ಗೋವು ಮುಂತಾದ ವಿಶೇಷ್ಯವಾದ ಅರ್ಥದಲ್ಲಿ ಶಕ್ತಿ ಇರುತ್ತದೆ. ಗೋತ್ವಮುಂತಾದವುಗಳು ಪ್ರವೃತ್ತಿನಿಮಿತ್ತಗಳು, ಪದಗಳಿಗೆ ಯೋಗ್ಯವಾದ ಇತರಾನ್ವಿತ ಸ್ವಾರ್ಥವನ್ನು ಬೋಧಿಸುವ ಸಾಮರ್ಥ್ಯವಿರುತ್ತದೆ. ಇಂತಹ ಪದಗಳ ಸಮೂಹವೇ ವಾಕ್ಯವು. ವಾಕ್ಯಾರ್ಥಜ್ಞಾನಕ್ಕೆ ಆಕಾಂಕ್ಷೆ, ಸನ್ನಿಧಿ ಮತ್ತು ಯೋಗ್ಯತಾಜ್ಞಾನಗಳು ಕಾರಣವಾಗುತ್ತವೆ.

ದ್ರವ್ಯ ಗುಣ ಕರ್ಮ ಸಾಮಾನ್ಯ ವಿಶೇಷವಿಶಿಷ್ಟ ಅಂಶಿ ಶಕ್ತಿಸಾದೃಶ್ಯ ಅಭಾವ ಎಂಬುದಾಗಿ ಈ ಸಿದ್ಧಾಂತದಲ್ಲಿ ಹತ್ತು ಪ್ರಧಾನ ಪದಾರ್ಥಗಳನ್ನು ಒಪ್ಪುತ್ತಾರೆ. ಪರಮಾತ್ಮ ಲಕ್ಷ್ಮೀಜೀವ ಅವ್ಯಾಕೃತಾಕಾಶ ಪ್ರಕೃತಿ, ಗುಣತ್ರಯಗಳು ಮಹತ್ತತ್ವ ಅಹಂಕಾರತತ್ತ್ವ, ಬುದ್ಧಿ, ಮನಸ್ಸು ಇಂದ್ರಿಯ ಪಂಚತನ್ಮಾತ್ರಗಳು, ಭೂತ, ಬ್ರಹ್ಮಾಂಡ, ಅವಿದ್ಯಾ, ವರ್ಣ, ಅಂಧಕಾರ, ವಾಸನಾ, ಕಾಲ, ಪ್ರತಿಬಿಂಬ ಎಂಬುದಾಗಿ ದ್ರವ್ಯಗಳು ೨೦. ರೂಪ, ರಸ, ಗಂಧ, ಸ್ಪರ್ಶ, ಸಂಖ್ಯಾ, ಪರಿಮಾಣ, ಸಂಯೋಗ. ವಿಭಾಗ, ಪರತ್ವ, ಅಪರತ್ವ, ಗುರುತ್ವ, ದ್ರವತ್ವ, ಲಘುತ್ವ, ಮೃದುತ್ವ, ಕಠಿಣತ್ವ, ಸ್ನೇಹ, ಶಬ್ದ, ಬುದ್ಧಿ, ಸುಖ, ದುಃಖ, ಇಚ್ಛಾ, ದ್ವೇಷ, ಪ್ರಯತ್ನ, ಧರ್ಮ, ಅಧರ್ಮ, ಸಂಸ್ಕಾರ, ಆಲೋಕ ಶಮ, ದಮ, ದಯೆ, ತಿತಿಕ್ಷೆ, ಭಯ, ಬಲ, ಲಜ್ಜೆ ಗಾಂಭೀರ್ಯ, ಸೌಂದರ್ಯ, ಔದಾರ್ಯ, ಸ್ಥೈರ್ಯ, ಶೌರ್ಯ, ಸೌಭಾಗ್ಯವೆಂದು ಸಾಮಾನ್ಯವಾಗಿ ಗುಣಗಳು ೪೦ ವಿಧವಾಗಿವೆ. ಇಲ್ಲಿ ದ್ವೇಷ ಮೊದಲಾದವು ದೋಷಗಳಾದರೂ ಅಯೋಗರ ವಿಷಯದಲ್ಲಿದ್ದರೆ ಗುಣಗಳೇ ಆಗುತ್ತವೆ. ಈ ಗುಣಗಳು ಪರಮಾತ್ಮ, ಲಕ್ಷ್ಮೀ, ಜೀವಾತ್ಮರ ಸ್ವರೂಪ ಭೂತವಾಗಿರುತ್ತವೆ.

ಆದರೆ ಜೀವಾತ್ಮರಿಗೆ ಸ್ವರೂಪಕ್ಕಿಂತ ಬೇರೆಯಾದ ಗುಣಗಳೂ ಇರುತ್ತವೆ. ಸ್ವರೂಪ-ಬಾಹ್ಯ ಎಂಬ ಭೇದಕ್ಕನುಗುಣವಾಗಿಯೇ, ನಿತ್ಯ, ಅನಿತ್ಯ. ಶುಭ, ಅಶುಭ, ಎಂಬ ವಿಭಾಗವೂ ಇವುಗಳಲ್ಲಿದೆ. ಸಜ್ಜೀವರು, ಅಸಜ್ಜೀವರು, ಬದ್ಧರು, ಮುಕ್ತರು, ಎಂಬ ದಶಾಭೇದದಿಂದಲೂ ಇವುಗಳಲ್ಲಿ ವ್ಯತ್ಯಾಸವಿದೆ. ಜೀವರ ಯೋಗ್ಯತಾತಾರತಮ್ಯಕ್ಕೆ ಅನುಗುಣವಾಗಿ ಈ ಗುಣ ಗಳಲ್ಲಿಯೂ ತಾರತಮ್ಯವಿದೆ, ಹೀಗೆ ವಿಚಾರಮಾಡಿದಾಗ ಗುಣಗಳು ಅನಂತವೆಂದೇ ಹೇಳ ಬೇಕಾಗುತ್ತದೆ,

ವಿಹಿತ, ನಿಷಿದ್ಧ, ಉದಾಸೀನ ಎಂದು ಕರ್ಮವು ಮೂರು ವಿಧ. ವಿಹಿತಕರ್ಮವು ಕಾಮ್ಯ ಅಕಾಮ್ಯ ಎಂಬುದಾಗಿ ಎರಡು ವಿಧ. ಪರಮಾತ್ಮನ ಪ್ರಸಾದವೆಂಬ ಫಲಕ್ಕಿಂತ ಬೇರೆಯಾದ ಫಲವನ್ನುದ್ದೇಶಿಸಿ ಮಾಡಲ್ಪಡುವ ಕರ್ಮವು ಕಾಮ್ಯಕರ್ಮವು. ಭಗವಂತನ ಪ್ರಸಾದವನ್ನು ಮಾತ್ರ ಅಪೇಕ್ಷಿಸಿ ಮಾಡುವ ಕರ್ಮವು ಅಕಾಮ್ಯಕರ್ಮವು, ಬ್ರಹ್ಮದೇವರೇ ಮೊದಲಾದ ಸಮಸ್ತಜೀವರಿಗೂ ಈ ಎರಡು ವಿಧವಾದ ಕರ್ಮಗಳಿವೆ. ಜೀವರಲ್ಲಿ ನಿಷಿದ್ಧಕರ್ಮವೂ ಇದೆ. ಚಲನ ಮುಂತಾದುದು ಉದಾಸೀನಕರ್ಮ. ಸಾಮಾನ್ಯವು ಜಾತಿ ಮತ್ತು ಉಪಾಧಿ ಎಂದು ಎರಡು ಪ್ರಕಾರವಾಗಿದೆ. ಆತ್ಮತ್ವ, ಮನುಷ್ಯತ್ವ, ಗೋತ್ವಾದಿಗಳು, ಜಾತಿಗಳು, ಸರ್ವಜ್ಞತ್ವ, ವಾಚ್ಯತ್ವ, ಪ್ರಮೇಯತ್ವಾದಿಗಳು ಉಪಾಧಿಗಳು. ಇವೆರಡೂ ಅನುಗತವ್ಯವಹಾರಕ್ಕೆ ನಿಯಾಮಕ ವಾಗಿದೆ. ಆದರೆ ಉಪಾಧಿಯು ಇತರ ಪದಾರ್ಥದ ಜ್ಞಾನದಿಂದ ತಿಳಿಯಲ್ಪಡುವ ಧರ್ಮ ವಾಗಿದೆ. ಉದಾಹರಣೆಗಾಗಿ ಪ್ರಮೇಯ ಸ್ವರೂಪವು ತಿಳಿಯದಹೊರತು ಪ್ರಮೇಯತ್ವವು ತಿಳಿಯಲಾರದು. ಸಾಮಾನ್ಯವು ನಿತ್ಯ ಮತ್ತು ಅನಿತ್ಯ ಎಂಬುದಾಗಿಯೂ ಎರಡು ವಿಧ. ಜೀವತ್ವ ಮುಂತಾದುದು ನಿತ್ಯ ಸಾಮಾನ್ಯವು. ಬ್ರಾಹ್ಮಣತ್ವ ಮನುಷ್ಯತ್ವ ಮುಂತಾದುವುಗಳು ಅನಿತ್ಯ ಸಾಮಾನ್ಯಗಳು.

ರೂಪಾದಿಗುಣಗಳಿಗೂ, ಅವುಗಳಿಂದ ಕೂಡಿರುವ ವಸ್ತುಗಳಿಗೂ ವಾಸ್ತವಿಕವಾಗಿ ಭೇದವಿಲ್ಲ. ಹಾಲಿನ ಬಿಳಿ ಬಣ್ಣ ಎಂಬಲ್ಲಿ ಭೇದ ವ್ಯವಹಾರವು ಕಂಡುಬರುತ್ತದೆ. ಭೇದವಿಲ್ಲದಿರುವ ವಸ್ತುಗಳಲ್ಲಿ ಭೇದ ವ್ಯವಹಾರ ನಿರ್ವಾಹಕವಾದುದು ವಿಶೇಷವು. ಇದು ತನ್ನ ಆಶ್ರಯಕ್ಕೂ ತನಗೂ ಭೇದನಿರ್ವಾಹಕವಾಗಿರುತ್ತದೆ. ಆಶ್ರಯದಲ್ಲಿರುವ ಗುಣಕ್ರಿಯೆ ಮುಂತಾದವುಗಳಿಗೂ ಆಶ್ರಯಕ್ಕೂ ಭೇದ ವ್ಯವಹಾರ ನಿರ್ವಾಹಕವಾಗಿರುವುದು. ಯಾವ ವಸ್ತುವಿನಲ್ಲಿ ಎಷ್ಟು ವಿಶೇಷಗಳು ಬೇಕೋ ಅಷ್ಟು ವಿಶೇಷಗಳನ್ನು ಅಂಗೀಕರಿಸಬೇಕು. ವಿಶೇಷಗಳು ಅನಂತವಾಗಿವೆ. ಗುಣಕ್ರಿಯಾದಿಗಳಿಗೂ ವಸ್ತುವಿಗೂ ಅಭೇದವನ್ನು ಹೇಳುವುದರಿಂದ ಸಮುದಾಯ ಎಂಬ ಸಂಬಂಧವನ್ನು ಒಪ್ಪಲಾಗುವುದಿಲ್ಲ.

ವಿಶೇಷಣದ ಸಂಬಂಧದಿಂದ ವಿಶೇಷ್ಯದಲ್ಲಿ ಉಂಟಾಗುವ ಆಕಾರವೇ ವಿಶಿಷ್ಟವೆಂಬ ಪದಾರ್ಥವು. ಅದು ನಿತ್ಯ ಮತ್ತು ಅನಿತ್ಯ ಎಂದು ಎರಡು ವಿಧ. ಸಾರ್ವಜ್ಞಾದಿ ವಿಶಿಷ್ಟ ಬ್ರಹ್ಮಾದಿಗಳು ನಿತ್ಯವಿಶಿಷ್ಟರು, ದಂಡವಿಶಿಷ್ಟಪುರುಷಾದಿಗಳು ಅನಿತ್ಯವಿಶಿಷ್ಟರು. ಒಂದು ಬಟ್ಟೆಯು ಒಂದು ಗೇಣು, ಒಂದು ಮೊಳ ಮುಂತಾದ ಭಾಗಗಳಿಗಿಂತಲೂ ಅತಿರಿಕ್ತವಾದ ಒಂದು ಬಟ್ಟೆ, ಒಂದು ಗಗನ ಇತ್ಯಾದಿ ವ್ಯವಹಾರಗಳಿಂದ ಸಿದ್ಧವಾದುದೇ ಅಂಶಿ ಎಂಬ ಪದಾರ್ಥ. ಹೀಗೆ ವಿಶಿಷ್ಟ ಅಂಶಿ ಎಂಬ ಎರಡು ಪದಾರ್ಥಗಳು ಅಬಾಧಿತವಾದ ಪ್ರಾಮಾಣಿಕ ವ್ಯವಹಾರದಿಂದ ಸಿದ್ಧಿಸುತ್ತವೆ. ಶಕ್ತಿ, ಸಾದೃಶ್ಯ, ಅಭಾವ ಎಂಬ ಮೂರು ಪದಾರ್ಥಗಳು ಪ್ರಾಯಃ ಇತರ ದಾರ್ಶನಿಕರು ಹೇಳುವಂತೆಯೇ ಇವೆ. ಸಹಜಶಕ್ತಿ,

ಉದಾ-ದಂಡದಲ್ಲಿ ಘಟನಿರ್ಮಾಣಕ್ಕೆ ಅನುಕೂಲವಾದ ಶಕ್ತಿ, ಮಂತ್ರಾದಿದ್ರವ್ಯಗಳಿಂದ ಪ್ರತಿಮೆ ಮುಂತಾದವುಗಳಲ್ಲಿ ಉಂಟಾಗುವ ಆಧೇಯಶಕ್ತಿ, ಪದಪದಾರ್ಥಗಳಿಗೆ ಇರುವ ವಾಚ್ಯವಾಚಕಭಾವಸಂಬಂಧವೆಂಬ ಪದಶಕ್ತಿ ಈ ಮೂರು ಶಕ್ತಿಗಳಲ್ಲದೆ ಪರಮಾತ್ಮನಲ್ಲಿ ಅಂಚಿಂತ್ಯಶಕ್ತಿ ಎಂಬ ಶಕ್ತಿಯೊಂದಿರುವುದು. ಇದು ಪರಮಾತ್ಮನಲ್ಲಿ ಪರಿಪೂರ್ಣವಾಗಿದ್ದು ಇತರರಲ್ಲಿಯೂ ಸ್ವಲ್ಪಮಟ್ಟಿಗೆ ಇರುತ್ತದೆ. ಪದಶಕ್ತಿಯು ಮುಖ್ಯ ಪರಮ ಮುಖ್ಯ ಎಂದು ಎರಡು ವಿಧವಾಗಿದ್ದು ಪರಮಮುಖ್ಯವೃತ್ತಿಯಿಂದ ಪರಮಾತ್ಮನು ಎಲ್ಲಾ ಶಬ್ದಗಳಿಂದಲೂ ವಾಚ್ಯನಾಗಿದ್ದಾನೆ. ಅಭಾವದಲ್ಲಿ ಭೇದವೆಂಬ ಅನ್ಯೋನ್ಯಾಭಾವವು ಆಶ್ರಯಸ್ವರೂಪವೇ ಆಗಿರುವುದು. ಪ್ರಾಗಭಾವ, ಪ್ರಧ್ವಂಸಾಭಾವ, ಮತ್ತು ಸದಾಭಾವವೆಂದು ಅಭಾವವು ಮೂರು ವಿಧ. ಅವುಗಳಲ್ಲಿ ಅತ್ಯಂತಾಭಾವವನ್ನೇ ಸದಾಭಾವ ಎಂದು ಹೇಳಲಾಗುತ್ತದೆ. ಶಶಶೃಂಗಾಭಾವ, (ಮೊಲದ ಕೋಡಿನ ಇಲ್ಲದಿರುವಿಕೆ), ಗಗನಕುಸುಮಾಭಾವ ಮುಂತಾದವು ಅತ್ಯಂತಾಸತ್ ಪ್ರತಿಯೋಗಿಯಾಗಿ ಉಳ್ಳ ಅಭಾವವು. ಅಶ್ವದಲ್ಲಿ ಗೋತ್ವವಿಲ್ಲ ಎಂಬ ಅಭಾವವು ಪ್ರಾಮಾಣಿಕ ಪ್ರತಿಯೋಗಿಯಿಂದ ಕೂಡಿರುವ ಅಭಾವವು. ಕೆಲವರು ಈ ದರ್ಶನದಲ್ಲಿ ಪ್ರಾಮಾಣಿಕ ಪ್ರತಿಯೋಗಿಕ ಅಭಾವವಿಲ್ಲವೆಂದು ಹೇಳುತ್ತಾರೆ.

ಉಪಾದಾನ ಕಾರಣವಾದ ಪದಾರ್ಥವೇ ದ್ರವ್ಯವು. ಉಪಾದಾನವೆಂದರೆ ಮೂಲ ಕಾರಣವು. ಇದರ ಕಾರ್ಯವು ಪರಿಣಾಮ ಮತ್ತು ಅಭಿವ್ಯಕ್ತಿಯೆಂದು ಎರಡು ವಿಧ ಪ್ರಕೃತಿಯಿಂದ ಉಂಟಾದ ಮಹತ್ತತ್ವ, ಅಹಂಕಾರತತ್ವ ಮುಂತಾದವುಗಳು ಪರಿಣಾಮಗಳು. ತಂತುಗಳಿಂದ ಉಂಟಾದ ಪಟವೂ ಪರಿಣಾಮರೂಪವಾದ ಕಾರ್ಯವು. ಪರಮಾತ್ಮನು ತನ್ನ ರೂಪಾದಿಗಳಿಗೆ ಅಭಿವ್ಯಕ್ತಿಕಾರಣನು. ಪರಿಣಾಮಿ ಕಾರಣವಲ್ಲ. ದೀಪವು ಅಂಧಕಾರದಲ್ಲಿರುವ ವಸ್ತುಗಳನ್ನು ಪ್ರಕಾಶಪಡಿಸುವಂತೆ ತನ್ನ ರೂಪಾದಿಗಳನ್ನು ಪ್ರಕಾಶಗೊಳಿಸುತ್ತಾನೆ ಎಂದು ಅರ್ಥ. ಹೀಗೆ ಕಾರ್ಯಕಾರಣಭಾವವು ಎರಡು ವಿಧ. ಅವ್ಯಾಕೃತಾಕಾಶವೆಂಬ ಒಂದು ದ್ರವ್ಯವು ಭೂತಾಕಾಶಕ್ಕಿಂತಲೂ ಬೇರೆಯಾಗಿದೆ. ಪೂರ್ವ, ಪಶ್ಚಿಮ ಮೊದಲಾದವುಗಳು ಈ ಅವ್ಯಾಕೃತಾಕಾಶದ ಅಂಶಭೇದಗಳು. ಇದು ಸೃಷ್ಟಿ ಪ್ರಳಯಗಳಲ್ಲಿಯೂ ವಿಕಾರಹೊಂದದಿರುವ ಸರ್ವವ್ಯಾಪಕವಾದ ನಿತ್ಯವಸ್ತುವು. ಸಕಲ ಪ್ರಾಕೃತ ವಸ್ತುಗಳೂ ಇದರಲ್ಲಿಯೇ ಇರುವುವು. ಇದು ಪರಮಾತ್ಮನಿಗೆ ಅಧೀನವಾಗಿ ತನ್ನಲ್ಲಿ ತಾನೇ ಇರುತ್ತದೆ. ಸೃಷ್ಟಿ ಕಾಲದಲ್ಲಿ ಸಕಲ ವಸ್ತುಗಳಿಗೂ ಸೃಷ್ಟಿಹೇಳಿರುವುದರಿಂದ ನಿತ್ಯವಸ್ತುಗಳಿಗೂ ಪರಾಧೀನ ವಿಶೇಷಾವ್ಯಾಪ್ತಿಯೆಂಬ ಸೃಷ್ಟಿಯಿದೆ.

ಸಾಕ್ಷಾತ್ತಾಗಿಯೂ ಪರಂಪರೆಯಿಂದಲೂ ಪ್ರಪಂಚಕ್ಕೆ ಮೂಲಕಾರಣವಾಗಿರುವುದೇ ಪ್ರಕೃತಿ. ಸರ್ವಜಗತ್ತನ್ನೂ ನಿರ್ಮಾಣಮಾಡುವ ಇದೇ ಮಾಯೇ. ಇದು ನಿತ್ಯ, ವ್ಯಾಪಕ ಮತ್ತು ಪ್ರಪಂಚಕ್ಕೆ ಉಪಾದಾನಕಾರಣ. ಈ ಪ್ರಕೃತಿಯು ಪರಮಾತ್ಮನ ಅಧೀನವಾಗಿ ಪ್ರಪಂಚಕ್ಕೆ ಉಪಾದಾನಕಾರಣ. ಪರಮಾತ್ಮನು ನಿಮಿತ್ತ ಕಾರಣ. ಈ ಪ್ರಕೃತಿಯ ಸಂಬಂಧವೇ

ಜೀವಾತ್ಮನಿಗೆ ಸಂಸಾರ. ಪ್ರಕೃತಿಯ ಪರಿಣಾಮವಾದ ಸೂಕ್ಷ್ಮರೂಪದಲ್ಲಿರುವ ಇಂದ್ರಿಯಗಳು ಹತ್ತು. ಸೂಕ್ಷ್ಮರೂಪದ ಪಂಚ ಪ್ರಾಣಗಳು ಮನಸ್ಸು ಈ ಹದಿನಾರು ಕಲೆಗಳಿಂದ ಕೂಡಿದಂದೇ ಲಿಂಗಶರೀರ. ಇದರ ಸಂಬಂಧವಿನಾಶವೇ ಲಿಂಗಭಂಗ, ಅನಂತರ ಜೀವರಿಗೆ ಸ್ವಸ್ವರೂಪದ ಆವಿರ್ಭಾವವಾಗುತ್ತದೆ.

## ಜೀವ

ಅಜ್ಞಾನಾದಿ ದೋಷದಿಂದ ಕೂಡಿದ ಚೇತನರೇ ಜೀವರು. ಅವರು ಅನಂತರು. ಒಂದು ಪರಮಾಣುವಿನ ಪ್ರದೇಶದಲ್ಲಿಯೂ ಅನಂತ ಜೀವರು ಇರುತ್ತಾರೆ. ಜೀವರು ಒಂದೊಂದು ಗುಂಪಿನಲ್ಲಿಯೂ ಅನಂತವಾಗಿದ್ದಾರೆ. ಜೀವರು ಅಣು-ರೂಪರು. ಅವರು ಮುಕ್ತಿಯೋಗ್ಯರು, ನಿತ್ಯಸಂಸಾರಿಗಳು, ತಮೋಯೋಗ್ಯರೆಂದು ಮೂರು ವಿಧವಾಗಿದ್ದಾರೆ. ದೇವತೆಗಳು, ಋಷಿಗಳು, ಪಿತೃಗಳು, ಚಕ್ರವರ್ತಿಗಳು ಮತ್ತು ಮನುಷ್ಯೋತ್ತಮರೆಂದು ಮುಕ್ತಿಯೋಗ್ಯರು ಐದು ವಿಧವಾಗಿದ್ದಾರೆ. ನಿತ್ಯದಲ್ಲಿಯೂ ಸುಖದುಃಖಮಿಶ್ರವಾಗಿದ್ದವರು ನಿತ್ಯಸಂಸಾರಿಗಳು. ಅವರು ಸ್ವರ್ಗ, ಭೂಮಿ, ನರಕಗಳಲ್ಲಿ ತಿರುಗುತ್ತಾ ಇರುತ್ತಾರೆ. ತಮೋಯೋಗ್ಯರು ದೈತ್ಯರು, ರಾಕ್ಷಸರು, ಪಿಶಾಚಿಗಳು, ಮನುಷ್ಯಾಧಮರೆಂದು ನಾಲ್ಕು ವಿಧವಾಗಿದ್ದಾರೆ. ಎಲ್ಲಾ ಜೀವರೂ ಪರಸ್ಪರವಾಗಿಯೂ ಪರಮಾತ್ಮನಿಗಿಂತಲೂ ಭಿನ್ನರಾಗಿದ್ದಾರೆ. ಸಂಸಾರದಲ್ಲಿಯೂ ಮುಕ್ತಿಯಲ್ಲಿಯೂ ತಾರತಮ್ಯದಿಂದ ಕೂಡಿರುತ್ತಾರೆ. ಜೀವರು ಸ್ವರೂಪದಿಂದ ಸ್ತ್ರೀ ಜೀವರು ಪುರುಷಜೀವರು ಎಂದು ಎರಡು ವಿಧ, ಮೋಕ್ಷದಲ್ಲಿಯೂ ಸ್ತ್ರೀಪುರುಷ ಜೀವರು ಸ್ವರೂಪದಿಂದ ಬೇರೆಯಾಗಿಯೇ ಇರುತ್ತಾರೆ.

## ಪರಮಾತ್ಮ

ಪರಮಾತ್ಮನು ಸರ್ವಜ್ಞನು, ಶರ್ವಶಕ್ತನು, ಸರ್ವವ್ಯಾಪಕನು. ಜ್ಞಾನ, ಆನಂದ ಮುಂತಾದ ಅನಂತ ಕಲ್ಯಾಣಗುಣ ಪರಿಪೂರ್ಣನು ಸೃಷ್ಟಿಸ್ಥಿತಿಸಂಹಾರನಿಯಮನಜ್ಞಾನ. ಅಜ್ಞಾನ, ಸಂಸಾರಬಂಧ, ಮೋಕ್ಷಗಳೆಂಬ ಅಷ್ಟ ವ್ಯಾಪಾರಗಳನ್ನು ಮಾಡುವವನು ಅವನೊಬ್ಬನೇ, ಅವನು ನಿತ್ಯಮುಕ್ತನು ಅವನಲ್ಲಿ ಮಾಯಾಮಯವಾದುದು ಯಾವುದೂ ಇಲ್ಲ. ಅವನಲ್ಲಿ ಎಲ್ಲಾ ಕ್ರಿಯೆಗಳೂ ಯಾವಾಗಲೂ ಶಕ್ತ್ಯಾತ್ಮನಾ ಇರುತ್ತವೆ. ಆಯಾಕಾಲದಲ್ಲಿ ವ್ಯಕ್ತವಾಗುತ್ತವೆ. ಅವನ ಎಲ್ಲಾ ಅವತಾರಗಳೂ ಪೂರ್ಣ. ಅವನಿಗೆ ಅಪ್ರಾಕೃತವಾದ ದೇಹೇಂದ್ರಿಯಾದಿಗಳಿವೆ. ಅವನ ಪ್ರತಿಯೊಂದು ಅವಯವವೂ ಎಲ್ಲಾ ಅವಯವಗಳ ಕಾರ್ಯಗಳನ್ನು ಮಾಡುತ್ತದೆ.

## ಸೃಷ್ಟಿ

ಪರಮಾತ್ಮನಲ್ಲಿ ಸೃಷ್ಟಿಮಾಡಬೇಕೆಂಬ ಇಚ್ಛೆಯು ಅಭಿವ್ಯಕ್ತವಾದಾಗ ಅವನು ಪ್ರಕೃತಿ

ಪ್ರಕೃತಿಯನ್ನು ಪ್ರವೇಶಿಸಿ ಗುಣತ್ರಯರೂಪದಿಂದ ವಿಭಾಗಿಸುತ್ತಾನೆ. ಅನಂತರ ಮಹತ್ತತ್ವದಿಂದ ಆರಂಭಿಸಿ ಬ್ರಹ್ಮಾಂಡಪರ್ಯಂತವಾಗಿ ಎಲ್ಲವನ್ನೂ ಸೃಷ್ಟಿಸುತ್ತಾನೆ.

## ದರ್ಶನದ ವಿಕಾಸ

ದ್ವೈತದರ್ಶನದ ಪ್ರವರ್ತಕರು ಶ್ರೀಮಧ್ವಾಚಾರ್ಯರು. ಶ್ರುತಿ, ಸ್ಮೃತಿ, ಇತಿಹಾಸ, ಪುರಾಣ, ಉಪನಿಷತ್ತು, ಗೀತೆಗಳಲ್ಲಿ ದ್ವೈತದರ್ಶನದ ಸ್ಥಾಪನೆಗೆ ಅನುಕೂಲವಾದ ಅಂಶಗಳನ್ನು ಪರಿಗ್ರಹಿಸಿ ಯುಕ್ತಿಯಿಂದ ಅವುಗಳ ಯಥಾರ್ಥತೆಯನ್ನು ನಿರ್ಧರಿಸಿ ಅವರು ದ್ವೈತದರ್ಶನವನ್ನು ಸ್ಥಾಪಿಸಿದರು. ಇವರ ನಂತರ ಟೀಕಾಚಾರ್ಯರೆಂದು ಪ್ರಸಿದ್ಧರಾದ ಜಯತೀರ್ಥರು ಮಧ್ವಾಚಾರ್ಯರ ಅನೇಕ ಮೂಲಗ್ರಂಥಗಳಿಗೆ ಟೀಕೆಗಳನ್ನು ಬರೆದು, ಸ್ವತಂತ್ರವಾಗಿಯೂ ಗ್ರಂಥ ರಚನೆಮಾಡಿ ದ್ವೈತಸಿದ್ಧಾಂತದ ತಳಪಾಯವನ್ನು ಭದ್ರಪಡಿಸಿದರು. ವ್ಯಾಸರಾಯರೆಂದು ಪ್ರಸಿದ್ಧರಾದ ವ್ಯಾಸತೀರ್ಥರು, ತರ್ಕ, ಮೀಮಾಂಸಾ, ವ್ಯಾಕರಣಾದಿಶಾಸ್ತ್ರಗಳ ವಾದ ಪ್ರಕ್ರಿಯೆಯಿಂದ ಇತರದರ್ಶನಗಳನ್ನೂ ದ್ವೈತದರ್ಶನವನ್ನೂ ಪರಿಶೀಲಿಸಿ, ತಮ್ಮ ದ್ವೈತದರ್ಶನ ಸಾಧುತ್ವವನ್ನು ಪಂಡಿತಪ್ರಪಂಚಕ್ಕೆ ಎತ್ತಿತೋರಿಸಿದರು. ವಾದಿರಾಜರು ಸರಸವಾದ ಮಾತು ಗಳಿಂದ, ಉತ್ತಮ ದೃಷ್ಟಾಂತಗಳಿಂದ, ಶಾಸ್ತ್ರಕಾವ್ಯಗಳ ಮೂಲಕ ದರ್ಶನದ ಸ್ವಾರಸ್ಯವನ್ನೂ ಗಾಂಭೀರ್ಯವನ್ನೂ ದಾರ್ಶನಿಕರ ಮತ್ತು ಭಾವುಕರ ಮುಂದಿಟ್ಟರು, ವಿಜಯೀಂದ್ರರು ಅನೇಕ ವಾದ ಗ್ರಂಥಗಳನ್ನು ಬರೆದು ದ್ವೈತದರ್ಶನವನ್ನು ಸಮರ್ಥಿಸಿ ತತ್ಕಾಲದಲ್ಲಿ ಇತರ ದರ್ಶನ ಕಾರರು ದ್ವೈತದರ್ಶನದ ಮೇಲೆ ಮಾಡಿದ ಆಕ್ಷೇಪಗಳಿಗೆ ಉತ್ತರಕೊಡುವ ಗ್ರಂಥಗಳನ್ನು ಬರೆದರು. ರಾಘವೇಂದ್ರತೀರ್ಥರು, ರಘೂತ್ತಮತೀರ್ಥರು, ವಿಜಯಧ್ವಜತೀರ್ಥರು, ಸುಧೀಂದ್ರತೀರ್ಥರು, ಸತ್ಯಧರ್ಮತೀರ್ಥರು, ರಘುನಾಥತೀರ್ಥರು, ಜಗನ್ನಾಥಯತಿಗಳು' ಸುಮತೀಂದ್ರರು, ಯಾದವಾರ್ಯರು, ಬಿದಿರಹಳ್ಳಿ ಶ್ರೀನಿವಾಸತೀರ್ಥರು ಮುಂತಾದ ಅನೇಕ ಯತಿಗಳೂ, ಗೃಹಸ್ಥರೂ ದ್ವೈತದರ್ಶನಕ್ಕೆ ವಿಪುಲವಾದ ಸೇವೆಯನ್ನು ಮಾಡಿದ್ದಾರೆ.

ಶ್ರೀಮಧ್ವಾಚಾರ್ಯರು (ಕ್ರಿ. ಶ. ೧೨೩೮ ರಿಂದ ೧೩೧೭) :— ದ್ವೈತದರ್ಶನ ಪ್ರವರ್ತಕ ರಾದ ಮಧ್ವಾಚಾರ್ಯರಿಗಿಂತ ಹಿಂದೆ ಈ ದರ್ಶನದ ಪರಂಪರೆಯನ್ನು ಅನೇಕ ಯತಿಗಳು ನಡೆಸಿಕೊಂಡು ಬಂದಿದ್ದರು ಎಂದು ಹೇಳಲಾಗುತ್ತದೆ. ಆದರೆ ಮಧ್ವಾಚಾರ್ಯರಿಗಿಂತ ಹಿಂದಿನವರಲ್ಲಿ ಯಾರೊಬ್ಬರೂ ಚಾರಿತ್ರಿಕ ಪುರುಷರೆಂದು ಖಚಿತವಾಗಿ ತಿಳಿದು ಬಂದಿಲ್ಲ. ಮಧ್ವಾಚಾರ್ಯರ ಆಶ್ರಮಗುರುಗಳು ಅಚ್ಯುತಪ್ರೇಕ್ಷತೀರ್ಥರು. ಇವರಿಗೆ ಪುರುಷೋತ್ತಮತೀರ್ಥ ರೆಂದೂ ಹೆಸರಿತ್ತು, ಇವರು ಅದ್ವೈತದರ್ಶನ ನಿಷ್ಠರಾಗಿದ್ದರು. ಮಧ್ವಾಚಾರ್ಯರಿಗೆ

ಸಂನ್ಯಾಸದೀಕ್ಷೆಯನ್ನು ಕೊಟ್ಟು ತನ್ನ ಶಿಷ್ಯನನ್ನಾಗಿ ಮಾಡಿಕೊಂಡಾಗ ಇವರು ಮೊದಲ ಇಷ್ಟಸಿದ್ಧಿಯೆಂಬ ವಿಮುಕ್ತಾತ್ಮರಿಂದ ರಚಿತವಾದ ಗ್ರಂಥವನ್ನು ಶಿಷ್ಯನಿಗೆ ಪ್ರವಚನಮಾಡಿಸಲಾರಂಭಿಸಿದರು. ಇದರಿಂದ ಚಾರಿತ್ರಿಕವಾಗಿ ದ್ವೈತದರ್ಶನ ಪ್ರತಿಪಾದಕವಾದ ಸಾಂಪ್ರದಾಯಿಕ ಗ್ರಂಥವಿರಲಿಲ್ಲವೆಂದು ತಿಳಿದು ಬರುತ್ತದೆ. ಮಧ್ವಾಚಾರ್ಯರು ಈ ಸಿದ್ಧಾಂತ ಸ್ಥಾಪನೆಯ ಪ್ರೇರಣೆಯನ್ನು ತಾನು ವೇದವ್ಯಾಸರಿಂದ ಪಡೆದೆನೆಂದೂ ಅವರೇ ತನ್ನ ಗುರುಗಳೆಂದೂ ಹೇಳುತ್ತಾರೆ.

## ಮಧ್ವಾಚಾರ್ಯರ ಕಾಲ

ಸಂಪ್ರದಾಯರೀತಿಯಿಂದ ಮಧ್ವಾಚಾರ್ಯರು ಕ್ರಿ. ಶ. ೧೧೯೯ರಲ್ಲಿ ಹುಟ್ಟಿದರೆಂದು ಉಲ್ಲೇಖವಿದ್ದರೂ ಅವರ ಸಾಕ್ಷಾತ್ ಶಿಷ್ಯರಾದ ನರಹರಿತೀರ್ಥರ ಕಾಲದ ಶಾಸನವು ಗಂಜಾಂ ಜಿಲ್ಲೆಯ ಶ್ರೀಕೂರ್ಮಂ ಎಂಬಲ್ಲಿ ಉಪಲಬ್ಧವಾಗಿದ್ದು, ಅದರ ಪ್ರಕಾರ ಶ್ರೀಮಧ್ವಾಚಾರ್ಯರ ಕಾಲವು ಕ್ರಿ. ಶ. ೧೨೩೮ ರಿಂದ ೧೩೧೭ ಎಂದು ನಿಶ್ಚಿತವಾಗುತ್ತದೆ.

## ಜೀವನ

ಮಧ್ವಾಚಾರ್ಯರು ಕರ್ನಾಟಕ ದೇಶದ ದಕ್ಷಿಣಕನ್ನಡ ಜಿಲ್ಲೆಯ ಉಡುಪಿಯ ಹತ್ತಿರ ಬೆಳ್ಳಿಗ್ರಾಮದಲ್ಲಿ ಪಾಜಕಕ್ಷೇತ್ರ ಎಂಬಲ್ಲಿ ಹುಟ್ಟಿದರು. ಬಾಲ್ಯದಿಂದಲೇ ಇಹಲೋಕದ ವ್ಯಾಪಾರದಲ್ಲಿ ವಿರಕ್ತರಾದ, ಅಧ್ಯಾತ್ಮನಿಷ್ಠರಾದ ಇವರು ಉಡುಪಿಯ ಅನಂತೇಶ್ವರನ ಸನ್ನಿಧಿಯಲ್ಲಿ ನೆಲಸಿದ್ದ ಅಚ್ಯುತಪ್ರೇಕ್ಷತೀರ್ಥರಿಂದ ಸನ್ಯಾಸವನ್ನು ಸ್ವೀಕರಿಸಿ ಪೂರ್ಣಪ್ರಜ್ಞ ಮತ್ತು ಆನಂದತೀರ್ಥ ಎಂಬ ಹೆಸರಿನಿಂದ ಪ್ರಸಿದ್ಧರಾದರು. ವೇದದಲ್ಲಿ ಬರುವ 'ಮಧ್ವ' ಎಂಬ ಶಬ್ದಕ್ಕೆ ಮಧು = ಅಂದರೆ ಆನಂದ, ವ = ಅಂದರೆ ತೀರ್ಥ (ಶಾಸ್ತ್ರ) ಆನಂದಕರವಾದ ಶಾಸ್ತ್ರವನ್ನು ರಚನೆ ಮಾಡಿದ್ದರಿಂದ ಆನಂದತೀರ್ಥ ಎಂಬ ಹೆಸರಿನ ಪರ್ಯಾಯ ನಾಮ ಮಧ್ವ ಎಂಬುದು. ಆದುದರಿಂದ ತಾನು ಮಧ್ವ ಎಂದು ತನ್ನ ಗ್ರಂಥದಲ್ಲಿ ಹೇಳಿಕೊಂಡಿದ್ದಾರೆ. ಮುಂದೆ ಮಧ್ವಾಚಾರ್ಯ ಎಂಬ ಹೆಸರಿನಿಂದಲೇ ಇವರು ಪ್ರಸಿದ್ಧರಾದರು. ಅನೇಕ ತೀರ್ಥಕ್ಷೇತ್ರಗಳಲ್ಲಿ ಸಂಚರಿಸುತ್ತಾ, ಅನೇಕ ವಾದಿಗಳ ಜತೆಗೆ ಚರ್ಚೆಮಾಡುತ್ತಾ ಇದ್ದ ಮಧ್ವಾಚಾರ್ಯರು ಮೊದಲು ಗೀತೆಗೆ ಭಾಷ್ಯಬರೆದು ಅನಂತರ ಬದರಿಗೆ ಹೋಗಿ ಅಲ್ಲಿ ಬ್ರಹ್ಮಸೂತ್ರಗಳಿಗೆ ಭಾಷ್ಯಬರೆದರು. ಅಲ್ಲಿಂದ ಉಡುಪಿಗೆ ಬಂದು ಕೃಷ್ಣಪ್ರತಿಷ್ಠೆಯನ್ನು ಮಾಡಿ ಅನೇಕರನ್ನು ತನ್ನ ನೂತನ ದರ್ಶನದ ಅನುಯಾಯಿಗಳನ್ನಾಗಿ ಮಾಡಿಕೊಂಡು ಪುನಃ ಒಂದು ಬಾರಿಬದರಿಗೆ ಹೋಗಿ ಬಂದರು. ದಶೋಪನಿಷತ್ತುಗಳಿಗೆ ಭಾಷ್ಯವನ್ನು ಬರೆದು ಭಾಗವತ ಮತ್ತು ಮಹಾಭಾರತದ ತಾತ್ಪರ್ಯನಿರ್ಣಯಕ ವಾದ ಗ್ರಂಥಗಳನ್ನೂ, ಇನ್ನಿತರ

ಅನೇಕ ಗ್ರಂಥಗಳನ್ನೂ ಬರೆದು ೭೯ ವರ್ಷದವರೆಗೆ ಬದುಕಿದ್ದು ಅನಂತರ ಇಹಲೋಕದ ವ್ಯಾಪಾರವನ್ನು ಮುಗಿಸಿದರು. ಪಿಂಗಳ ಸಂವತ್ಸರದ ಮಾಘ ಶುದ್ಧ ನವಮಿ ಅವರು ಅದೃಶ್ಯರಾದರು.

## ಮಧ್ವಾಚಾರ್ಯರ ಗ್ರಂಥಗಳು

ಮಧ್ವಾಚಾರ್ಯರು ೩೭ ಮೂಲ ಗ್ರಂಥಗಳನ್ನು ಬರೆದಿದ್ದಾರೆ. ಇತ್ತೀಚಿಗೆ ತಿಥಿ ನಿರ್ಣಯ ಮತ್ತು ನ್ಯಾಸಪದ್ಧತಿ ಎಂಬ ಇನ್ನೆರಡು ಗ್ರಂಥಗಳೂ ಸಿಕ್ಕಿವೆ. ಮಧ್ವಾಚಾರ್ಯರ ಗ್ರಂಥಗಳೆಲ್ಲವೂ ಸರ್ವಮೂಲ ಎಂಬ ಹೆಸರಿನಿಂದ ಪ್ರಸಿದ್ಧವಾಗಿವೆ. ಇವರ ಗ್ರಂಥಗಳನ್ನು ನಾಲ್ಕು ಭಾಗವಾಗಿ ವಿಂಗಡಿಸಬಹುದು. (೧)ಗೀತಾ, ಬ್ರಹ್ಮಸೂತ್ರ ಮತ್ತು ಉಪನಿಷತ್ತುಗಳೆಂಬ ಪ್ರಸ್ಥಾನತ್ರಯದ ವ್ಯಾಖ್ಯಾನಗಳು (೨) ಪ್ರಕರಣ ಗ್ರಂಥಗಳು (೩) ಪುರಾಣ ಪ್ರಸ್ಥಾನ (೪) ಸ್ತೋತ್ರ, ಕಾವ್ಯ, ಧರ್ಮಶಾಸ್ತ್ರಾದಿ ಗ್ರಂಥಗಳು. ಈ ಗ್ರಂಥಗಳೆಲ್ಲವೂ ಸರಳವಾದ ಸಂಸ್ಕೃತಭಾಷೆಯಲ್ಲಿವೆ. ಸಮಸ್ತಪದಗಳೂ ಇಲ್ಲಿ ಬಹಳ ಕಡಿಮೆ. ಜಟಿಲವಾದ ವಾಕ್ಯಗಳೂ, ಪಾಣಿನೀಯ ವ್ಯಾಕರಣಸಿದ್ಧವಾದ ವಿಶೇಷ ಪ್ರಯೋಗಗಳೂ ಇಲ್ಲಿ ಇಲ್ಲ. ಮಹಾವ್ಯಾಕರಣ ಎಂಬ ವ್ಯಾಕರಣದ ಕೆಲವು ಸೂತ್ರಗಳನ್ನೂ, ಕೆಲವು ಧಾತುಗಳ ಅರ್ಥದನ್ನೂ, ವ್ಯಾಸನಿರುಕ್ತವೆಂಬ ಗ್ರಂಥವನ್ನೂ ಅವರು ಕೆಲವೆಡೆ ಉಲ್ಲೇಖಿಸಿರುತ್ತಾರೆ. ಬ್ರಹ್ಮತರ್ಕವೆಂಬ ಒಂದು ಅಪೂರ್ವವಾದ ಗ್ರಂಥದ ಅನೇಕಭಾಗಗಳನ್ನು ಉದ್ಧರಿಸಿ ಅವರು ಪ್ರಮಾಣ್ಯವ್ಯವಸ್ಥೆಯನ್ನು ನಿರ್ವಹಿಸಿದ್ದಾರೆ. ಮಧ್ವಾಚಾರ್ಯರ ಕೆಲವು ಗ್ರಂಥಗಳೂ, ಕೆಲವು ಗ್ರಂಥದ ಭಾಗಗಳೂ ವಾಕ್ಯಶೈಲಿಯಲ್ಲಿ ಸರಳವಾಗಿದ್ದರೂ ಹಿಂದುಮುಂದಿನ ಸಂಗತಿಗಳು ದುರೂಹವಾಗಿರುವುದರಿಂದ ವ್ಯಾಖ್ಯಾನವಿಲ್ಲದೆ ಅರ್ಥವಾಗುವುದಿಲ್ಲ

## ಗೀತಾಭಾಷ್ಯ ಮತ್ತು ಗೀತಾತಾತ್ಪರ್ಯ

ಗೀತಾಭಾಷ್ಯವು ಮಧ್ವಾಚಾರ್ಯರ ಕೃತಿಗಳಲ್ಲಿ ಮೊದಲನೆಯದು. ವ್ಯಾಸರನ್ನು ಗುರುಗಳೆಂದು ನಮಸ್ಕರಿಸಿ ಭಾಷ್ಯ ಪ್ರಾರಂಭಮಾಡಿದ್ದಾರೆ. ಮಹಾಭಾರತಕ್ಕೂ ಗೀತೆಗೂ ಪ್ರಾಮಾಣ್ಯವನ್ನು ಸಾಧಿಸಿ ವ್ಯಾಖ್ಯಾನ ಪ್ರಾರಂಭಮಾಡುತ್ತಾರೆ. ದೇಹಿನೋಽಸ್ಮಿನ್ ಯಥಾ ದೇಹೇ (ಗೀ. ಅ. ಶ್ಲೋ ೧೩) ಎಂಬಲ್ಲಿ ದೇಹೇಂದ್ರಿಯಾವ್ಯತಿರಿಕ್ತನಾದ ಆತ್ಮನನ್ನು ಸಾಧಿಸುತ್ತಾ ಹೀಗೆ ಹೇಳುತ್ತಾರೆ. 'ಸಮುಶ್ಚಾಭಿಮಾನೋ ಮನಸಿ, ಕಾಷ್ಠಾದಿವಚ್ಚ'. ಮನಸ್ಸೇ 'ಈಕ್ಷಿತೃ' ಅಂದರೆ ಆತ್ಮಾ ಎಂಬ ಅಭಿಮಾನವೂ ಸರಿಯಲ್ಲ, ಏಕೆಂದರೆ ಸುಪ್ತಿಮೂರ್ಛೆ ಗಳಲ್ಲಿ ಮನಸ್ಸಿದರೂ ಈಕ್ಷಿತೃತ್ವವಿರುವುದಿಲ್ಲ. ಪಾಕಕ್ಕೆ ಕಾಷ್ಠದಂತೆ ಮನಸ್ಸು ಜ್ಞಾನಕ್ಕೆಕಾರಣ ವಾದುದರಿಂದ ಅದು ಜ್ಞಾತೃವಾಗಲಾರದು.' ಎಂದು ಇದರ ಅಭಿಪ್ರಾಯ. ಇದೇ ಸಂದರ್ಭದಲ್ಲಿ ಅಪೌರುಷೇಯ ವಾಕ್ಯವನ್ನು ಒಪ್ಪದಿದ್ದರೆ ಧರ್ಮಾಧರ್ಮಾದಿಸಿದ್ಧಿಯಾಗುವುದಿಲ್ಲವೆಂದೂ

ಧರ್ಮಾಧರ್ಮಾದಿ ಅತೀಂದ್ರಿಯ ಪದಾರ್ಥಗಳನ್ನು ಒಪ್ಪಿಕೊಳ್ಳದಿದ್ದವರು ಶಾಸ್ತ್ರಕಾರರೇ ಆಗುವುದಿಲ್ಲವೆಂದೂ ಸಮರ್ಥಿಸುತ್ತಾರೆ. 'ಮಹಾತಾತ್ಪರ್ಯಾಚ್ಚ. ಮೋಕ್ಷೋ ಹಿ ಮಹಾ ಪುರುಷಾರ್ಥಃ. ತತ್ರಾಪಿ ಮೋಕ್ಷ ಏವಾರ್ಥಃ' ಅತೇಷು ರೇಮಿರೇ ಧೀರಾ ನ ತೇ ಮಧ್ಯೇ ಷು ರೇಮಿರೇ'—ಇತ್ಯಾದಿಗಳಿಂದ ಮಹಾತಾತ್ಪರ್ಯವನ್ನು ನಿರೂಪಿಸಿದ್ದಾರೆ. ಅಪರೋಕ್ಷ ಜ್ಞಾನಿಯೂ ಕೂಡ ಅಂತಕಾಲದಲ್ಲಿ ಪರಮಾತ್ಮನ ಸ್ಮರಣೆಮಾಡುತ್ತಾ ಬ್ರಾಹ್ಮೀಸ್ಥಿತಿಯಲ್ಲಿ ದೇಹವನ್ನು ಬಿಟ್ಟರೆ ಮಾತ್ರವೇ ಮೋಕ್ಷವನ್ನು ಪಡೆಯುತ್ತಾನೆ. ಇಲ್ಲವಾದರೆ ಜನ್ಮಾಂತರವನ್ನು ಹೊಂದುತ್ತಾನೆ ಎಂಬ ವಿಷಯವನ್ನು ವಿಸ್ತಾರವಾಗಿ ನಿರೂಪಿಸುತ್ತಾ 'ತಸ್ಮಾತ್–ಸರ್ವದಾ ಸರ್ವರೂಪೇಷು ಅಪರಿಗಣಿತಾನಂತಗುಣಗಣಂ ನಿತ್ಯನಿರಸ್ತಾಶೇಷದೋಷಂ ಚ ನಾರಾಯಣಾಖ್ಯಂ ಪರಂ ಬ್ರಹ್ಮ ಅಪರೋಕ್ಷಜ್ಞಾನೀ ಋಚ್ಛತೀತಿ ಸಿದ್ಧಂ'ಎಂದು ಎರಡನೆಯ ಅಧ್ಯಾಯವನ್ನು ಉಪಸಂಹರಿಸುತ್ತಾರೆ. ವಿಶ್ವರೂಪಾಧ್ಯಾಯದಲ್ಲಿ ವಿಶ್ವರೂಪವು ಮಾಯಾಮಯವಲ್ಲ, ಯಥಾರ್ಥವಾದುದು ಎಂಬ ವಿಷಯವನ್ನು ಸಮರ್ಥಿಸುತ್ತಾರೆ. ವಿಶೇಷವೆಂಬ ಪದಾರ್ಥವನ್ನು ಈ ಗ್ರಂಥದಲ್ಲಿ ಹೇಳಿಲ್ಲ. ವಿಶೇಷ ಪದಾರ್ಥಕ್ಕೆ ಆಧಾರವಾದ ಬ್ರಹ್ಮತರ್ಕ ಗ್ರಂಥವು ಇವರಿಗೆ ಗೀತಾಭಾಷ್ಯರಚನೆಯ ನಂತರವೇ ಸಿಕ್ಕಿರಬಹುದು.

## ಗೀತಾತಾತ್ಪರ್ಯ

ಇದು ಗೀತೆಯ ಮೇಲೆ ಮಧ್ವಾಚಾರ್ಯರು ಬರೆದಿರುವ ಇನ್ನೊಂದು ವ್ಯಾಖ್ಯಾನ. ಗೀತಾಭಾಷ್ಯದಲ್ಲಿ ಹೇಳಿರುವ ವಿಷಯಗಳನ್ನು ಇಲ್ಲಿ ಹೇಳಲಾಗಿದೆ. ಆರಂಭದಲ್ಲಿ ಮಹಾಭಾರತ ಮತ್ತು ತದಂತರ್ಗತವಾದ ಗೀತೆಗೆ ಪ್ರಾಮಾಣ್ಯವನ್ನು ಸಾಧಿಸಿ–ತತ್ರಸಾಕ್ಷಾದಿಂದ್ರಾವ ತಾರಮುತ್ತಮಾಧಿಕಾರಿಣಮಾತ್ಮನಃ ಪ್ರಿಯತಮಮರ್ಜುನಂ, ಕ್ಷತ್ರಿಯಾಣಾಂ ವಿಶೇಷತೋಽಪಿ ಪರಮಧರ್ಮಂ ನಾರಾಯಣದ್ವಿಟ್ ತದನುಬಂಧಿ ನಿಗ್ರಹಂ ಬಂಧುಸ್ನೇಹಾದಧರ್ಮತ್ವೇನಾ ಶಂಕ್ಯ ತತೋ ನಿವೃತ್ತಪ್ರಾಯಂ ಸ್ವವಿಹಿತವೃತ್ತ್ಯಾಭಗವದಾರಾಧನಮೇವ ಪರಮೋ ಧರ್ಮಃ ತದ್ವಿರುದ್ಧಃ ಸರ್ವೋಽಪಿ ಅಧರ್ಮಃ ಭಗವದಧೀನತ್ವಾತ್ ಸರ್ವಸ್ಯ ಇತಿ ಬೋಧಯತಿ ಭಗವಾನ್ ನಾರಾಯಣಃ' ಎಂದು ಗೀತೆಯ ತಾತ್ಪರ್ಯವನ್ನು ಒಂದು ವಾಕ್ಯದಲ್ಲಿ ಸಂಗ್ರಹಿಸಿದ್ದಾರೆ. 'ಸ್ವಧರ್ಮದಿಂದಲೇ ಭಗವದಾರಾಧನವೇ ಕರ್ತವ್ಯ, ಅದಕ್ಕೆ ವಿರುದ್ಧ ವಾದುದೆಲ್ಲವನ್ನೂ ಬಿಡಬೇಕು. ವಿಷ್ಣುಭಕ್ತಿಯೇ ಎಲ್ಲಾ ಸಾಧನಗಳಿಗಿಂತ ಉತ್ತಮವಾದುದು, ಪರೋಕ್ಷ–ಅಪರೋಕ್ಷಜ್ಞಾನಗಳೂ, ಮೋಕ್ಷವೂ ಭಗವಂತನ ಅಧೀನ, ವಿಕರ್ಮವನ್ನು ಬಿಡಬೇಕು, ಜ್ಞಾನಿಯೂ ಕರ್ಮವನ್ನು ಮಾಡಬೇಕು. ಅರ್ಜುನನು ಉತ್ತಮಾಧಿಕಾರಿ, ಅಪರೋಕ್ಷಜ್ಞಾನಿಯು, ಪರಮಾತ್ಮನು ಸಮಸ್ತಜಗತ್ತಿಗಿಂತ ಸರ್ವಥಾ ಅತ್ಯಂತಭಿನ್ನನು, ಎಲ್ಲವೂ ಅವನ ಅಧೀನ, ಅವನು ಸರ್ವೋತ್ತಮ, ಸರ್ವಗುಣಪೂರ್ಣ, ಸರ್ವಶಾಸ್ತ್ರಗಳೂ ಅವನ ಮಹಿಮೆಯನ್ನೇ ಪ್ರತಿಪಾದಿಸುತ್ತವೆ. ಪರಮಾತ್ಮನ ಜ್ಞಾನದಿಂದಲೇ

ಮೋಕ್ಷ ಇತ್ಯಾದಿ ವಿಷಯಂವನ್ನು ಭಗವದ್ಗೀತೆಯಂ ಹೇಗೆ ಪ್ರತಿಪಾದಿಸಂತ್ತದೆ ಎಂಬುದನ್ನು ಇಲ್ಲಿ ತೋರಿಸಿಕೊಟ್ಟಿದ್ದಾರೆ. ಇಲ್ಲಿ ಗೀತಾಭಾಷ್ಯದಂತೆ ಶ್ಲೋಕದ ಪ್ರತೀಕಗಳನ್ನು ಹೆಚ್ಚಾಗಿ ತೆಗೆದುಕೊಳ್ಳದೆ ಆಧಾರಗ್ರಂಥಗಳನ್ನು ಉದಾಹರಿಸುತ್ತಾ ಗೀತೆಯಂ ತಾತ್ಪರ್ಯವನ್ನು ಹೇಳಿದ್ದಾರೆ. ಕರ್ಮ ಎಂದರೆ ಭಗವಂತನ ಸೃಷ್ಟಿಯಂ ಎಲ್ಲಾ 'ಪ್ರಾಣಿಗಳಿಗೂ ಪರಮಾತ್ಮನ ತೃಪ್ತಿಯ ಉದ್ದೇಶ್ಯದಿಂದ ಉಪಕಾರ ಮಾಡಂವುದು. 'ನಾನಾಜನಸ್ಯ ಶುಶ್ರೂಷಾ ಕರ್ಮಾಖ್ಯಾಕರವನ್ಮತೇಃ' ರಾಜ್ಯ ವ್ಯವಸ್ಥೆಯಲ್ಲಿ ಪ್ರಜೆಗಳು ರಾಜನಿಗೆ ಕಂದಾಯಕೊಡುವುದು ಹೇಗೆ ಕಡ್ಡಾಯಂವೋ ಹಾಗೆಯೇ ಜ್ಞಾನಿ ಅಜ್ಞಾನಿ ಇಬ್ಬರಿಗೂ ಕರ್ಮವು ಅವಶ್ಯಕರ್ತವ್ಯ ಎಂದು ಹೇಳಂತ್ತಾರೆ. ಹೀಗೆ ಭಗವದ್ಗೀತೆಯಲ್ಲಿ ಹೇಳಬೇಕಾದ ವಿಷಯಂವೆಲ್ಲವನ್ನೂ ಈ ಎರಡು ಗ್ರಂಥಗಳಲ್ಲಿ ಹೇಳಿದ್ದಾರೆ.

## ಬ್ರಹ್ಮಸೂತ್ರಭಾಷ್ಯ

ಬದರಿಯಲ್ಲಿ ಪತ್ಯತೀರ್ಥರೆಂಬ ತನ್ನ ಶಿಷ್ಯನ ಕೈಯಿಂದ ಮಧ್ವಾಚಾರ್ಯರು ಭಾಷ್ಯವನ್ನು ಬರೆಯಿಸಿದರು. ಈ ಭಾಷ್ಯವು ಅತಿಸಂಕ್ಷಿಪ್ತವಾಗಿದ್ದು ಅನೇಕ ಸ್ಥಳಗಳಲ್ಲಿ ಸೂತ್ರದಷ್ಟೇ ಭಾಷ್ಯವಿದೆ. ಮಧ್ವಾಚಾರ್ಯರ ಭಾಷ್ಯಾನ ಸಾರವಾಗಿ ಸೂತ್ರಗಳ ಸಂಖ್ಯೆ ೫೬೪ (ವಿಷ್ಣು= ವಿಷ್ಣುಂ ೪೬೫=೫೬೪ ಅಂಕಾನಾಂ ವಾಮತೋ ಗತಿಃ) ಅಧಿಕರಣಗಳು ೨೨೩. ಎಲ್ಲವೂ ಸಿದ್ಧಾಂತಸೂತ್ರಗಳು. ಪೂರ್ವಪಕ್ಷಗಳು ಕೆಲವು ಸೂತ್ರದಲ್ಲಿವೆ. ಅನೇಕ ಪೂರ್ವಪಕ್ಷಗಳನ್ನು ಭಾಷ್ಯಾಕಾರರೇ ಹೇಳಂತ್ತಾರೆ, ಇವು ಸಿದ್ಧಾಂತದಿಂದ ಸೂಚಿತವಾಗಿರುತ್ತವೆ. ಇಲ್ಲಿ ಪಂಚಾಂಗ ಯುಕ್ತವಾದ ಅಧಿಕರಣ ರಚನೆಯು ಸ್ಪಷ್ಟವಾಗಿಲ್ಲ.

'ನಾರಾಯಣನು ಸಮಸ್ತಗುಣಪೂರ್ಣ, ದೋಷರಹಿತ, ವೈರಾಗ್ಯಭಕ್ತಿಸಹಿತವಾದ ಶ್ರವಣಾದಿಗಳಿಂದಜ್ಞೇಯನು, ಮತ್ತು ಮುಕ್ತಿಯಲ್ಲಿಯೂ ಅವನೇ ಹೊಂದಲ್ಪಡಬೇಕಾದವನು.' ಎಂದು ಮಧ್ವಾಚಾರ್ಯರು ಬ್ರಹ್ಮಸ್ವರೂಪವನ್ನು ನಿರೂಪಿಸುತ್ತಾರೆ. ಮೊದಲನೆಯ ಸೂತ್ರ ದಲ್ಲಿರುವ ಅಥಶಬ್ದವು ಮಂಗಲ ಸೂಚಕವೂ ಅಧಿಕಾರದ ಅನಂತರ್ಯಾರ್ಥಬೋಧಕವೂ ಆಗಿದೆ. ಅಧಿಕಾರಿಗಳು ಮಂದ, ಮಧ್ಯಮ, ಉತ್ತಮರೆಂದು ಮೂರು ವಿಧ. ಬ್ರಹ್ಮನೆಂದರೆ ಅನಂತ ಗುಣ ಪೂರ್ಣನಾದ ವಿಷ್ಣುವು. ' ಬ್ರಹ್ಮಶಬ್ದಶ್ಚ ವಿಷ್ಣಾವೇವ '. ಅಧಿಕಾರವನ್ನು ಸಂಪಾದಿಸಿ ಕೊಂಡನಂತರ ಶ್ರವಣಾದಿರೂಪಜಿಜ್ಞಾಸೆಯಿಂದ ಪರಮಾತ್ಮನ ಅಪರೋಕ್ಷಜ್ಞಾನವನ್ನು ಸಂಪಾದಿಸಿ ಅವನ ಅನುಗ್ರಹದಿಂದ ಮೋಕ್ಷವನ್ನು ಪಡೆಯಲು ಸಾಧ್ಯವಿರುವುದರಿಂದ ಗುಣ ಪೂರ್ಣನಾದ ಬ್ರಹ್ಮನ ಶ್ರವಣಾದಿರೂಪವಾದ ಜಿಜ್ಞಾಸೆಯನ್ನು ಮಾಡಬೇಕು ಎಂದು ಪ್ರಥಮ ಸೂತ್ರಾರ್ಥವು. ಮುಂದೆ ಬ್ರಹ್ಮನಿಗೆ ಜಗಜ್ಜನ್ಮಾದಿಕಾರಣತ್ವರೂಪವಾದ ಲಕ್ಷಣವನ್ನೂ ಹೇಳಿ

ಅಂತಹ ಬ್ರಹ್ಮನನ್ನು ಶಾಸ್ತ್ರದಿಂದಲೇ ತಿಳಿಯಬೇಕು. ಉಪಕ್ರಮಾದಿ ತಾತ್ಪರ್ಯಲಿಂಗಗಳಿಂದ ವಿಚಾರಮಾಡಿದಾಗ ವಿಷ್ಣುವೊಬ್ಬನೇ ಶಾಸ್ತ್ರಗಮ್ಯನಾಗುತ್ತಾನೆ. ಆ ಪರಬ್ರಹ್ಮನು ಅವಾಚ್ಯನಲ್ಲ. ವೇದಸ್ಥವಾದ ಅಧ್ಯಾತ್ಮ, ಅಧಿಭೂತ, ಅಧಿದೈವ ಶಬ್ದಗಳು ಧರ್ಮಿವಾಚಕ ಅಥವಾ ಧರ್ಮ ವಾಚಕಗಳೆಲ್ಲವೂ ಅವನಲ್ಲಿಯೇ ಸಮನ್ವಯವಾಗುತ್ತವೆ. ಕರ್ಮಕಾಂಡದ ಶಬ್ದವಾಕ್ಯಾದಿಗಳೂ ಅವನನ್ನೇ ಪ್ರತಿಪಾದಿಸುತ್ತವೆ ಎಂದು ಸಮನ್ವಯಾಧ್ಯಾಯದಲ್ಲಿ ಅವನಲ್ಲಿ ಸಮಸ್ತಗುಣ ಪೂರ್ಣತ್ವವನ್ನು ಸಮರ್ಥಿಸಿ, ಎರಡನೆಯ ಅವಿರೋಧ ಅಧ್ಯಾಯದಲ್ಲಿ ಇತರ ಶ್ರುತಿಯುಕ್ತಿ ಸಮಯ (ಸಿದ್ಧಾಂತ) ವಿರೋಧಗಳನ್ನು ಪರಿಹರಿಸಿ, ಮೂರನೆಯ ಸಾಧನಾಧ್ಯಾಯದಲ್ಲಿ ವೈರಾಗ್ಯ, ಭಕ್ತಿ, ಉಪಾಸನಾ, ಜ್ಞಾನ, ಸಾಮರ್ಥ್ಯಗಳನ್ನು ಹೇಳಿ, ನಾಲ್ಕನೆಯ ಫಲಾಧ್ಯಾಯದಲ್ಲಿ ಕರ್ಮಕ್ಷಯ, ಉತ್ಕ್ರಮಣ, ಮಾರ್ಗಭೋಗಗಳನ್ನೂ ಪ್ರತಿಪಾದಿಸಿದ್ದಾರೆ. ಮಧ್ವಾಚಾರ್ಯರ ಭಾಷ್ಯಕ್ಕಿಂತ ಹಿಂದೆ ೨೧ ಭಾಷ್ಯಗಳಿದ್ದುವೆಂಬ ಉಲ್ಲೇಖವಿದೆ. ಆದರೆ ಅವುಗಳಲ್ಲಿ ಶಂಕರ, ರಾಮಾನುಜ, ಮತ್ತು ಭಾಸ್ಕರರ ಭಾಷ್ಯಗಳ ವಿಮರ್ಶೆಯು ಈ ಭಾಷ್ಯದಲ್ಲಿ ಕಂಡುಬರುತ್ತದೆಯೆಂದು ತಿಳಿಯಲಾಗಿದೆ.

## ನ್ಯಾಯವಿವರಣ ಮತ್ತು ಅನುವ್ಯಾಖ್ಯಾನ

ಈ ಎರಡು ಗ್ರಂಥಗಳೂ ಸೂತ್ರಾರ್ಥವನ್ನೇ ಹೇಳಲು ಹೊರಟಿವೆ. ನ್ಯಾಯವಿವರಣದಲ್ಲಿ ಪ್ರತಿಯೊಂದು ಅಧಿಕರಣದ ಪೂರ್ವಪಕ್ಷ ಸಿದ್ಧಾಂತ ಯುಕ್ತಿಗಳನ್ನು ಹೇಳಿ ಅವುಗಳನ್ನು ವಿವರಿಸಲಾಗಿದೆ. ಬ್ರಹ್ಮಸೂತ್ರಗಳೆಲ್ಲವೂ ವೇದಾರ್ಥನಿರ್ಣಾಯಕನ್ಯಾಯಗ್ರಂಥನಾತ್ಮಕವಾಗಿವೆ ಎಂಬ ವಿಷಯವನ್ನು ನ್ಯಾಯ ವಿವರಣವು ಮನದಟ್ಟು ಮಾಡಿಕೊಡುತ್ತದೆ.

## ಅನುವ್ಯಾಖ್ಯಾನ

ಇದು ಬ್ರಹ್ಮಮೀಮಾಂಸಾಶಾಸ್ತ್ರದ ಸಾರಾರ್ಥವನ್ನು ಇತರ ಮತಗಳ ನಿರಾಕರಣ ಪೂರ್ವಕವಾಗಿ ತಿಳಿಸುವ ಮಧ್ವಾಚಾರ್ಯರ ಮೇರುಕೃತಿ. ಇಲ್ಲಿ ಉಪನ್ಯಾಸಶೈಲಿಯಿಂದ ಶ್ರುತಿಯುಕ್ತಿಗಳನ್ನು ಉದ್ಧರಿಸುತ್ತಾ, ಸ್ವಾಭಿಪ್ರಾಯವನ್ನು ಸಮರ್ಥಿಸಿ ಇತರರ ಅಭಿಪ್ರಾಯ ಗಳನ್ನು ನಿರಾಕರಿಸುತ್ತಾರೆ. ಈ ಗ್ರಂಥವು ದ್ವೈತದರ್ಶನದ ಎಲ್ಲಾ ಪ್ರಮಾಣ ಪ್ರಮೇಯ ಗಳನ್ನೂ ಸಾಧಿಸಿ ಕೊಡಲು ಹೊರಟಿದೆ. ಬ್ರಹ್ಮಮೀಮಾಂಸಾಶಾಸ್ತ್ರದ ಪ್ರಾಮಾಣ್ಯ ಸಮರ್ಥನೆ ಮಾಡುತ್ತಾ ಇಲ್ಲಿ ಓಂಕಾರವು ಸೂತ್ರದ ಅವಯವವು, ಮಾಂಗಲಿಕವೂ ಆಗಿದೆಯೆಂದು ಹೇಳಿ ಪರಮಾತ್ಮನ ಪ್ರಸಾದವು ಆವಶ್ಯಕವೆಂದೂ, ಸಿದ್ಧಾರ್ಥದಲ್ಲಿ ಪದಗಳಿಗೆ ಶಕ್ತಿಯಿದೆಯೆಂದೂ, ಬಂಧವು ಮಿಥ್ಯಾ ಅಲ್ಲವೆಂದೂ ವಾದಿಸಿ ಸಿದ್ಧಾಂತಿಸಿದ್ದಾರೆ. ಪದಗಳಿಗೆ ಯೋಗ್ಯ-ಇತರಾನ್ವಿತಸ್ವಾರ್ಥದಲ್ಲಿ ಶಕ್ತಿಯಿದೆಯೆಂದೂ, ಪ್ರತ್ಯಕ್ಷದಂತೆಯೇ ಆಗಮಕ್ಕೂ

ಪ್ರಾಮಾಣ್ಯವನ್ನು ಒಪ್ಪಬೇಕೆಂದೂ ಸಾಧಿಸಿದ್ದಾರೆ. ಪ್ರಕೃತಿಕಾರಣತ್ವವಾದ ನಿರಾಕರಣೆ, ಅಭೇದಪ್ರತಿಪಾದಕವೆಂದು ತೋರುವ ವಾಕ್ಯಗಳಿಗೆ ಅರ್ಥವನ್ನು ತಿಳಿಯುವ ರೀತಿ, ಜೀವನು ಪರಮಾತ್ಮನ ಅಂಶ ಎಂಬ ಮಾತಿನ ಅರ್ಥವಿವರಣೆ, ಬಿಂಬಪ್ರತಿಬಿಂಬಭಾವದ ವಿಮರ್ಶೆ, ಬ್ರಹ್ಮ ಜಿಜ್ಞಾಸೆಯು ಸಂಗತವಾಗಬೇಕಾದರೆ ಜೀವ ಜಗತ್ತು ಬಹ್ಮ ಈ ಮೂರು ಪದಾರ್ಥಗಳ ಸ್ವರೂಪವನ್ನು ಯಾವರೀತಿ ಒಪ್ಪಿಕೊಳ್ಳಬೇಕೆಂಬ ವಿಚಾರ, ಸಾಧನಾನುಷ್ಠಾನಕ್ರಮ, ಮೋಕ್ಷಸ್ವರೂಪ ವಿಚಾರ, ಮೊದಲಾದ ವಿಚಾರಗಳನ್ನು ಇಲ್ಲಿ ಯುಕ್ತಿಯುಕ್ತವಾಗಿ ಅನುಭವಾರೂಢವಾಗುವಂತೆ ಪ್ರತಿಪಾದಿಸಲಾಗಿದೆ. "ಅಜ್ಞಾನಾಂ ಜ್ಞಾನದೋ ವಿಷ್ಣುಃ ಜ್ಞಾನಿನಾಂಮೋಕ್ಷದ ಶ್ಚ ಸಃ । ಆನಂದದಶ್ಚ ಮುಕ್ತಾನಾಂ ಸ ಏಕೈಕೋ ಜನಾರ್ದನಃ ॥ ಇತ್ಯುಕ್ತೇಃ-ಬಂಧಮಿಥ್ಯಾತ್ವಂ ನೈವಮುಕ್ತಿರಪೇಕ್ಷತೇ" ಪರಮಾತ್ಮನೇ ಪ್ರಸನ್ನನಾಗಿ ಮೋಕ್ಷಕೊಡುವನೆಂದ ಮೇಲೆ ಬಂಧವು ಮಿಥ್ಯೆಏಕಾಗಬೇಕು ? ಎಂದು ಅವರು ಇತರರನ್ನು ಆಕ್ಷೇಪಿಸಿನಿರಾಕರಿಸುತ್ತಾರೆ. ಈ ಗ್ರಂಥದ ಶೈಲಿಗೆ ಇದೊಂದು ಉದಾಹರಣೆ.

## ಅಣುಭಾಷ್ಯ

ಇದು ಬ್ರಹ್ಮಸೂತ್ರಗಳ ಅಧಿಕರಣಸಾರ ಸಂಗ್ರಹರೂಪವಾದ ೩೪ ಅನುಷ್ಟುಪ್ ಶ್ಲೋಕಗಳಿಂದ ಕೂಡಿದ ಚಿಕ್ಕಗ್ರಂಥ. ಇದು ೨೨೩ ಅಧಿಕರಣಗಳ ಅರ್ಥವನ್ನು ಹೇಗೆ ಹೇಳುತ್ತದೆ ಎಂಬ ವಿಷಯವನ್ನು ಇದರ ವ್ಯಾಖ್ಯಾನ ಗ್ರಂಥಗಳು ತಿಳಿಸುತ್ತವೆ. ಈ ಗ್ರಂಥಕ್ಕೆ ಅನಂತಾರ್ಥಗಳಿವೆಯೆದೂ ನಂಬಿಕೆ. ಇದರಿಂದ ಗ್ರಂಥಕರ್ತೃವಿನ ಸಂಗ್ರಹ ಶಕ್ತಿಯೂ ತಿಳಿದುಬರುತ್ತದೆ. "ವಿಷ್ಣುರೇವ ವಿಜಿಜ್ಞಾಸ್ಯಃ". ಇದು ಮೊದಲನೆಯ ಅಧಿಕರಣದ ಸಾರಸಂಗ್ರಹ, ೩ನೇ ಅಧ್ಯಾಯದ ೨ನೇ ಪಾದದ ಸಂಧ್ಯಾಧಿಕರಣ, ದೇಹಯೋಗಾಧಿಕರಣ, ತದಭಾವಾಧಿಕರಣ, ಪ್ರಬೋಧಾಧಿಕರಣ, ಸಂಪತ್ತ್ಯಧಿಕರಣ ಎಂಬ ಏಳು ಅಧಿಕರಣಗಳ ಸಾರಸಂಗ್ರಹವು "ಸರ್ವಾವಸ್ಥಾಪ್ರೇರಕಶ್ಚ". ಹೀಗೆ ಒಂದೇ ಪದದಿಂದ ಅನೇಕ ಅಧಿಕರಣಗಳ ಅರ್ಥವನ್ನು ಬಹಳ ಕೌಶಲದಿಂದ ಸಂಗ್ರಹಿಸಿದ್ದಾರೆ. ತನ್ನ ಆಶ್ರಮಗುರುಗಳಾದ ಅಚ್ಯುತಪ್ರೇಕ್ಷಾಚಾರ್ಯರ ಪಾರಾಯಣಕ್ಕಾಗಿ ಇದನ್ನು ರಚಿಸಿದರು.

## ಉಪನಿಷದ್ಭಾಷ್ಯ

ಉಪನಿಷತ್ತುಗಳು ಅನೇಕವಾಗಿದ್ದರೂ ಮಧ್ವಾಚಾರ್ಯರು ಈಶಾದಿ ಹತ್ತು ಉಪನಿಷತ್ತುಗಳಿಗೆ ಮಾತ್ರವೇ ಭಾಷ್ಯವನ್ನು ಬರೆದಿದ್ದಾರೆ. ಈ ಭಾಷ್ಯಗಳು ಸಂಕ್ಷಿಪ್ತವಾಗಿದ್ದರೂ ಪ್ರಮಾಣ ವಾಕ್ಯಗಳನ್ನು ಉದಾಹರಿಸುತ್ತಾ ಉಪನಿಷತ್ತಿನ ತಾತ್ಪರ್ಯವನ್ನು ಮನಮುಟ್ಟುವಂತೆ ಪ್ರತಿಪಾದಿಸುತ್ತವೆ. ಅತಿ ಕ್ಲಿಷ್ಟವೆಂದು ಕಾಣುವ ಕೆಲವು ಪದಗಳಿಗೆ ಮಾತ್ರ ಇಲ್ಲಿ ಅರ್ಥ ಕೊಡಲಾಗಿದೆ. 'ಕುರ್ವನ್ನೇವೇಹ ಕರ್ಮಾಣಿ' ಎಂಬ ಈಶಾವಾಸ್ಯ ಎರಡನೆಯ ಮಂತ್ರದ ಭಾಷ್ಯ ಇಷ್ಟೇಇದೆ-ಅಕುರ್ವತಃ ಕರ್ಮಲಿಪ್ಯತ ಇತಿ ನಾಸ್ತಿ. ಅಜ್ಞಸ್ಯ ಕರ್ಮಲಿಪ್ಯೇತ

ಕೃಷ್ಣೋಪಾಸ್ತಿಮಕುರ್ವತಃ । ಜ್ಞಾನಿನೋಽಪಿ ಯತೋ ಹ್ರಾಸಃ ಆನಂದಸ್ಯಭವೇದ್ಧ್ರುವಮ್ । ಅತೋಽಲೇಪೇಽಪಿಲೇಪಃಸ್ಯಾದತಃ ಕಾರ್ಯೈವ ಸಾ ಸದಾ॥ ಇತಿ ನಾರದೀಯೇ॥ ಕರ್ಮ ಮಾಡದವನಿಗೆ ಕರ್ಮಲೇಪವಿಲ್ಲವೆಂದಿಲ್ಲ. ಪರಮಾತ್ಮನ ಉಪಾಸನಾ ರೂಪವಾದ ಕರ್ಮವನ್ನು ಮಾಡದಿದ್ದವನಿಗೆ ಅಜ್ಞನಿಗೆ ಅವನು ಮಾಡುವ ಇತರ ಕರ್ಮಗಳಿಂದ ಲೇಪವುಂಟಾಗುತ್ತದೆ. ಅಪರೋಕ್ಷಜ್ಞಾನಿಯೂ ಕರ್ಮಮಾಡಬೇಕು. ಇಲ್ಲದಿದ್ದರೆ ಅವನಿಗೆ ಮುಕ್ತಿಯಲ್ಲಿ ಆನಂದಹ್ರಾಸ ಉಂಟಾಗುತ್ತದೆ. ಆದ್ದರಿಂದ ಜ್ಞಾನಿಗೆ ಮೋಕ್ಷಾಭಾವವೆಂಬ ಲೇಪವಿಲ್ಲದಿದ್ದರೂ ಆನಂದಹ್ರಾಸವೆಂಬ ಲೇಪವಿರುವುದರಿಂದ ಜ್ಞಾನಿಯೂ ಕರ್ಮವನ್ನು ಮಾಡಬೇಕು.

## ಭಾಗವತತಾತ್ಪರ್ಯ

ಮಧ್ವಾಚಾರ್ಯರು ಪುರಾಣಪ್ರಸ್ಥಾನ ಎಂಬ ಹೊಸ ಶಾಖೆಯನ್ನೇ ಆರಂಭಿಸಿದ್ದಾರೆ. ಗೀತೆ, ಬ್ರಹ್ಮಸೂತ್ರ ಮತ್ತು ಉಪನಿಷತ್ತುಗಳ ಸಿದ್ಧಾಂತಕ್ಕೆ ವಿರೋಧವಿಲ್ಲದಂತೆ ಪುರಾಣಗಳ ಅರ್ಥವನ್ನು ತಿಳಿಯುವ ಕ್ರಮವನ್ನು ಭಾಗವತತಾತ್ಪರ್ಯದಲ್ಲಿ ವಿವೇಚಿಸಲಾಗಿದೆ. 'ಇತಿಹಾಸ ಪುರಾಣಾಭ್ಯಾಂವೇದಂಸಮುಪಬೃಂಹಯೇತ್' ಇತಿಹಾಸ ಪುರಾಣಗಳಿಂದ ವೇದಾರ್ಥವನ್ನು ವಿಸ್ತಾರವಾಗಿ ತಿಳಿಯಬೇಕು ಎಂಬ ಉಕ್ತಿಯನ್ನು ಅನುಸರಿಸಿ ಆಖ್ಯಾನ ಉಪಾಖ್ಯಾನಗಳ ಮೂಲಕ, ಜ್ಞಾನ, ಭಕ್ತಿ, ವೈರಾಗ್ಯ, ಉಪಾಸನಾ ಮುಂತಾದ ಸಾಧನಗಳನ್ನೂ, ಭಗವಂತನ ಸ್ವರೂಪವನ್ನೂ, ಅವನ ಭಕ್ತರ ಮಹಿಮಾತಿಶಯಗಳನ್ನೂ, ದೇವತೆಗಳ ಸ್ವರೂಪವನ್ನೂ ಪುರಾಣಗಳು ಹೇಗೆ ತಿಳಿಸುತ್ತವೆ ಎಂಬ ವಿಷಯಗಳನ್ನು ಈ ಗ್ರಂಥದಲ್ಲಿ ಅನೇಕ ಪ್ರಮಾಣೋದಾಹರಣಗಳಿಂದ ಪ್ರತಿಪಾದಿಸಲಾಗಿದೆ. ಭಾಗವತ ೧ನೇ ಸ್ಕಂಧದ ೪ನೆಯ ಅಧ್ಯಾಯದ ತಾತ್ಪರ್ಯ—ನೈಮಿಷೇಽನಿಮಿಷಕ್ಷೇತ್ರೇ ಋಷಯಃ ಶೌನಕಾದಯಃ। ಸತ್ರಂ ಸ್ವರ್ಗಾಯ ಲೋಕಾಯ ಸಹಸ್ರಸಮಮಾಸತ" ಎಂದು ಆರಂಭವಾಗುವ ಅಧ್ಯಾಯದ ತಾತ್ಪರ್ಯವು ಹೀಗಿದೆ—ಪ್ರಕಾರಾಂತರೇಣ ಪುರುಷಾರ್ಥಶಂಕಾನಿವೃತ್ತ್ಯರ್ಥಮಾಖ್ಯಾಯಿಕಾ. ಪಾದ್ಮೇಚ-ಆಖ್ಯಾಯಿಕಾಃ ಪ್ರದರ್ಶ್ಯಂತೇ ಸರ್ವವೇದೇಷು ಸರ್ವಶಃ । ದ್ಯೋತಯಂತ್ಯಸ್ತು ಮಹತಾಂ ತಾತ್ಪರ್ಯಂ ತತ್ರತತ್ರಹ । ಅಲಾಭಃ ಪುರುಷಾರ್ಥಸ್ಯ ಪ್ರೋಕ್ತಮರ್ಥಮೃತೇತ್ವಿತಿ । ದ್ಯೋತನಾಯ ಮಹಾರಾಜ ಶ್ರದ್ಧಾಧ್ಯರ್ದ್ಧ್ಯರ್ಥ ಮೇವ ಚ ॥ ಇತಿ ॥ ೧೮,೦೦೦ ಗ್ರಂಥ ಸಂಖ್ಯೆಯುಳ್ಳ ಭಾಗವತಪುರಾಣದ ಸುಮಾರು ೧೬೦೦ ಶ್ಲೋಕಗಳ ತಾತ್ಪರ್ಯ, ಕೆಲವೆಡೆ ಅನ್ವಯ, ಕೆಲವು ಶಬ್ದಗಳ ಅರ್ಥವನ್ನು ಕೊಟ್ಟು, ಕೆಲವು ಆಕ್ಷೇಪಗಳ ಪರಿಹಾರವನ್ನು ಇಲ್ಲಿ ಮಾಡಲಾಗಿದೆ.

## ಮಹಾಭಾರತತಾತ್ಪರ್ಯ ನಿರ್ಣಯ

ಮಧ್ವಾಚಾರ್ಯರು ತಮ್ಮ ಸಿದ್ಧಾಂತವನ್ನು ಸ್ಥಾಪಿಸುವುದಕ್ಕೆ ಮೊದಲೇ ಮಹಾಭಾರತವು ಲಕ್ಷಶ್ಲೋಕಗಳನ್ನು ಒಳಗೊಂಡು ಉತ್ತಮ ಪ್ರಮಾಣಗ್ರಂಥವೆಂದು ಅಂಗೀಕೃತವಾಗಿತ್ತು.

ಭಾರತಕ್ಕೆ ಐದನೆಯ ವೇದವೆಂಬ ಗೌರವವೂ ಪ್ರಾಪ್ತವಾಗಿತ್ತು. ಋಗಾದಿ ನಾಲ್ಕು ವೇದಗಳು, ಭಾರತ, ಪಂಚರಾತ್ರ, ಮೂಲರಾಮಾಯಣ ಎಂಬ ಏಳುಗ್ರಂಥಗಳು ಪರಮ ಪ್ರಮಾಣಗಳೆಂದು ಮಧ್ವಾಚಾರ್ಯರು ಅನೇಕ ಬಾರಿ ಉಲ್ಲೇಖಿಸಿದ್ದಾರೆ. ಆದುದರಿಂದ ಪರಮಪ್ರಮಾಣವಾದ ಮಹಾಭಾರತದ ತಾತ್ಪರ್ಯವನ್ನು ಆಚಾರ್ಯರು ಬರೆದರು. ಈ ಗ್ರಂಥದ ಮೊದಲಿನ ಎರಡು ಅಧ್ಯಾಯಗಳಲ್ಲಿ ಸಮಸ್ತಶಾಸ್ತ್ರಸಾರವನ್ನು ಹೇಳಿ, ಮೂರನೆಯ ಅಧ್ಯಾದಲ್ಲಿ ಅಂಶಾವತಾರಾದಿಗಳನ್ನು ತಿಳಿಸಿ, ಅನಂತರ ೪ರಿಂದ ೯ನೆಯ ಅಧ್ಯಾಯದವರೆಗೆ ರಾಮಾಯಣದ ಸಾರವನ್ನು ತಿಳಿಸಲಾಗಿದೆ. ಹತ್ತನೆಯ ಅಧ್ಯಾಯದಲ್ಲಿ ವೇದವ್ಯಾಸಾವತಾರವನ್ನು ಹೇಳಿ ಅನಂತರ ಗ್ರಂಥದ ಕೊನೆಯವರೆಗೂ ಕಥೆಯೊಂದಿಗೆ ಮಹಾಭಾರತದ ತಾತ್ಪರ್ಯವನ್ನು ಇಲ್ಲಿ ಪ್ರತಿಪಾದಿಸಲಾಗಿದೆ. ಭೀಮಸೇನ ಮತ್ತು ದುರ್ಯೋಧನ ಇವರಿಬ್ಬರನ್ನೇ ಪಕ್ಷ ಪ್ರತಿಪಕ್ಷವನ್ನಾಗಿಟ್ಟುಕೊಂಡು ಮಹಾಭಾರತದ ಕಥೆಯು ಬೆಳೆದಿದೆ ಎಂಬ ನಿರೂಪಣೆಯು ಈ ಗ್ರಂಥದ ವೈಶಿಷ್ಟ್ಯ. ಭಾಗವತಾದಿ ಗ್ರಂಥಗಳಲ್ಲಿ ಹೇಳಿರುವ ಶ್ರೀಕೃಷ್ಣನ ಕಥೆಯನ್ನೂ ಮಹಾಭಾರತದ ಕಥೆಯ ಜತೆಯಲ್ಲಿಯೇ ಇಲ್ಲಿ ಸೇರಿಸಿ ಹೇಳಲಾಗಿದೆ. ಇದು ಸುಮಾರು ೫೦೦೦ ಶ್ಲೋಕಗಳಿಂದ ಕೂಡಿದ ೩೨ ಅಧ್ಯಾಯಗಳಿಂದ ಕೂಡಿದ ಗ್ರಂಥ. ಆಧ್ಯಾತ್ಮಿಕ ವಿಮರ್ಶೆ ದೃಷ್ಟಿಯಿಂದ ಮಹಾಭಾರತವನ್ನು ವಿವೇಚಿಸುವ ಈ ಗ್ರಂಥವು ದ್ವೈತದರ್ಶನದಲ್ಲಿ ಮಹತ್ವದ ಸ್ಥಾನವನ್ನು ಪಡೆದಿದೆ. ಪಾಶ್ಚಾತ್ಯರ ವಿಮರ್ಶೆದೃಷ್ಟಿಯಲ್ಲಿ ಪುರಾಣಗಳ ದೇವತಾತತ್ತ್ವ ವಿಮರ್ಶೆಯು ದರ್ಶನದ ವ್ಯಾಪ್ತಿಗೆ ಒಳಪಡದಿದ್ದರೂ ಭಾರತೀಯ ದರ್ಶನಗಳಲ್ಲಿ ಅನೇಕ ಕಡೆ ಅದು ಹಾಸುಹೊಕ್ಕಾಗಿ ಸೇರಿಕೊಂಡಿರುವುದರಿಂದ ಅದನ್ನು ಪ್ರತ್ಯೇಕಿಸಲು ಸಾಧ್ಯವಿಲ್ಲ ವೆಂಬಂತಾಗಿದೆ. ಆದುದರಿಂದ ಭಾಗವತ ತಾತ್ಪರ್ಯ ಮತ್ತು ಮಹಾಭಾರತತಾತ್ಪರ್ಯನಿರ್ಣಯ ಎಂಬ ಎರಡು ಗ್ರಂಥಗಳನ್ನೂ ದರ್ಶನದ ಜತಗೆ ಸೇರಿಸಿ ವಿವೇಚಿಸಲಾಗಿದೆ.

ಮಧ್ವಾಚಾರ್ಯರು ಹತ್ತುಪ್ರಕರಣಗ್ರಂಥಗಳನ್ನು ಬರೆದಿದ್ದಾರೆ. ಅವುಗಳಲ್ಲಿ ಪ್ರಮಾಣ ಲಕ್ಷಣವೆಂಬ ಗ್ರಂಥವು ಬಹಳ ಸಂಕ್ಷಿಪ್ತವಾಗಿದ್ದು, ದ್ವೈತಸಿದ್ಧಾಂತ ಕ್ರಮದಿಂದ ಪ್ರಮಾಣಗಳ ಲಕ್ಷಣ ಸ್ವರೂಪಾದಿಗಳನ್ನು ತಿಳಿಸುತ್ತದೆ. ''ಯಥಾರ್ಥವೇ ಪ್ರಮಾಣವು, ಅದು ಕೇವಲ ಮತ್ತು ಅನುಪ್ರಮಾಣವೆಂದು ಎರಡು ವಿಧ. ಯಥಾರ್ಥಜ್ಞಾನವೇ ಕೇವಲ ಪ್ರಮಾಣವು. ಯಥಾರ್ಥ ಜ್ಞಾನಸಾಧನವೇ ಅನುಪ್ರಮಾಣವು. ಕೇವಲ ಪ್ರಮಾಣವು ಈಶ, ಲಕ್ಷ್ಮೀ, ಯೋಗಿ, ಅಯೋಗಿಗಳ ಜ್ಞಾನವೆಂದು ನಾಲ್ಕು ವಿಧವಾಗಿದೆ. ಮೊದಲಿನ ಈಶ ಲಕ್ಷ್ಮೀಜ್ಞಾನಗಳು ಅನಾದಿ, ನಿತ್ಯ ಆದರೆ ಈಶಜ್ಞಾನವು ಸ್ವತಂತ್ರ, ಲಕ್ಷ್ಮೀಜ್ಞಾನವು ಪರತಂತ್ರ ಈಶಜ್ಞಾನವು ತನ್ನಲ್ಲಿ ಮತ್ತು ಪರರಲ್ಲಿರುವ ಎಲ್ಲಾ ವಿಶೇಷ ವಿಷಯಗಳನ್ನು ಒಳಗೊಂಡಿದೆ. ಲಕ್ಷ್ಮೀಜ್ಞಾನವು ಈಶನಲ್ಲಿ ಇತರರಿಗಿಂತ ಹೆಚ್ಚು ವಿಷಯವನ್ನು ಒಳಗೊಂಡಿದೆ. ಆದರೆ ಈಶನಲ್ಲಿ ಎಲ್ಲಾ ವಿಷಯಗಳನ್ನು ಒಳಗೊಂಡಿಲ್ಲ. ಅವೆರಡು ಜ್ಞಾನಗಳ ಸ್ಪಷ್ಟತೆಯಲ್ಲಿಯೂ ಭೇದವಿದೆ.

ಋಜುಗಳೆಂಬ ಯೋಗಿಗಳ ಜ್ಞಾನವು ಅನಾದಿನಿತ್ಯ. ಅವರ ಜ್ಞಾನವು ಈಶನಲ್ಲಿ ಇತರ ಜೀವರಿಗಿಂತ ಹೆಚ್ಚು ವಿಷಯಗಳನ್ನೊಳಗೊಂಡಿದೆ. ಈಶ ಮತ್ತು ಲಕ್ಷ್ಮಿಯರನ್ನು ಬಿಟ್ಟು ಉಳಿದ ಜಗತ್ತಿನ ವಿಷಯದಲ್ಲಿ ಆಲೋಚನೆ ಮಾಡಿದಾಗ ಸರ್ವವಿಷಯಕವಾಗಿದ್ದು ಮುಕ್ತಿಯವರೆಗೂ ಬೆಳೆಯುತ್ತಿರುತ್ತದೆ.'' ಇಂತಹ ರೀತಿಯಿಂದ ಈ ಗ್ರಂಥವು ಮುಂದುವರಿದು ಪ್ರತ್ಯಕ್ಷ, ಅನುಮಾನ ಮತ್ತು ಆಗಮಗಳೆಂಬ ಮೂರು ಪ್ರಮಾಣಗಳನ್ನು ನಿರೂಪಿಸುತ್ತಾ ಇತರ ದರ್ಶನಗಳಲ್ಲಿ ಬರುವ ಪ್ರಮಾಣಗಳನ್ನು ಇವುಗಳಲ್ಲಿಯೇ ಅಂತರ್ಭಾವ ಮಾಡುತ್ತದೆ.

ಕಥಾಲಕ್ಷಣವೆಂಬ ಪ್ರಕರಣ ಗ್ರಂಥವು ವಾದ, ಜಲ್ಪ, ವಿತಂಡ ಎಂಬ ಮೂರು ವಿಧವಾದ ವಾದಿ ಪ್ರತಿವಾದಿಗಳ ಚರ್ಚೆಯನ್ನೂ ಅವುಗಳ ಲಕ್ಷಣಗಳನ್ನೂ ವಿವರಿಸುತ್ತದೆ. ತತ್ತ್ವ ನಿರ್ಣಯದ ಉದ್ದೇಶದಿಂದ ಕೇವಲ ಗುರು ಶಿಷ್ಯರ ಚರ್ಚೆ, ಅಥವಾ ಸಜ್ಜನರಾದ ವಾದಿ ಪ್ರತಿವಾದಿಗಳ ಚರ್ಚೆಯೇ ವಾದ ; ಖ್ಯಾತಿ, ಲಾಭ, ಪೂಜಾ, ಪರನಿರಾಕರಣೆಗಳೆಂಬ ಪ್ರಯೋಜನಗಳಿಗಾಗಿ ಸ್ಪರ್ಧೆಯಿಂದ ಸಜ್ಜನರು ಮಾಡುವ ಚರ್ಚೆಗೆ ಜಲ್ಪವೆಂದು ಹೆಸರು ; ದುರ್ಜನರನ್ನು ಸೋಲಿಸಿ ಅವರಿಂದ ತತ್ತ್ವವಿಪ್ಲವವಾಗದಂತೆ ತಡೆಯುವುದಕ್ಕಾಗಿ ಮಾಡುವಚರ್ಚೆಯು ವಿತಂಡಾ. ಈ ವಿತಂಡಾವಲ್ಲಿ ಸಜ್ಜನನಾದ ವಾದಿಯು ತನ್ನ ಮತದ ತತ್ತ್ವವನ್ನು ಪ್ರಕಾಶಗೊಳಿಸಬಾರದು. ಈ ಮೂರುವಿಧ ಚರ್ಚೆಗಳಲ್ಲಿಯೂ ಪ್ರಾಶ್ನಿಕರು ಸಭ್ಯರೂ ಇರಬೇಕು. ಒಬ್ಬ ಮಧ್ಯಸ್ಥನೂ ಇರಬೇಕು.

ಉಪಾಧಿಖಂಡನ ಎಂಬ ಪ್ರಕರಣಗ್ರಂಥವು ಜೀವ ಬ್ರಹ್ಮರಿಗೆ ಉಪಾಧಿಯಿಂದ ಭೇದ ಉಂಟಾಗಿದೆ ಎಂಬ ಅಂಶವನ್ನು ಖಂಡಿಸುತ್ತದೆ. 'ಸರ್ವಜ್ಞನಾದ ಬ್ರಹ್ಮನಿಗೆ ಅಜ್ಞಾನವು ಎಂದೂ ಕೂಡುವುದಿಲ್ಲ. ಉಪಾಧಿಭೇದದಿಂದ ಬ್ರಹ್ಮವು ಜೀವ ಭಾವನ್ನು ಹೊಂದಿದಾಗ ಜೀವ ಬ್ರಹ್ಮರಿಗೆ ಭೇದವು ಕೂಡುತ್ತದೆ—ಎಂದರೆ ಆ ಉಪಾಧಿಯು ಸ್ವಾಭಾವಿಕವೇ ಅಜ್ಞಾನ ಕಲ್ಪಿತವೇ ? ಸ್ವಾಭಾವಿಕವೆಂದಾದರೆ ಎರಡು ಸತ್ಯ ಪದಾರ್ಥಗಳನ್ನು ಒಪ್ಪಿಕೊಂಡಹಾಗಿ ಅದ್ವೈತ ಭಂಗ ಬರುತ್ತದೆ. ಅಜ್ಞಾನಕಲ್ಪಿತವೆಂದಾದರೆ ಅನವಸ್ಥಾ, ಅನ್ಯೋನ್ಯಾಶ್ರಯ ಚಕ್ರತಾಪತ್ತಿಗಳು ಎಂಬ ದೋಷಗಳು ಬರುತ್ತವೆ. ಮತ್ತು ಉಪಾಧಿಯಿಂದ ಹೊಸದಾಗಿ ಭೇದ ಉಂಟಾಗುವುದಿಲ್ಲ. ಇರತಕ್ಕ ಭೇದಕ್ಕೆ ಉಪಾಧಿಯು ಜ್ಞಾಪಕವೇ ಹೊರತು ಉತ್ಪಾದಕವಲ್ಲ. ಆಕಾಶದಲ್ಲಿಯೂ ಮೊದಲೇ ಇರತಕ್ಕ ಭೇದಕ್ಕೆ ಘಟ ಮುಂತಾದ ಉಪಾಧಿಯು ಜ್ಞಾಪಕವೇ ಹೊರತು ಕಾರಕವಲ್ಲ—ಇತ್ಯಾದಿ ರೀತಿಯಿಂದ ಉಪಾಧಿಯನ್ನು ವಿಮರ್ಶಿಸುವ ಈ ಗ್ರಂಥವು ೨೦ ಶ್ಲೋಕಗಳಿಂದ ಕೂಡಿದೆ.

ಮಾಯಾವಾದಖಂಡನವೆಂಬ ಚಿಕ್ಕ ಪ್ರಕರಣ ಗ್ರಂಥದಲ್ಲಿ—ಜೀವಬ್ರಹ್ಮರಿಗೆ ಐಕ್ಯವುವೇದ ಮತ್ತು ವೇದಾರ್ಥ ನಿರ್ಣಾಯಕವಾದ ಬ್ರಹ್ಮಮೀಮಾಂಸಾಶಾಸ್ತ್ರದ ತಾತ್ಪರ್ಯ

ವಿಷಯಂವಾಗಿದ್ದಲ್ಲಿ ವೇದ ಹಾಗೂ ಬ್ರಹ್ಮಮೀಮಾಂಸಾ ಶಾಸ್ತ್ರಗಳು ಅನಾರಂಭಣೀಯವಾಗುತ್ತವೆ. ಅವುಗಳ ರಚನೆಯು ವ್ಯರ್ಥವಾಗುತ್ತದೆ. ಐಕ್ಯವು ಬ್ರಹ್ಮಾತಿರಿಕ್ತ ಅಪರಮಾರ್ಥವೆಂದರೆ ಅದನ್ನು ಪ್ರತಿಪಾದಿಸುವ ಶಾಸ್ತ್ರವು ಮಿಥ್ಯಾಪ್ರತಿಪಾದಕವಾಯಿತು. ಐಕ್ಯವು ಬ್ರಹ್ಮಾತಿರಿಕ್ತ ಪಾರಮಾರ್ಥಿಕವೆಂದು ಒಪ್ಪಿಕೊಂಡರೆ ಅದ್ವೈತಹಾನಿಯು ಬರುತ್ತದೆ. ಐಕ್ಯವು ಬ್ರಹ್ಮಸ್ವರೂಪವೇ ಎಂದಾದರೆ ಸ್ವಪ್ರಕಾಶವಾದ ಬ್ರಹ್ಮಸ್ವರೂಪದಂತೆ ಐಕ್ಯವು ಸ್ವಪ್ರಕಾಶ ಸ್ವತಃ ಸಿದ್ಧವಾದುದರಿಂದ ಶಾಸ್ತ್ರಕ್ಕೆ ಸಿದ್ಧಾರ್ಥಬೋಧಕತ್ವವು ಬರುತ್ತದೆ. ಬ್ರಹ್ಮನಲ್ಲಿ ವಿಶೇಷವನ್ನು ಒಪ್ಪದಿರುವುದರಿಂದ ಅದ್ವೈತಾದಿ ವಿಶೇಷಾಕಾರದಿಂದ ಆತ್ಮಬೋಧಕವಾದ ಈ ಶಾಸ್ತ್ರಕ್ಕೆ ಸಾರ್ಥಕ್ಯ ಸಂಭವಿಸುವುದಿಲ್ಲ. ಅದ್ವೈತದಲ್ಲಿ ಅಜ್ಞಾನವೂ ಕೂಡುವುದಿಲ್ಲ. ಇತ್ಯಾದಿ ರೀತಿಯಿಂದ ಈ ಪ್ರಕರಣ ಗ್ರಂಥದಲ್ಲಿ ಜೀವೇಶ್ವರೈಕ್ಯವನ್ನು ಖಂಡಿಸಲಾಗಿದೆ. ಈ ಗ್ರಂಥವೂ ವಾಕ್ಯರೂಪವಾಗಿದೆ. ಮಿಥ್ಯಾತ್ವಾನುಮಾನಖಂಡನವೆಂಬುದೂ ಒಂದು ಚಿಕ್ಕ ಪ್ರಕರಣಗ್ರಂಥ. 'ವಿಮತಂ ಮಿಥ್ಯಾದೃಶ್ಯತ್ವಾತ್ ಯದಿತ್ಥಂ ತತ್ತಥಾ ಸಂಪ್ರತಿಪನ್ನಂ' ಎಂಬ ಪ್ರಪಂಚ ಮಿಥ್ಯಾತ್ವಸಾಧಕ ಅನುಮಾನಕ್ಕೆ ಆಶ್ರಯಾಸಿದ್ಧಿ, ಅಪ್ರಸಿದ್ಧವಿಶೇಷಣತ್ವಂ (ಸಾಧ್ಯಾಪ್ರಸಿದ್ಧಿ), ಸಿದ್ಧಸಾಧನತಾ, ಸ್ವರೂಪಾಸಿದ್ಧಿ, ವಿರೋಧ, ವ್ಯಭಿಚಾರ, ಅಸಿದ್ಧಾತಿರಿಕ್ತವಾದ ಸಾಧ್ಯಾ ಸಾಧಕವಾದ, ಹೇತುವಾದ್ದರಿಂದ ಅನಧ್ಯವಸಿತ (ಅಸಾಧಾರಣ), ಬಾಧ, ಸತ್ಪ್ರತಿಪಕ್ಷ ಸಾಧ್ಯವೈಕಲ್ಯ (ದೃಷ್ಟಾಂತದಲ್ಲಿ) ಸಾಧನವೈಫಲ್ಯ, ಸೋಪಾಧಿಕವಾದ್ದರಿಂದ ವ್ಯಾಪ್ಯತ್ವಾಸಿದ್ಧಿ ಇತ್ಯಾದಿಯಾದ ಎಲ್ಲಾ ದೋಷಗಳೂ ಬರುತ್ತವೆ ಎಂದು ಸಮರ್ಥಿಸಿದ್ದಾರೆ. ತತ್ತ್ವ ಸಂಖ್ಯಾನ ಮತ್ತು ತತ್ವವಿವೇಕ ಎಂಬ ಎರಡು ಸಣ್ಣ ಪ್ರಕರಣ ಗ್ರಂಥಗಳು ದ್ವೈತ ದರ್ಶನದಲ್ಲಿ ಒಪ್ಪಿರುವ ಪ್ರಮೇಯಗಳನ್ನು ತಿಳಿಸುತ್ತವೆ.

## ತತ್ತ್ವೋದ್ಯೋತ

ಜಡಚೇತನರೂಪವಾದ ಪ್ರಪಂಚವೆಲ್ಲವೂ ಪರಮೇಶ್ವರನಿಂದ ನಿಯತವಾಗಿದೆ. ಮುಕ್ತನೂ ಪರಮಾತ್ಮನ ಅಧೀನನಾಗಿಯೇ ಇರುತ್ತಾನೆ ಎಂಬ ದ್ವೈತ ದರ್ಶನದ ಸಿದ್ಧಾಂತವನ್ನು ಸಮರ್ಥಿಸಲು ಈ ಗ್ರಂಥವು ಹೊರಟಿದೆ.

ವಿಮತಃ ಭಿನ್ನಃ ಮುಕ್ತತ್ವಾತ್ ಯದಿತ್ಥಂ ತತ್ತಥಾ ಯಥಾ ಸಂಪ್ರತಿಪನ್ನಃ–ಮುಕ್ತಿಯಲ್ಲಿ ಭೇದವಿದೆಯೋ ಇಲ್ಲವೇ ಎಂಬ ಸಂದೇಹಕ್ಕೆ ವಿಷಯನಾದ ಜೀವನು ಮುಕ್ತ ಎಂದು ಹೇಳುವುದರಿಂದ ಯಾವುದಾದರೊಂದು ರೀತಿಯ ಭೇದದಿಂದ ಕೂಡಿರುತ್ತಾನೆ. ಲೋಕದಲ್ಲಿ ಕಾರಾಗೃಹ ಬಂಧನದಿಂದ ಮುಕ್ತನಾದವನು ತನ್ನನ್ನು ಬಿಡಿಸಿದವರಿಗಿಂತ ಬೇರೆಯಾಗಿ ಕಂಡುಬರುವುದೇ ಇಲ್ಲಿ ದೃಷ್ಟಾಂತ. ಈ ಭೇದವು ಪಾರಮಾರ್ಥಿಕವೆಂದೇ ಹೇಳಬೇಕು. ಏಕೆಂದರೆ ಅನಿರ್ವಚನೀಯವು ಸರ್ವತ್ರ ಅಪ್ರಸಿದ್ಧ, ಮಿಥ್ಯಾಶಬ್ದವು ಅನಿರ್ವಚನೀಯ ವಾಚಕವಲ್ಲ. ರಜತಂ ಮಿಥ್ಯಾ ಎಂದರೆ ರಜತವು ಇಲ್ಲ; ರಜತಾತ್ಯಂತಾಭಾವವು ಇದೆ ಎಂದು ಅರ್ಥ.

ನಾಸದಾಸೀನ್ನೋ ಸ ದಾಸೀತ್ತದಾನೀಂ ನಾಸೀದ್ರಜೋ ನೋ ವ್ಯೋಮಾಪರೋ ಯತ್‌- ಎಂಬ ವಾಕ್ಯವೂ ಭಾವಾಭಾವವಿಲಕ್ಷಣ (ಅನಿರ್ವಚನೀಯ)ವನ್ನು ಹೇಳುವುದಿಲ್ಲ. ಪ್ರಲಯದಲ್ಲಿ ಸತ್ ಅಂದರೆ ಮೂರ್ತ, ಅಸತ್ ಅಂದರೆ ಅಮೂರ್ತ ಇವೆರಡೂ ಇರಲಿಲ್ಲ, ತಮಸ್ಸು ಒಂದೇ ಇತ್ತು ಎಂದು ಹೇಳುತ್ತದೆ. ಪತ್ತು ಶೂನ್ಯವಾದವೂ ನಿರ್ವಿಶೇಷಬ್ರಹ್ಮವಾದವೂ ಸಮಾನವಾಗಿವೆ. 'ಪ್ರತ್ಯಕ್ಷಾನು ಮಾನಾಗಮವಿರುದ್ಧತ್ವಾತ್ ಅಭೇದ ವಿಷಯವತ್ ಪ್ರತೀಯಮಾನಾನ್ಯಪಿ ವಾಕ್ಯಾನಿ ಸಾದೃಶ್ಯಾದ್ಯರ್ಥಾನ್ಯೇವ ಯೋಜನೀಯಾನಿ' ಎಂದು ಹೇಳುತ್ತಾ ಎಲ್ಲಾ ವಾಕ್ಯಗಳಿಗೂ ಜೀವೇಶ್ವರ ಭೇದಪರವಾಗಿಯೇ ಅರ್ಥಹೇಳಬೇಕೆಂದು ಸಿದ್ಧಾಂತಿಸಿದ್ದಾರೆ. 'ಅತೋ ಮುಕ್ತೇಭ್ಯೋsಪ್ಯನ್ಯ ಏವ ಸಮಸ್ತಗುಣಪರಿಪೂರ್ಣೋ ಭಗವಾನ್ ವಿಷ್ಣುರಿತಿ ಸಿದ್ಧಂ' ಎಂದು ಗ್ರಂಥದ ಉಪಸಂಹಾರವನ್ನು ಮಾಡಿದ್ದಾರೆ.

ಕರ್ಮನಿರ್ಣಯ ಎಂಬ ಗ್ರಂಥವು ವೇದದ ಕರ್ಮಕಾಂಡದ ಅರ್ಥವನ್ನು ನಿರ್ಣಯಿಸುವ ಕ್ರಮವನ್ನು ತಿಳಿಸುತ್ತದೆ. ಕೆಲವು ಮಂತ್ರಗಳ ಅರ್ಥವನ್ನು ಬರೆದಿರುವುದಲ್ಲದೆ 'ವಿಧಿಲಿಙ್' ಲಕಾರದ ಅರ್ಥವು 'ಇಷ್ಟಸಾಧನತ್ವ' ವೆಂದು ಸಮರ್ಥಿಸಲಾಗಿದೆ.

## ವಿಷ್ಣುತತ್ತ್ವನಿರ್ಣಯ

ಇದು ಪ್ರಕರಣ ಗ್ರಂಥಗಳಲ್ಲಿ ದೊಡ್ಡದು ಹಾಗೂ ಪ್ರಕರಣರಾಜ ಎಂಬ ಪ್ರಸಿದ್ಧಿಯನ್ನು ಪಡೆದಿದೆ. ಇದರಲ್ಲಿ ಮೂರು ಪರಿಚ್ಛೇದಗಳಿವೆ. ಮೊದಲನೆಯ ಪರಿಚ್ಛೇದದಲ್ಲಿ ವಿಷ್ಣುವಿಗೆ 'ಸದಾಗಮೈಕವಿಜ್ಞೇಯತ್ವ'ವನ್ನು ಸಮರ್ಥಿಸಿದ್ದಾರೆ. ಋಗ್ವೇದಾದಿ ಸಕಲಸಚ್ಛಾಸ್ತ್ರಗಳಿಂದ ಪರಮಾತ್ಮನನ್ನು ತಿಳಿಯಬೇಕೇ ಹೊರತು, ಪ್ರತ್ಯಕ್ಷ, ಅನುಮಾನ, ದುರಾಗಮಗಳಿಂದ ಪರಮಾತ್ಮನನ್ನು ತಿಳಿಯಲಾಗುವುದಿಲ್ಲ. ವೇದವನ್ನು ಅಪ್ರಾಮಾಣವೆಂದು ನಿಶ್ಚಯಿಸಲು ಬರುವುದಿಲ್ಲ. ವೇದಕ್ಕೆ ಅಪ್ರಾಮಾಣ್ಯ ಇಲ್ಲವೆಂದು ನಿಶ್ಚಯಿಸಲು ಸಾಧ್ಯವಿರುವುದರಿಂದ ವೇದವು ಪರಮ ಪ್ರಮಾಣ. ಇಂತಹ ವೇದವು ಅಪೌರುಷೇಯ, ಚಾರ್ವಾಕದರ್ಶನವು-ಬೌದ್ಧ ಜೈನ ದರ್ಶನಗಳೂ ಪ್ರಮಾಣವಲ್ಲ. ಅಪೌರುಷೇಯವಾಕ್ಯವನ್ನು ಒಪ್ಪದಿದ್ದರೆ, ಧರ್ಮಾಧರ್ಮಾದಿಗಳನ್ನು ಒಪ್ಪುವ ಶಾಸ್ತ್ರಕಾರರಿಗೆ ಅನೇಕ ಕಲ್ಪನಾಗೌರವವು ಬರುತ್ತದೆ ಪ್ರಾಮಾಣ್ಯವು ಸ್ವತಃ, ಅಪ್ರಾಮಾಣ್ಯವು ಪರತಃ, ವರ್ಣಗಳು ನಿತ್ಯ.

ಇಯಂ ಮಾತಾ ಅಯಂ ಪಿತಾ ಇತ್ಯಾದೌ ಅಂಗುಲಿ ಪ್ರಸಾರಣಾದಿಪೂರ್ವಕನಿರ್ದೇಶೇನೈವ ಹಿ ತತ್ (ಮಾತ್ರಾದಿ ಶಬ್ದವಾಚ್ಯತಯಾ)ಜಾನಾತಿ' ಎಂದು ಹೇಳುತ್ತಾ ಇವಳು ತಾಯಿ ಇವನು ತಂದೆ ಇತ್ಯಾದಿಸ್ಥಳದಲ್ಲಿ ಸಿದ್ಧಾರ್ಥದಲ್ಲಿ ವ್ಯುತ್ಪತ್ತಿ ಕಂಡು ಬಂದಿರುವುದರಿಂದ ಕಾರ್ಯಾನ್ವಿತಾರ್ಥದಲ್ಲಿ ವ್ಯುತ್ಪತ್ತಿಯನ್ನು ಹೇಳಬೇಕೆಂಬ ನಿರ್ಬಂಧವು ಯುಕ್ತವಲ್ಲ. ತಾರ್ಕಿಕರು

ಹೇಳುವಂತೆ ಕೇವಲ ಅನುಮಾನದಿಂದ ಈಶ್ವರನನ್ನು ಸಾಧಿಸಲು ಬರುವುದಿಲ್ಲ. ವಿಮತಂ ಸಕರ್ತೃಕಂ ಕಾರ್ಯತ್ವಾತ್ ಘಟವತ್ ಎಂದು ಹೇಳಿದರೆ ವಿಮತಂ ವಿಕರ್ತೃಕಂ ಅಸ್ಮತ್ ಸಂಮತಕರ್ತೃ ರಹಿತತ್ವಾತ್ ಆತ್ಮವತ್ ಎಂಬ ಅನುಮಾನದಿಂದ ವಿರೋಧ ಬರುತ್ತದೆ. ಭೇದವು ಪ್ರತ್ಯಕ್ಷಾನುಮಾನಸಿದ್ಧವಾಗಿದ್ದರೆ ಅದರ ವಿರೋಧದಿಂದಲೇ ಅಭೇದಾಗಮಕ್ಕೆ ಆಪಾತತಃ ತೋರತಕ್ಕ ಅರ್ಥದಲ್ಲಿ ಅಪ್ರಮಾಣ್ಯ ಬರುತ್ತದೆ. ದೋಷಶಂಕಾಕಲಂಕಿತವಾದ ಪ್ರತ್ಯಕ್ಷಾನುಮಾನಗಳು ದುರ್ಬಲವಾದುದರಿಂದ ಅಭೇದಾಗಮಕ್ಕೆ ಅವುಗಳಿಂದ ವಿರೋಧವು ಬರುವುದಿಲ್ಲವೆಂದಾದರೆ, ಭೇದವನ್ನು ಹೇಳುವ ಆಗಮವಾಕ್ಯಗಳು ದುರ್ಬಲವಲ್ಲವೇದಾಯಿತು. ಹೀಗೆ ಭೇದದಲ್ಲಿ ಅಪೂರ್ವತ್ವವೆಂಬ ತಾತ್ಪರ್ಯಲಿಂಗವು ಸ್ವತಃ ಸಿದ್ಧವಾಯಿತು. ವಿಷ್ಣುವಿನ ಸರ್ವೋತ್ತಮತ್ವವನ್ನು ಪ್ರತಿಪಾದಿಸುವುದರಲ್ಲಿಯೇ ಸಮಸ್ತ ಆಗಮಗಳಿಗೂ ತಾತ್ಪರ್ಯವಿದೆ. ಇದಕ್ಕೆ ಬಾಧಕದಂತೆ ಕಾಣಿಸುವ ಪ್ರಮಾಣಗಳು ದುರ್ಬಲಗಳು. ಅವುಗಳಿಗೆ ಬೇರೆ ಅರ್ಥವನ್ನು ಹೇಳಬೇಕು. ಹೀಗೆ ಒಂದನೆಯ ಪರಿಚ್ಛೇದದಲ್ಲಿ ವಿಷಯವನ್ನು ಹೇಳಿ–ಎರಡನೆಯ ಪರಿಚ್ಛೇದದಲ್ಲಿ ಬ್ರಹ್ಮಾದೀಕ್ಷರ ಜೀವರಿಗಿಂತಲೂ, ಕೂಟಸ್ಥನಾಮಕಳಾದ ಅಕ್ಷರಶಬ್ದವಾಚ್ಯಳಾದ ಲಕ್ಷ್ಮಿಗಿಂತಲೂನಾರಾಯಣನು ಉತ್ತಮನೆಂದೂ, ಮೂರನೆಯ ಪರಿಚ್ಛೇದದಲ್ಲಿ ನಾರಾಯಣನು ನಿರ್ದೋಷನು ಮತ್ತು ಅಶೇಷಸದ್ಗುಣಪೂರ್ಣನು ಎಂದು ಸಾಧಿಸಿದ್ದಾರೆ. ಹೀಗೆ ಮೂರು ಪರಿಚ್ಛೇದದಲ್ಲಿ ಸಾದಿಸಿರುವ ವಿಷಯವನ್ನು ಮಂಗಲ ಪದ್ಯದಲ್ಲಿಯೇ ಸೂಚಿಸಿದ್ದಾರೆ. "ಸದಾಗಮೈಕ ವಿಜ್ಞೇಯಂ ಸಮತೀತಕ್ಷರಾಕ್ಷರಂ । ನಾರಾಯಣಂ ಸದಾ ವಂದೇ ನಿರ್ದೋಷಾಶೇಷಸದ್ಗುಣಂ ॥" ಎಂಬುದು ವಿಷ್ಣುತತ್ತ್ವವಿನಿರ್ಣಯದ ಮಂಗಳ ಶ್ಲೋಕವು.

## ಋಗ್‌ಭಾಷ್ಯ

ಇದನ್ನು ಋಕ್‌ಪ್ರಸ್ಥಾನವೆಂಬ ಪ್ರತ್ಯೇಕಪ್ರಸ್ಥಾನವೆಂದೇ ಪರಿಗಣಿಸಲಾಗುತ್ತದೆ. ಋಗ್ವೇದದ ಪ್ರಥಮಾಷ್ಟಕದ ೧, ೨ನೇ ಅಧ್ಯಾಯಗಳಿಗೂ, ೩ನೇ ಅಧ್ಯಾಯದ ಕೆಲವು ಋಕ್ಕುಗಳಿಗೂ ಮಧ್ವಾಚಾರ್ಯರು ಆಧ್ಯಾತ್ಮಪರವಾದ ಅರ್ಥವನ್ನು ಬರೆದಿದ್ದಾರೆ. 'ಅತೋ ದೇವಾ ಅವಂತು ನೋ ಯತೋ ವಿಷ್ಣುರ್ವಿಚಕ್ರಮೇ । ಪೃಥಿವ್ಯಾಃ ಸಪ್ತಧಾಮಭಿಃ ॥' ಎಂಬ ಋಕ್ಕಿಗೆ ಹೀಗೆ ಭಾಷ್ಯಬರೆದಿದ್ದಾರೆ–ಅಸುರೇಭ್ಯೋ ಜಗತ್ ಹೃತ್ವಾ ಯತೋ ವಿಷ್ಣುಸ್ತ್ರಿವಿಕ್ರಮೈಃ । ಅರಭ್ಯ ಪೃಥಿವೀಂ ಸಪ್ತಲೋಕೈಃ ಸಾಕಂ ಜಗತ್‌ಪತಿಃ । ಚಕ್ರೇಸುರಾನ್ ಪದಸ್ಥಾನಪ್ಯತೋ ದೇವಾ ಅವಂತು ನಃ ॥

ವಿಶಿಷ್ಟಬಲಚೇಷ್ಟತ್ವಾತ್ ವಿಷ್ಣುರಿತ್ಯಭಿಧಾ ಹರೇಃ। ಪ್ರಾಣಂ ಬಲಂ ಷೇಕಾರಃ ಚ ಣಕಾರಂ ಚಾಹ ಹಿ ಶ್ರುತಿಃ ॥ 'ವಿಷ್ಣುವು ತ್ರಿವಿಕ್ರಮನಾಗಿ ಅವತರಿಸಿ ಅಸುರರಿಂದ ಜಗತ್ತನ್ನು ಅಪಹರಿಸಿ, ಭೂಮಿಯಿಂದ ಆರಂಭಿಸಿ ಮೇಲಿನ ಸಪ್ತಲೋಕಗಳನ್ನೂ ದೇವತೆಗಳಿಗೆ ಕೊಟ್ಟು

ಅವರನ್ನು ಪದಸ್ಥರನ್ನಾಗಿ ಮಾಡಿದನು. ವಿಷ್ಣುವಿನಿಂದ ಮರಳಿ ಸ್ವಸ್ಥಾನಪಡೆದ ದೇವತೆಗಳು ನಮ್ಮನ್ನು ಕಾಪಾಡಲಿ. ಇಲ್ಲಿರುವ ವಿಷ್ಣುಶಬ್ದಕ್ಕೆ ವಿಶೇಷವಾದ ಪ್ರಾಣಶಕ್ತಿ ಮತ್ತು ಬಲವುಳ್ಳವನೆಂದು ಅರ್ಥ. ಆ ಅರ್ಥವನ್ನು ಶ್ರುತಿಯೇ ಹೇಳುತ್ತದೆ. ಈ ರೀತಿಯಾಗಿ ಋಕ್ಕುಗಳಿಗೆ ಅಧ್ಯಾತ್ಮ ಪರವಾಗಿ ಅರ್ಥವನ್ನು ಮಾಡುವದಾರಿಯನ್ನು ಅವರು ತೋರಿಸಿ ಕೊಟ್ಟಿದ್ದಾರೆ.

ಮಧ್ವಾಚಾರ್ಯರು ಮೇಲಿನ ಗ್ರಂಥಗಳನ್ನು ಮಾತ್ರವಲ್ಲ ಯಮಕಭಾರತವೆಂಬ ಯಮಕ ಶಬ್ದಾಲಂಕಾರ ಭರಿತವಾದ ಕಾವ್ಯಗ್ರಂಥವನ್ನೂ ನರಸಿಂಹನಖಸ್ತುತಿ, ದ್ವಾದಶಸ್ತೋತ್ರ, ಕೃಷ್ಣಾಮೃತಮಹಾರ್ಣವ, ತಂತ್ರಸಾರ ಸಂಗ್ರಹ, ಸದಾಚಾರಸ್ಮೃತಿ, ಯತಿಪ್ರಣವಕಲ್ಪ, ಜಯಂತೀ ನಿರ್ಣಯ ಇತ್ಯಾದಿ ಗ್ರಂಥಗಳನ್ನು ರಚಿಸಿದ್ದಾರೆ ಆದರೆ ಇವುಗಳಲ್ಲಿ ದರ್ಶನಕ್ಕೆ ಸಂಬಂಧಿಸಿದ ವಿಷಯಗಳು ಅಲ್ಪವೆಂದು ಕಾಣುವುದರಿಂದ ಅವುಗಳ ಬಗ್ಗೆ ಹೆಚ್ಚಿನ ವಿಮರ್ಶೆಯು ಇಲ್ಲಿ ಅಗತ್ಯವಿಲ್ಲ.

ಹೀಗೆ ಮಧ್ವಾಚಾರ್ಯರು ಬರೆದಿರುವ ಗ್ರಂಥಗಳ ಯೋಜನೆಯನ್ನು ನೋಡಿದಾಗ ವೇದವ್ಯಾಸರು ಪ್ರತಿಷ್ಠಾಪಿಸಿದ ವೈದಿಕಧರ್ಮ ತತ್ತ್ವಜ್ಞಾನ ಮತ್ತು ಸಂಸ್ಕೃತಿಗಳ ಸಮನ್ವಯವನ್ನು ಮಾಡುವ ಉದ್ದೇಶವು ಅವರಿಗಿದ್ದಂತೆ ಕಂಡುಬರುತ್ತದೆ. ಅವರು ಪ್ರಸ್ಥಾನತ್ರಯಕ್ಕೆ ಭಾಷ್ಯಗಳನ್ನು ಬರೆದು ಅಲ್ಲಿ ಇತಿಹಾಸ ಪುರಾಣ ವೇದಗಳ ವಿಪುಲವಾದ ಆಧಾರವನ್ನು ತೋರಿಸಿ 'ಒಂದು ಸರ್ವೋತ್ತಮತತ್ತ್ವಕ್ಕೆ ಎಲ್ಲವೂ ಅಧೀನ ಸತ್ಯ' ಎಂಬ ತತ್ತ್ವವಾದ ಅನುಸ್ಯೂತತೆಯನ್ನು ಎಲ್ಲೆಡೆಯಲ್ಲಿಯೂ ದೃಢವಾಗಿ ಪ್ರತಿಪಾದಿಸಿದರು. ಮಹಾಭಾರತ, ಭಾಗವತ, ಋಗ್ವೇದಗಳಿಗೆ ವ್ಯಾಖ್ಯಾನಮಾಡಿ ಇತಿಹಾಸ ಪುರಾಣ ವೇದಗಳು ಇದನ್ನೇ ಹೇಳುವುವು ಎಂದು ದೃಢಪಡಿಸಿದರು.

ಅಶೇಷಗುಣಪೂರ್ಣತ್ವಂ ಸರ್ವದೋಷಸಮುಜ್ಝಿತಿಃ ।
ವಿಷ್ಣೋರಸ್ಯಚ್ಚ ತತ್ತಂತ್ರಂ ಇತಿ ಸಮ್ಯಗ್ವಿನಿರ್ಣಯಃ ॥

ಪರಮಾತ್ಮನು ಸರ್ವಗುಣಪೂರ್ಣ, ನಿರ್ದೋಷ, ಪರಮಸ್ವತಂತ್ರ, ಜೀವಜಡಗಳೆಲ್ಲವೂ ಸರ್ವಥಾ ಸರ್ವಾತ್ಮನಾ ಅವನ ಅಧೀನ. ಅವು ಸರ್ವಥಾ ಸತ್ಯ, ಮತ್ತು ಪರಮಾತ್ಮನಿಗಿಂತ ಅತ್ಯಂತ ಭಿನ್ನ ಎಂಬುದು ದ್ವೈತದರ್ಶನದ ತಿರುಳು. ವಿಷ್ಣುವಿನ ಸರ್ವೋತ್ತಮತ್ವ, ಜಗತ್‌ಸತ್ಯತ್ವ, ಜೀವ ಜಡ ಪರಮಾತ್ಮರ ಪರಸ್ಪರ ಭೇದಗಳು ಜೀವತ್ರೈವಿಧ್ಯ, ಪರಮಾತ್ಮನಿಗೆ ಜೀವರು ಪ್ರತಿಬಿಂಬರು. ಮಾಹಾತ್ಮ್ಯಜ್ಞಾನ ಪೂರ್ವಕವಾದ ಸದೃಢಸ್ನೇಹವೇ ಭಕ್ತಿ. ಅದರಿಂದಲೇ ಮೋಕ್ಷ, ಪರಮಾತ್ಮನಿಗಿಂತ ಅತ್ಯಂತ ಭಿನ್ನವಾದ ಜೀವಸ್ವರೂಪಾನಂದಾ ವಿರ್ಭಾವವೇ ಮುಕ್ತಿ. ಇವು ಮಧ್ವಾಚಾರ್ಯರು ಪ್ರತಿಪಾದಿಸಿದ ಮುಖ್ಯ ಪ್ರಮೇಯಗಳು. ಪ್ರತ್ಯಕ್ಷ, ಅನುಮಾನ, ಆಗಮ ಎಂಬುದಾಗಿ ಮೂರೇ ಪ್ರಮಾಣಗಳು. ವೇದಶಾಸ್ತ್ರಗಳ

ತಾತ್ಪರ್ಯವನ್ನು ಉಪಕ್ರಮ ಉಪಸಂಹಾರ, ಅಭ್ಯಾಸ, ಅಪೂರ್ವತಾ ಫಲ, ಅರ್ಥವಾದಗಳೆಂಬ ತಾತ್ಪರ್ಯಲಿಂಗಗಳಿಂದ ತಿಳಿಯಬೇಕು. ಇವುಗಳೆಲ್ಲವೂ ಯುಕ್ತಿಸಹಕೃತವಾಗಿರಬೇಕು. ಶ್ರುತಿ, ಲಿಂಗ, ವಾಕ್ಯ, ಪ್ರಕರಣ ಸ್ಥಾನಸಮಾಖ್ಯಾ ಇವುಗಳನ್ನು ಉಪಯೋಗಿಸಿಕೊಂಡು ಶ್ರುತಿಗಳ ಸಾವಕಾಶತ್ವ ನಿರವಕಾಶತ್ವಗಳನ್ನು ವಿಮರ್ಶಿಸಿ ಅವುಗಳ ತಾತ್ಪರ್ಯವನ್ನು ಕೂಲಂಕಷವಾಗಿ ನಿರ್ಧರಿಸಬೇಕು. ಪರಮ ಮುಖ್ಯ ವೃತ್ತಿ ಮತ್ತು ವಿದ್ವದ್ರೂಢಿಗಳಿಂದ ಎಲ್ಲಾಶಬ್ದಗಳೂ ಪರಮಾತ್ಮನ ಆಯಾಗುಣಗಳನ್ನು ತೋರಿಸುತ್ತಾ ಪರಮಾತ್ಮವಾಚಕವಾಗಿವೆ. ಬ್ರಹ್ಮಸೂತ್ರಾರ್ಥವನ್ನು ದೃಷ್ಟಿಯಲ್ಲಿಟ್ಟುಕೊಂಡೇ ಎಲ್ಲಾನಿರ್ಣಯವನ್ನು ಮಾಡಬೇಕು. ಬ್ರಹ್ಮಸೂತ್ರಗಳ ಮೊದಲನೆಯ ಅಧ್ಯಾಯದಲ್ಲಿ ಪರಮಾತ್ಮನ ಗುಣಪರಿಪೂರ್ಣತ್ವವನ್ನೂ, ಎರಡನೆಯ ಅಧ್ಯಾಯದಲ್ಲಿ ನಿರ್ದೋಷತ್ವವನ್ನೂ, ಮೂರನೆಯ ಅಧ್ಯಾಯದಲ್ಲಿ ವೈರಾಗ್ಯ ಭಕ್ತಿಉಪಾಸನಾದಿಗಳನ್ನೂ, ನಾಲ್ಕನೆಯ ಅಧ್ಯಾಯದಲ್ಲಿ ಕರ್ಮಕ್ಷಯ, ಉತ್ಕ್ರಮಣ, ಮಾರ್ಗ, ಮುಕ್ತಿಸ್ವರೂಪ, ಮುಕ್ತರ ಭೋಗಗಳನ್ನೂ ಹೇಳಿದೆ. ಭಗವದ್ಗೀತೆಯಲ್ಲಿ ಪರಮಾತ್ಮನ ಸರ್ವೋತ್ತಮತ್ವವನ್ನು ಪ್ರತಿಪಾದಿಸಿ, ಜೀವನು ಸರ್ವಥಾ ಅವನ ಅಧೀನನು ಎಂದು ತಿಳಿಸಿ, ಭಗದರ್ಪಣಬುದ್ಧಿಯಿಂದ ಅಭಿಮಾನತ್ಯಾಗಮಾಡಿ ಎಲ್ಲರೂ ಕರ್ಮಮಾಡಬೇಕೆಂದೂ, ಜ್ಞಾನದ ಪರಿಪಾಕವಿಶೇಷರೂಪವಾದ ಭಕ್ತಿಯಿಂದಲೇ ಮೋಕ್ಷವೆಂದೂ ಪತ್ರಿಪಾದಿಸಲಾಗಿದೆ. ಉಪನಿಷತ್ತುಗಳು ಪರಮಾತ್ಮನ ಅನಂತ ಕಲ್ಯಾಣ ಗುಣಗಳನ್ನೂ ನಿರ್ದೋಷತ್ವವನ್ನೂ ಜೀವರ ಸ್ವರೂಪ ಅವರ ಸಾಧನ ಪ್ರಕಾರಗಳನ್ನೂ ತಿಳಿಸುವ ಪರವಿದ್ಯೆಗಳು, ಅಂದರೆ ಸರ್ವದಾ ಪರಮಾತ್ಮಪ್ರತಿಪಾದಕ ವಿದ್ಯೆಗಳು. ಇತರ ವೇದ ಭಾಗಗಳನ್ನು ಪರಮಾತ್ಮನ ಪರವಾಗಿ ಗ್ರಹಿಸಿದಾಗ ಅವೂ ಪರವಿದ್ಯೆಗಳು. ಇವುಗಳೆಲ್ಲವೂ ಸತ್ಯವಾದ ಮಹಿಮೆಗಳನ್ನೇ ವರ್ಣಿಸುವುವು. ತಾತ್ಪರ್ಯತಃ ಪರಮಾತ್ಮನ ಸರ್ವೋತ್ತಮತ್ವವನ್ನೇ ಪ್ರತಿಪಾದಿಸುವುವು. ಪರಮಾತ್ಮನ ಮೂಲರೂಪಗಳಿಗೂ ಅವತಾರರೂಪಗಳಿಗೂ ಭೇದವಿಲ್ಲ. ಮುಕ್ತಿಯೋಗ್ಯಜೀವರು ಸಚ್ಚಿದಾನಂದಸ್ವರೂಪರು, ಪರಮಾತ್ಮನ ಪ್ರತಿಬಿಂಬರು, ಅವನ ಅಧೀನರು, ಅವನಿಗೆ ಸದೃಶರು, ಜೀವ ಜಡ ಎಲ್ಲವೂ ಸ್ವರೂಪಸತ್ತಾ, ಪ್ರಮಿತಿ, ಪ್ರವೃತ್ತಿಗಳಲ್ಲಿ ಪರಮಾತ್ಮನ ಅಧೀನ. ಜೀವರು ಸಂಸಾರದಶೆಯಲ್ಲಿ ವಿಹಿತಕರ್ಮಾನುಷ್ಠಾನ, ವೈರಾಗ್ಯ, ಭಕ್ತಿ, ಜ್ಞಾನಗಳಿಂದ ಸಾಧನಸಂಪತ್ತನ್ನು ನಿರಂತರವಾಗಿ ಹೆಚ್ಚಿಸಿಕೊಂಡು, ಪರಮಾತ್ಮನ ಅಪರೋಕ್ಷಜ್ಞಾನ ಭಕ್ತಿ ವೈರಾಗ್ಯಗಳಿಂದ ಮುಕ್ತಿಯನ್ನು ಪಡೆಯಲು ಪ್ರಯತ್ನಿಸಬೇಕು. ಸೂತ್ರನಾಮಕವಾದ ವಾಯುವೇ ಮುಖ್ಯ ಗುರುವು. ತನಗಿಂತ ಉತ್ತಮರಾದ ಎಲ್ಲರೂ ಗುರುಗಳು, ಎಲ್ಲಾ ಜೀವರಲ್ಲಿಯೂ ಮೈತ್ರೀ, ಕರುಣೆ, ಸಂತೋಷ ಭಾವಗಳನ್ನು ಬೆಳೆಸಿಕೊಂಡು ಎಲ್ಲರ ಸೇವೆಯನ್ನು ಪರಮಾತ್ಮನ ಸೇವೆಯೆಂದು ಅನುಸಂಧಾನಮಾಡುತ್ತಾ ನಡೆಸಬೇಕು. ಭಾಗವತಧರ್ಮಾನುಷ್ಠಾನಪರರಾಗಿ ಜೀವನವನ್ನು ಸಾರ್ಥಕಗೊಳಿಸಿಕೊಳ್ಳಬೇಕು. ಇವೇ ಮಧ್ವಾಚಾರ್ಯರ ಗ್ರಂಥಗಳಲ್ಲಿ ಸಾರಭೂತವಾಗಿ ಬಂದಿರುವ ಉಪದೇಶಗಳು.

ಇವರ ನಂತರ ದ್ವೈತದರ್ಶನದ ಗ್ರಂಥಕಾರರಲ್ಲಿ ಶ್ರೀಜಯತೀರ್ಥರು (ಟೀಕಾಚಾರ್ಯರು) ಮಧ್ವಾಚಾರ್ಯರ ಗ್ರಂಥಗಳಿಗೆ ಟೀಕೆ ಬರೆದವರಲ್ಲಿ ಪ್ರಸಿದ್ಧರು. ಆದರೆ ಅವರಿಗಿಂತಲೂ

ಮೊದಲು ದ್ವೈತದರ್ಶನಕ್ಕೆ ವ್ಯಾಖ್ಯಾನ ಮತ್ತು ಮೂಲಗ್ರಂಥಗಳನ್ನು ಬರೆದು ಅನೇಕರು ತಮ್ಮ ಕರ್ತವ್ಯವನ್ನು ನಿರ್ವಹಿಸಿದ್ದಾರೆ. ಮಧ್ವಾಚಾರ್ಯರ ಅನಂತರ ಅವರ ಸಾಕ್ಷಾತ್ ಶಿಷ್ಯರಾದ ಉಡುಪಿಯ ಅಷ್ಟಮಠಗಳಿಗೆ ಸೇರಿದ ಫಲಿಮಾರು ಮಠದ ಹೃಷಿಕೇಶತೀರ್ಥರು ಮಧ್ವಾಚಾರ್ಯರು ರಚಿಸಿದ ಮೂಲಗ್ರಂಥಗಳ ಒಂದು ಪ್ರತಿಯನ್ನು ಸ್ವಹಸ್ತದಿಂದ ಬರೆದಿಟ್ಟಿದ್ದಾರೆ. ಸಂಪ್ರದಾಯಪದ್ಧತಿ ಮತ್ತು ಅಣಿಮಧ್ವಚರಿತ ಎಂಬ ಎರಡು ಗ್ರಂಥಗಳನ್ನು ಬರೆದು ಮಧ್ವಾಚಾರ್ಯರು ಮತ್ತು ಅವರ ಶಿಷ್ಯರ ಬಗ್ಗೆ ಕೆಲವು ವಿಷಯಗಳನ್ನು ತಿಳಿಸಿದ್ದಾರೆ.

## ತ್ರಿವಿಕ್ರಮ ಪಂಡಿತಾಚಾರ್ಯರು

## (ಕ್ರಿ.ಶ. ೧೨೫೮ ರಿಂದ ಕ್ರಿ.ಶ. ೧೩೨೦)

ಇವರು ಕಾಸರಗೋಡು ತಾಲೂಕಿನ ಕುಂಬಳೆ ಎಂಬಲ್ಲಿಂದ ಆಳುತ್ತಿದ್ದ ಜಯಸಿಂಹ ರಾಜನ ಆಸ್ಥಾನ ಪಂಡಿತರು. ಸುಮಾರು ಕ್ರಿ.ಶ. ೧೩೦೦ರಲ್ಲಿ ಮಧ್ವಾಚಾರ್ಯರ ದ್ವೈತ ಸಿದ್ಧಾಂತವನ್ನು ಅಂಗೀಕರಿಸಿ ಅವರ ಶಿಷ್ಯರಾದರು. ಇವರ ತಂದೆಯು ಸುಬ್ರಹ್ಮಣ್ಯ ಪಂಡಿತ. ತ್ರಿವಿಕ್ರಮಪಂಡಿತರು ಬಾಲ್ಯದಲ್ಲಿಯೇ ಉಷಾಹರಣವೆಂಬ ಕಾವ್ಯವನ್ನು ಬರೆದರು. ತತ್ತ್ವಪ್ರದೀಪಿಕಾ ಎಂಬ ಹೆಸರಿನಿಂದ ಮಧ್ವಾಚಾರ್ಯರ ಬ್ರಹ್ಮಸೂತ್ರಭಾಷ್ಯಕ್ಕೆ ವ್ಯಾಖ್ಯಾನವನ್ನು ಬರೆದಿದ್ದಾರೆ. ಇದು ಸುಮಾರು ೫,೦೦೦ ರಸಭರಿತವಾದ, ಅಲ್ಲಲ್ಲಿ ಆಲಂಕಾರಿಕ ಶೈಲಿಯಿಂದ ಬರೆದಿರುವ ಶಾಸ್ತ್ರೀಯ ವ್ಯಾಖ್ಯಾನಗ್ರಂಥವಾಗಿದೆ. 'ಅಲ್ಪಾಕ್ಷರಮಸಂದಿಗ್ಧಂ ಸಾರವದ್ವಿಶ್ವತೋಮುಖಮ್ । ಅಸ್ತೋಭಮನವದ್ಯಂ ಚ ಸೂತ್ರಂ ಸೂತ್ರವಿದೋ ವಿದುಃ' ಎಂಬ ಭಾಷ್ಯೋಕ್ತವಾದ ಸೂತ್ರಲಕ್ಷಣವನ್ನು ಇವರು ಈ ರೀತಿ ವ್ಯಾಖ್ಯಾನಮಾಡುತ್ತಾರೆ. 'ಯಾವದ್ಭಿರಕ್ಷರೈರ್ವಿನಾ ವಿವಕ್ಷಿತಾರ್ಥಸಿದ್ಧಿಸ್ತಾವನ್ಮಾತ್ರಾಕ್ಷರಮಲ್ಪಾಕ್ಷರಂ, ತದ್ವಚನಂ ಭಾಷ್ಯವ್ಯಾವೃತ್ತ್ಯರ್ಥಂ. ವಿಶೇಷಣಾಂತರಾಣಾಂ ಭಾಷ್ಯೇಽಪ್ಯನುವರ್ತನೀಯತ್ವಾತ್, ಅಸಂದಿಗ್ಧಂ ನಿರ್ಣೀತಾರ್ಥಂ, ನಿರ್ಣಯಹೇತುರಹಿತವಾಕ್ಯಾದ್ ವ್ಯಾವೃತ್ತ್ಯರ್ಥಂ, ಸಾರವತ್ ಉತ್ತಮಾರ್ಥಂ, ಕುಶಲಪುರುಷೋಕ್ತಲೋಕವಾರ್ತಾದಿವ್ಯಾವೃತ್ತ್ಯರ್ಥಂ, ವಿಶ್ವತೋಮುಖಂ ಏಕಪ್ರಯೋಜನಂ ಪ್ರತಿ ಅಪೇಕ್ಷಿತಾರ್ಥಸ್ಯಕೃತ್ಸ್ನಸ್ಯ ಪ್ರತಿಪಾದಕಂ, ಏತದನುಕ್ತೌ ಭಗವನ್ನಾಮಮಂತ್ರಾದೇಃ ಸೂತ್ರತ್ವಂಸ್ಯಾತ್. ಅರ್ಥವಿವಕ್ಷಯಾ ಅಲ್ಪಾಕ್ಷರತ್ವೇಽಪಿ ವೃಥಾಸ್ತೋಭಪದಂ ವಾ ಪಾದಪೂರಣಾರ್ಥಂ ವಾ ಮಾ ಭೂದಿತ್ಯಸ್ತೋಭಂ, ಅಪಶಬ್ದಾರ್ಥ ದೋಷವ್ಯಾವೃತ್ತ್ಯರ್ಥಂ ಅನವದ್ಯಮಿತಿ—(ತತ್ತ್ವದೀಪಿಕಾ–ಪು. ೨೦)

## ನಾರಾಯಣಪಂಡಿತಾಚಾರ್ಯ

ತ್ರಿವಿಕ್ರಮ ಪಂಡಿತಾಚಾರ್ಯರ ಮಗನಾದ ನಾರಾಯಣಪಂಡಿತಾಚಾರ್ಯರೂ ತಂದೆಯಂತೆಯೇ ಕವಿ ಮತ್ತು ದರ್ಶನವ್ಯಾಖ್ಯಾತೃವಾಗಿದ್ದಾರೆ. ಇವರಿಂದ ರಚಿತವಾದ

ಸುಮಾರು ೨೦ ಗ್ರಂಥಗಳಲ್ಲಿ ನಯಚಂದ್ರಿಕಾ ಎಂಬ ಗ್ರಂಥವು ಮಧ್ವಾಚಾರ್ಯರ ಅನುವ್ಯಾಖ್ಯಾನದ ವ್ಯಾಖ್ಯಾನ. ಈ ಗ್ರಂಥದಲ್ಲಿ ವಿಶೇಷವಾದ ವಾದವಿವಾದಗಳಿಗೆ ಎಡೆಗೊಡದೆ ಮೂಲದ ಅರ್ಥವನ್ನು ಮಾತ್ರವೇ ಪ್ರತಿಪಾದಿಸುತ್ತಾರೆ. ಇವರು ಮಧ್ವವಿಜಯವೆಂಬ ೧೬ ಸರ್ಗಗಳ ಮಹಾಕಾವ್ಯವನ್ನು ಬರೆದು ಮಧ್ವಾಚಾರ್ಯರ ಜೀವನ, ಸಂಚಾರ, ಗ್ರಂಥನಿರ್ಮಾಣ ಮುಂತಾದ ವಿಷಯಗಳನ್ನು ಪ್ರಕಾಶಗೊಳಿಸಿದ್ದಾರೆ.

## ಪದ್ಮನಾಭತೀರ್ಥರು

(ಕ್ರಿ.ಶ. ೧೩೧೮ ರಿಂದ ೧೩೨೪ ಪೀಠಾಧಿಪತ್ಯಕಾಲ)

ಮಧ್ವಾಚಾರ್ಯರ ಸಾಕ್ಷಾತ್ ಶಿಷ್ಯರು. ಬಳ್ಳಾರಿ ಜಿಲ್ಲೆಯ ಹಂಪೆಯ ಹತ್ತಿರದಲ್ಲಿರುವ ಆನೆಗೊಂದಿಯಲ್ಲಿ ತುಂಗಭದ್ರಾನದಿಯ ನಡುಗಡ್ಡೆಯಲ್ಲಿ ವೃಂದಾವನಸ್ಥರಾದರು. ಇವರು ಗೋದಾವರೀ ತೀರದವರು. ಷಡ್ದರ್ಶನಗಳಲ್ಲಿಯೂ ಅಸಾಧಾರಣ ಪಂಡಿತರಾಗಿದ್ದಲ್ಲದೆ ಆಗಿನ ಕಾಲದಲ್ಲಿ ಉಪಲಬ್ಧವಾಗಿದ್ದ ಎಲ್ಲಾ ವೇದಶಾಖೆಗಳನ್ನೂ ಅರ್ಥಸಹಿತವಾಗಿ ವ್ಯಾಖ್ಯಾನಿಸುತ್ತಿದ್ದರು. ಇವರು ಮಧ್ವಾಚಾರ್ಯರ ಶಿಷ್ಯರಾದ ಬಳಿಕ ಬರೆದಿರುವ ಕೆಲವು ಗ್ರಂಥಗಳು ಮಾತ್ರ ಸಿಕ್ಕಿವೆ. ಇವರ ನಂತರ ಬಂದ ಟೀಕಾಚಾರ್ಯರ ಗ್ರಂಥಗಳಿಂದ ಇವರ ಗ್ರಂಥಗಳು ಹಿಂದೆ ಬಿದ್ದುಹೋದರೂ ಇವರ ಗ್ರಂಥಸ್ಥ ವಿಷಯಗಳನ್ನು ಟೀಕಾಚಾರ್ಯರೇ ಮುಂತಾದ ಮುಂದಿನ ವ್ಯಾಖ್ಯಾತೃಗಳು ಪರಿಗ್ರಹಿಸಿ ವಿಸ್ತರಿಸಿದ್ದಾರೆ. ಸ್ವತಃ ಟೀಕಾಚಾರ್ಯರೇ ಇವರಿಗೆ ತಾನು ಋಣಿ ಎಂದು ಹೇಳಿಕೊಂಡಿದ್ದಾರೆ. (ಸ ಪದ್ಮನಾಭತೀರ್ಥಾರ್ಯಗೋಗಣೋಽಸ್ತುದೃಶೇ ಮಮ । ನ ತತ್ತ್ವಮಾರ್ಗೇಗಮನಂ ವಿನಾ ಯೆಂದುಪಜೀವನಂ) ಟೀಕಾಚಾರ್ಯರ ಗೀತಾತಾತ್ಪರ್ಯಟೀಕಾ ಉಪೋದ್ಘಾತ) ವಾದವಿವಾದವನ್ನು ಬೆಳೆಸದೆ ಸಂಕ್ಷಿಪ್ತವಾಗಿ ಮೂಲಾರ್ಥವನ್ನು ತಿಳಿಸುವುದು ಮಾತ್ರ ಪದ್ಮನಾಭತೀರ್ಥರ ಉದ್ದೇಶವಾಗಿದೆ.

ಬ್ರಹ್ಮಸೂತ್ರ ಭಾಷ್ಯದ ೨ನೆಯ ಅಧ್ಯಾಯದ ೨ನೆಯ ಪಾದದವರೆಗೆ ಇವರು ಸತ್ತರ್ಕ ದೀಪಾವಲಿ ಎಂಬ ಟೀಕೆಯನ್ನು ರಚಿಸಿದರು. ಇವರು ಅನುವ್ಯಾಖ್ಯಾನಕ್ಕೆ ಸನ್ನ್ಯಾಯರತ್ನಾವಲಿ ಎಂಬ ವ್ಯಾಖ್ಯಾನವನ್ನು ಬರೆದಿದ್ದಾರೆ. ಇದನ್ನು ಇವರ ಅನಂತರದ ಜಯತೀರ್ಥರು ವ್ಯಾಸರಾಜರು ಮುಂತಾದವರು ಅಲ್ಲಲ್ಲಿ ಉದಾಹರಿಸುತ್ತಾರೆ. ಇವರನ್ನು ಪ್ರಾಚೀನ ಟೀಕಾಕಾರರು ಎಂದು ಗೌರವದಿಂದ ಹೇಳುವ ರೂಢಿಯಿದೆ. ಗೀತಾಭಾಷ್ಯಕ್ಕೆ ಭಾವದೀಪಿಕಾ ಎಂಬ ವ್ಯಾಖ್ಯಾನವೂ ಇವರಿಂದ ರಚಿತವಾಗಿದೆ. ಗಾಂಭೀರ್ಯ, ಸ್ಪಷ್ಟತೆಗಳು ಇವರ ಗ್ರಂಥದ ವೈಶಿಷ್ಟ್ಯಗಳಾಗಿವೆ.

# ಜಯತೀರ್ಥರು (ಟೀಕಾಚಾರ್ಯರು)

(ಕ್ರಿ.ಶ. ೧೩೬೫–೧೩೮೮)

ದ್ವೈತದರ್ಶನವನ್ನು ಸರಿಯಾದ ಅಡಿಗಲ್ಲಿನ ಮೇಲೆ ಸ್ಥಾಪಿಸಿ ಇತರ ದರ್ಶನಗಳ ಸಮಕಕ್ಷೆಗೆ ತಂದಿಟ್ಟ ಶ್ರೇಯಸ್ಸು, ಕೀರ್ತಿ ಜಯತೀರ್ಥರಿಗೆ ಸಲ್ಲುತ್ತದೆ. ಇವರು ಮಧ್ವಾಚಾರ್ಯರ ಮೂಲ ಗ್ರಂಥಗಳಿಗೆ ಗಂಭೀರವಾದ, ಉತ್ತಮ ಟೀಕೆಗಳನ್ನು ಬರೆದು, ಇತರ ದರ್ಶನಕಾರರ ಆಕ್ಷೇಪಗಳಿಗೆ ಮಾರ್ಮಿಕವಾದ ಉತ್ತರವನ್ನು ಕೊಟ್ಟು, ದ್ವೈತದರ್ಶನದ ಸಮಗ್ರತೆಯನ್ನು ಎತ್ತಿ ಹಿಡಿದುದರಿಂದ ಇವರನ್ನು ದ್ವೈತದರ್ಶನದಲ್ಲಿ ನಿರುಪದವಾಗಿ 'ಟೀಕಾಚಾರ್ಯರು' ಎಂದು ವ್ಯವಹರಿಸುತ್ತಾರೆ. ಇವರು ಮಹಾರಾಷ್ಟ್ರಪ್ರಾಂತದ ಪಂಡರಾಪುರದ ಹತ್ತಿರ ಮಂಗಳವೇಢೆ ಎಂಬಲ್ಲಿ ಹುಟ್ಟಿದವರು. ಪಂಢರಾಪುರದಲ್ಲಿದ್ದ ಮಧ್ವಾಚಾರ್ಯರ ನಾಲ್ವರು ಪ್ರಸಿದ್ಧ ಶಿಷ್ಯರಲ್ಲಿ[1], ಕೊನೆಯವರಾದ ಅಕ್ಷೋಭ್ಯತೀರ್ಥರ ಶಿಷ್ಯರು. ಗುರುಗಳಲ್ಲಿ ಕೆಲವು ವರ್ಷ ವ್ಯಾಸಂಗ ಮಾಡಿ ತನ್ನ ಅದ್ಭುತವಾದ ಪ್ರತಿಭೆಯಿಂದ ದ್ವೈತ ದರ್ಶನದ ಅನೇಕ ಗ್ರಂಥಗಳಿಗೆ ವಿಸ್ತಾರವಾಗಿಯೂ ವಿಮರ್ಶಾತ್ಮಕವಾಗಿಯೂ ಇರುವ ವ್ಯಾಖ್ಯಾನಗಳನ್ನು ಬರೆದಿದ್ದಾರೆ. ಇವುಗಳನ್ನು ಟೀಕೆಗಳೆಂದು ಕರೆಯುತ್ತಾರೆ. ಇವರ ನಂತರ ದ್ವೈತದರ್ಶನದ ಯಾವುದೇ ವ್ಯಾಖ್ಯಾನವನ್ನಾಗಲೀ ಟಿಪ್ಪಣಿ ಎಂದು ಕರೆಯುವುದೇ ರೂಢಿಯಾಗಿದೆ.

ಜಯತೀರ್ಥರು ಸ್ವತಂತ್ರ ಮತ್ತು ವ್ಯಾಖ್ಯಾನ ರೂಪವಾಗಿ ೨೨ ಗ್ರಂಥಗಳನ್ನು ಬರೆದಿದ್ದಾರೆ.

## ತತ್ತ್ವಸಂಖ್ಯಾನಟೀಕಾ

ತತ್ತ್ವಸಂಖ್ಯಾನವೆಂಬ ಮಧ್ವಾಚಾರ್ಯರ ಗ್ರಂಥಕ್ಕೆ ಜಯತೀರ್ಥರು ಟೀಕೆಯನ್ನು ಬರೆದಿದ್ದಾರೆ—'ತತ್ತ್ವಯಾಥಾರ್ಥ್ಯ'ಕ್ಕೆ ಅವರು ಈರೀತಿ ಲಕ್ಷಣವನ್ನು ಕೊಟ್ಟಿದ್ದಾರೆ— 'ಅನಾರೋಪಿತಂ ತತ್ತ್ವಂ, 'ಪ್ರಮಿತಿವಿಷಯಃ' ಇತೀ ಯಾವತ್. ಹೀಗೆ 'ಸ್ವರೂಪಪ್ರಮಿತಿ ಪ್ರವೃತ್ತಿಲಕ್ಷಣ ಸತ್ತಾತ್ರೈವಿಧ್ಯೇ ಪರಾನಪೇಕ್ಷಂ ಸ್ವತಂತ್ರಂ, ಪರಾಪೇಕ್ಷಮಸ್ವತಂತ್ರಂ' ಎಂದು ಸ್ವತಂತ್ರಾಸ್ವತಂತ್ರ ತತ್ತ್ವಗಳಿಗೂ ಲಕ್ಷಣವನ್ನು ಕೊಟ್ಟಿದ್ದಾರೆ. ತತ್ತ್ವವಿವೇಕ ಎಂಬ ಗ್ರಂಥಕ್ಕೆ ಇವರು ಟೀಕೆಯನ್ನು ಬರೆದಿದ್ದಾರೆ. ತತ್ತ್ವಸಂಖ್ಯಾನದ ವಿಷಯವನ್ನೇ ಇಲ್ಲಿ ಶಬ್ದಾಂತರದಿಂದ ಹೇಳಿದರೂ ಅನೇಕ ಹೊಸ ವಿಷಯಗಳು ಇಲ್ಲಿವೆ. ಗುಣಗುಣಿಗಳಿಗೆ ವಿಶೇಷಬಲದಿಂದ ಭೇದವ್ಯವಹಾರ ಸಮರ್ಥನ, ನಶ್ವರವಾದ ಗುಣಗುಣಿಗಳಿಗೆ ಭೇದಾಭೇದ, ಯಾವದ್ವಸ್ತುಭಾವಿಯಾದ ಗುಣಗುಣಿಗಳಿಗೆ ಅತ್ಯಂತಾಭೇದವನ್ನು ಸಮರ್ಥಿಸಿದ್ದಾರೆ.

---

೧. ಪದ್ಮನಾಭತೀರ್ಥರು ೨. ನರಹರಿತೀರ್ಥರು ೩. ಮಾಧವತೀರ್ಥರು ೪. ಅಕ್ಷೋಭ್ಯತೀರ್ಥರು

ತತ್ತ್ವೋದ್ಯೋತಟೀಕೆಯು ಸಣ್ಣ ಪ್ರಕರಣಗ್ರಂಥಗಳ ಟೀಕೆಗಳಲ್ಲಿ ಶ್ರೇಷ್ಠವಾಗಿದೆ. ಮೂಲಗ್ರಂಥದ ಪ್ರತಿಯೊಂದು ಭಾಗವೂ ಟೀಕೆಯಿಂದ ಹೊಸ ಬೆಳಕನ್ನು ಕಾಣುತ್ತದೆ. ತತ್ತ್ವಮಸಿ ಎಂಬ ಶ್ರುತಿಗೆ ದ್ವೈತಾನುಸಾರಿಯಾಗಿ ಅರ್ಥವನ್ನು ಮಾಡುವ ಸಂದರ್ಭದಲ್ಲಿ ಜಯತೀರ್ಥರು ಹೀಗೆ ಹೇಳುತ್ತಾರೆ-ತತ್ತ್ವಮಸಿ ಇತಿ ವಾಕ್ಯೇನ ಪರಮಾತ್ಮಸಾದೃಶ್ಯ ವಿಶೇಷಃ ಪ್ರತಿಪಾದ್ಯತೇ, ಅಭೇದಸ್ಯ ಪ್ರಮಾಣಬಾಧಿತತ್ವಾತ್, ನನು ವಕ್ತರಿ ಆಯತ್ತೇ ಶಬ್ದಪ್ರಯೋಗೇ ಕಸ್ಮಾತ್ ಗೌಣಪ್ರಯೋಗಃ. ಅಸ್ತ್ಯತ್ರ ಪ್ರಯೋಜನಂ. ಇಹ ಹಿ ಮಹತ್ವಾದಿಗುಣವಂತಂ ಸ್ವಾತಂತ್ರ್ಯೇಣಾತ್ಮಾನಂ ಮತ್ವಾಸ್ತಬ್ಧಂ ಶ್ವೇತಕೇತುಂನಿಮಿತ್ತೀಕೃತ್ಯ ಸ್ವಾತಂತ್ರ್ಯಾಭಿಮಾನಿನಃ ಜೀವಜಾತಸ್ಯ ಅಹಂಕಾರಶಾಂತಯೇ 'ತತ್ತ್ವಮಸಿ' ಇತ್ಯುಚ್ಯತೇ. ತತ್ರ ಯದಿ 'ವಿಜ್ಞಾನಾನಂದ ಘನಃ ತ್ವಮಸೀ ತಿಬ್ರೂಯಾತ್ ನಾಸ್ಯಾಹಂಕಾರಶಾಂತಿಃ ಸ್ಯಾತ್ ಎಂದು ಹೇಳಿ ಗೌಣಾಭೇದವನ್ನು ಹೇಳಿದಾಗ ಸಿಗುವ ಪ್ರಯೋಜನವನ್ನು ಹೇಳುತ್ತಾರೆ. ಅಭೇದೋಕ್ತೌತು ಮೀಮಾಂಸಾ ಜಾಯಂತೇ. ನ ತಾವದತ್ರ ಮುಖ್ಯಾರ್ಥಃ ಸಂಭವತಿ ಪ್ರಮಾಣವಿರೋಧಾತ್, ಅತಃಸ ಇವ ತ್ವಮಸೀತ್ಯರ್ಥಃ. ನ ಚಾಯಮಪಿ ಸಂಭವತಿ. ಅಪ್ರಸಿದ್ಧಪ್ರತಿಪತ್ತಯೇ ಖಲು ಪ್ರಸಿದ್ಧಮುಪಮಾನ ಮುಪಾದೀಯತೇ "ಯಥಾ ಗೌಸ್ತಥಾ ಗವಯ ಇತ್ಯಾದೌದೃಷ್ಟತ್ವಾತ್, ನ ಚೈವಂ ಪ್ರಕೃತೇ. ಉಭಯೋರಪ್ಯಪ್ರಸಿದ್ಧತ್ವಾತ್. ಅತೋ ನಾಸ್ಯ ಉಪಮಾನಮಾತ್ರೇ ತಾತ್ಪರ್ಯಮಿತಿ ಪಶ್ಯನ್ ಸೂರ್ಯ ಸೂರ್ಯಕಯೋರಿವ. ಈಶ್ವರಸ್ಯ ಮಮ ಚಾಸ್ತಿ ಸಾದೃಶ್ಯವಿಶೇಷಃ ಇತಿಪಶ್ಯನ್ ಅಹಂಕಾರಂ ತ್ಯಜತಿ. ಪ್ರತಿಬಿಂಬೇ ಚಾತ್ಮನಿ ಬಿಂಬಸಮಾನಧರ್ಮಾನವಿರುದ್ಧಾನ್ ಸಂಭಾವಯತೀತಿ. ಅತಃ ಲಾಘವೇನ ಬಹೋರರ್ಥಸ್ಯ ಪ್ರತಿಪತ್ತಯೇ ತತ್ತ್ವಮಸಿ ಇತ್ಯುಚ್ಯತೇ. ಪಾರತಂತ್ರ್ಯಮಾತ್ರೋಕ್ತೌ ರಾಜಪುರುಷವದೇವ ಪ್ರತೀತಿಃಸ್ಯಾದಿತಿ (ಪುಟ ೨೬). ಛಾಂದೋಗ್ಯೋಕ್ತಿಪ ನಿಷತ್ತಿನ ವಾಚಾರಂಭಣ ಶ್ರುತಿಯಲ್ಲಿ ಕೊಟ್ಟಿರುವ ದೃಷ್ಟಾಂತಗಳ ವಿಷಯ ವಿಚಾರಮಾಡುತ್ತಾ ಅವರು ಈ ರೀತಿ ಹೇಳುತ್ತಾರೆ-ಪರಿಣಾಮ ಪರಿಣಾಮಿಗಳಿಗೆ ಅಭೇದವನ್ನು ಹೇಳುವ ಉದ್ದೇಶದಿಂದ ಈ ದೃಷ್ಟಾಂತಗಳು ಪ್ರಸಕ್ತವಾಗಿಲ್ಲ - ಮೃತ್ಪಿಂಡಸುವರ್ಣಗಳು ಮೃಣ್ಮಯ, ಸುವರ್ಣ ವಿಕಾರಗಳಿಗೆ ಕಾರಣವಾದರೂ ನಖನಿಕೃಂತನವು (ಉಗುರು ಕತ್ತರಿಸುವ ಆಯುಧ) ಸ್ವಯಂ ಕಾರ್ಯವಾಗಿದೆ. ಕಾರ್ಷ್ಣಾಯಸಕ್ಕೆ (ಕಬ್ಬಿಣಕ್ಕೆ) ಕಾರಣವಲ್ಲ. ಒಂದು ನಖನಿಕೃಂತನದ ಕಾರ್ಯವಂತೂ ಎಲ್ಲಾ ಕಬ್ಬಿಣವು ಆಗಲು ಸಾಧ್ಯವೇ ಇಲ್ಲ. ಆದ್ದರಿಂದ ಈ ದೃಷ್ಟಾಂತಗಳು ಕಾರ್ಯಕಾರಣ ಭಾವವಿವಕ್ಷೆಯಿಂದ ಪ್ರಯುಕ್ತವಾಗಿಲ್ಲ." ಎಂದು ಹೇಳುತ್ತಾರೆ. (ಪುಟ ೩೫)

ವಿಷ್ಣುತತ್ತ್ವನಿರ್ಣಯ ಟೀಕೆಯು ಪ್ರಕರಣ ಗ್ರಂಥಗಳ ಟೀಕೆಗಳಲ್ಲಿಯೇ ಬಹಳದೊಡ್ಡದು. ಪ್ರಾಚೀನ ಟೀಕಾಕಾರರಾದ ಪದ್ಮನಾಭತೀರ್ಥರು ಮತ್ತು ನರಹರಿತೀರ್ಥರ ಗ್ರಂಥಗಳ ಅಭಿಪ್ರಾಯಗಳನ್ನು ಇಲ್ಲಿ ಉದ್ಧರಿಸುವುದು ಕಂಡು ಬರುತ್ತದೆ. ಈ ಟೀಕೆಯ ಗಾಂಭೀರ್ಯ ಮತ್ತು ಮಹತ್ವಗಳಿಂದ ಇದನ್ನು 'ಅಣುಸುಧಾ' ಎಂದು ಕರೆಯುವುದುಂಟು.

ಧರ್ಮಾದಿ ಅತೀಂದ್ರಿಯ ಪದಾರ್ಥಗಳನ್ನು ಶಾಸ್ತ್ರದ ವಿಷಯವೆಂದು ಒಪ್ಪದಿದ್ದರೆ ಆವಾಕ್ಯಸಮೂಹವು ಶಾಸ್ತ್ರವೇ ಆಗುವುದಿಲ್ಲವೆಂದು ಹೇಳುತ್ತಾ ಟೀಕಾಕಾರರು ಹೀಗೆ ಹೇಳುತ್ತಾರೆ. ವಕ್ತೃಶ್ರೋತ್ರೋಃ ಅಭಿಮತಂ ಅನನ್ಯಸಾಧ್ಯಂ ಫಲಮಧಿಕೃತ್ಯ ತದ್ಧೇತುಭೂತಂ ಪ್ರಮಾಣಾಂತರಾಪ್ರಾಪ್ತಮರ್ಥಂ ಪ್ರತಿಪಾದಯತಾಂ ವಾಕ್ಯಾನಾಂ ಸಮೂಹೋ ಹಿ ಶಾಸ್ತ್ರಮುಚ್ಯತೇ ಯಥಾ ಚರಕಾದಿ.' ಚಾರ್ವಾಕ ಮತದಿಂದ ಲೋಕಕ್ಕೆ ಯಾವ ಉಪಕಾರವೂ ಇಲ್ಲ ಎಂಬ ವಿಷಯವನ್ನು ಪ್ರತಿಪಾದಿಸುತ್ತಾ– ಏತದುಕ್ತಂಭವತಿ, ಯದಿ ಧರ್ಮಾದಿ ಜ್ಞಾನಂ ಪ್ರಮಾಯ ದಿವಾ ಭ್ರಾಂತಿಃ ಸರ್ವಥಾಸರ್ವಮರ್ಯಾದಾಸ್ಥಿತಿಹೇತುತ್ವೇನ ಮಹಾಂತಮನರ್ಥಂ ಪರ್ಯಹಾರ್ಷೀತ್ । ಇದಾನೀಂ ತು ಧರ್ಮಾದ್ಯಭಾವಜ್ಞಾನೇ ಸತಿ ಸರ್ವಮರ್ಯಾದಾ ಭಂಗೇನ ಧನವನಿತಾದ್ಯಪಹಾರಾರ್ಥಿನಃ ಲೋಕಸ್ಯ ಪರಸ್ಪರ ಹಿಂಸಾದಿಕಂ ಪ್ರಾಪ್ನೋತ್ಯೇವ. ತಥಾಚ ಅಪಕಾರಏವ ಲೋಕಸ್ಯಾನೇನಕೃತೋ ಭವತಿ. ನ ಹಿ ಕಪರ್ದಿಕಾಲಾಭಾರ್ಥಂ ಲಕ್ಷಲಾಭಂ ನಾಶಯನ್ನುಪಕಾರೀ ಭವತಿ. ತತಶ್ಚ ಶ್ರೋತೃಣಾಮಿದಮಫಲಮೇವ. ಟೀಕಾಚಾರ್ಯರು ಮಾಯಾವಾದಖಂಡನವೆಂಬ ಮಧ್ವಾಚಾರ್ಯರ ಪ್ರಕರಣ ಗ್ರಂಥಕ್ಕೂ ಟೀಕೆಯನ್ನು ಬರೆದಿದ್ದಾರೆ. ಮಧ್ವಾಚಾರ್ಯರು ಮಾಡಿರುವ ಮಾಯಾವಾದದ ವಿಮರ್ಶೆಯ ಮೇಲೆ ಬಂದಿರುವ, ಖಂಡನಖಂಡಖಾದ್ಯ ಮತ್ತು ಆನಂದಬೋಧರ ಗ್ರಂಥಗಳಲ್ಲಿ ಬಂದಿರುವ ಆಕ್ಷೇಪಗಳನ್ನು ಉದ್ಧರಿಸಿ ಇಲ್ಲಿ ನಿರಾಕರಿಸಿದ್ದಾರೆ.

ಜನ್ಮಾದ್ಯಸ್ಯ ಯತಃ (ಬ್ರ.ಸೂ.೧।೧।೨) ಎಂಬಲ್ಲಿ ಹೇಳಿರುವ ಜಗಜ್ಜನ್ಮಾದಿ ಕಾರಣತ್ವವೆಂಬ ಲಕ್ಷಣವು ಜಗತ್ತುಸತ್ಯವಾಗದಿದ್ದಲ್ಲಿ ಸರಿಹೊಂದುವುದಿಲ್ಲ. ಆದುದರಿಂದ ಜಗತ್ತನ್ನು ಮಿಥ್ಯಾ ಎಂದು ಪ್ರತಿಪಾದಿಸುವ ಅನುಮಾನವನ್ನು ನಿರಾಕರಿಸಲು ಹೊರಟಿರುವ ಈ ಪ್ರಕರಣ ಗ್ರಂಥದ ವ್ಯಾಖ್ಯಾನವು ಬಹಳ ಪ್ರೌಢವಾದ ಶೈಲಿಯಿಂದ ಹೊರಟಿದೆ.

ಉಪಾಧಿಖಂಡನ, ಪ್ರಮಾಣಲಕ್ಷಣ, ಕಥಾಲಕ್ಷಣ, ಕರ್ಮನಿರ್ಣಯ ಎಂಬ ಪ್ರಕರಣ ಗ್ರಂಥಗಳಿಗೂ ಟೀಕಾಚಾರ್ಯರು ಟೀಕೆಯನ್ನು ಬರೆದಿದ್ದಾರೆ.

ಸೂತ್ರಸ್ಥಾನದಲ್ಲಿ ಮಧ್ವಾಚಾರ್ಯರ ಬ್ರಹ್ಮಸೂತ್ರಭಾಷ್ಯಕ್ಕೆ ಜಯತೀರ್ಥರು ತತ್ತ್ವ ಪ್ರಕಾಶಿಕಾ ಎಂಬ ವ್ಯಾಖ್ಯಾನವನ್ನು ಬರೆದಿದ್ದಾರೆ. ಬ್ರಹ್ಮಸೂತ್ರಭಾಷ್ಯದ ಈ ವ್ಯಾಖ್ಯಾನವು ಅವರ ಹಿಂದೆ ಬಂದಿರುವ ಮತ್ತು ಅನಂತರ ರಚಿತವಾದ ಎಲ್ಲಾ ವ್ಯಾಖ್ಯಾನಗಳನ್ನೂ ಮರೆ ಮಾಚಿತು. ಇದರ ಶೈಲಿಯು ಸರಳವಾಗಿದ್ದು ಅಧಿಕರಣರಚನಾಕ್ರಮವು ಹೃದಯಂಗಮವಾಗಿದೆ. ಇದರ ಸರಳಶೈಲಿಯಿಂದಲೇ 'ಯೇಷಾಂ ಕ್ವಾಪಿ ಗತಿರ್ನಾಸ್ತಿತೇಷಾಂ ತತ್ತ್ವಪ್ರಕಾಶಿಕಾ, ಎಂಬ ನುಡಿಯು ಪ್ರಸಿದ್ಧವಾಗಿದೆ. ಆದರೆ ಸಂದರ್ಭ ಬಂದಾಗ ಭಾಷ್ಯವಿರುದ್ಧವಾದ ಅಭಿಪ್ರಾಯವನ್ನು ಸಂಕ್ಷಿಪ್ತವಾಗಿಯೂ ಗಂಭೀರವಾಗಿಯೂ ಟೀಕಿಸುವುದು ಈ ಗ್ರಂಥದ ವೈಶಿಷ್ಟ್ಯ. ವಾಸ್ತವಿಕವಾಗಿ ಈ ಟೀಕೆಯು ಬಹುಗಂಭೀರವೆಂದೇ ಪರಿಗಣಿಸಲಾಗುತ್ತದೆ. ಇದಕ್ಕೂ ಮಿಕ್ಕಿ ವ್ಯಾಖ್ಯಾನ

ಗ್ರಂಥಗಳೂ ಹೊರಟಿವೆ. ಶ್ರೀವ್ಯಾಸರಾಜರ 'ತಾತ್ಪರ್ಯಚಂದ್ರಿಕಾ' ಗ್ರಂಥವೂ ಈ ಟೀಕೆಯ ಒಂದು ರೀತಿಯ ವಿಸ್ತೃತವ್ಯಾಖ್ಯಾನವೇ ಆಗಿದೆ.

೨ನೆಯ ಜನ್ಮಾಧಿಕರಣದ ರಚನಾಕ್ರಮವು ಹೀಗಿದೆ. ಇಲ್ಲಿ ಶ್ರುತ್ಯುಕ್ತವಾದ ಬ್ರಹ್ಮಕ್ಕೆ ವಿಷ್ಣುತ್ವವನ್ನು ಸಮರ್ಥನೆ ಮಾಡಿರುವುದರಿಂದ ಶ್ರುತ್ಯರ್ಥನಿರ್ಣಾಯಕ ನ್ಯಾಯಗ್ರಂಥ ನಾತ್ಮಕವಾದುದರಿಂದ ಶಾಸ್ತ್ರಾಂತರ್ಭಾವ ಸಂಗತಿಯಿಂದೆ. 'ತದ್ವಿಜಿಜ್ಞಾಸಸ್ವ ತದ್ಬ್ರಹ್ಮ' ಎಂದು ಉಕ್ತವಾದ ಬ್ರಹ್ಮಕ್ಕೆ ವಿಷ್ಣುತ್ವಸಮರ್ಥನ ಮಾಡದಿದ್ದರೆ ಗುಣಪೂರ್ಣತ್ವವು ಸಿದ್ಧಿಸುವುದಿಲ್ಲ. ಅದರ ಹೊರತು ಜೀವಭೇದವು ಸಿದ್ಧಿಸುವುದಿಲ್ಲ. ಹಾಗೂ ಇಲ್ಲಿ ಶ್ರುತ್ಯುಕ್ತವಾದ ಬ್ರಹ್ಮವೇ ವಿಷಯ. ಅದು ವಿಷ್ಣುವೇ ಜೀವನೇ ಎಂದು ಸಂದೇಹ. ಬ್ರಹ್ಮಪದವನ್ನು ಎರಡೂ ಸ್ಥಳಗಳಲ್ಲಿ ಪ್ರಯೋಗಿಸುವುದೇ ಸಂದೇಹ ಬೀಜವು. ಈ ಬ್ರಹ್ಮವು ಜೀವನೇ ಎಂದು ಪೂರ್ವಪಕ್ಷ. 'ಬೃಹಜಾತಿ ಜೀವಕಮಲಾಸನಶಬ್ದರಾಶಿಷು' ಎಂಬುದಾಗಿ ಬ್ರಹ್ಮಶಬ್ದವು ಜೀವನಲ್ಲಿ ರೂಢವಾಗಿದೆ. ವಿಷ್ಣುವಿನಲ್ಲಿ ಬ್ರಹ್ಮಶಬ್ದವು ಪ್ರವೃತ್ತವಾದರೂ ಯೋಗದಿಂದಲೇ ಪ್ರವರ್ತಿಸುತ್ತದೆ. ರೂಢಿಯೋಗಗಳೆರಡರಲ್ಲಿ ರೂಢಿಯೇ ಬಲವತ್ತಾದುದರಿಂದ ಬ್ರಹ್ಮನೆಂದರೆ ಜೀವನೆಂದೇ ಅರ್ಥ. ರೂಢಿಯನ್ನು ಬಿಟ್ಟು ಯೋಗವನ್ನು ಅಂಗೀಕರಿಸುವುದು ಯುಕ್ತವಲ್ಲ. ಬಾಧಕವಿಲ್ಲದೆ ಎಲ್ಲಿಯೂ ಮುಖ್ಯಾರ್ಥವನ್ನು ಬಿಡಬಾರದಷ್ಟೆ! ಇಲ್ಲಿ ಬಾಧಕ ವಿಲ್ಲ. ಜೀವನು ಸ್ವಪ್ರಕಾಶನಾದುದರಿಂದ ಸಂದಿಗ್ಧನಲ್ಲ. ಆದುದರಿಂದ ಅವನ ಜಿಜ್ಞಾಸೆ ಯನ್ನು ಮಾಡಬೇಕಾಗಿಲ್ಲ. ಆದುದರಿಂದ ಬ್ರಹ್ಮಜಿಜ್ಞಾಸೆಯು ಕರ್ತವ್ಯವಲ್ಲ. ಎಂದು ಪೂರ್ವಪಕ್ಷ. ಇಲ್ಲಿ ಸಿದ್ಧಾಂತ ಹೀಗಿದೆ—ನಿರ್ಬಾಧರೂಢಿಬಲದಿಂದ ಜೀವನೇ ಬ್ರಹ್ಮನೆಂದು ಪೂರ್ವಪಕ್ಷ ಪ್ರಾಪ್ತವಾಯಿತು. ಆದರೆ ಶ್ರುತಿಯಲ್ಲಿ ಜಿಜ್ಞಾಸ್ಯಬ್ರಹ್ಮನಿಗೆ ಜಗಜ್ಜನ್ಮಾದಿಕಾರಣತ್ವ ವೆಂಬ ಲಕ್ಷಣ ಹೇಳಿದ್ದಾರೆ. ಈ ಲಕ್ಷಣವು ವಿಷ್ಣುವಿಗೆ ಹೊರತು ಜೀವನಿಗೆ ಸಂಭವಿಸುವುದಿಲ್ಲ. ಆದುದರಿಂದ ಬ್ರಹ್ಮಶಬ್ದವು ಜೀವನಲ್ಲಿ ರೂಢವಾಗಿದ್ದರೂ ಬಾಧಕವಿರುವುದರಿಂದ ಜಿಜ್ಞಾಸ್ಯವಾದ ಶ್ರುತ್ಯುಕ್ತವಾದ ಬ್ರಹ್ಮವು ವಿಷ್ಣುವೇ."

ಇದೇ ರೀತಿ ೨೨೩ ಅಧಿಕರಣಗಳನ್ನು ರಚಿಸಿ ಪೂರ್ವಪಕ್ಷ ಸಿದ್ಧಾಂತಗಳನ್ನು ಸ್ಪಷ್ಟವಾಗಿ ತೋರಿಸಿ ಭಾಷ್ಯಕ್ಕೆ ಉತ್ತಮ ರೀತಿಯಲ್ಲಿ ವ್ಯಾಖ್ಯಾನ ಮಾಡಿದ್ದಾರೆ.

## ನ್ಯಾಯಸುಧಾ

ಈ ಗ್ರಂಥವು ದ್ವೈತದರ್ಶನದ ಪರಮೋತ್ಕೃಷ್ಟಗ್ರಂಥ. ಇದು ೨೪,೦೦೦ ಗ್ರಂಥದಷ್ಟಿದೆ. ಇದನ್ನು ಸುಧಾ ಎಂದೇ ಚಿಕ್ಕದಾಗಿ ವ್ಯವಹರಿಸುವ ಪದ್ಧತಿಯಿಂದೆ. ಸುಧೆಯನ್ನಾದರೂ ಓದಬೇಕು, ವಸುಧೆಯನ್ನಾದರೂ ಪಾಲಿಸಬೇಕು (ಸುಧಾ ವಾ ಪಠನೀಯಾ ವಸುಧಾ ವಾ ಪಾಲನೀಯಾ) ಎಂಬ ಸಾಂಪ್ರದಾಯಿಕರ ಬಾಯಿಮಾತು ಈ ಗ್ರಂಥದ ಮಹತ್ತ್ವವನ್ನು ಸೂಚಿಸುತ್ತದೆ. ಈ ಗ್ರಂಥದ ಹೆಸರು 'ವಿಷಮಪದವಾಕ್ಯಾರ್ಥ ವಿವೃತಿ' ಎಂದು ಪಾದಗಳ ಕೊನೆಯಲ್ಲಿ ಕಂಡುಬಂದರೂ, ಇದಕ್ಕೆ ನ್ಯಾಯಸುಧಾ ಎಂಬ ಹೆಸರನ್ನು ಗ್ರಂಥಕಾರರೇ ಇಟ್ಟಿರುತ್ತಾರೆ.

ಅನುವ್ಯಾಖ್ಯಾಮೃತಾಂಬೋಧೇಃ ಸಮುತ್ಪನ್ನಾತಿನಿರ್ಮಲಾ । ಇಯಂ ನ್ಯಾಯಸುಧಾ ಭೌಮೈರ್ವಿಬುಧೈಃ ಸೇವ್ಯತಾಂ ಸದಾ ॥)

ಶಾಂಕರಭಾಷ್ಯ, ಭಾಸ್ಕರಭಾಷ್ಯ, ರಾಮಾನುಜಭಾಷ್ಯ, ಯಾದವಪ್ರಕಾಶಭಾಷ್ಯ, ಭಾಮತೀವಿವರಣ, ಇವುಗಳವಿಷಯಗಳನ್ನೂ, ಪ್ರಕಾಶಾತ್ಮ, ಅಮಲಾನಂದರ ವಿಚಾರ ಧಾರೆಗಳನ್ನೂ ಇಲ್ಲಿ ತೀಕ್ಷ್ಣವಾಗಿ ವಿಮರ್ಶಿಸಿ ದ್ವೈತ ಸಿದ್ಧಾಂತಕ್ಕೆ ವಿರುದ್ಧವಾದ ಅಂಶಗಳನ್ನು ನಿರಾಕರಿಸಲಾಗಿದೆ. ಸಾಂಖ್ಯತತ್ತ್ವಕೌಮುದೀ, ತತ್ತ್ವಬಿಂದು, ನ್ಯಾಯಕುಸುಮಾಂಜಲಿ, ಖಂಡನಖಂಡಖಾದ್ಯ, ಚಿತ್ಸುಖೀ, ಮಾನಮನೋಹರಕಾರ, ನ್ಯಾಯಲೀಲಾವತೀ, ತತ್ತ್ವಚಿಂತಾಮಣಿ ಗ್ರಂಥಗಳ ಅಭಿಪ್ರಾಯವನ್ನು ಅನುವಾದಿಸಿ ಖಂಡಿಸಲಾಗಿದೆ. ಸಮಯಪಾದದಲ್ಲಿ (ಅಧ್ಯಾ ೨ ಪಾದ ೨) ನ್ಯಾಯ, ವೈಶೇಷಿಕ, ಭಾಟ್ಟಪ್ರಾಭಾಕರ, ಸಾಂಖ್ಯಯೋಗ, ಬೌದ್ಧ, ಜೈನ, ಪಾಶುಪತ, ಶಾಕ್ತ ಮತಗಳನ್ನು ಚೆನ್ನಾಗಿವಿಮರ್ಶಿಸಲಾಗಿದೆ. ಸ್ಫೋಟವಾದವನ್ನು ಅನುವಾದಿಸಿ ಖಂಡಿಸಿದೆ. ಅನೇಕ ಕಡೆ ಮೂಲದ ಶ್ಲೋಕಗಳನ್ನು ವಾದಿಗಳ ಅನೇಕ ಆಕ್ಷೇಪಗಳಿಗೂ ಉತ್ತರರೂಪವಾಗಿ ಉದಾಹರಿಸಿ ಸರಿಯಾಗಿ ಅದಕ್ಕೆ ವ್ಯಾಖ್ಯಾನ ಮಾಡಿರುವುದು ಈ ಟೀಕೆಯ ಮತ್ತೊಂದು ವೈಶಿಷ್ಟ್ಯ. ಪ್ರತ್ಯಕ್ಷದಂತೆಯೇ ಸ್ವತ ಏವ ಆಗಮಕ್ಕೂ ಪ್ರಾಮಾಣ್ಯವಿದೆ. (ಪ್ರತ್ಯಕ್ಷವಚ್ಚ ಪ್ರಾಮಾಣ್ಯಂ ಸ್ವತ ಏವಾಗಮಸ್ಯಹಿ) ಈ ವಾಕ್ಯವನ್ನು ವಾದಿಗಳ ಬೇರೆ ಬೇರೆ ವಿಧವಾದ ಏಳು ಪೂರ್ವಪಕ್ಷಗಳಿಗೂ ಉತ್ತರರೂಪವಾಗಿ ವ್ಯಾಖ್ಯಾನಿಸಲಾಗಿದೆ. ಅನ್ಯಥಾಕಲ್ಪನೆ ಮಾಡಿದರೆ ಗೌರವದೋಷ ಬರುತ್ತದೆ. (ಗೌರವಂ ಕಲ್ಪನೇಽನ್ಯಥಾ) ಎಂಬ ಶ್ಲೋಕವನ್ನು ೫ ವಿಧವಾದ ಬೇರೆ ಬೇರೆಪೂರ್ವಪಕ್ಷಗಳಿಗೆ ಉತ್ತರರೂಪವಾಗಿ ಬಳಸಿದ್ದಾರೆ. ಈ ಗ್ರಂಥವು ಉತ್ತಮ ಶೈಲಿಯ ಶಾಸ್ತ್ರಗ್ರಂಥಕ್ಕೆ ಒಂದು ನಿದರ್ಶನ. ಅನೇಕ ಕಡೆ ಮೂಲದಲ್ಲಿ ಸೂಚಿತವಾಗಿಯೇ ಕಾಣುತ್ತಿರುವ ಆಕ್ಷೇಪಗಳು ಮತ್ತೆ ಅಲ್ಲಿಯೇ ಇರುವ ಉತ್ತರಗಳನ್ನು ಹೃದಯಂಗಮವಾಗಿ ಮಾರ್ಮಿಕವಾಗಿ ಚಿತ್ರಿಸಿದ್ದಾರೆ. ಪಾಣಿನೀಯವ್ಯಾಕರಣ ದೃಷ್ಟಿಯಿಂದ ಕೆಲವು ವಿಲಕ್ಷಣವಾದ ಪ್ರಯೋಗಗಳು. ಅವರ ಸಮಕಾಲೀನರು ಅವುಗಳನ್ನು ಟೀಕಿಸಿರಲಿಲ್ಲ. ಅನಂತರದವರು ಅಪಾಣಿನೀಯ ಪ್ರಯೋಗಗಳ ದೂಷಣೆಯನ್ನೇ ದೊಡ್ಡ ಅಸ್ತ್ರವನ್ನಾಗಿ ಮಾಡಿಕೊಂಡಾಗ ಜಯತೀರ್ಥರು ಈ ಆಕ್ಷೇಪಗಳನ್ನೆಲ್ಲಾ ಯುಕ್ತಿಯುಕ್ತವಾಗಿ ಪರಿಹರಿಸಿದ್ದಾರೆ ಉಪನಿಷದ್‌ವಾಕ್ಯಗಳ ಯೋಜನೆಯನ್ನು ಉತ್ತಮ ರೀತಿಯಲ್ಲಿ ನಿರ್ವಹಿಸಿದ್ದಾರೆ. ಖ್ಯಾತಿವಾದ ಸಾಕ್ಷಿ, ಭೇದ, ವಿಶೇಷಗಳ ವಿಚಾರವನ್ನು ಕೂಲಂಕುಷವಾಗಿ ಚರ್ಚಿಸಿದ್ದಾರೆ. ಈ ಗ್ರಂಥವು ದ್ವೈತದರ್ಶನದ ವಿಶ್ವಕೋಶದಂತಿದೆ ಎಂದೂ ಅಭಿಪ್ರಾಯವಿದೆ. ಉಪನಿಷದ್ ವಾಕ್ಯಗಳ ಅರ್ಥಯೋಜನಾಕ್ರಮವನ್ನು ಅವರು ಹೀಗೆ ತಿಳಿಸುತ್ತಿದ್ದಾರೆ—ಸರ್ವಾಣ್ಯಪಿ ಹಿ ವೇದಾಂತವಾಕ್ಯಾನಿ ಅಸಂಖ್ಯೇಯಕಲ್ಯಾಣಗುಣಾಕರು ಸಕಲದೋಷಗಂಧವಿಧುರ ಏಕರೂಪಮೇವ ಪರಂ ಬ್ರಹ್ಮ ಪ್ರತಿಪಾದಯಂತಿ— (೧) ಕಿಂತು ಕಾನಿಚಿತ್ ಸರ್ವಜ್ಞತ್ವ ಸರ್ವೇಶ್ವರತ್ವ ಸರ್ವಾಂತರ್ಯಾಮಿತ್ವ, ಸೌಂದರ್ಯೌದಾರ್ಯಾದಿಗುಣವಿಶಿಷ್ಟತಯಾ (೨) ಕಾನಿಚಿತ್ ಅಪಹತಪಾಪ್ಮತ್ವ ನಿರ್ದುಃಖತ್ವ

ಪ್ರಾಕೃತಭೌತಿಕವಿಗ್ರಹರಹಿತತ್ವಾದಿ ದೋಷಾಭಾವವಿಶಿಷ್ಟತಯಾ, (೩) ಕಾನಿಚಿತ್ ಅತಿಗಹನತಾಜ್ಞಾಪನಾಯ ವಾಙ್ಮನಸಾಗೋಚರತ್ವಾಕಾರೇಣ, (೪) ಕಾನಿಚಿತ್ ಸರ್ವಪರಿತ್ಯಾಗೇನ ತಸ್ಯೈವ ಉಪಾದಾನಾಯ ಅದ್ವಿತೀಯತ್ವೇನ, (೫) ಕಾನಿಚಿತ್ ಸರ್ವಸತ್ತಾಪ್ರತೀತಿಪ್ರವೃತ್ತಿನಿಮಿತ್ತತಾಪ್ರತಿಪತ್ತ್ಯರ್ಥಂ ಸರ್ವಾತ್ಮಕತ್ವೇನ, ಇತ್ಯೇವಮಾದ್ಯನೇಕಪ್ರಕಾರೈಃ ಪರಮಪುರುಷಂ ಬೋಧಯಂತಿ. ತತೋ ವ್ಯಾಕುಲಬುದ್ಧಯಃ ಗುರುಸಂಪ್ರದಾಯವಿಕಲಾಃ ಅಶ್ರುತವೇದವ್ಯಾಖ್ಯಾತಾರಃ ಸರ್ವತ್ರಾಪ್ಯೇಕರೂಪತಾಂ ಅನುಸಂದಧಾನಾಃ ವೇದಂ ವಿಚ್ಛಿಂದಂತಿ. (ವ್ಯಾ.ಸು.) ದ್ವಿರೂಪಂ ಹಿ ಬ್ರಹ್ಮ ಅವಗಮ್ಯತೇ, ವೇದಾಂತವಾಕ್ಯೇಷು. ನಾಮರೂಪವಿಕಾರೋಪಾಧಿವಿಶಿಷ್ಟಂ, ತದ್ವಿಪರೀತಂ ಚ ಸರ್ವೋಪಾಧಿವಿವರ್ಜಿತಂ ......ಏವಮಪೇಕ್ಷಿತೋಪಾಧಿಭೇದಂ ಬ್ರಹ್ಮ ಉಪಾಸ್ಯತ್ವೇನ, ನಿರಸ್ತಸಮಸ್ತೋಪಾಧಿಭೇದಂ ತಂ ಜ್ಞೇಯತ್ವೇನೋಪದಿಶತಿ–ಎಂಬ ಅದ್ವೈತವೇದಾಂತ ದರ್ಶನದ ಅಭಿಪ್ರಾಯಕ್ಕೆ ಮೇಲಿನ ವಾಕ್ಯವು ನೇರವಿರುದ್ಧವಾಗಿದೆ ಎಂಬುದನ್ನು ಗಮನಿಸಬಹುದು.

ಮಾಹಾತ್ಮ್ಯಜ್ಞಾನಪೂರ್ವಕ ಸುದೃಢಸ್ನೇಹವೇ ಭಕ್ತಿ. ಈ ಭಕ್ತಿಯ ಸ್ವರೂಪವನ್ನು ಟೀಕಾಕಾರರು ಹೀಗೆ ವಿವರಿಸುತ್ತಾರೆ–ಪರಮೇಶ್ವರಭಕ್ತಿರ್ನಾಮ ನಿರವಧಿಕಾನಂತಾನವದ್ಯಕಲ್ಯಾಣಗುಣತ್ವಜ್ಞಾನಪೂರ್ವಕಃ ಸ್ವಾತ್ಮಾತ್ಮೀಯಸಮಸ್ತವಸ್ತುಭ್ಯಃ ಅನೇಕ ಗುಣಾಧಿಕಃ ಅಂತರಾಯಸಹಸ್ರೇಣಾಪ್ಯಪ್ರತಿಬದ್ಧಃ ನಿರಂತರಪ್ರೇಮಪ್ರವಾಹಃ, ಯಮಧಿಕೃತ್ಯ ಯತ್ರ ನಾನ್ಯತ್ಪಶ್ಯತಿ, ಸಾ ನಿಶಾ ಪಶ್ಯತೋ ಮುನೇರಿತ್ಯಾದಿಶ್ರುತಿಸ್ಮೃತಯಃ (ನ್ಯಾ. ಸು.೧೭ನೇಪತ್ರ).

ಟೀಕಾಚಾರ್ಯರು ಮಧ್ವಾಚಾರ್ಯರ ನ್ಯಾಯವಿವರಣಗ್ರಂಥದ ೧ನೇ ಅಧ್ಯಾಯದ ೧, ೨ನೇ ಪಾದಗಳಿಗೆ ಟೀಕೆಯನ್ನು ಬರೆದಿದ್ದಾರೆ. ೧೬ನೆಯ ಶತಮಾನದಲ್ಲಿ ಬಂದ ರಘೂತ್ತಮತೀರ್ಥರೆಂಬವರು ಅದನ್ನು ಪೂರ್ತಿಗೊಳಿಸಿದ್ದಾರೆ. ಷಟ್‌ಪ್ರಶ್ನಭಾಷ್ಯಟೀಕಾ, ಈಶಾವಾಸ್ಯ ಭಾಷ್ಯಟೀಕಾ, ಋಗ್‌ಭಾಷ್ಯಟೀಕಾ, ಗೀತಾಭಾಷ್ಯಟೀಕಾ, ಪ್ರಮೇಯದೀಪಿಕಾ, ಗೀತಾತಾತ್ಪರ್ಯ ಟೀಕಾ, ನ್ಯಾಯದೀಪಿಕಾ ಇವು ಟೀಕಾಚಾರ್ಯರ ಇತರ ಟೀಕಾಗ್ರಂಥಗಳು.

ವಾದಾವಲೀ ಮತ್ತು ಪ್ರಮಾಣಪದ್ಧತಿಯೆಂಬ ಎರಡು ಸ್ವತಂತ್ರಗ್ರಂಥಗಳನ್ನು ಜಯತೀರ್ಥರು ಬರೆದಿದ್ದಾರೆ. ವಾದಾವಲಿಯಲ್ಲಿ ' ಖಂಡನತ್ರಯ, ತತ್ತ್ವೋದ್ಯೋತ, ವಿಷ್ಣುತತ್ತ್ವವಿನಿರ್ಣಯ ಮುಂತಾದ ಗ್ರಂಥಗಳಲ್ಲಿ ಹೇಳಿರುವ ಪ್ರಪಂಚಮಿಥ್ಯಾತ್ವ ವಿಷಯದ ಅನುಮಾನಗಳ ಖಂಡನೆಯು ಹೆಚ್ಚು ವಿವರವಾಗಿ ಕ್ರಮಬದ್ಧವಾದ ರೀತಿಯಿಂದ ಬಂದಿದೆ. ಅವಿದ್ಯೆಯ ಲಕ್ಷಣ, ಪ್ರಮಾಣಗಳ ಅನುವಾದನಿರಾಕರಣೆ ಮುಂತಾದ ಅನೇಕ ವಿಷಯಗಳನ್ನು

ಇಲ್ಲಿ ಪ್ರಸ್ತಾಪಿಸುತ್ತಾರೆ. ವ್ಯಾಸರಾಜರಿಂದ ರಚಿತವಾದ ನ್ಯಾಯಾಮೃತ ಗ್ರಂಥಕ್ಕೆ ಇದೇ ಮೂಲವಾಗಿದೆ. ಪ್ರಮಾಣಪದ್ಧತಿಯಲ್ಲಿ ಪ್ರಮಾಣಲಕ್ಷಣದಲ್ಲಿ ಮಧ್ವಾಚಾರ್ಯರು ಹೇಳಿರುವ ವಿಷಯವನ್ನೇ ಸುಲಭವಾದ ರೀತಿಯಿಂದ ಬೇರೆ ಕ್ರಮದಿಂದ ಟೀಕಾಚಾರ್ಯರು ಹೇಳುತ್ತಾರೆ. ಈ ಗ್ರಂಥವು ಭಾಸರ್ವಜ್ಞನೆಂಬ ಕಾಶ್ಮೀರ ತಾರ್ಕಿಕನ ನ್ಯಾಯಸಾರವೆಂಬ ಗ್ರಂಥವನ್ನು ಹೋಲುತ್ತದೆ.

ಟೀಕಾಚಾರ್ಯರ ಅಭಿಪ್ರಾಯವನ್ನು ದ್ವೈತದರ್ಶನದ ಯಾವ ಗ್ರಂಥಕಾರರೂ ಮೀರಿಹೋಗಿಲ್ಲ. ಇವರ ಗ್ರಂಥಗಳ ಗಾಂಭೀರ್ಯ, ಪರಿಪೂರ್ಣತೆಗಳೇ ಇದಕ್ಕೆ ಕಾರಣವೆಂದು ಹೇಳಬೇಕಾಗಿದೆ.

## ಷಡ್ದರ್ಶನೀವಲ್ಲಭವಿಷ್ಣುದಾಸಾಚಾರ್ಯರು

ಇವರು ಮಧ್ವಾಚಾರ್ಯರ ಪರಂಪರೆಯಲ್ಲಿ ಬಂದ ರಾಜೇಂದ್ರತೀರ್ಥರೆಂಬ (ವ್ಯಾಸರಾಯ ಮಠದ ಪ್ರಮುಖ ಗುರುಗಳು) ಸಂನ್ಯಾಸಿಗಳ ಶಿಷ್ಯರು (ಕ್ರಿ.ಶ. ೧೩೯೦-೧೪೪೦). ವಾದರತ್ನಾವಲೀ ಎಂಬ ಇವರ ಗ್ರಂಥವು ಮೀಮಾಂಸಾ ಮತ್ತು ವ್ಯಾಕರಣಶಾಸ್ತ್ರಗಳನ್ನು ಅವಲಂಬಿಸಿ ದ್ವೈತಸಿದ್ಧಾಂತವನ್ನು ಅನುಸರಿಸಿ ಶ್ರುತಿಯ ಅರ್ಥಗಳನ್ನು ವಿಸ್ತಾರವಾಗಿ ನಿರೂಪಿಸುತ್ತದೆ. ತತ್ತ್ವಮಸಿ, ಏಕಮೇವಾದ್ವಿತೀಯಂ, ನೇಹ ನಾನಾಸ್ತಿಕಿಂಚನ ಮುಂತಾದ ಶ್ರುತಿಗಳನ್ನು ವ್ಯಾಖ್ಯಾನಿಸಲಾಗಿದೆ. ಮಹಾಭಾಷ್ಯ, ಕೈಯಟನ ಪ್ರದೀಪ, ಪದಮಂಜರೀ ಮುಂತಾದ ಗ್ರಂಥಗಳನ್ನು ಇಲ್ಲಿ ಉದಾಹರಿಸಲಾಗಿದೆ. ವಿವರಣವಿಡಂಬನ ಮತ್ತು ಖಂಡನ ಖಂಡನ ಎಂಬ ಎರಡು ಗ್ರಂಥಗಳನ್ನು ಇವರು ರಚಿಸಿದ್ದಾರೆಂದು ವಾದರತ್ನಾವಳಿಯಿಂದ ತಿಳಿದು ಬರುತ್ತದೆ. ಆದರೆ ಅವೆರಡು ಗ್ರಂಥಗಳ ಹಸ್ತಪ್ರತಿಗಳು ಸಿಕ್ಕಿಲ್ಲ.

ವಿಶ್ವಂ ಸತ್ಯಂ ಹರಿಃ ಕರ್ತಾ ಜೀವೋಽನ್ಯಃ ಪರಮಾರ್ಥತಃ।
ವೇದಃ ಸತ್ಯಂ ಪ್ರಮಾಣಂ ಚೇತ್ಯೇವಂ ವ್ಯಾಸಮತಸ್ಥಿತಿಃ ॥

ಎಂದು ಆರಂಭದಲ್ಲಿ ಪ್ರತಿಜ್ಞೆ ಮಾಡಿ ಇವರು ವಾದರತ್ನಾವಳಿಯಲ್ಲಿ ತನ್ನ ವಾದವನ್ನು ಸಮರ್ಥಿಸುತ್ತಾರೆ.

## ವ್ಯಾಸತೀರ್ಥರು (ವ್ಯಾಸರಾಜರು)

### (ಕ್ರಿ. ಶ. ೧೪೭೮-೧೫೩೯)

ವ್ಯಾಸರಾಯ, ವ್ಯಾಸರಾಜ, ವ್ಯಾಸತೀರ್ಥರು, ವ್ಯಾಸರಾಯಸ್ವಾಮಿ ಎಂಬ ಹೆಸರುಗಳಿಂದ

ಕರೆಯಲ್ಪಡುವ ಇವರು ವಿಷ್ಣುದಾಸಾಚಾರ್ಯರ ಗುರುಗಳಾದ ರಾಜೇಂದ್ರತೀರ್ಥರಿಂದ ನಾಲ್ಕನೆಯವರು. ಸೋಮನಾಥಕವಿಯು ಬರೆದಿರುವ ವ್ಯಾಸಯೋಗಿಚರಿತವೆಂಬ ಚಂಪೂ ಕಾವ್ಯದಿಂದಲೂ, ವಿಜಯನಗರಸಾಮ್ರಾಜ್ಯ ಕಾಲದ ದಾಖಲೆಪತ್ರಗಳು ಮತ್ತು ಕೆಲವು ಶಾಸನಗಳಿಂದಲೂ, ಅವರ ಗ್ರಂಥಗಳಿಂದಲೂ ವ್ಯಾಸರಾಜರ ಚರಿತ್ರೆಯನ್ನು ತಿಳಿಯಬಹುದು. ಕ್ರಿ.ಶ. ೧೪೬೦ರಲ್ಲಿ ಸೋಸಲೆಯ (ಮೈಸೂರು ಜಿಲ್ಲಾ) ಹತ್ತಿರದ ಬನ್ನೂರು ಎಂಬಲ್ಲಿ ಇವರು ಹುಟ್ಟಿದರು. ಇವರ ಆಶ್ರಮಗುರುಗಳು ಬ್ರಹ್ಮಣ್ಯತೀರ್ಥರು, ವಿಜಯನಗರದ ಅನೇಕ ಚಕ್ರವರ್ತಿಗಳಿಗೆ ಇವರು ರಾಜಗುರುಗಳಾಗಿದ್ದರು. ೧೫೩೯ರಲ್ಲಿ ತುಂಗಭದ್ರಾ ನಡುಗಡ್ಡೆಯಲ್ಲಿ (ಹಂಪೆಯ ಹತ್ತಿರ) ವೃಂದಾವನಸ್ಥರಾದರು. ಇವರು ಅನೇಕ ಸಂನ್ಯಾಸಿಗಳಿಗೂ ವಿದ್ಯಾಗುರುಗಳಾಗಿದ್ದರು. ಪುರಂದರದಾಸರು ಮತ್ತು ಕನಕದಾಸರು ಇವರ ಶಿಷ್ಯರು.

## ವ್ಯಾಸತೀರ್ಥರ ಕೃತಿಗಳು

ವ್ಯಾಸರಾಜರು ಒಟ್ಟು ಎಂಟು ವೇದಾಂತಗ್ರಂಥಗಳನ್ನು ಬರೆದಿದ್ದಾರೆ. ಅವರು ಸತ್ತರ್ಕವಿಲಾಸವೆಂಬ ಗ್ರಂಥವನ್ನು ಬರೆದಿದ್ದಾರೆಂದು ಪ್ರಸಿದ್ಧಿಯಿದೆ. ಆದರೆ ಆ ಗ್ರಂಥವು ಇನ್ನೂ ಸಿಕ್ಕಿಲ್ಲ. ನ್ಯಾಯಾಮೃತತರ್ಕತಾಂಡವ ಮತ್ತು ಚಂದ್ರಿಕಾ ಎಂಬವುಗಳು ಮಹತ್ತ್ವದ ಕೃತಿಗಳು. ಭೇದೋಜ್ಜೀವನ ಎಂಬುದೂ ಅವರ ಸ್ವತಂತ್ರವಾದ ಚಿಕ್ಕ ಕೃತಿ. ಖಂಡನತ್ರಯಗಳಿಗೆ (ಮಾಯಾವಾದ ಖಂಡನ, ಪ್ರಪಂಚಮಿಥ್ಯಾತ್ವಾನು ಮಾನಖಂಡನ, ಉಪಾಧಿಖಂಡನ) ವ್ಯಾಖ್ಯಾನರೂಪವಾಗಿ ಮಂದಾರಮಂಜರೀ ಎಂಬ ಹೆಸರಿನಿಂದ ಮೂರು ಗ್ರಂಥಗಳನ್ನು ಬರೆದಿರುತ್ತಾರೆ. ತತ್ವವಿವೇಕಟೀಕಾ ಎಂಬ ಗ್ರಂಥಕ್ಕೂ ಮಂದಾರಮಂಜರೀ–ಎಂಬ ವ್ಯಾಖ್ಯಾನವನ್ನು ಬರೆದಿರುತ್ತಾರೆ. ಮಧ್ವಾಚಾರ್ಯರ ಮೂವತ್ತೇಳು ಗ್ರಂಥಗಳ ಹೆಸರುಗಳನ್ನು ಅವುಗಳ ನಿರ್ಮಾಣಕ್ರಮದಿಂದ ತಿಳಿಸುವ ಗ್ರಂಥಮಾಲಿಕಾಸ್ತೋತ್ರ ಎಂಬ ಚಿಕ್ಕ ಕೃತಿಯೂ ವ್ಯಾಸರಾಜ ರಚಿತವೆಂದು ಹೇಳಲಾಗುತ್ತಿದೆ.

ನ್ಯಾಯಾಮೃತವು ವ್ಯಾಸರಾಜರ ಶ್ರೇಷ್ಠಕೃತಿಯಾಗಿದೆ, ಇದರಲ್ಲಿ ೪ ಪರಿಚ್ಛೇಧಗಳಿವೆ. ಶ್ರುತಿಕ್ಷೀರಾಬ್ಧಿಮಾಮಥ್ಯ ಧೀಮಂದರಮಹೀಭೃತಾ। ಆಮಥ್ಯೋದ್ಧ್ರಿಯತೇ ನ್ಯಾಯಾಮೃತಂ ವಿಬುಧತೃಪ್ತಯೇ ॥ ಎಂದು ಪ್ರತಿಜ್ಞೆಮಾಡಿ ನಾಲ್ಕು ಪರಿಚ್ಛೇದಗಳಲ್ಲಿ ಮಧ್ವಾಚಾರ್ಯರ ದ್ವೈತದರ್ಶನಕ್ಕೆ ವಿರುದ್ಧವಾದ ದರ್ಶನಗಳನ್ನು ಕೂಲಂಕಷವಾಗಿ ವಿಮರ್ಶಿಸಿ ಖಂಡಿಸಿದ್ದಾರೆ. ಮೊದಲನೆಯ ಪರಿಚ್ಛೇದದಲ್ಲಿ ಪ್ರಪಂಚಮಿಥ್ಯಾತ್ವ ವಿಷಯಗಳನ್ನು ನಾನಾ ದೃಷ್ಟಿಕೋನಗಳಿಂದ ವಿಮರ್ಶಿಸಿ ಪೂರ್ವಮೀಮಾಂಸಾಶಾಸ್ತ್ರದ ನ್ಯಾಯಗಳು ಭೇದ ಸಿದ್ಧಾಂತಕ್ಕೆ ಹೇಗೆ ವಿರೋಧಿಗಳಲ್ಲ ಎಂಬುದನ್ನೂ ಸಂದರ್ಭಕ್ಕನುಸಾರವಾಗಿ ತೋರಿಸಲಾಗಿದೆ. ದೃಷ್ಟಿ ಸೃಷ್ಟಿವಾದ, ಏಕ ಜೀವಾಜ್ಞಾನವಾದ, ಭಾವರೂಪಜ್ಞಾನವಾದ, ಮುಂತಾದ ವಿಷಯಗಳನ್ನು ಭಾಮತೀ ಮತ್ತು

ವಿವರಣ ಪ್ರಸ್ಥಾನಗಳನ್ನು ಅನುಸರಿಸಿ ವಿವೇಚಿಸಲಾಗಿದೆ. ಎರಡನೆಯ ಪರಿಚ್ಛೇದದಲ್ಲಿ ಅಖಂಡಾರ್ಥವಾದ, ನಿರ್ಗುಣತ್ವವಾದ, ನಿರಾಕಾರತ್ವ, ಸ್ವಪ್ರಕಾಶತ್ವ, ಅವಾಚ್ಯತ್ವ ಮುಂತಾದುವುಗಳನ್ನು ವಿವೇಚಿಸಿದ್ದಾರೆ. ಮೂರನೆಯ ಪರಿಚ್ಛೇದದಲ್ಲಿ ಶ್ರವಣಮನನಾದಿಗಳನ್ನು ವಿವರಿಸಿ, ನಾಲ್ಕನೆಯ ಪರಿಚ್ಛೇದದಲ್ಲಿ ದ್ವೈತದರ್ಶನಾನು ಸಾರಿಯಾದ ಮುಕ್ತಿಸ್ವರೂಪವನ್ನು ಪ್ರತಿಷ್ಠಾಪಿಸಿದ್ದಾರೆ. ವ್ಯಾಸರಾಜರ ನ್ಯಾಯಾಮೃತ ಗ್ರಂಥವು ಮುಂದೆ ೩ ಶತಮಾನಗಳವರೆಗೂ ದ್ವೈತಾದ್ವೈತಪಂಡಿತರಿಗೆ ಆವಶ್ಯಕವಾಗಿ ಅಧ್ಯಯನಮಾಡಬೇಕಾದ ಬೃಹದ್ ಗ್ರಂಥವಾಯಿತು. ನ್ಯಾಯಾಮೃತಕ್ಕೆ ಮಧುಸೂದನ ಸರಸ್ವತೀ ಎಂಬವರು ಅದ್ವೈತಸಿದ್ಧಿ ಎಂಬ ಖಂಡನಗ್ರಂಥವನ್ನು ಬರೆದರು. ೧೭ನೇ ಶತಮಾನದಲ್ಲಿದ್ದ ರಾಮಾಚಾರ್ಯರೆಂಬುವರು ತರಂಗಿಣೀ ಎಂಬ ನ್ಯಾಯಾಮೃತವ್ಯಾಖ್ಯಾನ ಗ್ರಂಥದಲ್ಲಿ ಅದ್ವೈತಸಿದ್ಧಿಯನ್ನು ಖಂಡಿಸಿದರೆ ಬ್ರಹ್ಮಾನಂದ ಸರಸ್ವತೀ ಎಂಬುವರು ಬ್ರಹ್ಮಾನಂದೀ ಎಂಬ ಗ್ರಂಥದಲ್ಲಿ ತರಂಗಿಣಿಯನ್ನು ಖಂಡಿಸಿದರು. ವನಮಾಲಿಮಿಶ್ರ ರೆಂಬವರು ನ್ಯಾಯಾಮೃತಸೌಗಂಧ್ಯ ಎಂಬ ಗ್ರಂಥದಲ್ಲಿ ಬ್ರಹ್ಮಾನಂದೀಯ ಗ್ರಂಥದ ಆಕ್ಷೇಪವನ್ನು ಪರಿಹರಿಸಿದರು. ಇವಲ್ಲದೆ ನ್ಯಾಯಾಮೃತ ಸೌಗಂಧ್ಯವಿಮರ್ಶ (ಅದ್ವೈತ), ಅದ್ವೈತಕುಠಾರ ನ್ಯಾಯಾಮೃತಕಲಾಧರ, ನ್ಯಾಯಾಮೃತಾರ್ಣವ (ದ್ವೈತ) ಮುಂತಾದ ಗ್ರಂಥಗಳೂ ರಚಿತವಾಗಿವೆ.

ದ್ವೈತದರ್ಶನದವರಿಗೆ ಬಾಧಕವಾದ ಅದ್ವೈತದ ಎಲ್ಲಾ ವಾದಗಳನ್ನೂ ಕ್ರಮವಾಗಿ ಜೋಡಿಸಿ ಅವುಗಳಿಗೆ ಮಾರ್ಮಿಕವಾದ ಉತ್ತರವನ್ನು ಕೊಟ್ಟವರು ವ್ಯಾಸರಾಜರು. 'ಅಲ್ಲಲ್ಲಿ ಚದುರಿದ ವಿಷಯಗಳನ್ನು ಸಂಗ್ರಹಮಾಡುವುದರಿಂದ, ಕೆಲವೆಡೆ ನಮ್ಮ ಹಿರಿಯರು ಹೇಳಿರುವ ವಿಷಯವನ್ನು ಸಮರ್ಥಿಸಿರುವುದರಿಂದ, ಕೆಲವು ಕಡೆ ಅವರು ಹೇಳದಿರುವ ವಿಷಯವನ್ನು ಹೇಳುವುದರಿಂದ ನನ್ನ ಶ್ರಮವು ಸಫಲವಾಗುತ್ತದೆ. (ವಿಕ್ಷಿಪ್ತ ಸಂಗ್ರಹಾತ್ಕ್ವಾಪಿ ಕ್ವಾಪ್ಯುಕ್ತಸ್ಯೋಪಪಾದನಾತ್ । ಅನುಕ್ತಕಥನಾತ್ಕ್ವಾಪಿ ಸಫಲೋಽಯಂ ಶ್ರಮೋ ಮಮ ॥ ನ್ಯಾಯಾಮೃತ–ಉಪೋದ್ಘಾತ) ಎಂಬ ಅವರ ಮಾತು ಗ್ರಂಥವನ್ನು ನೋಡಿದವರಿಗೆ ಸತ್ಯವೆಂದು ಕಾಣುತ್ತದೆ, ವಾದಪ್ರಕ್ರಿಯೆಯ ಭಾರತೀಯ ಅಧ್ಯಾತ್ಮಚಿಂತನೆಯಲ್ಲಿ ವ್ಯಾಸತೀರ್ಥರು ಅಪ್ರತಿದ್ವಂದ್ವಸ್ಥಾನದಲ್ಲಿ ನಿಲ್ಲುತ್ತಾರೆ,' ಎಂದು ವಿಮರ್ಶಕರು ಅವರನ್ನು ಪ್ರಶಂಸಿಸಿದ್ದಾರೆ.

## ತಾತ್ಪರ್ಯ ಚಂದ್ರಿಕಾ

ಚಂದ್ರಿಕಾ ಎಂದೇ ಸಾಮಾನ್ಯವಾಗಿ ಕರೆಯಲ್ಪಡುವ ಈ ಗ್ರಂಥವು ಜಯತೀರ್ಥರ ತತ್ತ್ವ ಪ್ರಕಾಶಿಕಾ ಗ್ರಂಥದ ವ್ಯಾಖ್ಯಾನದಂತೆ ಹೊರಟಿದೆ. ಈ ಗ್ರಂಥದಲ್ಲಿ ಬ್ರಹ್ಮಮೀಮಾಂಸಾಶಾಸ್ತ್ರದ ಪ್ರತಿಯೊಂದು ಸೂತ್ರವನ್ನು ಅದ್ವೈತ, ವಿಶಿಷ್ಟಾದ್ವೈತದ್ವೈತ, ದರ್ಶನಗಳ ದೃಷ್ಟಿಯಿಂದ

ವಿಮರ್ಶಿಸಿ ಒಂದು ನಿರ್ಣಯಕ್ಕೆ ಬರಲಾಗಿದೆ. ಭಾಮತೀ, ಪಂಚಪಾದಿಕಾ, ವಿವರಣ, ಕಲ್ಪತರು ಎಂಬ ಅದ್ವೈತ ಗ್ರಂಥಗಳನ್ನೂ, ದ್ವೈತದರ್ಶನದ ಅನೇಕ ಗ್ರಂಥಗಳನ್ನೂ ವಿಮರ್ಶಿಸಲಾಗಿದೆ. ಬ್ರಹ್ಮ ಸೂತ್ರಗಳ, ೧, ೨ನೇ ಅಧ್ಯಾಯಗಳಿಗೆ ಮಾತ್ರ ಚಂದ್ರಿಕಾ ವ್ಯಾಖ್ಯಾನವಿದೆ. ವ್ಯಾಸರಾಯರಿಂದ ೧೦ನೆಯವರಾದ ರಘುನಾಥತೀರ್ಥರೆಂಬುವರು ೩, ೪ನೇ ಅಧ್ಯಾಯಗಳಿಗೂ ಭಾಷ್ಯ ಟೀಕೆಗಳನ್ನು ಅನುಸರಿಸಿ (ಅವ) ಶಿಷ್ಟತಾತ್ಪರ್ಯಚಂದ್ರಿಕಾ ಎಂಬ ವ್ಯಾಖ್ಯಾನವನ್ನು ಬರೆದಿರುತ್ತಾರೆ.

## ತರ್ಕತಾಂಡವ

ವ್ಯಾಸರಾಜರು ಅದ್ವೈತವನ್ನು ವಿಮರ್ಶಿಸುವಾಗ ನ್ಯಾಯ ವೈಶೇಷಿಕ ಮತಗಳನ್ನು ಅನುಸರಿಸಿದ್ದರು. ಆದರೆ ದ್ವೈತದರ್ಶನಕ್ಕೂ ತರ್ಕಶಾಸ್ತ್ರಕ್ಕೂ ಇತರ ದರ್ಶನಗಳಿಗೂ ಇರುವ ಮೂಲಭೂತವಾದ ಅಭಿಪ್ರಾಯ ಭೇದವನ್ನು ಸಮರ್ಥಿಸಲು ಈ ಗ್ರಂಥವು ಹೊರಟಿದೆ. ತರ್ಕವನ್ನು ಅವಲಂಬಿಸಿ ಅದ್ವೈತವನ್ನು ಖಂಡಿಸಿದಾಗ ಸಂತೋಷಪಟ್ಟ ತಾರ್ಕಿಕರು, ತರ್ಕವನ್ನೇ ವ್ಯಾಸರಾಯರು ಖಂಡಿಸಿದಾಗ ಹೀಗೆಂದರಂತೆ–'ನ್ಯಾಯೇನೋಪಾರ್ಜಿತಾ ಕೀರ್ತಿಃ ತಾಂಡವೇನ ವಿನಾಶಿತಾ'. ವಿಷ್ಣುತತ್ವನಿರ್ಣಯ, ಅದರ ಟೀಕಾ, ನ್ಯಾಯಸುಧಾ ಮತ್ತು ಪ್ರಮಾಣಪದ್ಧತಿಗಳ ಆಧಾರದಿಂದ ಅವರು ನ್ಯಾಯಶಾಸ್ತ್ರವನ್ನು ಖಂಡಿಸಿರುತ್ತಾರೆ. ಪ್ರಾಮಾಣ್ಯವಾದ, ವೇದಾ ಪೌರುಷೇಯತ್ವವಾದ, ಈಶ್ವರವಾದ, ವರ್ಣನಿತ್ಯತ್ವವಾದ, ನಿರ್ವಿಕಲ್ಪಕವಾದ ಎಂಬ ಆರು ವಿಷಯಗಳು ಪ್ರಥಮ ಪರಿಚ್ಛೇದದಲ್ಲಿವೆ. ಎರಡನೆಯ ಪರಿಚ್ಛೇದದಲ್ಲಿ ಉಪಕ್ರಮ ಉಪಸಂಹಾರಾದಿಗಳ ಬಲಾಬಲ ವಿವೇಚನೆಯನ್ನು ವಿಶೇಷವಾಗಿ ಮಾಡಿ ಶಕ್ತಿ, ಅಪೂರ್ವ ಮುಂತಾದುವುಗಳನ್ನು ಸಮಾಲೋಚಿಸಲಾಗಿದೆ. ಮೂರನೆಯ ಭಾಗದಲ್ಲಿ ನ್ಯಾಯಮತದ ವ್ಯಾಪ್ತಿ, ಪಕ್ಷತಾ ಉಪಾಧಿ, ಪರಾಮರ್ಶ, ಅನುಮಾನವಿಭಾಗ ಇತ್ಯಾದಿಗಳನ್ನು ವಿಚಾರ ಮಾಡಿದೆ.

ಮೇಲೆ ಹೇಳಿದ ಮೂರು ಗ್ರಂಥಗಳೂ ದ್ವೈತದರ್ಶನಕ್ಕೆ ಅಭೇದ್ಯವಾದ ಕವಚದಂತಿವೆ. ವ್ಯಾಸರಾಯರ ಅನುಪಮವಾದ ಗ್ರಂಥರಚನೆಯ ಕಾರಣದಿಂದಲೇ ಅವರನ್ನು ಮಧ್ವಸಿದ್ಧಾಂತದ ಮುನಿತ್ರಯರಲ್ಲಿ[1] ಒಬ್ಬರು ಎಂದು ಪರಿಗಣಿಸಲಾಗಿದೆ.

## ವ್ಯಾಸರಾಮಾಚಾರ್ಯರು

(ಕ್ರಿ.ಶ. ೧೫೫೦–೧೬೨೦)

ಇವರು ರಘೂತ್ತಮತೀರ್ಥರೆಂಬ ಯತಿಗಳಲ್ಲಿ ವ್ಯಾಸಂಗಮಾಡಿ ನ್ಯಾಯಾಮೃತ ಗ್ರಂಥದ

---

೧. "ಶ್ರೀಮಧ್ವಃ ಕಲ್ಪವೃಕ್ಷಶ್ಚ, ಜಯಾರ್ಯಾಃ ಕಾಮಧೇನವಃ ।
ಚಿಂತಾಮಣಿಸ್ತುವ್ಯಾಸಾರ್ಯಃ ಮುನಿತ್ರಯಮುದಾಹೃತಂ ॥

ಖಂಡನರೂಪವಾಗಿ ಹೊರಟಿಗಂವ ಅದ್ವೈತಸಿದ್ಧಿಗ್ರಂಥವನ್ನು ನಿರಾಕರಿಸಿ ತರಂಗಿಣೀ ಎಂಬ ವ್ಯಾಖ್ಯಾನ ಬರೆದಿದ್ದಾನೆ.

## ಆನಂದಭಟ್ಟಾರಕ

(೧೫೩೫-೧೬೦೫)

ಮಾಧ್ವಪೀಠಗಳಲ್ಲಿ ಒಂದಾದ ಉತ್ತರಾದಿಮಠದ ಶ್ರೀ ವಿಧ್ಯಾಧೀಶತೀರ್ಥರೆಂಬವರ (ಪೂರ್ವಾಶ್ರಮದ) ತಂದೆಯಾದ ಇವರು ನ್ಯಾಯಾಮೃತಕ್ಕೆ 'ನ್ಯಾಯಾಮೃತಕಂಠಕೋಧ್ಧಾರ' ಎಂಬ ವ್ಯಾಖ್ಯಾನ ಬರೆದರು.

## ವನಮಾಲಿಮಿಶ್ರ

(ಕ್ರಿ.ಶ. ೧೬೫೦-೧೭೨೦)

ಇವರು ಬಿಹಾರಿ ಬ್ರಾಹ್ಮಣರು; ಬ್ರಹ್ಮಚಾರಿ. ಇವರ ತರಂಗಿಣೀಸೌರಭವು ಗುರುಚಂದ್ರಿಕಾ ಎಂಬ ಅದ್ವೈತಗ್ರಂಥ ವಿಮರ್ಶರೂಪವಾಗಿದೆ. ನ್ಯಾಯಾಮೃತಸೌಗಂಧ್ಯವು ಲಘುಚಂದ್ರಿಕಾ ವಿಮರ್ಶರೂಪವಾಗಿದೆ. ಮಧ್ವಮುಖಾಲಂಕಾರವು (ಮಾರುತಮಂಡನ) ಅಪ್ಪಯ್ಯದೀಕ್ಷಿತರ ಆಕ್ಷೇಪಗಳಿಗೆ ಉತ್ತರ ಮತ್ತು ಬ್ರಹ್ಮಸೂತ್ರಗಳ ಮೊದಲನೆಯ ೫ ಅಧಿಕರಣಗಳ ವಿವರಣವಾಗಿದೆ. ಇವರು ಚಂಡಮಾರುತ, ವೇದಾಂತಸಿದ್ಧಾಂತಮುಕ್ತಾವಲಿ, ಶ್ರುತಿಸಿದ್ಧಾಂತಪ್ರಕಾಶ, ವಿಷ್ಣುತತ್ತ್ವಪ್ರಕಾಶ, ಭಕ್ತಿರತ್ನಾಕರ, ಜೀವೇಶ್ವರಾಭೇದಧಿಕ್ಕಾರ, ಪ್ರಮಾಣಸಂಗ್ರಹ, ಅಭಿನವಪರಿಮಲ, ಅದ್ವೈತಸಿದ್ಧಿಖಂಡನ ಎಂಬ ಗ್ರಂಥಗಳನ್ನು ಬರೆದಿರುತ್ತಾರೆ.

## ವಿಜಯೀಂದ್ರತೀರ್ಥರು

(ಕ್ರಿ.ಶ. ೧೫೧೪-೧೫೯೫)

ಇವರು ವ್ಯಾಸರಾಜರ ಶಿಷ್ಯರು. ಸುರೇಂದ್ರತೀರ್ಥರೆಂಬ ಮಧ್ವಾಚಾರ್ಯರ ಪರಂಪರೆಯ ಬೇರೊಬ್ಬ ಯತಿಗಳ ಪೀಠಕ್ಕೆ ದತ್ತಕವಾಗಿ ವ್ಯಾಸರಾಜರಿಂದ ಕೊಡಲ್ಪಟ್ಟರು. ಪ್ರಸಿದ್ಧ ಪಂಡಿತರಾದ ಅಪ್ಪಯ್ಯದೀಕ್ಷಿತರು ಮತ್ತು ತಾತಾಚಾರ್ಯರ ಸಮಕಾಲೀನರು. ಇವರು ೧೦೪ ಗ್ರಂಥಗಳನ್ನು ಬರೆದಿದ್ದಾರೆ. ವ್ಯಾಸರಾಜರ ನ್ಯಾಯಾಮೃತಕ್ಕೆ ಲಘ್ವಾಮೋದ ಮತ್ತು ಗುರ್ವಾಮೋದ ಎಂಬ ಎರಡು ವ್ಯಾಖ್ಯಾನಗಳನ್ನು ಬರೆದಿದ್ದಾರೆ. ಚಂದ್ರಿಕಾ ಗ್ರಂಥಕ್ಕೆ ಬರೆದಿರುವ ನ್ಯಾಯಮೌಕ್ತಿಕ ಮಾಲೆಯಲ್ಲಿ ಶ್ರೀಕಂಠಭಾಷ್ಯ ಮತ್ತು ಶಿವಾರ್ಕಮಣಿ ದೀಪಿಕೆಗಳನ್ನು ವಿಮರ್ಶಿಸಿದ್ದಾರೆ. ತರ್ಕತಾಂಡವಕ್ಕೆ ಯತಿರತ್ನಾಕರ ಎಂಬ ವ್ಯಾಖ್ಯಾನವನ್ನು

ಬರೆದಿದ್ದಾರೆ. ಅಧಿಕರಣಮಾಲಾ, ಭೇದವಿದ್ಯಾವಿಲಾಸ, ಪರತತ್ತ್ವಪ್ರಕಾಶಿಕಾ, ಸರ್ವಸಿದ್ಧಾಂತಸಾರಾಸಾರವಿವೇಚನಾ, ಉಪಸಂಹಾರವಿಜಯ ಇವು ಇವರ ಇನ್ನಿತರ ಕೆಲವು ಗ್ರಂಥಗಳು. ವಿಜಯೀಂದ್ರವ್ಯಾಸರಾಜರ ನಂತರದ ದ್ವೈತದರ್ಶನದ ಪ್ರಬಲ ಸಮರ್ಥಕರೂ ಮೂಲಗ್ರಂಥ ನಿವರ್ಾತೃಗಳೂ, ಇಂದಿಗೂ ಅಳಿಯದ ಪ್ರಭಾವವನ್ನು ಜನತೆಯಲ್ಲಿ ಉಂಟು ಮಾಡಿದವರೂ ಆಗಿದ್ದಾರೆ.

## ವಾದಿರಾಜತೀರ್ಥರು

(ಕ್ರಿ.ಶ. ೧೪೮೦–೧೬೦೦)

ಇವರು ಉಡುಪಿಯ ಅಷ್ಟಮಠಗಳಲ್ಲಿ ಒಂದಾದ ವಿಷ್ಣುತೀರ್ಥರ ಮಠದ (ಇಂದು ಸೋದೆ ಮಠ ಎಂದು ಪ್ರಸಿದ್ಧ) ಅಧಿಪತಿಗಳು, ೧೨೦ ವರ್ಷ ಬಾಳಿದವರು.

### ಕೃತಿಗಳು

ಇವರು ನೂರರಮೇಲೆ ಕೃತಿಗಳನ್ನು ರಚಿಸಿದ್ದಾರೆಂದು ಪ್ರತೀತಿಯಿದೆ. ಯುಕ್ತಿಮಲ್ಲಿಕಾ ಎಂಬುದು ಇವರ ಸ್ವತಂತ್ರವಾದ ಮಹಾಗ್ರಂಥ. ಇದರಲ್ಲಿ ೫೩೭೮ ಶ್ಲೋಕಗಳಿವೆ. ಗುಣ ಸೌರಭ, ಶುದ್ಧಿಸೌರಭ, ಭೇದಸೌರಭ, ವಿಶ್ವಸೌರಭ, ಫಲಸೌರಭವೆಂಬ ಐದು–ಭಾಗಗಳಿವೆ. ವೇದ–ಇತಿಹಾಸ–ಭಾಗವತ–ಉಪನಿಷತ್ತು–ಗೀತೆಗಳ ಆಧಾರದಿಂದ ಯುಕ್ತಿ, ದೃಷ್ಟಾಂತಗಳ ಮೂಲಕ ದ್ವೈತದರ್ಶನದ ತತ್ತ್ವಗಳನ್ನು ಇಲ್ಲಿ ಮನಮುಟ್ಟುವಂತೆ ಪ್ರತಿಪಾದಿಸಿದ್ದಾರೆ. ಚಾರ್ವಾಕಸ್ಯ ನ ವಾಕ್‌ಚಾರ್ವೀ ಕುರ್ವೀತಾತ್ಮವಧು ಯತಃ । ಅಕ್ಷೈಕಮಾನತಾ ವಾಕ್ಯಂ ರಕ್ಷೇದಾತ್ಮಪ್ರಮಾಣತಾಂ ॥ ಚಾರ್ವಾಕನು ಪ್ರತ್ಯಕ್ಷ ಒಂದೇ ಪ್ರಮಾಣವೆಂದು ಹೇಳುತ್ತಾನೆ. ಈ ಮಾತು ಚೆನ್ನಾಗಿಲ್ಲ. ಪ್ರತ್ಯಕ್ಷ ಒಂದೇ ಪ್ರಮಾಣವೆಂಬ ಮಾತು ಪ್ರಮಾಣವಾಗಬೇಕಾದರೆ ಶಬ್ದ ಪ್ರಮಾಣವನ್ನು ಒಪ್ಪಬೇಕು. ಅದನ್ನು ಒಪ್ಪಿದರೆ ಪ್ರತ್ಯಕ್ಷ ಒಂದೇ ಪ್ರಮಾಣವೆಂಬ ಮಾತು ಸುಳ್ಳಾಯಿತು (ಯುಕ್ತಿಮಲ್ಲಿಕಾ). ಜಯತೀರ್ಥರ ತತ್ತ್ವಪ್ರಕಾಶಿಕೆಗೆ ಗುರ್ವರ್ಥದೀಪಿಕಾ, ನ್ಯಾಯಸುಧೆಗೆ ಗುರ್ವರ್ಥದೀಪಿಕಾ ಎಂಬ ಟಿಪ್ಪಣಿಯನ್ನು ಇವರು ಬರೆದಿದ್ದಾರೆ. ವಿವರಣವ್ರಣ, ಪಾಷಂಡಮತಖಂಡನ, ಶ್ರುತಿತತ್ತ್ವಪ್ರಕಾಶಿಕಾ, ಹರಿಭಕ್ತಿಲತಾ, ನ್ಯಾಯರತ್ನಾವಳೀ, ಕಲ್ಪಲತಾ, ಸರಸಭಾರತೀವಿಲಾಸ, ದಶೋಪನಿಷದ್‌ಭಾಷ್ಯಟಿಪ್ಪಣಿಗಳು ಮುಂತಾದವು ಇವರ ಇನ್ನಿತರ ಗ್ರಂಥಗಳು.

ರುಕ್ಮಿಣೀಶವಿಜಯ ಎಂಬ ರಸಭರಿತವಾದ ದರ್ಶನಕಾವ್ಯ, ತೀರ್ಥಪ್ರಬಂಧವೆಂಬ ಖಂಡಕಾವ್ಯಗಳನ್ನು ಇವರು ಬರೆದಿದ್ದಾರೆ.

## ನಾರಾಯಣಾಚಾರ್ಯರು

(ಕ್ರಿ.ಶ. ೧೬೦೦–೧೬೬೦)

ಇವರು ಅದ್ವೈತಕಾಲಾನಲ ಎಂಬ ಗ್ರಂಥವನ್ನು ಬರೆದು ಅಪ್ಪಯ್ಯದೀಕ್ಷಿತರ ಮಧ್ವತಂತ್ರಮುಖಮರ್ದನ ಎಂಬ ಗ್ರಂಥವನ್ನು ವಿಮರ್ಶಿಸಿದ್ದಾರೆ. ಮಧ್ವಮಂತ್ರಾರ್ಥ ಮಂಜರೀ, ವಿಷ್ಣುತತ್ತ್ವವಿವೇಕ ಇವು ಇವರ ಇತರ ಗ್ರಂಥಗಳು.

## ಸತ್ಯನಾಥಯತಿಗಳು

(ಕ್ರಿ.ಶ. ೧೬೪೮–೧೬೭೪)

ಇವರು ಉತ್ತರಾದಿಮಠದ ಪೀಠಿಯಲ್ಲಿ ಬಂದಿರುವ ಯತಿಗಳು. ಇವರು ಜಯತೀರ್ಥರ ತತ್ತ್ವಪ್ರಕಾಶಿಕೆಗೆ ಅಭಿನವಚಂದ್ರಿಕಾ ಎಂಬ ವ್ಯಾಖ್ಯಾನವನ್ನು ಬರೆದಿರುತ್ತಾರೆ. ಅಭಿನವಾಮೃತ, ಅಭಿನವಗದಾ, ಅಭಿನವತರ್ಕತಾಂಡವ, ವಿಜಯಮಾಲಾ ಇವು ಇವರ ಇತರ ಗ್ರಂಥಗಳು.

## ಗೌಡಪೂರ್ಣಾನಂದರು

ವಂಗದೇಶದ ಇವರು ನಾರಾಯಣಭಟ್ಟ ಎಂಬುವರ ಶಿಷ್ಯರು. ಕೃತಿತತ್ತ್ವಮುಕ್ತಾವಲೀ ಎಂಬ ಇವರ ಗ್ರಂಥದಲ್ಲಿ ಉತ್ತಮವಾದ ಶ್ಲೋಕಗಳಿಂದ ಜೀವ ಬ್ರಹ್ಮೈಕ್ಯವಾದ ಮುಂತಾದ ವಿಷಯಗಳನ್ನು ನಿರಾಕರಿಸಿದ್ದಾರೆ.

## ರಘೂತ್ತಮತೀರ್ಥರು

(ಕ್ರಿ.ಶ. ೧೫೫೭–೧೫೯೭)

ಉತ್ತರಾದಿಮಠದ ಪೀಠಾಧಿಪತಿಗಳು. ಇವರು ವಿಷ್ಣುತತ್ತ್ವ ವಿನಿರ್ಣಯಟೀಕಾಭಾವ ಬೋಧ, ತತ್ತ್ವಪ್ರಕಾಶಿಕಾಭಾವಬೋಧ, ಬೃಹದಾರಣ್ಯಕಭಾವಬೋಧ, ನ್ಯಾಯವಿವರಣ ಟೀಕಾ, ನ್ಯಾಯರತ್ನಸಂಬಂಧದೀಪಿಕಾ, ವಿವರಣೋದ್ಧಾರ, ಗೀತಾಭಾಷ್ಯಪ್ರಮೇಯದೀಪಿಕಾ ಭಾವಬೋಧ ಎಂಬ ಗ್ರಂಥಗಳನ್ನು ಬರೆದಿದ್ದಾರೆ.

## ಯದುಪತಿ ಆಚಾರ್ಯರು

(ಕ್ರಿ.ಶ. ೧೫೮೦–೧೬೩೦)

ಇವರು ಬೆಳಗಾಂ ಜಿಲ್ಲೆಯವರು. ಗೃಹಸ್ಥಾಶ್ರಮಿಗಳು. ತತ್ತ್ವಸಂಖ್ಯಾನಟಿಪ್ಪಣಿ, ತತ್ತ್ವೋದ್ಯೋತ ಟಿಪ್ಪಣಿ, ನ್ಯಾಯಸುಧಾ ವ್ಯಾಖ್ಯಾ, ಭಾಗವತ ಟಿಪ್ಪಣಿ, ಯಮಕ ಭಾರತ ವ್ಯಾಖ್ಯಾ ಎಂಬ ಗ್ರಂಥಗಳನ್ನು ಬರೆದಿದ್ದಾರೆ.

## ರಾಮಚಂದ್ರತೀರ್ಥರು

(ಕ್ರಿ. ಶ. ೧೫೭೫–೧೬೩೫)

ವ್ಯಾಸರಾಜರ ಪೀಠಪರಂಪರೆಯವರು ತಮಿಳುನಾಡಿನವರು. ನ್ಯಾಯಸಂಧಾಟಿಪ್ಪಣೀ, ಋಗ್ಭಾಷ್ಯಟೀಕಾ, ಐತರೇಯಭಾಷ್ಯಟಿಪ್ಪಣೀ ಮುಂತಾದ ಗ್ರಂಥಗಳನ್ನು ಬರೆದಿದ್ದಾರೆ.

## ಸುಧೀಂದ್ರತೀರ್ಥ

(ಕ್ರಿ ಶ. ೧೫೯೬–೧೬೨೩)

ಇವರು ವ್ಯಾಸರಾಜರ ಶಿಷ್ಯರಾದ ವಿಜಯೀಂದ್ರರ ಶಿಷ್ಯರು. ಇವರು ಅಲಂಕಾರ ಶಾಸ್ತ್ರದಲ್ಲಿ ಮೌಲಿಕ ಗ್ರಂಥ ಬರೆದವರು ವೇದಾಂತಶಾಸ್ತ್ರದಲ್ಲಿಯೂ ಅನೇಕ ಗ್ರಂಥಗಳನ್ನು ರಚಿಸಿದ್ದಾರೆ. ತರ್ಕತಾಂಡವಕ್ಕೆ ಸದ್ಯುಕ್ತಿರತ್ನಾಕರ ಎಂಬ ವ್ಯಾಖ್ಯಾನವನ್ನು ರಚಿಸಿದ್ದಾರೆ.

## ವಿದ್ಯಾಧೀಶರು

(ಕ್ರಿ. ಶ. ೧೬೧೯–೧೬೩೧)

ಉತ್ತರಾದಿಮಠದ ಪೀಠಾಧಿಪತಿಗಳು. ವೈಯಾಕರಣಭೂಷಣಸಾರ ಗ್ರಂಥಕಾರನಾದ ಕೌಂಡಭಟ್ಟನ ತಂದೆ ರಂಗೋಜಿಭಟ್ಟನ ಸಮಾನಕಾಲೀನರು. ನ್ಯಾಯಸುಧಾ ಪಂಚಾಧಿಕರಣೀ ವಾಕ್ಯಾರ್ಥಚಂದ್ರಿಕಾ, ವಿಷ್ಣುತತ್ತ್ವನಿರ್ಣಯಟೀಕಾ ಮುಂತಾದ ಗ್ರಂಥಗಳನ್ನು ಬರೆದಿದ್ದಾರೆ.

## ರಾಘವೇಂದ್ರತೀರ್ಥರು

(ಕ್ರಿ. ಶ. ೧೬೨೩–೧೬೭೧)

ಇವರು ತಮಿಳುನಾಡಿನಲ್ಲಿ ಹುಟ್ಟಿದವರು. ವಿಜಯೀಂದ್ರರ ಶಿಷ್ಯರಾದ ಸುಧೀಂದ್ರರಿಂದ ಸಂನ್ಯಾಸಪಡೆದು ಅನೇಕ ವರ್ಷಕಾಲ ಪಾಠಪ್ರವಚನ, ಗ್ರಂಥನಿರ್ಮಾಣಗಳನ್ನು ಮಾಡುತ್ತಿದ್ದರು. ಇವರ ವೃಂದಾವನವು ಆಂಧ್ರಪ್ರದೇಶದ ಕರ್ನೂಲು ಜಿಲ್ಲಾ ಆದವಾನಿ ತಾಲ್ಲೂಕಿನ ಮಂತ್ರಾಲಯ ಎಂಬಲ್ಲಿದೆ.

### ಕೃತಿಗಳು

ಇವರು ಸುಮಾರು ೪೦ ಕೃತಿಗಳನ್ನು ರಚಿಸಿದ್ದಾರೆ. ನ್ಯಾಯಸುಧಾಪರಿಮಳವು ಇವರ ಟಿಪ್ಪಣಿಗ್ರಂಥಗಳಲ್ಲಿ ಪ್ರಸಿದ್ಧವಾದುದು. ಸ್ಪಷ್ಟತೆ, ಸರಳತೆ ಅಚ್ಚುಕಟ್ಟುತನ ಇವರ ಕೃತಿಗಳ ವೈಶಿಷ್ಟ್ಯ. ಇವರು ಜಯತೀರ್ಥರ ಟೀಕೆಗಳಿಗೆಲ್ಲಾ ಟಿಪ್ಪಣಿ ಬರೆದಿದ್ದಾರೆ.

ದಶೋಪನಿಷತ್ತುಗಳಿಗೆ ಖಂಡಾರ್ಥಗಳೆಂಬ ಸರಳವಾದ ವಿವರಣೆಯನ್ನು ಬರೆದಿದ್ದಾರೆ. ನ್ಯಾಯಮುಕ್ತಾವಲೀ, ತಂತ್ರದೀಪಿಕಾ, ತತ್ತ್ವಮಂಜರೀ ಮುಂತಾದುವು ಇತರ ಗ್ರಂಥಗಳು. ಪೂರ್ವಮೀಮಾಂಸೆಯ ೧೨ ಅಧ್ಯಾಯಗಳ ಅಧಿಕರಣಾರ್ಥ ಸಂಗ್ರಾಹಕವಾದ ಭಾಟ್ಟಸಂಗ್ರಹ ಎಂಬ ಮೀಮಾಂಸಾಗ್ರಂಥವನ್ನು ಇವರು ಬರೆದಿದ್ದಾರೆ.

ಇವರಲ್ಲದೆ ವೇದೇಶಭಿಕ್ಷು, ಕೇಶವಾಚಾರ್ಯರು, ವಿಶ್ವೇಶ್ವರತೀರ್ಥರು, ಶ್ರೀನಿವಾಸತೀರ್ಥರು, ಸುಮತೀಂದ್ರರು, ರಘುನಾಥತೀರ್ಥರು, ಜಗನ್ನಾಥತೀರ್ಥರು ಮುಂತಾದ ಅನೇಕ ಗ್ರಂಥಕಾರರೂ ದ್ವೈತದರ್ಶನದಲ್ಲಿ ಟಿಪ್ಪಣಿಗ್ರಂಥಗಳನ್ನು ಬರೆದಿದ್ದಾರೆ. ವೇದಗರ್ಭಪದ್ಮನಾಭಾಚಾರ್ಯ (೧೮ನೇ ಶತಮಾನ) ಎಂಬವರು ನ್ಯಾಯವೈಶೇಷಿಕದರ್ಶನಗಳೆರಡನ್ನೂ ಸೇರಿಸಿ ನವೀನರೀತಿಯಿಂದ ರಚಿಸಿದ ತರ್ಕಸಂಗ್ರಹಾದಿಗ್ರಂಥಗಳಂತೆ ದ್ವೈತದರ್ಶನದ ಸಕಲ ಪ್ರಮಾಣ ಪ್ರಮೇಯಸಂಗ್ರಾಹಕವಾದ ಪದಾರ್ಥಸಂಗ್ರಹ ಎಂಬ ಗ್ರಂಥವನ್ನು ಬರೆದಿರುತ್ತಾರೆ. ಆ ಗ್ರಂಥಕ್ಕೆ ತಾನೇ ಮಧ್ವಸಿದ್ಧಾಂತಸಾರ ಎಂಬ ವ್ಯಾಖ್ಯಾನವನ್ನು ಬರೆದಿರುತ್ತಾರೆ.

ಹೀಗೆ ೧೩ನೇ ಶತಮಾನದಲ್ಲಿ ಪ್ರಾರಂಭವಾದ ದ್ವೈತದರ್ಶನಗ್ರಂಥಗಳ ನಿರ್ಮಾಣದ ವಿಷಯವಾಗಿ ಸ್ಥೂಲವಾದ ಪರಿಚಯವನ್ನು ಕೊಡಲಾಗಿದೆ. ೧೮ನೇ ಶತಮಾನದ ಅಂತ್ಯದವರೆಗೆ ಸುಮಾರು ೩.೦೦೦ ಸಂಸ್ಕೃತಶಾಸ್ತ್ರಗಳು ಈ ದರ್ಶನದಲ್ಲಿ ರಚಿತವಾಗಿವೆ. ಅವುಗಳಲ್ಲಿ ಸುಮಾರು ೧,೦೦೦ ದಷ್ಟು ಗ್ರಂಥಗಳು ಮಾತ್ರ ಮುದ್ರಿತವಾಗಿವೆ. ಅವುಗಳಲ್ಲಿಯೂ ಕೆಲವು ಗ್ರಂಥಗಳ ಅತಿಸ್ಥೂಲ ಪರಿಚಯ ಮಾತ್ರ ಇಲ್ಲಿದೆ.

———

## ೧೨

# ವೇದಭಾಷ್ಯ

ಸಂಹಿತೆಗಳಲ್ಲಿನ ಮಂತ್ರಗಳು ರಹಸ್ಯಾರ್ಥವನ್ನೊಳಗೊಂಡಿವೆ. ವೇದಾರ್ಥವಿಶದೀಕರಣವೇ ವೇದಭಾಷ್ಯಗಳ ಮುಖ್ಯಗುರಿ. ಪದಪಾಠ, ವೇದಾಂಗ, ಪ್ರಾತಿಶಾಖ್ಯ, ಅನುಕ್ರಮಣಿ, ಪರಿಶಿಷ್ಟ—ಇತ್ಯಾದಿಗಳು-ವೇದಾರ್ಥನಿರ್ಣಯಕ್ಕೆ ಸಹಾಯಕಗಳಾಗಿವೆ.

ಸಂಹಿತೆಗಳಿಗಿರುವ ಪದಪಾಠವು ಮಂತ್ರಗಳ ಅರ್ಥವಿವರಣೆಯ ಪ್ರಥಮ ಪ್ರಯತ್ನ ಎಂದು ಹೇಳಬಹುದು. ಋಷಿಗಳು ಮಂತ್ರಗಳಲ್ಲಿನ ಪದಗಳನ್ನು ಬೇರೆಬೇರೆಯಾಗಿ ಬಿಡಿಸಿ ಅವುಗಳಿಂದ ಮಂತ್ರಾರ್ಥವು ಸುಲಭವಾಗಿ ಆಗಲು ಅನುಕೂಲಮಾಡಿದರು. ಪದಪಾಠಗಳಲ್ಲಿ ಪದಗಳ ವಿಚ್ಛೇದ, ಸಮಾಸಗಳ ವಿಶ್ಲೇಷಣೆ ಮೊದಲಾದುವನ್ನು ಮಾಡಿರುವುದರಿಂದ ಮಂತ್ರಗಳ ರಹಸ್ಯಾರ್ಥವನ್ನರುಹಲು ಪ್ರಯತ್ನಿಸಿದ ಭಾಷ್ಯಕಾರರಿಗೆ ಇವು ಉಪಕಾರಕವಾಗಿವೆ.

ಶಾಕಲ್ಯರು ಋಗ್ವೇದ ಸಂಹಿತೆಗೆ ಪದಪಾಠವನ್ನು ರಚಿಸಿರುವರು. ಇವರು ವಾಲಖಿಲ್ಯ ಸೂಕ್ತಗಳನ್ನು ಬಿಟ್ಟು ಋಗ್ವೇದಕ್ಕೆ ಪೂರ್ಣವಾಗಿ ಪದಪಾಠವನ್ನು ರಚಿಸಿದ್ದಾರೆ. ಋಗ್ವೇದಕ್ಕೆ ರಾವಣಕೃತ ಪದಪಾಠವೂ ಇದೆ. ಆದರೆ ಇದು ಶಾಕಲ್ಯರ ಪದಪಾಠದಂತೆ ಪ್ರಾಮುಖ್ಯವನ್ನು ಪಡೆದಿಲ್ಲ.

ಶುಕ್ಲಯಜುರ್ವೇದದ ಮಾಧ್ಯಂದಿನ ಸಂಹಿತೆಗೆ ಪದಪಾಠವನ್ನು ಶಾಕಲ್ಯರೇ ರಚಿಸಿರಬಹುದೆಂಬುದರ ಬಗೆಗೆ ಇನ್ನೂ ಸಾಕಷ್ಟು ಆಧಾರಗಳು ಲಭ್ಯವಾಗಬೇಕಾಗಿವೆ. ಕಾಣ್ವಸಂಹಿತೆಯ ಪದಪಾಠಕಾರರು ಯಾರೆಂಬುದು ತಿಳಿದಿಲ್ಲ.

ತೈತ್ತಿರೀಯಸಂಹಿತೆಗೆ ಆತ್ರೇಯರು ಪದಪಾಠವನ್ನು ರಚಿಸಿದ್ದಾರೆ. ಸಾಮವೇದದ ಪದಪಾಠದ ಕರ್ತೃ ಗಾರ್ಗ್ಯರು. ಅಥರ್ವವೇದದ ಪದಪಾಠಕಾರರ ಬಗ್ಗೆ ಇನ್ನೂ ನಿಖರವಾಗಿ ತಿಳಿದುಬಂದಿಲ್ಲ. ಒಟ್ಟಿನಲ್ಲಿ ಪದಪಾಠಗಳು ವೇದಾರ್ಥರಹಸ್ಯವನ್ನರಿಯಲು ಸಹಾಯಕಗಳಾಗಿವೆ.

## ನಿರುಕ್ತ

ವೇದದ ಶಬ್ದಗಳ ಉತ್ಪತ್ತಿ ಮತ್ತು ಅರ್ಥವಿವರಣೆಗಳನ್ನು ನೀಡುವ ಶಾಸ್ತ್ರವೆ ನಿರುಕ್ತ. ವೇದದ ಕ್ಲಿಷ್ಟವಾದ ಶಬ್ದಗಳನ್ನು ಸಂಗ್ರಹಿಸಿ ಇದಕ್ಕೆ 'ನಿಘಂಟು' ಎಂದು ಕರೆದಿದ್ದಾರೆ. ನಿಘಂಟು ಐದು ಅಧ್ಯಾಯಗಳಲ್ಲಿದೆ. ಮೊದಲಿನ ಮೂರು ಅಧ್ಯಾಯಗಳಿಗೆ ನೈಘಂಟುಕ ಕಾಂಡವೆಂದೂ, ಐದನೆಯ ಅಧ್ಯಾಯಕ್ಕೆ ದೈವಕಾಂಡವೆಂದೂ ಹೆಸರು.

ಯಾಸ್ಕರ 'ನಿರುಕ್ತ'ದಲ್ಲಿ ೧೪ ಅಧ್ಯಾಯಗಳಿವೆ. ನಿರುಕ್ತದಲ್ಲಿ ನಾಮಪದ, ಕ್ರಿಯಾಪದ, ಉಪಸರ್ಗ, ನಿಪಾತ ಇತ್ಯಾದಿಗಳ ಲಕ್ಷಣ, ಮಂತ್ರಗಳ ಅರ್ಥನಿರೂಪಣ, ದೇವತೆಗಳ ವಿಚಾರ ಇವೇ ಮೊದಲಾದವು ಪ್ರತಿಪಾದಿತವಾಗಿವೆ. ಶಾಸ್ತ್ರೀಯವಾದ ನಿರ್ವಚನ ಪದ್ಧತಿ ನಿರುಕ್ತದ ವೈಶಿಷ್ಟ್ಯ. ವೇದಭಾಷ್ಯಕಾರರಿಗೆ ನಿರುಕ್ತವು ಅತ್ಯಂತ ಉಪಯುಕ್ತ ಗ್ರಂಥವಾಗಿದೆ.

## ಜ್ಯೋತಿಷ

ವೇದೋಕ್ತವಾದ ಯಜ್ಞಯಾಗಾದಿ ಕರ್ಮವನ್ನು ಮಾಡಲು ಸೂಕ್ತವಾದ ಕಾಲ ಇತ್ಯಾದಿಗಳನ್ನು ತಿಳಿಸುವ ಶಾಸ್ತ್ರವೇ ಜ್ಯೋತಿಷ. ಋಗ್ವೇದ, ಯಜುರ್ವೇದಕ್ಕೆ ಜ್ಯೋತಿಷಗ್ರಂಥಗಳಿವೆ. ಅಥರ್ವವೇದಕ್ಕೆ ಸಂಬಂಧಿಸಿದ ಜ್ಯೋತಿಷವು ಪ್ರಾಯಶಃ ಅರ್ವಾಚೀನವಾದುದು.

## ಕಲ್ಪ

ವೇದದಲ್ಲುಕ್ತವಾದ ಕರ್ಮಗಳನ್ನು ಸಕ್ರಮವಾಗಿ ವ್ಯವಸ್ಥಿತವಾಗಿ ವಿವರಿಸುವ ಶಾಸ್ತ್ರವೇ ಕಲ್ಪ. ಶ್ರೌತಸೂತ್ರಗಳು, ಧರ್ಮಸೂತ್ರಗಳು, ಗೃಹ್ಯಸೂತ್ರಗಳು, ಮತ್ತು ಶುಲ್ವಸೂತ್ರಗಳೆಂದು ಕಲ್ಪಸೂತ್ರಗಳು ನಾಲ್ಕುವಿಧವಾಗಿವೆ.

## ಅನುಕ್ರಮಣಿಗಳು

ವೇದಸೂಕ್ತಗಳ ಋಷಿ, ದೇವತೆ, ಛಂದಸ್ಸು ಇತ್ಯಾದಿಗಳನ್ನು ಜ್ಞಾಪಕದಲ್ಲಿಟ್ಟುಕೊಳ್ಳಲು ಸಂಗ್ರಹರೂಪವಾದ ಸೂಚಿಕೆಗಳು ರಚಿತವಾದವು. ಇವುಗಳಿಗೆ ಅನುಕ್ರಮಣಿಗಳೆಂದು ಹೆಸರು. ಶೌನಕ, ಕಾತ್ಯಾಯನ ಮೊದಲಾದವರು ಅನುಕ್ರಮಣಿಗಳನ್ನು ರಚಿಸಿದ್ದಾರೆ.

## ಬೃಹದ್ದೇವತಾ

ಇದರಲ್ಲಿ ಎಂಟು ಅಧ್ಯಾಯಗಳಿವೆ. ಋಗ್ವೇದದ ಸೂಕ್ತಗಳ ದೇವತೆಗಳನ್ನು ಮತ್ತು ಅವುಗಳಿಗೆ ಸಂಬಂಧಿಸಿದ ಆಖ್ಯಾನಗಳನ್ನೂ ಇದರಲ್ಲಿ ಚೆನ್ನಾಗಿ ನಿರೂಪಿಸಲಾಗಿದೆ.

ಈ ರೀತಿಯಾಗಿ ಬ್ರಾಹ್ಮಣಗಳು, ಪದಪಾಠಗಳು, ವೇದಾಂಗಗಳು, ಅನುಕ್ರಮಣಿಗಳು, ಬೃಹದ್ದೇವತೆ ಮೊದಲಾದುವು ವೇದಾರ್ಥನಿರ್ಣಯಕ್ಕೆ ಸಹಾಯಕಗಳಾಗಿವೆ.

## ಸ್ಕಂದಸ್ವಾಮಿಯವರ ಭಾಷ್ಯ

ಋಗ್ವೇದಕ್ಕೆ ಅನೇಕ ವಿದ್ವಾಂಸರು ಭಾಷ್ಯ ಬರೆದಿದ್ದಾರೆ. ಇದರಲ್ಲಿ ಸ್ಕಂದಸ್ವಾಮಿಯವರ ಭಾಷ್ಯ ಇದುವರೆಗೆ ಲಭ್ಯವಾಗಿರುವ ಭಾಷ್ಯಗಳಲ್ಲಿ ಪ್ರಾಚೀನವಾದುದು. ಆದರೆ ಇದು ಋಗ್ವೇದಕ್ಕೆ ಪೂರ್ಣವಾಗಿ ದೊರೆತಿಲ್ಲ. ನಾಲ್ಕನೆಯ ಅಷ್ಟಕದ ೩೨ನೆಯ ಅಧ್ಯಾಯದ ಅಂತ್ಯದಲ್ಲಿ ಸ್ಕಂದಸ್ವಾಮಿಯ ಭಾಷ್ಯ ಸಮಾಪ್ತವಾಯಿತು ಎಂದಿದೆ. ಈತನ ಭಾಷ್ಯದ ಹಸ್ತಪ್ರತಿಗಳು ಮದ್ರಾಸಿನ ಸರ್ಕಾರಿ ಹಸ್ತಪ್ರತಿಗ್ರಂಥಭಂಡಾರ, ಅಡ್ಯಾರ್ ಗ್ರಂಥಭಂಡಾರ, ತಿರುವಾಂಕೂರು ಮೊದಲಾದುವುಗಳಲ್ಲಿ ಲಭ್ಯವಿವೆ. ಮೊದಲನೆಯ ಅಷ್ಟಕಕ್ಕೆ ಮಾತ್ರ ಪೂರ್ಣಭಾಷ್ಯ ದೊರೆತಿದೆ. ಎರಡು, ಮೂರು ಮತ್ತು ನಾಲ್ಕನೆಯ ಅಷ್ಟಕಗಳಿಗೆ ಬರೆದ ಭಾಷ್ಯದ ಕೆಲವು ಭಾಗಗಳು ಮಾತ್ರ ದೊರೆತಿವೆ.

ಸೂಕ್ತದ ಆರಂಭದಲ್ಲಿ ಆ ಸೂಕ್ತದ ಋಷಿ, ದೇವತೆ ಇವುಗಳನ್ನು ಲೇಖಿಸಿರುವುದಷ್ಟೇ ಅಲ್ಲದೆ ಇವುಗಳಿಗೆ ಪ್ರಮಾಣಗಳನ್ನಾಗಿ ಪ್ರಾಚೀನಗ್ರಂಥಗಳಾದ ನಿಘಂಟು, ನಿರುಕ್ತ, ಬೃಹದ್ದೇವತಾ ಮೊದಲಾದ ಗ್ರಂಥಗಳಿಂದ ಆಧಾರಗಳನ್ನು ಸ್ಕಂದಸ್ವಾಮಿಯವರು ತಮ್ಮ ಭಾಷ್ಯದಲ್ಲಿ ಕೊಟ್ಟಿದ್ದಾರೆ. ಸ್ಕಂದಸ್ವಾಮಿಯವರ ಭಾಷ್ಯವು ವಿಸ್ತೃತವಾಗಿದೆ.

ಸ್ಕಂದಸ್ವಾಮಿಯವರ ತಂದೆ ಭರ್ತೃಧ್ರುವ. ಈ ಅಂಶವು ಇವರ ಭಾಷ್ಯದ ಪ್ರಥಮಾಷ್ಟಕದ ಪ್ರಥಮಾಧ್ಯಾಯದ ಅಂತ್ಯದಲ್ಲಿ ಬಂದಿರುವ ಈ ಕೆಳಗಣ ಶ್ಲೋಕದಿಂದ ವ್ಯಕ್ತವಾಗುವುದು.

"ವಲಭೀ ನಿವಾಸ್ಯೇತಾಂ ಋಗರ್ಥಾಗಮ ಸಂಹೃತೀಮ್
ಭರ್ತೃಧ್ರುವಸುತಶ್ಚಕ್ರೇ ಸ್ಕಂದಸ್ವಾಮಿ ಯಥಾಸ್ಮೃತಿ"

ಖ್ಯಾತಭಾಷ್ಯಕಾರರಾದ ಹರಿಸ್ವಾಮಿಗಳು ತಮ್ಮ ಭಾಷ್ಯರಚನೆ ಕ್ರಿ.ಶ. ೬೩೮ರಲ್ಲಿ ಆಯಿತೆಂದು ತಿಳಿಸಿರುವುದು ಸ್ಕಂದಸ್ವಾಮಿಗಳ ಕಾಲವನ್ನು ನಿರ್ಧರಿಸಲಿಕ್ಕೆ ಸಹಾಯಕವಾಗಿದೆ. ಏಕೆಂದರೆ, ಸ್ಕಂದಸ್ವಾಮಿಗಳು ಹರಿಸ್ವಾಮಿಗಳ ಗುರುಗಳು. ಆದುದರಿಂದ ಇವರ ಕಾಲ ಕ್ರಿ.ಶ. ಸುಮಾರು ಏಳನೆಯ ಶತಮಾನ.

## ನಾರಾಯಣಕೃತಭಾಷ್ಯ

"ಸ್ಕಂದಸ್ವಾಮಿ ನಾರಾಯಣ ಉದ್ಗೀಥ ಇತಿ ತೇ ಕ್ರಮಾತ್
ಚಕ್ರುಃ ಸಹೈಕಮೃಗ್ಭಾಷ್ಯಂ ಪದವಾಕ್ಯಾರ್ಥಗೋಚರಮ್"

ಎಂಬ ವೇಂಕಟಮಾಧವರ ಭಾಷ್ಯದ ಉಕ್ತಿಯಿಂದ ಸ್ಕಂದಸ್ವಾಮಿ, ನಾರಾಯಣ ಮತ್ತು ಉದ್ಗೀಥ ಇವರು ಋಗ್ವೇದಕ್ಕೆ ಭಾಷ್ಯಬರೆದರೆಂದೂ, ಪ್ರಾಯಶಃ ಸ್ಕಂದಸ್ವಾಮಿ ಅವರು ಋಗ್ವೇದದ ಮೊದಲಭಾಗಕ್ಕೂ, ನಾರಾಯಣರು ತದನಂತರವೂ, ಉದ್ಗೀಥರು ಋಗ್ವೇದದ ಕೊನೆಯ ಭಾಗಕ್ಕೂ ಭಾಷ್ಯಬರೆದಂತೆ ತಿಳಿದುಬರುವುದು.

"ಸ್ಕಂದಸ್ವಾಮೀ ಸಹಚರ ನಾರಾಯಣಪಂಡಿತಸ್ಯ ಸುತತ್ವೇನ ಸಂಭಾವಿತಸ್ಯ ಮಾಧವ ಪಂಡಿತಸ್ಯಕೃತೌ ಸಾಮವೇದ ವ್ಯಾಖ್ಯಾಯಾಂ" ಎಂಬ ಉಕ್ತಿಯಿಂದ ಸಾಮವೇದಕ್ಕೆ ವ್ಯಾಖ್ಯಾನ ಬರೆದ ಮಾಧವ ಪಂಡಿತನು ನಾರಾಯಣ ಸುತನೆಂದೂ, ನಾರಾಯಣ ಮತ್ತು ಸ್ಕಂದಸ್ವಾಮಿ ಇವರು ಸಮಕಾಲೀನರೆಂದೂ ತಿಳಿದುಬರುವುದು. ಆದುದರಿಂದ ನಾರಾಯಣನ ಕಾಲವೂ ಸುಮಾರು ಕ್ರಿ. ಶ. ಏಳನೆಯ ಶತಮಾನ.

## ಉದ್ಗೀಥಕೃತಭಾಷ್ಯ

'ವನವಾಸೀ ವಿನಿರ್ಗತಾಚಾರ್ಯಸ್ಯ ಉದ್ಗೀಥಸ್ಯ ಕೃತೌ ಋಗ್ವೇದಭಾಷ್ಯೇ ಚತುಷ್ಪಂಚಾಶೋಧ್ಯಾಯಃ ಸಮಾಪ್ತಃ' ಎಂಬುದಾಗಿ ಭಾಷ್ಯದ ಪ್ರತಿ ಅಧ್ಯಾಯದ ಕೊನೆಯಲ್ಲಿ ಉದ್ಗೀಥರೇ ಬರೆದಿರುವುದರಿಂದ ಇವರು ವನವಾಸಿ (ಬನವಾಸಿ) ನಿವಾಸಿಗಳೆಂದು ಸ್ಪಷ್ಟವಾಗಿ ತಿಳಿದುಬರುವುದು, ಸಾಯಣಾಚಾರ್ಯರು ಮತ್ತು ಆತ್ಮಾನಂದರು ತಮ್ಮ ವೇದಭಾಷ್ಯಗಳಲ್ಲಿ ಉದ್ಗೀಥರ ವೇದಭಾಷ್ಯಗಳ ವಾಕ್ಯಗಳನ್ನುದಹರಿಸಿರುವುದರಿಂದ ಇವರ ಭಾಷ್ಯದ ಹಿರಿಮೆ ವ್ಯಕ್ತವಾಗುವುದು.

## ಮಾಧವಭಟ್ಟರು

ಇವರು ವೇಂಕಟಮಾಧವರಿಗಿಂತ ಪ್ರಾಚೀನರು, ಇವರು ಬರೆದ ಪ್ರಥಮಾಷ್ಟಕ ಟೀಕೆಯು ಮದ್ರಾಸ್ ವಿಶ್ವವಿದ್ಯಾನಿಲಯದಿಂದ ಪ್ರಕಟವಾಗಿದೆ. ಇವರ ಭಾಷ್ಯವು ಸಂಪೂರ್ಣವಾಗಿ ದೊರೆತಿಲ್ಲ, ಒಂದು ಅಷ್ಟಕಕ್ಕೆ ಮಾತ್ರ ದೊರೆತಿದೆ. ಇವರು ಈ ಟೀಕೆಯನ್ನು

ಬರೆಯುವ ಮೊದಲೇ ಸಾಮಾನುಕ್ರಮಣೀ, ಆಖ್ಯಾತಾನುಕ್ರಮಣೀ, ಮುಂತಾದ ಹನ್ನೊಂದು ಅನುಕ್ರಮಣಿಗಳನ್ನು ಬರೆದಿದ್ದಾರೆಂದು ಗೊತ್ತಾಗುತ್ತದೆ.

## ವೇಂಕಟಮಾಧವಕೃತಭಾಷ್ಯ

ವೆಂಕಟಮಾಧವರು ಸಮಗ್ರವಾಗಿ ಋಕ್ಸಂಹಿತೆಗೆ ಭಾಷ್ಯವನ್ನು ಬರೆದಿದ್ದಾರೆ. ಈ ಭಾಷ್ಯವು ಬಹಳ ಸಂಕ್ಷೇಪವಾಗಿದೆ. ಈ ಬಗೆಗೆ 'ವರ್ಜಯನ್ ಶಬ್ದವಿಸ್ತಾರಂ ಶಬ್ದೈಃ ಕತಿಪಯೈರಿತಿ. ಎಂದು ತಾವೇ ಹೇಳಿಕೊಂಡಿದ್ದಾರೆ. ಈ ಭಾಷ್ಯದಲ್ಲಿ ಬ್ರಾಹ್ಮಣಗ್ರಂಥಗಳ ಪ್ರಮಾಣಾನುಸಾರ ವೇದಗಳ ಗೂಢಾರ್ಥವನ್ನು ವಿಶದೀಕರಿಸಲಾಗಿದೆ. ಬ್ರಾಹ್ಮಣ ಗ್ರಂಥಗಳನ್ನು ತಿಳಿಯುದಹೊರತು ವೇದದ ಅರ್ಥವನ್ನು ತಿಳಿಯಲಿಕ್ಕಾಗದು. ನಿರುಕ್ತ ಮತ್ತು ವ್ಯಾಕರಣದಲ್ಲಿ ಬಲ್ಲಿದರಾದವರು ಮಂತ್ರಗಳ ಚತುರ್ಥಾಂಶವನ್ನು ಮಾತ್ರ ತಿಳಿಯಬಲ್ಲರು. ಯಾವ ಮಂತ್ರಗಳ ಅರ್ಥವು ಅಜ್ಞಾತವಾಗಿದೆಯೋ ಅಥವಾ ಸಂದಿಗ್ಧವಾಗಿದೆಯೋ ಅಂತಹ ಮಂತ್ರಗಳ ಅರ್ಥವನ್ನು ಬ್ರಾಹ್ಮಣಗ್ರಂಥಗಳು ತಿಳಿಸುವುವು ; ಎಂಬುದು ವೇಂಕಟಮಾಧವರ ಅಭಿಪ್ರಾಯ. ಇದು ಅವರ ಈ ಕೆಳಗಣ ಉಕ್ತಿಗಳಿಂದ ಸ್ಪಷ್ಟವಾಗುವುದು —

" ಅಸ್ಮಾಭಿಸ್ತ್ವಿಹ ಮಂತ್ರಾಣಾಮರ್ಥಃ ಪ್ರತ್ಯೇಕಮುಚ್ಯತೇ ।
ಯೇ ಜ್ಞಾತಾ ಯೇ ಚ ಸಂದಿಗ್ಧಾಸ್ತೇಷಾಂ ವೃದ್ಧೇಷು ನಿರ್ಣಯಃ ॥

ಸಂಹಿತಾಯಾಸ್ತುರೀಯಾಂಶಂ ವಿಜಾನಂತ್ಯಧುನಾತನಾಃ ।
ನಿರುಕ್ತ ವ್ಯಾಕರಣಯೋರಾಸೀದ್ಯೇಷಾಂ ಪರಿಶ್ರಮಃ ॥

ಅಥ ಯೇ ಬ್ರಾಹ್ಮಣಾರ್ಥಾನಾಂ ವಿವೇಕ್ತಾರಃ ಕೃತಶ್ರಮಾಃ ।
ಶಬ್ದರೀತಿಂ ವಿಜಾನಂತಿ ತೇ ಸರ್ವಂ ಕಥಯಂತ್ಯಪಿ " ॥

ಹೀಗೆ ಬ್ರಾಹ್ಮಣಗ್ರಂಥಗಳಿಗೆ ಅನುಸಾರವಾಗಿ ವೇದಾರ್ಥಪ್ರತಿಪಾದನೆಯನ್ನು ಮಾಡುವ ಗುಂಪಿಗೆ ಈ ಭಾಷ್ಯಸೇರಿದೆ.

ವೆಂಕಟಮಾಧವರು ತಮ್ಮ ಭಾಷ್ಯದಲ್ಲಿ ಕೇವಲ ಬ್ರಾಹ್ಮಣಗಳನ್ನು ಮಾತ್ರವಲ್ಲದೆ ಸರ್ವಾನುಕ್ರಮಣೀ, ನಿದಾನ ಸೂತ್ರ, ನಿಘಂಟು, ನಿರುಕ್ತ, ಪ್ರಾತಿಶಾಖ್ಯ ಮತ್ತು ಬೃಹದ್ದೇವತೆಯ ಭಾಗಗಳನ್ನು ಉದಾಹರಿಸಿದ್ದಾರೆ.

ವೆಂಕಟಮಾಧವರು ಆಂಧ್ರದೇಶದವರು, ಇವರ ತಂದೆ ವೆಂಕಟಚಾರ್ಯ, ತಾಯಿ ಸುಂದರಿ ಪಿತಾಮಹ ಮಾಧವ, ಮಾತಾಮಹ ಭವಗೋಲ, ಇವರು ಕೌಶಿಕಗೋತ್ರದವರು.

ವೆಂಕಟಮಾಧವರ ಭಾಷ್ಯದ ಎಂಟನೆಯ ಅಷ್ಟಕದ ಮೂರನೆಯ ಅಧ್ಯಾಯದ ಅಂತ್ಯದಲ್ಲಿ ಬರುವ ಉಕ್ತಿಯಿಂದ ಅವರು ಜಗದೇಕವೀರರಾಜನ ರಾಜ್ಯದಲ್ಲಿ ವಾಸಿಸುತ್ತಿದ್ದರೆಂದು ತಿಳಿದುಬರುವುದು.

'ಏಕೋನಷಷ್ಠಮಧ್ಯಾಯಂ ವ್ಯಾಕರೋದಿತಿ ಮಾಧವಃ ।
ಜಗತಾಮೇಕವೀರಸ್ಯ ವಿಷಯೇ ನ್ಯವಸತ್ಸುಖಮ್ ॥

ನಿಘಂಟು ಭಾಷ್ಯಕಾರರಾದ ದೇವರಾಜಯಜ್ವರು ತಮ್ಮ ನಿಘಂಟುಭಾಷ್ಯದ ೧-೧೪-೧೮ ರಲ್ಲಿ ವೆಂಕಟಮಾದವರ ಭಾಷ್ಯವನ್ನುದ್ಧರಿಸಿ ಕೊನೆಯಲ್ಲಿ ''ಇತ್ಯತ್ರ (ವೆಂಕಟ) ಮಾಧವಸ್ಯ ಪ್ರಥಮಭಾಷ್ಯಮ್'' (೧-೪-೧೮) ಎಂದು ಹೇಳಿರುವುದರಿಂದಲೂ; ನಿಘಂಟು ಭಾಷ್ಯದ ಉಪೋದ್ಘಾತದಲ್ಲಿ ''ಶ್ರೀವೆಂಕಟಾಚಾರ್ಯ ತನಯಸ್ಯ ಮಾಧವಸ್ಯ ಭಾಷ್ಯಕೃತೌ ನಾಮಾನು ಕ್ರಮಣ್ಯಾಃ —— ಪರ್ಯಾಲೋಚನಾತ್ —— ಸ್ಕಂದಸ್ವಾಮಿ—ಭವಸ್ವಾಮಿ—ಗುರುದೇವ —ಶ್ರೀನಿವಾಸ—ಮಾಧವದೇವ—ಉವಟ—— ಭಟ್ಟಭಾಸ್ಕರಮಿಶ್ರ— — ಭರತಸ್ವಾಮ್ಯಾದಿ ವಿರಚಿತಾನಿ ವೇದಭಾಷ್ಯಾಣಿ ——ನಿರೀಕ್ಷ್ಯ ಕ್ರಿಯಂತೇ'' ಎಂದು ಹೇಳಿರುವುದರಿಂದ ವೇದಗಳಿಗೆ ಎಷ್ಟೊಂದು ಜನರು ಭಾಷ್ಯ ಬರೆದಿದ್ದರೆಂಬುದು ತಿಳಿಯುವುದಷ್ಟೇ ಅಲ್ಲದೆ, ವೆಂಕಟಮಾಧವರು ದೇವರಾಜಯಜ್ವರಿಗಿಂತ ಪೂರ್ವದವರೆಂಬುದು ಖಚಿತವಾಗುವುದು. ಆದುದರಿಂದ ವೆಂಕಟಮಾಧವರ ಕಾಲ ಸುಮಾರು ಕ್ರಿ. ಶ. ೧೨೦೦ ದೇವರಾಜಯಜ್ವರು ತಮ್ಮ ಕೃತಿಯಲ್ಲಿ ಅನೇಕ ಕಡೆ ವೆಂಕಟಮಾಧವರ ಭಾಷ್ಯವನ್ನುಲ್ಲೇಖಿಸಿದ್ದಾರೆ. ಅವುಗಳಲ್ಲಿ ಕೆಲವು ಈಗ ಲಭ್ಯವಿರುವ ವೆಂಕಟಮಾಧವಭಾಷ್ಯದಲ್ಲಿಲ್ಲ. ಆದುದರಿಂದ ವೆಂಕಟಮಾಧವರು ಎರಡು ಭಾಷ್ಯ ರಚಿಸಿರಬಹುದೆಂದು ಅಥವಾ ಇದುವರೆಗೆ ದೊರೆತ ಅವರ ಭಾಷ್ಯ ಸಮಗ್ರವಾಗಿ ಸಿಕ್ಕಿಲ್ಲವೆಂದೂ ಊಹಿಸಬಹುದಾಗಿದೆ. ವೆಂಕಟಮಾಧವರ ಭಾಷ್ಯ 'ಅನಂತಶಯನ ಗ್ರಂಥಾವಳಿ'ಯಲ್ಲಿ ಪ್ರಕಟವಾಗಿದೆ. ಡಾ॥ ಸ್ವರೂಪರು ವೆಂಕಟಮಾಧವರ ಭಾಷ್ಯವನ್ನು ನಾಲ್ಕು ಭಾಗಗಳಲ್ಲಿ ಪ್ರಕಟಿಸಿರುವರು.

## ಲಕ್ಷ್ಮಣಕೃತಭಾಷ್ಯ

ಶಾರದಾತನಯನ 'ಭಾವಪ್ರಕಾಶನ' ವೆಂಬ ಗ್ರಂಥದಲ್ಲುಕ್ತವಾದ 'ಆರ್ಯಾವರ್ತಾಹ್ವಯೇ ದೇಶೇ ಸ್ಫೀತೋ ಜನಪದೋ ಮಹಾನ್

ಮೇರೋತ್ತರ ಇತಿಖ್ಯಾತಸ್ತಸ್ಯ ದಕ್ಷಿಣಭಾಗತಃ
ಗ್ರಾಮೋ ಮಾಠರಪೂಜಾಖ್ಯೋ ದ್ವಿಜಸಾಹಸ್ರಸಂಹಿತಃ

ತತ್ರ ಲಕ್ಷ್ಮಣನಾಮಾಸೀತ್ ವಿಪ್ರಃ ಕಾಶ್ಯಪವಂಶಜಃ
ತ್ರಿಶತಾ ಕ್ರತುಭಿರ್ವಿಷ್ಣುಂ ತೋಷಯಾಮಾಸ ವೇದವಿತ್
ವೇದಾನಾಂ ಭಾಷ್ಯಮಕರೋನಾಮ್ನಾ ಯೋ ವೇದಭೂಷಣಮ್'

ಎಂಬ ಶ್ಲೋಕಗಳಿಂದ, ಲಕ್ಷ್ಮಣ ಎಂಬ ದ್ವಿಜೋತ್ತಮನು 'ವೇದಭೂಷಣ' ವೆಂಬ ವೇದಭಾಷ್ಯವನ್ನು ಬರೆದುದಾಗಿಯೂ. ಇವನು ಮೇರುಪರ್ವತದ ದಕ್ಷಿಣಭಾಗದಲ್ಲಿರುವ ಮಠಾತರ ಗ್ರಾಮದಲ್ಲಿ ಕಾಶ್ಯಪವಂಶದಲ್ಲಿ ಜನಿಸಿದನೆಂದೂ, ವೇದಶಾಸ್ತ್ರಜ್ಞನಾದ ಈತನು ಮೂವತ್ತು ಯಾಗಗಳನ್ನು ಮಾಡಿದನೆಂದೂ ತಿಳಿದುಬರುವುದು. ಶಾರದಾತನಯನ ಕಾಲ ಕ್ರಿ.ಶ. ೧೧೭೪–೧೨೪೪ ಆದುದರಿಂದ ಶಾರದಾತನಯನ ಪ್ರಪಿತಾಮಹನಾದ ಲಕ್ಷ್ಮಣನ ಕಾಲ ಕ್ರಿ.ಶ. ಸುಮಾರು ೧೧೦೦ 'ವೇದಭೂಷಣ' ಭಾಷ್ಯಗ್ರಂಥ ಇದುವರೆಗೆ ಲಭ್ಯವಾಗಿಲ್ಲ.

## ಧಾನುಷ್ಕಯಜ್ವಕೃತಭಾಷ್ಯ

ಇವರು ಮೂರು ವೇದಗಳಿಗೂ ಭಾಷ್ಯರಚನೆ ಮಾಡಿದ್ದರೆಂಬ ಅಂಶವು ವೇದಾಚಾರ್ಯರ 'ಸುದರ್ಶನಮೀಮಾಂಸಾಗ್ರಂಥ'ದ ''ತ್ರಿವೇದೀಭಾಷ್ಯಕಾರೇಣ ಧಾನುಷ್ಕಯಜ್ವನಾ ತಂ ಚರಣಶಬ್ದಸ್ಸುದರ್ಶನಾಭಿಧಾಯೀತಿ ದೇವತಾ ವಿಶೇಷಸ್ಸುದರ್ಶನಮಿತಿ ಸ್ಪಷ್ಟಂ ವ್ಯಾಖ್ಯಾತಂ'' ಎಂಬ ಉಕ್ತಿಯಿಂದ ತಿಳಿದುಬರುತ್ತದೆ. ಆದರೆ ಈ ಭಾಷ್ಯಗಳು ಈವರೆಗೆ ಲಭ್ಯವಾಗಿಲ್ಲ, ಇವರ ಕಾಲ ಸುಮಾರು ಕ್ರಿ. ಶ. ಹದಿಮೂರನೆಯ ಶತಮಾನ.

## ಆನಂದತೀರ್ಥರಭಾಷ್ಯ

ಆನಂದತೀರ್ಥರಿಗೆ ಪೂರ್ಣಪ್ರಜ್ಞ, ಮಧ್ವ, ಇತ್ಯಾದಿ ಹೆಸರುಗಳು ರೂಢಿಯಲ್ಲಿವೆ. ಇವರು ದ್ವೈತಸಿದ್ಧಾಂತದ ಪ್ರತಿಷ್ಠಾಪನಾಚಾರ್ಯರೆಂದು'' ಪ್ರಸಿದ್ಧರಾಗಿದ್ದಾರೆ. ಇವರ ಭಾಷ್ಯವು ಋಗ್ವೇದದ ಪ್ರಥಮ ಮಂಡಲದ ೪೦ ಸೂಕ್ತಗಳಿಗೆ ಮಾತ್ರ ಇದೆ. ಹಸ್ತಪ್ರತಿಯಲ್ಲಿಯೂ ೪೦ ಸೂಕ್ತಗಳಿಂದ ಮೇಲೆ 'ಋಗ್ಭಾಷ್ಯಂ ಸಂಪೂರ್ಣಂ' ಎಂದಿದೆ. ಆನಂದತೀರ್ಥರ ಭಾಷ್ಯ ಶ್ಲೋಕರೂಪದಲ್ಲಿದೆ. ಇವರು ಭಾಷ್ಯಾರಂಭದಲ್ಲಿ

ಯಃ ಪೂರ್ಣತ್ವಾತ್ ಪುಮಾನ್ ನಾಮ ಪೌರುಷೇಸೂಕ್ತ ಈರಿತಃ ।
ಸ ಏವಾಖಿಲವೇದಾರ್ಥ ಸರ್ವಶಾಸ್ತ್ರಾ ಏವ ಚ

ಎಂದು ಹೇಳಿ ವೇದವು ಭಗವಂತನಾದ ನಾರಾಯಣನನ್ನು ಪ್ರತಿಪಾದಿಸುವುದೆಂಬ ದೃಷ್ಟಿಯಿಂದ ಭಾಷ್ಯಬರೆದಿದ್ದಾರೆ.

ಆನಂದತೀರ್ಥರು ತಮ್ಮ ಗ್ರಂಥದಲ್ಲಿ ಪೈಂಗಿಶ್ರುತಿ, ಬರ್ಕಶ್ರುತಿ, ಶೌರಶ್ರುತಿ, ಆನಂದ ಶ್ರುತಿ, ಸೌವರ್ಣೀಶ್ರುತಿ ಇತ್ಯಾದಿ ಶ್ರುತಿಗಳನ್ನುದಹರಿಸಿದ್ದಾರೆ. ಆದರೆ ಇವು ಯಾವುವೆಂಬುದು ನಿಖರವಾಗಿ ಇನ್ನೂ ತಿಳಿಯವು.

ಆನಂದತೀರ್ಥರು ಋಗ್ಭಾಷ್ಯ, ಉಪನಿಷದ್ಭಾಷ್ಯಗಳನ್ನಷ್ಟೇ ಅಲ್ಲದೆ ಮಹಾಭಾರತ ತಾತ್ಪರ್ಯನಿರ್ಣಯ, ಇತ್ಯಾದಿಯಾಗಿ ಬರೆದಿದ್ದಾರೆ. ಋಗ್ಭಾಷ್ಯಕ್ಕೆ ಜಯತೀರ್ಥರು ಟೀಕೆಯನ್ನು ಬರೆದಿದ್ದಾರೆ. ಆನಂದತೀರ್ಥರ ಋಗ್ಭಾಷ್ಯಕ್ಕೆ ರಾಘವೇಂದ್ರಸ್ವಾಮಿಗಳವರು ಸರಳವಾದ ಸಂಸ್ಕೃತದಲ್ಲಿ ತಾತ್ಪರ್ಯವನ್ನು ಬರೆದಿದ್ದಾರೆ.

## ಆತ್ಮಾನಂದರಭಾಷ್ಯ

ಆತ್ಮಾನಂದರು ತಮ್ಮ ಭಾಷ್ಯದ ಆರಂಭದಲ್ಲಿ " ಅಧಿಯಜ್ಞವಿಷಯಂ ಸ್ಕಂದಾದಿಭಾಷ್ಯಂ ನಿರುಕ್ತಮಧಿದೈವತ ವಿಷಯಂ ಇದಂತು ಭಾಷ್ಯಮಧ್ಯಾತ್ಮವಿಷಯಮಿತಿ ನ ಚ ಭಿನ್ನ ವಿಷಯಾಣಾಂ ವಿರೋಧಃ ಅಸ್ಯ ಭಾಷ್ಯಸ್ಯ ಮೂಲಂ ವಿಷ್ಣುಧರ್ಮೋತ್ತರಮ್ " ಎಂದು ಬರೆದು ತಮ್ಮ ಭಾಷ್ಯವು ಆಧ್ಯಾತ್ಮಪರವಾಗಿರುವುದನ್ನು ಸ್ಪಷ್ಟಪಡಿಸಿದ್ದಾರೆ.

ಆತ್ಮಾನಂದರು ತಮ್ಮ ಭಾಷ್ಯದಲ್ಲಿ ಸ್ಕಂದಸ್ವಾಮಿ, ಉದ್ಗೀಥ, ಭಾಸ್ಕರ ಮುಂತಾದವರ ಹೆಸರನ್ನೂ ಉಲ್ಲೇಖಿಸಿರುವುದರಿಂದ ಇವರು ಅವರಿಗಿಂತ ಅರ್ವಾಚೀನರೆಂದೂ, ಆದರೆ ನಾರಾಯಣರ ಹೆಸರು ಉಲ್ಲೇಖವಾಗಿಲ್ಲವಾದ್ದರಿಂದ ನಾರಾಯಣರಿಗಿಂತ ಪ್ರಾಚೀನರಿರ ಬಹುದೆಂದೂ ಹೇಳಬಹುದು.

## ಸಾಯಣಭಾಷ್ಯ

ಇದುವರೆಗೆ ಲಭ್ಯವಾಗಿರುವ ಭಾಷ್ಯಗಳಲ್ಲೆಲ್ಲಾ ಅತ್ಯಂತ ಮುಖ್ಯ ಹಾಗೂ ಪ್ರಸಿದ್ಧವಾದ ಭಾಷ್ಯ ಸಾಯಣಭಾಷ್ಯ. ಸಾಯಣರು ನಾಲ್ಕು ವೇದಗಳಿಗೂ ಭಾಷ್ಯವನ್ನು ಬರೆದಿದ್ದಾರೆ.

ಸಾಯಣಭಾಷ್ಯವು ಅತ್ಯಂತ ವಿಸ್ತಾರವಾದ ಭಾಷ್ಯ. ಇದರಲ್ಲಿ ಪ್ರತಿಯೊಂದು ಪದಕ್ಕೂ ಅರ್ಥವನ್ನು, ಅರ್ಥವಿವರಣೆಯನ್ನೂ ಕೊಡಲಾಗಿದೆ. ಮಂತ್ರಗಳ ವಿನಿಯೋಗ, ಯಜ್ಞಯಾಗಾದಿಗಳಿಗೆ ಸಂಬಂಧಪಟ್ಟ ವಿಷಯನಿರೂಪಣೆ, ಮುಂತಾದ ವಿಷಯಗಳು ವಿಸ್ತಾರವಾಗಿ ನಿರೂಪಿಸಲ್ಪಟ್ಟಿವೆ. ಸಾಯಣರು ತಮ್ಮ ಭಾಷ್ಯದಲ್ಲಿ ಆಖ್ಯಾನಗಳನ್ನು, ಪೂರ್ವೇತಿಹಾಸಗಳನ್ನೂ ಉದಾಹರಿಸಿದ್ದಾರೆ. ನಿರುಕ್ತ, ವ್ಯಾಕರಣ, ಛಂದಸ್ಸು, ಶ್ರೌತಸೂತ್ರ, ಮೀಮಾಂಸಾ ಮೊದಲಾದ ಗ್ರಂಥಗಳ ಆಧಾರಗಳನ್ನಿತ್ತು ಭಾಷ್ಯಗಳನ್ನು ರಚಿಸಿದ್ದಾರೆ.

ಈ ಭಾಷ್ಯದಲ್ಲಿ ಸಂದರ್ಭಾನುಸಾರವಾಗಿ ನಾಲ್ಕುವೇದಗಳು, ಬ್ರಾಹ್ಮಣಗಳು, ಆರಣ್ಯಕಗಳು, ಉಪನಿಷತ್ತುಗಳು, ನಿರುಕ್ತ, ಶ್ರೌತಸೂತ್ರಗಳು, ಪೂರ್ವಮೀಮಾಂಸಾ ಮೊದಲಾದ ಗ್ರಂಥಗಳಿಂದ ಪ್ರಮಾಣ ವಾಕ್ಯಗಳನ್ನು ಕೊಡಲಾಗಿದೆ. ವಿಷಯಗಳು ಈ ರೀತಿ ಪ್ರಮಾಣ ಪುರಸ್ಸರವಾಗಿಯೂ, ಯುಕ್ತಿಪೂರ್ವಕವಾಗಿಯೂ, ಪ್ರತಿಪಾದಿಸಲ್ಪಟ್ಟಿವೆ. ಈ ಭಾಷ್ಯದಲ್ಲಿ ಸಾಯಣರು ಪಂಡಿತ ಪಾಮರರೀರ್ವರಿಗೂ ಮಂತ್ರದ ಅರ್ಥವು ಸುಲಭವಾಗಿ ಮನದುಂಬುವಂತೆ ವ್ಯಾಖ್ಯಾನವನ್ನು ಬರೆದಿದ್ದಾರೆ. ಆದುದರಿಂದ ವೇದಾರ್ಥವನ್ನರಿಯಲು ಯತ್ನಿಸುವವರಿಗೆ ಸಾಯಣಭಾಷ್ಯವು ಅತ್ಯಂತ ಅವಶ್ಯವೂ, ಉಪಯುಕ್ತವೂ ಆಗಿದೆ.

## ಭಾಷ್ಯದ ಕ್ರಮ

ಸಾಯಣಾಚಾರ್ಯರು ಪ್ರತಿಯೊಂದು ವೇದಭಾಷ್ಯಕ್ಕೂ ಭೂಮಿಕೆಯನ್ನು ಬರೆದಿದ್ದಾರೆ. ಅದರಂತೆ ಋಗ್ವೇದಭಾಷ್ಯಕ್ಕೂ ಕೂಡ ಋಗ್ವೇದಭೂಮಿಕೆಯನ್ನು ರಚಿಸಿದ್ದಾರೆ. ಈ ಭೂಮಿಕೆಯು ಪೀಠಿಕಾರೂಪವಾಗಿದ್ದು ವಿಸ್ತಾರವಾಗಿದೆ. ಇದರಲ್ಲಿ ವೇದವೆಂದರೇನು, ವೇದದ ಮಹತ್ವ ; ವೇದದ ಅಪೌರುಷೇಯತ್ವ, ವೇದದಲ್ಲಿ ಪ್ರತಿಪಾದಿತವಾಗಿರುವ ವಿಷಯಗಳು, ವೇದಾಭ್ಯಾಸದ ನಿಯಮಗಳು, ವೇದಾಧಿಕಾರಿ, ವೇದಾರ್ಥಜ್ಞಾನದಿಂದುಂಟಾಗುವ ಪ್ರಯೋಜನ ಇವೇ ಮೊದಲಾದ ಗಹನವಾದ ವಿಷಯಗಳನ್ನು ಚರ್ಚೆಮಾಡಿ, ಮೀಮಾಂಸಾ, ವ್ಯಾಕರಣ, ಪುರಾಣ, ಇತಿಹಾಸ ಮುಂತಾದ ಅನೇಕ ಗ್ರಂಥಗಳ ಪ್ರಮಾಣಗಳನ್ನುದಹರಿಸಿ ಸಿದ್ಧಾಂತವನ್ನು ಸ್ಥಾಪನೆಮಾಡಿದ್ದಾರೆ. ಜೈಮಿನಿಯ ಮೀಮಾಂಸಾಸೂತ್ರಗಳ ಅಧಿಕರಣಗಳನ್ನೇ ಸಂಪೂರ್ಣವಾಗಿ ಉಪಯೋಗಿಸಿಕೊಂಡು, ಆ ಸೂತ್ರಗಳ ಮೇಲೆ ತಮ್ಮ ಅಭಿಪ್ರಾಯಗಳನ್ನು ಕೊಟ್ಟು, ನ್ಯಾಯಸಮ್ಮತವಾಗಿ ವಿಷಯಗಳನ್ನು ಪ್ರತಿಪಾದಿಸಿದ್ದಾರೆ. ಈ ರೀತಿ ಈ ಭಾಷ್ಯಭೂಮಿಕೆಯು ಗಹನವಾದ ವಿಷಯಗಳಿಂದ ಕೂಡಿ ಅತ್ಯಂತ ಉಪಯುಕ್ತವಾಗಿದೆ.

ಪ್ರತಿಯೊಂದು ಸೂಕ್ತಕ್ಕೂ ಭಾಷ್ಯವನ್ನು ಬರೆಯುವ ಮೊದಲು ಸೂಕ್ತದ ಋಷಿ, ದೇವತಾ, ಛಂದಸ್ಸು, ವಿನಿಯೋಗ, ವಿನಿಯೋಗಕ್ರಮ, ಇತ್ಯಾದಿಗಳನ್ನು ವಿವರಿಸಿನಂತರ ಸೂಕ್ತಕ್ಕೆ ವ್ಯಾಖ್ಯಾನ ಬರೆದಿದ್ದಾರೆ. ಪ್ರತಿಯೊಂದು ಪದವನ್ನು ಸಮಗ್ರವಾಗಿ ಅರ್ಥಸಹಿತವಾಗಿ ವಿವರಿಸಿ, ಸಂದರ್ಭಾನುಸಾರವಾಗಿ ಪೂರ್ವೇತಿಹಾಸಗಳನ್ನೂ, ಆಖ್ಯಾನಗಳನ್ನೂ ವಿವರಿಸಿ, ಅವುಗಳು ಯಾವ ಗ್ರಂಥದಲ್ಲಿ ಇರುವುವು ಎಂಬುದನ್ನು ವಿವರಿಸುವರು. ಮುಖ್ಯವಾದ ಪದಗಳ ರೂಪನಿಷ್ಪತ್ತಿ,ವ್ಯುತ್ಪತ್ತಿ ಮುಂತಾದ ವಿಚಾರಗಳನ್ನು ನಿರುಕ್ತ ಮುಂತಾದ ಗ್ರಂಥಗಳ ಆಧಾರ ಹಾಗೂ ಪಾಣಿನಿಯ ವ್ಯಾಕರಣಾನುಸಾರವಾಗಿಯೂ ವಿವರಿಸಿದ್ದಾರೆ. ಈ ರೀತಿ ಸಾಯಣ ಭಾಷ್ಯವು ಅತ್ಯಂತ ವಿಸ್ತಾರವಾಗಿಯೂ ಎಲ್ಲಾ ವಿಷಯಗಳನ್ನೊಳಗೊಂಡಿರುವುದಾಗಿಯೂ ಇದೆ.

ಸಾಯಣರ ಭಾಷ್ಯದ ಹೆಸರು ಮಾಧವೀಯವೇದಾರ್ಥ ಪ್ರಕಾಶಿಕಾ, ಈ ಭಾಷ್ಯವನ್ನು ಸಾಯಣರು ತಮ್ಮ ಗುರುಗಳಾದ ವಿದ್ಯಾತೀರ್ಥರಿಗೆ ಸಮರ್ಪಿಸಿದ್ದಾರೆ.

ಸಾಯಣರು ತಮ್ಮ ಭಾಷ್ಯದಲ್ಲಿ 'ಮಾಧವೀಯ' ಎಂಬ ಶಬ್ದಪ್ರಯೋಗಮಾಡಿದ್ದಾರೆ. ಇದರಿಂದ ಇವುಗಳನ್ನು ಮಾಧವಾಚಾರ್ಯರೇ ರಚಿಸಿದ್ದರೆಂಬ ಸಂಶಯಕ್ಕೆ ಅವಕಾಶವಿಲ್ಲ. ಮಾಧವಾಚಾರ್ಯರ ದ್ವಾರಾ ಸಾಯಣರ ಸಾಹಿತ್ಯನಿರ್ಮಾಣಕ್ಕೆ ಅವಕಾಶವಾಯಿತೆಂಬುದಕ್ಕೆ ಇದು ನಿದರ್ಶಕವಾಗಿದೆ.

## ಸಾಯಣ ಭಾಷ್ಯಗಳ ವಿಸ್ತಾರ

ಸಾಯಣಾಚಾರ್ಯರು ಈ ಕೆಳಗಿನ ಕೃತಿಗಳಿಗೆ ಭಾಷ್ಯ ಬರೆದಿದ್ದಾರೆ.

೧. ಕೃಷ್ಣಯಜುರ್ವೇದ ಸಂಹಿತಾ
೨. ಋಗ್ವೇದ ಸಂಹಿತಾ
೩. ಸಾಮವೇದ ಸಂಹಿತಾ
೪. ಶುಕ್ಲಯಜುರ್ವೇದ ಸಂಹಿತಾ
೫. ತೈತ್ತಿರೀಯ ಸಂಹಿತಾ
೬. ತೈತ್ತಿರೀಯ ಬ್ರಾಹ್ಮಣ
೭. ಐತರೇಯ ಬ್ರಾಹ್ಮಣ
೮. ತಾಂಡ್ಯ (ಪಂಚವಿಂಶ) ಬ್ರಾಹ್ಮಣ
೯. ಷಡ್ವಿಂಶ ಬ್ರಾಹ್ಮಣ
೧೦. ಸಾಮವಿಧಾನ ಬ್ರಾಹ್ಮಣ
೧೧. ಆರ್ಷೇಯ ಬ್ರಾಹ್ಮಣ
೧೨. ದೇವತಾಧ್ಯಾಯ ಬ್ರಾಹ್ಮಣ
೧೩. ಉಪನಿಷತ್ ಬ್ರಾಹ್ಮಣ
೧೪. ಸಂಹಿತೋಪನಿಷತ್ ಬ್ರಾಹ್ಮಣ
೧೫. ವಂಶ ಬ್ರಾಹ್ಮಣ
೧೬. ಶತಪಥ ಬ್ರಾಹ್ಮಣ
೧೭. ತೈತ್ತಿರೀಯ ಆರಣ್ಯಕ
೧೮. ಐತರೇಯ ಆರಣ್ಯಕ
೧೯. ತೈತ್ತಿರೀಯೋಪನಿಷತ್ತು

ಈ ರೀತಿ ಸಾಯಣರು ಅನೇಕ ವೈದಿಕ ಗ್ರಂಥಗಳಿಗೆ ವ್ಯಾಪಕವಾಗಿ ಹಾಗೂ ವಿಸ್ತಾರವಾಗಿ ಭಾಷ್ಯಗಳನ್ನು ಬರೆದಿದ್ದಾರೆ.

ಈ ಎಲ್ಲ ಭಾಷ್ಯಗಳ ವ್ಯಾಪಕತೆಯನ್ನು ಗಮನಿಸಿದ ಆಧುನಿಕ ವಿಮರ್ಶಕರು ಇವುಗಳನ್ನೆಲ್ಲಾ ಒಬ್ಬರು ಬರೆಯಲು ಸಾಧ್ಯವೇ ? ಎಂದು ಶಂಕಿಸಿದ್ದಾರೆ. ಈ ಭಾಷ್ಯಗಳು ಅನೇಕ ಕರ್ತೃಕಗಳೆಂದೂ ಸಾಯಣಾಚಾರ್ಯರ ನೇತೃತ್ವದಲ್ಲಿ ಈ ಭಾಷ್ಯಗಳ ರಚನೆಯಾಗಿರಬಹುದೆಂದೂ ಊಹಿಸುತ್ತಾರೆ. ಇನ್ನೂ ಕೆಲವು ವಿಮರ್ಶಕರು ಸಾಯಣರ ಭಾಷ್ಯವು ಏಕ ಕೃರ್ತೃಕವೆಂದೂ ಅಭಿಪ್ರಾಯ ವ್ಯಕ್ತಮಾಡಿದ್ದಾರೆ. ಒಟ್ಟಿನಲ್ಲಿ ಈ ವಿಸ್ತೃತಪೂರ್ಣವಾದ ಭಾಷ್ಯಗಳು ಸಾಯಣಾಚಾರ್ಯರ ವೈದಿಕ ಸಾಹಿತ್ಯಕ್ಕೆ ನೀಡಿರುವ ಅಪೂರ್ವವಾದ ಕಾಣಿಕೆಗಳಾಗಿವೆ.

ಸಾಯಣರು ತಮ್ಮ ಗ್ರಂಥರಚನೆಯ ಕಾಲನ ವಿಷಯವನ್ನು ಎಲ್ಲಿಯೂ ಸ್ಪಷ್ಟವಾಗಿ ತಿಳಿಸಿಲ್ಲ. ವಿಜಯನಗರ ಸಾಮ್ರಾಜ್ಯದ ಬುಕ್ಕ ಮಹಾರಾಜರ ಆಳ್ವಿಕೆಯ ಕಾಲದಲ್ಲಿ ಋಗ್ವೇದ ಭಾಷ್ಯವನ್ನು ಸಾಯಣರು ಬರೆದರು ಎಂಬ ಅಂಶವು ಭಾಷ್ಯದಲ್ಲಿ ಬರುವ ಶ್ರೀಮತ್ ರಾಜಾಧಿರಾಜ ಪರಮೇಶ್ವರ ವೈದಿಕಮಾರ್ಗ (ಪ್ರಣೀತ) ಪ್ರವರ್ತಕ ಶ್ರೀ ವೀರಬುಕ್ಕ ಸಾಮ್ರಾಜ್ಯಧುರಂಧರೇ ಸಾಯಣಾಚಾರ್ಯೇಣ ವಿರಚಿತೇ ಎಂಬ ಮಾತುಗಳಿಂದ ತಿಳಿದು ಬರುತ್ತದೆ. ಆದರೆ ಅಥರ್ವಸಂಹಿತೆಯ ಭಾಷ್ಯಾವತರಣಿಕೆಯಲ್ಲಿ " ತತ್ ಕಟಾಕ್ಷೇಣ ತದ್ರೂಪಂ ದಧತೋ ಬುಕ್ಕ ಭೂಪತೇಃ ಅಭೂತ್ ಹರಿಹರೋ ರಾಜಾಕ್ಷೀರಾಬ್ಧೇರಿವ ಚಂದ್ರಮಾಃ " ಎಂದೂ, ಶತಪಥ ಬ್ರಾಹ್ಮಣದ ಭಾಷ್ಯದ ಆರಂಭದಲ್ಲಿ—

ವಿಜಿತಾರಾತಿವ್ರಾತಃ ವೀರಃ ಶ್ರೀ ಹರಿಹರಃ ಕ್ಷಮಾಧೀಶಃ
ಧರ್ಮಬ್ರಹ್ಮಾಧ್ವನ್ಯಃ ಸಮಾದಿಶತ್ ಸಾಯಣಾಚಾರ್ಯಮ್

ಎಂದು ಬುಕ್ಕಮಹಾಜನ ಪುತ್ರನಾದ ಎರಡನೆಯ ಹರಿಹರನ ಉಲ್ಲೇಖವಿದೆ.

ಇದರಿಂದ, ಬುಕ್ಕಮಹಾರಾಜನ ಆಳ್ವಿಕೆಯ ಕಾಲದಿಂದ ಎರಡನೆಯ ಹರಿಹರನ ಆಳ್ವಿಕೆಯ ಕಾಲದವರೆಗೆ ಸಾಯಣಭಾಷ್ಯ ಗ್ರಂಥಗಳ ರಚನೆಯ ಕಾಲ ಎಂದು ತಿಳಿದುಬರುತ್ತದೆ.

## ಸಾಯಣರು

ಸಾಯಣರ ತಂದೆ ಮಾಯಣ, ತಾಯಿ ಶ್ರೀಮತಿ ; ಗೋತ್ರ ಭಾರದ್ವಾಜಗೋತ್ರ ಕೃಷ್ಣಯಜುರ್ವೇದದ ಬೋಧಾಯನ ಶಾಖಾನುಸಾರಿಗಳು ಸಾಯಣರ ಅಣ್ಣ ಮಾಧವಾಚಾರ್ಯ, ತಮ್ಮ ಭೋಗನಾಥ. ಇವರ ಅಣ್ಣ ಮಾಧವಾಚಾರ್ಯರ ಮೂಲಕ ತಮ್ಮ ವೇದ ಭಾಷ್ಯದ ಕಾರ್ಯಕ್ಕೆ ಪ್ರೇರಣೆಯುಂಟಾದುದರಿಂದ ಇವರ ಭಾಷ್ಯವು ' ಮಾಧವೀಯ ' ಎಂಬ ಹೆಸರನ್ನುಳ್ಳದ್ದಾಗಿದೆ. ಸಂಭಾಷಿತಸುಧಾನಿಧಿ, ಪ್ರಾಯಶ್ಚಿತ್ತ ಸುಧಾನಿಧಿ, ಧಾತುವೃತ್ತಿ,

ಅಲಂಕಾರಸುಧಾನಿಧಿ, ಪುರುಷಾರ್ಥಸುಧಾನಿಧಿ, ಆಯುರ್ವೇದ ಸುಧಾನಿಧಿ, ಯಜ್ಞತಂತ್ರ ಸುಧಾನಿಧಿ—ಈ ಗ್ರಂಥಗಳೂ ಕೂಡ ಸಾಯಣಕೃತವೇ ಎಂದು ನಂಬಲಾಗಿದೆ.

## ಸಾಯಣಭಾಷ್ಯ ವಿಮರ್ಶೆ

ವೇದಭಾಷ್ಯಗಳಲ್ಲಿ ಸಾಯಣಭಾಷ್ಯಗಳಷ್ಟು ಸಮಗ್ರವಾಗಿ ಯಾವ ಭಾಷ್ಯವೂ ಇಲ್ಲವೆಂದೇ ಹೇಳಬಹುದು. ಸಾಯಣಾಚಾರ್ಯರಿಗಿಂತ ಮೊದಲು ಮತ್ತು ನಂತರ ಅನೇಕರು ಭಾಷ್ಯಗಳನ್ನು ರಚಿಸಿದ್ದರೂ, ಯಾರೂ ನಾಲ್ಕೂ ವೇದಗಳಿಗೆ ಮತ್ತು ತತ್ಸಂಬಧವಾದ ಅನೇಕ ಬ್ರಾಹ್ಮಣಗಳು ಮತ್ತು ಆರಣ್ಯಕಗಳಿಗೆ ಭಾಷ್ಯವನ್ನು ರಚಿಸಿಲ್ಲ.

ಸಂಪ್ರದಾಯಾನುಸಾರವಾದ ಅರ್ಥವೂ ಸಹ ಸಾಯಣಭಾಷ್ಯದಲ್ಲಿ ಇರುವಷ್ಟು ಸ್ಪಷ್ಟ ಹಾಗೂ ಸಮಗ್ರವಾಗಿ ಇನ್ನಾವ ಭಾಷ್ಯದಲ್ಲಿಯೂ ಕಂಡುಬರುವುದಿಲ್ಲ. ಆಧುನಿಕ ವಿದ್ವಾಂಸರೂ ಕೂಡ ವೇದದ ವಿಶೇಷಾಂಶಗಳನ್ನು ತಿಳಿಯಬೇಕಾದರೆ ಸಾಯಣಭಾಷ್ಯವನ್ನು ಅಭ್ಯಸಿಸುವರು. ಆದ್ದರಿಂದ ಸಂಪ್ರದಾಯಾನುಸಾರಿಗಳಷ್ಟೇ ಅಲ್ಲದೆ ಆಧುನಿಕ ವಿದ್ವಾಂಸರಿಗೂ ಸಾಯಣಭಾಷ್ಯವು ಅತ್ಯಂತ ಅವಶ್ಯ ಹಾಗೂ ಉಪಯುಕ್ತ ಗ್ರಂಥವಾಗಿದೆ.

ಸಾಯಣಾಚಾರ್ಯರ ಭಾಷ್ಯದಲ್ಲಿ ಕೆಲವು ಲೋಪದೋಷಗಳಿದ್ದರೂ ಕೂಡ ಈ ಭಾಷ್ಯದಿಂದಾಗುವ ಉಪಕಾರ ಅತಿ ಹೆಚ್ಚಿನದು. ಒಟ್ಟಿನಲ್ಲಿ ವೇದಭಾಷ್ಯಗಳಲ್ಲಿ ಸಾಯಣಭಾಷ್ಯದ ಸ್ಥಾನ ಅತ್ಯುನ್ನತ : ವೇದಾರ್ಥ ವಿಶದೀಕರಣಕ್ಕೆ ಸಾಯಣಭಾಷ್ಯದ ಕೊಡುಗೆ ಅಪಾರ.

## ರಾವಣಕೃತಭಾಷ್ಯ

ರಾವಣರು ಋಗ್ವೇದ ಮತ್ತು ಯಜುರ್ವೇದಗಳಿಗೆ ಭಾಷ್ಯವನ್ನು ಬರೆದಿರುವುದಾಗಿ ತಿಳಿದುಬಂದಿದೆ. ಆದರೆ ಯಜುರ್ವೇದದ ಭಾಷ್ಯವು ಉಪಲಬ್ಧವಾಗಿಲ್ಲ. ಋಗ್ವೇದ ಭಾಷ್ಯದ ಕೆಲವು ಭಾಗಗಳು ಪ್ರಕಟವಾಗಿವೆ.

ಈ ಭಾಷ್ಯಕ್ಕೂ, ಆತ್ಮಾನಂದರ ಭಾಷ್ಯಕ್ಕೂ ಸ್ವಲ್ಪ ಹೋಲಿಕೆ ಇದೆ. ಏಕೆಂದರೆ ಎರಡು ಭಾಷ್ಯಗಳೂ ಆಧ್ಯಾತ್ಮರೀತಿಯಿಂದ ವೇದಾರ್ಥವನ್ನರಿಯಲಿಕ್ಕೆ ಪ್ರಯತ್ನಿಸಿದುವು. ಈ ಅಂಶವು ಸೂರ್ಯಪಂಡಿತನ ಈ ಕೆಳಗಣ ಉಕ್ತಿಯಿಂದಲೂ ವ್ಯಕ್ತವಾಗುವುದು. "ರಾವಣಭಾಷ್ಯೇ ತು" ಆಧ್ಯಾತ್ಮ ರೀತ್ಯಾಭ್ಯಂತರ ಸಂಗ್ರಾಮವಿಷಯೋ ದರ್ಶಿತಃ–ರಾವಣರು ಋಗ್ವೇದಕ್ಕೆ ಪದಪಾಠವನ್ನು ರಚಿಸಿದ್ದಾರೆ. ಏಳನೆಯ ಅಷ್ಟಕದ ಪದಪಾಠ ಮಾತ್ರ ಇದುವರೆಗೆ ಸಿಕ್ಕಿದೆ.

## ಮುದ್ಗಲಕೃತಭಾಷ್ಯ

ಈ ಭಾಷ್ಯದಲ್ಲಿ, ಇದರ ಹಿಂದಿನ ಭಾಷ್ಯಗಳನ್ನೆಲ್ಲಾ ನೋಡಿ ಸಾರಭೂತವಾದ ಭಾಗಗಳನ್ನು ಮಾತ್ರ ಶೇಖರಿಸಲಾಗಿದೆ.

ಆಲೋಚ್ಯ ಪೂರ್ವಭಾಷ್ಯಂ ಚ ಬಹ್ವೃಚಸ್ಯ ಸಮಂತತಃ
ಗಹನಂ ಮನ್ಯಮಾನೇನ ಸಂಭೋಧೇನ ಸಮುದ್ಧೃತಮ್
ನವನೀತಂ ಯಥಾ ಕ್ಷೀರಾತ್ ಸಿಕತಾಯಾಶ್ಚ ಕಾಂಚನಮ್
ತಥಾ ಸಮುದ್ಧೃತಂ ಸಾರಂ ಪ್ರಾಣಿನಾಂ ಬೋಧಸಿದ್ಧಯೇ

ಮೌದ್ಗಲ್ಯಗೋತ್ರೇಣ ಚ ಮುದ್ಗಲೇನ
ಹ್ಯಾತ್ಮಾನಂಭೂತೇನ ಸುಸಂಸ್ಕೃತೇನ ।
ಯಥಾರ್ಥ ಭೂತೇನ ಸಂಸಾಧಕೇನ
ಸಮುದ್ಧೃತಂ ಸಾರಮಿದಂ ವರಿಷ್ಠಮ್ ॥

ಹಿಂದಣ ಭಾಷ್ಯಗಳನ್ನೆಲ್ಲಾ ಅಭ್ಯಸಿಸಿ, ಅವುಗಳ ಸಾರಸಂಗ್ರಹವನ್ನು ಬರೆಯುವುದೇ ಮೂಲ ಉದ್ದೇಶ ಎಂಬುದಾಗಿ ಮುದ್ಗಲರೇ ಹೇಳಿದ್ದಾರೆ.

## ಚತುರ್ವೇದಸ್ವಾಮಿಗಳಭಾಷ್ಯ

ಈ ಭಾಷ್ಯದ ಶೈಲಿಯು ಸಾಂಪ್ರದಾಯಿಕ ಶೈಲಿಗಿಂತಸ್ವಲ್ಪ ಭಿನ್ನವಾಗಿದೆ. ಸೂರ್ಯಪಂಡಿತರ ಗೀತಾಟೀಕೆಯ ಭೂಮಿಕೆಯಿಂದ ಚತುರ್ವೇದ ಸ್ವಾಮಿಗಳು ಅವರ. ಗುರುಗಳಾಗಿದ್ದರೆಂದು ತಿಳಿದು ಬರುವುದು.

## ದೇವಸ್ವಾಮಿಗಳಭಾಷ್ಯ

ಈ ಭಾಷ್ಯವು ಇನ್ನೂ ಪ್ರಕಟವಾಗಿಲ್ಲವಾದರೂ ಇವರು ಋಗ್ವೇದಕ್ಕೆ ವ್ಯಾಖ್ಯಾನವನ್ನು ರಚಿಸಿದ್ದರೆಂಬುದು ಅನೇಕ ಆಧಾರಗಳಿಂದ ತಿಳಿದುಬರುವುದು.

## ಭಟ್ಟಭಾಸ್ಕರಭಾಷ್ಯ

ಈ ಭಾಷ್ಯವು ಇದುವರೆಗೆ ಲಭ್ಯವಾಗಿಲ್ಲ. ಭಟ್ಟಭಾಸ್ಕರರು ಐತರೇಯ ಬ್ರಾಹ್ಮಣಕ್ಕೆ ವ್ಯಾಖ್ಯಾನ ಬರೆದಿದ್ದಾರೆ.

## ಉವಟಕೃತಭಾಷ್ಯ

ನಿಘಂಟುವಿನಲ್ಲಿ (೩-೪-೧೧) 'ಅವಾತ್ಯ' ಎಂಬ ಪದದ ಅರ್ಥವನ್ನು ತಿಳಿಸುವ ಸಂದರ್ಭದಲ್ಲಿ ಉವಟಕೃತವಾದ ಪಂಕ್ತಿಯೊಂದು ಉದ್ಧೃತವಾಗಿದೆ. ಆದರೆ ಈ ಪಂಕ್ತಿಯು ಯಜುರ್ವೇದ ಭಾಷ್ಯದಲ್ಲಿಯೂ ಇದೆ. ಆದುದರಿಂದ ಉವಟರು ಋಗ್ವೇದ ಅಥವಾ ಯಜುರ್ವೇದಕ್ಕೆ ಭಾಷ್ಯ ಬರೆದಿರಬಹುದು.

## ಹರದತ್ತರು

ಇವರು ಆಶ್ವಲಾಯನ ಮಂತ್ರಪಾಠಕ್ಕೆ ಭಾಷ್ಯವನ್ನು ರಚಿಸಿದ್ದಾರೆ. ದೇವರಾಜರ ನಿಘಂಟು ಭಾಷ್ಯದಲ್ಲಿ ಅನೇಕ ಕಡೆಗಳಲ್ಲಿ ಹರದತ್ತಭಾಷ್ಯದಿಂದ ಉದ್ಧೃತವಾದ ವಾಕ್ಯಗಳಿವೆ. ಇವರು ಏಕಾಗ್ನಿಖಾಂಡ, ಆಪಸ್ತಂಬಗೃಹ್ಯಸೂತ್ರ, ಆಶ್ವಲಾಯನಗೃಹ್ಯಸೂತ್ರ, ಗೌತಮ ಧರ್ಮಸೂತ್ರಗಳಿಗೂ ವ್ಯಾಖ್ಯಾನವನ್ನು ಬರೆದಿದ್ದಾರೆ.

## ಶುಕ್ಲಯಜುರ್ವೇದ ಭಾಷ್ಯಕಾರರು

ಶುಕ್ಲಯಜುರ್ವೇದದಲ್ಲಿ ಮಾಧ್ಯಂದಿನ ಮತ್ತು ಕಾಣ್ವ ಎಂಬ ಶಾಖೆಗಳು ಪ್ರಸಿದ್ಧವಾಗಿ ವಿಶೇಷವಾಗಿ ಪ್ರಚಾರದಲ್ಲಿವೆ.

## ಶುಕ್ಲಯಜುರ್ವೇದ ಮಾಧ್ಯಂದಿನ ಶಾಖೆಯ ಭಾಷ್ಯಕಾರರು

## ಶೌನಕರ ಭಾಷ್ಯ

ಶುಕ್ಲಯಜುರ್ವೇದದ ಮಾಧ್ಯಂದಿನ ಶಾಖೆಗೆ ಇರುವ ಉವಟರ ಭಾಷ್ಯದ ಹಸ್ತಪ್ರತಿಯಲ್ಲಿ ಪುರುಷಸೂಕ್ತಕ್ಕೆ ಉವಟರ ಭಾಷ್ಯವಲ್ಲದೆ ಶೌನಕರ ಭಾಷ್ಯವಿದೆ. ಇದಕ್ಕೆ ಭಾಷ್ಯವನ್ನು ಶೌನಕರೆಂಬ ಋಷಿಗಳು ಮಾಡಿರುವುದಾಗಿ "ಅಸ್ಯ ಭಾಷ್ಯಂ ಶೌನಕೋ ನಾಮ ಋಷಿರ ಕರೋತ್" ಎಂದು ತಾವೇ ಬರೆದಿದ್ದಾರೆ, ಮತ್ತು ತಾವು ಭಾಷ್ಯವನ್ನು ಬರೆಯುವಾಗ ತಾವು ಅನುಸರಿಸಿರುವ ಕ್ರಮವನ್ನು ಕೂಡ "ಪ್ರಥಮಃ ವಿಚ್ಛೇದಃ ಕ್ರಿಯಾಕಾರಕಸಂಬಂಧಃ ಸಮಾಸಃ ಪ್ರಮೇಯಾರ್ಥ ವ್ಯಾಖ್ಯೇತಿ" ಎಂದು ಹೇಳಿದ್ದಾರೆ.

ಮಂತ್ರಗಳ ಯಜ್ಞೋಪಯೋಗಿ ಮತ್ತು ಆಧ್ಯಾತ್ಮಿಕಾರ್ಥವುಳ್ಳ ಎಂದು ಇವರು ಪ್ರತಿಪಾದಿಸುತ್ತಾರೆ.

ಶೌನಕರ ವಿಷಯದಲ್ಲಿ ಹೆಚ್ಚು ವಿವರಗಳು ತಿಳಿದುಬಂದಿಲ್ಲ.

## ಹರಿಸ್ವಾಮಿಕೃತಭಾಷ್ಯ

ಹರಿಸ್ವಾಮಿಯವರು ಶತಪಥ ಬ್ರಾಹ್ಮಣಕ್ಕೆ ಭಾಷ್ಯವನ್ನು ಬರೆದಿದ್ದಾರೆ. ರಘುನಾಥ ಮಂದಿರದ ಪುಸ್ತಕಭಂಡಾರದಲ್ಲಿ ೪೫೮೯ನೆಯ ನಂಬರಿನ ಗ್ರಂಥವೊಂದಿದೆ. ಇದು ರುದ್ರಾಧ್ಯಾಯದ ಪದಪಾಠ. ಈ ಪದಪಾಠವು ಹರಿಸ್ವಾಮಿಯ ಮತವನ್ನನುಸರಿಸಿದೆ ಎಂದು ಬರೆದಿದೆ. ಇದರಿಂದ ಹರಿಸ್ವಾಮಿಯು ಯಜುರ್ವೇದಕ್ಕೂ ಭಾಷ್ಯವನ್ನು ರಚಿಸಿರಬಹುದು ಎಂದು ನಂಬಲು ಅವಕಾಶವಿದೆ.

'ನಾಗಸ್ವಾಮಿಯ ಪುತ್ರರಾದ ಹರಿಸ್ವಾಮಿಯು ಋಗ್ವೇದ ಭಾಷ್ಯಕಾರರಾದ ಸ್ಕಂದಸ್ವಾಮಿಯ ಶಿಷ್ಯರು. ಆದುದರಿಂದ ಇವರ ಕಾಲ ಸುಮಾರು ಕ್ರಿ.ಶ. ೬೩೦.

## ಉವಟಕೃತಭಾಷ್ಯ

ಶುಕ್ಲಯಜುರ್ವೇದಕ್ಕೆ ಬರೆದ ಈ ಭಾಷ್ಯವು ಚಿಕ್ಕದಾದರೂ ಉಜ್ವಲವಾಗಿದೆ, ಸಾಧಾರಣವಾಗಿ ಈ ಭಾಷ್ಯವು ಯಾಜ್ಞಿಕ ಪದ್ಧತಿಗನುಸಾರವಾಗಿದ್ದರೂ ಅಲ್ಲಲ್ಲಿ ಅನೇಕ ಮಂತ್ರಗಳಿಗೆ ಆಧ್ಯಾತ್ಮಿಕ ಅರ್ಥವಿವರಣೆಯೂ ಇದೆ.

ಉವಟರು ತಮ್ಮ ಭಾಷ್ಯದ ಅಂತ್ಯಶ್ಲೋಕದಲ್ಲಿ ತಮ್ಮ ಕುಲ, ಕಾಲ ಮುಂತಾದುವುಗಳ ವಿಷಯವಾಗಿ—

ಆನಂದಪುರವಾಸ್ತವ್ಯ ವಜ್ರಟಾಖ್ಯಸ್ಯ ಸೂನುನಾ
ಉವಟೇನ ಕೃತಂ ಭಾಷ್ಯಂ ಪದವಾಕ್ಯೈಃ ಸುನಿಶ್ಚಿತೈಃ

ಎಂದು ಹೇಳಿಕೊಂಡಿದ್ದಾರೆ.

## ಗೌರಧರಕೃತಭಾಷ್ಯ

ಸಮಸ್ತ ಶಾಸ್ತ್ರಪಾರಂಗತರಾದ ಗೌರಧರರು ಯಜುರ್ವೇದಕ್ಕೆ 'ವೇದವಿಲಾಸ' ಎಂಬ ಭಾಷ್ಯವನ್ನು ರಚಿಸಿರುವರು.

## ರಾವಣಕೃತಭಾಷ್ಯ

ಪದ್ಮನಾಭರು ರುದ್ರಭಾಷ್ಯವನ್ನು ಬರೆಯುವಾಗ ರಾವಣಕೃತ ಯಜುರ್ವೇದ ಭಾಷ್ಯದ

ಆಧಾರದ ಮೇಲೆ ಬರೆದಿರುವುದಾಗಿ ಹೇಳಿಕೊಂಡಿದ್ದಾರೆ. ಇದರಿಂದ ರಾವಣರು ಯಜುರ್ವೇದಕ್ಕೆ ಭಾಷ್ಯಬರೆದಿದ್ದರೆಂದು ತಿಳಿದುಬರುವುದು. ಈ ಭಾಷ್ಯ ಈವರೆವಿಗೂ ದೊರೆತಿಲ್ಲ.

## ಮಹೀಧರಕೃತಭಾಷ್ಯ

ಈ ಭಾಷ್ಯಕ್ಕೆ 'ವೇದದೀಪ' ಎಂಬ ಹೆಸರಿದೆ. ಈ ಭಾಷ್ಯದಲ್ಲಿ ನಿರುಕ್ತ, ಶ್ರೌತ ಸೂತ್ರಾದಿಗಳನ್ನುದಹರಿಸಿ ಯಜ್ಞಪ್ರಕ್ರಿಯೆಯ ವಿಧಾನವು ಸುಲಭವಾಗಿ ತಿಳಿಯುವಂತೆ ವಿವರಣೆ ಇದೆ. ಅರ್ಥವಿಶದೀಕರಣದಲ್ಲಿ ಇದು ಬಹಳ ಸಫಲವಾಗಿದೆ. ಉವಟಭಾಷ್ಯದ ಪ್ರಭಾವ ಇವರ ಮೇಲೆ ವಿಶೇಷವಾಗಿದೆ. ಉವಟ ಮತ್ತು ಮಾಧವರ ಭಾಷ್ಯವನ್ನು ಆಧಾರವಾಗಿಟ್ಟು ಕೊಂಡೇ ತಾವು ಭಾಷ್ಯವನ್ನು ಬರೆದಿರುವುದಾಗಿ ಮಹೀಧರರೇ ಹೇಳಿಕೊಂಡಿದ್ದಾರೆ.

'ಪ್ರಣಮ್ಯ ಲಕ್ಷ್ಮೀನೃಹರಿಂ ಗಣೇಶಂ ಭಾಷ್ಯಂ ವಿಲೋಕ್ಯೋವಟಮಾಧವೀಯಮ್

ಯಜುರ್ಮನೂನಾ ವಿಲಿಖಾಮಿ ಚಾರ್ಥಂ ಪರೋಪಕಾರಾಯ ನಿಜೇಕ್ಷಣಾಯ

ಮಹೀಧರರು 'ಮಂತ್ರಮಹೋದಧಿ' ಎಂಬ ತಂತ್ರಗ್ರಂಥವನ್ನೂ ಕೂಡ ಬರೆದಿದ್ದಾರೆ.

## ಶುಕ್ಲಯಜುರ್ವೇದದ ಕಾಣ್ವಸಂಹಿತೆಯ ಭಾಷ್ಯಕಾರರು

## ಸಾಯಣಭಾಷ್ಯ

ಸಾಯಣಾಚಾರ್ಯರು ಕಾಣ್ವಶಾಖೆಗೂ ಕೂಡ ಭಾಷ್ಯವನ್ನು ರಚಿಸಿರುವರು. ಇವರಲ್ಲಿ ೨೦ ಅಧ್ಯಾಯಗಳಿಗೆ ಮಾತ್ರ ಭಾಷ್ಯವು ಲಭ್ಯವಿದ್ದು ಉಳಿದ ೨೦ ಅಧ್ಯಾಯಗಳಿಗೆ ಭಾಷ್ಯವು ಸಿಕ್ಕಿಲ್ಲ. ಅನೇಕ ಗ್ರಂಥಗಳನ್ನುದಹರಿಸಿ ಭಾಷ್ಯವನ್ನು ಸಾಯಣರು ಬರೆದಿದ್ದಾರೆ.

## ಆನಂದಬೋಧರ ಭಾಷ್ಯ

ಈ ಗ್ರಂಥದ ಹೆಸರು 'ಕಾಣ್ವವೇದ ಮಂತ್ರ ಭಾಷ್ಯ ಸಂಗ್ರಹ' ಎಂದೂ, ಈ ಗ್ರಂಥದ ಕರ್ತೃವಾದ ಆನಂದಬೋಧರ ತಂದೆಯ ಹೆಸರು ಭಟ್ಟೋಪಾಧ್ಯಾಯರೆಂದೂ. ಈ ಭಾಷ್ಯದಿಂದಲೇ ತಿಳಿದು ಬರುತ್ತದೆ. ಪ್ರತಿ ಅಧ್ಯಾಯದ ಕೊನೆಯಲ್ಲಿಯೂ 'ಕಾಣ್ವವೇದ ಮಂತ್ರಭಾಷ್ಯ ಸಂಗ್ರಹಃ' ಎಂದು ಗ್ರಂಥದ ಹೆಸರನ್ನು ಕೊಡಲಾಗಿದೆ.

## ಅನಂತಾಚಾರ್ಯರ ಭಾಷ್ಯ

ಈ ಭಾಷ್ಯವು ಸಂಪೂರ್ಣಕಾಣ್ವಸಂಹಿತೆಗೆ ರಚಿಸಲ್ಪಟ್ಟಿದೆ.

'ವ್ಯಾಖ್ಯಾತಾ ಕಾಣ್ವಶಾಖೀಯಾ ಸಂಹಿತಾ ಪೂರ್ವವಿಂಶತಿಃ

ಮಾಧವಾಚಾರ್ಯವರ್ಯೇಣ ಸ್ವಪಿ ೀಕೃತ್ಯ ನ ಚೋತ್ತರಾ ॥

ಅತಸ್ತಾಂ ವ್ಯಾಕರಿಷ್ಯೇಹಂ ಅನಂತಾಚಾರ್ಯನಾಮಕಃ ।

ಮದ್ರಾಸಿನಲ್ಲಿರುವ ಈ ಭಾಷ್ಯದ ಪ್ರತಿಯು ಮೇಲ್ಕಂಡ ಶ್ಲೋಕದಿಂದ ಮಾಧವಾಚಾರ್ಯರು ಕಾಣ್ವಸಂಹಿತೆಯ ೨೦ ಅಧ್ಯಾಯಗಳಿಗೂ, ಅನಂತಾಚಾರ್ಯರು ೨೦ ಅಧ್ಯಾಯಗಳಿಗೂ ಭಾಷ್ಯವನ್ನು ರಚಿಸಿರುವುದಾಗಿ ತಿಳಿದುಬರುವುದು.

ಅನಂತಾಚಾರ್ಯರ ತಂದೆ ನಾಗೇಶಭಟ್ಟರು, ತಾಯಿ ಭಾಗೀರಥೀ, ವಾಸಸ್ಥಳ ಕಾಶಿ.

ಅನಂತಾಚಾರ್ಯರು ಯಜುರ್ವೇದ ಭಾಷ್ಯವನ್ನು ಮಾತ್ರವಲ್ಲದೆ ಶತಪಥಬ್ರಾಹ್ಮಣ ಭಾಷ್ಯ, ಯಜುಷಪ್ರಾತಿಶಾಖ್ಯಭಾಷ್ಯ ಭಾಷಿಕಾಸೂತ್ರಭಾಷ್ಯ ಎಂಬ ಗ್ರಂಥವನ್ನು ರಚಿಸಿದ್ದಾರೆ.

## ಕಾಲನಾಥರ ಭಾಷ್ಯ

ಈ ಗ್ರಂಥದ ಹೆಸರು 'ಯಜುರ್ಮಂಜರೀ' ಈ ಭಾಷ್ಯವು ಯಜುರ್ವೇದಕ್ಕೆ ಸಂಪೂರ್ಣವಾಗಿಲ್ಲ. ಇದರಲ್ಲಿ ಯಾಜುಷಕ್ರಮವನ್ನು ಅನುಸರಿಸಿ ಕೇವಲ ೨೫೦ ಮಂತ್ರಗಳಿಗೆ ವ್ಯಾಖ್ಯಾನವಿದೆ.

ಕಾಲನಾಥರ ವಿಷಯವಾಗಿ ಹೆಚ್ಚು ವಿಷಯಗಳು ತಿಳಿದು ಬಂದಿಲ್ಲ.

## ಮುರಾರಿಮಿಶ್ರಕೃತಭಾಷ್ಯ

ಇದು ಸ್ವತಂತ್ರವಾದ ವೇದ ಭಾಷ್ಯವಲ್ಲ. ಈ ಗ್ರಂಥದ ಹೆಸರು 'ಪಾರಸ್ಕರ ಮಂತ್ರ ಭಾಷ್ಯ' ತನ್ನ ತಂದೆ 'ವೇದಮಿಶ್ರ'ರು ಬರೆದ ಗೃಹ್ಯಭಾಷ್ಯದಿಂದ ಕೆಲವು ವಿಷಯಗಳನ್ನು ತೆಗೆದುಕೊಂಡು ಪಾರಸ್ಕರ ಗೃಹ್ಯಸೂತ್ರಗಳಲ್ಲಿ ಬಂದಿರುವ ಮಂತ್ರಗಳಿಗೆ ಭಾಷ್ಯವನ್ನು ಬರೆಯಲಾಗಿದೆ ಎಂಬುದಾಗಿ ಮುರಾರಿಮಿಶ್ರರೇ ಗ್ರಂಥದ ಪ್ರಾರಂಭದಲ್ಲಿ ಬರೆದಿದ್ದಾರೆ.

## ಹಲಾಯುಧಕೃತಭಾಷ್ಯ

ಈ ಭಾಷ್ಯದ ಹೆಸರು 'ಬ್ರಾಹ್ಮಣಸರ್ವಸ್ವ' ಈ ಭಾಷ್ಯವು ಪ್ರಸಿದ್ಧವಾಗಿದೆ,

ಬಾಲ್ಯೇಖ್ಯಾಪಿತರಾಜಪಂಡಿತಪದಂ ಶ್ವೇತಾರ್ಚಿಬಿಂಬೋಜ್ಜ್ವಲ
ಚ್ಛತ್ರೋತ್ಸಿಕ್ತಮಹಸ್ತಮುಪದಂ ದತ್ವಾನವೇ ಯೌವನೇ ।
ಯಸ್ಮೈಯೌವನಶೇಷಯೋಗ್ಯಮಖಿಲಕ್ಷ್ಮಾಪಾಲ ನಾರಾಯಣಃ
ಶ್ರೀಮಾಂ ಲಕ್ಷ್ಮಣಸೇನ ದೇವನೃಪತಿರ್ಧರ್ಮಾಧಿಕಾರಂ ದದೌ॥

ಭಾಷ್ಯದ ಪ್ರಾರಂಭದಲ್ಲಿರುವ ಮೇಲ್ಕಂಡ ಶ್ಲೋಕದಿಂದ ಹಲಾಯುಧರು ಕ್ರಿ. ಶ. ಹನ್ನೆರಡನೆಯ ಶತಮಾನ ಉತ್ತರಾರ್ಧದಲ್ಲಿದ್ದರೆಂದು ತಿಳಿದುಬರುವುದು.

ಹಲಾಯುಧರ ಈ 'ಬ್ರಾಹ್ಮಣಸರ್ವಸ್ವ' ಭಾಷ್ಯವನ್ನಲ್ಲದೆ 'ಮೀಮಾಂಸಾಸರ್ವಸ್ವ' 'ವೈಷ್ಣವಸರ್ವಸ್ವ' ಮತ್ತು 'ಪಂಡಿತಸರ್ವಸ್ವ' ಎಂಬ ಗ್ರಂಥಗಳನ್ನು ಬರೆದಿರುವ ವಿಷಯವು ಈ ಭಾಷ್ಯದಿಂದಲೇ ತಿಳಿದುಬರುವುದು. ಆದರೆ ಈ ಯಾವ ಗ್ರಂಥಗಳೂ ಈವರೆಗೆ ಲಭ್ಯವಾಗಿಲ್ಲ.

## ಆದಿತ್ಯದರ್ಶನಕೃತಭಾಷ್ಯ

ಈ ಭಾಷ್ಯವು ವೇದಿಕಭಾಷ್ಯಗಳಲ್ಲೆಲ್ಲಾ ಉತ್ತಮದರ್ಜೆಯದಾಗಿದೆ. ಈ ಭಾಷ್ಯದ ಹೆಸರು 'ಮಂತ್ರವಿವೃತಿ', 'ಕಠಗೃಹ್ಯಸೂತ್ರವಿವರಣ' ಎಂಬ ಇನ್ನೊಂದು ಗ್ರಂಥವೂ ಆದಿತ್ಯದರ್ಶನರಿಂದ ಬರೆಯಲ್ಪಟ್ಟಿದೆ, ಆದಿತ್ಯದರ್ಶನರ ತಂದೆ ವೇದದರ್ಶನರು, ಗುರು ಮಾಧವರಾತ.

## ಸೋಮಾನಂದಪುತ್ರರ ಭಾಷ್ಯ

ಇದು ಕಠಮಂತ್ರಪಾಠವನ್ನು ಅನುಸರಿಸಿ ರಚಿಸಲ್ಪಟ್ಟಿರುವ ಭಾಷ್ಯ.
ಸೋಮಾನಂದಪುತ್ರರ ವಿಷಯದಲ್ಲಿ ಹೆಚ್ಚು ವಿಷಯಗಳು ತಿಳಿದುಬಂದಿಲ್ಲ.

## ನಾರಾಯಣಾಚಾರ್ಯರ ಭಾಷ್ಯ

ಸಾಯಣಾಚಾರ್ಯರು ಕಾಣ್ವಸಂಹಿತೆಗೂ ಭಾಷ್ಯವನ್ನು ಬರೆದಿದ್ದಾರೆ. ಈ ಭಾಷ್ಯವು ಕಾಣ್ವಸಂಹಿತೆಯ ಪೂರ್ವಾರ್ಧಕ್ಕೆ ಮಾತ್ರ ಇರುವುದರಿಂದ ಕ್ರಿ. ಶ. ಹದಿನಾರನೆಯ ಶತಮಾನದವರಾದ ಕಾಶಿಯ ಅನಂತಾಚಾರ್ಯರು ಈ ಸಂಹಿತೆಯ ಉತ್ತರಾರ್ಧಕ್ಕೆ ಭಾಷ್ಯವನ್ನು ರಚಿಸಿದ್ದಾರೆ. ಈ ಅಂಶವು ಅನಂತಾಚಾರ್ಯರು 'ವ್ಯಾಖ್ಯಾತಾ ಕಾಣ್ವಶಾಖೀಯ ಸಂಹಿತಾ ಪೂರ್ವವಿಂಶತಿಃ ಮಾಧವಾಚಾರ್ಯವರ್ಯೇಣ ಸ್ಪಷ್ಟೀಕೃತ್ಯ ನ ಚೋತ್ತರಾ ಅತಸ್ತಾಂ ವ್ಯಾಕರಿಷ್ಯೇಹಂ ಅನಂತಾಚಾರ್ಯನಾಮತಃ ಎಂದು ಹೇಳಿರುವ ವಾಕ್ಯದಿಂದ ಗೊತ್ತಾಗುತ್ತದೆ.

ಇದರಿಂದ ಸಾಯಣಭಾಷ್ಯವು ಕಾಣ್ವಸಂಹಿತೆಯ ಮೊದಲ ೨೦ ಅಧ್ಯಾಯಗಳಿಗೆ ಮಾತ್ರ ವಿರಚಿತವಾಗಿದೆ ಎಂದು ಗೊತ್ತಾಗುತ್ತದೆ.

## ಕೃಷ್ಣಯಜುರ್ವೇದ ಭಾಷ್ಯಗಳು

ಈ ವೇದಕ್ಕೆ ಸೇರಿದ ಪ್ರಧಾನ ಸಂಹಿತೆಯೆಂದರೆ ತೈತ್ತಿರೀಯ ಸಂಹಿತೆ. ಈ ತೈತ್ತಿರೀಯ ಸಂಹಿತೆಗೆ ಸಾಯಣರಿಗಿಂತ ಪೂರ್ವದಲ್ಲಿಯೇ ಅನೇಕರು ಭಾಷ್ಯಗಳನ್ನು ಬರೆದಿರುವ ವಿಷಯವು ಗೊತ್ತಾಗಿದ್ದರೂ ಆ ಭಾಷ್ಯಕಾರರುಗಳ ಮತ್ತು ಆ ಭಾಷ್ಯಗಳ ವಿಚಾರದಲ್ಲಿ ಹೆಚ್ಚು ವಿಷಯಗಳು ತಿಳಿದುಬಂದಿಲ್ಲ. ಕಾರಣ ಕೆಲವು ಭಾಷ್ಯಗಳನ್ನು ಬಿಟ್ಟು ಅನೇಕ ಭಾಷ್ಯಗಳು ಉಪಲಬ್ಧವಾಗಿಲ್ಲ.

## ಕುಂಡಿನಕೃತಭಾಷ್ಯ

ತೈತ್ತಿರೀಯ ಸಂಹಿತೆಗೆ ಸಂಬಂಧಿಸಿದ ಕಾಂಡಾನುಕ್ರಮಣಿಯಲ್ಲಿ ಬರುವ "ಯಸ್ಯಾಃ ಪದಕೃದಾತ್ರೇಯೋ ವೃತ್ತಿಕಾರಸ್ತು ಕುಂಡಿನಃ'' ಎಂಬ ಉಲ್ಲೇಖದಿಂದ ತೈತ್ತಿರೀಯ ಸಂಹಿತೆಗೆ ಕುಂಡಿನರು ವೃತ್ತಿಯನ್ನು ಬರೆದಿದ್ದರೆಂದು ತಿಳಿದುಬರುತ್ತದೆ. ಬೋಧಾಯನ ಗೃಹ್ಯಸೂತ್ರದಲ್ಲಿಯೂ ಕೂಡ ''ಕೌಂಡಿನ್ಯಾಯ ವೃತ್ತಿಕಾರಾಯ" ಎಂದಿದೆ. ಪದಪಾಠ ಕಾರರಿಂದ ಆತ್ರೇಯರೊಡನೆ ಕುಂಡಿನರನ್ನು ಸೇರಿಸಿ ಹೇಳಿರುವ ಕಾರಣ ಕುಂಡಿನರು ಪ್ರಾಚೀನರೆಂದು ಹೇಳಬಹುದು.

## ಭವಸ್ವಾಮಿಕೃತಭಾಷ್ಯ

ಭವಸ್ವಾಮಿಕೃತ ಭಾಷ್ಯವೂ ಕೂಡ ತೈತ್ತಿರೀಯ ಸಂಹಿತೆಗೆ ಇರುವ ಭಾಷ್ಯವೆಂದು ಹೇಳಲಾಗಿದೆ. ಭಟ್ಟಭಾಸ್ಕರರು ತಮ್ಮ ಭಾಷ್ಯದ ಆರಂಭದಲ್ಲಿ ಭವಸ್ವಾಮಿಗಳ ಉಲ್ಲೇಖವನ್ನು ಮಾಡಿದ್ದಾರೆ.

## ಗುಹದೇವಕೃತಭಾಷ್ಯ

ಶ್ರೀರಾಮಾನುಜಾಚಾರ್ಯರು ತಮ್ಮ 'ವೇದಾರ್ಥಸಂಗ್ರಹ'ದಲ್ಲಿ ವೇದಕ್ಕೆ ಭಾಷ್ಯ ಬರೆದವರ ಹೆಸರನ್ನು ಉಲ್ಲೇಖಿಸಿರುವಾಗ ಗುಹದೇವನ ಹೆಸರೂ ಬಂದಿದೆ.

'ರಶ್ಮಯಶ್ಚ ದೇವಾ ಗರಗಿರಃ' ಎಂಬ ಮಂತ್ರವು ತೈತ್ತಿರೀಯ ಆರಣ್ಯಕದಲ್ಲಿದೆ. ಈ ಮಂತ್ರಕ್ಕೆ ಭಾಷ್ಯ ಬರೆಯುವಾಗ ದೇವರಾಜಯಜ್ವನು ತಥಾ ಚ ರಶ್ಮಯಶ್ಚ ದೇವಾಗರಗಿರಃ

ಇತ್ಯತ್ರ ಗುಹದೇವಃ ಗರಮುದಕಂ ಗಿರಂತಿ ಪಿಬಂತೀತಿ ಗರಗಿರಃ ಇತಿ ಭಾಷ್ಯಂ ಕೃತವಾನ್" ಎಂದು ಬರೆದಿರುವುದರಿಂದ ಗುಹದೇವನು ತೈತ್ತಿರೀಯ ಸಂಹಿತೆಗೆ ಭಾಷ್ಯಬರೆದಿದ್ದನೆಂದು ತಿಳಿದುಬರುವುದು.

## ಕೌಶಿಕಭಟ್ಟಭಾಸ್ಕರಮಿಶ್ರರ ಭಾಷ್ಯ

ಈ ಭಾಷ್ಯಕ್ಕೆ 'ಜ್ಞಾನಯಜ್ಞ' ಎಂಬ ಹೆಸರಿದೆ. ವೈದಿಕಸಾಹಿತ್ಯದಲ್ಲಿ ಈ ಭಾಷ್ಯವೂ ಬಹಳ ಮಹತ್ವ ಪಡೆದಿದೆ. ಈ ಭಾಷ್ಯದಲ್ಲಿ ಭಟ್ಟಭಾಸ್ಕರರು ಅನೇಕ ಪ್ರಾಚೀನ ಭಾಷ್ಯಕಾರರುಗಳನ್ನು, ನಿರುಕ್ತ—ನಿಘಂಟುಕಾರರು, ಗಣಕಾರ, ಭಾರದ್ವಾಜ, ಆರ್ಯಭಟ್ಟ, ಸ್ವಾಗತ ಮುಂತಾದ ಅನೇಕರ ವಾಕ್ಯಗಳನ್ನೂ ಉದಾಹರಿಸಿದ್ದಾರೆ. ಮಂತ್ರಾರ್ಥದ ನಿರೂಪಣೆಯ ಸಮಯದಲ್ಲಿ ಬೇರೆ ಬೇರೆ ಆಚಾರ್ಯರ ಮತಗಳೂ ಕೂಡ ನಿರೂಪಿಸಲ್ಪಟಿವೆ. ಮಂತ್ರಗಳಿಗೆ ಆಧ್ಯಾತ್ಮಿಕ, ಅಧಿದೈವಿಕ ಮತ್ತು ಆಧಿಭೌತಿಕವಾದ ಮೂರು ಅರ್ಥಗಳನ್ನು ಇವರು ಬರೆದಿದ್ದಾರೆ. "ಅಧ್ಯಾತ್ಮಮಧಿದೈವಮಧಿಯಜ್ಞಂ ಚಾಧಿಕೃತ್ಯ ತ್ರೇ ದೇಮುಂ ವ್ಯಾಚಕ್ಷತ" ಉದಾಹರಣೆಗೆ—'ಹಂಸಃ ಶುಚಿಷತ್ ಎಂಬಲ್ಲಿ 'ಹಂಸ' ಶಬ್ದಕ್ಕೆ ಅಧಿಯಜ್ಞಾರ್ಥಕ್ಕನುಗುಣವಾಗಿ 'ಆತ್ಮಾ' ಎಂದೂ ಅರ್ಥವನ್ನು ಬರೆದಿದ್ದಾರೆ. ಭಟ್ಟಭಾಸ್ಕರರ ಭಾಷ್ಯ ಬಹಳ ಉಪಯುಕ್ತವಾಗಿದೆ.

ಸಾಯಣಾಚಾರ್ಯರು ತಮ್ಮ ಭಾಷ್ಯದಲ್ಲಿ ಭಟ್ಟಭಾಸ್ಕರರನ್ನು ಉಲ್ಲೇಖಿಸಿರುವುದರಿಂದ ಭಟ್ಟಭಾಸ್ಕರರು ಸಾಯಣರಿಗಿಂತ ಪ್ರಾಚೀನರೆಂದು ಗೊತ್ತಾಗುತ್ತದೆ. ಏಕಾಗ್ನಿಕಾಂಡಕ್ಕೆ ಭಾಷ್ಯವನ್ನು ಬರೆದ ಹರದತ್ತರೂ ಕೂಡ ಭಟ್ಟಭಾಸ್ಕರರ ಭಾಷ್ಯದ ಸಹಾಯವನ್ನು ಪಡೆದುಕೊಂಡಿದ್ದಾರೆ. ದೇವರಾಜಯಜ್ವ, ಸುದರ್ಶನ, ವೇದಾಚಾರ್ಯ ಮೊದಲಾದವರೆಲ್ಲರೂ ಭಟ್ಟಭಾಸ್ಕರರ ಭಾಷ್ಯದ ವಾಕ್ಯಗಳನ್ನು ಉಲ್ಲೇಖಿಸಿದ್ದಾರೆ. ಇವರು ಮಂಗಳಶ್ಲೋಕದಲ್ಲಿ ಶಿವನನ್ನು ಸ್ತುತಿಸಿರುವುದರಿಂದ ಶೈವರಿರಬಹುದು. ಇವರ ಕಾಲ ಕ್ರಿ. ಶ. ಸುಮಾರು ೧೧ನೆಯ ಶತಮಾನ. ಭಟ್ಟಭಾಸ್ಕರರ ಭಾಷ್ಯದ ಕೆಲಭಾಗವು ಮೈಸೂರು ಪ್ರಾಚ್ಯಸಂಶೋಧನಾಲಯದಿಂದಲೂ ರುದ್ರಾಧ್ಯಾಯಕ್ಕೆ ಬರೆದ ಭಟ್ಟಭಾಸ್ಕರರ ಭಾಷ್ಯವು ಆನಂದಾಶ್ರಮದಿಂದಲೂ ಪ್ರಕಟವಾಗಿದೆ.

## ಕ್ಷುರರ ಭಾಷ್ಯ

ಈ ಗ್ರಂಥವು ಈವರೆಗೆ ಸಿಕ್ಕಿಲ್ಲ. ಕ್ಷುರರ ವಿಷಯದಲ್ಲಿ ಹೆಚ್ಚು ವಿಷಯಗಳೂ ಸಹ ತಿಳಿದುಬಂದಿಲ್ಲ. ಆದರೆ ಸಾಯಣಾಚಾರ್ಯರು ಧಾತುವೃತ್ತಿಯಲ್ಲಿ ಐದು ಸ್ಥಳಗಳಲ್ಲಿ ಐದು ಮಂತ್ರಗಳಿಗೆ ಕ್ಷುರರ ಭಾಷ್ಯವನ್ನುದ್ಧರಿಸಿರುವುದರಿಂದ ಕ್ಷುರರು ತೈತ್ತಿರೀಯ ಸಂಹಿತೆಗೆ ಭಾಷ್ಯ ಬರೆದಿದ್ದರೆಂದು ತಿಳಿದುಬರುವುದು.

## ಸಾಯಣರ ಭಾಷ್ಯ

ಸಾಯಣರು ತೈತ್ತಿರೀಯ ಸಂಹಿತಾ ಬ್ರಾಹ್ಮಣಗಳಿಗೆ ಭಾಷ್ಯವನ್ನು ಬರೆದಿದ್ದಾರೆ. ಈ ಭಾಷ್ಯದಲ್ಲಿ ತೈತ್ತಿರೀಯ ಬ್ರಾಹ್ಮಣ, ಕಲ್ಪಸೂತ್ರಗಳು, ಮೀಮಾಂಸಾ, ವ್ಯಾಕರಣ ಮೊದಲಾದುವುಗಳನ್ನುದಹರಿಸಿ, ಅನಂತರ ಅರ್ಥವನ್ನು ವಿವರಿಸಲಾಗಿದೆ. ಇತರ ಸಂಹಿತಾ ಭಾಷ್ಯಗಳಲ್ಲಿರುವಂತೆ ಈ ಭಾಷ್ಯದಲ್ಲಿಯೂ ಕೂಡ ಪ್ರತಿ ಮಂತ್ರಕ್ಕೂ ಪ್ರಯೋಗವನ್ನು ತಿಳಿಸಿ ನಂತರ ವ್ಯಾಖ್ಯಾನ ಬರೆಯಲ್ಪಟ್ಟಿದೆ. ಯಜ್ಞಯಾಗಾದಿಗಳ ವಿಧಾನದಲ್ಲಿ ಯಜುರ್ವೇದಕ್ಕೆ ಹೆಚ್ಚಿನ ಪ್ರಾಧಾನ್ಯವಿರುವುದರಿಂದ ತೈತ್ತಿರೀಯ ಸಂಹಿತೆಗೆ ಭಾಷ್ಯವನ್ನು ಮೊದಲು ಬರೆದರೆಂದು ಹೇಳಬಹುದು.

## ವೆಂಕಟೇಶಕೃತ ಭಾಷ್ಯ

ಈ ಭಾಷ್ಯವು ಐದರಿಂದ ಏಳು ಕಾಂಡಗಳಿಗೆ ಮಾತ್ರವಿದೆ. ಇದಕ್ಕೆ 'ವೇದಭಾಷ್ಯ ಸಂಗ್ರಹಸಾರ'ವೆಂದು ಹೆಸರು.

## ಬಾಲಕೃಷ್ಣಕೃತ ಭಾಷ್ಯ

ಇವರು ತೈತ್ತಿರೀಯ ಸಂಹಿತೆಗೆ ಭಾಷ್ಯ ಬರೆದಿದ್ದರೆಂಬ ಅಂಶವು ಪೋರ್ಟ್ ವಿಲಿಯಂನ ಹಸ್ತಲಿಖಿತ ಪ್ರತಿಯಿಂದ ತಿಳಿದುಬರುವುದು. ಬಾಲಕೃಷ್ಣರ ಭಾಷ್ಯ ಇದುವರೆಗೆ ಸಿಕ್ಕಿಲ್ಲ.

## ಹರದತ್ತಮಿಶ್ರರ ಭಾಷ್ಯ

ಹರದತ್ತ ಮಿಶ್ರರು ಆಪಸ್ತಂಬ ಮಂತ್ರಪಾಠ ಅಥವಾ ಏಕಾಗ್ನಿಕಾಂಡಕ್ಕೆ ಭಾಷ್ಯ ಬರೆದಿದ್ದಾರೆ.

ಪ್ರಣಿಪತ್ಯ ಮಹಾದೇವಂ ಹರದತ್ತೇನ ಧೀಮತಾ
ಏಕಾಗ್ನಿಕಾಂಡಮಂತ್ರಾಣಾಂ ವ್ಯಾಖ್ಯಾ ಸಮ್ಯಗ್ವಿಧೀಯತೇ

ಎಂಬುದಾಗಿ ಮಂಗಳಶ್ಲೋಕವಿದೆ, ಈ ಭಾಷ್ಯವು ಉತ್ಕೃಷ್ಟವಾಗಿದೆ. ನಿಘಂಟು ಭಾಷ್ಯದಲ್ಲಿಯೂ ಸಹ ಹರದತ್ತರ ವಾಕ್ಯಗಳು ಉದ್ಧರಿಸಲ್ಪಟ್ಟಿರುವುದರಿಂದ ಹರದತ್ತರು ಹದಿಮೂರನೆಯ ಶತಮಾನಕ್ಕೆ ಹಿಂದಿನವರೆಂದು ಹೇಳಬಹುದು.

## ಶತ್ರುಘ್ನಕೃತ ಭಾಷ್ಯ

ಈ ಭಾಷ್ಯವು ಉವಟಮೊದಲಾದವರ ಭಾಷ್ಯಕ್ಕಿಂತ ಸರಳವಾಗಿದ್ದು, ಸ್ನಾನಮಂತ್ರ ಸಂಧ್ಯಾಮಂತ್ರ, ದೇವತಾರ್ಚನ ಮಂತ್ರ, ಶ್ರಾದ್ಧಮಂತ್ರ, ಷಡಂಗಶತರುದ್ರ, ವಿವಾಹಮಂತ್ರ ಮೊದಲಾದುವುಗಳಿಗೆ ಕ್ರಮವಾಗಿ, ವ್ಯಾಖ್ಯಾನವು ಮಾಡಲ್ಪಟ್ಟಿದೆ. ಈ ವ್ಯಾಖ್ಯಾನಕ್ಕೆ 'ಮಂತ್ರಾರ್ಥ ದೀಪಿಕೆ' ಎಂದು ಹೆಸರು. ಇದು ಕಾಶಿಯಲ್ಲಿ ಮುದ್ರಿತವಾಗಿದೆ.

## ಸಾಮವೇದದ ಭಾಷ್ಯಗಳು

### ಮಾಧವಕೃತ ಭಾಷ್ಯ

ಈ ಭಾಷ್ಯಕ್ಕೆ 'ವಿವರಣ' ಎಂಬ ಹೆಸರಿದೆ. ಈ ಭಾಷ್ಯವು ಪೂರ್ವಾರ್ಚಿಕೆ ಮತ್ತು ಉತ್ತರಾರ್ಚಿಕೆಗಳೆರಡಕ್ಕೂ ಬರೆಯಲ್ಪಟ್ಟಿದೆ. ಛಂದ ಆರ್ಚಿಕಾ ಅರ್ಥಾತ್ ಪೂರ್ವಾರ್ಚಿಕಾ ಭಾಷ್ಯಕ್ಕೆ 'ಛಂದಸಿಕಾ ವಿವರಣ' ಎಂದೂ, ಉತ್ತರಾರ್ಚಿಕಾ ಭಾಷ್ಯಕ್ಕೆ 'ಉತ್ತರ ವಿವರಣ ಎಂದೂ ಹೆಸರನ್ನು ಕೊಟ್ಟಿದ್ದಾರೆ.

ಈ ಭಾಷ್ಯದಲ್ಲಿ ಮಾಧವರು ಮಂತ್ರಗಳಲ್ಲಿ ೩೭ ವಿಧಗಳಿವೆ ಎಂದೂ, ಅದರಲ್ಲಿ ಋಗ್ವೇದದಲ್ಲಿ ಐದು ವಿಧಗಳಿರುವುವೆಂದೂ, ಉಳಿದ ೩೨ ವಿಧಗಳು ಸಾಮವೇದದಲ್ಲಿರುವುವೆಂದೂ ಹೇಳಿದ್ದಾರೆ. ಇವರಿಗೆ ಸಾಮವೇದ ಸಂಪ್ರದಾಯವು ಚೆನ್ನಾಗಿ ಗೊತ್ತಿತ್ತು. ಮಾಧವರ ಕಾಲ ಸುಮಾರು ಕ್ರಿ.ಪೂ. ಏಳನೆಯ ಶತಮಾನವೆಂದು ಊಹಿಸಲಾಗಿದೆ.

### ಭರತಸ್ವಾಮಿಯ ಭಾಷ್ಯ

ಈ ಭಾಷ್ಯವು ಸಾಮವೇದದ ಸಮಸ್ತಋಕ್ಕುಗಳಿಗೂ ಬರೆಯಲ್ಪಟ್ಟಿದೆ. ಈ ಭಾಷ್ಯವು ಬಹಳ ಸಂಕ್ಷಿಪ್ತವಾಗಿದೆ. ಇದರಲ್ಲಿ ಐತರೇಯ ಬ್ರಾಹ್ಮಣ, ಆಶ್ವಲಾಯನಸೂತ್ರಗಳಿಂದ ಅನೇಕ ವಾಕ್ಯಗಳು ಉದ್ಧೃತವಾಗಿರುವುದು ಕಂಡುಬರುತ್ತದೆ.

ಭರತಸ್ವಾಮಿಯ ತಂದೆ ನಾರಾಯಣ ; ತಾಯಿ ಯಜ್ಞದಾ ; ವಾಸಸ್ಥಳ ಶ್ರೀರಂಗ, ಗೋತ್ರ ಕಾಶ್ಯಪ ; ಕಾಲ—ಹೊಯ್ಸಳ ರಾಜನಾದ ರಾಮನಾಥನ ಆಳ್ವಿಕೆ ಎಂಬುದು ಈ ಭಾಷ್ಯದ ಆರಂಭದಲ್ಲಿರುವ—

"ನತ್ವಾ ನಾರಾಯಣಂ ತಾತಂ ತತ್ಪ್ರಸಾದಾದವಾಪ್ತಧೀಃ
ಸಾಮ್ನಾಂ ಶ್ರೀಭರತಸ್ವಾಮೀ ಕಾಶ್ಯಪೋ ವ್ಯಾಕರೋತ್ಯಚಂ
ಹೋಸಲಾಧೀಶ್ವರೇ ಪೃಥ್ವೀಂ ರಾಮನಾಥೇ ಪ್ರಶಾಸತಿ
ವ್ಯಾಖ್ಯಾಕೃತೇಯಂ ಕ್ರಮೇಣ ಶ್ರೀರಂಗೇ ವಸತಾ ಮಯಾ

ಎಂಬ ಶ್ಲೋಕಗಳಿಂದಲೂ ಮತ್ತು ಅಂತ್ಯದಲ್ಲಿರುವ

'ಇತ್ಥಂ ಭರತಸ್ವಾಮಿ ಕಾಶ್ಯಪೋ ಯಜ್ಞದಾಸುತಃ
ನಾರಾಯಣತನಯೋ ವ್ಯಾಖ್ಯಾತ್ ಸಾಮ್ನಾಮೃಚೋಽಖಿಲಾಃ

ಎಂಬ ಶ್ಲೋಕದಿಂದ ತಿಳಿದುಬರುತ್ತದೆ.

ಭರತಸ್ವಾಮಿಯ ಕಾಲವು ಕ್ರಿ.ಶ. ಹದಿಮೂರನೆಯ ಶತಮಾನ. ಇವರ ಭಾಷ್ಯ ಪ್ರಕಟವಾಗಿಲ್ಲ.

### ಗುಣವಿಷ್ಣುಕೃತ ಭಾಷ್ಯ

ಈ ಭಾಷ್ಯದ ಹೆಸರು 'ಛಾಂದೋಗ್ಯಮಂತ್ರಭಾಷ್ಯ' ಇದು ಸಾಮವೇದದ ಕೌಥುಮ ಶಾಖೆಯನ್ನು ಅನುಸರಿಸಿದೆ. ಈ ಭಾಷ್ಯವು ಕ್ರಿ.ಶ. ಹನ್ನೆರಡನೆಯ ಶತಮಾನದ ಅಂತ್ಯಭಾಗ

ಅಥವಾ ಹದಿಮೂರನೆಯ ಶತಮಾನದ ಆದಿಭಾಗಕ್ಕೆ ಸೇರಿದುದು ಎಂದು ನಂಬಲಾಗಿದೆ. ಈ ಭಾಷ್ಯದಲ್ಲಿ ನಿತ್ಯನೈಮಿತ್ತಿಕ ವಿಧಿಗಳಲ್ಲಿ ಬಳಸುವ ಸಾಮವೇದಿಗಳ ಸಾಮ ಮಂತ್ರಗಳ ವ್ಯಾಖ್ಯಾನವಿದೆ.

ಗುಣವಿಷ್ಣುವು ಛಾಂದೋಗ್ಯಮಂತ್ರಭಾಷ್ಯವನ್ನಲ್ಲದೆ, ಮಂತ್ರ ಬ್ರಾಹ್ಮಣಭಾಷ್ಯ ಮತ್ತು ಪಾರಸ್ಕರ ಗೃಹ್ಯಸೂತ್ರಗಳನ್ನು ರಚಿಸಿದ್ದಾರೆ.

## ಸಾಯಣರ ಭಾಷ್ಯ

ಸಾಯಣರು ಋಗ್ಭಾಷ್ಯದ ನಂತರ ಸಾಮವೇದಕ್ಕೆ ಭಾಷ್ಯಬರೆದಿದ್ದಾರೆ. ಭಾಷ್ಯದ ಆರಂಭದಲ್ಲಿ ಸಾಮವೇದ ಭಾಷ್ಯಭೂಮಿಕೆಯಿದೆ. ಈ ಭೂಮಿಕೆಯಲ್ಲಿ ಸಾಮಗಳಿಗೆ ಸಂಬಂಧಿಸಿದ ಅನೇಕ ವಿಷಯಗಳು ಚರ್ಚಿಸಲ್ಪಟ್ಟಿವೆ.

## ಸೂರ್ಯದೈವಜ್ಞಕೃತಭಾಷ್ಯ

ಸೂರ್ಯದೈವಜ್ಞರು ಸಾಮವೇದಕ್ಕೆ ಭಾಷ್ಯವನ್ನು ರಚಿಸಿರುವ ಅಂಶವು ಇವರ ಗೀತಾ ಭಾಷ್ಯದ "ಅಥವಾಯದೇವಸ್ಯ ಸಾಮ್ನಾಂ ಪ್ರವೃತ್ತಿರಾಪಸ್ತಂಬ ಶಾಖಾಯಾಂ ವಿಶ್ವೇಭಿರ್ದೇವೈಃಪೃತನಾ ಜಯಾಮಿ ಜಾಗತೇನ ಛಂದಸಾ ಸಪ್ತದಶೇನ ಸ್ತೋಮೇನ ವಾಮದೇವ್ಯೇನ ಸಾಮ್ನಾ ವಷಟ್ಕಾರೇಣ ವಜ್ರೇಣ ಇತಿ ಅತ್ರ ಸಾಮಗಾಯನೇ ಸ್ತೋಭಸ್ತೋಮಾದಿ ಲಕ್ಷಣ ಮಸ್ಮಾಭಿಃ ಸಾಮಭಾಷ್ಯೇ ಪ್ರೋಕ್ತಮ್ ಎಂಬ ವಾಕ್ಯಗಳಿಂದ ತಿಳಿದುಬರುತ್ತದೆ.

## ಶೋಭಾಕರಭಟ್ಟಕೃತಭಾಷ್ಯ

ಈ ಗ್ರಂಥದ ಹೆಸರು 'ಆರಣ್ಯಕ ವಿವರಣ' ಈ ಗ್ರಂಥದ ಆರಂಭದಲ್ಲಿರುವ—

ವೇದಾಖ್ಯಗಾನವ್ಯಾಖ್ಯಾನಂ ಸಮ್ಯಗೇತತ್ಕೃತಂ ಮಯಾ ।
ಅರಣ್ಯಗಾನವ್ಯಾಖ್ಯಾನಂ ತಥೈವಾಥ ವಿಭಾವ್ಯತೇ ॥

ಎಂಬ ಶ್ಲೋಕದಿಂದ ಶೋಭಾಕರಭಟ್ಟರು 'ಆರಣ್ಯಕವಿವರಣ' ವನ್ನು ರಚಿಸುವುದಕ್ಕಿಂತ ಮೊದಲು ಬೇರೊಂದು ಭಾಷ್ಯವನ್ನು ರಚಿಸಿದ್ದರೆಂಬ ಅಂಶವು ತಿಳಿದುಬರುತ್ತದೆ.

ಇವರ 'ನಾರದೀಯ ಶಿಕ್ಷಾವಿವರಣ' ಎಂಬ ಇನ್ನೊಂದು ಗ್ರಂಥವೂ ಇದೆ. ನಾರದೀಯ ಪುರಾಣದಲ್ಲಿರುವ ಸಾಮವೇದಕ್ಕೆ ಸಂಬಂಧಿಸಿದ ಶಿಕ್ಷಾಭಾಗವನ್ನು ಅನುಸರಿಸಿ ಈ ಗ್ರಂಥವನ್ನು ಬರೆದಿರುವಂತೆ ಕಾಣುತ್ತದೆ. ಭರತಭಾಷ್ಯದಲ್ಲಿ ಈ ಗ್ರಂಥದಿಂದ ಕೆಲವು ಭಾಗಗಳು ಉದ್ಧೃತವಾಗಿವೆ. ಇದರಿಂದ ಇದು ಭರತಭಾಷ್ಯಕ್ಕಿಂತ ಹಿಂದಿನದು ಎಂದು ಹೇಳಬಹುದು.

## ಅಥರ್ವ ವೇದದ ಭಾಷ್ಯಕಾರರು

ಋಗ್ವೇದ, ಯಜುರ್ವೇದ, ಸಾಮವೇದಗಳಿಗಿರುವಂತೆ ಅಥರ್ವವೇದಕ್ಕೆ ಅನೇಕ ಭಾಷ್ಯಗಳಿಲ್ಲ, ಈ ಸದ್ಯಕ್ಕೆ ದೊರೆತಿರುವುದು ಸಾಯಣಭಾಷ್ಯವೊಂದೇ,

ಅಥರ್ವಸಂಹಿತೆಗೆ ಸಾಯಣಭಾಷ್ಯವು ಸಂಪೂರ್ಣವಾಗಿದೆಯಾದರೂ ಈಗ ಈ ಭಾಷ್ಯವು ಕೇವಲ ೧೨ ಕಾಂಡಗಳಿಗೆ ಮಾತ್ರ ಉಪಲಬ್ಧವಾಗಿವೆ. ೫, ೯, ೧೦, ೧೨, ೧೩, ೧೪, ೧೫, ೧೬, ಈ ಕಾಂಡಗಳಿಗೆ ಇರುವ ಸಾಯಣಭಾಷ್ಯವು ಉಪಲಬ್ಧವಾಗಿಲ್ಲ.

ಸಾಯಣರ ಇತರ ಭಾಷ್ಯಗಳಲ್ಲಿರುವಂತೆ ಈ ಭಾಷ್ಯದಲ್ಲಿಯೂ ಅಥರ್ವೇದದ ಭಾಷ್ಯ ಭೂಮಿಕೆ ಇದ್ದು, ಇದರಲ್ಲಿ ಅಥರ್ವ ಸಂಬಂಧವಾದ ಅನೇಕ ವಿಷಯಗಳು ಇವೆ. ಅಥರ್ವ ವೇದದ ಒಂಬತ್ತು ಭೇದಗಳನ್ನು ಹೇಳಿದ್ದಾರೆ. ಅಥರ್ವವೇದಸ್ಯ ನವಭೇದಾ ಭವಂತಿ

ಸಾಯಣರು ರಚಿಸಿರುವ ಸಂಹಿತಾಭಾಷ್ಯಗಳಲ್ಲೆಲ್ಲಾ ಕೊನೆಯಲ್ಲಿ ರಚಿಸಲ್ಪಟ್ಟ ಸಂಹಿತಾ ಭಾಷ್ಯವೆಂದರೆ ಅಥರ್ವವೇದಭಾಷ್ಯ. ಈ ಭಾಷ್ಯವನ್ನು ಕೊನೆಯಲ್ಲಿ ಬರೆಯಲು ಕಾರಣವನ್ನು ಸಾಯಣರೇ ತಮ್ಮ ಅಥರ್ವವೇದಭಾಷ್ಯಭೂಮಿಕೆಯಲ್ಲಿ ಹೀಗೆ ಹೇಳಿದ್ದಾರೆ.

''ವ್ಯಾಖ್ಯಾಯ ವೇದತ್ರಿತಯಮಾಮುಷ್ಮಿಕ ಫಲಪ್ರದಮ್ ।
ಐಹಿಕಾಮುಷ್ಮಿಕಫಲಂ ಚತುರ್ಥಂ ವ್ಯಾಚಿಕೀರ್ಷತಿ ॥

ಈ ರೀತಿ ವೇದಾರ್ಥವಿಶದೀಕರಣವನ್ನು ಮಾಡಲು ನಾನಾಭಾಷ್ಯಗಳು ಹೊರಟವು. ಬ್ರಾಹ್ಮಣಗಳು ನಿರುಕ್ತಗಳಿಂದ ಹಿಡಿದು ಇಂದಿನವರೆಗೂ ವೇದದ ಅರ್ಥದ ವಿಶದೀಕರಣದಲ್ಲಿ ಪ್ರಯತ್ನವು ಸಾಗುತ್ತಲೇ ಇದೆ. ಆಧುನಿಕ ಕಾಲದಲ್ಲಿಯೂ ಕೂಡ ಪಾಶ್ಚಾತ್ಯರೂ ಪೌರ್ವಾತ್ಯರೂ ವೇದಾರ್ಥವಿಶದೀಕರಣದಲ್ಲಿ ಪ್ರಯತ್ನಪಟ್ಟು ಭಾಷ್ಯಗಳನ್ನು, ಭಾಷಾಂತರಗಳನ್ನೂ ಬರೆದಿದ್ದಾರೆ.

ದಯಾನಂದ ಸರಸ್ವತಿ, ಕಪಾಲಿಶಾಸ್ತ್ರಿ, ಮುಂತಾದವರು ಸಂಸ್ಕೃತದಲ್ಲಿ ಭಾಷ್ಯ ಬರೆದಿದ್ದಾರೆ.

ಪಾಶ್ಚಾತ್ಯ ಪಂಡಿತರುಗಳಾದ Wilson, Griffith, Ludwing, Grassmann, Winternitz, Arnold, Keith Maxmuller, Peterson, pischel, Roth Geldner, Hillebrandt, Oldenberg Rosen, Bloomfield ಮುಂತಾದವರು ಇಂಗ್ಲೀಷ್, ಜರ್ಮನ್, ಭಾಷೆಗಳಲ್ಲಿ ಭಾಷಾಂತರಗಳನ್ನು, ವೇದವಿಚಾರವಾದ ವಿಮರ್ಶಾತ್ಮಕ ಗ್ರಂಥಗಳಲ್ಲಿ ಬರೆದಿದ್ದಾರೆ.

ಹದಿನೆಂಟನೆಯ ಶತಮಾನದ ಸುಪ್ರಸಿದ್ಧ ಲೇಖಕರಾದ ಫ್ರಾನ್ಸ್‌ದೇಶದ ವಾಲ್ಟೈರ್ ಎಂಬ ವಿದ್ವಾಂಸರು ವೇದಗಳ ಹಿರಿಮೆಯನ್ನು ಪ್ರಶಂಸಿಸಿದ್ದಾರೆ. ೧೭೮೪ರಲ್ಲಿ Asiatic Society of Bengal ಎಂಬ ಸಂಸ್ಥೆಯು ಪ್ರಾಚೀನಸಾಹಿತ್ಯವನ್ನಭ್ಯಸಿಸುವುದಕ್ಕಾಗಿಯೆ ಸ್ಥಾಪಿಸಲ್ಪಟ್ಟಿತು. ೧೮೦೫ರಲ್ಲಿ ಕೋಲ್‌ಬ್ರೂಕ್ ಎಂಬ ವಿದ್ವಾಂಸರು ''ವೇದಗಳು ಹಿಂದೂಗಳ ಪವಿತ್ರಗ್ರಂಥಗಳು'' ಎಂಬ ವಿಷಯವಾಗಿ ಪ್ರಬಂಧ ಬರೆದರು.

ಜರ್ಮನಿಯ ರೋಸೆನ್ ಎಂಬುವರು ಋಗ್ವೇದ ಸಂಹಿತೆಯ ಸ್ವಲ್ಪ ಭಾಗವನ್ನು ಪ್ರಕಟಿಸಿದರು. ಆದರೆ ಅವರು ಸಾವನ್ನಪ್ಪಿದುದರಿಂದ ಅವರ ಕಾರ್ಯ ಸಮಾಪ್ತಿಯಾಗಲಿಲ್ಲ.

Rudolph Roth ಅವರು 'ZUR Literature and Geschichtedes veda' ಎಂಬ ಅಸಾಮಾನ್ಯ ಕೃತಿಯನ್ನು ಪ್ರಕಟಿಸಿ ಪಾಶ್ಚಾತ್ಯರು ವೇದಸಾಹಿತ್ಯವನ್ನಭ್ಯಸಿಸುವಂತೆ ಮಾಡಿದರು. ರುಡೋಲ್ಫ್‌ರಾತ್‌ರವರು ವಿಮರ್ಶಾತ್ಮಕ ರೀತಿಯಲ್ಲಿ ವೇದದ ಅರ್ಥವಿವರಣೆಯನ್ನು ಕೊಟ್ಟರು.

ಬ್ಲೂಂ ಫೀಲ್ಡ್ ಅವರ 'ವೇದಿಕೆ ಕಂಕಾರ್ಡೆನ್ಸ್' ಎಂಬ ಮಹಾಗ್ರಂಥವು ವೈದಿಕ ಸಾಹಿತ್ಯಾಭ್ಯಾಸಿಗಳಿಗೂ ಸಂಶೋಧಕರಿಗೂ ಅತ್ಯಂತ ಉಪಯುಕ್ತ ಗ್ರಂಥಗಳಲ್ಲೊಂದು. ರಾತ್ ಮತ್ತು ಬೊಹ್ಟಾಲಿಂಕ್ ಇವರ ಸಮರ್ಥ ಸಂಪಾದಕತ್ವದಲ್ಲಿ ಪ್ರಕಟವಾದ 'The St. Petersburgh Sanskrit German Lexicon' ಏಳು ಭಾಗಗಳಲ್ಲಿ ಪ್ರಕಟವಾಗಿ ವೇದಾರ್ಥವನ್ನರಿಯಲು ಅತ್ಯಂತ ಸಹಾಯವಾಯಿತು.

ಮ್ಯಾಕ್ಸ್‌ಮುಲ್ಲರ್ ಅವರು ಸಾಯಣಭಾಷ್ಯಸಹಿತ 'ಋಗ್ವೇದ'ವನ್ನು ಸಂಪಾದಿಸಿ, ಪ್ರಕಟಿಸಿ ಮಹೋಪಕಾರ ಮಾಡಿದರು. ಸಂಸ್ಕೃತ ಸಾಹಿತ್ಯಕ್ಕೆ ಮ್ಯಾಕ್ಸ್‌ಮೂಲರ ಅವರ ಕೊಡುಗೆ ಅಪಾರವಾದುದು.

೧೮೫೦ರಲ್ಲಿ ಹೆಚ್. ಹೆಚ್. ವಿಲ್‌ಸನ್‌ರವರು ಸಾಯಣಭಾಷ್ಯವನ್ನನುಸರಿಸಿ ಋಗ್ವೇದ ವನ್ನು ಆಂಗ್ಲಭಾಷೆಗೆ ಭಾಷಾಂತರಿಸಿದ್ದಾರೆ. ಆದರೆ ಸಂಪ್ರದಾಯ ಮತ್ತು ಆಧುನಿಕ–ವಿಲ್‌ಸನ್ ಮತ್ತು ರೋತ್ ಇವರೀರ್ವರು ಅನುಸರಿಸುವ ಎರಡುಕ್ರಮಂಗಳಿಗೂ ಮಧ್ಯಸ್ಥವಾದ ಕ್ರಮವನ್ನನುಸರಿಸಿ Macdone ಮುಂತಾದವರು ವೇದದ ಸೂಕ್ತಗಳನ್ನು ಭಾಷಾಂತರಿಸಿದ್ದಾರೆ.

೧೮೪೨ರಲ್ಲಿ ಡಾ|| ಸ್ಟೀವನ್‌ಸನ್‌ರವರು ಸಾಮವೇದದ ರಾಣಾಯಣೀಯ ಶಾಖೆಯನ್ನನುಸರಿಸಿ ಭಾಷಾಂತರವನ್ನು ಬರೆದರು. ೧೮೪೮ರಲ್ಲಿ Prof. Benfey ಅವರು ಸಾಮವೇದದ ಇದೇ ಪಾಠವನ್ನನುಸರಿಸಿ ಛಂದೋಬದ್ಧವಾದ ಭಾಷಾಂತರ ಮಾಡಿದರು. R. T. H. Griffith Benfe ರವರ ಪಾಠವನ್ನೇ ಅನುಸರಿಸಿ ಇತರ ಟಿಪ್ಪಣಿಗಳನ್ನು ಕೊಟ್ಟು ಸಾಮವೇದವನ್ನು ಭಾಷಾಂತರ ಮಾಡಿದ್ದಾರೆ.

R. T. H. Griffith ರವರ ಶುಕ್ಲಯಜುರ್ವೇದ, ಋಗ್ವೇದ, ಸಾಮವೇದ ಅಥರ್ವವೇದ ಈ ೪ವೇದಗಳನ್ನು ಇಂಗ್ಲೀಷ್ ಭಾಷೆಗೆ ಪದ್ಯರೂಪದಲ್ಲಿ ಅನುವಾದ ಮಾಡಿದ್ದಾರೆ.

Grassmann ರವರು ಸಂಸ್ಕೃತ–ಜರ್ಮನ್ ಶಬ್ದಕೋಶವೊಂದನ್ನು ಬರೆದಿದ್ದಾರೆ. ಋಗ್ವೇದದ ಈ ಕೋಶದಲ್ಲಿ ಪ್ರತಿಪದವನ್ನು, ಅದು ಹತ್ತುಮಂಡಲಗಳಲ್ಲಿರುವ ಋಕ್ಕುಗಳಲ್ಲಿ ಎಲ್ಲೆಲ್ಲಿ ಬರುತ್ತದೆ ಎಂಬುದನ್ನು ಕೋಢೀಕರಿಸಲಾಗಿದೆ, ಮತ್ತು ಪದಗಳಿಗೆ ಅಲ್ಲಲ್ಲಿ ಕಂಡು ಬರುವ ಅರ್ಥವ್ಯತ್ಯಾಸವನ್ನು ಸೂಚಿಸಲಾಗಿದೆ. ಈ ಪದಕೋಶವು ವೇದಗಳನ್ನಭ್ಯಸಿಸಲು ಸಹಾಯಕವಾಗಿದೆ. Geldner and pischel ಎಂಬಿಬ್ಬರು ಜರ್ಮನ್ ಪಂಡಿತರು Vedische Studies' 'ವೇದಾರ್ಥಗಳು' ಎಂಬ ಗ್ರಂಥವನ್ನು ಮೂರು ಭಾಗಗಳಲ್ಲಿ ಪ್ರಕಟಿಸಿದ್ದಾರೆ. ಋಗ್ವೇದದ ಅತಿಮುಖ್ಯವಾದ ಕ್ಲಿಷ್ಟವಾದ ಅಥವಾ ವಿವಾದಗ್ರಸ್ತವಾದ

ಪದಗಳನ್ನು ಆರಿಸಿ ಅವುಗಳ ರೂಪನಿಷ್ಪತ್ತಿ ಅವುಗಳು ಬರತಕ್ಕ ವೇದಮಂತ್ರಗಳು ಅಲ್ಲಲ್ಲಿ ಕಂಡುಬರುವ ವ್ಯತ್ಯಾಸಗಳು ಎಲ್ಲವನ್ನೂ ವಿವರಿಸಿದ್ದಾರೆ. ಕೆಲವು ಸೂಕ್ತಗಳನ್ನು ಆರಿಸಿಕೊಂಡು ಅವುಗಳ ಭಾಷಾಂತರ ಪದಗಳ ಮೇಲೆ ಟಿಪ್ಪಣಿ, ಪದಗಳ ಪ್ರಕ್ರಿಯೆ ಮುಂತಾದುವನ್ನು ಬರೆದು ವೇದಮಂತ್ರಗಳನ್ನು ಅಭ್ಯಸಿಸುವ ಕ್ರಮವನ್ನು ಇಲ್ಲಿ ತೋರಿಸಿದ್ದಾರೆ. ಗೆಲ್ಡ್‌ನರ್ ಅವರ ಜರ್ಮನ್ ಅನುವಾದ (ಸಮಗ್ರ ಋಗ್ವೇದದ್ದು) ಹಾರ್ವರ್ಡ್ ಗ್ರಂಥಮಾಲೆಯಲ್ಲಿ ಪ್ರಕಟವಾಗಿದ್ದ ಅತ್ಯಂತ ಪ್ರಾಮಾಣಿಕವಾದ ಆಧುನಿಕ ಅನುವಾದವೆನಿಸಿದೆ.

Prof. Oldenberg ರವರ ಋಕ್ಸಂಹಿತೆಯ ವ್ಯಾಖ್ಯಾನದಲ್ಲಿ ಪ್ರತಿಮಂತ್ರಕ್ಕೂ ಛಂದಸ್ಸು, ವ್ಯಾಕರಣ, ಅರ್ಥನಿರೂಪಣೆ ಮುಂತಾದವುಗಳನ್ನು ಚೆನ್ನಾಗಿ ವಿವರಿಸಿದ್ದಾರೆ.

Muir ಎಂಬುವರು 'The original Sanskrit texts' ಎಂಬ ಗ್ರಂಥವನ್ನು ಬರೆದಿದ್ದಾರೆ. ಇದರಲ್ಲಿ ಐದು ಭಾಗಗಳಿವೆ. ಇವರು ತಮ್ಮ ಈ ಗ್ರಂಥದಲ್ಲಿ ಋಗ್ವೇದದಿಂದ ಮೊದಲ್ಗೊಂಡು ಅನೇಕ ಗ್ರಂಥಗಳಿಂದ ವಾಕ್ಯಗಳನ್ನು ಉದಾಹರಿಸಿ ಅವುಗಳಿಗೆ ಭಾಷಾಂತರಕೊಟ್ಟು ವಿದ್ವಜ್ಜನರ ಅಭಿಪ್ರಾಯಗಳನ್ನು ಉದಾಹರಿಸಿ ಒಳ್ಳೆಯ ಕೆಲಸಮಾಡಿದ್ದಾರೆ.

ಆಧುನಿಕ ಭಾರತದಲ್ಲಿ ವೈದಿಕಸಾಹಿತ್ಯದಲ್ಲಿ ಪ್ರಯತ್ನಮಾಡಿದವರಲ್ಲಿ ಪೂನಾದ ಎಸ್. ಪಿ. ಪಂಡಿತ್, ವೇಲಂಕರ್, ಲಕ್ಷ್ಮಣ ಬಾಬಣೆ ಪೈ, ಮೈಸೂರಿನ ಆಸ್ಥಾನವಿದ್ವಾನ್ ಹೆಚ್. ವಿ. ವೆಂಕಟರಾವ್, ದಯಾನಂದ ಸರಸ್ವತಿ, ಮಹರ್ಷಿ ಅರವಿಂದರು, ಟಿ. ವಿ. ಕಪಾಲಿ ಶಾಸ್ತ್ರಿ, ಶಂಭುಲಿಂಗ ಶಿವಾಚಾರ್ಯ ಸ್ವಾಮಿಗಳು, ಡಾ॥ ಎನ್. ಎಸ್. ಅನಂತರಂಗಾಚಾರ್ಯ ಈ ಮೊದಲಾದವರು ಮುಖ್ಯರು.

ಇಂಡಿಯಾದೇಶದ ಪಂಡಿತರಲ್ಲಿ ಪುಣೆಯ ಎಸ್. ಪಿ. ಪಂಡಿತ್ ಎಂಬುವರು ಇಂಗ್ಲೀಷ್ ಮತ್ತು ಮರಾಠಿ. ಎರಡು ಭಾಷೆಗಳಲ್ಲೂ ಋಗ್ವೇದವನ್ನು ಭಾಷಾಂತರಿಸಲು ಪ್ರಾರಂಭಿಸಿದರು. ಭಾಷಾಂತರದ ಜೊತೆಗೆ ಕ್ಲಿಷ್ಟ ಅಂಶಗಳನ್ನು ಸ್ಪಷ್ಟಪಡಿಸಲು ಟಿಪ್ಪಣಿಗಳನ್ನು ಬರೆದಿದ್ದಾರೆ. ಗ್ರಂಥದ ಹೆಸರು 'ವೇದಾರ್ಥಯತ್ನ' ಮೂರನೇ ಮಂಡಲದವರೆಗೆ ಬರುವ ವೇಳೆಗೆ ಅವರು ದೈವಾಧೀನರಾದುದು ದುರದೃಷ್ಟ.

ಲಕ್ಷ್ಮಣ ಬಾಬಣೆ ಪೈ ಎಂಬುವವರೂ ಕೂಡ ಋಗ್ವೇದ, ಯಜುರ್ವೇದ ಮತ್ತು ಅಥರ್ವವೇದಗಳನ್ನು ಕನ್ನಡಕ್ಕೆ ಭಾಷಾಂತರಿಸಿದ್ದಾರೆ. ಇವರು ವೇದಮಂತ್ರಗಳ ಪ್ರತಿಶಬ್ದದ ಅರ್ಥವನ್ನು ಕೊಟ್ಟಿದ್ದಾರೆ.

ಶ್ರೀ ಸಾಂಬಶಾಸ್ತ್ರಿ ಮತ್ತು ಶ್ರೀ ಭಟ್ಟಗಜಾನನರು ಋಗ್ವೇದವನ್ನು ಸಾಯಣಭಾಷಾನುಸಾರ ಭಾಷಾಂತರಿಸಿದ್ದಾರೆ. ಇವರು ತಮ್ಮ ಗ್ರಂಥಕ್ಕೆ ಈ 'ಜ್ಞಾನಾಮೃತಕೊಡ' ಎಂಬ ಹೆಸರನ್ನು ಕೊಟ್ಟಿದ್ದಾರೆ.

ದೇವೀಂದ್‌ರವರು ಯಜುರ್ವೇದವನ್ನು ದಯಾನಂದ ಸರಸ್ವತಿಯವರ ಭಾಷಾನುಸಾರವಾಗಿ ಇಂಗ್ಲೀಷ್ ಭಾಷೆಗೆ ಭಾಷಾಂತರಿಸಿದ್ದಾರೆ.

ಮೈಸೂರಿನ ಆಸ್ಥಾನ ವಿದ್ವಾನ್ ಹೆಚ್. ಪಿ. ವೆಂಕಟರಾವ್‌ರವರು ಸಾಯಣಭಾಷ್ಯಾನುಸಾರವಾಗಿ ಸಂಪೂರ್ಣ ಋಗ್ವೇದವನ್ನು ಕನ್ನಡಕ್ಕೆ ಭಾಷಾಂತರಿಸಿದ್ದಾರೆ. ಈ ಋಗ್ವೇದ ಭಾಷಾಂತರವು ಮೂವತ್ತು ಭಾಗಗಳಲ್ಲಿ ಪ್ರಕಟವಾಗಿದೆ. ಮೊದಲನೇ ಭಾಗದಲ್ಲಿ ಭಾಷಾಂತರಕ್ಕೆ ಮೊದಲು ೨೫ ಅಧ್ಯಾಯಗಳನ್ನೊಳಗೊಂಡ ಪೂರ್ವಪೀಠಿಕೆ ಎಂಬ ಪ್ರಕರಣವೂ' ಸಾಯಣ ಭಾಷ್ಯಭೂಮಿಕೆಯೂ ಕೊಡಲ್ಪಟ್ಟಿವೆ. ಪೂರ್ವಪೀಠಿಕಾ ಪ್ರಕರಣದಲ್ಲಿ 'ವೇದ ಶಬ್ದದ ಅರ್ಥ, ವೇದಶಬ್ದದ ವ್ಯುತ್ಪತ್ತಿ, ಋಗ್ವೇದಾದಿ ನಾಲ್ಕು ವೇದಗಳ ಸೂಕ್ಷ್ಮ ವಿವರಣೆ ವೇದವಿಭಾಗಗಳು, ವೇದಾಂಗಗಳು, ಋಗ್ವೇದ, ಯಜುರ್ವೇದ, ಸಾಮವೇದ ಮತ್ತು ಅಥರ್ವವೇದದ ಶಾಖೆಗಳು, ಪ್ರತಿವೇದದ ಬ್ರಾಹ್ಮಣಗಳು ಮತ್ತು ಆರಣ್ಯಕಗಳು, ಋಗ್ವೇದದ ಋಷಿಗಳು, ದೇವತೆಗಳು, ಛಂದಸ್ಸುಗಳು, ವೇದಭಾಷ್ಯಕಾರರು, ಪದಪಾಠಕಾರರು ವೇದದ ಕಾಲ ಇತ್ಯಾದಿ ಸಮಸ್ತವಿಷಯಗಳನ್ನು ಚರ್ಚಿಸಿದ್ದಾರೆ. ಈ ರೀತಿಯಾಗಿ ಪೂರ್ವಪೀಠಿಕಾ ಪ್ರಕರಣವು ಪೂರ್ವಭಾವಿಯಾಗಿ ವೇದಗಳ ಬಗೆಗೆ ತಿಳಿದುಕೊಳ್ಳಬೇಕಾದ ಅನೇಕ ವಿಷಯಗಳನ್ನೊಳಗೊಂಡಿವೆ.

ಕನ್ನಡದಲ್ಲಿ ಋಗ್ವೇದವನ್ನರಿಯಲಿಕ್ಕೆ ಈ ಗ್ರಂಥವು ಅತ್ಯಂತ ಮಹತ್ವಪೂರ್ಣವಾದ ಪ್ರಯತ್ನವೆನ್ನಬಹುದು. ಮೈಸೂರಿನ ಮಹಾರಾಜರಾದ ದಿವಂಗತ ಶ್ರೀ ಜಯಚಾಮರಾಜೇಂದ್ರ ಒಡೆಯರವರು ಶ್ರೀ ಶಿಲ್ಪಿಸಿದ್ಧಲಿಂಗಸ್ವಾಮಿಗಳ ನೇತೃತ್ವದಲ್ಲಿ ಪಂಡಿತಮಂಡಲಿಯೊಂದನ್ನು ರಚಿಸಿ ತನ್ಮೂಲಕ ಅನೇಕ ಮಹತ್ವಪೂರ್ಣ ಗ್ರಂಥಗಳನ್ನು ಕನ್ನಡಕ್ಕೆ ಭಾಷಾಂತರ ಮಾಡಿಸಿದ್ದಾರೆ.

ವೇದಪಾರಂಗತರಾದ ವಿದ್ವಾನ್ ಹೆಚ್. ಪಿ. ವೆಂಕಟರಾವ್ ಮತ್ತು ವಿದ್ವಾನ್ ಶ್ರೀ ಲಕ್ಷ್ಮಣಾಚಾರ್ಯ, ಮುಂತಾದ ಕೆಲವು ಪಂಡಿತರುಗಳು ಋಗ್ವೇದಕ್ಕೆ ವಿಸ್ತಾರವಾದ ಅರ್ಥಾನುವಾದ ವಿವರಣೆಗಳನ್ನು ಕೊಟ್ಟು ಪ್ರಕಟಿಸಿದ್ದಾರೆ. ಇದು ವೇದಾಭ್ಯಾಸಿಗಳಿಗೆ ದಾರಿದೀಪದಂತಿದ್ದು ಪಂಡಿತಪಾಮರರಿಬ್ಬರಿಗೂ ಉಪಯುಕ್ತವಾಗಿದೆ.

ಬಿಜಾಪುರದ ಶಂಭುಲಿಂಗಶಿವಾಚಾರ್ಯರು "ವೇದಪರಿಚಯ" (ಭಾಗ ೧ ಮತ್ತು ಭಾಗ ೨) ಎಂಬ ವಿದ್ವತ್ಪೂರ್ಣವಾದ ಗ್ರಂಥವನ್ನು ರಚಿಸಿದ್ದಾರೆ.

ಪ್ರೊ. ಜಿ. ಎನ್. ಚಕ್ರವರ್ತಿ ಅವರೂ ಸಹ ವೇದದ ಸೂಕ್ತಗಳನ್ನು ಕನ್ನಡಕ್ಕೆ ಅನುವಾದಿಸಿ ಪ್ರಕಟಿಸಿದ್ದಾರೆ. ಡಾ॥ ಎನ್. ಎಸ್. ಅನಂತರಂಗಾಚಾರ್ ಅವರ ವೈದಿಕ ಸಾಹಿತ್ಯ ಚರಿತ್ರೆ' ಅತ್ಯಂತ ಉಪಯುಕ್ತಗ್ರಂಥ.

ಒಟ್ಟಿನಲ್ಲಿ ಬ್ರಾಹ್ಮಣಗ್ರಂಥಗಳ ಕಾಲದಿಂದಲೂ ವೇದಗಳ ನಿಜಾರ್ಥವನ್ನರಿಯಲು ವೇದಾಂಗಗಳು, ಭಾಷ್ಯಗಳು, ಭಾಷಾಂತರಗಳು ಶಬ್ದಕೋಶಗಳು ಮತ್ತು ಪೌರ್ವಾತ್ಯ ಹಾಗೂ ಪಾಶ್ಚಿಮಾತ್ಯವಿದ್ವಾಂಸರು ಪ್ರಶಸ್ತ ಪ್ರಯತ್ನ ಮಾಡಿದಾಗ್ಯೂ, ಸರ್ವಸಮ್ಮತವಾದ, ಸರ್ವ ಗ್ರಾಹ್ಯವಾದ, ಸರ್ವಸಂತೃಪ್ತಿಕರವಾದ ವೇದದ ನಿಜಾರ್ಥವಿವರಣೆ ಇನ್ನೂ ಸಾಧ್ಯವಾಗಿಲ್ಲವೆಂದು ಹೇಳಬಹುದು.

---

WD-139 LP—GTBPM—3,500—Copies—22-2-1997

